ಸಿರಿಗನ್ನಡ

# ಅರ್ಥ ಕೋಶ

ಸಂಪಾದಕ:

ಶಿವರಾಮ ಕಾರಂತ

ಸಹಾಯಕ ಮಂಡಲ:

ಶ್ರೀ. ಬಿ. ಶಂಕರನಾರಾಯಣರಾಯರು, ಶ್ರೀ. ಐ. ಶಿವರಾಮಯ್ಯನವರು
ಶ್ರೀ. ಟಿ. ನಾರಾಯಣ ಭಟ್ಟರು, ಶ್ರೀ. ಹು. ಬೆಂಗೇರಿಯವರು
ಇನ್ನು ಕೆಲವರು ಗೆಳೆಯರು

1941

ಪ್ರಕಾಶಕ:

ಶಿವರಾಮ ಕಾರಂತ, ಪುತ್ತೂರು, ದ. ಕ.

ರೂ. 3/–

# ಮುನ್ನುಡಿ

ಈ ಕೈಕೊಂಡ ಕೆಲಸ ದೊಡ್ಡದು. ಅದನ್ನು ನೆರವೇರಿಸುವ ವಿಷಯದಲ್ಲಿ ನನ್ನ ಇತಿ–ಮಿತಿಗಳನ್ನು ನಾನು ಚೆನ್ನಾಗಿ ತಿಳಿದಿದ್ದೇನೆ. ಈ ಕೆಲಸಕ್ಕೆ ಬೇಕಾಗುವ ವಿದ್ವತ್ತು ನನಗೆ ಮೊದಲೇ ಇಲ್ಲ. ನಾನು ಭಾಷಾ ವಿಚಾರದಲ್ಲಿ ಕೇವಲ ವಿದ್ಯಾರ್ಥಿ. ಇಷ್ಟಿದ್ದರೂ ನಿಘಂಟು ರಚನೆಯ ಸಾಹಸಕ್ಕೆ ಕೈಯಿಕ್ಕಿದೆ. ಕಾರಣವಿಷ್ಟೆ—'ಕನ್ನಡ–ಕನ್ನಡ' ನಿಘಂಟಿನ ಕೊರತೆ ನಮ್ಮ ನಾಡಿನಲ್ಲಿದೆ. ಇಂಗ್ಲಿಷು ಪರಿಚಯವಿಲ್ಲದೆ ಇದ್ದವರು ಹೊಸಗನ್ನಡವನ್ನಾಗಲಿ, ಹಳೆಗನ್ನಡವನ್ನಾಗಲಿ ತಮ್ಮಷ್ಟಕ್ಕೆ ಓದಿಕೊಳ್ಳಲು ಇದೊಂದು ದೊಡ್ಡ ತೊಡಕು. ಅದರಲ್ಲೂ ಸಾಮಾನ್ಯ ವಿದ್ಯಾರ್ಥಿ ವರ್ಗವೂ, ಉಪಾಧ್ಯಾಯ ವರ್ಗವೂ ಈ ಕೊರತೆಯನ್ನು ಪ್ರತಿಕ್ಷಣ ಅನುಭವಿಸುತ್ತಿವೆ. ಅದನ್ನು ನಿವಾರಿಸುವ ಸಾಹಸವನ್ನು—ಒಂದು ಸಂಸ್ಥೆಯೋ ನನಗಿಂತ ಶಕ್ತರಾದವರೋ ಮಾಡಬೇಕಾಗಿತ್ತು. ಯಾರೂ ಮುಂದುವರಿಯಲು ಸಾಹಸಮಾಡದಿರಾದರೆ, ನನ್ನಂಥವನು ಆ ರಾಜ್ಯದಲ್ಲಿ ಅಂಬೆಗಾಲಿಕ್ಕುವುದು ತಪ್ಪಲ್ಲ. ಯಾವನು ಕೆಲಸಮಾಡುವುದಾದರೂ ಅವನವನ ಮಿತಿ ಅವನವನ ಕೆಲಸಗಳಿಗೆ ಬಂದೇ ತೀರಬೇಕು. ಹಾಗಿರಲು ನನ್ನ ಕೊರತೆಗಳೆಲ್ಲ ನನ್ನ ಈ ಕೃತಿಯಲ್ಲಿ ಮೂಡುವುದು ಸ್ವಾಭಾವಿಕ. ಆದರೆ—ಈ ಪ್ರಯತ್ನದಿಂದ ಸ್ವಲ್ಪವಾದರೂ ಪ್ರಯೋಜನವಾದೀತೆಂದು ನನಗನಿಸುತ್ತದೆ. ಕೊನೆಗೆ, ಇದು ನನ್ನ ಪಾಲಿಗೆ ಒಂದು ಶಿಕ್ಷಣವಾದರೂ ಆಯಿತಷ್ಟೆ.

ಈ ನಮ್ಮ ಪ್ರಯತ್ನವನ್ನು ಮೀರಿ, ಇನ್ನೊಂದು ಕೋಶ ಬಂದರೆ, ಆಗ ನಾನು ಧನ್ಯನೇ. 'ಹಿಂದಿನ'ದನ್ನು ತುಳಿದೇ 'ಇಂದು' ನಡೆದಿದೆ. 'ಇಂದ'ನ್ನು ನಾಳೆ ತುಳಿಯುವುದು ಯುಗಧರ್ಮ.

ಈ ಪ್ರಯೋಗದ ಕತೆಯನ್ನು ಚಿಕ್ಕದಾಗಿ ಇಲ್ಲಿ ಹೇಳುವುದು ಅಪ್ರಾಸಂಗಿಕವಲ್ಲ. ನನ್ನ ಗೆಳೆಯರಾದ ಶ್ರೀ. ಬಡಕ್ಕಿಲ ಶಂಕರನಾರಾಯಣ ರಾಯರು ಕನ್ನಡ ಸಾಹಿತ್ಯ ಪ್ರಿಯರು. ಅವರು ಮೊದಲಿಗೆ ದುಡಿದುಡಿದು ಕುಮಾರವ್ಯಾಸನ ಶಬ್ದಸಂಪತ್ತಿಯನ್ನು ಆರಿಸಿ ಇರಿಸಿದ್ದರು. ಅವುಗಳ ಪ್ರಯೋಗವನ್ನೂ ಸಂಗ್ರಹಿಸಿದ್ದರು. ಅದು ನನ್ನನ್ನು ಆಕರ್ಷಿಸಿತು. ಅದನ್ನೇ ಪಾಯವಾಗಿ ಇರಿಸಿ, ಏನಾದರೂ ರಚಿಸಬಾರದೇಕೆ ಎಂದು ಅನಿಸಿತು. ನನ್ನ ಗುರುಗಳಾದ ಶ್ರೀ. ಐ. ಶಿವರಾಮಯ್ಯನವರು ಈ ಬರಹವನ್ನು ತಿದ್ದಿ, ತಮ್ಮ ಶಬ್ದ ಸಂಪತ್ತಿಯಿಂದ ಪುಷ್ಟಿಗೊಳಿಸಿದರು. ಈ ಕಾಲದಲ್ಲೇ ಅನೇಕ ಷಟ್ಪದಿಕಾವ್ಯಗಳ ಮತ್ತು ಇತರ ಪ್ರಸಿದ್ಧವಾದ ಗ್ರಂಥಗಳ ಶಬ್ದ ಭಂಡಾರವನ್ನು ಅದಕ್ಕೆ ಸೇರಿಸಿಕೊಂಡೆವು. ಮುಂದೆ ಈ ಕೆಲಸಕ್ಕೆ ನನ್ನ ಮಿತ್ರರಾದ ಶ್ರೀ. ಶಂ. ಭಾ. ಜೋಶಿಯವರು ನೆರವಾದರು. ಶ್ರೀ. ವಿ. ಸೀ.ಯವರು ಅನೇಕ ಅಮೂಲ್ಯ ಸೂಚನೆಗಳನ್ನಿತ್ತರು. ಅವರು ತಮ್ಮ ಪ್ರಾಂತದ ಶಬ್ದಸಂಗ್ರಹ ಕೊಟ್ಟುದಲ್ಲದೆ, ನನ್ನ ಕರಡನ್ನು ತಿದ್ದಲೂ ನೆರವಾದರು. ಶ್ರೀ. ಹುಚ್ಚರಾವ್ ಬೆಂಗೇರಿಯವರು ಧಾರವಾಡ ಪ್ರಾಂತದ ಮಾತುಗಳನ್ನೂ ಅರ್ಥಗಳನ್ನೂ ಒದಗಿಸಿಕೊಟ್ಟರು. ಇತ್ತ ಶ್ರೀ. ಟಿ. ನಾರಾಯಣ ಭಟ್ಟರವರು ತಮ್ಮ ಭಾಷಾ ಸಾಹಿತ್ಯಗಳ ಪರಿಚಯವನ್ನು ನನಗೆ ಮೀಸಲಾಗಿ ಒದಗಿಸಿದರು.

ಇಷ್ಟೊಂದು ಗೆಳೆಯರು ಕೊಟ್ಟ ಪ್ರತ್ಯಕ್ಷ, ಪರೋಕ್ಷ ಬೆಂಬಲಗಳಿಲ್ಲದಿರುತ್ತಿದ್ದರೆ, ಈ ಅರ್ಥ ಕೋಶವು ರೂಪಕ್ಕೆ ಬರುತ್ತಿರಲಿಲ್ಲ. ಅವರೆಲ್ಲರಿಗೆ ನಾನು ನನ್ನ ಮಾತಿನ ಋಣಸಂದಾಯ ಮಾಡಿದರೆ ಸಾಕೆ?

ನಮ್ಮ ಅಲ್ಪ ಮತಿಗೆ ತಿಳಿದಂತೆ ಒಂದು ಕ್ರಮ ಇರಿಸಿ ಮುಂದುವರಿದೆವು. ಇನ್ನೂ ಕರಡು ಪ್ರತಿಯಂತೆ ಈ ಶಬ್ದಕೋಶ ಕಾಣುವುದೂ ಸಹಜ. ಆದರೆ—ಹೊರಗಿನಿಂದ ಬರುವ ಎಲ್ಲ ಸೂಚನೆಗಳಿಂದ ಇದರ ಸಂಸ್ಕಾರವನ್ನು ಮಾಡಲು ಸಾಧ್ಯವಾದೀತೆಂದು ಹಂಬಲಿಸುತ್ತೇನೆ.

ಈ ಸಂಸ್ಕರಣದಲ್ಲಿ—ಮೂಲದಲ್ಲಿ ಯೋಚಿಸಿದಂತೆ ಪ್ರಯೋಗಗಳನ್ನಾಗಲಿ, ಪ್ರಯೋಗದ ತಾಣಗಳನ್ನಾಗಲಿ ಕೊಡುವ ಪ್ರಯತ್ನ ಬಿಡಬೇಕಾಯಿತು. ಅದು ಕಠಿಣ, ಮಾತ್ರವಲ್ಲ, ಪುಟಗಳ ಸಂಖ್ಯೆಯು ಇದರ ನಾಲ್ಕು ಮಡಿಯಾದರೂ ಏರುತ್ತಿತ್ತು. ಅದರ ಮುದ್ರಣ ವಿಕ್ರಯಗಳೆರಡೂ ನಮ್ಮ ಮಿತಿಯನ್ನು ಮೀರುತ್ತಲಿತ್ತು. ಹಾಗಾಗಿ ಆ ಸಾಹಸ ಮಾಡಲಿಲ್ಲ.

ಈ ಗ್ರಂಥವನ್ನು ನಮ್ಮ ನಾಡಿನ ಸೋದರ ಸೋದರಿಯರಿಗೆ ಒಪ್ಪಿಸುವಾಗ ನನ್ನ ವಿನಂತಿಯನ್ನು ಅವರ ಮುಂದೆ ಇರಿಸದಿರಲಾರೆ. ಇದರಲ್ಲಿ ಕೊರತೆಗಳು ಬೇಕಷ್ಟು ಇವೆ. ಓದುಗರು, ಬಲ್ಲವರು—ಅವನ್ನು ನನ್ನ ಗಮನಕ್ಕೆ ಪ್ರೀತಿಯಿಟ್ಟು ತಂದುಕೊಟ್ಟು, ಮುಂದಿನ ಸಂಸ್ಕರಣ ನಡೆಯುವ ಲಭ್ಯ ಇದಕ್ಕೆ ಬಂದರೆ, ಆಗ ಇದನ್ನು ಉತ್ತಮಗೊಳಿಸಲು ನೆರವಾಗಬೇಕು.

ಈ ಪುಸ್ತಕದ ಕೆಲಸ ತೊಡಗಿದಂದಿನಿಂದ ವಿಪತ್ತು ಹಾದಿಕಾದಿತ್ತು ಎಂದರೆ ತಪ್ಪಲ್ಲ. ಅದರ ಆಕಾರ, ಪ್ರಮಾಣ, ನನ್ನ ಹದ್ದಿಗೂ ಮೀರುತ್ತ ಬಂದಿತು. ಒಮ್ಮೆ ಅದರ ಮುದ್ರಣವು ಬೇರೊಂದು ಕಡೆ ಕೊಟ್ಟಾಗ, ಕೆಟ್ಟು, ಸುಮಾರು ೨೦೦—ಪುಟಗಳ ಮುದ್ರಿತ ಪ್ರತಿಯನ್ನು ಮೂಲೆಪಾಲು ಮಾಡಬೇಕಾಯಿತು. ಈ ಬಾರಿ ಧರ್ಮಪ್ರಕಾಶ ಛಾಪಖಾನೆಯವರು, ಅಚ್ಚುಮೊಳೆಗಳನ್ನು ದಿನೇದಿನೇ ಒದಗಿಸಿಕೊಂಡು ಮಾಡಬೇಕಾದ ಈ ಕೆಲಸವನ್ನು ಧೈರ್ಯವಾಗಿ ಮಾಡಬಂದರು. ಅವರ ಮುದ್ರಣ ಯಾವಾಗಲೂ ಮುದ್ದಾದುದು. ಹಿಂದಿನ ಮುದ್ರಣದಿಂದ ಕೈ ಸುಟ್ಟ ವ್ಯಥೆ ಇದರಿಂದ ಮಾಯವಾಗಿದೆ. ಎರಡು ವರ್ಷ ಕಾಲ ಈ ಕೆಲಸ ತೊಳಲಾಡುವಂತಾಯಿತು. ಪುಟಗಳ ಸಂಖ್ಯೆ ಬೆಳೆಯುತ್ತ ಬಂದು, ಪ್ರಕಟಣೆ ಅಕ್ಟೋಬರ ಅಂತ್ಯದೊಳಗೆಂದು ಹೇಳಿದ್ದರೂ, ದಶಂಬರ ಕೊನೆಗೆ ಮುಗಿಯುವಂತಾಯಿತು. ಈ ಶ್ರೇಯಸ್ಸು ನಮ್ಮ ಮುದ್ರಣಕಾರರಿಗೇ ಸಲಬೇಕು.

ಈ ಶಬ್ದಕೋಶವನ್ನು ಇದಕ್ಕೂ ಉತ್ತಮ ಕಾಗದದಲ್ಲಿ ಅಚ್ಚು ಹಾಕಿಸಬೇಕೆಂದು ಯುರೋಪಿನಿಂದ ನೇರಾಗಿ ಕಾಗದದ ವ್ಯವಸ್ಥೆ ಮಾಡಿದರೆ, ಯುದ್ಧದ ನೆಪದಿಂದ ಕೈಗೆ ಬಂದ ತುತ್ತು ಬಾಯಿಗೆ ಬಾರದಂತಾಯಿತು. ಕಾಗದದ ಬೆಲೆಯೂ ಮಿತಿಮೀರಿತು. 500 ಪುಟವೆಂದು ಜಾಹೀರು ಹೊರಡಿಸಿದರೆ 560 ಪುಟವಾಯಿತು ಈಗ. ಆದುದರಿಂದ ಬೆಲೆ 2—8—0 ಎಂದು ಸಾರಿದುದನ್ನು ಅನಿವಾರ್ಯವಾಗಿ ರೂ. 3ಕ್ಕೆ ಏರಿಸುವಂತಾಯಿತು. ಇದೊಂದು ಕೆಲಸದಲ್ಲಿ ಬೇಕಾದ ಮೂಬದಲು, ಅನಿರೀಕ್ಷಿತ ಹಾನಿ, ಅಲ್ಲದೆ ಅನೇಕಾನೇಕ ಕಣ್ಣು ಕಾಣದ ವೆಚ್ಚಗಳಿಂದಾಗಿ—ಸಾಮಾನ್ಯ ಕಥೆ ಕಾದಂಬರಿಗಳನ್ನು ಕೊಡುವಷ್ಟು ಸುಲಭ ಬೆಲೆಗಾಗಲಿ, ಪಠ್ಯ ಪುಸ್ತಕಗಳ ಬೆಲೆಗಾಗಲಿ ಇದನ್ನು ಹೇಗೆ ವಿಕ್ರಯಿಸಲಿ? ಬೆಲೆ ಇಳಿಸುವ ಯೋಚನೆ

ಇನ್ನೊಂದು ಮುದ್ರಣದ ಗಳಿಗೆಯ ತನಕ ಕಾದಿರಿಸಬೇಕಾಗಿದೆಯೆಂದು ನಮ್ರತೆಯಿಂದ ಸೂಚಿಸಬೇಕಾಗಿದೆ.

ಅಂತು ಓದುಗರು, ವಿದ್ಯಾರ್ಥಿಗಳು, ವಿಕ್ರಯಕಾರರು, ಸಾಹಿತಿಗಳು ಎಲ್ಲರೂ ಈ ನನ್ನ ದುಡುಕನ್ನು ಮನ್ನಿಸಿ, ಇದಕ್ಕಿಂತ ಇನ್ನೂ ಉತ್ತಮ ಕೃತಿ ಉಂಟಾಗುವಂತೆ ನಡಸಿಕೊಡಬೇಕೆಂದು ಹೇಳಿ ವಿರಮಿಸುವೆನು.

ಇತಿ

ಮಂಗಳೂರು,
ತಾ. 26-12-1940

ಶಿವರಾಮ ಕಾರಂತ.

---



## ಈ ಕೋಶದಲ್ಲಿ ಅನುಸರಿಸಿದ ರೂಪರೇಖೆಗಳ ಸೂಚನೆಗಳು

**ಪದಗಳು:**—ಇವನ್ನು ಸಾಹಿತ್ಯ ಮತ್ತು ಬಳಕೆಯ ಭಾಷೆಯಿಂದ ಆರಿಸಿ ಕೊಟ್ಟದೆ. ಸಂಸ್ಕೃತ ಕನ್ನಡಗಳಿಗೆ ಬೇರೆ ಬೇರೆ ಸಂಕೇತಗಳನ್ನು ಹಾಕಲಿಲ್ಲ. ತದ್ಭವ ರೂಪ ಬಂದಾಗಲೆಲ್ಲ ಸಾಮಾನ್ಯವಾಗಿ ಸಂಸ್ಕೃತರೂಪ ಕೊಡಲು ಯತ್ನಿಸಿದ್ದೇವೆ. ಸಂಸ್ಕೃತ ಪದಗಳು ತದ್ಭವಗಳಾದಾಗ ಕೆಲವೆಡೆ ಅರ್ಥವ್ಯತ್ಯಾಸ ಹೊಂದುವುದುಂಟು. ಉದಾ:–ಸಂಸ್ಥಾ (ಸಂ) ಸಂತೆ (ದ್ಭ); ಯೋಗಿ (ಸಂ) 'ಜೋಗಿ' (ದ್ಭ) ಆದರೆ, 'ಸಂಸ್ಥಾ' 'ಸಂತೆ' ಎಂಬ ಅರ್ಥದಲ್ಲಿ ಬರಲಾರದು. 'ಯೋಗಿ' 'ಜೋಗಿ' ಎಂಬ ಅರ್ಥದಲ್ಲಿ ಬರಲಾರದು.

**ವಿವಿಧರೂಪಗಳು:**—ಒಂದು ಪದಕ್ಕೆ ಕೆಲವು ರೂಪಗಳಿರುವಲ್ಲಿ ಮುಖ್ಯವಾದುದನ್ನು ಕೊಟ್ಟು, ಕಂಸದಲ್ಲಿ ಅದರ ಇತರ ರೂಪಗಳನ್ನು ಕೊಟ್ಟದೆ. ಶಬ್ದದ ಮೂಲ ರೂಪ ವನ್ನು ಮುಖ್ಯ ಪದವಾಗಿ ಕೊಟ್ಟಾಗ ಅದರ ಪ್ರಚಾರ ರೂಪವನ್ನು ಕಂಸದಲ್ಲೂ, ಪ್ರಚಾರ ರೂಪ ಹೊರಗೆ ಕೊಟ್ಟಾಗ, ಮೂಲ ರೂಪವನ್ನು ಕಂಸದಲ್ಲೂ ಕೊಟ್ಟದೆ.

**ಉಪಪದಗಳು:**—ಸಹಾಯಕ ಕ್ರಿಯೆ, ಪ್ರತ್ಯಯ ಮೊದಲಾದುವುಗಳ ಸೇರಿಕೆಯ ಮೂಲಕ ಒಂದು ಪದದಿಂದಲೇ ಹೊರಡುವ ವಿವಿಧಾರ್ಥಗಳು ಮೂಲ ಪದಾರ್ಥಕ್ಕೆ ಸಮಿಪವಾದಲ್ಲಿ ಅಂಥವನ್ನು ಅದರ ಕೆಳಗೆ ಕೊಟ್ಟರುತ್ತದೆ. ಉದಾ:—'ಮನ' ಮೂಲ ರೂಪವಾದರೆ—ಮನಕತ, ಮನಗಾಣು, ಇವನ್ನು — ಕತ, — ಕಾಣು; ಎಂದು ಕೆಳಗಡೆ ಕೊಟ್ಟದೆ.

ಎಲ್ಲಿ ಈ ರೀತಿಯ ಉಪಪದಗಳ ಅರ್ಥವು ಮೂಲ ಅರ್ಥವನ್ನು ಬಿಟ್ಟು ದೂರ ಹೋಗುವುದೋ ಅಲ್ಲಿ, ಅದನ್ನು ಬೇರೆಯೇ ಕೊಟ್ಟದೆ.

**ಸಂಧಿಸಮಾಸಗಳು:**—ಸಂಸ್ಕೃತ ಪದಗಳ ಸಂಧಿಸಮಾಸ ರೀತಿಯು ತುಸು ಭಿನ್ನವಾದುದ ರಿಂದ, ಅದರ ಉಪ ಪದಗಳನ್ನು, ಬೇರೆಯೇ ಪೂರ್ಣವಾಗಿ ಕೊಟ್ಟದೆ. ಎಲ್ಲಿ ಅರ್ಥ ಸಾಮಿಪ್ಯ, ಸಮಾಸ ಸೌಲಭ್ಯ ಇದೆಯೋ ಅಲ್ಲಿ, ಮೂಲ ಪದದ ಉಪ ಪದವನ್ನಾಗಿ ಕೊಟ್ಟರುತ್ತೇನೆ. ಈ ಎಲ್ಲ ಸಂದರ್ಭಗಳಲ್ಲಿ ಸಾಮಾನ್ಯ ಸಂಧಿ ನಿಯಮಗಳನ್ನು ಅನುಸರಿಸಿಯೇ ಸಂಧಿಯಾಗತಕ್ಕುದು.

ಉದಾ:—ಮನ + ಕುಂದು = ಮನಗುಂದು, ಸರಿ + ಇಸು = ಸರಿಸು ಅಥವಾ ಸರಿಯಿಸು. ಮದ + ಅಂಧ = ಮದಾಂಧ . . . . .

**ಯಾವ ಪದದೊಡನೆ ಸಮಾಸ?:**—ಸಮಾಸವಾಗತಕ್ಕ ಪದವು ಮುಖ್ಯ ಪದದೊಡನೆ ಆಗಲಿ, ಅದರ ಎದುರೇ ಕಂಸದಲ್ಲಿ ಕೊಟ್ಟರುವ ಪದದೊಡನಾಗಲಿ ಸೇರಿ ಸಮಾಸ ರೂಪವನ್ನು ತಾಳುವುದು.

ಉದಾ:—ಮಣ್ (ಮಣ್ಣು)—ಎಂದು ಪದವಿದ್ದು—'ಕೊಳಿಸು'—'ಮಾಡು' ಗಳು ಸಮಾಸವಾಗುವಾಗ ಮಣ್ + ಮಾಡು, ಅಥವಾ ಮಣ್ಣು + ಮಾಡು ಎಂದಾಗ

ಬಹುದು. ಅಂದರೆ ಯಾವುದಾದರೂ ಒಂದರೊಡನೆ ಸಂಧಿಯಾಗುವುದು. ಆದರೆ ಮಣ್+ಕೊಳಿಸು ಆಗುವ ಬದಲು, ಮಣ್ಣು+ಕೊಳಿಸು ಮಾತ್ರವೇ ಆಗುವುದು.

ಸಂಸ್ಕೃತ ಪದಗಳ ಮಟ್ಟಿಗೆ ಆಯಾ ಪದಗಳ ಸಂಸ್ಕೃತ ರೂಪದೊಡನೆ ಮಾತ್ರ ಸಮಾಸವಾಗುವುದು.

ಉದಾ:—ಸಭಾ (ಸಭೆ)+ಕಂಪ='ಸಭಾಕಂಪ'ವಾಗುವುದು. 'ಸಭೆಕಂಪ' ವೆಂದಾಗದು.

**ಸಮಾಸ ಪದಗಳು:**—ಒಂದು ಪದದಿಂದ ಹುಟ್ಟುವ ಶಬ್ದಗಳಂತೆ, ಅನೇಕ ಸಂಯುಕ್ತ ಶಬ್ದಗಳು ಇವೆ. ಸಂಸ್ಕೃತದಲ್ಲಿ ಇವು ಬಹಳ. ಇವನ್ನು, ಉದಾ:—ಭೂತ+ದಯೆ ಭೂತದಯೆ . . . . ಇಂಥಲ್ಲಿ ಸಂಯೋಗವಾಗುವ ಪದವು, ಮೂಲ ಪದದ ಅರ್ಥವನ್ನು ಬದಲಿಸುವುದಾದರೆ 'ಭೂತ' ಎಂಬುದರ ಕೆಳಗೆ—ದಯೆ ಕೊಡದೆ, ಭೂತದಯೆ ಎಂದು ಬೇರೆಯೇ ಶಬ್ದವಾಗಿ ಕೊಟ್ಟಿದೆ. ಮಕರಾಕರ ಎಂಬಂಥ ಪದವನ್ನು ಮಕರ+ಆಕರ ಎಂದು ಆದರ ಕೆಳಗೆ ಕೊಟ್ಟಿದೆ.

ಈ ನಿಯಮಗಳನ್ನು ಅಷ್ಟು ಕಟ್ಟು ನಿಟ್ಟಾಗಿ ಅನುಸರಿಸುವುದೂ, ಅರ್ಥಬಾಹುಳ್ಯಗಳಿರುವಲ್ಲಿ ಸಾಧ್ಯವಾಗಿಲ್ಲ; ಅದೊಂದು ಖಚಿತ ನಿಯಮವೆಂದೂ ತಿಳಿಯಕೂಡದು.

**ಅನುನಾಸಿಕ, ಅನುಸ್ವಾರ:**—ಇತರ ನಿಘಂಟುಗಳಿಗೂ ಇದಕ್ಕೂ ಕಾಣುವ ಒಂದು ಭೇದ ಅಕ್ಷರವನ್ನು ಕ್ರಮವಾಗಿ ಇರಿಸಿದ ರೀತಿಯಲ್ಲಿ. ಬಳಕೆಯಲ್ಲಿ 'ಂ' ಅನುಸ್ವಾರದ ಗುರುತು ಇಂದು ತೀರ ರೂಢಿಯಾಗಿ ಬಂದಿರುವುದರಿಂದ ಕಂದ, ಕಂಗು, ಕಂಬು, ಕಂದು ಇಂಥ ಪದಗಳನ್ನು ಈ ಶಬ್ದಕೋಶದ ಮಟ್ಟಿಗೆ ಕನ್ದ, ಕಙ್ಗು, ಕಮ್ಬು, ಕನ್ದು—ಎಂದು ತಿರುಗಿ ಓದುವುದು ಮನಸ್ಸಿಗೆ ಕಷ್ಟವೇ ಸರಿ; ಆದುದರಿಂದ ಇಲ್ಲಿ ಆ ರೀತಿಯಲ್ಲಿ ಅನುನಾಸಿಕ ಶಬ್ದಗಳನ್ನು ಬರೆಯದೆ 'ಂ' ಸಂಕೇತವನ್ನು ಒಪ್ಪಿ ಕ್ರಮರಚನೆ ಮಾಡಿದೆ. ಆದರಂತೆ ಓದುವಾಗ—

ಕಕ—ದಿಂದ ಕಯ ವರೆಗೆ ಆದ ಬಳಿಕ, ಕಂಕ, ಅನಂತರ ಕಂಗು, ಅನಂತರ, ಕಂಪ, ಕಂದ, . . . . . ಮುಂದೆ ಕಂಭ, ತೀರ ಅನಂತರ 'ಕಂಸ'—ಬರುವುದು.

ಅಂದರೆ ಕ ದಿಂದ ತೊಡಗುವ ಶಬ್ದಸಮುದಾಯ ಮುಗಿದ ಬಳಿಕ 'ಕಂ'; ಕಾಂ, ಕಿ ಬಳಿಕ ಕಿಂ, ಕಿಃ, ಕು ಬಳಿಕ ಕುಂ, ಕುಃ . . . . . ಈ ಕ್ರಮವಾಗಿ ಬರುವುವು.

ಮಕ, ಮಖ, ಮಟ, ಮದ, ಮನ, ಮಳಿ . . . . . ಮುಗಿದ ಮೇಲೆ ಮಂಕ, ಮಂಗ ಇತ್ಯಾದಿ ಪದಗಳನ್ನು ಹುಡುಕಬೇಕು.

**ಱ, ೞ:**—ಇವು ಈಗಿನ ಓದುಗರ ಮಟ್ಟಿಗೆ ರ, ಳ,—ವಾಗಿಯೇ ಬಂದಿರುವ ಪ್ರಯುಕ್ತ, ರ, ಳ ದಂತೆಯೇ ಉಪಯೋಗಿಸಿರುತ್ತದೆ. ಅವನ್ನು ಬೇರೆಯಾಗಿ ಹುಡುಕಬೇಕಿಲ್ಲ.

**ಅಂಕಿತನಾಮ ಪರಿಚಯ:**—ಅನೇಕ ಪೌರಾಣಿಕ, ವೈದಿಕ ಪದಗಳನ್ನು ತುಸುವಾಗಿಯಾದರೂ ಇಲ್ಲಿ ವಿವರಿಸಲು ಯತ್ನಿಸಿದ್ದೇವೆ. ಕಾರಣ ಸಾಮಾನ್ಯ ಓದುಗರಿಗೆ ವಿಶ್ವಾ

ಮಿತ್ರ = ಒಬ್ಬ ಋಷಿ, ಎಂದಿಷ್ಟೇ ಹೇಳಿದರೆ ಅರ್ಥಸರಣಿ ಸಿಗಲಾರದೆಂದು ವಿಶ್ವಾಮಿತ್ರನ ಕುರಿತಾದ ನಾಲ್ಕು ಪರಿಚಯದ ಮಾತುಗಳಿವೆ.

ಈ ಮಾತುಗಳನ್ನು ಕೊಡುವಾಗ ಕೇವಲ ಪೌರಾಣಿಕ, ಅಥವಾ ಕಟ್ಟಲೆಯ ಚಿತ್ರಗಳನ್ನು ಕೊಡದೆ, ಹೊಸ ದೃಷ್ಟಿಯಿಂದ ಕೊಟ್ಟಿರುವ ಪ್ರಯುಕ್ತ, ಪೌರಾಣಿಕ ವ್ಯಕ್ತಿಗಳನ್ನು ಕುರಿತು 'ಎಂಬ ಕಥೆ' 'ಎಂಬ ಹೇಳಿಕೆ' ಇದೆ—ಎಂದು ತಿಳಿಸಿದರೆ ಯಾರೂ ಸಿಟ್ಟಾಗಕೂಡದು.

**ಪ್ರಾಂತೀಯ ಕನ್ನಡ:**—ಶಬ್ದಗಳಿಗೆ ಕನ್ನಡದ ವಿವಿಧ ಭಾಗಗಳ ಅರ್ಥವನ್ನು ಕೊಡಲು ಯತ್ನಿಸಿದೆ. ಆದರೆ, ಒಂದೊಂದು ಮಾತಿಗೂ ಕನ್ನಡದ ಬೇರೆ ಬೇರೆ ಭಾಗಗಳಲ್ಲಿ ಬೇರೆಯೇ ಅರ್ಥವಾಗುತ್ತಿರುವುದರಿಂದ—ಇಲ್ಲಿ ಕೊಟ್ಟಿರುವ ಅರ್ಥಗಳೆಲ್ಲವೂ, ಎಲ್ಲರಿಗೂ ಅರ್ಥವಾಗುವುದೂ ಸಾಧ್ಯವಿಲ್ಲ. ಅಂಥ ಸಂದರ್ಭದಲ್ಲಿ ಸಾಹಿತ್ಯರೂಢವಾದ ಮಾತನ್ನು ಅರ್ಥವಾಗಿ ಒಪ್ಪಬೇಕು.

ಉದಾ:—'ಮಡಕೆ' ಎಂಬ ಮಾತಿಗೆ ಸಾಮಾನ್ಯ ಅರ್ಥ ಮಣ್ಣಿನ ಪಾತ್ರೆ. ಧಾರವಾಡ ಪ್ರಾಂತದಲ್ಲಿ ಅದು ಒಂದು ಧಾನ್ಯಕ್ಕೂ ಹೆಸರು. ಆ ಧಾನ್ಯದ ಬೇರೊಂದು ಹೆಸರು 'ಅವಡೆ' (ಅವರೆಯಲ್ಲ). ಇದು ಕೆಲವೇ ಪ್ರಾಂತಗಳಲ್ಲಿ ಬಳಕೆಯಲ್ಲಿದೆ.

**ವಾಕ್ಯ ಚಿಹ್ನೆಗಳು , ; :**—ಉಪಯೋಗ. ಸಮಾನ ಅರ್ಥ ಇರುವಲ್ಲಿಯ ತನಕ ಶಬ್ದಗಳ ಬಳಿಕ , ವನ್ನೂ ಅರ್ಥ ಬೇರೆಯಾಗುವಲ್ಲಿ ; ಗುರುತನ್ನೂ ಕೊಟ್ಟಿದೆ. ಈ ಕಾರಣದಿಂದ 1, 2, 3, 4 ಎಂದು ಬೇರೆ ಬೇರೆ ಸಂಖ್ಯೆಯಿಂದ ಒಂದು ಶಬ್ದದ ವಿವಿಧಾರ್ಥಗಳನ್ನು ಸೂಚಿಸಿಲ್ಲ.

ಉದಾ:—ಇಡು; ಗೋಪನಮಾಡು, ಅಡಗಿಸು. ಇಲ್ಲಿ ಮೊದಲಿನ ಅರ್ಥದ ಪದದ ಬಳಿಕ ; ಬರುವುದರಿಂದ ಮುಂದಿನ ಅರ್ಥ ಬದಲು. ಎರಡನೇ ಮೂರನೇ ಅರ್ಥಗಳು ಸಮಾನ ಎಂದು ತಿಳಿಯಬೇಕು. ಈ ನಿಯಮ ಗಮನಿಸಿದಲ್ಲಿ ಎಷ್ಟೋ ಅನ್ಯ ಪ್ರಾಂತೀಯ ಕನ್ನಡ ಅರ್ಥಗಳೂ ಅರ್ಥವಾಗುವುದು ಸಾಧ್ಯವಿದೆ.

ಉದಾ:—ಮಡಕೆ = ಕುಂಭ, ಗಡಿಗೆ, ಮಣ್ಣಿನ ಪಾತ್ರೆ; ಒಂದು ಧಾನ್ಯ, ಅವಡೆ. ಎಂದು ಇರುವುದರಿಂದ ಮಡಕೆ = ಕುಂಭ = ಗಡಿಗೆ = ಮಣ್ಣಿನ ಪಾತ್ರೆ; ಮಡಕೆ = ಒಂದು ಧಾನ್ಯ = ಅವಡೆ. ಎಂದು ಅನಿಸುವುದು.

ಎದುರಿನ ಎಲ್ಲ ಅರ್ಥಗಳೂ ದಪ್ಪ ಅಕ್ಷರದಲ್ಲಿ ಕೊಟ್ಟ ಪದದ ಅರ್ಥಗಳೇ ಹೊರತು ಯಾವಾಗಲೂ ಕಂಸದೊಳಗಿನ ಪದಗಳಿಗೆ ಅನ್ವಯಿಸಬೇಕೆಂದಿಲ್ಲ.

ಮೀನ್(ಮೀನು), ಮತ್ಸ್ಯ, ಒಂದು ನಕ್ಷತ್ರರಾಶಿ, ಹೊಳೆವ—ಎಂದಿದ್ದರೆ ಮೀನ್=ಮೀನು ಇರುವುದು, ಆದರೆ ಅದು ಮೀನು=ಹೊಳೆವ ಎಂದಾಗಬೇಕಿಲ್ಲ.

---



:: ಸಿರಿಗನ್ನಡ ::

# ಅರ್ಥ ಕೋಶ

## ಅ

ಅಕಚ (ಕಚ=ತಲೆಯ ಕೂದಲು+ಅ=ಇಲ್ಲ) ತಲೆಯ ಮೇಲೆ ಕೂದಲಿಲ್ಲದವ, ಬೋಳು ತಲೆಯವ.

ಅಕಟ ಅಕ್ಕಟ, ಅಯ್ಯೋ.

— ಅಕಟ ಅಕ್ಕಟ, ಅಕಟ, ಅಯ್ಯೋ!

ಅಕರ್ಮ ಕೆಲಸವಿಲ್ಲದ, ಕೆಲಸ ಮಾಡದಿರುವ; ಕೆಟ್ಟ ಕೆಲಸ, ಅಪರಾಧ.

— ಕ ಕರ್ಮವಿಲ್ಲದ, ಕರ್ಮವೇ ಬಾರದ.

ಅಕರ್ಮಿ ಅಪರಾಧಿ, ಮಾಡಬಾರದ ಕೆಲಸ ಮಾಡುವ.

ಅಕಲಂಕ(ಅಕಳಂಕ), ಕಲೆಯಿಲ್ಲದ, ಕೊರತೆಯಿಲ್ಲದ, ಶುದ್ಧ.

ಅಕಲ್ಮಷ ಕಲ್ಮಷವಿರದ, ಶುದ್ಧವಾದ.

ಅಕಲ್ಪಿತ ಕಲ್ಪಿತವಲ್ಲದ, ಸ್ವಾಭಾವಿಕವಾದ, ಕಲ್ಪನೆಯಿಲ್ಲದ, ಅಕಸ್ಮಾತ್ ಆದ, ಫಕ್ಕನೆ ಆದ.

ಅಕಸ್ಮಾತ್ ಯಾವುದರಿಂದ ಆಯಿತೆಂದು ತಿಳಿಯದ.

ಅಕಳತ್ರ (ಕಳತ್ರ=ಹೆಂಡತಿ) ಹೆಂಡತಿಯಿಲ್ಲದ, ಹೆಂಡತಿ ಸತ್ತ; ಲಗ್ನವಾಗದ ಬ್ರಹ್ಮಚಾರಿ.

ಅಕಂಟಕ ಕಂಟಕವಿಲ್ಲದ, ಅಪಾಯವಿಲ್ಲದ.

ಅಕಾರಣ ಕಾರಣವಿಲ್ಲದ.

ಅಕಾರ್ಯ ಮಾಡಬಾರದ ಕೆಲಸ, ಅಯೋಗ್ಯವಾದ ಕೆಲಸ.

ಅಕಾಲ ಕಾಲವಲ್ಲದುದು,ಅಯುಕ್ತಸಮಯ.

ಅಕಾಲ ಫಲ ಕಾಲ ತಪ್ಪಿ ಆದ ಫಲ.

ಅಕಾಲ ಮರಣ ಕಾಲ ತಪ್ಪಿ ಸಾಯುವುದು, ಪ್ರಾಯ ತುಂಬುವ ಮೊದಲೇ ಸಾಯುವುದು.

ಅಕಾಂಡ (ಕಾಂಡ=ಕೋಲು, ಬಾಣ, ಕುತ್ಸಿತ, ಕುದುರೆ, ಕಾವ್ಯವಿಭಾಗ, ಕಾಲ, ನೀರು) ಕಾಲವಿರದ; ಫಕ್ಕನೆ ಆದ; ತಾಳು ಇರದ ಇತ್ಯಾದಿ.

ಅಕಾಂಡತಾಂಡವ ಅಯುಕ್ತ; ಗೊತ್ತು ಗುರಿಯಿಲ್ಲದ; ಅಸಂಗತ; ಪೂರ್ವಾಪರ ವಿರುದ್ಧವಾದ.

ಅಕಿಂಚನ ಕೈಯಲ್ಲಿ ಏನೂ ಇಲ್ಲದವ, ತೀರ ಬಡವ, ಕಾಸಿಲ್ಲದವ, ದರಿದ್ರ.

ಅಕುಟಿಲ (ಕುಟಿಲ=ಡೊಂಕು) ಡೊಂಕಲ್ಲದ, ನೆಟ್ಟಗಿರುವ; ಕಪಟವಿಲ್ಲದ, ಪ್ರಾಮಾಣಿಕ, ಸರಳ.

ಅಕುಪ್ಯ (ಕುಪ್ಯ=ಚಿನ್ನ ಬೆಳ್ಳಿ ಎರಡೂ ಅಲ್ಲದ ಧಾತು) ಚಿನ್ನ, ಬೆಳ್ಳಿ.

ಅಕೂಪಾರ (ಅಕೂ=ಕುತ್ಸಿತವಲ್ಲದ, ಬಹು ದೊಡ್ಡದಾದ+ಪಾರ=ತೀರವುಳ್ಳದು) ಬಹು ದೊಡ್ಡ ತೀರವುಳ್ಳದು, ಸಮುದ್ರ, ಸಾಗರ; ದೊಡ್ಡ ಆವೆ, ಮಹಾಕೂರ್ಮ.

ಅಕೃತ ಪೂರ್ಣವಾಗದ; ಅಪಕ್ವವಾದ; ಕರೆಯದ; ಮಾಡಲ್ಪಡದ.

ಅಕೃತಕ ಕೃತಕವಲ್ಲದ, ಕೈಯಿಂದ ಮಾಡದ, ಸ್ವಾಭಾವಿಕ; ಕಪಟವಿಲ್ಲದ.

ಅಕೃತಜ್ಞ ಉಪಕಾರವನ್ನು ಸ್ಮರಿಸದ, ಕೃತಘ್ನ.

ಅಕೃತ್ಯ ಕೃತ್ಯವಲ್ಲದುದು, ಮಾಡಬಾರದ ಕೆಲಸ, ಅಪರಾಧ.

ಅಕೃತ್ರಿಮ ಕೃತ್ರಿಮವಲ್ಲದ, ಕೈಯಿಂದ ಮಾಡದ; ಸ್ವಾಭಾವಿಕ; ಕಪಟವಿರದ.

ಅಕ್ಕಜ ಆಶ್ಚರ್ಯ; ಮತ್ಸರ, ಹೊಟ್ಟೆಕಿಚ್ಚು.

ಅಕ್ಕಡಿ ಇಕ್ಕಟ್ಟು, ಸಂಕಟ, ಅಡಚಣೆ; ಎರಡು ಮುಖ್ಯ ಬೆಳೆಗಳನ್ನು ಬೆಳಸುವುದಕ್ಕಾಗಿ ಮಾಡಿದ ನೇಗಿಲ ಸಾಲ ನಡುವಿನ ಪಂಕ್ತಿ, ನೇಗಿಲ ಹೊಡೆ.

ಅಕ್ಕಡಿಕಾಳು ಹೆಸರು, ಉದ್ದು ಮೊದಲಾದ ಬೇಳೆಯಾಗತಕ್ಕ ಧಾನ್ಯ.

ಅಕ್ಕರ್ (ಅಕ್ಕರು), ಅಕ್ಕರೆ, ಪ್ರೀತಿ.

—ಬೆರಸು(ಅಕ್ಕರ್ವೆರಸು) ಪ್ರೀತಿಯಿಂದ ಕೂಡಿರು.

ಅಕ್ಕರ (ದ್ಭ) ಅಕ್ಷರ (ಸಂ).

—ಮಾಲೆ (ದ್ಭ) ಅಕ್ಷರಮಾಲೆ (ಸಂ).

ಅಕ್ಕರಿಕೆ ಪಲ್ಯಕ್ಕೆ ಉಪಯೋಗಿಸುವ ಒಂದು ವಿಧವಾದ ಹೂವುಳ್ಳ ಗಿಡ; ಕನ್ನಡದಲ್ಲಿ ಒಂದು ಪದ್ಯಜಾತಿ.

ಅಕ್ಕರಿಗ ಅಕ್ಷರಜ್ಞ, ಪಂಡಿತ.

ಅಕ್ಕರುಗುಟುಕು ಪ್ರೀತಿಯಿಂದ ತಾಯಿ ಮರಿಗೆ ಕೊಡುವ ಆಹಾರ.

ಅಕ್ಕಸ ಅನುರಾಗ, ಪ್ರೇಮ; ಸಂತಾಪ; ರೊಚ್ಚು.

ಅಕ್ಕಳಿಸು ಆಕಳಿಸು, ಅಕ್ಕುಳಿಸು, ಹಸಿವೆಯಿಂದ ಆಹಾರಕೋಶದ ಸ್ನಾಯುಗಳು ಮುದುರಿಕೊಳ್ಳುವುದು; ಭಯಪಡು.

ಅಕ್ಕಾಡು ಅಳ್ಳಾಡು; ಏನೂ ಉಳಿಯದೆ ಹೋಗು; ಕಾಂತಿಯನ್ನು ಕಳೆದುಕೊಳ್ಳು, ಶಕ್ತಿ ಕಳೆದುಕೊಳ್ಳು, ನಾಶವಾಗು; ಹರಿಯು, ಒಸರು, ಇಳಿ.

ಅಕ್ಕಿ ಒಂದು ಧಾನ್ಯ ಜಾತಿ.

ಅಕ್ಕಿಕಂಡ ಕೆಳಕಾಲಿನ ಕಂಡ, ಮೀನಕಂಡ.

ಅಕ್ಕಿಗಚ್ಚು (ಕರ್ಚು=ತೊಳೆ) ಅಕ್ಕಿಯನ್ನು ತೊಳೆದ ನೀರು.

ಅಕ್ಕು(ಅಕ್ಕುಂ) ಸರಿಯಾಗಿ ಜೀರ್ಣವಾಗು; ಆಗಬಹುದು, ಸಂಭವನೀಯ, ಸಾಧ್ಯ; ಜಯಿಸು, ವಶಪಡಿಸಿಕೊಳ್ಳು.

—ಎ (ಅಕ್ಕುಮೆ) ಆಗುವುದೆ.

ಅಕ್ಕುಡ ಶಕ್ತಿಯುಕ್ತ, ಸತ್ವಶಾಲಿ, ಸತ್ವಗ.

ಅಕ್ಕುಡಿಸು ಸಣ್ಣದಾಗು, ಕುಗ್ಗು, ನಿಲ್ಲು.

ಅಕ್ಕುಳಿಸು (ನೋಡು—ಅಕ್ಕಳಿಸು).

ಅಕ್ಕೆ ಅಳ್ಕೆ, ಅಳುವಿಕೆ, ಶೋಕ, ದುಃಖ; ಹಾಗಾಗಲಿ.

ಅಕ್ರಮ ಕ್ರಮವಿಲ್ಲದಿರುವಿಕೆ, ಕ್ರಮತಪ್ಪಿರುವುದು; ಗೊಂದಲ, ಗಲಿಬಿಲಿ; ಪಾಪ.

ಅಕ್ರೂರ ಶಾಂತ, ಕ್ರೂರನಲ್ಲದ; ಚಂದ್ರವಂಶ, ಯಾದವ ವಂಶಕ್ಕೆ ಸೇರಿದ ಶ್ವಫಲನ ಮಗ, ಇವನ ತಾಯಿ ಗಾಂದಿನೀ. ಇವನ ಹೆಂಡತಿ ಆಹುಕನ ಮಗಳಾದ ಸುತನು. ಈತನಿಗೆ ಬಭರನೆಂದು ಬೇರೆ ಹೆಸರೂ ಇರುವುದು. ಕಂಸನು ಶ್ರೀಕೃಷ್ಣನ ಬಳಿಗೆ ಬಿಲ್ಲಹಬ್ಬಕ್ಕೆ ಬಲರಾಮ ಕೃಷ್ಣರನ್ನು ಕರೆಯುವುದಕ್ಕಾಗಿ ಇವನನ್ನು ಕಳುಹಿದ್ದನು.

ಅಕ್ರೋಡ ಅಕ್ರೋಡಬೆಟ್ಟ; ಗೋಣೀಮರ.

ಅಕ್ಲೀಬ ಪೌರುಷಯುಕ್ತ.

ಅಕ್ಲೇಶ ತೊಂದರೆಯಿಂದ ಬಿಡುಗಡೆ ಹೊಂದಿರುವುದು; ದುಃಖವಿಲ್ಲದಿರುವುದು.

ಅಕ್ಷ ದಾಳ, ಪಗಡೆ; ಜೂಜು; ರುದ್ರಾಕ್ಷ; ಕಣ್ಣು ಮೊದಲಾದ ಇಂದ್ರಿಯ; ತಾತಿಗಿಡ; ಬಂಡಿಯ ಅಚ್ಚು, ಅಚ್ಚುಮರ.

ಅಕ್ಷಕ್ರೀಡೆ ಪಗಡೆಯಾಟ.

ಅಕ್ಷತ ಅಕ್ಷತೆ, ಜಜ್ಜಿಹೋಗದುದು, ಇಡಿ; ಶುಭಶೋಭನಗಳಲ್ಲಿ ಉಪಯೋಗಿಸುವ ಕುಂಕುಮ ಬೆರಸಿದ ಅಕ್ಕಿ ಕಾಳು; ಹಣೆಯ ಮೇಲಿಡುವ ತಿಲಕ.

—ಆರೋಪಣೆ ಮದುಮಕ್ಕಳ ಮೇಲೆ ಅಕ್ಷತೆ ಎರಚುವುದು.

ಅಕ್ಷದರ್ಶಕ ನ್ಯಾಯ ತೀರ್ಮಾನಿಸುವವ, ನ್ಯಾಯಾಧೀಶ.

ಅಕ್ಷಮ ಸಮರ್ಥನಲ್ಲದವ.

ಅಕ್ಷಮಣಿ ಜಪಸರದ ಮಣಿ; ಅಕಾರದಿಂದ ಕ್ಷಕಾರದ ವರೆಗಿನ ಅಕ್ಷರಗಳ ಲೆಕ್ಕದಿಂದ ಇರುವ ಮಣಿ.

ಅಕ್ಷಯ ನಾಶವಿಲ್ಲದ, ನಾಶವಾಗದ; ಅರುವತ್ತು ಸಂವತ್ಸರಗಳ ಸಾಲಿನಲ್ಲಿ ಕೊನೆಯ ಸಂವತ್ಸರ.

ಅಕ್ಷಯ ತೃತೀಯೆ ವೈಶಾಖ ಶುಕ್ಲ ಪಕ್ಷದ ತದಿಗೆ. ಈ ದಿನ ಮಾಡಿದ ದಾನ ಧರ್ಮಗಳು ಅಕ್ಷಯವಾಗುವುವು ಎಂಬ ನಂಬಿಕೆಯಿದೆ.

ಅಕ್ಷಯಪಾತ್ರೆ ಒಳಗಿರುವ ಆಹಾರ ಪದಾರ್ಥಗಳು ಮುಗಿದು ಎಂದೂ ಬರಿದಾಗದ ಪಾತ್ರೆ. (ಇದು ಪಾಂಡವರಿಗೆ ಅರಣ್ಯವಾಸದ ವೇಳೆ ಸೂರ್ಯಾನುಗ್ರಹದಿಂದ ದೊರೆಯಿತು.)

ಅಕ್ಷರ (ಕ್ಷರ=ನಾಶ) ನಾಶವಾಗದ; ಚಲಿಸದ; ಪರಬ್ರಹ್ಮ; ಬರಹದ ಒಂದು ಸಂಕೇತ.

—ಮಾಲೆ ಅಕಾರದಿಂದ ಕ್ಷಕಾರದ ವರೆಗಿನ ಅಕ್ಷರಗಳು, ವರ್ಣಸಮಾಮ್ನಯ, ವರ್ಣಮಾಲೆ.

ಅಕ್ಷರಚಣ ಬರೆಯುವವ, ಬರಹಗಾರ, ಓದು ತಿಳಿದವ.

ಅಕ್ಷರಜ್ಞ ಅಕ್ಷರವನ್ನರಿತವ, ಬರಹ ಬಲ್ಲವ.

ಅಕ್ಷರಶಃ ಅಕ್ಷರ ಅಕ್ಷರವಾಗಿ, ಬರಿಯ ಶಬ್ದಾರ್ಥ ಪ್ರಕಾರ.

ಅಕ್ಷರಸಂಸ್ಥಾನ ಬರಹ, ಧರ್ಮಗ್ರಂಥ.

ಅಕ್ಷಹೃದಯ (ಅಕ್ಷ=ಜೂಜಿನ+ಹೃದಯ=ಗುಟ್ಟು) ಜೂಜಿನ ಗುಟ್ಟನ್ನು ವಿವರಿಸುವ, ಜೂಜಿನ ನೈಪುಣ್ಯ.

ಅಕ್ಷಾವಳಿ ಜಪಸರ.

ಅಕ್ಷಾಂಶ ಭೂಮಿಯ ಸುತ್ತಲೂ ವಿಷುವೃತ್ತಕ್ಕೆ ಸಮಾಂತರವಾಗಿ ಸುತ್ತಿದಂತೆ ಕಲ್ಪಿಸಿರುವ ರೇಖೆಯ ಅಂಶ.

ಅಕ್ಷಿ ಕಣ್ಣು, ದೂರವಾಗಿ ವ್ಯಾಪಿಸುವುದು.

ಅಕ್ಷಿಗತ (ಅಕ್ಷಿ=ಕಣ್ಣನ್ನು, ಗತ=ಹೊಂದಿದ) ಕಣ್ಣನ್ನು ಸೇರಿದ, ಕಣ್ಣಿಗೆ ಕಾಣಿಸಿದ; ವಿರೋಧಿ, ಶತ್ರು.

ಅಕ್ಷಿಮಾಲೆ ಜಪಸರ, ಕವಡೆಯ ಸರ, ರುದ್ರಾಕ್ಷಿಯ ಸರ.

ಅಕ್ಷೀಣ ಬಡವಾಗದ, ಕ್ಷೀಣವಾಗದ, ಪೂರ್ಣವಾದ.

ಅಕ್ಷೀಬ ಮದಿಸದ, ಮದವೇರದ, ತಲೆಗೇರದ.

ಅಕ್ಷುಣ್ಣ ಒಡೆಯದ, ಇಡಿಯ.

ಅಕ್ಷುದ್ರ (ಕ್ಷುದ್ರ=ಚಿಕ್ಕದು, ಸಣ್ಣದು) ಸಣ್ಣದಲ್ಲದ, ದೊಡ್ಡದಾದ.

ಅಕ್ಷೂಣ ಕಡಿಮೆಯಾಗದ.

ಅಕ್ಷೋಟ (ದ್ಭ) ಅಕ್ರೋಡ (ಸಂ), ಬೆಟ್ಟ; ಗೋಣೀಮರ.

ಅಕ್ಷೋಭ್ಯ ಕ್ಷೋಭೆಗೊಳ್ಳದ, ಅಚಲ, ದೃಢ.

ಅಕ್ಷೌಹಿಣಿ ನಿಯಮಿತವಾದ ಸಂಖ್ಯೆಯಿಂದ ಕೂಡಿರುವ ಸೈನ್ಯ. (21870 ಆನೆ, 21870 ರಥ, 65610 ಕುದುರೆ, 198359 ಕಾಲಾಳುಗಳ ಸೈನ್ಯ.)

ಅಖಂಡ ತುಂಡಲ್ಲದ, ಇಡಿಯ, ಪೂರ್ಣ.

—ಮಂಡಲ ಇಡಿ ರಾಜ್ಯವನ್ನು ಆಳುವ.

—ಸೌಭಾಗ್ಯ ಸಂಪೂರ್ಣ ಸಂಪತ್ತು; ವೈಧವ್ಯ(ಮುಂಡೆತನ)ದಿಂದ ಕೆಡದ ಸೌಭಾಗ್ಯ, ಮಂಗಲತ್ವ, ಮಾಂಗಲ್ಯ.

ಅಖರ್ವ (ಖರ್ವ=ಕುಳ್ಳು) ಕುಳ್ಳಲ್ಲದ, ಅಧಿಕ, ಬಹಳ, ದೊಡ್ಡ.

ಅಖಂಡಿತ ಪೂರ್ಣ.

ಅಖಾಡ ವಾದವಿವಾದವನ್ನು ಮಾಡುವ ಕೋಣೆ, ಮೈಗಳ್ಳರ ನಿಲುವು, ಮೈಗಳ್ಳರ ಸ್ಥಾನ; ಕುಸ್ತಿಯಾಡುವ ರಂಗ.

ಅಖಾತ ಜನರಿಂದ ಅಗೆಯಲ್ಪಡದ ಕೆರೆ ಹಳ್ಳ ಮೊದಲಾದುವು.

ಅಖಾದ್ಯ ತಿನ್ನಲಿಕ್ಕೆ ಬಾರದ, ತಿನ್ನಲು ಯೋಗ್ಯವಲ್ಲದ.

ಅಖಿನ್ನ ದುಃಖಿಸದ, ಖಿನ್ನನಾಗದ.

ಅಖಿಲ ಎಲ್ಲ.

ಅಖಿಲಾಶಾಂತಂ (ಅಖಿಲ = ಎಲ್ಲ + ಆಶಾ = ದಿಕ್ಕುಗಳ + ಅಂತಂ = ಕೊನೆಯ ವರೆಗೆ) ಎಲ್ಲ ದಿಕ್ಕುಗಳ ಕೊನೆಯ ವರೆಗೆ, ಸಮಸ್ತ ದಿಗಂತ.

ಅಖಿಲಾಂಡ ಎಲ್ಲ ಪ್ರಪಂಚ.

ಅಗ (ಅ = ಇಲ್ಲ + ಗ = ಚಲನೆ) ಚಲನೆ ಇಲ್ಲ ದುದು, ಮರ, ಬೆಟ್ಟ.

ಅಗಚಾಟಲು ತೊಂದರೆ.

ಅಗಜಾ ಪಾರ್ವತಿ.

ಅಗಡು ಕಾಡು; ದುಷ್ಟ; ದುರ್ವ್ಯಸನಿ.

—ತನ ಕ್ರೂರತನ, ತುಂಟತನ.

—ದನ ತುಂಟದನ, ದನ, ದುಷ್ಟದನ.

—ಮೋರೆ ಕ್ರೂರಮುಖ, ದಯವಿಲ್ಲದ ಮೋರೆ.

ಅಗಣಿ (ದ್ಭ) ಅರ್ಗಲ (ಸಂ), ಅಗಳಿ, ಅಗುಳಿ, ಬಾಗಲಿನ ತಾಳ.

ಅಗಣಿತ ಲೆಕ್ಕ ಮಾಡಲಿಕ್ಕೆ ಸಾಧ್ಯವಾಗದ, ಅಸಂಖ್ಯಾತವಾದ, ಬಹಳ ಹೆಚ್ಚಿನ.

ಅಗಣ್ಯ ಅಸಂಖ್ಯಾತ, ಲೆಕ್ಕವಿಲ್ಲದ.

ಅಗದ (ಗದ = ರೋಗವು + ಅ = ಇದರಿಂದ ಇಲ್ಲದಂತಾಗುವುದು). ರೋಗ ಪರಿಹರಿಸು ವುದು, ಔಷಧ.

—ಕಾರ (ಅಗದಂಕಾರ) ಮದ್ದು, ವೈದ್ಯ.

ಅಗದಿ ಒಟ್ಟಿಗೆ, ಪೂರ್ಣ, ತೀರ.

ಅಗಧರ (ಅಗ = ಬೆಟ್ಟವನ್ನು + ಧರ = ಧರಿಸಿ ದವ, ಹೊತ್ತವ) ಕೂರ್ಮಾವತಾರದಲ್ಲಿ ಮಂದರವನ್ನೂ, ಕೃಷ್ಣಾವತಾರದಲ್ಲಿ ಗೋವರ್ಧನ ಪರ್ವತವನ್ನೂ ಹೊತ್ತವ, ವಿಷ್ಣು.

ಅಗಪಡು ಒಳಪಡು, ಅಧೀನವಾಗು.

ಅಗಪೆ ತೆಂಗಿನ ಚಿಪ್ಪಿನ ಸೌಟು.

ಅಗಭೇದಿ (ಅಗ = ಪರ್ವತವನ್ನು + ಭೇದಿ = ಸೀಳುವವ) ಪರ್ವತವನ್ನು ಸೀಳುವವ, ಇಂದ್ರ (ಮರವನ್ನು ಕಡಿಯುವುದು), ಕೊಡಲಿ.

ಅಗಮ ಹೋಗದುದು; ಪರ್ವತ; ಮರ.

ಅಗಮ್ಯ ಹೋಗಲಾರದುದು; ತಿಳಿಯ ದುದು.

ಅಗಮ್ಯಾಗಮನ (ಅಗಮ್ಯ = ಹೋಗಬಾರದ ಎಡೆಗೆ + ಗಮನ = ಹೋಗುವುದು) ರೀತಿ ತಪ್ಪಿದ ಹಾದರ.

ಅಗರ ಹಡಗಿನ ಹಿಂಭಾಗ, ಹಿಂಗೋಟು.

ಅಗರಣೆ ಹಗರಣೆ, ಹಂಗಿಸುವಿಕೆ.

ಅಗರು ತಲೆಯ ಹೊಟ್ಟು, ತಲೆಯಲ್ಲಿ ಒಣ ಗಿದ ತೆಳುಚರ್ಮ; ಗುಗ್ಗುಳವನ್ನು (ಲೋ ಬಾನ) ಹುಟ್ಟಿಸುವ ಒಂದು ಮರ; ಅಗಿಲು ಗಂಧ, ಒಂದು ಸುವಾಸಿತ ದ್ರವ್ಯ.

ಅಗರುಗಂಧ ಪರಿಮಳಿಸುವ, ಹಳದಿ ಬಣ್ಣದ ಕಟ್ಟಿಗೆ, ಅಗಿಲುಗಂಧ.

ಅಗಲ ವಿಸ್ತಾರ.

ಅಗಲ್ ಅಗಲು, ತೊರೆ, ತ್ಯಜಿಸು.

—ಇಕೆ (ಅಗಲುವಿಕೆ) ಅಗಲ್ಕೆ, ವಿಂಗಡ ವಾಗುವುದು, ಬೇರೆಯಾಗುವುದು.

—ಇಸು ಬೇರೆಮಾಡು, ತೊಲಗಿಸು.

—ಚು ಅಗಲಿಸು, ಬೇರೆಯಾಗಿ ಮಾಡು, ವಿಸ್ತಾರವಾಗಿ ಮಾಡು, ಅಗಲವಾಗಿ ತೆರೆ.

ಅಗವಡು (ಅಗಂ+ಪಡು) ಸಿಕ್ಕಿಬೀಳು. ಒಳಗೆ ಬೀಳು.

ಅಗಸೆ(ದ್ಭ)ಅಗಸ್ತ್ಯ(ಸಂ), ಅಕಸೀ, ಉತ್ತಮವಾದ ಹೂವನ್ನೂ ಕೋಡನ್ನೂ ಬಿಡುವ ಒಂದು ಮರ, ಕಿತ್ತನಾರು ಗಿಡ, ಅತಸಿ; ಪಟ್ಟಣದ ಬಾಗಿಲು, ಕೋಟೆಯ ಬಾಗಿಲು.

—ಎಣ್ಣೆ ಕಿತ್ತನಾರು ಬೀಜದ ಎಣ್ಣೆ.

ಅಗಸ್ತ್ಯ ಅಗಸ್ತಿ, ಮಿತ್ರ ಮತ್ತು ವರುಣರೆಂಬ ಋಷಿಗಳಿಂದ ಊರ್ವಶಿಯಲ್ಲಿ ಹುಟ್ಟಿದ ಒಬ್ಬ ಋಷಿ. ವಿದರ್ಭ ರಾಜಪುತ್ರಿಯಾದ ಲೋಪಾಮುದ್ರೆ ಇವನ ಹೆಂಡತಿ. ಈತನು ಸಮುದ್ರಜಲವನ್ನು ಕುಡಿದು ಜೀರ್ಣಿಸಿಕೊಂಡನು. ವಾತಾಪಿ ಇಲ್ವರರೆಂಬ ರಕ್ಕಸರನ್ನು ಕೊಂದನು.

ಅಗಳ್ (ಅಗಳು) ಕಂದಕ, ಕೋಟೆಯ ಹೊರಗಿನ ಕಣಿ, ಪರಿಖೆ.

ಅಗಳಂತಿ ಏಣಿಯ ಮೆಟ್ಟಿಲ ಕೋಲು; ಕೋಟೆಯ ಸುತ್ತಲಿನ ಕಂದಕ.

ಅಗಳು ಬೆಂದ ಅನ್ನದ ಕೂಳು; ಕಣ; ಪರಿಖೆ, ಕಂದಕ; ಅಗೆ; ಶಬ್ದ.

ಅಗಲ್ತೆ ಅಗತೆ, ಕೋಟೆಯ ಹೊರಗಿನ ಕಂದಕ, ಅಗೆಯುವಿಕೆ.

ಅಗಿ ತಿನ್ನು, ಜಗಿ, ನೆಲವನ್ನು ಅಗೆ; ನಡುಗು, ಹೆದರು; ಸಂತೋಷಪಡು.

ಅಗಿನಿ ಅಗ್ನಿ, ಬೆಂಕಿ.

ಅಗುರ್ವು ಅಗುರ್ಬು, ಅತಿಶಯ, ಭಯಂಕರ.

—ಇಪ ಆಶ್ಚರ್ಯವನ್ನು ಹುಟ್ಟಿಸುವ.

—ಇಸು ಭಯಪಡಿಸು; ಭಯಂಕರವಾಗು.

ಅಗಿಲು ಪರಿಮಳ; ಧೂಪ.

ಅಗಿವಿಲಿ ಪರಿಮಳವಿಲ್ಲದ.

ಅಗುಳ್ ಅಗುಳು, ಅಗೆಯು, ನೆಲವನ್ನಗೆ.

ಅಗುಳಿ (ದ್ಭ) ಅರ್ಗಲ (ಸಂ), ನೋಡು—ಅಗಳಿ.

ಅಗುಳು ಅಗಿ; ಭೋಜನಪಾತ್ರೆ.

ಅಗುಂತಿ ಅತಿಶಯ.

ಅಗುಂದಲೆ ದೊಡ್ಡ, ಅತಿಶಯ.

ಅಗೆ ಭಯ; ಜಗಿ; ಸಂತೋಷ; ಮೊಳಕೆ; ಬತ್ತ ಹೊಗೆಸೊಪ್ಪು ಮೊದಲಾದುವುಗಳ ಸಣ್ಣ ಸಸಿ; ನೆಲವನ್ನು ಅಗೆ.

ಅಗೇಡಿ ಅಗೆಯನ್ನು ಬೆಳೆಯಿಸಿದ ಜಾಗ, ಗಿಡಗಳನ್ನು ಬೆಳಸುವ ಜಾಗ.

ಅಗೋಚರ (ಗೋ=ಕಣ್ಣೊಳಗೆ+ಅಚರ=ಹೋಗದುದು) ಕಣ್ಣಿಗೆ ಕಾಣಿಸದುದು.

ಅಗ್ಗ (ದ್ಭ) ಅರ್ಘ (ಸಂ), ವಿಶೇಷ, ಹೆಚ್ಚಿನ; ಕಡಿಮೆ ಬೆಲೆ.

ಅಗ್ಗಲ ಅರ್ಗಳ, ಹೆಚ್ಚಳ.

—ಇಸು ಅಧಿಕವಾಗು, ಹೆಚ್ಚಾಗು. ಮೇಲುತರಕ್ಕೆ ಬರು.

ಅಗ್ಗವಣಿ ಅಗಿಣಿ, ನೀರು.

ಅಗ್ಗಳ ಚಂದ್ರಪ್ರಭ ಪುರಾಣವನ್ನು ಬರೆದ ಒಬ್ಬ ಜೈನ ಕವಿ, ಇವನ ಕಾಲ ಕ್ರಿ. ಶ. 1189; ಅಧಿಕ, ಹೆಚ್ಚು.

—ಇಸು ಸಮರ್ಥನಾದವನು.

—ಇಕೆ ದೊಡ್ಡಸ್ತಿಕೆ, ಹೆಚ್ಚಿನ ಶಕ್ತಿ, ಅತಿಶಯ; ದುರಾಸೆ.

ಅಗ್ಗಳು ಆಧಿಕ್ಯ, ಹೆಚ್ಚು.

ಅಗ್ಗಾಡಿ ಲಜ್ಜೆಗೆಟ್ಟ; ಕೀಳು ತರಗತಿಯ ಹೆಂಗಸು.

ಅಗ್ಗಾಡಿಕಾರ ಗಾರುಡಿಗ, ಇಂದ್ರಜಾಲ ವಿದ್ಯೆಯನ್ನು ತೋರುವವ, ಮೋಸಗಾರ, ವಂಚಕ.

ಅಗ್ಗಿ (ದ್ಭ) ಅಗ್ನಿ (ಸಂ), ಬೆಂಕಿ, ಕಿಚ್ಚು.

ಅಗ್ಗಿಗ(ದ್ಭ) ಅಗ್ರುಗ (ಸಂ) (ಅಗ್ರ=ಮುಂದೆ+

ಗ=ಹೋಗುವವ) ಮುಂದೆ ಹೋಗುವವ, ಮುಂದಾಳು, ಪ್ರಯೋಜನಕ್ಕೆ ಬಾರದವ.

ಅಗ್ಗಿಟಕೆ (ದ್ಭ) ಅಗ್ನಿಷ್ಟಿಕೆ (ಸಂ), ಕುಲುಮೆ, ಬೆಂಕಿ ತುಂಬಿದ ಪಾತ್ರೆ.

ಅಗ್ಗಿಣಿ ನೀರು.

ಅಗ್ಗು ಲಯಿಸು, ಕ್ಷೀಣವಾಗು.

—ಇಸು ಹೀನ ಸ್ಥಿತಿಗೆ ತರಲು ಕಾರಣ ವಾಗು.

ಅಗ್ನಿ ಅನಾದಿ ಕಾಲದ ಹಿಂದೂ ವೈದಿಕ ದೇವತೆ. ಅಗ್ನಿ, ವಾಯು, ಇಂದ್ರ, ಸೂರ್ಯರಂತೆ ಮೂಲ ದೇವತೆಗಳಲ್ಲಿ ಒಬ್ಬನು. ಅಗ್ನಿಗೆ ವಹ್ನಿ, ಅನಲ, ಪಾವಕ, ವೈಶ್ವಾನರ ಮೊದಲಾದ ಹೆಸರುಗಳಿವೆ; ಬೆಂಕಿ.

—ಜ (ಬೆಂಕಿಯಲ್ಲಿ ಹುಟ್ಟದವ) ಷಣ್ಮುಖ.

ಅಗ್ನಿಕಳದೆಣ್ಣೆ ಕಾದ ಎಣ್ಣೆ, ದೀಪದೆಣ್ಣೆ, ಚಿಮಣಿಯ ಎಣ್ಣೆ.

ಅಗ್ನಿದೀಪನ ಜೀರ್ಣಶಕ್ತಿಯನ್ನು ಹೆಚ್ಚಿಸುವುದು.

ಅಗ್ನಿಮಾಂದ್ಯ ಜೀರ್ಣಶಕ್ತಿ ತಗ್ಗುವುದು.

ಅಗ್ನಿಮಿತ್ರ ಬೆಂಕಿಯ ಗೆಳೆಯ, ವಾಯು; ಪ್ರಾಚೀನ ಕಾಲದ ಒಬ್ಬ ರಾಜಕುಮಾರ.

ಅಗ್ನಿಮೊಗ (ದ್ಭ) ಅಗ್ನಿಮುಖ (ಸಂ), ಅಗ್ನಿಯೇ ಮುಖವಾಗಿ ಉಳ್ಳವ; ದೇವತೆ.

ಅಗ್ನಿವರ್ಣ ಸೂರ್ಯವಂಶದ ಕೊನೆಯ ರಾಜನು. (ಇವನು ಕ್ಷಯರೋಗದಿಂದ ಮಕ್ಕಳಾಗುವ ಮೊದಲು ಸತ್ತನು.)

ಅಗ್ನಿವೇಶ್ಯ ದ್ರೋಣಾಚಾರ್ಯನಿಗೂ ದ್ರುಪದನಿಗೂ ಅಸ್ತ್ರವಿದ್ಯಾ ಗುರುವಾದವ; ಇವನು ದ್ರೋಣನ ಚಿಕ್ಕಪ್ಪನು.

ಅಗ್ನಿಶಿಖೆ ಬೆಂಕಿಯ ಜ್ವಾಲೆ; ಜಂಡಿಕೆ.

ಅಗ್ನಿಷ್ಟೋಮ ಅಗ್ನಿಯ ಪ್ರಾರ್ಥನೆ; ವಸಂತ ಋತುವಿನಲ್ಲಿ ನಡೆಸುವ ಒಂದು ಯಜ್ಞ.

ಅಗ್ನಿಸಖ ಬೆಂಕಿಯ ಗೆಳೆಯ, ಗಾಳಿ.

ಅಗ್ನಿಸಂಸ್ಕಾರ ಅಗ್ನಿಯನ್ನು ಪ್ರತಿಷ್ಠಿಸುವುದು, ಬೆಂಕಿಯಿಂದ ಸುಡುವುದು.

ಅಗ್ನಿಸ್ತಂಭನ ಬೆಂಕಿಯಲ್ಲಿ ಕುಳಿತರೂ ಸುಡದಂತೆ ಮಾಡುವ ಒಂದು ವಿದ್ಯೆ.

ಅಗ್ನಿಹೋತ್ರ ಅಗ್ನಿಯಲ್ಲಿ ದೇವತೆಗಳಿಗಾಗಿ ತುಪ್ಪ ಮೊದಲಾದ ಹವಿಸ್ಸನ್ನು ಅರ್ಪಿಸುವುದು.

ಅಗ್ನ್ಯುತ್ಪಾತ ಉಲ್ಕಾಪಾತ, ಬಾಲಚುಕ್ಕಿ, ಧೂಮಕೇತು ಮೊದಲಾದುವು ಕಾಣಿಸಿಕೊಳ್ಳುವುದು.

ಅಗ್ರ ತುದಿ; ಮೊದಲು; ಮುಂದೆ; ಮುಖ್ಯ.

—ಜ ಮೊದಲು ಹುಟ್ಟದವ, ಅಣ್ಣ; ಬ್ರಾಹ್ಮಣ.

ಅಗ್ರಗಣ್ಯ(ಅಗ್ರ=ಮೊದಲಿನವನಾಗಿ+ಗಣ್ಯ=ಎಣಿಸಲ್ಪಡತಕ್ಕವ) ಮೊದಲಿನವನಾಗಿ ಎಣಿಸಲ್ಪಡತಕ್ಕವ, ಮೊದಲಿಗ, ಶ್ರೇಷ್ಠ.

ಅಗ್ರಗಾಮಿ ಮುಂದೆ ಹೋಗುವವ, ಮುಂದಾಳು.

ಅಗ್ರಣಿ ಸ್ವಾಮಿ, ಒಡೆಯ; ಶ್ರೇಷ್ಠ.

ಅಗ್ರತಾಂಬೂಲ ಸಭೆಯಲ್ಲಿ ಮೊದಲಿಗೆ ಕೊಡುವ ವೀಳೆಯ.

ಅಗ್ರಪೂಜೆ ಸಭೆಯಲ್ಲಿ ಸರ್ವ ಗುಣದಲ್ಲಿಯೂ ಮೊದಲನೆಯವನಾಗಿ ಇರುವವನಿಗೆ ಅವನ ಸನ್ಮಾನಾರ್ಥ ಮೊದಲು ಮಾಡುವ ಪೂಜೆ.

ಅಗ್ರಸಾಲೆ ದೇವಸ್ಥಾನದಲ್ಲ ಅಡಿಗೆ ಮಾಡುವ ಮನೆ; ಅಡಿಗೆ ಕೋಣೆ.

ಅಗ್ರಸ್ಥ ಮೊದಲನೆಯವನಾಗಿರುವುದು, ಅಧ್ಯಕ್ಷ, ಸಭಾಪತಿ, ಸಭಾನಾಯಕ.

ಅಗ್ರಹಾರ ಬ್ರಾಹ್ಮಣರ ವಾಸಕ್ಕಾಗಿ ಅವರಿಗೆ ಕೊಟ್ಟ ಗ್ರಾಮ ಮೊದಲಾದುವು, ಬ್ರಾಹ್ಮಣರೇ ಇರುವ ಸ್ಥಾನ, ಬ್ರಾಹ್ಮಣರ ಕೇರಿ.

ಅಗ್ರಂಬರ ತುದಿಯ ವರೆಗೆ.

ಅಗ್ರಾಸನ ಮುಖ್ಯ ಸ್ಥಾನ, ಮುಖ್ಯ ಪೀಠ.
ಅಗ್ರಾಹಕ, ಅಗ್ರಾಹ್ಯ ಮೆಚ್ಚದ, ಸ್ವೀಕಾರ ಯೋಗ್ಯವಲ್ಲದ.
ಅಗ್ರಿಮ ಅತ್ಯುತ್ತಮ; ಮೊದಲಿಗ, ಮುಖ್ಯ, ಹಿರಿಯ, ಜ್ಯೇಷ್ಠ.
ಅಗ್ರಿಯ ಹಿರಿಯಣ್ಣ; ಮುಂದಾಳು; ಉತ್ತಮ, ಮುಖ್ಯ.
ಅಗ್ರೇಸರ (ಅಗ್ರೇ=ಮುಂದೆ+ಸರ=ಹೋಗುವವ) ಮುಂದಾಳು; ಅತ್ಯುತ್ತಮ.
ಅಗ್ರೋದಕ ಅರ್ಘ್ಯಜಲ, ದೇವರ ಪೂಜೆಗೆ ಉಪಯೋಗಿಸಿದ ನೀರು.
ಅಗ್ರ್ಯ ಮೊದಲು, ಅತ್ಯುತ್ತಮ.
ಅಘ ಪಾಪ, ಅಪರಾಧ; ನೋವು.
ಅಘಟಿ ಅತಿಶಯ.
ಅಘಟನ ಕಷ್ಟ, ಅಸಾಧ್ಯ, ಸಂಭವಿಸದುದು; ಆಶ್ಚರ್ಯಕರವಾದುದು.
ಅಘಟಮಾನ ಹೊಂದದುದು.
ಅಘನ ಗಟ್ಟಿಯಾಗದಿರುವುದು, ನೀರಾಗಿರುವುದು.
ಅಘಮರ್ಷಣ (ಅಘ=ಪಾಪವನ್ನು+ಮರ್ಷಣ=ಕೆಡಿಸುವುದು) ಪಾಪ ನಾಶಪಡಿಸಲು ಜಪಿಸುವ ವೇದಮಂತ್ರ.
ಅಘಾಟ ಆಶ್ಚರ್ಯ; ಅಧಿಕ, ವಿಪುಲ.
ಅಘಾಸುರ ಕಂಸನ ಸೇನಾನಿಯರಲ್ಲೊಬ್ಬ.
ಅಘೋರ ಭಯಂಕರ
ಅಘೋಷ ಪರುಷವರ್ಣ; ಎಲ್ಲಾ ವರ್ಗೀಯಾಕ್ಷರಗಳ ಮೊದಲನೆಯ ಎರಡು ವರ್ಣಗಳು, ಶ, ಷ, ಸ, ಹ ಈ ಅಕ್ಷರಗಳು.
ಅಘ್ನ್ಯ ಎತ್ತು.
ಅಚತುರ ಜಾಣನಲ್ಲದ.
ಅಚಪಲ ಚಲಿಸದ, ಸ್ಥಿರವಾದ.
ಅಚರ ಚಲಿಸದ.
ಅಚಲ ಚಲಿಸದ, ಸ್ಥಿರವಾದುದು, ಪರ್ವತ.
ಅಚಲಿ ಚಲಿಸದುದು, ಭೂಮಿ.
ಅಚಂಚಲ ಚಂಚಲವಲ್ಲದ, ಸ್ಥಿರವಾದ.
ಅಚಂಡ ಚಂಡವಲ್ಲದ, ನಯವಾದ, ವಿನೀತ.
ಅಚಾತುರ್ಯ ಜಾಣತನವಿಲ್ಲದುದು.
ಅಚಿರ ಹೆಚ್ಚುಕಾಲವಿರದ, ನಿಲ್ಲದ, ಕ್ಷಣಿಕವಾದ.
ಅಚಿರದ್ಯುತಿ ಹೆಚ್ಚುಕಾಲವಿರದ ಪ್ರಕಾಶ, ಮಿಂಚು.
ಅಚಿರಾಂಶು ಮಿಂಚು.
ಅಚಿಂತ್ಯ ತಿಳಿಯಕೂಡದ, ಗ್ರಹಿಸಲಾಗದ.
ಅಚೇತನ ಶಕ್ತಿಯಿಲ್ಲದ, ಜ್ಞಾನವಿಲ್ಲದ, ಬುದ್ಧಿಯಿಲ್ಲದ.
ಅಚೈತನ್ಯ ಬಲವಿಲ್ಲದ, ಶಕ್ತಿಯಿಲ್ಲದ; ಬುದ್ಧಿಯಿಲ್ಲದ, ಜ್ಞಾನವಿಲ್ಲದ.
ಅಚೋದ್ಯ ಚೋದ್ಯವಲ್ಲದ, ಆಶ್ಚರ್ಯವಲ್ಲದ.
ಅಚ್ಚ (ದ್ಭ) ಅಚ್ಛ (ಸಂ), ಸ್ವಚ್ಛ, ಶುದ್ಧ.
ಅಚ್ಚಕ ತೆರಿಗೆ; ಸಲಿಗೆ, ಗೆಳೆತನ.
ಅಚ್ಚಕ್ಕಿ ಶುದ್ಧ ಮಾಡಿದ ಅಕ್ಕಿ.
ಅಚ್ಚಗ ಗಾಬರಿ.
ಅಚ್ಚಗನ್ನಡ ಶುದ್ಧಕನ್ನಡ.
ಅಚ್ಚಯ (ದ್ಭ) ಅಕ್ಷಯ (ಸಂ), ನಾಶವಿಲ್ಲದ, ಕ್ಷೀಣವಾಗದ.
ಅಚ್ಚಯಗೋಲ್ಗಳ್ ಅಕ್ಷಯ ಬಾಣಗಳು.
ಅಚ್ಚರರ್ ಅಪ್ಸರರು, ದೇವತಾ ಸ್ತ್ರೀಯರು.
ಅಚ್ಚರಸಿ ಅಪ್ಸರಸ್ತ್ರೀ (ಸಂ), ದೇವತಾಸ್ತ್ರೀ.
ಅಚ್ಚರಿ (ದ್ಭ) ಆಶ್ಚರ್ಯ (ಸಂ), ಬೆರಗನ್ನು ಹುಟ್ಟಿಸುವುದು; ಅಪ್ಸರಸ್ತ್ರೀ.
ಅಚ್ಚಳಿ ಹಾಳಾಗು, ಕೆಡು, ಒರಸಿಹೋಗು.
ಅಚ್ಚಾಳು ಗಟ್ಟಿಮುಟ್ಟಾದವ, ದಾಂಡಿಗ.
ಅಚ್ಚಿ (ದ್ಭ) ಅಕ್ಷಿ (ಸಂ), ಕಣ್ಣು; ತಾಯಿ.
—ಗೊಳಿಸುವ ಕಣ್ಗೊಳಿಸುವ, ಕಣ್ಣಿಗೆ ಕಾಣಿಸುವ.

ಅಚ್ಚಿಗ ಒಳ್ಳೆಯ ಪ್ರಿಯಕರನು, ಸ್ನೇಹ ಸ್ವಭಾವದವನು, ವ್ಯಥೆ.

ಅಚ್ಚು (ದ್ಭ) ಅಕ್ಷ(ಸಂ); ಬಂಡಿಯ ಚಕ್ರದ ಅಚ್ಚು, ಬಂಡಿಯ ಚಕ್ರ ಯಾವುದರ ಸುತ್ತು ತಿರುಗುವುದೋ ಅದು; ಮುದ್ರೆ, ಮೊಹರು; ನೇಯಿಗೆಯವನ ಹಣಿಗೆ.

ಅಚ್ಚುಕಟ್ಟು ಯೋಗ್ಯ, ಪ್ರಶಸ್ತ; ಕ್ರಮ ವುಳ್ಳ.

ಅಚ್ಚುಕೂಟ ಛಾಪಖಾನೆ.

ಅಚ್ಚುಗುಳಿ ಅನುಕೂಲ, ಉಪಯುಕ್ತ.

ಅಚ್ಚುಬೀಗ ಜತೆಬೀಗ.

ಅಚ್ಚುಬೆಲ್ಲ ಮರದ ಅಥವ ಲೋಹದ ಅಚ್ಚಿಗೆ ಹೊಯಿದು ಆರಿಸಿ ಸಣ್ಣ ಬಿಲ್ಲೆಗಳಾಗಿ ಮಾಡಿದ ಬೆಲ್ಲ.

ಅಚ್ಚುಮೆಚ್ಚು ಬಹಳ ಸಲಿಗೆ, ಬಹು ಸ್ನೇಹ.

ಅಚ್ಚುವಣಿಗ ಸರಕಾರಕ್ಕೆ ತೆರಿಗೆ ಕೊಡುವ ದೊಡ್ಡ ಆಸ್ತಿವಂತ.

ಅಚ್ಚುಳಾಯಿತ ಸೇವಕ.

ಅಚ್ಚೇರು ಅರ್ಧ ಸೇರು.

ಅಚ್ಚೊತ್ತು ಒತ್ತು, ಚಿತ್ರಿಸಿ.

ಅಚ್ಛ ಶುದ್ಧ.

ಅಚ್ಛಭಲ್ಲ(ಅಚ್ಛ=ಬಿಳುಪಾದ+ಭಲ್ಲ=ಕರಡಿ) ಬಿಳೇ ಕರಡಿ ಅಥವಾ (ಅಚ್ಛ=ಇದಿರಾಗಿ ಬಂದು+ಭಿಲ್ಲ=ಹಿಂಸಿಸುವುದು) ಕರಡಿ.

ಅಚ್ಛಾ ಚೆನ್ನಾಗಿ ಆಯಿತು ಎಂಬ ಸಂತೋಷ ಸೂಚಕವಾದ ಪದ.

ಅಚ್ಛಿದ್ರ ಛಿದ್ರವಿರದ, ತೂತಿರದ, ಕುಂದಿ ರದ, ಕೊರತೆಯಿರದ.

ಅಚ್ಛಿನ್ನ ಕತ್ತರಿಸಲ್ಪಡದ, ತುಂಡುಮಾಡದ.

ಅಚ್ಛೋದ (ಅಚ್ಛ=ನಿರ್ಮಲವಾದ+ಉದ= ನೀರುಳ್ಳುದು) ನಿರ್ಮಲವಾದ ನೀರಿರುವ ಸರೋವರ.

ಅಚ್ಯುತ ನಾಶವಿಲ್ಲದವ, ವಿಷ್ಣು.

ಅಜ (ಅ=ವಿಷ್ಣುವಿನಿಂದ+ಜ=ಹುಟ್ಟಿದವ) ಬ್ರಹ್ಮ, ಸೂರ್ಯವಂಶದ ಒಬ್ಬ ಅರಸು. ಈತನು ರಘುವಿನ ಮಗ ದಿಲೀಪನ ಮಗ ನೆಂದೂ ಅವನು ಇಂದುಮತಿಯೆಂಬ ವಿದರ್ಭ ರಾಜಕನ್ಯೆಯನ್ನುವರಿಸಿದನೆಂದೂ ಕಥೆಯಿದೆ; ಆಡು; ಹುಟ್ಟಿಲ್ಲದ.

ಅಜಕು ಹೆದರು, ಭಯಪಡು.

ಅಜಗಜಾಂತರ (ಅಜ=ಆಡಿಗೂ+ಗಜ= ಆನೆಗೂ ಇರುವಷ್ಟು+ಅಂತರ=ಹೆಚ್ಚು ಕಡಿಮೆ) ಆನೆಗೂ ಆಡಿಗೂ ಇರುವಷ್ಟು ಹೆಚ್ಚು ಕಡಿಮೆ, ಬಹಳ ಹೆಚ್ಚು ಕಡಿಮೆ.

ಅಜಗರ (ಅಜ=ಆಡನ್ನು+ಗರ=ನುಂಗು ವುದು) ಆಡನ್ನು ಕೂಡಾ ನುಂಗುವುದು, ಹೆಬ್ಬಾವು, ದಾಸರ ಹಾವು, ಪೆರ್ಮರಿ.

—ವೃತ್ತಿ ನಿರುದ್ಯೋಗಿಯ ವ್ಯಾಪಾರ, ದಾಂಡಿಗನಾಗಿದ್ದು ಭಿಕ್ಷೆ ಬೇಡಿ ಹೊಟ್ಟೆ ಹೊರೆದುಕೊಳ್ಳುವ ಕಸಬು.

ಅಜಮುಖ ಆಡಿನಂತೆ ಮುಖವುಳ್ಳವ, ದಕ್ಷ.

ಅಜನ ಜನವಿಲ್ಲದ, ಮರುಭೂಮಿ, ಬೆಂಗಾಡು.

ಅಜನಿಸು ಹೀಯಾಳಿಸು, ಮೂದಲಿಸು, ತಿರ ಸ್ಕರಿಸು.

ಅಜನ್ಯ ಹುಟ್ಟಲಯೋಗ್ಯ; ಶುಭಾಶುಭವನ್ನು ಸೂಚಿಸತಕ್ಕ ಭೂಕಂಪ ಮೊದಲಾದ ಉಪ ದ್ರವ; ಲೌಕಿಕವಾದ ಕಾರಣದಿಂದ ಉಂ ಟಾಗದುದು.

ಅಜಮಾಯಿಸು ಅಂದಾಜು ಮಾಡು, ಸುಮಾರಾಗಿ ಗೊತ್ತುಮಾಡು.

ಅಜಯ ಜಯಿಸಲಾರದ, ವಿಷ್ಣು.

ಅಜರ ಜರೆಯಿಲ್ಲದ, ಮುದಿತನವಿರದವ, ದೇವತೆ.

—ಅಮರ ಮುಪ್ಪೂ ಮರಣವೂ ಇಲ್ಲ ದವ, ದೇವತೆ.

ಅಜರ್ಯ ಜೀರ್ಣವಾಗದ, ಸ್ನೇಹ.

ಅಜಂಡ ಬಟ್ಟೆಯಂತೆ ಒಂದಕ್ಕೊಂದು ಹೊಲಿದು ಸೇರಿಸಿದ, ಅಖಂಡ, ಒಂದೇಯಾದ.
ಅಜಾತಶತ್ರು ಶತ್ರುರಹಿತವಾದ ಸ್ವಭಾವವುಳ್ಳವ, ದಯಾಳು.
ಅಜಾನೇಯ ಉತ್ತಮ ಕುದುರೆ.
ಅಜಾಮಿಳ ಕನೋಜದ ಒಬ್ಬ ಬ್ರಾಹ್ಮಣನು. ಈತನು ಒಬ್ಬ ದಾಸಿಯನ್ನು ವರಿಸಿ, ತನ್ನ ಮಕ್ಕಳಲ್ಲಿ ಬಹುವಾಗಿ ಆಸಕ್ತನಾಗಿದ್ದನು.
ಅಜಾಂಡ ಬ್ರಹ್ಮನಿಂದ ಆದ ಮೊಟ್ಟೆ, ಬ್ರಹ್ಮಾಂಡ, ವಿಶ್ವ.
ಅಜಿಗಿಜಿ ಅರೆದ ಚೂರ್ಣ.
ಅಜಿತ ಜಯಿಸಲಾಗದ.
ಅಜಿನ ಚರ್ಮ.
ಅಜಿರ ರಂಗ.
ಅಜೀರ್ಣ ಜೀರ್ಣವಾಗದ.
ಅಜೇಯ ಜಯಿಸಲಸಾಧ್ಯವಾದ.
ಅಜ್ಜ(ದ್ಭ) ಆರ್ಯ (ಸಂ), ಪೂಜ್ಯ.
ಅಜ್ಞ ಏನೂ ತಿಳಿಯದವ.
ಅಜ್ಞಾತ ಗೊತ್ತಿಲ್ಲದ, ತಿಳಿಯದ.
—ವಾಸ ಪಾಂಡವರು ಮರೆಯಾಗಿದ್ದ ಕಾಲ.
ಅಟನಿ ಬಿಲ್ಲನಾರಿ, ಬಿಲ್ಲಿನ ಕೊನೆ.
ಅಟಮಟಿಗ ಮಾಯಾವಿ.
—ತನ ಮೋಸ.
ಅಟವಟ ಮೋಸ, ತಟವಟ.
ಅಟವಿ (ದ್ಭ) ಅಡವಿ (ಸಂ), ಕಾಡು.
ಅಟವಿಕ ಆಟವಿಕ, ವೇಷಧಾರಿ.
ಅಟ್ಟ (ದ್ಭ) ಅಷ್ಟ (ಸಂ), ಎಂಟು, ವಿಶೇಷವಾದ, ಉನ್ನತವಾದ, ಉಪ್ಪರಿಗೆ.
—ಕವಲ್ ನೀಳವಾಗಿ ಒಡೆದ ಕವಲು.
—ಟ್ಟೆ ದೂತ.
—ಣೆ ಗೋಪುರ.
—ಪಡಿ ನೀಳಗೋಲು.
—ಳೆ ಬುರುಜು.
ಅಟ್ಟಹಾಸ ಬಡಿವಾರ, ಜಂಬ.
ಅಟ್ಟಿದ ಕಳುಹಿಸಿದ.
ಅಟ್ಟು ಓಡಿಸು; ಅಡಿಗೆಮಾಡು; ಆರಿಸು.
ಅಟ್ಟುಳಿ ಪೀಡೆ; ಗುಂಪು; ಬೇಟೆಯ ಮೃಗ.
ಅಟ್ಟೆ ಮುಂಡ, ತಲೆಯಿಲ್ಲದ ದೇಹ; ಬಾಗಿದ ಕೋಲು.
ಅಡ ಅಡ್ಡ.
ಅಡಕ ಅಡಗುವ ಸ್ಥಳ, ಹಿಡಿಸುವಿಕೆ, ಅಡ್ಡಿ.
ಅಡಕಲು ಮಡಕೆಗಳ ಸಾಲು, ಒಂದರ ಮೇಲೊಂದನ್ನಿಟ್ಟಿರುವುದು.
ಅಡಕಿಲ್ ರಾಶಿ, ಒಂದರ ಮೇಲೊಂದಿಟ್ಟುದು.
ಅಡಕು ಒಟ್ಟು ರಾಶಿಹಾಕು, ಒಂದರಮೇಲೊಂದನ್ನಿಡು; ಅಣಗಿಸು, ನಿಗ್ರಹಿಸು, ತಗ್ಗಿಸು.
ಅಡಕೆ ಕ್ರಮುಕ, ವೀಳೆಯದೆಲೆಯ ಸಂಗಡ ತಿನ್ನುವ ಕಾಯಿ, ಕಂಗಿನ ಕಾಯಿ.
ಅಡಗಟ್ಟು ಅಡ್ಡಗಟ್ಟು.
ಅಡಗು (ಅಡಂಗು), ಅಡಕವಾಗು, ಅಡಗಿಕೊಳ್ಳು, ಮುದುರು; ಮಾಂಸ.
ಅಡಗೆಡಹು ಅಡ್ಡಬೀಳು.
ಅಡತರ ಕೆಳಸ್ಥಿತಿ; ವಿಷಾದ; ನಿಸ್ತೇಜ.
ಅಡಪ ತಾಂಬೂಲದ ಕರಡಿಗೆ, ಎಲೆ ಅಡಿಕೆಯ ಸಂಚಿ, ಸಣ್ಣ ಚೀಲ, ಹಡಪ.
ಅಡಪಿಗ ನಾಯಿಂದ, ಕೆಲಸಿ, ಕ್ಷೌರಿಕ, ಅಡಪ ಹೊತ್ತ ಸೇವಕ.
ಅಡಪು (ಅಡರ್ಪು) ಆಶ್ರಯ.
ಅಡವಿ(ದ್ಭ) ಅಟವಿ(ಸಂ), ಕಾಡು.
ಅಡವು ಒತ್ತೆ ಇರಿಸುವಿಕೆ, ಅಡಮಾನ, ಈಡು.
ಅಡರು ಹರಡು, ವಿಸ್ತರಿಸು, ಏರು.
ಅಡಸು ಗಾಢಪ್ರವೇಶ ಮಾಡು, ಹೊಂದಿಕೆಯಾಗು, ಪ್ರಾಪ್ತವಾಗು, ಬಂದು ಸೇರು, ತುರುಕು.

ಅಡಹಡಿಸು ಆತುರಪಡು.
ಅಡಹಾಯ್ ಅಡ್ಡವಾಗಿ ನುಗ್ಗು.
ಅಡಾಯುಧ ತುದಿ ಉರುಟಾದ ಕತ್ತಿ, ಬಗ್ಗಿದ ಕತ್ತಿ, ಕತ್ತಿ.
ಅಡಿ ಪಾದ, ಅಂಘ್ರಿ; ತಳ; 12 ಇಂಚಿನ ಅಳತೆ.
ಅಡಿಗಿಡು ನಿರ್ಮೂಲವಾಗು.
ಅಡಿಗೆಡೆ ಅಡಿಗೆ ಬೀಳು, ಕೆಳಗೆ ಬೀಳು.
ಅಡಿಗೆರಗು ಕಾಲಿಗೆ ಬೀಳು.
ಅಡಿದಾವರೆ ಪಾದ ಪದ್ಮ, ತಾವರೆಯಂತಿರುವ ಪಾದ.
ಅಡಿನೆಲ ಅಧೋಲೋಕ, ಪಾತಾಳ.
ಅಡಿವಣಲ್ ತಳದಲ್ಲಿರುವ ಮರಳು.
ಅಡಿಹುಡಿಮಾಡು ಪುಡಿಪುಡಿ ಮಾಡು.
ಅಡು ಅಡಿಗೆ ಮಾಡು, ಬೇಯಿಸು.
—ಕೂಳ್ (ಅಡುಗೂಳ್), ಅಟ್ಟ ಅನ್ನ.
ಅಡುಗಬ್ಬು ಇಂಧನ, ಕಟ್ಟಿಗೆ.
ಅಡುಪಾಯ ಎರಡನೆಯ ದಾರಿ.
ಅಡುರ್ ಅಡ್ಡಿ ಮಾಡು; ತಡೆ; ವ್ಯಾಪಿಸು.
ಅಡೆ ಸ್ಥಾನ; ಬೆರಳಿಂದ ಹೊಡೆ; ಪಡೆ, ಹೊಂದು.
ಅಡೆಯಂಕೋಡು ಪಕ್ಕದ ಗೆರೆಯನ್ನು ತನ್ನ ಕೊಂಬಿನಿಂದ ಹಾಯ್ದು.
ಅಡೆಯುಡುಗು ಸ್ಥಳ ಬಿಡು.
ಅಡ್ಡ ಎದುರು, ತಡೆ.
ಅಡ್ಡಣ ಹಲಿಗೆ, ಗುರಾಣಿ.
—ದೊಡ್ಡಣಂ ಗುರಾಣಿ ಹಿಡಿದ ಸೈನ್ಯ.
ಅಡ್ಡಣಿಗೆ ಮುಕ್ಕಾಲು, ಮಣೆ.
—ಅಯ್ಸು ಅಡ್ಡಯಿಸು, ಅಡ್ಡ ಬರು, ಅಡ್ಡಿಮಾಡು.
—ಇಸು ತರುಬು, ಅಡ್ಡಿ ಮಾಡು, ಎದುರಾಗು, ಮರೆಮಾಡು,
ಅಡ್ಡಿ ವಿರೋಧ, ತಡೆ.
—ಇಸು ಅಡ್ಡಿಮಾಡು, ಎದುರಾಗು.
ಅಡ್ಡೆ ಅಡ್ಡ ಹಾಕುವ ಕಟ್ಟಿಗೆ; ಮನೆಯ ಮುಚ್ಚಿಗೆಯ ಜಂತೆ.
ಅಣಕ ಹಾಸ್ಯ, ಕುಚೋದ್ಯ; ಪೀಡೆ, ಕಾಟ.
—ಇಸು ಕುಚೋದ್ಯ ಮಾಡು, ಚೇಷ್ಟೆ ಮಾಡು.
ಅಣಗು ಅವಿತುಕೊಳ್ಳು, ಅಡಗು.
ಅಣಲ್ ಬಾಯಿಯ ಕೆಳಭಾಗ, ದವಡೆ; ಅಂಗಳ; ಬಾಯಿ.
ಅಣಂ ಬಹಳವಾಗಿ, ಸ್ವಲ್ಪವೂ.
ಅಣಂಬೆ ಅಣಬೆ, ನಾಯಿಕೊಡೆ.
ಅಣಿ ಸೈನ್ಯ, ಪಡೆ, ದಳ; ಸಾಲು; ಕೂಡಿಸೋಣ, ಸಿದ್ಧ, ತಯಾರಿ; ಕಟ್ಟ ರಚಿಸಿದ ಕಿರೀಟ.
—ಆಗು ಸಿದ್ಧವಾಗು.
—ಗೈಯ್ಯು ಸಿದ್ಧಮಾಡು, ಸರಿಮಾಡು.
ಅಣಿಯರ ಅತಿಶಯ, ಪಿರಿದು, ಯೋಗ್ಯತೆ.
ಅಣಿಯುತ್ತ ಅಪ್ಪಳಿಸುತ್ತ.
ಅಣು ತೀರ ಸಣ್ಣ ಕಣ, ಅತಿ ಸೂಕ್ಷ್ಮ ವಸ್ತು.
ಅಣುಗ ಮಗ; ಪ್ರೀತಿಯವ.
ಅಣುಗಿ ಅಣುಗೆ, ಮಗಳು.
ಅಣುಗಿನವ ಹಾಸ್ಯಗಾರ.
ಅಣುಗು ಪ್ರೀತಿ.
ಅಣುವ(ಧ್ವ) ಹನುಮಾನ್(ಸಂ) ಹನುಮಂತ.
ಅಣೆ ಚುಚ್ಚು; ಹೊಡೆ, ಸ್ಪರ್ಶಮಾಡು; ಕಲ್ಲು ಕಡಿಯುವ ಗಸಿ; ಅಣೆಕಟ್ಟು.
ಅಣೆವ ಸ್ಪರ್ಶಮಾಡುವ, ಒಂದಕ್ಕೊಂದು ಚುಚ್ಚುವ, ತಗಲುವ.
ಅಣ್ಪೈದು ಲೇಪಿಸಿಕೊ.
ಅಣ್ಣ ತನಗಿಂತ ಮೊದಲು ಹುಟ್ಟಿದ ಸಹೋದರ.
ಅಣ್ಣರ್ ಹೇಡಿಗಳು.
ಅಣ್ಣೆಕಲ್ಲು ತಿರಿಕಲ್ಲು, ಹೆಣ್ಣುಮಕ್ಕಳು ಸಣ್ಣ ಕಲ್ಲುಗಳಿಂದ ಆಡುವ ಒಂದು ಆಟ.

ಅಣ್ಣೆವಾಲ್ ಶುದ್ಧ ಹಾಲು.
ಅಣ್ಪು ಲೇಪನ, ಹಚ್ಚಿಕೊಳ್ಳುವ ಪದಾರ್ಥ.
ಅಣ್ಮು ಸಾಹಸ, ಪರಾಕ್ರಮ, ಪೌರುಷ.
ಅಣ್ಮೆವು ಪೌರುಷವಂತರಾಗೆವು, ಶಕ್ತರಲ್ಲ.
ಅತನು ದೇಹವಿಲ್ಲದವ, ಕಾಮ.
ಅತನ್ನರೀ ಪುತ್ರ ವೀರಭದ್ರ.
ಅತರ್ಕ್ಯ ಊಹಿಸಲಸಾಧ್ಯವಾದ.
ಅತಲ ಒಂದು ಲೋಕದ ಹೆಸರು.
ಅತಸೀ ಅಗಸೆ.
ಅತಿ ಬಹಳ; ವಿಶೇಷ.
—ಕಾಯ ದೊಡ್ಡ ಶರೀರದ ರಕ್ಕಸ, ರಾವಣನ ಮಗ.
ಅತಿಕ್ರಮಿಸು ಮರ್ಯಾದೆ ಮೀರು, ಗಡಿ ಮೀರು.
ಅತಿಥಿ ಕುಶನ ಮಗ, ರಾಮನ ಮೊಮ್ಮಗ; ಅಕಸ್ಮಾತ್ತಾಗಿ ಬಂದು ಒಂದು ದಿನದ ಮಟ್ಟಿಗೆ ನಿಂತು ಹೋಗುವವ.
ಅತಿಧಣು ಕೊಂಡಾಡುವಿಕೆ.
ಅತಿರಥ ಅಮಿತರೊಡನೆ ಕಾದಾಡತಕ್ಕ ವೀರನು, ಧನುರ್ವಿದ್ಯಾ ಪಂಡಿತನಾಗಿ ಒಬ್ಬನೆ ಹನ್ನೊಂದು ಸಾವಿರ ವೀರರೊಡನೆ ಏಕಾಂಗಿಯಾಗಿ ಯುದ್ಧಮಾಡಬಲ್ಲವ.
ಅತಿರಿಕ್ತ ಬಹಳ, ಅತಿರೇಕ.
ಅತಿರೂಕ್ಷ ಬಹಳ ಕಠಿನ; ಒಣಗಿದ; ಒರಟಾದ.
ಅತಿವರ್ತಿ ಮೀರಿ ನಡೆಯುವವ.
ಅತಿಶಯ ಹೆಚ್ಚುಗೆ, ವಿಶೇಷ.
ಅತೀತ ಮೀರಿದ, ಹೆಚ್ಚಿನ.
ಅತುಲ(ಳ) ಎಣೆಯಿಲ್ಲದ, ಬಹಳ, ವಿಶೇಷ.
ಅತ್ತಪರ ಗುರಾಣಿ, ಡಾಲು, ಕಾಳಗನಲಿಗೆ.
ಅತ್ತಲ್ ಅತ್ತ, ಅತ್ತಣ, ಅತ್ತಣಿಂದ.
ಅತ್ತಳ ಅತಿಶಯ.
ಅತ್ತಳಗ ವ್ಯಥೆ, ಕಳವಳ.
ಅತ್ತಿ ಆಲದ ಜಾತಿಯ ಒಂದು ಮರ.
ಅತ್ತಿಗೆ(ದ್ಭ) ಅತ್ತಿಕಾ(ಸಂ), ಅತ್ತಿಕೆ(ಮನೆಗೆ ತಂದ ಹೆಣ್ಣುಮಕ್ಕಳನ್ನು ತಿನ್ನುವವಳು, ಸಹೋದರರ ಹೆಂಡಿರನ್ನು ಪೀಡಿಸುವವಳು), ಸಹೋದರನ ಹೆಂಡತಿ, ಗಂಡನ ಸಹೋದರಿ.
ಅತ್ತೆ ಗಂಡನ ತಾಯಿ.
ಅತ್ರಪಾತ್ಮಿಕೆ ನಾಚಿಕೆಯಿಲ್ಲದವಳು.
ಅತ್ರಿ ವೈದಿಕ ಕಾಲದ ಋಷಿ. ಈತ ದಕ್ಷನ ಮಗಳಾದ ಅನಸೂಯೆಯನ್ನು ವರಿಸಿದನು. ಪುರಾಣಗಳಲ್ಲಿ ಅವನು 'ಸೋಮ'ನ ತಂದೆ; ದತ್ತಾತ್ರೇಯನ ತಂದೆ. ಆತನಿಗೆ ನಕ್ಷತ್ರ ಮಂಡಲದಲ್ಲೂ ಸ್ಥಾನವಿದೆ.
ಅಥ ಈಗ, ಆದರೂ; ಹೀಗೆ; ಆ ಮೇಲೆ.
ಅಥರ್ವ ಅಥರ್ವಣ, ಬ್ರಾಹ್ಮಣ, ಒಂದು ವೇದದ ಹೆಸರು.
ಅದಕು ಅದುಕು, ಅವುಚು.
ಅದಟ ಕಡು ದಿಟ್ಟ; ವೀರ, ಪರಾಕ್ರಮಿ.
ಅದಪು ಅದಕು, ಅದುಮು, ಒತ್ತು; ಅಲುಗಾಡಿಸು.
ಅದಭ್ರ ಅಧಿಕನಾದ.
ಅದಯ ಕರುಣೆಯಿಲ್ಲದವ.
ಅದರಿನೇ ಅದರಿಂದಲೇ.
ಅದರು ಅದಿರು, ನಡುಗು, ಕಂಪಿಸು.
ಅದವಳಲ್ ವ್ಯಥೆ, ಮರುಕ, ಚಿಂತೆ.
ಅದಿತಿ ನೆಲ; ಕಾಶ್ಯಪನ ಹೆಂಡತಿಯಾದವಳು. ಋಗ್ವೇದಗಳಲ್ಲಿ ಅದಿತಿಯು ದೇವತೆಗಳ ತಾಯಿ ಎಂದಿದೆ. ಯಜುರ್ವೇದದಲ್ಲಿ ಈಕೆಯು ಏಳು ಆದಿತ್ಯರ ತಾಯಿಯೆಂದೂ ವಿಷ್ಣುವಿನ ಪತ್ನಿಯೆಂದೂ ಹೇಳಿದೆ.
ಅದಿರು ಭಯಪಡು, ನಡುಗು.
ಅದಿರ್ಗಂತಿ ಮಾಧವೀಲತೆ.
ಅದಿರ್ಪು ನಡುಗಿಸು, ಭಯ.

ಅದಿಮುರ್ಕ್ತಿ(ಸಂ) ಅತಿಮುತ್ತ(ದ್ಭ), ವಸಂತ ದೂತಿಕೆಯೆಂಬ ಲತೆ, ಇರುವಂತಿಗೆ.
ಅದುಬುತ(ದ್ಭ) ಅದ್ಭುತ(ಸಂ), ಆಶ್ಚರ್ಯ.
ಅದುಪತ್ತಿ ಅದನ್ನು ಹಿಡಿದು, ಆ ಕಾರಣ ದಿಂದ.
ಅದುಮು ಅವುಕು, ಅಮುಕು.
ಅದುರು ಅಶುದ್ಧ ಖನಿಜ.
ಅದ್ದರಿಸು ನಡುಗಿಸು; ಹೆದರಿಸು.
ಅದ್ದಿಸು ಅದ್ದಯಿಸು, ಮುಳುಗಿಸು.
ಅದ್ದುಗೆ ಅದ್ದಿಕೆ, ಮುಳುಗಿಸುವಿಕೆ.
ಅದ್ರಿ ಪರ್ವತ.
ಅದ್ವಯ ಎರಡಿಲ್ಲದ, ಪ್ರತಿಯಿಲ್ಲದ.
ಅದ್ವಿತೀಯ ಎರಡಿಲ್ಲದ.
ಅದ್ವೈತ ಎರಡಿಲ್ಲದುದು, ಒಂದೇ. ಎಲ್ಲವೂ ದೇವರೇ ಎಂಬ ತತ್ವಜ್ಞಾನದ ರೀತಿ.
ಅಧಟು ಕಡುಪು, ದರ್ಪ, ಸಾಹಸ, ಪರಾ ಕ್ರಮ.
ಅಧಮ ನೀಚ, ಕೀಳಾದವ.
ಅಧರ ಕೆಳತುಟಿ.
ಅಧರತೆ ಕೀಳ್ತನ.
ಅಧಿಕ ಹೆಚ್ಚು.
ಅಧಿಕರಿಸು ಯಜಮಾನಿಸು, ಅಧಿಕಾರ ತೋರು.
ಅಧಿಕಾರ ಹುದ್ದೆ, ಪದವಿ; ಹಕ್ಕು.
ಅಧಿಗತ ಪಾಠಮಾಡಿದ, ಕಲಿತ.
ಅಧಿಗಮನ ಹೊಂದುವಿಕೆ, ಸೇರುವಿಕೆ, ಅಭ್ಯಾಸ, ಕಲಿಯುವಿಕೆ.
ಅಧಿದೇವಿ ಅಧಿದೇವತೆ, ಅಧಿಕಾರಿಣಿಯಾದ ದೇವತೆ.
ಅಧಿನಾಯಕ ಆಳುವವ, ಯಜಮಾನ.
ಅಧಿರಥ ಈತನು ಕರ್ಣನ ಸಾಕುತಂದೆ. ಆತನು ಒಬ್ಬ ಸಾರಥಿಯೆನ್ನುತ್ತಾರೆ. ಅರ ಸನೂ ಇರಬಹುದು.
ಅಧಿಪ ನಾಯಕ, ಅರಸ.
ಅಧಿವಾಸನ ಪರಿಮಳ ದ್ರವ್ಯವನ್ನು ಹಚ್ಚಿ ಪರಿಮಳಿಸುವಂತೆ ಮಾಡುವುದು.
ಅಧಿಷ್ಠಾನ ತಳಹದಿ, ಪಾಯ, ಆಧಾರ.
ಅಧೋಕ್ಷಜ (ಅಧಃ=ಕೆಳಗೆ ಹಾಕಲ್ಪಟ್ಟ+ ಅಕ್ಷಜ=ಇಂದ್ರಿಯಗಳಿಂದ ಹುಟ್ಟುವ ಜ್ಞಾನವುಳ್ಳವ) ಇಂದ್ರಿಯಗಳಿಂದ ತಿಳಿ ಯಲು ಅಸಾಧ್ಯವಾದ ಅತೀಂದ್ರಿಯ ಜ್ಞಾನವುಳ್ಳವ; ವಿಷ್ಣು, ಕೃಷ್ಣ.
ಅಧಃ ಕೆಳಗೆ.
ಅಧಃಕೃತ ಕೆಳಗೆಹಾಕಲ್ಪಟ್ಟ, ತಿರಸ್ಕರಿಸಲ್ಪಟ್ಟ.
ಅಧಃಪತನ ಕೆಳಗೆ ಬೀಳುವಿಕೆ.
ಅಧಃಸ್ಥಳ ಕೆಳಗಿನ ಸ್ಥಾನ.
ಅಧ್ಯಾತ್ಮ ಆತ್ಮಸಂಬಂಧವಾದ.
ಅಧ್ಯಾಪಕ ಓದಿಸುವವ, ಗುರು, ವ್ಯಾಖ್ಯಾನ ವನ್ನು ಹೇಳುವವ.
ಅಧ್ಯಾರೋಪಣ ಆರೋಪಿಸುವುದು, ಹೊರಿ ಸುವುದು.
ಅಧ್ರುವ (ಧ್ರುವ=ಸ್ಥಿರ, ಶಾಶ್ವತ) ಸ್ಥಿರವಲ್ಲ ದುದು, ಶಾಶ್ವತವಲ್ಲದುದು.
ಅಧ್ವ ದಾರಿ, ಮಾರ್ಗ.
—ಗ ಪ್ರಯಾಣಿಕ, ದಾರಿಯಲ್ಲಿ ಹೋಗು ವವ, ಹಾದಿಹೋಕ.
ಅಧ್ವರ ಯಜ್ಞ (ಅಧ್ವ=ವೈದಿಕಮಾರ್ಗ ವನ್ನು+ರ=ಕೊಡುವುದು) ವೇದಮಾರ್ಗ ದಂತೆ ಮಾಡುವುದು, ವೇದವನ್ನನುಸರಿಸಿ ಕೊಡುವುದು.
ಅಧ್ವರ್ಯು ಯಜ್ಞದಲ್ಲಿ ಯಜುರ್ವೇದ ಸಂ ಬಂಧವಾದ ಕ್ರಿಯೆಯನ್ನು ಮಾಡುವ ಪುರೋಹಿತ; ಹೋಲಿಸುವವ.
ಅಧ್ವಾನ ಕಾಲುದಾರಿ.
ಅನಕ ಅಷ್ಟರಲ್ಲಿ, ಅಲ್ಲಿಯ ತನಕ.
ಅನಕ್ಷರ (ಕ್ಷರ=ನಾಶ) ನಾಶವಿಲ್ಲದ (ಅನ್

= ಪ್ರಶಸ್ತವಲ್ಲದ + ಅಕ್ಷರ = ಅಕ್ಷರಗಳುಳ್ಳುದು) ಗುಣವನ್ನು ಮರೆಮಾಡಿ ದೋಷವನ್ನು ಪ್ರಕಾಶಪಡಿಸುವ ಮಾತು, ನಿಂದೆಯ ಮಾತು, ಬೈಗಳು.

**ಅನಘ** (ಅನ್=ಇಲ್ಲ+ಅಘ=ಪಾಪ, ವ್ಯಸನ) ಪಾಪವಿಲ್ಲದವ, ದುಃಖವಿಲ್ಲದವ.

**ಅನಡ್ಡ** ಅನಡ್ವಾಹ, ಅನಡುಹ್ (ಅನ=ಬಂಡಿಯನ್ನು + ಡುಹ್ = ವಹಿಸುವುದು, ಎಳೆಯುವುದು) ಎತ್ತು.

**ಅನತ** ಬಗ್ಗದ, ಶರಣಾಗತವಾಗದ.

**ಅನಧ್ಯಾಯ** ಓದಿಲ್ಲದ ದಿನ, ರಜಾದಿನ; ಅನಧ್ಯಾಯ ದಿನಗಳು.

**ಅನಯ** ನೀತಿರಹಿತ, ನೀತಿಗೆಟ್ಟ.

**ಅನಲ** (ಅಲ = ತೃಪ್ತಿ) ಬಹಳವಾಗಿ ಸುಟ್ಟರೂ ತೃಪ್ತಿ ಇಲ್ಲದುದು, ಅಗ್ನಿ.

**ಅನಸೂಯೆ** ಈಕೆ ಅತ್ರಿ ಋಷಿಯ ಹೆಂಡತಿ. ಅವಳು ದತ್ತಾತ್ರೇಯನ ತಾಯಿ ಎಂದೂ, ದುರ್ವಾಸ ಋಷಿಯ ತಾಯಿ ಎಂದೂ ಹೇಳಿಕೆ ಇದೆ.

**ಅನಂತ** (ಅನ್ + ಅಂತ = ಅಂತ್ಯವಿಲ್ಲದ) ಶೇಷ; ಆಕಾಶ; ಕೊನೆಯಿಲ್ಲದ; ಗಣನಾತೀತ; ವಿಷ್ಣು; ಶಿವ; ಜೈನರ ಒಬ್ಬ ತೀರ್ಥಂಕರ, ಅನಂತನಾಥ.

**ಅನಾಕಾರ** ಆಕಾರವಿಲ್ಲದ.

**ಅನಾಕುಳ** ಅನಾಯಾಸವಾಗಿ, ಏಕಾಗ್ರ, ಸ್ಥಿರ, ಚಿಂತೆ ವ್ಯಥೆ ಇಲ್ಲದೆ.

**ಅನಾಗತ** ಬಾರದ, ಮುಂದಾಗುವ.

**ಅನಾಚಾರ** ಕೆಟ್ಟ ಆಚಾರ.

**ಅನಾಥ** ರಕ್ಷಕರಿಲ್ಲದ, ಒಡೆಯರಿಲ್ಲದ, ದಿಕ್ಕಿಲ್ಲದ.

— **ಪ್ರೇತ** ರಕ್ಷಕರಿಲ್ಲ,ದನಿರ್ಗತಿಕ; ಕೊಲೆ; ದಿಕ್ಕುಗೆಟ್ಟವ.

**ಅನಾದರ** ತಿರಸ್ಕಾರ, ಮನ್ನಣೆಯಿಲ್ಲದ.

**ಅನಾದಿ** ಮೊದಲು ಇಲ್ಲದ.

**ಅನಾಮಕ** ಹೆಸರಿಲ್ಲದ.

**ಅನಾಮಯ** (ಆಮಯ = ರೋಗ) ರೋಗವಿಲ್ಲದ, ಆರೋಗ್ಯ.

**ಅನಾಮಿಕೆ** ಉಂಗುರ ಹಾಕುವ ಬೆರಳು, ಚಂಡಾಲ.

**ಅನಾಯಕ** ಯಜಮಾನನಿಲ್ಲದ, ನಾಯಕನಿಲ್ಲದ.

**ಅನಾಯತ** ಪ್ರತಿಬಂಧವಿಲ್ಲದ.

**ಅನಾಯಾಸ** ಆಯಾಸವಿಲ್ಲದ, ಸುಲಭವಾದ.

**ಅನಾರತ** (ಆರತ = ವಿಶ್ರಾಂತಿ) ವಿಶ್ರಾಂತಿಯಿಲ್ಲದ, ಅನವರತ, ಯಾವಾಗಲೂ.

**ಅನಾರ್ಯ** ಹೀನ, ಶ್ರೇಷ್ಠನಲ್ಲದ; ಆರ್ಯನಲ್ಲದವ.

**ಅನಾವರಣ** ತೆರೆ ಬಿಡಿಸುವಿಕೆ.

**ಅನಾಹತ** ಮುಂದಾಗುವ.

**ಅನಿತು** (ಅನಿತ್ತು) ಅಷ್ಟು.

**ಅನಿತ್ಯ** ಶಾಶ್ವತವಲ್ಲದ.

**ಅನಿಬರು** ಅಷ್ಟು ಜನರು, ಯಾವತ್ತು ಜನರು.

**ಅನಿಮಿಷ** (ಅನಿಮಿಷ=ರೆಪ್ಪೆಯ ಹೊಡೆತ) ರೆಪ್ಪೆಯ ಹೊಡೆತವಿಲ್ಲದವ, ದೇವತೆ; ಮೀನು; ವಿಷ್ಣು; ರೆಪ್ಪೆ ಹೊಡೆಯುವಷ್ಟು ಸಮಯ.

— **ಆಶ್ರಯಂ** (ಅನಿಮಿಷ = ದೇವತೆಗಳಿಗೆ, ಮೀನುಗಳಿಗೆ+ ಆಶ್ರಯಂ = ಆಶ್ರಯವಾದ ಸ್ವರ್ಗ, ಸಮುದ್ರ), ಸ್ವರ್ಗ, ಸಮುದ್ರ.

**ಅನಿರುದ್ಧ** (ನಿರುದ್ಧ = ತಡೆ) ಯಾರಿಂದಲೂ ಯುದ್ಧದಲ್ಲಿ ತಡೆಯಲಾರದವ, ಸ್ವತಂತ್ರ; ಕಾಮದೇವನ ಮಗ. ಇವನನ್ನು ಬಾಣಾಸುರನ ಮಗಳಾದ ಉಷೆ ಮೋಹಿಸಿ ತನ್ನಲ್ಲಿಗೆ ಬರಮಾಡಿಕೊಂಡಳು. ಇದು ಬಾಣನಿಗೆ ತಿಳಿಯಿತು. ಮುಂದೆ ಬಾಣನಿಗೂ ಕೃಷ್ಣ ಬಲರಾಮರಿಗೂ ಕದನವಾಗಿ ಬಾಣನು

ಸೋತನು. ಅನಿರುದ್ಧನು ಉಷೆಯನ್ನು ವರಿಸಿದನು.

ಅನಿಲ ವಾಯು.

—ಜ (ವಾಯುವಿನ ಮಗ) ಹನುಮಂತ, ಭೀಮಸೇನ.

ಅನಿವ ಬಲಾತ್ಕಾರ.

ಅನಿವಾರ್ಯ ಬೇಕೇಬೇಕಾದ.

ಅನೀಕ ಸೈನ್ಯ, ಸಮೂಹ.

ಅನು ಜತೆ, ಸಹ, ಸಿದ್ಧತೆ; ಸಂಗಡ.

—ಕುಂದು ಅನುಕೂಲ ಕೆಡು.

—ಕೂಡು ಜತೆಸೇರು, ಸಿದ್ಧವಾಗಿ ಕಾರ್ಯವನ್ನು ಕೈಕೊಳ್ಳು.

—ಕೆಡು ರೀತಿ ಕೆಡು.

—ಕೆಯ್ ಅನುಗೈ, ಸರಿಪಡಿಸು, ಸಿದ್ಧವಾಗು.

—ಕೊಳ್ ಯೋಗ್ಯವಾಗು, ಯೋಗ್ಯನಾಗು, ಸಿದ್ಧವಾಗು, ತಯಾರಾಗು.

—ಚರ ಉಪಮ, ಅಸಾಮಾನ್ಯ, ಹೋಲುವೆ ಇಲ್ಲದ.

—ಚಾರಿಕೆ ಸೇವಕಿ, ಸಹಚರಿ.

—ಜ ತಮ್ಮ.

—ಜಾತ ಅನುಜ.

—ಜೆ ತಂಗಿ.

ಅನುಕರಿಸು ಅಂಗೀಕರಿಸು, ಹೇಳಿಕೊಟ್ಟಂತೆ ಮಾಡು, ಅನುಕರಣೆ ಮಾಡು.

ಅನುಕಂಪ ಕರುಣೆ.

ಅನುಗ್ರಹ ಪ್ರೀತಿ, ದಯೆ.

ಅನುಚಿತ ಉಚಿತವಲ್ಲದ.

ಅನುಜ್ಞೆ ಸಮ್ಮತಿ, ಅಪ್ಪಣೆ.

ಅನುತಾಪ (ಅನು=ಕೆಲಸ ಕೆಟ್ಟ ಮೇಲೆ ಅದಕ್ಕಾಗಿ ಪಡುವ ತಾಪ=ವ್ಯಸನ) ಕೆಲಸ ಕೆಟ್ಟ ಮೇಲೆ ಅದಕ್ಕಾಗಿ ಪಡುವ ದುಃಖ, ಪಶ್ಚಾತ್ತಾಪ.

ಅನುನಯ ವಿನಯ; ಪ್ರಾರ್ಥನೆ; ಸ್ನೇಹ; ಸಮಾಧಾನ.

ಅನುನಾಸಿಕ ಮೂಗಿಗೆ ಸಂಬಂಧಿಸಿದ ವರ್ಗಗಳ ಕೊನೆಯ ಅಕ್ಷರ.

ಅನುಪದ (ಪದದ ತರುವಾಯ) ಕಾಲ ಮೇಲೆ; ವ್ಯವಧಾನವಿಲ್ಲದೆ, ಕೂಡಲೆ.

ಅನುಪಲ್ಲವಿ ಪಲ್ಲವಿಗೆ ಹೊಂದಿದುದು (ಸಂಗೀತದಲ್ಲಿ).

ಅನುಪ್ರಾಸ ಪದ್ಯದಲ್ಲಿ ಒಂದು ಅಕ್ಷರ ಮರುಕಳಿಸುವಿಕೆ.

ಅನುಬಂಧ ಸೇರುವೆ, ಸಂಬಂಧ.

ಅನುಭಾವ ಮನಸ್ಸಿನ ಅಭಿಪ್ರಾಯವನ್ನು ಪ್ರಕಟಮಾಡುವುದು; ಅಲಂಕಾರ ಶಾಸ್ತ್ರದಲ್ಲಿ ಪ್ರಸಿದ್ಧವಾದ ರಸವನ್ನು ಪ್ರಕಟಗೊಳಿಸುವುದು.

ಅನುಭಾವಿ ಅನುಭವವುಳ್ಳವ; ಜ್ಞಾನಿ; ಅಭಿಪ್ರಾಯವನ್ನು ಪ್ರಕಟಪಡಿಸುವವ.

ಅನುಮತಿ ಅಪ್ಪಣೆ, ಸಮ್ಮತಿ; ಕಲಾಹೀನನಾದ ಚಂದ್ರನುಳ್ಳ; ಪೂರ್ಣಿಮೆ ಚತುರ್ದಶಿಯಿಂದ ಕೂಡಿದ ಹುಣ್ಣಿಮೆ; ಅನುಮತ.

ಅನುರಾಗ ಬಹುಪ್ರೀತಿ.

ಅನುರಾಧ ಅನುರಾಧೆ (ರಾಧ=ವಿಶಾಖಾ ನಕ್ಷತ್ರದ+ಅನು=ತರುವಾಯದ ನಕ್ಷತ್ರ), 27 ನಕ್ಷತ್ರಗಳಲ್ಲಿ ವಿಶಾಖಾ ನಕ್ಷತ್ರದ ತರುವಾಯದ ನಕ್ಷತ್ರ.

ಅನುರೋಧ ಅನುಸರಿಸುವುದು, ಸ್ವಾಮಿಯ ಇಚ್ಛೆಯನ್ನು ಪೂರ್ಣಮಾಡುವ ಬಯಕೆ, ಬಲಾತ್ಕಾರ.

ಅನುಲೋಮ (ಲೋಮ=ರೋಮದ ಕ್ರಮವನ್ನು + ಅನು = ಅನುಸರಿಸಿರುವುದು) ಕ್ರಮದಂತೆ, ಕ್ರಮಾಗತ; ಪ್ರತಿಲೋಮಕ್ಕೆ ವಿರುದ್ಧವಾದ ವಿವಾಹದ ಬಗೆ.

ಅನುವರ ಯುದ್ಧ.

ಅನುವರ್ತಿ ಅನುಯಾಯಿ.
ಅನುವಶ ಹೇಳಿದ ಹಾಗೆ ಕೇಳಿಕೊಂಡಿರುವುದು, ಒಳಗಾಗಿರುವುದು.
ಅನುವಿಸು ವಿನಯದಿಂದ ಬೇಡು, ಸಿದ್ಧಪಡಿಸು.
ಅನುಷಂಗ ಹತ್ತಿರದ ಸಂಬಂಧ.
ಅನುಸಾರ ಅನುಸರಣ, ಅನುಸಾರಿ.
ಅನುಸ್ವಾರ ಜತೆಯ ಸ್ವರ.
ಅನೂನ (ನೂನ = ಸ್ವಲ್ಪ) ಸಂಪೂರ್ಣ, ಕೊರತೆಯಿಲ್ಲದ; ತುಂಬ ಶಕ್ತಿಯುಳ್ಳ.
ಅನೃತ (ಋತ = ಸತ್ಯ) ಸತ್ಯವಲ್ಲದುದು, ಸುಳ್ಳು.
ಅನೇಕ ಬಹಳ, ಒಂದಲ್ಲದ.
ಅನೇಕಪ (ಪ= ಕುಡಿಯುವುದು) ಒಂದೇ ಸಲ ಕುಡಿಯದಿರುವುದು, ಸೊಂಡಲಿಂದಲೂ ಬಾಯಿಂದಲೂ ಹೀಗೆ ಎರಡು ಸಾರಿ ಕುಡಿಯುವುದು, ಆನೆ.
ಅನೋಕಹ (ಅನ= ಗಾಡಿಯ + ಅಕ= ಗತಿಯನ್ನು + ಹ= ತಡೆಯುವುದು, ಕೆಡಿಸುವುದು) ಗಾಡಿಯ ಚಲನೆಯನ್ನು ತಡೆಯುವುದು; ಮರ.
ಅನ್ನಗತ ಅನ್ನಕ್ಕೆ ಸಂಬಂಧಿಸಿದ.
ಅನ್ನಪ್ಪ ಹಾಗಿರುವ.
ಅನ್ನರ್ ಅಂಥವರು; (ಮನದನ್ನರ್ = ಪ್ರಿಯರು).
ಅನ್ನರ ಅನ್ನೆವರಂ, ಆ ವರೆಗೆ.
ಅನ್ನವಾಸ ಊಟದ ಮನೆ.
ಅನ್ನಳ್ ಅಂಥವಳು; (ಮನದನ್ನಳ್= ಪ್ರಿಯಳು).
ಅನ್ನಾರ್ಥಿ ಅನ್ನಕ್ಕೆ ಬಂದವ.
ಅನ್ನೆಗಂ ಆಗ, ಆ ಹೊತ್ತಿಗೆ.
ಅನ್ನೆಯ (ದ್ಭ) ಅನ್ಯಾಯ (ಸಂ).
ಅನ್ನೆವರಂ ಅಲ್ಲಿಯ ವರೆಗೆ.
ಅನ್ಯ ಬೇರೆ.
— ಉಕ್ತಿ (ಅನ್ಯೋಕ್ತಿ) ಬೇರೆ ಮಾತು.
— ಚಕ್ರ ಪರಸೈನ್ಯ, ಶತ್ರುಸೇನೆ.
— ಥಾ ಬೇರೆ ರೀತಿಯಾಗಿ.
ಅನ್ಯಪುಷ್ಟ (ಅನ್ಯ= ಬೇರೆಯದಾದ ಕಾಗೆಯಿಂದ+ ಪುಷ್ಟ= ಪೋಷಿಸಲ್ಪಟ್ಟುದು) ಕಾಗೆಯಿಂದ ಪೋಷಿಸಲ್ಪಟ್ಟುದು, ಕೋಗಿಲೆ.
ಅನ್ಯೋನ್ಯ ಪರಸ್ಪರ ಸ್ನೇಹ.
ಅನ್ವಯ ವಂಶ, ಸೇರಿಕೆ, ಹೊಂದಿಕೆ.
— ಇಸು ಸಂಬಂಧಿಸು, ಹೊಂದು.
ಅನ್ವರ್ಥ ಸ್ಪಷ್ಟ, ಅರ್ಥಕ್ಕೆ ಅನುಸಾರವಾದ.
ಅಪ್ ನೀರು.
ಅಪ ವಿರುದ್ಧವಾದ, ಇದಿರಾದ.
— ಕರ್ಷ ಇಳಿಮೆ.
— ಕಾರ ಉಪಕಾರಕ್ಕೆ ಎದುರಾದ ಕೃತ್ಯ, ದ್ರೋಹ.
— ಕೃತಿ ಅಪಕಾರ, ಕೃತಘ್ನತೆ.
ಅಪಕ್ರಿಯೆ ಉತ್ತರಕ್ರಿಯೆ.
ಅಪಕ್ವ ಹಣ್ಣಾಗದ.
ಅಪಗತ ಕಳೆದುಹೋದ.
ಅಪಘನ ದೇಹ, ಶರೀರ.
ಅಪಚಯ ಕಡಿಮೆಯಾಗು; ಗುಂಪು; ಹೂ ಸಂಗ್ರಹಿಸುವಿಕೆ.
ಅಪಚಾರ ಕೊರತೆ, ಸಮವಲ್ಲದ ನಡತೆ; ಅಪರಾಧ.
ಅಪಜಯ ಸೋಲು.
ಅಪತ್ಯ ಮಗು, ಹುಡುಗ.
ಅಪದಸ್ಥ ಕಾಲಿನಿಂದ ನಡೆಯದಿರುವ, ಕಾಲೂರದೆ ತಲೆಕೆಳಗಾಗಿ ತಪಸ್ಸುಮಾಡುವ.
ಅಪದೆಸೆ ದುರ್ದಶೆ, ಹೀನಸ್ಥಿತಿ.
ಅಪನಂಬಿಕೆ ನಂಬಿಕೆ ಇಲ್ಲದಿರುವಿಕೆ, ಅವಿಶ್ವಾಸ.

ಅಪನಾಂತ ಕಳೆದುಹೋದ; ಚದರಿಸಲ್ಪಟ್ಟ.
ಅಪನೋದ ಪರಿಹಾರ, ಹೋಗಲಾಡಿಸುವ.
ಅಪಮಾನ ಮಾನಹಾನಿ.
ಅಪಮೃತ್ಯು ದುರ್ಮರಣ.
ಅಪರಭಾಗ ಹಿಂಭಾಗ.
ಅಪರವಾರ್ಧಿ ಪಶ್ಚಿಮಸಮುದ್ರ.
ಅಪಲಾಪ ಇಲ್ಲದ ಮಾತು, ಕೆಟ್ಟ ಮಾತು.
—ಇಸು ಸತ್ಯವನ್ನು ಮರೆಮಾಡು, ಕೊಟ್ಟುದನ್ನು ಇಲ್ಲವೆಂದು ಹೇಳು, ತಿರಸ್ಕರಿಸು.
ಅಪವರ್ಗ ಬಿಡೋಣ; ದಾನ; ಮೋಕ್ಷ.
—ಮಾರ್ಗ ಮೋಕ್ಷದ ದಾರಿ.
ಅಪವರ್ತಿಸು ಹಿಂದಿರುಗಿಸು; ಕಳೆ; ವಿಭಾಗಿಸು.
ಅಪಸವ್ಯ (ಅಪ = ಹೋಗಲ್ಪಟ್ಟ + ಸವ್ಯ = ಎಡಭಾಗವುಳ್ಳುದು) ಎಡಭಾಗವಲ್ಲದುದು, ಬಲಭಾಗ.
ಅಪಸ್ನಾನ ಉತ್ತರಕ್ರಿಯೆಯ ಬಳಿಕ ಮಾಡುವ ಸ್ನಾನ.
ಅಪಸ್ಮಾರ ಆಗಾಗ ಮೂರ್ಛೆ ಬರುವ ರೋಗ.
ಅಪಹಾಸ್ಯ ಅಪಹಾಸ, ಚೇಷ್ಟೆ, ಅಣಕ.
ಅಪಾಕೃತ ಅಸಾಮಾನ್ಯ; ತೆಗೆಯಲ್ಪಟ್ಟ.
ಅಪಾತ್ರ ಯೋಗ್ಯವಲ್ಲದ.
ಅಪಾಯ ಹಾನಿ.
ಅಪಾರ ಬಹಳ; ದಡ ಇಲ್ಲವೆ ಮೇರೆ ಇಲ್ಲದ, ದಾಟಲಾಗದ.
—ದರ್ಶಕ ತನ್ನ ಮೂಲಕ ಬೆಳಕನ್ನು ಹರಿಯಗೊಡದ.
ಅಪಾಂಗ ಕಡೆಗಣ್ಣು.
ಅಪೂರ್ವ ವಿಶೇಷ, ಸಾಮಾನ್ಯವಲ್ಲದ, ಆಶ್ಚರ್ಯಕರ.
—ಭಿತ್ತಿ ಅಸದೃಶವಾದ ಗೋಡೆ, ಎಣೆಯಿಲ್ಲದ ಗೋಡೆ.
ಅಪೇಕ್ಷೆ ಇಚ್ಛೆ.
ಅಪೇತ ಕಳೆದುಹೋದ, ಇಲ್ಲದ.
ಅಪ್ಪಯಿಸು ಅಪ್ಪಿಕೊಳ್ಳು.
ಅಪ್ಪು ಆಲಿಂಗಿಸು, ತಬ್ಬು.
ಅಪ್ಪುಕಯ್ ಅಪ್ಪುಕೆಯ್, ಅಂಗೀಕರಿಸು, ಹೊಂದು.
ಅಪ್ರಗಲ್ಭ ಪ್ರತಿಭೆಯಿಲ್ಲದ, ಅಜ್ಞ, ತಿಳಿವಳಿಕೆ ಇಲ್ಲದ.
ಅಪ್ರತಿ (ಅಪ್ರತಿಮ) ಎಣೆಯಿಲ್ಲದ, ಬಹಳ ಹೆಚ್ಚಿನ.
ಅಪ್ರತ್ಯಕ್ಷ ಕಾಣಿಸದ, ದೃಷ್ಟಿಗೆ ಸಿಗದ.
ಅಪ್ರಬುದ್ಧ ತಿಳಿವಿಲ್ಲದ.
ಅಪ್ರಮೇಯ ಅಳೆಯಲು ಆಗದ.
ಅಪ್ರಯೋಜಕ ನಿರರ್ಥಕ.
ಅಪ್ರಸ್ತುತ ಸಮಂಜಸವಲ್ಲದ, ಹೊರಗಿನ.
ಅಪ್ರಾಕೃತ ಸಾಮಾನ್ಯವಲ್ಲದ ಪ್ರಸಂಗಕ್ಕೆ ಸಂಬಂಧಿಸದ.
ಅಪ್ಸರ ದೇವತಾ ಸ್ತ್ರೀ, ಅಪ್ಸರೆ.
ಅಬದ್ಧ ಕಟ್ಟಿಲ್ಲದ, ಸ್ವತಂತ್ರ, ಸುಳ್ಳು.
ಅಬಲೆ ಬಲವಿಲ್ಲದವಳು, ಹೆಂಗುಸು.
ಅಬಳ್ಳ ಕಾಲು ಕೊಳಗ, ಒಂದು ಅಳತೆ.
ಅಬಾಡು ಹೊರೆ, ಅಳತೆ ಮೀರಿದ; ವ್ಯರ್ಥ.
ಅಬುಜ (ದ್ಭ) ಅಬ್ಜ (ಸಂ), ನೀರಲ್ಲಿ ಹುಟ್ಟಿದುದು) ತಾವರೆ, ಚಂದ್ರ.
—ಅಕ್ಷಿ ಕಮಲದಂತೆ ಕಣ್ಣುಳ್ಳವಳು.
—ಜ (ಅಬುಜ = ವಿಷ್ಣುವಿನ ನಾಭೀ ಕಮಲದಲ್ಲಿ + ಜ = ಹುಟ್ಟಿದವ) ಬ್ರಹ್ಮ.
ಅಬ್ಜ ಅಬುಜ (ದ್ಭ).
—ಆಕರ (ಅಬ್ಜ = ಕಮಲಗಳ + ಆಕರ = ಗನಿ) ತಾವರೆಗಳ ಗನಿಯಂತಿರುವುದು, ಸರೋವರ.
ಅಬ್ದ (ಅಪ್ = ನೀರನ್ನು + ದ = ಕೊಡುವುದು) ಮೇಘ, ಮೋಡ; ವರುಷ, ಸಂವತ್ಸರ.

ಅಬ್ಧಿ (ಅಪ್=ನೀರಿಗೆ+ಧಿ=ಆಶ್ರಯವಾದುದು) ಸಮುದ್ರ.
ಅಬ್ಬರ ದೊಡ್ಡ ಗದ್ದಲ.
ಅಬ್ಬಾ ಅಪ್ಪಾ, ಅಮ್ಮಾ; ವಿಸ್ಮಯಸೂಚಕ ಶಬ್ದ.
ಅಬ್ಬಿ ಅರ್ಬಿ, ಜಲಪಾತ, ತಡಸಲು.
ಅಬ್ಬೆ ಅವ್ವ, ತಾಯಿ.
ಅಬ್ಬೆಸ (ದ್ಭ) ಅಭ್ಯಾಸ (ಸಂ).
ಅಬ್ರಹ್ಮಣ್ಯ ಬ್ರಾಹ್ಮಣರಿಗೆ ವಿಪತ್ತೊದಗಿತೆಂದು ಕೂಗಿಕೊಳ್ಳುವುದು.
ಅಭಯ ಭೀತಿಯಿಲ್ಲದಿರುವಿಕೆ, ಧೈರ್ಯಕೊಡುವಿಕೆ.
ಅಭವ ಹುಟ್ಟಿಲ್ಲದವ, ಶಿವ.
ಅಭಂಗ ಪರಾಜಯವಿಲ್ಲದ; ಮಹಾರಾಷ್ಟ್ರ ದಾಸ ಗೀತೆಗಳಲ್ಲಿನ ಒಂದು ಜಾತಿ.
—ವಿಕ್ರಮಂ ನ್ಯೂನತೆಯಿಲ್ಲದ ಪರಾಕ್ರಮವುಳ್ಳವ, ಅಪಜಯವಿಲ್ಲದ ಪರಾಕ್ರಮಿ.
ಅಭಾವ ಕೊರತೆ.
ಅಭಿ ಸಮೀಪ; ಎದುರು; ಓಸ್ಕರ.
ಅಭಿಗಮನ ಸಮೀಪಿಸುವುದು, ಇದಿರಿಗೆ ಹೋಗುವುದು, ಇದಿರುಗೊಳ್ಳುವುದು.
ಅಭಿಘಾತ ಹೊಡೆತ.
ಅಭಿಘಾತಿ ಶತ್ರು, ಹೊಡೆಯುವವ.
ಅಭಿಚಾರ ಅಥರ್ವ ವೇದ ಮತ್ತು ತಂತ್ರ ಶಾಸ್ತ್ರದಲ್ಲಿ ಪ್ರಸಿದ್ಧವಾದ ಮಾರಣ, ಉಚ್ಚಾಟನ, ಸ್ತಂಭನ ಮೊದಲಾದ ಕರ್ಮಗಳು.
ಅಭಿಜನ ಕುಲಜ; ಕೀರ್ತಿ.
ಅಭಿಜಾತ (ಅಭಿ=ಪ್ರಶಸ್ತವಾದ, ಶ್ರೇಷ್ಠವಾದ+ಜಾತ=ಜನ್ಮವುಳ್ಳವ) ಪ್ರಶಸ್ತವಾದ ಜನ್ಮವುಳ್ಳವ, ಕುಲೀನ; ಪಂಡಿತ; ಶ್ರೇಷ್ಠ; ಸತ್ಕುಲಪ್ರಸೂತ; ನೀತಿಯುಳ್ಳವ.
ಅಭಿಜ್ಞ ಬಲ್ಲವ, ಪಂಡಿತ, ಚತುರ.
ಅಭಿಜ್ಞಾನ ತಿಳಿವಳಿಕೆ, ಜ್ಞಾನಸಾಧನವಾದ ಗುರುತು.
ಅಭಿಧಾನ ಹೆಸರು; ಶಬ್ದಗಳಿಗೆ ಅರ್ಥವನ್ನು ಹೇಳುವ ನಿಘಂಟು.
ಅಭಿನಯ ಮನಸ್ಸಿನ ಭಾವವನ್ನು ಪ್ರಕಟಿಸತಕ್ಕ ಕೆಲಸ, ನಟನೆ.
—ಇಸು ಅನುಕರಣೆಮಾಡು, ನಟಿಸಿ ತೋರು.
ಅಭಿನವ ಹೊಸತು, ಹೊಸ.
ಅಭಿಮತ ಅಭಿಪ್ರಾಯ.
ಅಭಿಮನ್ಯು ಅರ್ಜುನನ ಮಗ. ಅರ್ಜುನನಿಗೆ ಸುಭದ್ರೆಯಲ್ಲಿ ಹುಟ್ಟಿದನು. ಅವನ ಹೆಂಡತಿ ಉತ್ತರೆ. ಈತನು ಮಹಾಭಾರತ ಯುದ್ಧದ 13ನೆಯ ದಿನ ಮಡಿದನು.
ಅಭಿಮಾನ ಆತ್ಮಗೌರವ.
ಅಭಿಮಾನಿ ಅಗ್ನಿ; ಅಭಿಮಾನವುಳ್ಳವ.
ಅಭಿಮುಖ ಎದುರು.
ಅಭಿಯೋಗ ನಿಂದೆ, ದೂರು; ಮೇಲೆ ಬೀಳುವುದು, ಶತ್ರುವಿನ ಮೇಲೆ ದಂಡೆತ್ತಿ ಹೋಗುವುದು.
ಅಭಿರಂಜಕ ವಿಶೇಷವಾದ ಕಾಂತಿ ಅಥವಾ ಚೆಲುವು.
ಅಭಿರಂಜನೆ ಅಭಿರಂಜಕ; ಚೆಲುವಿಕೆ.
ಅಭಿರಾಮ ಸುಂದರ, ಪ್ರಿಯ, ಮನೋಹರ.
ಅಭಿರುಚಿ ಇಷ್ಟ, ಆಸೆ, ಆಸಕ್ತಿ.
ಅಭಿವರ್ಣಿಸು ವಿವರಿಸು, ಅತಿಶಯವಾಗಿ ಬಣ್ಣಿಸು.
ಅಭಿವಂದಿಸು ನಮಸ್ಕರಿಸು.
ಅಭಿವಾದ ಅಪ್ರಿಯವಾದ ಮಾತು; ನಮಸ್ಕಾರ.
ಅಭಿವಾದನ ಹೆಸರು ಹೇಳಿ ನಮಸ್ಕಾರ ಮಾಡುವುದು.
ಅಭಿಷವ ಯಜ್ಞಸ್ನಾನ, ಅಭಿಷೇಕ.

ಅಭಿಷಂಗ ತಿರಸ್ಕಾರ, ನಿಂದೆ.
ಅಭಿಷಿಕ್ತ ಅಭಿಷೇಕ ಮಾಡಲ್ಪಟ್ಟ, ಮಿಂದ.
ಅಭಿಸಾರ ಪ್ರಣಯಿಯನ್ನು ಕೂಡುವುದಕ್ಕೆ ಹೋಗುವಿಕೆ.
ಅಭಿಸಾರಿಕೆ ಪ್ರಣಯಿಯನ್ನು ಸೇರುವುದಕ್ಕೆ ಶೃಂಗಾರ ಪ್ರೇರಿತಳಾಗಿ ಅಲೆವವಳು, ಹಾದರಗಿತ್ತಿ.
ಅಭೀ ಭೀತಿರಹಿತವಾದ.
ಅಭ್ಯರ್ಹಿತ ಮಾನ್ಯ, ಗೌರವಾರ್ಹ.
ಅಭ್ಯಂತರ ಒಳಗೆ; ಹೆಚ್ಚು ಕಡಿಮೆ, ವ್ಯತ್ಯಾಸ; ಅಡ್ಡಿ.
ಅಭ್ಯಾಗತ ತಾನಾಗಿ ಬಂದ ಅತಿಥಿ.
—ತೆ ಅತಿಥಿಪೂಜೆ.
ಅಭ್ಯಾಗತಪ್ರತಿಪತ್ತಿ ಮನೆಗೆ ಬಂದವರಿಗೆ ವಿಶ್ವಾಸಪೂರ್ವಕವಾಗಿ ಮಾಡುವ ಮನ್ನಣೆ.
ಅಭ್ಯುದಯ ಅಭಿವೃದ್ಧಿ, ಸುಖ.
ಅಭ್ರ (ಅಪ್ = ನೀರನ್ನು + ರ = ಕೊಡುವುದು) ಮೇಘ, ಮೋಡ.
ಅಭ್ರಮಂಡಲ ಮಂಡಲಾಕಾರವಾದ ಆಕಾಶ.
ಅಭ್ರಮೂರಮಣಂ (ಅಭ್ರಮೂಲ ಎಂಬ ಹೆಣ್ಣಾನೆಯ ಗಂಡ) ಐರಾವತವೆಂಬ ದಿಗ್ಗಜ.
ಅಭ್ರಂಕಷ (ಅಭ್ರಂ = ಮೋಡವನ್ನು + ಕಷ = ತಿಕ್ಕುವುದು) ಮುಗಿಲು ಮುಟ್ಟುವುದು.
ಅಮತ್ರ ಅರ್ಘ್ಯಪಾತ್ರ.
ಅಮಮ ಆಶ್ಚರ್ಯಸೂಚಕ ಪದ, ಅಯ್ಯಯ್ಯೋ.
ಅಮರ್ (ಅಮರು) ಸೇರು; ಹಚ್ಚು; ರಾಶಿಯಾಗಿ ಬೀಳು; ಹಾಳಿತಾಗು; ಗಾತ್ರ ವಿಶೇಷ; ಶರೀರ ಬೇರೆಯಾಗುವುದು.
—ಇಸು ಸಿದ್ಧಮಾಡು; ಹೊಂದು; ಪ್ರಸರಿಸು; ಅಡರು; ಹೊಡೆಯು.
ಅಮರ ಮರಣವಿಲ್ಲದವ, ದೇವತೆ.
—ಇಂದ್ರ ದೇವತೆಗಳ ಒಡೆಯ.
—ರತ್ವ ಸಾವಿಲ್ಲದಿರುವಿಕೆ.
ಅಮರಕೋಶ ಅಮರಸಿಂಹನೆಂಬವನು ಬರೆದ ಹೆಸರಾದ ಸಂಸ್ಕೃತ ಶಬ್ದಕೋಶ. ಇವನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದವನು.
ಅಮರಿ ದೇವತಾಸ್ತ್ರೀ.
ಅಮರ್ಚು ಒತ್ತಾಗಿ ಸೇರಿಸು.
ಅಮರ್ತ್ಯ ಮರಣವಿಲ್ಲದವ, ದೇವತೆ.
—ಮಾರ್ಗ ದೇವತೆಗಳು ತಿರುಗುವ ದಾರಿ, ಆಕಾಶಮಾರ್ಗ.
ಅಮರ್ದಪ್ಪು ಬಿಗಿಯಾಗಿ ಆಲಿಂಗಿಸು, ಬಿಗಿಯಾಗಿ ಅಪ್ಪಿಕೊಳ್ಳು.
ಅಮರ್ದು (ದ್ಭ) ಅಮೃತ (ಸಂ), ಕುಡಿದವರನ್ನು ಮರಣವಿಲ್ಲದಂತೆ ಮಾಡುವ ಒಂದು ಪಾನ; ಹೊಂದಿಕೆಯಾಗು.
—ಉಣಿಗಳ್ (ಅಮೃತವನ್ನು ಉಣ್ಣುವವರು)
—ಗದಿರ (ಅಮೃತಕಿರಣವುಳ್ಳವ) ಚಂದ್ರ, ದೇವತೆಗಳು, ತುಂಬಿಗಳು.
—ಪೆಣ್ ಮೋಕ್ಷಾಂಗನೆ.
ಅಮರ್ಷ ಸಿಟ್ಟು.
—ಣ ಸಿಟ್ಟುಳ್ಳವ.
ಅಮಲ ಸ್ವಚ್ಛವಾದ.
ಅಮಲು ಮಾದಕವಸ್ತು; ಮತ್ತತೆ; ಝೊಂಪು.
ಅಮಳ್ (ಅಮಳ) ಯಮಳ (ಸಂ), ಎರಡು.
—ಅರ್ ಯಮಳರ್ ಜತೆಯಾಗಿ ಹುಟ್ಟಿದವರು, ಅವಳಿಗಳು.
ಅಮಳ್ದಲೆವಕ್ಕಿ ಎರಡು ತಲೆ ಹಕ್ಕಿ, ಗಂಡಭೇರುಂಡ ಎಂಬ ಹಕ್ಕಿ.
ಅಮಳ್ವಕ್ಕಿ ಜತೆಯಾಗಿರುವ ಹಕ್ಕಿ, ಚಕ್ರವಾಕ.

ಅಮಂಗಲ ಶುಭವಲ್ಲದ.
ಅಮಾಸೆ(ದ್ಭ) ಅಮಾವಾಸ್ಯೆ (ಸಂ).
ಅಮಿತ ಅಪಾರ, ಮಿತಿಯಿಲ್ಲದ, ಬಹಳ.
ಅಮಿತಗತಿ ಮಿತವಿಲ್ಲದ ಗಮನವುಳ್ಳವರು; ಒಬ್ಬ ಪ್ರಾಚೀನ ಜೈನ ಕತೆಗಾರ.
ಅಮಿಕ್ಷೆ ಕರಗಿಸಿದ ಬೆಣ್ಣೆ.
ಅಮೂರ್ತ ದೇಹ ಮಾತ್ರು ಇಲ್ಲದ, ಆಕಾರ ಇಲ್ಲದ.
ಅಮೂಲ್ಯ ವಿಶೇಷ ಬೆಲೆಯುಳ್ಳ.
ಅಮೃತ ದೇವತೆ; ನೀರು; ದಿಕ್ಕು; ಸುರಾಹಾರ. ಸುರ ಅಸುರರು ಸೇರಿ ಸಾಗರವನ್ನು ಮಥಿಸಿದಾಗ ದೊರೆತ ಅಮೂಲ್ಯ ವಸ್ತು. ಅದನ್ನು ಕುಡಿದೇ ಸುರರು ಸಾವಿಲ್ಲದವ ರಾದರು.
—ಅಂಗನೆ ಮೋಕ್ಷವೆಂಬ ಸ್ತ್ರೀ.
ಅಮೃತಾಂಶು ಚಂದ್ರ.
ಅಮೇಧ್ಯ ಮಲ.
ಅಮೇಯ ಅಳೆಯಲಾಗದ, ಅಳತೆಗೆ ಮೀರಿದ.
ಅಮೋಘ ತಪ್ಪದ; ಯಶಸ್ವಿ, ಸಫಲವಾದ.
✓ ಅಮ್ಮ ತಂದೆ, ತಾಯಿ.
ಅಮ್ಮು ಧೈರ್ಯಪಡು, ಅಣ್ಮು, ಪರಾಕ್ರಮ ದೋರು; ಸಮರ್ಥನಾಗು.
ಅಯ ಶುಭಕರವಾದ ವಿಧಿ, ಪೂರ್ವಜನ್ಮದ ಶುಭಕರ್ಮ, ಸೌಭಾಗ್ಯ.
ಅಯನ ಹೋಗುವಿಗೆ, ಬರುವಿಕೆ; ಸೂರ್ಯನು ಒಂದು ದಿಕ್ಕಿಂದ ಇನ್ನೊಂದಕ್ಕೆ ಸೇರುವ ಕಾಲ; ಆರು ತಿಂಗಳು.
ಅಯಸ್ ಕಬ್ಬಿಣ, ಉಕ್ಕು.
ಅಯಸ್ಕಾಂತ (ಅಯಸ್ = ಲೋಹಗಳ ನಡುವೆ ಕಬ್ಬಿಣದಲ್ಲಿ + ಕಾಂತ = ಮನೋಹರವಾದುದು) ಸೂಜಿಕಲ್ಲು ಎಂದು ಹೆಸರುಳ್ಳ ಕಬ್ಬಿಣವನ್ನು ಎಳೆಯುವ ಒಂದು ಧಾತುವಿಶೇಷ, ಈ ಗುಣವುಳ್ಳ ಕಬ್ಬಿಣ.
ಅಯಾಚಿತ ಬೇಡಲ್ಪಡದ.
ಅಯುಕ್ತ ಸಮವಲ್ಲದ; ತಕ್ಕುದಲ್ಲದ.
ಅಯುತ ಹತ್ತು ಸಾವಿರ.
ಅಯೋಗವಾಹ ಸ್ವರಾಕ್ಷರದ ಸಂಬಂಧ ವಿಲ್ಲದೆ ಉಚ್ಚಾರಣೆಗೆ ಬಾರದ ಅನುಸ್ವಾರ (ಂ).
ಅಯೋಧ್ಯೆ ಇಕ್ಷ್ವಾಕು ಕುಲದ ಅರಸರ ರಾಜಧಾನಿ. ರಾಮನು ಅಯೋಧ್ಯೆಯವನು.
ಅಯೋನಿಜೆ (ಯೋನಿ = ಯೋನಿಯಲ್ಲಿ, ಸ್ತ್ರೀಯ ಜನನೇಂದ್ರಿಯದಲ್ಲಿ, ತಾಯಿಯಲ್ಲಿ + ಅಜೆ = ಹುಟ್ಟದವಳು) ಸ್ತ್ರೀ ಯೋನಿಯಲ್ಲಿ ಹುಟ್ಟದವಳು, ತಾಯಿಯ ಯೋನಿಯಲ್ಲಿ ಹುಟ್ಟದವಳು; ಶ್ರೀರಾಮನ ಪತ್ನಿಯಾದ ಸೀತೆ.
ಅಯೋಮಯ ಕಬ್ಬಿಣ ಅಥವಾ ಉಕ್ಕಿಂದಾದುದು.
ಅಯ್ದು (ಐದು) ಹೊಂದು, ಪಡೆ, ಹೊರಡು, ಹೋಗು.
ಅಯ್ದೆ ಸುವಾಸಿನಿ; ಸುಮಂಗಲಿ, ಗಂಡನುಳ್ಳವಳು.
—ತನ ಮುತ್ತೈದೆತನ, ಸುಮಂಗಲಿತ್ವ, ಗಂಡನುಳ್ಳ ಸ್ಥಿತಿ.
—ಮಿನುಗು ತಾಳಿಬೊಟ್ಟು.
ಅಯ್ಯ ಆರ್ಯ (ಸಂ), ತಂದೆ.
ಅಯ್ವರ್ ಐದು ಜನರು.
ಅಯ್ಸಲೆ ಅಷ್ಟೇ ಅಲ್ಲವೆ.
ಅಯ್ಸು ಅನಿತು, ಅಷ್ಟು.
ಅರ್ ಒಣಗು.
ಅರ ಅರೆ, ಅರಕೆ; ಸವೆದು ತೆಗೆಯಲು ಒಂದು ಸಾಧನ; ಅರ್ಧ.

ಅರಕೆ ಅರ್ಧ; ಚೂರು; ಕಡಮೆಯಾದುದು, ಕೊರತೆ, ನ್ಯೂನತೆ.
ಅರಕುಡಿ ರಾಜವಂಶ.
ಅರಗಿಣಿ ಅರಗಿಳಿ, ರಾಜಶುಕ.
ಅರಗೀಲ್ ಅರೆ ಕಾಲು, ಗಾಡಿಯ ಚಕ್ರದ ಹಲ್ಲು.
ಅರಗು ಲಾಕ್ಷೆ, ಒಂದು ವಿಧವಾದ ಕೀಟವು ತನ್ನ ಗೂಡಾಗಿ ಕೆಲವು ಜಾತಿ ಮರಗಳ ಮೇಲೆ ಕಟ್ಟಿಕೊಳ್ಳುವುದು.
ಅರಗುಲಿ (ಅರ=ಧರ್ಮವನ್ನು+ಕುಲಿ=ನಾಶಮಾಡುವವ) ಧರ್ಮಘಾತುಕ, ಪಾಪಿ.
ಅರಚು ಕೂಗಿಕೊಳ್ಳು.
ಅರಣಿ ಯಜ್ಞದಲ್ಲಿ ಅಗ್ನಿಯನ್ನು ಹುಟ್ಟಿಸತಕ್ಕ ಕೊರಡು, ಬೆಂಕಿಕೊರಡು.
ಅರಣೆ ಎರಣೆ, ಓತಿ.
ಅರಣ್ಯ ಕಾಡು.
—ಕ ಅರಣ್ಯದಲ್ಲಿ ಬರೆಯಲ್ಪಟ್ಟ ಕೆಲವು ಶಾಸ್ತ್ರ ಗ್ರಂಥಗಳಿಗೆ ಈ ಹೆಸರಿದೆ.
ಅರಣ್ಯಾನಿ ದೊಡ್ಡ ಅರಣ್ಯ, ದೊಡ್ಡ ಕಾಡು.
ಅರತ ಆರಿದ; ಅರೆಯುವಿಕೆ.
ಅರತಿ ದುಃಖ, ಅತೃಪ್ತಿ.
ಅರನಾರಿ ಒಕ್ಕಡೆ ವಾತ; ಒಂದು ಕಡೆಯ.
ಅರಮಗಳ್ ರಾಜಪುತ್ರಿ.
ಅರಮಣೆ ಸಿಂಹಾಸನ.
ಅರಮನೆ ಅರಸುಮನೆ.
ಅರಮೆ ಸ್ವಲ್ಪಮಟ್ಟಿಗೆ, ಸಣ್ಣದು, ತುಸು; ಅರ್ಧ.
ಅರಮೆಯ್ ಅರ್ಧಶರೀರ.
ಅರರೆ ಎಲವೆಲವೊ, ಆಶ್ಚರ್ಯಸೂಚಕ ಪದ.
ಅರಲ್ ಹೂವು.
—ಪಂದರ್ (ಅರಲ್ಪಂದರ್) ಹೂವಿನ ಮಂಟಪ, ಹೂವಿನ ಚಪ್ಪರ.
—ಪಾಸು (ಅರಲ್ವಾಸು) ಹೂವಿನಹಾಸಿಗೆ.
ಅರಲ್ವಡಿಗ ಹೂವಾಡಿಗ, ಹೂವನ್ನು ಮಾರುವವ.
ಅರವಟ್ಟಿಗೆ ಆರ್ದ್ರಪಟ್ಟಿಕಾ(ಸಂ), ಬೇಸಗೆಯಲ್ಲಿ ದಾರಿಗರಿಗೆ ನೀರು ಕೊಡುವ ಸ್ಥಾನ, ಆಸರು ಕಳೆಯುವ ಮನೆ.
ಅರವರಿಸು ಅರ್ಧಮಾಡು.
ಅರವಳಿಯರ್ ಧರ್ಮಮಾರ್ಗಿಗಳು.
ಅರವಿಂದ (ಅರ=ಗಾಡಿಯ ಹಲ್ಲಿನಂತೆ ದಳಗಳನ್ನು+ವಿಂದ=ಹೊಂದಿರುವುದು) ಗಾಡಿಯ ಹಲ್ಲುಗಳಂತೆ ದಳಗಳನ್ನು ಹೊಂದಿರುವುದು ತಾವರೆ; ಸಾರಸಪಕ್ಷಿ; ಕೆಂದಾವರೆ.
ಅರವೆ ಅಜೀರ್ಣ.
ಅರವೆಂಡಿರ್ ರಾಜಸ್ತ್ರೀಯರು.
ಅರಸ ರಾಜ; ರಸವಿಲ್ಲದ.
—ಅಂಚೆ (ಅರಸಂಚೆ) ರಾಜಹಂಸ, ಕೊಕ್ಕೂ ಪಾದವೂ ಕೆಂಪಾಗಿದ್ದು ಉಳಿದ ಮೈಯೆಲ್ಲಾ ಬೆಳ್ಳಗಿರುವ ಹಂಸ ಜಾತಿ.
—ಆಳ್ ರಾಯಭಾರಿ.
ಅರಸಿ ರಾಣಿ; ಹುಡುಕಿ.
ಅರಸಿಕ ರಸಿಕನಲ್ಲದವ, ಬೆಳ್ಳಕ್ಕರಿಗ, ಮೂಢ, ಪಂಡಿತನಲ್ಲದವ.
ಅರಸು ಹುಡುಕು; ರಾಜ.
ಅರಸುಮಿಗ (ಅರಸಾದ ಮೃಗವು) ಸಿಂಹ.
ಅರಳ್ (ಅರಳು) ಹೂವು; ಬಾಯಿ ತೆರೆಯು, ವಿಕಸಿಸು; ಭತ್ತವನ್ನು ಹುರಿದು ಮಾಡಿದ ಅರಳು.
—ಮಳೆ ಹೂಮಳೆ.
ಅರಳೆ ಹತ್ತಿ, ಹರಳೆ.
ಅರ ಯಮಧರ್ಮ.
ಅರಾತಿ (ಸುಖವನ್ನು ಅರಾತಿ=ಕೊಡದವ) ಸುಖವನ್ನು ಕೊಡದವ, ಶತ್ರು, ಹಗೆ.
ಅರಾಲ ಎಡೆಬಿಡದ, ಒತ್ತೊತ್ತಾದ, ಡೊಂಕಾದ; ಅರಾಲಪಕ್ಷ್ಮ, ಒತ್ತೊತ್ತಾಗಿರು.

ಅರಿ ಶತ್ರು; ತುಂಡುಮಾಡು, ಕತ್ತರಿಸು, ತಿಳಿ.
—ಗುಂ ಕತ್ತರಿಸುವದು, ತಿಳಿಯುವುದು.
ಅರಿಕೆ ತಿಳಿವಳಿಕೆ; ವಿಜ್ಞಾಪನೆ; ಪ್ರಸಿದ್ಧ.
—ಕಾರ ತಿಳಿವಳಿಕೆಯುಳ್ಳವ, ತಿಳಿವಳಿಕೆ ಕೊಡುವವ.
ಅರಿಚು ಅರಚು, ಚೀರಾಡು.
ಅರಿಟಣ ಅಂಟುವಾಸಳ, ನೊರೆಕಾಯಿ.
ಅರಿತ ಜ್ಞಾನ, ತಿಳಿವಳಿಕೆ, ತಿಳಿದ.
ಅರಿದು ಅಸಾಧ್ಯ.
ಅರಿಯುಮಿಕೆ ಅರಿಯಮೆ, ಅಜ್ಞಾನ.
ಅರಿಲ್ ನಕ್ಷತ್ರ.
—ಬಟ್ಟೆ (ಅರಿಲ್ವಟ್ಟೆ) ನಕ್ಷತ್ರಗಳ ದಾರಿ, ಆಕಾಶ.
ಅರಿವು ತಿಳಿವಳಿಕೆ, ಜ್ಞಾನ.
ಅರಿವೊಯ್ಲು ಶತ್ರುವಿನ ಪೆಟ್ಟು, ತಿಳುವಳಿಕೆಗೆ ಬರುವ ಪೆಟ್ಟು; ಅರೆಪೆಟ್ಟು.
ಅರಿಷಡ್ವರ್ಗ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಆರು ಹಗೆಗಳು.
ಅರಿಷ್ಟ (ರಿಷ್ಟ = ಶುಭ,) ಅಶುಭ, ಕಣ್ಣೀರು, ಕೃಷ್ಣನು ಕೊಂದ ಒಬ್ಬ ರಾಕ್ಷಸ.
—ಅಂಶ ಆಶ್ಲೇಷಾ ನಕ್ಷತ್ರದ ಕೊನೆಯ ಗಳಿಗೆ, ಮಖಾ ನಕ್ಷತ್ರದ ಮೊದಲನೆಯ ಗಳಿಗೆ, ಜ್ಯೇಷ್ಠಾ ನಕ್ಷತ್ರದ ಕೊನೆಯ ಗಳಿಗೆ, ಮೂಲಾ ನಕ್ಷತ್ರದ ಮೊದಲನೆಯ ಗಳಿಗೆ, ರೇವತೀ ನಕ್ಷತ್ರದ ಕೊನೆಯ ಗಳಿಗೆ, ಅಶ್ವಿನೀ ನಕ್ಷತ್ರದ ಮೊದಲನೆಯ ಗಳಿಗೆ—ಇವು ಅರಿಷ್ಟಾಂಶಗಳೆಂದು ತಿಳಿಯಲ್ಪಡುತ್ತವೆ. ಈ ಅರಿಷ್ಟಾಂಶದಲ್ಲಿ ಹುಟ್ಟುವುದು ಕೆಟ್ಟುದು. ಮೂಲನಕ್ಷತ್ರದ ಅರಿಷ್ಟಾಂಶದಲ್ಲಿ ಹುಟ್ಟಿದ ಶಿಶುವನ್ನು ಅದರ ತಂದೆ ಎಂಟು ವರ್ಷಗಳ ವರೆಗೆ ಕಾಣಬಾರದೆಂದು ಶಾಸ್ತ್ರವಿದೆ. ಈ ಆರಿಷ್ಟಾಂಶದಲ್ಲಿ ಹುಟ್ಟಿದ ಶಿಶುವಿಗೆ ಅಥವಾ ಅದರ ತಾಯಿಗೆ ಇಲ್ಲವೆ ತಂದೆಗೆ ಹಾನಿಯಾಗುವುದೆಂಬ ನಂಬಿಕೆಯಿದೆ.
ಅರಿಸಮಾಸ ಸಂಸ್ಕೃತ ಕನ್ನಡ ಪದಗಳ ಜೋಡಣೆ.
ಅರಿಸಲ್ಕರಿವಾತಂ ತಿಳಿಸಲು ಸಮರ್ಥನಾದವ.
ಅರಿಸಿಣ (ಅರಿಸಿನ) ಹಳದಿ ಬಣ್ಣ, ಅರಿಸಿನದ ಬೇರು.
ಅರಿಸು ಹರಿಸು, ಮುಂದರಿಸು.
ಅರಿಂಜಯ ಶತ್ರುಗಳನ್ನು ಜಯಿಸುವವ, ವೀರ; ರೆಪ್ಪೆಯ ಕೂದಲು.
ಅರಿಂದಮ ಶತ್ರು ಘಾತುಕ.
ಅರು ಆರು, ಅರುಗು, ಬತ್ತು.
ಅರುಗ ಅರ್ಹತ್: (ಸಂ) ಜಿನ, ಬುದ್ಧ.
ಅರುಚಿ ರುಚಿಯಿಲ್ಲದಿರುವಿಕೆ.
ಅರುಜಾಂಗ (ಅರುಜ=ಬೇನೆಯಿಲ್ಲದ+ಅಂಗ = ದೇಹ) ಬೇನೆಯಿಲ್ಲದ ದೇಹ.
ಅರುಣ ಕೆಂಪು; ಕಿರಣ; ದೂಳು; ದಾರ.
—ಉದಯ ಸೂರ್ಯನ ಉದಯ.
ಅರುಣಸಾರಥಿ ಸೂರ್ಯ.
ಅರುತ ಆರಿದ, ಬತ್ತಿದ.
—ನೀರ್ ಆರಿದ ನೀರು.
ಅರುವಗೆ ಆರು ವಿಧವಾದ ಹಗೆಗಳು, ಷಡ್ವೈರಿಗಳು.
ಅರುವಿಲ್ಮೆ ಅಜ್ಞಾನ.
ಅರುಹ ಅರ್ಹತ್(ಸಂ), ಜಿನ, ಬುದ್ಧ.
ಅರುಹು ಅರಿವು, ತಿಳುಹು, ಪ್ರಜ್ಞೆ.
ಅರುಳ್ ಪ್ರಸಾದ, ಕೃಪೆ, ಅನುಗ್ರಹ.
ಅರುಂಧತಿ ವಸಿಷ್ಠ ಋಷಿಯ ಪತ್ನಿ.
ಅರೆ ಅರ್ಧ; ನಾಶವಾಗು; ತಿಲೆ, ಬಂಡೆ.
ಅರೆಗಡಿ ಅರ್ಧ ತುಂಡುಮಾಡು.

ಅರೆಗೆಲಸಿ ಕೆಲಸವನ್ನು ಪೂರ್ಣವಾಗಿ ಮಾಡದವ.
ಅರೆಚಣ ಅರ್ಧಕ್ಷಣ.
ಅರೆದಿಟ್ಟೆ ಅರ್ಧ ತೆರೆದ ಕಣ್ಣು.
ಅರೆನೆಲೆ ಹಿಂಭಾಗ.
ಅರೆಬರ್ ಕೆಲವರು.
ಅರೆಮೆಯ್ ಅರ್ಧಾಂಗ.
ಅರೆಮೆಯ್ವೆಣ್ಣ ಅರ್ಧ ಮೈ ಹೆಣ್ಣಾಗಿರುವವ, ಅರ್ಧನಾರೀಶ್ವರ, ಶಿವ.
ಅರೆಯಟ್ಟು ಹೊಡೆದೋಡಿಸು, ಬೆನ್ನಟ್ಟು.
ಅರೆವರಿಸು ಸಂಪೂರ್ಣ ಮಾಡದಿರು, ಕೈಬಿಡು; ತಿರಸ್ಕರಿಸು.
ಅರೆವೆರೆ (ಪೆರೆ=ಚಂದ್ರ) ಅರ್ಧಚಂದ್ರ.
ಅರೆಸೀಕರಿಯೂದವು ಅರ್ಧ ಸುಟ್ಟವು, ಸುಟ್ಟು ಬೂದಿಯಾದುವು.
ಅರ್ಕ ಎಕ್ಕೆಗಿಡ; ಸೂರ್ಯ, ಕಿರಣ; ಸಾರಾಯಿ.
—ವಾರ ಆದಿತ್ಯವಾರ.
ಅರ್ಕೆ (ಅಳ್ಕೆ) ರೋದನ, ಅಳು.
ಅರ್ಗಲ ಅಗಳಿ, ತಡೆ.
ಅರ್ಗಲಿಕ ಅಗಲಿಕೆ, ವಿಯೋಗ.
ಅರ್ಗಳ (ಅಗ್ಗಳ) ಹೆಚ್ಚಳ; ಜೈನ ಕವಿಯೊಬ್ಬನ ಹೆಸರು.
ಅರ್ಘ ಅಗ್ಗ; ಬೆಲೆ; ಕಾಣಿಕೆ.
ಅರ್ಘ್ಯ ಅಮೂಲ್ಯ; ದೇವತೆಗಳನ್ನು ಸತ್ಕರಿಸಲು ಒಪ್ಪಿಸುವ ಜಲ.
ಅರ್ಚಕ ಪೂಜಾರಿ.
ಅರ್ಚನೆ ಪೂಜೆ.
ಅರ್ಜನೆ ಸಂಪಾದನೆ.
ಅರ್ಜಿ ಪ್ರಾರ್ಥನೆ, ಮನವಿ.
ಅರ್ಜುನ ಬಿಳಿಯ; ಪಾಂಡವರಲ್ಲಿ ನಡುವಿನವನು; ಮತ್ತಿಮರ, ಮಾಹಿಷ್ಮತಿ ರಾಜನಾದ ಕೃತವರ್ಮನ ಮಗ.
ಅರ್ಣ ನೀರು.
—ವ ಸಾಗರ (ಚಲಿಸುತ್ತಿರುವುದು).
ಅರ್ತಿ ಬಿಲ್ಲಿನ ತುದಿ; ಪ್ರೀತಿ, ಅಭಿಲಾಷೆ.
ಅರ್ತಿಕಾರ ವಿಟ.
ಅರ್ತಿಗ ವಿಪತ್ತಿಗೆ ಗುರಿಯಾದವ.
ಅರ್ಥ ಆಸೆ; ಉಪಯೋಗ; ಹಣ, ಸಂಪತ್ತು; ಶಬ್ದಾರ್ಥ; ಉದ್ಯೋಗ.
—ನಾಥ ಕುಬೇರ.
—ವಂತ ಸಿರಿವಂತ.
—ಶಾಸ್ತ್ರ ಹಣದ ವಿಚಾರ ಶಾಸ್ತ್ರ.
ಅರ್ಥಾತ್ ಈ ಪ್ರಸಂಗದಲ್ಲಿ, ಅಂದರೆ.
ಅರ್ಥಾಂತರ ಇನ್ನೊಂದು ಪ್ರಸಂಗ.
ಅರ್ಥಿ ಬೇಡುವವ, ಯಾಚಕ.
ಅರ್ದನ ಚಂಚಲಿಸುವ, ಕಲ್ಲೋಲವೆಬ್ಬಿಸುವ.
ಅರ್ದನೆ ಕೊಲುವಿಕೆ, ನೋಯಿಸುವಿಕೆ.
ಅರ್ಧ ಅರೆ.
ಅರ್ಧಗೋಲ ಭೂಮಿಯ ಒಂದು ಅರ್ಧ.
ಅರ್ಧಚಂದ್ರ ಅಷ್ಟಮಿಯ ಚಂದ್ರನಂತಿರುವಿಕೆ.
ಅರ್ಧನಾರೀಶ್ವರ ಶಿವ, ಅರ್ಧ ಹೆಣ್ಣಾಗಿರುವವನು.
ಅರ್ಧಾಂಗವಾಯು ಒಂದು ಬೇನೆಯ ಹೆಸರು.
ಅರ್ಧಾಂಗಿ ಗಂಡುಸಿನ ಅರ್ಧವೆನಿಸಿಕೊಳ್ಳುವವಳು, ಸತಿ.
ಅರ್ಧೇಂದು ಅರ್ಧಚಂದ್ರ, ಅರೆವೆರೆ.
ಅರ್ಪಣ ಸಮರ್ಪಣ, ಒಪ್ಪಿಸುವಿಕೆ.
ಅರ್ಪು (ಅಪ್ಪು) ತಬ್ಬು.
ಅರ್ಬಿ ಬೆಟ್ಟದ ಪ್ರವಾಹ.
ಅರ್ಬಿಸು ಘರ್ಜಿಸು, ಅಬ್ಬರಿಸು, ಗಟ್ಟಿಯಾಗಿ ಕೂಗು.
ಅರ್ಬು ಅಬ್ಬರ.

**ಅರ್ಬುದ** ಹಾವು; ದೊಡ್ಡ ಸಂಖ್ಯೆ, 20 ಕೋಟಿ.
**ಅರ್ಭಕ** ಮಗು, ಶಿಶು; ಎಳೆಯ.
**ಅರ್ಯಾಣಿ** ವೈಶ್ಯ ಸ್ತ್ರೀ.
**ಅರ್ವತ್** ಕೀಳು, ಹೀನ.
**ಅರ್ವತಿ** ಹೆಣ್ಣು ಕುದುರೆ.
**ಅರ್ವಾಚ್** ಮೊದಲಿನ; ಕಡೆ, ಈ ಕಡೆಯ.
**ಅರ್ವಾಚೀನ** ಈಗಿನ.
**ಅರ್ಹ** ಯೋಗ್ಯ, ತಕ್ಕವ; ಇಂದ್ರ.
**ಅರ್ಹತ್** ಆದರಕ್ಕೆ ಯೋಗ್ಯನಾದವ; ಜಿನ ಸಾಧು.
**ಅರ್ಹಂತ** ಬುದ್ಧ, ಜಿನ.
**ಅಲಕನಂದ** ಗಂಗಾನದಿಯ ಒಂದು ಉಪ ಶಾಖೆ.
**ಅಲಕ್ತಕ** ಅರಗು, ಅರಗಿನ ರಸ, ಅಲತಿಗೆ.
**ಅಲಗಣಿಸು** ತಿರಸ್ಕಾರ, ಅಲ್ಲಗಳೆಯುವಿಕೆ.
**ಅಲಗು** ಕತ್ತಿ, ಹರಿತವಾದ ಬಾಯುಳ್ಳ ಸಾಧನ.
**—ಕಣೆ** ಅಲಗಿನ ಹಾಗಿರುವ ಬಾಣ, ಹರಿತವಾದ ಬಾಣ.
**ಅಲಗೆ** ಹಲಗೆ, ಹಳಗ, ತಂಬಟೆ ಎಂಬ ಚರ್ಮ ವಾದ್ಯ.
**ಅಲಘು** ಹಗುರವಲ್ಲದುದು, ಭಾರವಾದುದು.
**ಅಲಪು** ತೊಂದರೆ.
**ಅಲರಂಬರಾಯ** ಹೂಬಾಣವುಳ್ಳವ, ಕಾಮ ಮನ್ಮಥ.
**ಅಲರಿಜ** (ಅಲರ್ = ಹೂವಿನಲ್ಲಿ + ಇಜ = ಹುಟ್ಟಿದವ) ಬ್ರಹ್ಮ.
**ಅಲರ್** (ಅಲರು) ಕುಸುಮ, ಹೂವು.
**— ಇಚು** (ಅಲರಿಚು) ವಿಕಸಿಸು, ಅರಳು.
**— ಇಕೆ** ಅರಳುವಿಕೆ, ವಿಕಾಸ.
**— ಕಣ್** ಹೂವಿನಂತಿರುವ ಕಣ್ಣು.
**— ಕಣೆ** ಪುಷ್ಪಬಾಣ.
**— ಕೊಯ್** ಹೂವನ್ನು ಕೊಯ್ಯು.
**— ಕೋಲು** ಪುಷ್ಪಬಾಣ, ಹೂಬಾಣ.
**— ತಾವರೆ** ಅರಳಿದ ತಾವರೆ.
**— ಪಕ್ಕಿ** (ಅಲರ್ವಕ್ಕಿ) ಹೂವುಗಳ ಮೇಲೆ ಹಾರುವ ಹಕ್ಕಿ, ಹೂ ಗುಬ್ಬಿ, ತುಂಬಿ.
**— ಪಸೆ** (ಅಲರ್ವಸೆ) ಹೂವಿನ ಹಸೆ.
**— ಪಿಡಿ** ಹೂವುಗಳನ್ನು ಹಿಡಿ, ಪುಷ್ಪ ಗಳನ್ನು ಧರಿಸು.
**— ಪೊಡೆಯ** (ಅಲರ್ + ಪೊಡೆಯ) ಹೊಟ್ಟೆಯಲ್ಲಿ ಹೂವನ್ನು ಧರಿಸಿದವ, ಪದ್ಮ ನಾಭ.
**— ಹುಡಿ** ಹೂವಿನ ಹುಡಿ, ಪುಷ್ಪಪರಾಗ.
**ಅಲರ್ಚು** ಅಲರಿಸು; ಅರಳು, ವಿಕಸನ.
**ಅಲವರಲು** ಆಸೆಪಡು.
**ಅಲವರಿಕೆ** ಪೆಟ್ಟು, ಹಿಡಿತ.
**ಅಲಸ** (ದ್ಭ) ಆಲಸ್ಯ (ಸಂ), ಸೋಮಾರಿತನ.
**ಅಲಸು** ದಣಿ, ಶ್ರಮಗೊಳ್ಳು, ಆಯಾಸಪಡು.
**— ಗೆ** ಆಲಸ್ಯ, ಬೇಸರಪಡುವಿಕೆ.
**ಅಲಬು** (ಅಲುಬು) ಅಲುಂಬು, ತೊಳೆ.
**ಅಲಂಕಾರ** ಶೃಂಗರಿಸುವಿಕೆ, ವಾಕ್ಯದ ಚೆಲು ವಿಕೆ.
**ಅಲಂಪು** ಸಂತೋಷ; ಅಲಂಕಾರ, ಸೊಗಸು; ಆಧಿಕ್ಯ; ವಿಭವ.
**ಅಲಂಬು** (ಅಲುಬು) ನೀರಲ್ಲಿ ತೊಳೆ.
**ಅಲಿ** ಅಲ್ಲಿ.
**ಅಲುಕು** ಅಲುಗಾಡು, ನಡುಗು.
**ಅಲುಗು** ನಡುಗು, ಅಲುಗು.
**ಅಲುಪ** (ದ್ಭ) ಅಲ್ಪ (ಸಂ).
**ಅಲೆ** ಅಲ್ಲಾಡು; ರಗಳೆ; ಪೀಡಿಸು; ತೆರೆ, ತರಂಗ.
**ಅಲೆದವ** ಧಿಕ್ಕರಿಸಿದವನು.
**ಅಲೆಪ** ಬೀಸುವಿಕೆ, ಅಲೆದಾಟ.
**ಅಲೌಕಿಕ** ಈ ಪ್ರಪಂಚದ್ದಲ್ಲದ.
**ಅಲ್ತು** ಅಲ್ಲ.

ಅಲ್ಪ ಕ್ಷುದ್ರ, ಕಡಮೆ, ಹೀನ.
—ಪ್ರಾಣ ಲಘುವಾಗಿ ಉಚ್ಚರಿಸಲ್ಪಡುವ ವ್ಯಂಜನ.
—ಮತಿ ಮಂಕ, ತಿಳಿಗೇಡಿ.
—ವೃಷ್ಟಿ ಕಡಮೆ ಮಳೆ.
ಅಲ್ಲಣಿ ಮೇಳ.
ಅಲ್ಲಮ ಅಲ್ಲಮನೆಂಬ ಶಿವಶರಣ.
ಅಲ್ಲಳಿ ವಿನೋದ; ಸೀಳು.
ಅಲ್ಲಿಯೋರ್ ಪರಲೋಕದವರು.
ಅಲ್ಲಾಟ ಚಲನೆ, ಅಲ್ಲಾಡುವಿಕೆ.
ಅಲ್ಲೋಲ ಚಂಚಲವಾಗು; ಉಲ್ಲೋಲ ಕಲ್ಲೋಲ.
ಅವಕರ್ಣಿಸು ಕೇಳು.
ಅವಕಾಶ ಎಡೆ, ಬಿಡುವು; ನೋಟ.
ಅವಕುಂಠಿತ ಮುಸುಕು ಹಾಕಿದ, ಹಿಡಿಯಲ್ಪಡತಕ್ಕ.
ಅವಕೃಪೆ ಕೃಪೆ ಇಲ್ಲದಿರುವಿಕೆ.
ಅವಗಡ ತೊಂದರೆ.
—ಇಸು ತಿರಸ್ಕರಿಸು; ಪ್ರತಿಭಟಿಸು; ತಾಗು; ಅವಸರಪಡು; ಹುರಿದುಂಬು; ತ್ವರೆಮಾಡು; ವಶಮಾಡು.
ಅವಗಡೆ ಅವಸರದ ಕೃತ್ಯ.
ಅವಗಾಹ ಇಳಿಯುವುದು, ಇಳಿಯು; ಮುಳುಗುವುದು.
—ಇಸು ಸೇರು, ಹೊಗು.
ಅವಗುಣ ದುರ್ಗುಣ.
ಅವಗ್ರಹ ಬರಗಾಲ; ತೊಡಕು.
ಅವಘಟಿತಂ ಸಮ್ಮೇಳನ, ಸೇರುವಿಕೆ.
ಅವಚರು ಹೇಸು, ಅಸಹ್ಯಪಡು.
ಅವಚು (ಅವುಚು) ಅವುಕು, ಅಪ್ಪು, ಒತ್ತು.
ಅವಜ್ಞೆ ಅಪಮಾನ, ತಿರಸ್ಕಾರ.
ಅವತರಿಸು ಇಳಿ, ಅವತರಣಿಕೆ.
ಅವತಂಸ ತಲೆಯಲ್ಲಿ ಧರಿಸಿದುದು, ಶಿರೋಭೂಷಣ, ಕಿವಿಯ ಆಭರಣ, ಹೂಸರ.
ಅವತಾರ ಇಳಿಯುವಿಕೆ, ಅವತರಣ. ಬಹುವಾಗಿ ಪುರಾಣಗಳಲ್ಲಿ ದೇವರು ಆದರಲ್ಲೂ ವಿಷ್ಣು ಶಿವರು ಆಗಾಗ ಭೂಮಿಯಲ್ಲಿ ದುಷ್ಟದಮನಕ್ಕಾಗಿ ಇಳಿದುಬರುವಿಕೆಗೆ ಅವತಾರ ಎನ್ನುವರು. ಹೀಗೆ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ—ಈ ಹತ್ತು ವಿಷ್ಣುವಿನ ಅವತಾರಗಳು ಹೆಸರಾಗಿವೆ.
ಅವತಾರಣ ರಾಕ್ಷಸರ ನಿವಾಸ.
ಅವತೆ(ದ್ಭ) ಅವಸ್ಥೆ (ಸಂ), ಸ್ಥಿತಿ.
ಅವದೆಶೆ ಕೆಟ್ಟ ದೆಸೆ.
ಅವಧರಿಸು ಮನಸ್ಸು ಕೊಟ್ಟು ಕೇಳು, ಲಕ್ಷ್ಯಕೊಡು.
ಅವಧಾನ ಎಚ್ಚರ, ಭಕ್ತಿ.
ಅವಧಾರು ಎಚ್ಚರ, ಲಕ್ಷ್ಯಕೊಡುವಿಕೆ, (ಪಾಯವಧಾರು = ಪಾದಾವಧಾನ = ಪಾದದ ಎಚ್ಚರವನ್ನು ಹೇಳುವುದು).
—ಇಸು ಭಾವಿಸು, ತಿಳಿಯು.
ಅವಧಿ ನಿರ್ಣಯದ ಪ್ರಕಾರ, ಕಡೆಯ ದಿವಸದ ವರೆಗಿನ ಕಾಲ, ಗಡು, ಮೇರೆ.
ಅವಧೀರಿಸು ತಿರಸ್ಕರಿಸು.
ಅವಧೂತ ಎಲ್ಲವನ್ನು ಬಿಟ್ಟವ.
ಅವನ ರಕ್ಷಣೆ; ಸಂತೋಷ; ಕೃಪೆ.
ಅವನತ ಬಾಗಿದ.
ಅವನತಿ ಕೀಳ್ತನ, ಬೀಳು.
ಅವನಮ್ರ ಬಾಗಿದ.
ಅವನಿ ಭೂಮಿ, ನದಿ.
—ಜೆ ಸೀತೆ.
—ಪತಿ ಭೂಮಿಪತಿ, ರಾಜ.
—ಸುತೆ ಭೂಮಿಯ ಮಗಳು, ಸೀತೆ.
ಅವಭೃತ ಅವಭೃಥ(ಸಂ), ಯಜ್ಞಾಂತ್ಯದಲ್ಲಿ

ನ್ಯೂನಾತಿರಿಕ್ತ ದೋಷ ಪರಿಹಾರಕ್ಕಾಗಿ ಮಾಡುವ ಕರ್ಮ.
ಅವಮಾನ ಅಪಮಾನ, ಅವಮರ್ಯಾದೆ.
ಅವಯವ ದೇಹದ ಭಾಗ.
ಅವಯವಿ ಪೂರ್ಣ ಶರೀರಿಯಾದ ಜೀವಿ.
ಅವರಿ(ದ್ಭ) ಅಮರಿ(ಸಂ).
ಅವರು ಉಗುರಿನಿಂದ ಪರಚು.
ಅವರೋಧ ಅಂತಃಪುರ, ರಾಜಸ್ತ್ರೀಯರಿರುವ ಸ್ಥಾನ; ಅಡ್ಡಿ, ತಡೆ.
ಅವರೋಹ ಇಳಿಯುವಿಕೆ.
ಅವರ್ಜ್ಯ ಬಿಡಲಾಗದ.
ಅವಲಂಬನ ಅನುಸರಿಸುವಿಕೆ, ತೂಗಾಡುವಿಕೆ; ಆಶ್ರಯ, ಊತು.
ಅವಲೇಪ ಹೆಮ್ಮೆ, ಗರ್ವ.
ಅವಲೋಕನ ದೃಷ್ಟಿ, ನೋಟ.
ಅವಷ್ಟಂಭ ಸ್ಥಿರತೆ.
ಅವಸರ ಸಂದರ್ಭ, ವೇಗ.
ಅವಸಾನ ಕೊನೆ.
ಅವಸೆ(ದ್ಭ) ಅಮಾವಾಸ್ಯಾ(ಸಂ).
ಅವಸ್ಥೆ ಸ್ಥಿತಿ.
ಅವಂತಿ ಉಜ್ಜಯಿನಿ ಎಂಬ ಪ್ರಾಚೀನ ಪ್ರಸಿದ್ಧಿಯ ನಗರ.
ಅವಾಚ್ ಮೂಕ.
ಅವಾಚೀನ ತೆಂಕಣ.
ಅವಿ ಮರೆಯಾಗು, ಮುಚ್ಚಿಕೊಳ್ಳು; ರಕ್ಷಿಸು.
ಅವಿಕಳ ನ್ಯೂನತೆಯಿಲ್ಲದ.
ಅವಿಚಾರ ವಿಚಾರವಿಲ್ಲದ.
ಅವಿಚ್ಛಿನ್ನ ಒಡೆಯದ, ಪೂರ್ಣ, ಸಂತತ.
ಅವಿತಥ ಸತ್ಯ, ನಿಜ, (ವಿತಥ=ಸುಳ್ಳು).
ಅವಿದ್ಯೆ ಮಾಯೆ; ಅಜ್ಞಾನ.
ಅವಿನೀತ ನಡತೆಹೀನ, ವಿನಯಹೀನ.
ಅವಿನ್ನಾಣ ಅವಿನಾಣ, ಅಭಿಜ್ಞಾನ (ಸಂ), ಗುರುತು.
ಅವಿಭಕ್ತ ಒಡೆಯದ, ಬೇರೆಯಾಗದ, ಭಾಗವಾಗದ.
ಅವಿರತ ತಡೆಯಿಲ್ಲದೆ, ಒಂದೇ ಸವನೆ.
ಅವಿವೇಕ ವಿವೇಕಹೀನತೆ.
ಅವಿಶ್ವಾಸ ನಂಬಿಕೆಯಿಲ್ಲದಿರುವಿಕೆ.
ಅವುಕು (ಅವುಂಕು) ಅಮುಕು, ಹಿಸುಕು, ಒತ್ತು.
ಅವುಡಲ (ಔಡಲ) ಏರಂಡ, ಹರಳು ಗಿಡ.
ಅವುಡು ಕಚ್ಚು, ದವಡೆ.
—ಕಚ್ಚು ಸಿಟ್ಟಿನಿಂದ ತುಟಿಯ ಕೆಳಭಾಗವನ್ನು ಕಚ್ಚು.
ಅವುತಣ (ಔತಣ) ವಿಶೇಷ ಸತ್ಕಾರದ ಊಟ, ಸನ್ಮಾನದ ಊಟ.
ಅವ್ಯಕ್ತ ಅಸ್ಪಷ್ಟ, ಹೊರಕ್ಕೆ ತೋರಿಬರದ.
ಅವ್ಯವಚ್ಛಿನ್ನ ನಡುವೆ ನಿಂತುಹೋಗದ.
ಅವ್ವಳಿಸು ಮೇಲೆ ಬೀಳು; ಆತುರಪಡು.
ಅಶಕ್ತ ಶಕ್ತಿಹೀನ.
ಅಶಕ್ಯ ಸಾಧ್ಯವಲ್ಲದ.
ಅಶನ ಅನ್ನ, ಕೂಳು.
ಅಶನಿ ಸಿಡಿಲು, ಅಸನಿ.(ದ್ಭ).
ಅಶರೀರವಾಣಿ ಆಕಾಶವಾಣಿ, ಶರೀರವಿಲ್ಲದೆ ಮಾತನಾಡುವುದು, ಬಾನುಲಿ.
ಅಶೀಲ ನೀತಿರಹಿತ.
ಅಶುಚಿ ಕಶ್ಮಲ.
ಅಶುದ್ಧ ಶುದ್ಧವಲ್ಲದ.
ಅಶುಭ ಶುಭವಲ್ಲದ.
ಅಶೋಕ ದುಃಖವಿಲ್ಲದ, ಒಂದು ಮರ, ಅಶೋಕನೆಂಬ ಅರಸು. ಇವನು ಹಿಂದೂಸ್ಥಾನದ ಇತಿಹಾಸಪ್ರಸಿದ್ಧನಾದ ಚಕ್ರವರ್ತಿ. ಈತನು ಮೌರ್ಯ ಕುಲದವನು. (ಕ್ರಿ. ಪೂ. 198ರಲ್ಲಿ ಮಡಿದನು.) ಆತನು ಬುದ್ಧಧರ್ಮ ಪ್ರಚಾರಕ್ಕಾಗಿ ಬಹಳ

ಶ್ರಮಿಸಿದನು. ಅಶೋಕನಂತೆ ಧರ್ಮ ಸಂಸ್ಕೃತಿವಂತರು ಬಲು ಕಡಮೆ.

**ಅಶ್ಮ** ಕಲ್ಲು, ಮೋಡ.

**ಅಶ್ರು** (ಕಣ್ಣನ್ನು ವ್ಯಾಪಿಸುವುದು) ಕಣ್ಣೀರು.

**ಅಶ್ರುತ** (ಶಾಸ್ತ್ರವನ್ನು ಕೇಳದ) ಶಾಸ್ತ್ರ ತಿಳಿಯದ, ಶಾಸ್ತ್ರಜ್ಞಾನವಿಹೀನ; ಕೇಳಿಸದ.

**ಅಶ್ಲೀಲ** ನೀತಿವಿರೋಧ, ಅಸಭ್ಯ.

**ಅಶ್ವ** ಕುದುರೆ.

**ಅಶ್ವತ್ಥಾಮ** ದ್ರೋಣನ ಮಗನು. ಭಾರತ ಯುದ್ಧದ ಕೊನೆಗೆ ಈತನು ಕತ್ತಲಲ್ಲಿ ಪಾಂಡವರ ಕುಲವನ್ನು ನಾಶಮಾಡಿದನು. ಮುಂದೆ ಈ ತಪ್ಪಿಗಾಗಿ ಕೃಷ್ಣನಿಂದ ಶಾಪಕ್ಕೀಡಾದನು.

**ಅಶ್ವಮೇಧ** ಪ್ರಾಚೀನ ಕಾಲದಲ್ಲಿ ರಾಜ್ಯ ವಿಸ್ತಾರದ ಆಸೆಯುಳ್ಳ ಅರಸರು ಒಂದು ಕುದುರೆಯ ಹಣೆಗೆ ಪಟ್ಟವನ್ನು ಕಟ್ಟಿ ಶಾಸ್ತ್ರೋಕ್ತವಾಗಿ ಸಂಚಾರಕ್ಕೆ ಬಿಡುತ್ತಿದ್ದರು. ಅದರ ಹಿಂದೆ ಅವನ ಸೈನ್ಯ ಹೋಗುವುದು. ಅದನ್ನು ತಡೆದ ಅರಸನನ್ನು ಅವನು ಗೆಲ್ಲಬೇಕು. ತಡೆಯದವರು ಅವನ ಸಾಮಂತರಾಗುವರು. ಈ ರೀತಿ ಎಲ್ಲರನ್ನು ಸೋಲಿಸಿದ ಬಳಿಕ ಆ ಕುದುರೆಯನ್ನು ಯಜ್ಞಮಾಡುವರು. ಅಶ್ವಮೇಧ ಎಂಬುದು ಇಂಥ ಯಾಗದ ಹೆಸರು.

**ಅಶ್ವಾರೋಹ** ಕುದುರೆ ಏರುವಿಕೆ.

**ಅಶ್ವಿನಿ** ಅಶ್ವಿನೀದೇವತೆಗಳೆಂದು ಎರಡು ವೈದಿಕ ದೇವತೆಗಳ ಹೆಸರು. ಇವರು ಸೂರ್ಯನಲ್ಲಿ ಒಬ್ಬಳು ಅಪ್ಸರೆಗೆ ಹುಟ್ಟಿದವರೆಂದು ಕಥೆ ಇದೆ. ಇವರು ಸ್ವರ್ಗದ ವೈದ್ಯರೆಂದೂ ಶ್ರುತಿಯಿದೆ. ಈ ಋಷಿಗಳು ಚ್ಯವನನೆಂಬ ಮುಪ್ಪಿನ ಋಷಿಗೆ ತಾರುಣ್ಯವಿತ್ತರಂತೆ. ಈ ಕಾಲ್ಪನಿಕ ದೇವತೆಗಳೂ ಐತಿಹಾಸಿಕರಾದ ಅಶ್ವಿನೀಕುಮಾರರೆಂಬ ವೈದ್ಯರೂ ದಂತಕಥೆಗಳಲ್ಲಿ ಒಂದಾಗಿ ಹೋಗಿರಬೇಕು; ಅಶ್ವಿನೀ ನಕ್ಷತ್ರ.

**ಅಷ್ಟ** ಎಂಟು.

**ಅಷ್ಟಕ** ಎಂಟು ಭಾಗವುಳ್ಳದ್ದು.

**ಅಷ್ಟದಿಕ್** ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ಎಂಟು ದೇವತೆಗಳ ದಿಕ್ಕುಗಳು.

**ಅಷ್ಟದಿಗ್ಗಜ** ಎಂಟು ದಿಕ್ಕಿನ ಆನೆಗಳು— ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬವು.

**ಅಷ್ಟಮದ** ಅಸ್ತ್ರ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬ ಹೆಮ್ಮೆಗೆ ಕಾರಣವಾದ ಎಂಟು ವಸ್ತುಗಳು.

**ಅಷ್ಟಮಿ** ಪಕ್ಷದ ಎಂಟನೆ ದಿನ.

**ಅಷ್ಟಾದಶಪುರಾಣಗಳು** ಶೈವ, ಸ್ಕಂದ, ಲಿಂಗ, ನಾರದ, ಮತ್ಸ್ಯ, ಕೂರ್ಮ, ವಾಮನ, ಗರುಡ, ಬ್ರಹ್ಮಾಂಡ, ವರಾಹ, ಮಾರ್ಕಂಡೇಯ, ವಿಷ್ಣು, ಭವಿಷ್ಯೋತ್ತರ, ಭಾಗವತ, ಪದ್ಮ, ಆಗ್ನೇಯ, ಬ್ರಹ್ಮ, ವೈವರ್ತ ಎಂಬವು.

**ಅಷ್ಟಾವಕ್ರ** ಶರೀರ ಕುರೂಪಿ.

**ಅಷ್ಟಾವಕ್ರ** ಕಹೋದನೆಂಬ ಋಷಿಯ ಮಗ. ಈತ ಹುಟ್ಟುವಾಗಲೇ ಕುರೂಪಿಯಾಗಿ ಜನಿಸಿದನು.

**ಅಷ್ಟಾಶೀತಿ** 88000.

**ಅಷ್ಟಾಂಗಯೋಗ** ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬವು.

**ಅಷ್ಟೈಶ್ವರ್ಯ** ಅಷ್ಟಮದಕ್ಕೆ ಕಾರಣವಾದ ಐಶ್ವರ್ಯ, ಅಣಿಮಾದಿ ಐಶ್ವರ್ಯಗಳು.

**ಅಸಕಳಿ** ಕೈ ಮಿಂಚಿಹೋಗು, ಕೈಮೀರು.

ಅಸಕೃತ್ (ಸಕೃತ್=ಒಂದಾವರ್ತಿ) ಒಂದಾವರ್ತಿಯಲ್ಲದ, ಪದೇಪದೇ, ಮೇಲೆಮೇಲೆ.
ಅಸಗ ಅಗಸ; ಸಾಮಾನ್ಯ.
ಅಸಡ್ಡೆ ಅಶ್ರದ್ಧೆ(ಸಂ).
ಅಸದಳ ಅಸದೃಶವಾದ, ಅಸಾಧ್ಯವಾದುದು.
ಅಸದೃಶ ಅನುಪಮ, ಹೋಲಿಸಲು ಆಗದ.
ಅಸನಿ(ದ್ಭ) ಅಶನಿ(ಸಂ), ಸಿಡಿಲು.
ಅಸಮಬಲ ಎಣೆಯಿಲ್ಲದ ಶಕ್ತಿಯುಳ್ಳವನು, ವೀರನು.
ಅಸಮಾಸ್ತ್ರ ಐದು ಬಾಣಗಳುಳ್ಳವ, ಮನ್ಮಥ ಕಾಮ.
ಅಸವನ ತ್ವರೆ.
ಅಸಂಖ್ಯೆ ಲೆಕ್ಕವಿಲ್ಲದಿರುವಿಕೆ.
ಅಸಂಗತ ಅಕ್ಷರ; ಒಪ್ಪದುದು; ಪರಸ್ಪರ ಹೊಂದದುದು.
ಅಸಂಶಯ ಅನುಮಾನವಿಲ್ಲದ ಸ್ಥಿತಿ.
ಅಸಾರ ಸಾರವಿಲ್ಲದ, ಬಲವಿಲ್ಲದ; ಹರಳೆಗಿಡ.
ಅಸಿ ಕತ್ತಿ.
ಅಸಿತ ಕಪ್ಪಾದ (ಸಿತ=ಬಿಳುಪು).
— ಅಹಿ ಕೃಷ್ಣಸರ್ಪ, ಕಾಳಿಂಗ.
ಅಸಿದು ಸಣ್ಣ, ಸಪುರ.
ಅಸಿಯ ತೆಳುವಾದ, ಸಣ್ಣ.
— ಅಳ್ ತೆಳುವಾದವಳು, ಕೋಮಲೆ.
— ಕೊಂಬು ಸಣ್ಣ ಕೊಂಬೆ, ಸಪುರವಾದ ಕೊಂಬೆ.
— ಬೆರಳ್ ಸಪುರವಾದ ಬೆರಳು.
ಅಸು ಪ್ರಾಣ ಜೀವ.
— ಕುಡಿ ಪ್ರಾಣಾಪಹರಣ, ಪ್ರಾಣವನ್ನಪಹರಿಸುವುದು, ಜೀವತೆಗೆ.
— ತೊರೆ ಅಸುದೊರೆ, ಪ್ರಾಣಬಿಡು.
ಅಸುಕೆ ಅಸುಗೆ(ದ್ಭ), ಅಶೋಕ(ಸಂ).
ಅಸುಗೆ(ದ್ಭ) ಅಶೋಕ(ಸಂ), ಮುತ್ತುಗದ ಗಿಡ.
ಅಸುಗೊಳ್ ಜೀವತೆಗೆ, ಪ್ರಾಣತೆಗೆ.
ಅಸುರ ಬ್ರಾಹ್ಮಣಗಳಲ್ಲಿ ಪ್ರಜಾಪತಿಯ ಉಸುರಿನಿಂದ ಆದವರೇ ಅಸುರರೆಂದು ಸೂಚಿಸಿದೆ. (ಅಸು=ಪ್ರಾಣವನ್ನು+ರ=ತೆಗೆಯುವವ ಅಥವಾ ಸುರನಲ್ಲದವ) ರಾಕ್ಷಸ, ದೇವತೆಗಳ ಹಗೆ, ರಾತ್ರಿ.
— ಅರಿ (ಅಸುರಾರಿ) ರಾಕ್ಷಸರ ಹಗೆ, ಕೃಷ್ಣ.
ಅಸುರೆ ರಕ್ಕಸಿ, ರಾಕ್ಷಸಿ.
ಅಸುವಡಗು ಪ್ರಾಣಹೋಗು.
ಅಸುಹೃತ್ (ಸುಹೃತ್=ಮಿತ್ರನು) ಶತ್ರು, ಹಗೆ.
ಅಸೂಯೆ ದ್ವೇಷ, ಮತ್ಸರ.
ಅಸೃಕ್ ರಕ್ತ.
ಅಸ್ಖಲಿತ ಸ್ಥಿರವಾದ; ಜಾರದ.
ಅಸ್ತ ಮುಳುಗುವಿಕೆ, ಮಾಯವಾಗುವಿಕೆ.
— ಅದ್ರಿ (ಅಸ್ತಾದ್ರಿ) ಪಡುಬೆಟ್ಟು, ಅಸ್ತಾಚಲ.
— ಇಸು (ಅಸ್ತಮಿಸು) ಮುಳುಗು.
— ಮಾನ ಮುಳುಗುವಿಕೆ.
ಅಸ್ಥಿ ಮೂಳೆ, ಎಲುಬು.
ಅಸ್ತಿತ್ವ ಇರುವಿಕೆ.
ಅಸ್ತಿವಾರ ಪಾಯ, ನೆಲಗಟ್ಟು, ಬುನಾದಿ.
ಅಸ್ತು ಆಗಲಿ.
ಅಸ್ತ್ರ ಮಂತ್ರಿಸಿ ಬಿಡುವ ಆಯುಧ.
ಅಸ್ಪಷ್ಟ ಸ್ಪಷ್ಟವಲ್ಲದ.
ಅಸ್ವಾಭಾವಿಕ ಅನೈಸರ್ಗಿಕ.
ಅಹಲ್ಯೆ ಇವಳು ಗೌತಮ ಋಷಿಯ ಪತ್ನಿ. ಈ ಚೆಲುವೆಯನ್ನು ಒಮ್ಮೆ ಇಂದ್ರನು ಕೆಡಿಸಿದನು. ಅದರಿಂದ ಗೌತಮನು ಅವಳನ್ನು ಕಲ್ಲಾಗುವಂತೆ ಶಪಿಸಿದನು. ಮುಂದೆ ರಾಮನಿಂದ ಅವಳ ಶಾಪ ವಿಮೋಚನೆಯಾಯಿತು.

ಅಹಂಕಾರ ಅಹಂಕೃತಿ, ಹೆಮ್ಮೆ, ತಾನೆನ್ನುವ ಜಂಭ.
ಅಹಿ ಸರ್ಪ, ಹಾವು.
ಅಹಿಚ್ಛತ್ರ ಉತ್ತರ ಪಾಂಚಾಲ. ಇದನ್ನು ದ್ರುಪದನಿಂದ ದ್ರೋಣಾಚಾರ್ಯನು ಅಪಹರಿಸಿದನು. ಇದೀಗ ರೋಹಿಲಖಂಡದಲ್ಲಿ ರಾಮನಗರವೆಂಬ ಹೆಸರಿನಿಂದಿದೆ.
ಅಹಿತ ಒಗ್ಗದ, ಹಿತವಲ್ಲದ.
ಅಹಿತಬಲ ಶತ್ರುಬಲ ಅಥವಾ (ಬಲ= ಬಲಾಸುರನಿಗೆ + ಅಹಿತ = ಶತ್ರುವಾದವ) ಇಂದ್ರ.
ಅಹಿಪ ಅಹಿಪತಿ, ಶೇಷ.
ಅಹಿಪುರ ನಾಗಲೋಕ, ಸರ್ಪಗಳ ಭೋಗವತೀ ಎಂಬ ಪಾತಾಳದ ಪಟ್ಟಣ.
ಅಹಿಭೂಷಣ ಶಿವ.
ಅಹಿಮಕರ (ಅಹಿಮ = ಹಿಮವಲ್ಲದ ಬಿಸಿಯಾದ + ಕರ = ಕಿರಣವುಳ್ಳವ) ಸೂರ್ಯ, ಸರ್ಪ ಮೊಸಳೆ.
ಅಹುದು ಹೌದು.
ಅಹೋರಾತ್ರಿ ಹಗಲುರಾತ್ರಿ.
ಅಳಕ (ಅಲಕ) ಮುಂಗುರುಳು.
ಅಳಕಾಪುರ ಅಳಕೆ; ಕುಬೇರನ ಪಟ್ಟಣ.
ಅಳಗೆ ಧಾನ್ಯ ಅಳೆಯುವ ಪಾತ್ರೆ.
ಅಳತೆ ಪ್ರಮಾಣ, ಮಾನ; ಅಳೆಯುವಿಕೆ.
ಅಳಬಳ ಸಾಮರ್ಥ್ಯ; ಮಹಾತ್ಮ್ಯೆ.
ಅಳರೆ ದುಃಖದ ಹೊಳೆ.
ಅಳರ್ಪು ಭೀತಿ; ಆತುರ.
ಅಳಲ್ ಅಳಲು, ದುಃಖ, ಬೇಗುದಿ, ವ್ಯಥೆ; ವ್ಯಥೆಪಟ್ಟು, ದುಃಖಿಸಿ.
ಅಳಲಿ ಅಳಲು, ಅಣಲೆ.
—ಇಕೆ (ಅಳಲಿಕೆ) ದುಃಖದಸ್ಥಿತಿ, ದುಃಖ.
ಅಳವಡು ಚೆನ್ನಾಗಿ ಕೂಡಿಕೊ, ಹೊಂದು, ಸಿದ್ಧವಾಗು.
ಅಳವಡಿಕೆ ಸೇರುವಿಕೆ, ಪ್ರಯೋಗಿಸುವಿಕೆ.
ಅಳವಳಿ ಶಕ್ತಿ ನಾಶವಾಗು.
ಅಳವಿ ಅಳವು; ಸ್ನೇಹ; ಯುದ್ಧ, ಪರಾಕ್ರಮ, ಅಳತೆ.
—ಇಂದ ಪರಾಕ್ರಮದಿಂದ.
—ಕಳಿದ ಮಿತಿಮೀರಿದ.
—ಕೊಡು ಯುದ್ಧಮಾಡು, ಎದುರಾಗು.
—ಗೆ ಸ್ನೇಹಿತ.
ಅಳಸ ಅಲಸ, ಆಲಸ್ಯ.
—ಗಾಮಿನಿ ಮೆಲ್ಲಗೆ ನಡೆಯುವವಳು.
ಅಳಸು ಒಂದು ಬಗೆಯ ತಿಂಡಿ.
ಅಳಿ ಭ್ರಮರ, ತುಂಬಿ; ನಾಶ, ನಾಶಹೊಂದು; ಅಲ್ಪ.
—ಆಸೆ (ಅಳಿಯಾಸೆ) ಹೀನವಾದ ಆಶೆ, ಪ್ರಯೋಜನಕ್ಕೆ ಬಾರದ ಆಶೆ.
—ಪೆಣ್ (ಅಳಿವೆಣ್) ಅಲ್ಪ ಸ್ತ್ರೀ, ಕೆಟ್ಟ ಹೆಣ್ಣು.
—ವಾಡ (ಅಳಿವಾಡ) ಹಾಳೂರು.
—ವೆಸನ ಹೀನಾಪೇಕ್ಷೆ.
ಅಳಿಕ ನೆತ್ತಿ.
ಅಳಿಕಬ್ಬ (ಅಳಿಗಬ್ಬ) ಅಲ್ಪ ಕಾವ್ಯ.
ಅಳಿಗೋಪರ್ ತುಚ್ಛರಾದ ಗೊಲ್ಲರು.
ಅಳಿಜಸ ಅಪಕೀರ್ತಿ.
ಅಳಿನಿ ಹೆಣ್ಣುದುಂಬಿ.
ಅಳಿಪು (ಅಳಿವು) ಅನುರಾಗ; ಅತ್ಯಾಶೆ; ಲೋಲುಪ್ತಿಗೊಳು; ನಾಶ.
—ಪೆತ್ತು (ಅಳಿವೆತ್ತು) ಅತ್ಯಂತ ಆಸೆಪಟ್ಟು.
ಅಳಿಯ ಮಗಳ ಗಂಡ; ವ್ಯರ್ಥವಾದ; ಹೀನವಾದ.
ಅಳಿರಕ್ಕಸ ನೀಚ ರಾಕ್ಷಸ.
ಅಳಿವು ನಾಶ.
ಅಳಿಸು ದುಃಖಪಡಿಸು, ಕೂಗಿಸು; ನಾಶಪಡಿಸು.

ಅಳೀಕ ಸುಳ್ಳು.
ಅಳು ದುಃಖಿಸು.
ಅಳುಕು ಭಯ, ಅಂಜಿಕೆ, ಭಯಪಡು.
ಅಳುರ್ ವ್ಯಾಪಿಸು, ಹರಡು.
—ತೆ (ಅಳುರ್ತೆ) ವ್ಯಾಪ್ತಿ.
—ವ (ಅಳುರ್ವ) ವ್ಯಾಪಿಸುವ.
ಅಳುರಿಕೆ ಹೆದರಿಕೆ.
ಅಳುಂಬ ಆಧಿಕ್ಯ, ಹೆಚ್ಚಳ.
ಅಳೆ ಮಜ್ಜಿಗೆ, ಅಳತೆಮಾಡು, ಮೊಸರು, ಕಳಲ್.
ಅಳ್ಕಜ ಅಕ್ಕಜ; ಅನ್ಯಾಯ; ಆಶ್ಚರ್ಯ, ಮತ್ಸರ.
—ಕಾರ ಮತ್ಸರವುಳ್ಳವ.
ಅಳ್ಕದ ಭಯಪಡದ, ಅಂಜದ.
ಅಳ್ಕರು ಪ್ರೀತಿ, ಅಕ್ಕರು.
ಅಳ್ಕಾಡು ಪೂರ್ಣ ನಾಶವಾಗು.
ಅಳ್ಕಿವೆಳ್ಕು ಹಾಳಾಗು; ಕಳವಳಪಡಿಸು.
ಅಳ್ಕು ಅಳುಕು, ಬೆದರು, ಹೆದರು, ಶಕ್ತಿ ಗುಂದು.
ಅಳ್ಕೆ ಅಳುವಿಕೆ, ರೋದನ; ಆಲಿಂಗನ.
ಅಳ್ಗಿತಳ್ಗಿ ನಾಶವಾಗಿ.
ಅಳ್ಗಿಸಲ್ ಕೃಪೆಮಾಡಲು, ಕುಗ್ಗಿಸಲು.
ಅಳ್ಗೆ ಅಡಿಗೆ.
ಅಳ್ತಿ ಅರ್ತಿ, ಪ್ರೀತಿ; ಆಸೆ.
—ಗೆ ಪ್ರೀತಿಯುಳ್ಳವಳು, ಅತ್ತಿಗೆ.
ಅಳ್ತೆ ಪ್ರೀತಿ, ಇಚ್ಛೆ, ಪ್ರೇಮ, ವಿಶ್ವಾಸ.
ಅಳ್ದು ಸುಡು; ಮುಳುಗು, ನಾಶಪಡಿಸು. ಅದ್ದು.
ಅಳ್ಳಿರಿ ಭಯ ಹುಟ್ಟಿಸು; ಅಲ್ಲಾಡಿಸು; ತಾಗು, ಒತ್ತು; ಅಲ್ಲಾಡುವ ಹಾಗೆ ಇರಿ; ವ್ಯಾಪಿಸು.
ಅಳ್ಳು ಅಲುಗು, ಅಲ್ಲಾಡು; ಅರಳು.
ಅಳ್ಳೂಮ ಅಳಿಲು, ಚಣಿಲು.
ಅಳ್ಳೆ ಕಿಬ್ಬೊಟ್ಟೆ, ಹೊಟ್ಟೆಯ ಪಕ್ಕ; ಪಕ್ಕ; ದುರ್ಬಲ (ಅಳ್ಳೆಯಿರಿ).
—ಇರಿ ಹೊಡೆ, ಅಳ್ಳೆಗೆ ಚುಚ್ಚು.
—ಕುತ್ತು ಪಕ್ಕಗಳನ್ನು ಹೊಡೆ, ಅಳ್ಳೆಗೆ ಹೊಡೆಯುವ ಪೆಟ್ಟು.
—ಕೊಬ್ಬು ಅಲ್ಪಬಲ, ಬಲಹೀನತೆ.
—ಕೊಂಬು ಉದ್ದವಾಗಿ ಬಳುಕು ತ್ತಿರುವ ಕೊಂಬೆ.
ಅಳ್ಳೆದೆ ನಡುಗುವ ಎದೆ; ಹೆದರಿಕೆ, ಪುಕ್ಕು.
ಅಂ ಅತಿ.
ಅಂಕ ಗುರುತು, ಕಲೆ; ಯುದ್ಧ; ತೊಡೆ; ನಾಟಕದ ವಿಭಾಗ; ಪ್ರಸಿದ ; ಕೊರತೆ, ದೋಷ; ಬಿರುದು.
—ಇತ (ಅಂಕಿತ) ಗುರುತಿಸಿದ ಹೆಸರುಳ್ಳ.
—ಇಸು ಗುರುತಿಸು.
ಅಂಕಕಾರ ಮುಖ್ಯ ಸೇವಕ, ಮುಂದಾಳು, ಯುದ್ಧವೀರ.
ಅಂಕಿತನಾಮ ನಾಮಪದಗಳಲ್ಲಿ ಒಂದು ಜಾತಿ.
ಅಂಕಗಣಿತ ಅಂಕೆಗಳಿಂದ ಮಾಡತಕ್ಕ ಲೆಕ್ಕ.
ಅಂಕಣ ನೆಲೆ; ಮನೆಯ ವಿಭಾಗ, ಎರಡು ಕಂಭಗಳ ನಡುವಿನ ಅವಕಾಶ.
ಅಂಕನ ಗುರುತು.
ಅಂಕಪೀಠ ತೊಡೆ.
ಅಂಕಮಾಲೆ ಬಿರುದುಗಳ ಸರ, ಬಿರುದು ಗಳ ಪಟ್ಟಿ.
ಅಂಕರಿಕೆ ನೀರುಸೇದುವ ಬಾವಿಯ ಮೆಟ್ಟಿ ಲು; ಗೋಡೆಯ ಬುಡದಲ್ಲಿ ಸ್ವಲ್ಪ ದಪ್ಪ ವಾಗಿ ಮಾಡಿ ಕೆಮ್ಮಣ್ಣು ಬಳಿದು ಬರೆದ ಭಾಗ.
ಅಂಕವಣಿ ಕುದುರೆಯ ಮೇಲಿನ ತಡಿ.
ಅಂಕವರೆ ರಣಭೇರಿ ಮೊದಲಾದ ಯುದ್ಧ ವಾದ್ಯ.

**ಅಂಕವಾತು** ಯುದ್ಧದಲ್ಲಿ ವೀರರು ಪರಸ್ಪರ ಆಡಿಕೊಳ್ಳುವಮಾತು,ಯುದ್ಧದಮಾತು.

**ಅಂಕವೀರ** ಯುದ್ಧವೀರ.

**ಅಂಕುಡೊಂಕು** ವಿಶೇಷ ಡೊಂಕಾಗಿ ಕಾಣುವ ವಸ್ತು.

**ಅಂಕುರ** ಮೊಳಕೆ.

— ಇಸು ಮೊಳೆಯು, ಹುಟ್ಟು.

**ಅಂಕುಶ** ಆನೆಯನ್ನು ನಡಸುವಾಗ ಉಪಯೋಗಿಸುವ ಒಂದು ಆಯುಧ, ತುದಿಯಲ್ಲಿ ಸೂಕ್ಷ್ಮವಾದ ಕಬ್ಬಿಣದ ಮೊಳೆಯನ್ನು ನಾಟದ ಮರದ ಕೋಲು.

**ಅಂಕುಸ**(ದ್ಭ) ಅಂಕುಶ(ಸಂ).

**ಅಂಕೆ** ಆಜ್ಞೆ, ಅಧಿಕಾರ; ಸ್ವಾಧೀನ, ಬೇರೆಯವರಿಗೆ ಅಧೀನವಾಗಿರುವುದು; ಆನಿಕೆ; ಒತ್ತುಕೋಲು, ಸನ್ನೆಕೋಲು.

**ಅಂಕೋಲ** ಒಂದು ಜಾತಿ ಮರ. ಇದರ ಹಣ್ಣು ತಿನ್ನುತ್ತಾರೆ. ಮರ ಕಟ್ಟಡ ಮೊದಲಾದ ಕೆಲಸಕ್ಕೆ ಬರುವುದು. ಕಲ್ಲುಮಾವಿನ ಮರ, ಅಂಕೋಲೆ ಮರ.

**ಅಂಕೋಲೆ** ಕುದುರೆಯ ಮೇಲೆ ಕುಳಿತವ; ಪಾದವನ್ನಿಟ್ಟುಕೊಳ್ಳುವ ರಿಕಾಬು; ಉತ್ತರ ಕನ್ನಡ ಜಿಲ್ಲೆಯೊಳಗಿನ ಒಂದು ಊರು.

**ಅಂಗ** ಶಿವನ ಅಂಶವಾದ ಜೀವಾತ್ಮ; ದೇಹ, ಅವಯವ; ಭಾಗ; ಉಪಾಯ; ಮುಖ್ಯ, ರೀತಿ; ಉಡುಗೊರೆ.

— ಜ ಮನ್ಮಥ, ಕಾಮ.

**ಅಂಗಚಿತ್ತ** ಉಡುಗೊರೆ, ಉಚಿತವಾದ ಬಹುಮಾನ.

**ಅಂಗಣ**(ಸಂ) ಅಂಗಳ(ದ್ಭ).

**ಅಂಗದ** ತೋಳಿನಲ್ಲಿ ಧರಿಸುವ ಚಿನ್ನದ ಬಳೆ, ಸರಿಗೆ, ವಾಲಿ ಎಂಬವನ ಮಗನು.

**ಅಂಗನೆ** (ಸುಂದರದೇಹ ಅಥವಾ ಅವಯವ ಉಳ್ಳ) ಸ್ತ್ರೀ.

**ಅಂಗಯ್** ಹಸ್ತದ ಒಳಗಡೆ.

**ಅಂಗಯಷ್ಟಿ** (ಯಷ್ಟಿ=ಕೋಲುಸರ) ಕೋಲಿನಂತೆ ಅಥವಾ ಸರದಂತೆ ಇರುವ ದೇಹ.

**ಅಂಗಯ್ಯು** ಇಚ್ಛಿಸು, ಆಶೆಪಡು; ಆತುರಪಡು.

**ಅಂಗರ** ಅಂಗಾರ (ಸಂ), ಕೆಂಡ, ಬೆಂಕಿಯ ಕೆಂಡ, ಇದ್ದಲಿ.

**ಅಂಗರಾಗ** (ಅಂಗ=ಅವಯವಗಳನ್ನು+ರಾಗ=ಅಲಂಕಾರವಾಗುವಂತೆ ಮಾಡುವುದು) ಅನುಲೇಪನ, ಮೈಗೆ ಹಚ್ಚಿಕೊಳ್ಳುವ ಗಂಧ ಮೊದಲಾದ ಸುಗಂಧ ದ್ರವ್ಯ.

**ಅಂಗಲಾಚು** ಬೇಡಿಕೊಳ್ಳು.

**ಅಂಗವಟ್ಟೆ** ದೇಹರಚನೆ, ಅಂಗ ಸೌಷ್ಠವ, ದೇಹ.

**ಅಂಗವಣೆ** ಚಮತ್ಕಾರ, ಸಾಮರ್ಥ್ಯ; ಅಭಿಪ್ರಾಯ, ಇಚ್ಛೆ.

**ಅಂಗವಿಕಾರ** ಅಂಗಚೇಷ್ಟೆ, ಶೃಂಗಾರಚೇಷ್ಟೆ.

**ಅಂಗವಿಕ್ಷೇಪ** (ಅಂಗ=ಅವಯವಗಳನ್ನು+ವಿಕ್ಷೇಪ=ಚಲಿಸುವುದು, ಅಲ್ಲಾಡಿಸುವುದು) ಅಂಗಚೇಷ್ಟೆ.

**ಅಂಗವಿಸು** ಚೆದರಿಸು, ಪ್ರಕಾಶಿಸು; ಇಷ್ಟಪಡು, ಜತೆಯಾಗು; ಮುತ್ತು; ಕೂಡು; ಹಿಡಿ.

**ಅಂಗವೈಕಲ್ಯ** (ಅಂಗ=ಅವಯವದ+ವೈಕಲ್ಯ=ದೋಷ, ಕೊರತೆ) ಅವಯವದ ಕೊರತೆ, ಊನ.

**ಅಂಗಸಂಸ್ಕಾರ** (ಅಂಗ=ದೇಹದ, ಅವಯವದ+ಸಂಸ್ಕಾರ=ಅಲಂಕಾರ) ದೇಹಾಲಂಕಾರ.

**ಅಂಗಳ** ಕಾಲು; ಕಿರುನಾಲಗೆ; ಮನೆಯ ಮುಂದಿನ ಅಂಗಳ, ಅಂಗಣ.

**ಅಂಗುಟ** (ದ್ಭ) ಅಂಗುಷ್ಠ (ಸಂ); ಕೈಕಾಲುಗಳ ಹೆಬ್ಬೆರಳು.

ಅಂಗಾತ ಮುಖ ಮೇಲಾಗಿ.
ಅಂಗಾರ ಇದ್ದಲಿ, ಇಂಗಾಲ.
ಅಂಗಾರಕ ಮಂಗಳಗ್ರಹ.
ಅಂಗೀಕರಣ ಅಂಗೀಕಾರ, ಒಪ್ಪಿಕೊಳ್ಳುವುದು, ಸಮ್ಮತಿಸುವುದು.
ಅಂಗೀಕೃತ ಒಪ್ಪಿಕೊಂಡ.
ಅಂಗುಟ (ದ್ಭ) ಅಂಗುಷ್ಠ (ಸಂ), ಕೈಕಾಲ ಹೆಬ್ಬೆರಳು.
ಅಂಗುಲಿ ಬೆರಳು.
—ತ್ರಾಣ ಬಾಣವನ್ನೆಸೆವಾಗ ಬೆರಳಿಗೆ ಅಪಾಯವಾಗದಂತೆ ರಕ್ಷಿಸುವುದು.
—ದರ್ಶನ ಬೆರಳಿನಿಂದ ತೋರಿಸುವುದು.
—ಮೋಟನ ಬೆರಳಿಂದ ಚಿಟಕೆಹಾಕುವುದು.
ಅಂಗುಲೀಯ ಬೆರಳಿಗೆ ಸಂಬಂಧಿಸಿದುದು, ಉಂಗುರ.
ಅಂಗುಳ್ ನಾಲಿಗೆಯ ಬುಡ, ನಾಲಿಗೆಯ ಮೇಲಿನ ಅಟ್ಟ.
ಅಂಗೈಸು ಒಟ್ಟುಗೂಡು; ಆಶೆಪಡು.
ಅಂಗೋಪಾಂಗ (ಅಂಗ=ದೇಹ ಮತ್ತು+ ಉಪಾಂಗ=ಅವಯವ) ದೇಹ ಮತ್ತು ಅವಯವ.
ಅಂಘುವಣೆ ಕೋರಿಕೆ, ಅಪೇಕ್ಷೆ, ಅಭಿಪ್ರಾಯ.
ಅಂಘ್ರಿ ಪಾದ; ಮರದ ಬೇರು; ಪದ್ಯದ ನಾಲ್ಕನೆಯ ಭಾಗ.
ಅಂಘ್ರಿಜ ಪಾದದಲ್ಲಿ ಹುಟ್ಟಿದವ, ಶೂದ್ರ.
ಅಂಘ್ರಿಪ (ಅಂಘ್ರಿ=ಬೇರುಗಳಿಂದ+ಪ= ಕುಡಿಯುವುದು) ಮರ.
ಅಂಚಲ ಸೆರಗು.
ಅಂಚಿತ ಸುಂದರವಾದ.
ಅಂಚು ಕೊನೆಯ ಭಾಗ, ಸೆರಗು.
ಅಂಚೆ (ದ್ಭ) ಹಂಸ (ಸಂ), ಟಪ್ಪಾಲು.
—ಗಮನೆ ಹಂಸದಂತೆ ಅಂದವಾಗಿ ನಡೆಯುವವಳು.
—ತೇರ ಹಂಸವೇ ರಥವಾಗಿ ಉಳ್ಳವ, ಬ್ರಹ್ಮ.
ಅಂಜನ ಕಾಡಿಗೆ, ಕಜ್ಜಳ; ಅಂಜನಾದೇವಿ, ಹನುಮಂತನ ತಾಯಿ; ಕೇಸರಿ ಎಂಬ ಕಪಿಯ ಹೆಂಡತಿ; ಅಂಜನವೆಂಬ ಪರ್ವತ; ಪಶ್ಚಿಮ ದಿಕ್ಕಿನ ದಿಗ್ಗಜ.
ಅಂಜನಾದ್ರಿ ತಿರುಪತಿಯ ಹತ್ತಿರದ ಒಂದು ಬೆಟ್ಟ; ಹಂಪಿಯ ಒಂದು ಬೆಟ್ಟ.
ಅಂಜಲಿ (ಅಂಜುಲಿ) ಅಂಜುಳಿ, ಬೊಗಸೆ.
ಅಂಜು ಭಯಪಡು, ಹೆದರು.
—ಕುಳಿ ಭಯಪಡುವವ.
ಅಂಟು ಸ್ಪರ್ಶಮಾಡು, ಸ್ಪರ್ಶವಾಗು, ತಗಲು, ಹತ್ತು.
—ರೋಗ ಒಬ್ಬರಿಂದೊಬ್ಬರಿಗೆ ಹತ್ತುವ ರೋಗ, ಸೋಂಕುರೋಗ.
—ಸರಿ ಅಂಟಕೊಳ್ಳುವ ಗೋಂದು.
ಅಂಡಜ ಮೊಟ್ಟೆಯಲ್ಲಿ ಹುಟ್ಟಿದ; ಹಕ್ಕಿ; ಮೀನು; ಹಾವು; ಹಲ್ಲಿ.
ಅಂಡಲೆ ತೊಂದರೆಕೊಡು, ಪೀಡಿಸು; ಪೀಡನೆ, ಉಪದ್ರವ; ಏರು; ಕೆಲಸವಿಲ್ಲದೆ ತಿರುಗು.
ಅಂಡಿಸು ಸಮೀಪಿಸು; ಕುಳಿತುಕೊಳ್ಳು, ಆಶ್ರಯ ಬೇಡು.
ಅಂಡು ನಿತಂಬ, ಆಶ್ರಯ.
—ಕೊಳ್ ಹತ್ತಿರ ಹೋಗಿ ಸೇರು.
ಅಂಡೆ ನೀರ್ಕೊಳವಿ, ಬಿದಿರಿನ ಪಾತ್ರೆ, ನಳಿಗೆ; ಭಾಪುರೆ.
ಅಂತ (ಅಂತಃ) ಒಳಗೆ.
—ಕರಣ ಕರುಣೆ, ಕನಿಕರ.
—ಕಲಹ ಒಳಗಿನ ಜಗಳ.
—ಪುರ ರಾಣೀವಾಸ.

ಅಂತ ಒಳಗೆ, ಕೊನೆ.

—ಕ ಯಮ, ಒಳಗಿರುವ.

ಅಂತಪ್ಪ ಹಾಗಿರುವ.

ಅಂತರ್ ಒಳಗಿನ.

ಅಂತರ ಒಳಗೆ; ಮಧ್ಯ; ಅವಧಿ; ದೂರ; ವ್ಯತ್ಯಾಸ.

—ಇತ ದೂರವಾದ.

—ಇಸು ನಿಧಾನಿಸು, ತಡಮಾಡು.

ಅಂತರಾಯ ಅಡ್ಡಿ, ವಿಘ್ನ.

ಅಂತರಾಳ ನಡುವಣ ಭಾಗ.

ಅಂತರಿಂ ಅದರಿಂದ.

ಅಂತರೀಪ (ಈಪ=ನೀರಿನ+ಅಂತರ್= ನಡುವೆ ಇರುವುದು) ನೀರಿನ ಮಧ್ಯವಿರುವ ಭೂಭಾಗ, ದ್ವೀಪ.

ಅಂತರೀಯ (ಅಂತರ್=ಕೆಳಗಡೆ+ಈಯ =ಧರಿಸಿದುದು) ಉಟ್ಟ ಬಟ್ಟೆ.

ಅಂತರ್ದಾಹಕ ಮತ್ಸರದಿಂದ ಮನಸ್ಸಿನೊಳಗೇ ಸುಡುವವ; ಒಳಗೆ ಸುಡುವ.

ಅಂತರ್ಧಾನ ಅಂತರ್ಯ; ಮಾಯವಾಗುವಿಕೆ.

ಅಂತರ್ಯ ಒಳಗಿನ ವಿಚಾರ, ಒಳಗಡೆ.

ಅಂತರ್ಯಕ್ತರ್ ಒಳಗಿನ ಅಧಿಕಾರಿಗಳು.

ಅಂತರ್ವತ್ನಿ (ಅಂತರ್=ಒಳಗಡೆ+ಪತ್ನಿ= ಗರ್ಭವುಳ್ಳವಳು) ಗರ್ಭಿಣಿ, ಬಸುರಿ.

ಅಂತವರಂ ಅಂತ್ಯದ ವರೆಗೂ, ಕೊನೆಯ ವರೆಗೂ.

ಅಂತಸ್ತು ಸ್ಥಿತಿ, ಮಟ್ಟ.

ಅಂತಹ ಅಂಥ, ಆ ತೆರನ.

ಅಂತಿರೆ ಹಾಗೆ ಇರಲು.

ಅಂತು (ದ್ಭ) ಅಂತ್ಯ (ಸಂ), ಕೊನೆ, ತುದಿ; ಮರಣ; ಹಾಗೆ.

ಅಂತ್ರ ಕರುಳು.

ಅಂತ್ಯ ಕೊನೆ.

—ಜ (ಅಂತ್ಯ=ನೀಚನಾಗಿ+ಜ=ಹುಟ್ಟಿದವ) ಚಂಡಾಲ, ಹೊಲೆಯ; ಬೇಡ ಮೊದಲಾದ ನೀಚ ಜಾತಿ.

ಅಂದ ಚೆಲುವು, ಸೌಂದರ್ಯ, ಸೊಗಸು.

—ವಿಗರು ಚೆಲುವಿಗರು.

ಅಂದಡೆ ಅಂದೊಡೆ, ಅಂದರೆ.

ಅಂದಣ (ಳ) ಪಲ್ಲಕ್ಕಿ, ಪಾಲಕಿ.

ಅಂದದಿ ಹಾಗೆ, ಹೋಲಿಕೆಯಿಂದ.

ಅಂದವಳಿ ಚೆಲುವನ್ನು ಕಳೆದುಕೊಳ್ಳು, ಚೆಲುವುಗೆಡು.

ಅಂದವೇರು ಚೆಲುವು ಹೆಚ್ಚು.

ಅಂದಂದಿಗು ಆಗಾಗ್ಗೆ.

ಅಂದಿಗೆ ಕಾಲಕಡಗ, ಪಾದಾಭರಣ; ಅಂದಳ, ಪಲ್ಲಕ್ಕಿ, ಪಾಲಕಿ.

ಅಂದು ಆ ಹೊತ್ತು.

ಅಂದುಗೆ (ದ್ಭ) ಅಂದುಕ (ಸಂ), ಕಾಲು ಕಡಗ, ಪೈಜಣಿ.

ಅಂದೊಡೆ ಅಂದರೆ.

ಅಂಧ ಕುರುಡ, ಕತ್ತಲೆ; ನೀರು.

ಅಂಧಕ ಕುರುಡ; ದೇಶಭೇದ; ಯದುವಂಶದ ಒಬ್ಬ ರಾಜ; ದೈತ್ಯಭೇದ; ಹಿರಣ್ಯಾಕ್ಷನ ಮಗ.

ಅಂಬಕ (ನಕ್ಷತ್ರ ಸ್ಥಾನದ ವರೆಗೆ ತ್ವರೆಯಾಗಿ ಹೋಗುವುದು) ಕಣ್ಣು; ತಂದೆ; ತಾಮ್ರ.

ಅಂಬರ (ಅಂಬ=ಶಬ್ದವನ್ನು+ರ=ಧರಿಸಿರುವುದು) ಶಬ್ದಗುಣವುಳ್ಳದು, ಶಬ್ದಕ್ಕೆ ಆಶ್ರಯಸ್ಥಾನವಾದ ಆಕಾಶ; (ಮರ್ಮರ ಶಬ್ದ ಕೊಡುವ) ವಸ್ತ್ರ.

ಅಂಬರೀಷ ಹುರಿಯುವ ಓಡು, ಸೂರ್ಯ ವಂಶದ ಒಬ್ಬ ರಾಜ.

ಅಂಬಾ (ಸಂ) ಅಮ್ಮ (ದ್ಭ), ತಾಯಿ; ದುರ್ಗೆ; ಕಾಶೀರಾಜನ ಹಿರಿಯ ಮಗಳಿಗೂ ಈ ಹೆಸರಿದೆ. ಇವಳನ್ನು ಇವಳ

ಇವಳ ಊರಲ್ಲಿ ಅಂಬಿಕೆ, ಅಂಬಾಲಿಕೆಯ ರೊಡನೆ ಭೀಷ್ಮನು ಸ್ವಯಂವರದಲ್ಲಿ ಗೆದ್ದನು. ಅಂಬೆ ಸಾಲ್ವ ದೇಶದ ಅರಸನನ್ನು ಪ್ರೀತಿಸಿದಳು. ಭೀಷ್ಮನು ಅವಳನ್ನು ತನ್ನ ತಮ್ಮನಿಗೆ ಮದುವೆ ಮಾಡಿಕೊಡಬೇಕೆನ್ನಲು ಅವಳು ಒಪ್ಪಲಿಲ್ಲ. ಅತ್ತ ಅವಳು ಸಾಲ್ವನಲ್ಲಿಗೆ ಹೋದರೆ ಅವನು ತಿರಸ್ಕರಿಸಿದನು. ಇದರಿಂದ ಕುಪಿತಳಾದ ಅವಳು ಮುಂದೆ ಶಿಖಂಡಿಯಾಗಿ ಹುಟ್ಟಿ ಭೀಷ್ಮನ ಪಾಲಿನ ಮೃತ್ಯುವಾದಳು.

ಅಂಬಾರಿ ಆನೆಯ ಮೇಲೆ ಹಾಕುವ ಮಂಟಪ.

ಅಂಬಿ ದೋಣಿ.

—ಗ ದೋಣಿ ನಡೆಯಿಸುವವ, ಬೆಸ್ತ, ಮೀನು ಹಿಡಿಯುವವ.

ಅಂಬಿರಿವಿಡು ಧಾರೆಯಾಗಿ ಇಳಿ.

ಅಂಬಿಲ ಅಂಬಲಿ(ದ್ಭ), ಗಂಜಿ.

ಅಂಬು ಬಾಣ; ನೀರು.

—ಜ ನೀರಿನಲ್ಲಿ ಹುಟ್ಟಿದ ಕಮಲ.

—ದ (ಅಂಬು=ನೀರನ್ನು+ದ=ಕೊಡುವುದು) ನೀರನ್ನು ಸುರಿಸುವುದು, ಮೋಡ, ಮುಗಿಲು.

—ದ ರಥ ಇಂದ್ರ.

—ಧರ ಮುಗಿಲು.

—ಧಿ (ಅಂಬು=ನೀರಿಗೆ ಆಶ್ರಯವಾದುದು) ಸಮುದ್ರ, ಸಾಗರ.

—ರುಹ (ಅಂಬು=ನೀರಲ್ಲಿ+ರುಹ=ಹುಟ್ಟುವುದು) ಕಮಲ.

—ಸರಣ ನೀರಿನ ಹರಿದಾಟ.

ಅಂಬೆ ಅಜ್ಜಿ, ಅಮ್ಮ, ತಾಯಿ.

ಅಂಬೆಗಾಲು ಎರಡು ಕೈ ಮತ್ತು ಎರಡು ಮೊಣಕಾಲುಗಳಿಂದ ನಡೆಯುವಿಕೆ.

ಅಂಬೇರು ಬಾಣದ ಗಾಯ.

ಅಂಶ ಭಾಗ.

—ಅಂಶ (ಅಂಶಾಂಶ) ಭಾಗದ ಭಾಗ.

ಅಂಶಕ ಬಿಂಧು, ಭಾಗ, ಸೌರಮಾನ ದಿನ.

ಅಂಶಚಕ್ರ ಜ್ಯೋತಿ ಸಂಬಂಧವಾದ ಆಕೃತಿ, ಸಿದ್ಧಾಂತಶಾಸ್ತ್ರದ ವಿಚಾರವಾಗಿ ಬರೆದ ಚಿತ್ರ ಅಥವಾ ಯಂತ್ರ.

ಅಂಶಾವತಾರ ದೇವತಾಶಕ್ತಿಯ ಒಂದು ಭಾಗವು ಕಾರಣಾಂತರದ ಮೇಲೆ ಭೂಮಿಯಲ್ಲಿ ಅವತರಿಸುವುದು; ಹುಟ್ಟುವುದು. ತೀರ ಸುಗುಣಿಯಾದವನನ್ನು ಹೀಗೆ ತಿಳಿಯುವದುಂಟು.

ಅಂಶು ಕಿರಣ.

—ಜಾಲ ಕಿರಣ ಸಮೂಹ.

—ಧರ ಕಿರಣವನ್ನು ಧರಿಸಿದವ, ಸೂರ್ಯ.

—ಮಾಲಿ (ಕಿರಣದ ಸರವುಳ್ಳವ) ಸೂರ್ಯ.

ಅಂಶುಕ ವಸ್ತ್ರ, ನಯವಾದ ಬಟ್ಟೆ, ನಯವಾದ ಬಿಳಿಯ ಬಟ್ಟೆ.

ಅಂಶುಮತ್ಫಲ (ಅಂಶುಮತ್=ಕಾಂತಿಯುಳ್ಳ+ಫಲ=ಹಣ್ಣಾಗುವುದು) ಕಾಂತಿಯುಳ್ಳ ಹಣ್ಣಾಗುವ, ಬಾಳೆ.

ಅಂಶುಮಾಲೆ ತೇಜೋಮಂಡಲ, ಪ್ರಭಾವಳಿ.

ಅಂಸ ಭುಜ, ಹೆಗಲು.

—ಕೂಟ ಎತ್ತಿನ ಭುಜ, ಹಿಣಿಲು.

ಅಂಸಲ ಬಲವಾದ ಭುಜ ಶಿರಸ್ಸುಳ್ಳವ; ಬಲಿಷ್ಠ, ಗಟ್ಟಿಮುಟ್ಟಾದವ, ಬಹಳ ಮಾಂಸವುಳ್ಳವ.

ಅಂಹತಿ ನೋವು; ವಿಪತ್ತು; ಬೇನೆ.

# ಆ

ಆಕರ ಆಗರ(ದ್ಭ), ಖನಿ; ಮೂಲ, ಉತ್ಪತ್ತಿ ಸ್ಥಾನ.

ಆಕರಿಸು ಸ್ವೀಕರಿಸು, ಒಪ್ಪು.

ಆಕರಣೆ ಕರೆಯುವಿಕೆ; ಪಂಥ ಹೂಡುವಿಕೆ.

ಆಕರ್ಣ ಕಿವಿ ತುಂಬ.

—ಅಂತ ಕಿವಿತುಂಬ, ಕಿವಿಯ ವರೆಗೆ.

ಆಕರ್ಷ ಸೆಳೆತ; ಬಿಲ್ಲು; ಪತನ.

—ಣೆ ಸೆಳೆಯುವಿಕೆ.

ಆಕಲನ ಸೇರಿಸುವಿಕೆ.

ಆಕಲ್ಪ ಆಭರಣ.

ಆಕಸ್ಮಿಕ ಪೂರ್ವಸೂಚನೆಯಿಲ್ಲದ, ಹಠಾತ್ತಾದ.

ಆಕಳ್ (ಆಕಳು), ಆವು, ಹಸು, ದನ.

ಆಕಂಠಪೂರ ಕೊರಳು ತುಂಬ.

ಆಕಾರ ರೂಪ; ಆಗಾರ.

ಆಕಾಶ ಬಾನು, ವ್ಯೋಮ, ಗಗನ, ಶೂನ್ಯ.

—ಗಾಮಿ ಆಕಾಶದಲ್ಲಿ ಹೋಗುವ.

ಆಕಾಶಗಂಗೆ ಗಗನದಲ್ಲಿ ಬೆಳ್ಳಗೆ ಕಾಣುವ ತಾರಾಕೂಟ, ದುಗ್ಧಪಥ.

ಆಕಾಶವಾಣಿ ಅಶರೀರವಾಣಿ; ರೇಡಿಯೋ.

ಆಕೀರ್ಣ ದಟ್ಟವಾದ; ತುಂಬಿದ.

ಆಕುಲ ತುಂಬಿರುವ; ಗಲಿಬಿಲಿ; ವ್ಯಥೆ.

ಆಕೃತಿ ಆಕಾರ, ರೂಪ.

ಆಕೃಷ್ಟ ಸೆಳೆಯಲ್ಪಟ್ಟ.

ಆಕೆವಾಳ ಶೂರ, ಪರಾಕ್ರಮಿ.

—ತನ ಶೂರತನ.

ಆಕೇಕರ ಅರೆತೆರೆದ ಕಡೆಗಣ್ಣ ನೋಟ.

ಆಕ್ರಮಣ ಆವರಿಸುವಿಕೆ.

ಆಕ್ರಂದನ ಅಳುವಿಕೆ, ರೋದನ.

ಆಕ್ರಾಂತ ಹಿಡಿಯಲ್ಪಟ್ಟ, ಆವರಿಸಲ್ಪಟ್ಟ.

ಆಕ್ರೋಶ ಗರ್ಜನೆ; ಸಿಟ್ಟಿಂದ ಕೂಡಿದುದು.

ಆಕ್ಷಿಪ್ತ ಕೂಡಿದ.

ಆಕ್ಷೇಪ ಅಡ್ಡಿ; ಕಂಪನ; ದೂಷಣೆ; ಸೂತ್ರ, ಮುತ್ತು ಪೋಣಿಸುವ ದಾರ.

ಆಖಂಡಲ (ಖಂಡ=ಸೀಳುವ) ಇಂದ್ರ.

ಆಖಾತ ಸ್ವಾಭಾವಿಕವಾದ ನೀರಿನಾಶ್ರಯ, ಬಾಯಿ ಅಗಲವಾಗಿದ್ದು ಬರುತ್ತ ಬರುತ್ತ ಸಪುರವಾಗುವ ಕಡಲ ಭಾಗ. ಉದಾ: ಬಂಗಾಳಾಖಾತ.

ಆಖು (ಆ=ಎಲ್ಲಾಕಡೆ + ಖು = ಅಗೆಯುವುದು) ಮನೆಯಲ್ಲಿ ಎಲ್ಲಾ ಕಡೆ ಅಗೆಯುವುದು; ಇಲಿ.

ಆಖುರಥ ಇಲಿದೇರ, ಗಣಪತಿ.

ಆಖೇಟ (ಆ=ಎಲ್ಲಾಕಡೆ+ ಖೇಟ= ಪ್ರಾಣಿಗಳಿಗೆ ಭಯವನ್ನುಂಟುಮಾಡುವುದು) ಎಲ್ಲಾ ಕಡೆಯಿಂದ ಪ್ರಾಣಿಗಳನ್ನು ಬೆದರಿಸುವುದು, ಬೇಟೆ.

—ಕ ಬೇಟೆಗಾರ.

ಆಖೈರು ಕೊನೆ.

ಆಖ್ಯಾ (ಆಖ್ಯೆ) ಹೆಸರು; ಕಾಲಮಿತಿ.

—ತ ಹೇಳಿದ, ಎಣಿಸಲ್ಪಟ್ಟ; ಪ್ರಸಿದ್ಧ, ಕ್ರಿಯಾಪದಕ್ಕೆ ಸೇರಿದ.

—ನ ಕಥೆ.

ಆಖ್ಯಾಯಿಕೆ ಪುಟ್ಟ ಕಥೆ.

ಆಗಡ ಆಟ; ವಿನೋದ, ಪರಿಹಾಸ.

ಆಗಡೆ ಆಗಡು, ಆಗಲೆ, ಆಗಳೆ.

ಆಗತ ಬಂದ.

ಆಗಮ ತಂತ್ರಶಾಸ್ತ್ರ; ಬರುವಿಕೆ.

—ಜ್ಞ ಆಗಮಗಳನ್ನರಿತವ.

—ನ ಹತ್ತಿರ ಸೇರುವಿಕೆ, ಬರುವಿಕೆ; ಶಾಸ್ತ್ರ.

ಆಗರ (ದ್ಭ) ಆಕರ (ಸಂ), ಖನಿ, ಗನಿ.

ಆಗರ್ಭ ಹುಟ್ಟುವಲ್ಲಿಂದಲೇ.

ಆಗಸ (ದ್ಭ) ಆಕಾಶ (ಸಂ), ಬಾನು.
ಆಗಾಮಿಕ ಮುಂದೆ ಬರುವ.
ಆಗಾರ ಮನೆ.
ಆಗು ಉಂಟಾಗು.
—ಇಕೆ ಸಮಯಕ್ಕೆ ಒದಗುವಿಕೆ.
ಆಗುಳಿಕೆ (ಆಕಳಿಕೆ) ಆವಳಿಕೆ, ಆಯಾಸ–ಬೇಸರ–ನಿದ್ದೆಗಳಿಂದ ಬರುವ ನಿಡಿದುಸಿರು.
ಆಗ್ಗ ಆಗ.
ಆಗ್ನೇಯ ಅಗ್ನಿಗೆ ಸಂಬಂಧಿಸಿದ; ತೆಂಕು ಮೂಡಲ ನಡುವಿನ ದಿಕ್ಕು.
ಆಗ್ರಹ ಹಿಡಿಯುವಿಕೆ; ಹಟ; ಧ್ಯೇಯ.
ಆಘರ್ಷ ತಿಕ್ಕಾಟ.
ಆಘಾತ ಹೊಡೆತ, ಪೆಟ್ಟು, ಅವಘಡ.
ಆಘ್ರಾಣಿಸು ಮೂಸು, ವಾಸನೆ ನೋಡು.
ಆಚಮನ ಅಂಗೈಯಲ್ಲಿ ಹಾಕಿಕೊಂಡು ಮಂತ್ರಪೂರ್ವಕ ನೀರು ಕುಡಿಯುವುದು; ಸಂಧ್ಯಾಸಮಯದ ಒಂದು ವಿಧಿ.
ಆಚಯ ಕೂಡಿಸುವಿಕೆ.
ಆಚಂದ್ರ ಚಂದ್ರನಿರುವ ತನಕ.
—ಅರ್ಕ ಚಂದ್ರಸೂರ್ಯರಿರುವ ತನಕ.
—ತಾರ ಚಂದ್ರತಾರೆಗಳಿರುವ ತನಕ.
ಆಚಾರ ನಡತೆ.
ಆಚಾರ್ಯ ಧರ್ಮಗುರು, ಅಧ್ಯಾಪಕ.
ಆಚ್ಛಾದನೆ ಹೊದಿಕೆ; ಮುಚ್ಚುವಿಕೆ, ಮರೆ ಮಾಡುವಿಕೆ.
ಆಚ್ಯ ಬಾಗಿದ.
ಆಜನ್ಮ ಆಜೀವ, ಬದುಕಿರುವ ವರೆಗೆ.
ಆಜಾನುಬಾಹು (ಜಾನು=ಮೊಣಕಾಲು) ನಿಂತರೆ ಮೊಣಕಾಲಿಗೆ ಮುಟ್ಟುವಷ್ಟು ಉದ್ದ ತೋಳುಳ್ಳವ.
ಆಜಿ ಯುದ್ಧ.
—ಭೂಮಿ ಯುದ್ಧಭೂಮಿ.
ಆಜೀವ ಜೀವದಲ್ಲಿರುವ ವರೆಗು.
ಆಜೇಯ ಜಯಿಸಲಾಗದವನು.
ಆಜ್ಞಾಪನೆ ಅಪ್ಪಣೆ, ಅನುಜ್ಞೆ.
ಆಜ್ಞೆ ಅಪ್ಪಣೆ.
ಆಜ್ಯ ಹೊಯ್ಯಲ್ಪಡುವುದು; ತುಪ್ಪ.
ಆಟ ಕ್ರೀಡೆ, ನಾಟಕ.
—ಕುಳಿ ಆಟದಲ್ಲೇ ಪ್ರೀತಿಯುಳ್ಳವ.
—ಗಾರ ಆಡುವವ.
ಆಟರ್ ಮೇಲೆ ಬೀಳು.
ಆಟಲಿಕ ಆಟದಲ್ಲೂ ನಾಟಕದಲ್ಲೂ ಪಾತ್ರ ವಹಿಸುವವ, ನಟ; ಧೂರ್ತ.
ಆಟಲು ಚಲಿಸುವಿಕೆ.
ಆಟೆಂದಳರುತ್ತ ವಿಲಾಸದೊಡನೆ ವೇಗವಾಗಿ ಬಂದು.
ಆಟೆಂದು ಮೇಲೆ ಬಿದ್ದು.
ಆಟಿಕೆ ಆಟ.
ಆಟಿಸು ಅಪೇಕ್ಷಿಸು, ಬಯಸು.
ಆಟೋಪ ಸಂಭ್ರಮ; ಗರ್ವ; ಆಡಂಬರ.
ಆಡಳಿತ ಆಡಳಿತೆ, ವ್ಯವಸ್ಥೆ ನೋಡುವಿಕೆ, ಆಳಿಕೆ.
ಆಡಂಬರ ಗರ್ಜನೆ; ಆನೆಮರಿ; ಹೊರಗಿನ ಸೋಗು.
ಆಡಿಗ ಆವಿಗ; ಆಚೆ ಈಚೆ ತಿರುಗುವವ; ನಟ.
ಆಡಿರ ತೊಂದರೆ.
ಆಡು ಆಟವಾಡು; ಕುಣಿ; ನುಡಿ; ಆಕ್ಷೇಪಿಸು; ಹೋಗು.
—ಕುಳಿ ಆಟಗುಳಿ, ಆಟದಲ್ಲೆ ಮುಳುಗಿದವ.
ಆಡುಂಬೊಲ ಆಡುವ ಹೊಲ; ಇರುವ ಸ್ಥಾನ.
ಆಢ್ಯ ಶ್ರೀಮಂತ, ಸಮೃದ್ಧವಾದ.
ಆಣ್ ಗಂಡಸು.
ಆಣಕ ಸೂಕ್ಷ್ಮ, ಪುಟ್ಟ.
ಆಣತಿ ಅಪ್ಪಣೆ, ಆಜ್ಞಪ್ತಿ (ಸಂ).

ಆಣಿ ಉರುಟಾಗಿರುವಿಕೆ; ಮೊಳೆ; ಗುಂಡಾದುದು; ಶ್ರೇಷ್ಠವಾದುದು.
ಆಣಿಸು ಸೂರ್ಯನ ಕಾವಿಂದ ಬಿರಿ.
ಆಣೆ ಒಂದು ನಾಣ್ಯ; ಒಂದು ವ್ಯಕ್ತಿಯ ಅಭಿಮಾನವನ್ನು ಒಡ್ಡಿ ಹೇಳುವ ಮಾತು, ಆಜ್ಞೆ (ಸಂ).
—ಹಾಕು ಮೀರಲಾಗದ ಯಾವ ಹೆಸರು, ಗೌರವ, ಅಭಿಮಾನಗಳಿಗಾದರೂ ಸಿಕ್ಕಿಸು.
ಆಣ್ಮ ಒಡೆಯ, ಸ್ವಾಮಿ.
ಆತತಖುಕ್ಷ ಕರಡಿಗಳುಳ್ಳ; ವಿಸ್ತಾರವಾದ ಒಂದು ಬಗೆಯ ಮರವುಳ್ಳ; ಬಗ್ಗಿಸಲ್ಪಟ್ಟ ಮರವುಳ್ಳ.
ಆತತಾಯಿ ಕ್ರೂರವಿರೋಧಿ, ಪಾತಕಿ; ಹೆದೆಯೇರಿಸಿದ ಬಿಲ್ಲುಳ್ಳವ.
ಆತಪ ಬಿಸಿಲು.
ಆತಪತ್ರ (ತ್ರ = ರಕ್ಷಿಸುವುದು) ಕೊಡೆ.
ಆತಂಕ ತೊಡಕು, ಪ್ರತಿಭಟನೆ, ಅಡ್ಡಿ.
ಆತಿಥೇಯ ಅತಿಥಿಗೆ ಸಂಬಂಧಿಸಿದವ; ಆದರ.
ಆತು ಅಂತು; ಒದಗಿ; ಸೇರಿ; ಆದರಿಸಿ; ತೆಪ್ಪ; ಒತ್ತು; ಆಧಾರ.
ಆತುರ ಪೀಡಿತ, ತವಕದಿಂದಿರುವವ; ಹಾಗಿರುವ.
ಆತುರಿಯ ಆತುರ, ಅವಸರ.
ಆತೋದ್ಯ (ಆ = ಎಲ್ಲಾ ಕಡೆಯಲ್ಲಿ + ತೋದ್ಯ = ಹೊಡೆಯಲ್ಪಡುವ ವಾದ್ಯ) ವೀಣೆ ಮೊದಲಾದ ತಂತೀವಾದ್ಯ, ಮದ್ದಳೆ ಮೊದಲಾದ ಚರ್ಮವಾದ್ಯ, ಕೊಳಲು ಮೊದಲಾದ ರಂಧ್ರವಾದ್ಯ, ತಾಳ ಮೊದಲಾದ ಕಾಂಸ್ಯವಾದ್ಯ—ಈ ನಾಲ್ಕಕ್ಕೂ ಕೂಡಿ ಈ ಹೆಸರು ಇದೆ.
ಆತ್ಮ ಜೀವ.
—ಜ ತನುಜ, ಮಗ.
—ಜನ್ಮ ಮಗ.
—ಜ್ಞ ತನ್ನನ್ನು ತಾನು ತಿಳಿದವ.
—ತ್ಯಾಗ ತನ್ನ ಮರಣ ತಾನು ತಂದುಕೊಳ್ಳುವುದು, ಆತ್ಮಹತ್ಯೆ.
—ಭವ ಮಗ.
ಆತ್ಮನಿಂದೆ ತನ್ನನ್ನು ತಾನು ನಿಂದಿಸುವುದು.
ಆತ್ಮಸ್ತುತಿ ತನ್ನದೇ ಹೊಗಳಿಕೆ.
ಆತ್ಮೀಯ ತನಗೆ ಬೇಕಾದವ.
ಆತ್ರೇಯ ಅತ್ರಿಯಿಂದ ಉಂಟಾದ.
ಆಥರ್ವಣ ನಾಲ್ಕನೇ ವೇದಕ್ಕೆ ಸಂಬಂಧಿಸಿದ; ಜಾದುಗಾರ.
ಆದಡೆ ಆದೊಡೆ, ಆದರೆ.
ಆದರ ಆದರಣೆ, ಪ್ರೀತಿ; ಮರ್ಯಾದೆ, ಗೌರವ.
ಆದರ್ಶ ದರ್ಪಣ, ಕನ್ನಡಿ; ಮಾದರಿ.
ಆದಲೆ ಅತ್ತ; ತಲೆಯ ಮುಂಭಾಗ; ಅಗ್ರಭಾಗ.
ಆದಂ ಹಿರಿದು, ವಿಶೇಷವಾಗಿ, ಹೆಚ್ಚಾಗಿ.
ಆದಾಯ ಲಾಭ.
ಆದಿ ಬುಡ, ಪ್ರಾರಂಭ, ಮೊದಲು.
—ಜ ಮೊದಲು ಹುಟ್ಟಿದವ.
ಆದಿಕಾರಣ ಮೂಲಕಾರಣ.
ಆದಿತೇಯ ಅದಿತಿಯ ಮಗ.
ಆದಿತ್ಯ ವೇದಗಳ—ಮಿತ್ರ, ಆರ್ಯಮಾನ್ ಭಗ, ವರುಣ (ದಕ್ಷ), ಅಂಶ, ಇಂದ್ರ, ಸುತರು, ಧಾತ್ರಿ—ಎಂಬ ದೇವತೆಗಳು; ಸೂರ್ಯ.
ಆದಿಪರ್ವ ಮಹಾಭಾರತದ ಮೊದಲಿನ ಅಧ್ಯಾಯ.
ಆದಿಶಕ್ತಿ ಮೊದಲಿನ ಶಕ್ತಿ, ದುರ್ಗಿ; ಕಾಳಿ.
ಆದಿಶೇಷ ಮಹಾಶೇಷ.
ಆದಿಷ್ಟ ಆಜ್ಞಪ್ತ, ಹೇಳಲ್ಪಟ್ಟ.
ಆದೇಶ ವಿಧಿ; ಒಂದರ ಬದಲಾಗಿ ಬರುವ ಮತ್ತೊಂದು.
ಆದ್ಯ ಮೊದಲಿನ.

ಆದ್ಯೋತ ಬೆಳಕು, ವೈಭವ.
ಆಧಾನ ಇಡುವಿಕೆ, ಇರಿಸುವಿಕೆ, ನಡುವಿಕೆ.
ಆಧಾರ ಆಶ್ರಯ, ಯಾವುದರ ಮೇಲೆ ನಿಂತಿದೆಯೋ ಅದು.
ಆಧಿ ಮನೋವ್ಯಥೆ, ಕಷ್ಟ, ದುಃಖ.
ಆಧಿಕ್ಯ ಹೆಚ್ಚಿಕೆ; ಪಾತ್ರ; ಪಾಯ.
ಆಧಿಪತ್ಯ ಅರಸುತನಕ್ಕೆ ಒಳಗಾದ, ಅಧಿಕಾರಕ್ಕೊಳಗಾದ ಪ್ರಾಂತ.
ಆಧಿದೈವಿಕ ದೇವತೆಯೇ ಮುಖ್ಯ ಕಾರಣವಾಗಿ ಉಳ್ಳುದು, ಪ್ರಕೃತಿ ಸಂಬಂಧವಾಗಿ ಹುಟ್ಟುವ ಅತಿವೃಷ್ಟಿ ಮೊದಲಾದುವು.
ಆಧಿಭೌತಿಕ ಭೂತ ಎಂದರೆ ಪ್ರಾಣಿಗಳೇ ಮುಖ್ಯ ಕಾರಣವಾಗಿ ಉಳ್ಳುದು; ಹುಲಿ, ಕರಡಿ, ಹೂ, ಮಿಡಿತೆ ಮೊದಲಾದವುಗಳಿಂದ ಹುಟ್ಟುವ ಪೀಡೆ ಮೊದಲಾದುವು.
ಆಧೀನ ವಶವಾದ, ಒಳಗಾದ.
ಆಧೇಯ ಆಶ್ರಯಿಸಲ್ಪಟ್ಟ, ಒಂದು ವಸ್ತುವನ್ನು ಆಶ್ರಯಿಸಿ ಇರುವ ಪದಾರ್ಥ.
ಆಧೋರಣ ಚತುರವಾಗಿ ನಡೆಯಿಸಬಲ್ಲವ, ಆನೆಯ ಮಾವುತ, ಮಾವಟಿಗ.
ಆಧ್ಯಾತ್ಮ ಆತ್ಮವೇ ಮುಖ್ಯ ಕಾರಣವಾಗಿ ಉಳ್ಳ; ತನ್ನ ದೇಹದಲ್ಲಿಯೇ ಹುಟ್ಟತಕ್ಕ;
ಆನ್ (ಆನು) ತಾಳು; ಅವಲಂಬಿಸು; ಒಡ್ಡು; ಆಧಾರ ಪಡಿಸು; ಧಾರಣಮಾಡು; ಅಡ್ಡಬರು; ಇದಿರಿಸು, ಪ್ರತಿಭಟಿಸು; ಧರಿಸು, ಹೊಂದು; ನಾನು.
ಆನಕ ಚರ್ಮದ ಒಂದು ರಣವಾದ್ಯ, ತಮಟೆ, ಭೇರಿ.
ಆನತ ಅಡ್ಡಬಿದ್ದ, ನಮಸ್ಕರಿಸಿದ.
ಆನನ ಮುಖ.
ಆನಂದ ಸಂತೋಷ, ಹರ್ಷ.
ಆನೆ ಒಂದು ಪ್ರಾಣಿ, ದೊಡ್ಡ.
— ಕಡುಪು ಆನೆಗಳ ಗುಂಪು.
ಆನೆಗೊಲೆ ದೊಡ್ಡ ಕೊಲೆ; ಆನೆಯನ್ನು ಕೊಲ್ಲುವುದು.
ಆನೆಯ ಬಲೆ.
ಆನೇತ್ರು ಸಮೀಪ ತರುವ.
ಆಪ ಆಪಸ್, ನೀರು; ಕನ್ಯಾರಾಶಿ; ಧರ್ಮ ಸಂಬಂಧವಾದ ಉತ್ಸವ.
— ಗಾ (ಆಪಗೆ) ನದಿ, ಹೊಳೆ.
ಆಪಣ ಅಂಗಡಿ.
ಆಪತ್ (ಆಪತ್ತು) ಆಪದ, ವಿಪತ್ತು, ಸಂಕಷ್ಟ.
— ಗತ ವಿಪತ್ತಿಗೆ ಗುರಿಯಾದ.
ಆಪದ್ಧರ್ಮ ಆಪತ್ತಿನಲ್ಲಿ ಅನುಸರಿಸುವ ಧರ್ಮ, ನಿತ್ಯವಲ್ಲದ ಧರ್ಮ.
ಆಪನ ಸೇರುವಿಕೆ, ಹೊಂದುವಿಕೆ.
ಆಪನ್ನ ಹೊಂದಿದ.
ಆಪಸ್ತಂಭ ಕೃಷ್ಣಋಜುರ್ವೇದವನ್ನು ಬರೆದ ಪ್ರಾಚೀನ ಕಾಲದ ಒಬ್ಬ ಋಷಿ.
ಆಪಾತ ಬೀಳುವಿಕೆ; ಆಗುವಿಕೆ.
ಆಪಾದನ ಹೊಂದಲ್ಪಟ್ಟ; ಹೊರಿಸುವುದು.
ಆಪಾಳಿತ ವ್ಯಾಪ್ತ.
ಆಪೀಡ ಶಿರೋಭೂಷಣ; ಒತ್ತಿದ್ದು.
ಆಪು ಆಧಾರ, ಆತು, ಊತು.
ಆಪೂರ ತುಂಬ; ತುಂಬುವಿಕೆ.
ಆಪೇಯ ಕುಡಿಯಲು ಯೋಗ್ಯವಾದ.
ಆಪೋಶನ ಊಟಕ್ಕೆ ಮೊದಲು ಮಂತ್ರ ಮೂಲಕ ಕುಡಿಯುವ ನೀರು.
ಆಪೋಹ ಚರ್ಚೆಯಿಂದ ಸಂಶಯನಿವೃತ್ತಿ ಮಾಡುವಿಕೆ.
ಆಪ್ತ ಗೆಳೆಯ; ಯೋಗ್ಯ; ದೊರೆತ.
ಆಪ್ಯ ಪ್ರಾಪ್ಯ, ಹೊಂದುವಂಥ.
ಆಪ್ಯಾಯ ಹೆಚ್ಚಳ, ವೃದ್ಧಿ, ತೃಪ್ತಿ.
— ನ ತುಷ್ಟಿ, ತೃಪ್ತಿ.

—ಮಾನ ಹಿತ, ತೃಪ್ತಿಕೊಡುವ.
ಆಪ್ಲವ ಸ್ನಾನ, ಜಳಕ.
ಆಭ ಸಮಾನ.
ಆಭರಣ ಸಮಾನ; ಅಲಂಕಾರದ ಒಡವೆ.
ಆಭಾರ್ಯ ಆಭರಣ.
ಆಭಾವ ಇರುವಿಕೆ; ರೀತಿ.
ಆಭಾಸ ಬೆಳಕು; ರೂಪ; ತೋರಿಕೆ ಮಾತ್ರ; ಅಪಹಾಸಕ್ಕೆ ತಕ್ಕುದು.
ಆಭಿಚಾರ ಮಾಟ.
—ಕ ದುಷ್ಟ ಉದ್ದೇಶವನ್ನು ಸಾಧಿಸುವುದು, ಮಾರಣ, ಅನ್ಯರಿಗೆ ಕೇಡೆಣಿಸಿ ಮಾಡುವ ಕರ್ಮ.
ಆಭೀರ ಗೊಲ್ಲ, ದನಕಾಯುವ ಜಾತಿಯವ.
—ಪಲ್ಲಿ ಗೊಲ್ಲರ ಹಳ್ಳಿ, ದನಕಾಯುವವರ ಹಳ್ಳಿ.
ಆಭೀಲ ಭಯಂಕರ (ಆ=ಎಲ್ಲಾ ಕಡೆ+ಭೀ = ಭಯವನ್ನು + ಲ = ಕೊಡುವುದು) ಎಲ್ಲ ಕಡೆ ಭಯವನ್ನು ಕೊಡುವುದು; ಕಷ್ಟತರವಾದ.
—ಶೀಲ ಅತ್ಯುಗ್ರ ಸ್ವಭಾವದ.
ಆಭೋಗ ವಿಸ್ತಾರ; ಪರಿಪೂರ್ಣತ್ವ; ವರುಣನ ಕೊಡೆ; ಗೀತಾಸಮಾಪ್ತಿ.
ಆಮದು ಒಳಕ್ಕೆ ಬರುವಂಥದು.
ಆಮನ ಹಸಿ; ಅಯುಕ್ತ; ಮಲ.
ಆಮಯ ಕಾಯಿಲೆ, ಅಸ್ವಸ್ಥ.
ಆಮರಣ ಮರಣದ ತನಕ.
ಆಮಲಕ ಆಮಳಕ, ನೆಲ್ಲಿ ಕಾಯಿ.
ಆಮಂತ್ರಣ ಕರೆ, ಹೇಳಿಕೆ.
ಆಮಿಕ್ಷ್ಯ ಹಾಲೊಳಗೆ ಮೊಸರು ಹಾಕಿ ಮಾಡಿದ ಹೆಪ್ಪು.
ಆಮಿಷ (ಸಂ) ಆಮಿಸ(ದ್ಭ), ರೋಗ ಹುಟ್ಟಸುವುದು, ಮಾಂಸ; ಕಾಣಿಕೆ; ಲಂಚ; ಲೋಭ; ಭೋಜನ, ಊಟ.
ಆಮಿಷಾಶಿ (ಆಮಿಷ = ಮಾಂಸವನ್ನು + ಅಶಿ = ತಿನ್ನುವವ) ಮಾಂಸ ತಿನ್ನುವವ, ಮೀನು ತಿನ್ನುವವ.
ಆಮುಷಿಕ (ಅಮುಷ್ಮಿಕ = ಪರಲೋಕ) ಪರಲೋಕಕ್ಕೆ ಸಂಬಂಧಿಸಿದ, ಪರಲೋಕದಲ್ಲಿದ್ದ; ಬೇರೊಂದು ಜನ್ಮವನ್ನು ಪಡೆದ ಪ್ರಾಣಿ.
ಆಮುಷ್ಯಾಯಣ ಉತ್ತಮ ವಂಶದಲ್ಲಿ ಹುಟ್ಟದವ ಅಥವಾ ಚರಿತ್ರೆಯಲ್ಲಿ ಪ್ರಸಿದ್ಧನಾದ ಪುರುಷನ ಸಂತತಿ.
ಆಮೂಲಾಗ್ರ (ಆಮೂಲ = ಬೇರಿಂದ + ಅಗ್ರ = ತುದಿಯ ವರೆಗೆ), ಬೇರಿಂದ ತುದಿಯ ತನಕ, ಸಂಪೂರ್ಣ.
ಆಮೆ ಆವೆ, ಕಮಠ.
ಆಮೋದ (ಮೋದ = ಸಂತೋಷ) ಪರಿಮಳ; ಸಂತೋಷ, ಆನಂದ.
ಆಮ್ನಾಯ (ಪರಂಪರೆಯಿಂದ ಕಲಿಯುತ್ತಿರುವುದು) ವೇದ, ಆಗಮ.
ಆಮ್ರ (ಆಮ = ರೋಗವನ್ನು+ರ = ಹುಟ್ಟಸುವುದು), ಮಾವಿನ ಮರ; ಹುಳಿ.
ಆಮ್ರಾತ ಆಮ್ರಾತಕ, ಅಮಟೆಯ ಮರ.
ಆಮ್ಲ ಹುಳಿ, ಹುಣಿಸೆಮರ.
—ಜನಕ ನೀರಿಗೆ ಕಾರಣವಾದ ಒಂದು ಅನಿಲ.
ಆಯ್ (ಆಯು) ಆರಿಸು, ತೆಗೆದುಕೊಳ್ಳು.
—ಕೆ ಆಯುವಿಕೆ, ಹೆಕ್ಕುವಿಕೆ.
ಆಯ ಪ್ರಮಾಣ; ಸಂಪಾದನೆ; ವಿಶಾಲ; ಸಿದ್ಧತೆ; ಯೋಗ್ಯತೆ; ಅನುಕೂಲ; ಲಾಭ; ಆಕಾರ; ಪಾಯ.
ಆಯಕಟ್ಟು ಲೋಭ; ಅಸ್ತಿವಾರ.
—ಗಾರ ಚೊಕ್ಕವಾಗಿ ಕೆಲಸಮಾಡುವವ, ಲೋಭಿ.
ಆಯುತ ಯೋಗ್ಯ ರೀತಿ; ವಿಸ್ತಾರ; ಉದ್ದ

ವಾದ; ನಾಲ್ಕು ಮೈ, ನಾಲ್ಕು ಸಮ ಕೋನಗಳುಳ್ಳ ಒಂದು ಆಕೃತಿ.

ಆಯತನ ಸ್ಥಾನ; ಮನೆ; ಆಶ್ರಯ, ವಿಶ್ರಾಂತಿ ಸ್ಥಳ; ಯಜ್ಞಶಾಲೆ; ದೇವಾದಿ ವಂದನ ಸ್ಥಾನ.

ಆಯತಾಕ್ಷಿ ವಿಶಾಲವಾದ ಕಣ್ಣುಳ್ಳವಳು.

ಆಯತಾಂಬಕ (ಆಯತ=ವಿಸ್ತಾರವಾದ+ ಅಂಬಕ = ಕಣ್ಣುಳ್ಳ) ವಿಸ್ತಾರವಾದ ಕಣ್ಣುಳ್ಳವ.

ಆಯತಿ ಪರಾಕ್ರಮ; ಉನ್ನತಿ; ವಿಸ್ತಾರ; ಗಾಂಭೀರ್ಯ.

—ಕೆ ಅನುಕೂಲ ಸ್ಥಿತಿ; ಸುಖ; ಶ್ರೇಷ್ಠ ವಾಗಿರುವಿಕೆ.

ಆಯತ್ತ ಅಧೀನ, ವಶ; ಒದಗಿರುವ.

ಆಯತ್ತಿ ಸಾಮರ್ಥ್ಯ; ಗಡಿ; ವಿಸ್ತಾರ.

ಆಯಸ ಆಯಾಸ, ದಣಿವು; ಕಷ್ಟ.

ಆಯಾಮ ಉದ್ದ.

ಆಯಿ (ಆಯ್) ಆಯು, ಆರಿಸು, ಹೆಕ್ಕು;

—ಕೆ ಆಯಿಕೆ, ಚುನಾವಣೆ, ಹೆಕ್ಕುವಿಕೆ.

ಆಯು ಆಯುಷ್ಯ, ಬಾಳ್ವೆ; ಹೆಕ್ಕು.

—ರೇಖೆ ಆಯುಷ್ಯಸೂಚಕ ಗೆರೆ.

ಆಯುಗ ಸೇರುವಿಕೆ; ಆಯುಧಗಳ ಹಿಡಿ.

ಆಯುಧ ಶಸ್ತ್ರಸಾಧನ, ಕಾದಾಟದ ಸಲ ಕರಣೆ.

ಆಯುರ್ವೇದ ಒಂದು ವೈದ್ಯಶಾಸ್ತ್ರ.

ಆಯುರ್ಹೋಮ ದೀರ್ಘಾಯುವಾಗಲು ಮಾಡುವ ಹೋಮ.

ಆಯುಷ್ಕರ್ಮ ಚೌಲ, ಕ್ಷೌರ.

ಆಯುಸ (ದ್ಭ) ಆಯುಷ್ಯ (ಸಂ).

ಆಯೋಗ ಸೇರುವಿಕೆ.

ಆಯ್ಕುಳಿ ಆಯುವಿಕೆ, ಸಂಗ್ರಹಿಸುವಿಕೆ; ಸಂಗ್ರಹ.

ಆರ್ (ಆರು) ತೃಪ್ತಿಯಾಗು; ಗರ್ಜಿಸು; ತುಂಬು; ನೇಗಿಲಿಗೆ ಎತ್ತಿನ ಜತೆಯನ್ನು ಜೋಡಿಸು; ಒಣಗು; ಆರ್ತಧ್ವನಿ, ಕೂಗು; ತಾಳಿಕೊಳ್ಳು, ಶಕ್ಯವಾಗು; ಸಮರ್ಥನಾಗು; ಯಾರು.

ಆರ (ದ್ಭ) ಹಾರ (ಸಂ), ಸರ.

ಆರಡಿ ಆರು ಪಾದಗಳುಳ್ಳುದು, ಭ್ರಮರ; ತುಂಬಿ; ನಳ್ಳಿ; ಏಡಿ; ತೊಂದರೆ; ಚಾಡಿ.

—ಎದೆ ತುಂಬಿಯ ಹೆದೆ; ಹಗ್ಗ.

—ಎದೆಯ ಕಾಮ, ಮನ್ಮಥ.

ಆರಣ್ಯಕ ಅರಣ್ಯಸಂಬಂಧವಾದ; ಉಪ ನಿಷತ್ತುಗಳು, ಅರಣ್ಯವಾಸಿಗಳಾದ ಋಷಿ ಗಳಿಂದ ಬರೆಯಲ್ಪಟ್ಟ ತತ್ವ ಗ್ರಂಥ ಗಳು.

ಆರತ ನಿಲ್ಲಿಸಲ್ಪಟ್ಟ, ಶಾಂತ.

ಆರತಿ (ದ್ಭ) ಆರಾತ್ರಿಕ (ಸಂ), ರಾತ್ರಿಯಲ್ಲಿ ಮಾತ್ರ ಪ್ರಕಾಶಿಸುವುದು, ನೀಲಾಂಜನ.

ಆರಬು ಆರ್ಭಟೆ.

ಆರಬ್ಧ ತೊಡಗಿದ.

ಆರಯ್ ಹುಡುಕು, ಅನ್ವೇಷಿಸು; ಆಲೋ ಚಿಸು, ವಿಚಾರಿಸು; ಊಟಮಾಡು.

—ಕೆ ರಕ್ಷಣೆ, ಶುಶ್ರೂಷೆ.

ಆರವಾರ ದೊಡ್ಡ ಗದ್ದಲ.

ಆರವೆ (ದ್ಭ) ಆರಾಮ (ಸಂ), ತೋಟ, ಉದ್ಯಾನ.

ಆರಂಭ ಕೃಷಿ, ವ್ಯವಸಾಯ; ಉದ್ಯೋಗ; ಪ್ರಾರಂಭ, ಮೊದಲು.

ಆರಾಜಿಸು ಪ್ರಕಾಶಿಸು; ತೋರು; ಶೋಭಿಸು.

ಆರಾತ್ ದೂರ; ಸಮೀಪ.

ಆರಾತಿ ಹಗೆ, ಶತ್ರು.

ಆರಾತೀಯ ಪ್ರಾಚೀನ.

ಆರಾತ್ರಿಕ ಆರತಿ (ದ್ಭ), ನೀಲಾಂಜನ.

ಆರಾಧನೆ (ಆರಾಧನ) ಪೂಜೆ.

ಆರಾಮ (ರಾಮ=ವಿನೋದ ಪಡುವ ಜಾಗ)

ನಟ್ಟು ಬೆಳಸಿದ ತೋಟ, ಉಪವನ; ಆರವೆ(ದ್ಭ), ವಿಶ್ರಾಂತಿ, ಸಂತೋಷ, ಸುಖ.

ಆರಾವ ಧ್ವನಿ; ಕಿರಿಚಾಟ.

ಆರಿಸು ಆಯು, ಹುಡುಕು, ಹೆಕ್ಕು; ಸಮಾಧಾನ ಪಡಿಸು; ಒಣಗಿಸು.

ಆರು ವೃಕ್ಷಭೇದ; ಹಂದಿ; ಏಡಿ; ನದಿ; ಯಾರು; ಆರನೆಯ ಸಂಖ್ಯೆ; ನೇಗಿಲಿಗೆ ಜೋಡಿಸಿದ ಎತ್ತಿನ ಜತೆ; ಸಮರ್ಥನಾಗು; ಒಣಗು, ನಿರ್ದ್ರವವಾಗು; ಉಚ್ಚಸ್ವರದಿಂದ ಕೂಗು.

—ಹೇಳ್ ಕೂಗಿಹೇಳು, ಯಾರೆಂದು ಹೇಳು.

ಆರೂಢ ಏರಿದ, ಹತ್ತಿದ.

ಆರೈಸು ಊಟಮಾಡು.

ಆರೋಗಣ ಆರೋಗಣೆ, ಭೋಜನ, ಊಟ.

ಆರೋಗ್ಯ ರೋಗವಿಲ್ಲದಿರುವಿಕೆ.

ಆರೋಪ ತಪ್ಪು ಹೊರಿಸುವುದು; ಸಂಸ್ಥಾಪನೆ; ಕಲ್ಪಿಸುವುದು; ಬಿಲ್ಲಿಗೆ ಹೆದೆ ಏರಿಸುವುದು.

ಆರೋಹ ಆರೋಹಣ; ಉತ್ತಮ; ಉನ್ನತ ಸ್ಥಾನ, ಏರಿಕೆ; ಸ್ತ್ರೀಯ ನಿತಂಬ.

—ಣ ಅಡರುವಿಕೆ, ಹತ್ತುವಿಕೆ, ಏರುವಿಕೆ; ಸಂಗೀತದಲ್ಲಿ ಸ್ವರಗಳ ಏರಿಳಿಕೆ.

ಆರ್ಗಂ ಯಾರಿಗೂ.

ಆರ್ಚೀಕ ಋಷೀಕನ ಮಗ.

ಆರ್ಣವ ಅರ್ಣವ(ಅರ್ಣ=ನೀರು), ಸಮುದ್ರ, ಸಾಗರ.

ಆರ್ಜನೆ ಗಳಿಮೆ, ಸಂಪಾದನೆ.

ಆರ್ಜವ ಋಜು ಗುಣ, ಸರಳ ಸ್ವಭಾವ, ನಿಷ್ಕಪಟ, ಪ್ರಾಮಾಣಿಕತನ.

ಆರ್ತ ಸಮರ್ಥ; ಬಂಧಿತ; ಪೀಡಿತ, ಸಂಕಟಕ್ಕೊಳಗಾದ, ದುಃಖಪೀಡಿತ.

—ತೆ ಆಸೆ; ಪೀಡೆ.

—ಸ್ವರ ನೋವಿನ ಕೂಗು.

ಆರ್ತವ ಋತುಕಾಲದಲ್ಲಿ ಸ್ತ್ರೀಯರ ಯೋನಿಯಿಂದ ಹೊರಡುವ ದ್ರವ; ಸ್ತ್ರೀಪುಷ್ಪ, ಮುಟ್ಟು.

ಆರ್ತಿ ಬಿಲ್ಲಿನ ತುದಿ; ಬಯಕೆ.

ಆರ್ದು ಪರಾಕ್ರಮದಿಂದ.

ಆರ್ದಿಸು ಗರ್ಜಿಸು, ಭಯಪಡಿಸು.

ಆರ್ದ್ರ ಒದ್ದೆ (ದ್ಭ), ಒದ್ದೆಯಾದ, ತೊಯ್ದ, ನನೆದ.

ಆದ್ರಾ ಒಂದು ನಕ್ಷತ್ರದ ಹೆಸರು.

ಆರ್ಪ(ಆರ್ಪು)ಅದಟು, ಸಾಹಸ,ಸಾಮರ್ಥ್ಯ.

ಆರ್ಭಟೆ ಕೂಗು, ಘರ್ಜನೆ.

ಆರ್ಮ ಆಧಾರಭೂತವಾದುದು.

ಆರ್ಯ ಶ್ರೇಷ್ಠ; ಸ್ವಾಮಿ, ಒಡೆಯ; ಗುರು; ವೃದ್ಧ; ಉತ್ತಮ ಕುಲದಲ್ಲಿ ಹುಟ್ಟಿದವ, (ನಾಟಕದಲ್ಲಿ) ಮಾವ, ಉದಾರಚರಿತ, ಅಜ್ಜ (ದ್ಭ), ಅಯ್ಯ.

—ಪುತ್ರ (ಆರ್ಯ=ಮಾವನ+ಪುತ್ರ=ಮಗ) ಮಾವನ ಮಗ; ಗಂಡ; ಗುರುಪುತ್ರ.

—ಮಿತ್ರ ಶ್ರೇಷ್ಠ.

ಆರ್ಯಭಟ ಬೀಜಗಣಿತವನ್ನುಹಿಂದೂಸ್ಥಾನದಲ್ಲಿ ಮೊದಲಿಗೆ ಬರೆದಾತ. ಕ್ರಿ. ಶ. 476 ರಲ್ಲಿ ಇವನು ಹುಟ್ಟಿದನು. ಆತನು ಆರ್ಯ ಸಿದ್ಧಾಂತವೆಂಬ ಖಗೋಲ ಗ್ರಂಥವನ್ನು ಬರೆದು ಹೆಸರಾದನು.

ಆರ್ಯಾವರ್ತ (ಆವರ್ತ=ಇದ್ದ ಸ್ಥಳ) ಪವಿತ್ರವಾದ ಸ್ಥಳ, ವಿಂಧ್ಯಾಪರ್ವತಕ್ಕೂ ಹಿಮಾಲಯಕ್ಕೂ ನಡುವಣ ಪ್ರದೇಶ, ಒಂದು ವೃತ್ತ ಜಾತಿ.

ಆರ್ಯೆ ಒಂದು ಪದ್ಯ ಜಾತಿ; ನಾಟಕದಲ್ಲಿ ಪೂಜ್ಯಳಾದ ತಪಸ್ವಿನಿ ಮೊದಲಾದವರನ್ನು ಕರೆಯುವಾಗ ಉಪಯೋಗಿಸುವ ಪದ; ಪೂಜ್ಯಳೇ.

ಆರ್ವ ದೊಡ್ಡ ಸ್ವರಮಾಡುವ.
ಆರ್ವರು ಆರು ಜನರು; ಕೂಗುವವರು.
ಆರ್ಷ ಋಷಿಗೆ ಸಂಬಂಧಪಟ್ಟುದು, ಋಷಿಗಳಿಂದ ರಚಿತವಾದ ಧರ್ಮಶಾಸ್ತ್ರ ಮೊದಲಾದುವು; ಸಂಸ್ಕೃತದಲ್ಲಿ ವ್ಯಾಕರಣ ವಿರುದ್ಧವಾದ ಋಷಿಗಳ ಪ್ರಯೋಗ; ವರನಿಂದ ಒಂದು ಗೋವನ್ನೂ ಒಂದು ಎತ್ತನ್ನೂ ತೆಗೆದುಕೊಂಡು ಕನ್ಯೆಯನ್ನು ವಿವಾಹಮಾಡಿಕೊಡುವ ಮದುವೆ.
ಆಲ್ (ಆಲು) ಆರ್, ಕೂಗು, ಆಲಿ, ಬೊಬ್ಬಿರಿ, ಗಟ್ಟಿಯಾಗಿ ಗರ್ಜಿಸು.
— ಅಯ್ಸು ಕೇಳು, ಆಲಿಸು, ಕಿವಿಗೊಡು.
— ಇಡು ಕೂಗಿಕೊಳ್ಳು.
ಆಲ (ಅಲಂಕಾರವಾದುದು) ವಟವೃಕ್ಷ, ಗೋಳಿಮರ, ನ್ಯಗ್ರೋಧ; ಚಂದ್ರನಲ್ಲಿ ಆಲದ ಮರದಂತೆ ಕಾಣುವ ಕಪ್ಪಾದ ಕಲೆ.
ಆಲಚ ಆನೆಗಳನ್ನು ಕಟ್ಟುವ ಕಂಭ.
ಆಲಜಾಲ ಆಗದ ಹೋಗದ ಕಲ್ಪನೆ.
ಆಲಯ ಮನೆ.
ಆಲವಟ್ಟ ಬೀಸಣಿಗೆ.
ಆಲವಾಲ (ಆ = ಸುತ್ತಲೂ + ಲವ = ನೀರಿನ ಬಿಂದುಗಳು + ಆಲ ಸುತ್ತಿಕೊಂಡಿರುವುದು) ಗಿಡಗಳ ಸುತ್ತಲೂ ನೀರು ನಿಲ್ಲುವಂತೆ ಮಾಡಿದ ಕಟ್ಟೆ, ಪಾತಿ, ದಂಡೆ.
ಆಲಸ ಆಲಸ್ಯವುಳ್ಳ, ಸೋಮಾರಿ; ಆಲಸ್ಯ.
ಆಲಂಬ (ಆಲಂಬನ) ಆಶ್ರಯ; ಜೋಲುವಿಕೆ.
ಆಲಂಭ ವಧೆ, ಕೊಲೆ; ಸ್ಪರ್ಶ.
ಆಲಾಪ ಸಂಭಾಷಣೆ, ಮಾತುಕತೆ; ಸಂಗೀತದಲ್ಲಿ ಸಪ್ತಸ್ವರಗಳನ್ನು ಹೊಂದಿಕೊಂಡು ರಾಗ ಹಾಡುವುದು.
ಆಲಿ ಆಳಿ; ಗೆಳತಿ; ಕಣ್ಣು, ಕಣ್ಣುಗುಡ್ಡು; ತುಂಬಿ; ಚೇಳು; ಸೇರು; ಆನೆಕಲ್ಲು, ಮಂಜುಕಲ್ಲು.
— ನೀರ್ ಕಣ್ಣೀರು.
— ಪರಲ್ ಆಲಿಕಲ್ಲು, ಕಲ್ಮಳೆಯಲ್ಲಿ ಬೀಳುವ ಕಲ್ಲು.
ಆಲಿಂಗನ ಅಪ್ಪಿಕೊಳ್ಳುವುದು, ತಬ್ಬಿಕೊಳ್ಳುವುದು.
ಆಲಿಂಗ್ಯ ತಬ್ಬಲು ಯೋಗ್ಯವಾದ.
ಆಲೀಢ (ಆಲೀಢ, ಪ್ರತ್ಯಾಲೀಢ, ವಿಶಾಖ, ಸಮಪದ, ಮಂಡಲ ಇವೈದು ವೀರರು ಯುದ್ಧಕಾಲದಲ್ಲಿ ಬಾಣಗಳನ್ನೆಸೆಯುವುದಕ್ಕೆ ಅನುಕೂಲವಾಗಿ ನಿಲ್ಲುವ ವಿಧಗಳು), ಬಲಗಾಲನ್ನು ಮುಂದಕ್ಕೆ ಚಾಚಿ ಎಡಗಾಲನ್ನು ಹಿಂದಿಟ್ಟು ನಿಲ್ಲುವುದು; ಗಾಯ; ಸವಿನೋಡಿದ.
ಆಲುಕ ಒಂದು ಪಾತ್ರೆ; ಶೇಷ.
ಆಲೆ ಗಾಣ.
ಆಲೋಕ ನೋಡುವಿಕೆ, ದರ್ಶನ.
ಆಲೋಚನ (ಆಲೋಚನೆ) ಯೋಚನೆ, ವಿಚಾರ.
ಆಲೋಲ ನಡುಗುವ, ಕಳವಳ.
ಆವ (ಆವು) ಯಾವ.
— ಅನ್ ಯಾವನು.
— ಆವ ಯಾವಾವ.
ಆವಗೆ ಆವುಗೆ, ಕುಂಬಾರನ ಒಲೆ.
ಆವಪನ ಬಿತ್ತನೆ; ಪಾತ್ರೆ.
ಆವರಣ ಹೊದಿಕೆ, ಮುಚ್ಚಿಗೆ; ಸುತ್ತು, ಪ್ರಾಕಾರ; ಚರ್ಮಮಯವಾದ ಹಲಗೆ; ಗ್ರಹಿಸು, ಅವಗ್ರಹಿಸು, ಹಿಡಿಸು; ಲಾಂಛನ (ಶೈವರಲ್ಲಿ).
ಆವರಿಸು ಮುಚ್ಚು, ಮುತ್ತು.
ಆವರ್ತ ಸುಳಿ, ನೀರಿನ ಸುಳಿ; ದೇಶ ವಿಶೇಷ; ಕುದುರೆಯ ಮೈಯಲ್ಲಿರುವ ರೋಮಗಳ ಸುಳಿ; ಮೇಘವಿಶೇಷ; ಮಾಕ್ಷಿಕವೆಂಬ ಧಾತುವಿಶೇಷ.

—ನ ಮೊಸರು ಕಡೆಯುವುದು; ಸುಳಿ ಒಂದರ ಬಳಿಕ ಇನ್ನೊಂದು ಬರುವಿಕೆ.
ಆವಲ್ ಚೆನ್ನೆಯ್ದಿಲೆ, ಕೆಂಪು ನೆಯ್ದಿಲೆ, ಕೆಂಪು ಕೋಳಿ.
ಆವಲಿ ಆವಳಿ, ಸಾಲು; ಕ್ರಮ; ರಾಶಿ.
ಆವಲಿಕ (ಆವಳಿಕ) ಒಂದು ಬಗೆಯ ಬಾಣ.
ಆವಸಥ(ವಾಸಮಾಡಲು ಯೋಗ್ಯವಾದುದು) ನಿವಾಸಸ್ಥಾನ, ವಿಶ್ರಾಮಸ್ಥಾನ, ಮನೆ; ವ್ರತ ವಿಶೇಷ.
ಆವಸಿತ ಧಾನ್ಯ, ಕಾಳು.
ಆವಹ ಕೂಡಿಸುವ, ಸೇರಿಸುವ.
ಆವಾಪ ಗಿಡಗಳ ಸುತ್ತಲೂ ನೀರು ನಿಲ್ಲುವಂತೆ ಮಾಡಿದ ಕಟ್ಟೆ, ಪಾತ್ರ ವಿಶೇಷ; ಶತ್ರುವಿನ ಸಂಬಂಧವಾದ ಚಿಂತೆ; ಏರು ತಗ್ಗಾಗದ ಭೂಮಿ; ದೊಡ್ಡ ಹೋಮ.
ಆವಾರ ಸುತ್ತಲೂ ಸುತ್ತಿಕೊಂಡಿರುವ.
ಆವಾಸ ವಾಸಸ್ಥಾನ, ಮನೆ ಮೊದಲಾದುವು.
ಆವಾಹನ ದೇವತೆಯನ್ನು ಸಮೀಪಕ್ಕೆ ಕರೆಯುವುದು; ಕರೆವಿಕೆ, ಆರೋಪಿಸುವುದು.
ಆವಿ ಉಗಿ, ಹಬೆ.
ಆವಿಕ (ಆವಿ=ಕುರಿ) ಕುರಿಯ ರೋಮದಿಂದ ಆದ ಕಂಬಳಿ ಮೊದಲಾದುವು.
ಆವಿಗೆ (ಆವುಗೆ) ಕುಂಬಾರನು ಮಡಕೆಗಳನ್ನು ಸುಡುವ ಒಲೆ.
ಆವಿಗ್ನ ಉದ್ವಿಗ್ನ; ಗಲಿಬಿಲಿ, ಗಾಬರಿ.
ಆವಿದ್ಧ ಕಟ್ಟಲ್ಪಟ್ಟ; ಪೀಡಿಸಲ್ಪಟ್ಟ; ಕೊರೆಯಲ್ಪಟ್ಟ; ದುಃಖಮಯ.
ಆವಿರ್ಭವ ಹುಟ್ಟುವುದು, ಪ್ರತ್ಯಕ್ಷತೆ.
ಆವಿಲ ಪರಿಶುದ್ಧವಲ್ಲದ, ಕಲಕಾದ.
ಆವಿಷ್ಕಾರ ಹೊಸತಾಗಿ ಕಂಡುಹಿಡಿಯುವಿಕೆ.
ಆವಿಷ್ಕೃತ ಪ್ರಕಟವಾದ.
ಆವಿಷ್ಟ ಹೊಂದಲ್ಪಟ್ಟ; ಪ್ರತ್ಯಕ್ಷವಾದ; ಕೂಡಿದ.
ಆವಿಷ್ಟ ಭೂತಾವೇಶವಾದ, ಆವೇಶವನ್ನು ಹೊಂದಿದ.
ಆವುಚ ಒಂದು ಬಗೆಯ ವಾದ್ಯ.
ಆವುದು ಯಾವುದು.
ಆವೃತ ಸುತ್ತಲ್ಪಟ್ಟ.
ಆವೃತಿ ಆಯುಧ ವಿಶೇಷ.
ಆವೃಷ್ಟಿ ಮಳೆ ಸುರಿಯುವಿಕೆ.
ಆವೆ ಆಮೆ.
ಆವೇಗ ತ್ವರೆ; ಉದ್ವೇಗ; ಅವಸರ; ಚಿಂತೆ; ಭಯ.
ಆವೇಶ ಸಂಭ್ರಮ, ಕೆರಳು; ಮೈಮೇಲೆ ಬರುವಿಕೆ.
—ಇಕ ಮನೆಗೆ ಬಂದವ, ಅತಿಥಿ; ಬಂಧು.
ಆಶಯ ಅಭಿಪ್ರಾಯ; ಆಧಾರ; ಆಸರೆ, ಐಶ್ವರ್ಯ; ಹಲಸಿನ ಮರ; ಶಯನ, ಮಲಗುವಿಕೆ; ಸ್ಥಾನ.
ಆಶಂಸು ಬಯಕೆ, ಇಚ್ಛೆ; ಅಭಿಲಾಷೆ; ಮಾತು.
ಆಶಂಸೆ ಇಷ್ಟ, ಅಭಿಲಾಷೆ; ಹೇಳಿದ್ದು.
ಆಶಾ ಆಸೆ (ದ್ಭ), ಆಶೆ, ದಿಕ್ಕು; ಅಪೇಕ್ಷೆ.
ಆಶಾಷ್ಟಕ ಎಂಟು ದಿಕ್ಕುಗಳು, ಮೂಲೆಗಳು.
ಆಶಿತ ಉಂಡ, ಭೋಜನದಿಂದ ತೃಪ್ತಿಗೊಂಡ.
ಆಶೀರ್ವಾದ (ಆಶೀಃ=ಶುಭವಾಗಲೆಂಬ+ವಾದ=ಮಾತು, ವಚನ) ಮಂಗಲ ಪ್ರಾರ್ಥನೆ, ಶುಭವಾಗಲೆಂಬ ಮಾತು, ಹರಕೆ.
ಆಶೀವಿಷ (ಆಶೀ=ದಂತಗಳಲ್ಲಿ+ವಿಷ=ನಂಜುಳ್ಳದು) ಹಲ್ಲುಗಳಲ್ಲಿ ವಿಷವುಳ್ಳ ಪ್ರಾಣಿ, ಸರ್ಪ.
ಆಶು ಆಶಯ; ಬೇಗನೆ, ಆಗಲೆ.
ಆಶುಗ (ಆಶು=ಬೇಗನೆ+ಗ=ಹೋಗುವುದು) ವಾಯು; ಬಾಣ, ತ್ವರೆಯಾಗಿ ಹೋಗುವುದು.

**ಆಶುತೋಷ** (ಆಶು + ತೋಷ = ಸಂತೋಷ ಪಡುವ), ಬೇಗ ತೃಪ್ತಿಗೊಳ್ಳುವವ, ಬೇಗ ಸಂತೋಷಗೊಳ್ಳುವವ.
**ಆಶುಶುಕ್ಷಣಿ** (ಆಶು + ಶುಕ್ಷಣಿ = ಒಣಗಿಸುವ ಇಚ್ಛೆಯುಳ್ಳವನು) ತ್ವರೆಯಾಗಿ ಒಣಗಿಸುವವನು, ಅಗ್ನಿ.
**ಆಶೆ** ಆಸೆ, ಇಚ್ಛೆ.
**ಆಶ್ಚರ್ಯ** ಅಚ್ಚರಿ (ದ್ಭ), ವಿಸ್ಮಯ.
**ಆಶ್ಮ** ಕಲ್ಲು, ಕಲ್ಲಿನಿಂದ ಮಾಡಿದುದು.
**ಆಶ್ರಮ** ಋಷಿ ಕುಟೀರ.
**ಆಶ್ರಯ** ಆಸರೆ, ಎಡೆ.
**ಆಶ್ರಯಿ** ಆಸರೆಹೊಂದಿದ; ಜೀವಕಣದ ಒಂದು ಅಂಗ.
**ಆಶ್ರವ** (ಆಸ್ರವ) ನದಿ; ಆಯಾಸ; ಒಂದು ಬಗೆಯ ಕರ್ಮ.
**ಆಶ್ರಿತ** ರಕ್ಷಣೆಗೆ ಬಂದ.
— ರಾಜ್ಯ ಸಾಮಂತ ರಾಜ್ಯ.
**ಆಶ್ಲೇಷ** ತಬ್ಬುವ; ನಕ್ಷತ್ರಗಳಲ್ಲೊಂದು.
**ಆಶ್ವಲಾಯನ** ಒಬ್ಬ ಋಷಿಯ ಹೆಸರು.
**ಆಶ್ವಾಸ** (ಆಶ್ವಾಸನ) ಉಸಿರಾಟ; ಕಾವ್ಯ ಭಾಗ; ಅಧ್ಯಾಯ; ನಂಬಿಕೆ; ಧೈರ್ಯ.
— ಇಸು ಉಸಿರು ಎಳದುಕೊ; ನಂಬಿಕೆ ಕೊಳ್ಳು; ಸಮಾಧಾನಪಡಿಸು.
— ನ ಭರವಸೆ, ಅಭಯ.
**ಆಶ್ವಿನ** ಅಶ್ವಿನೀ ನಕ್ಷತ್ರಯುಕ್ತವಾದ, ಪೂರ್ಣಿಮಿಯುಳ್ಳ ಮಾಸ.
**ಆಶ್ವಿನೇಯ** ಹೆಣ್ಣು ಕುದುರೆಯ ರೂಪವನ್ನು ಧರಿಸಿದ ಸೂರ್ಯ ಪತ್ನಿಯಾದ ಸಂಜ್ಞಾದೇವಿಯಲ್ಲಿ ಸೂರ್ಯನಿಂದ ಹುಟ್ಟಿದ ಮಗ, ಅಶ್ವಿನೀಕುಮಾರ, ದೇವಲೋಕದ ವೈದ್ಯ.
**ಆಶ್ವೀನ** ಕುದುರೆಯಿಂದ ಒಂದು ಹಗಲಲ್ಲಿ ದಾಟಬಹುದಾದ ದೂರ.
**ಆಷಾಢ** ಚಾಂದ್ರಮಾನ ನಾಲ್ಕನೇ ತಿಂಗಳಿನ ಹೆಸರು; ಮುತ್ತುಗದ ದಂಡ.
**ಆಷಾಢಭೂತಿ** ವಂಚಕ, ತೋರಿಕೆಯಂತಿಲ್ಲದವ, ಕಪಟಿ.
**ಆಸಕ್ತ** ಉತ್ಸಾಹವುಳ್ಳ; ಪ್ರೀತಿಯುಳ್ಳ; ಅನುರಕ್ತ.
**ಆಸತ್ತು** ಆಯಾಸಪಟ್ಟು, ದಣಿದು.
**ಆಸನ್ನ** ಸಮೀಪ, ಹತ್ತಿರ.
— ಇಸು ಸಮೀಪಿಸು, ಸೇರು, ಪ್ರಾಪ್ತಿಸು.
**ಆಸನ್ನಭವ್ಯ** ಮೋಕ್ಷ ಹೊಂದುವುದಕ್ಕೆ ಸಮೀಪಿಸಿದ ಜೀವ.
**ಆಸರ್** (ಆಸರು) ಆಯಾಸ; ಆಲಸ್ಯ; ಆಶ್ರಯ, ಮರೆ; ಬಾಯಾರಿಕೆ.
— ಕಳೆ ಆಯಾಸ ಪರಿಹರಿಸು, ನೀರುಕುಡಿ, ಚೇತರಿಸು.
**ಆಸವ** (ತೆಂಗು, ಬೈನಿ ಮೊದಲಾದ ಮರಗಳಿಂದ ಹುಟ್ಟಿಸತಕ್ಕುದು) ಮದ್ಯ, ಹೆಂಡ, ಕಳ್ಳು.
**ಆಸವಾರಿ** ಕುದುರೆ ಸವಾರ.
**ಆಸಾಮಿ** ವ್ಯಕ್ತಿ, ಮನುಷ್ಯ.
**ಆಸಾರ** ಬಿರುಮಳೆ, ಜಡಿಮಳೆ, ಸಾರಾ ಸಂಪಾತ.
**ಆಸೀನ** ಕುಳಿತ.
**ಆಸು** ಮೇಲಿಂದ ಬಿಡು; ಅಷ್ಟು.
**ಆಸುಕರ** ಭಯಂಕರ ಸ್ಥಿತಿ.
**ಆಸುತಿ** ಸೋಮರಸ ಹಿಂಡುವಿಕೆ.
**ಆಸುರ** ಉಕ್ಕು, ಅತಿಮದ, ರಾಕ್ಷಸರಿಗೆ ಸಂಬಂಧಿಸಿದ; ವರನಿಂದ ಹಣವನ್ನು ತೆಗೆದುಕೊಂಡು ಕನ್ಯೆಯನ್ನು ವಿವಾಹ ಮಾಡಿಕೊಡುವ ಒಂದು ವಿಧವಾದ ಮದುವೆ; ಅತಿಶಯ, ಘೋರ.
**ಆಸೆ** (ದ್ಭ) ಆಶಾ (ಸಂ), ದಿಕ್ಕು, ಅಪೇಕ್ಷೆ; ಗತಿ; ಹಾಸು; ತಡಿ.
— ಗಾರ ಅತ್ಯಾಸೆಯವ, ದುರಾಸೆಯವ.

ಆಸೇಚನ ನೀರು ಸುರಿಯುವಿಕೆ, ಚೆಲ್ಲು ವುದು, ಚಿಮುಕಿಸುವುದು.
ಆಸ್ತರಣ ಚಾಪೆ, ಹಾಸಿಗೆ.
ಆಸ್ತಿ ಸಂಪತ್ತು, ಇರುವಿಕೆ.
ಆಸ್ತಿಕ ದೈವ ಮೊದಲಾದವುಗಳಲ್ಲಿ ನಂಬಿಕೆ ಇರುವವ.
ಆಸ್ತೆ ಮೆಲ್ಲಗೆ, ನಿಧಾನ, ಶ್ರದ್ಧೆ, ವಿಶ್ವಾಸ; ಭಾರತದ ಒಂದು ಮಣ.
ಆಸ್ಥಾನ ಸ್ಥಳ; ಕೂಟ, ಸಭೆ, ರಾಜಸಭೆ.
ಆಸ್ಥಾನಿಕ ರಾಜಸಭೆಗೆ ಸಂಬಂಧಪಟ್ಟವ.
ಆಸ್ಥಾಯಿ (ಅಸ್ಥಾಯಿ) ಒಂದು ಗೀತ ಜಾತಿ.
ಆಸ್ಥಾಯಿಕೆ ಓಲಗಶಾಲೆ, ರಾಜಸಭೆ.
ಆಸ್ಪದ ಎಡೆ, ಅವಕಾಶ.
ಆಸ್ಫಾಲನ ತಟ್ಟುವಿಕೆ, ಹೊಡೆಯುವಿಕೆ.
ಆಸ್ಫೋಟನ ತೋಳನ್ನು ತಟ್ಟಿ ಶಬ್ದಮಾಡು ವಿಕೆ, ಒಡೆದು ಬಡಿದು ಸದ್ದುಮಾಡುವಿಕೆ.
ಆಸ್ಯ (ಇದರಲ್ಲಿ ತುತ್ತು ಇಡಲ್ಪಡುವುದು) ಮುಖ, ಬಾಯಿ, ಒಂದು ಭೂಖಂಡ.
ಆಸ್ಯಪತ್ರ ತಾವರೆ.
ಆಸ್ಯಾಬ್ಜ ತಾವರೆಯ ಹಾಗಿರುವ ಮುಖ.
ಆಸ್ರವ ನದಿ; ಆಯಾಸ.
ಆಸ್ವಾದ ರುಚಿ; ರಸ.
ಆಹತಿ ಹೊಡೆತ, ಪೆಟ್ಟು.
ಆಹವ (ಇದರಲ್ಲಿ ಶತ್ರುಗಳು ಕರೆಯಲ್ಪಡು ತ್ತಾರೆ) ಯುದ್ಧ, ಕೊಳುಗುಳ, ಲಡಾಯಿ; ಯಜ್ಞ, ಹೋಮ.
— ಕೊಡು ಯುದ್ಧಮಾಡು, ಕಾಳಗ ಕೊಡು.
ಆಹವನೀಯ ಹೋಮಕ್ಕೆ ಯೋಗ್ಯವಾಗಿ ಸಂಸ್ಕರಿಸಲ್ಪಟ್ಟ ಯಜ್ಞಾಗ್ನಿ, ಹೋಮಾಗ್ನಿ.
ಆಹವಿ ಯೋದ್ಧ, ಸೇನಾನಿ.
ಆಹಾ ಆಶ್ಚರ್ಯ ಸೂಚಿಸುವ ಅವ್ಯಯ.
ಆಹಾರ ತಿನ್ನುವ ವಸ್ತು, ತೀನಿ.
ಆಹಿತ ಇಟ್ಟ.
ಆಹಿತುಂಡಿಕ ಸರ್ಪದ ಮುಖದಿಂದ ಆಟ ವಾಡಿಸುವವ, ಹಾವಾಡಿಗ.
ಆಹು ಕರೆ, ಕೂಗು.
ಆಹುತಿ (ಆವುತಿ) ದೇವತೆಗಳಿಗಾಗಿ ಮಂತ್ರ ಪೂರ್ವಕ ಅಗ್ನಿಯಲ್ಲಿ ತುಪ್ಪ, ಅನ್ನ, ಅರಳು ಹೊಯ್ಯುವುದು.
ಆಹೇಯ ಸರ್ಪಕ್ಕೆ ಸಂಬಂಧಪಟ್ಟುದು, ವಿಷ ಮೊದಲಾದುವು.
ಆಹೋ ಪ್ರಶ್ನೆ; ಹಾಗೂ ಆಗಬಹುದು, ಹೀಗೂ ಆಗಬಹುದೆಂಬ ವಿಕಲ್ಪ; ವಿಚಾರ ಸಂದೇಹ.
ಆಹ್ನಿಕ ನಿತ್ಯಪೂಜೆ ಮೊದಲಾದುದು; ಹಗಲ ಕರ್ಮ.
ಆಹ್ಲಾದ ಸಂತೋಷ.
ಆಹ್ವಯ ಹೆಸರು.
ಆಹ್ವಾನ ಕರೆಯುವುದು.
— ಇಸು ಬರಹೇಳು.
ಆಳ್ (ಆಳು) ರಕ್ಷಿಸು; ಮನುಷ್ಯ, ಸೇವಕ; ಭಟ; ಮುಳುಗು; ಅಧಿಕಾರಮಾಡು.
— ಕುಡಿ ಮನುಷ್ಯಕುಲ.
— ತೋರು ಪೌರುಷವನ್ನು ತೋರು.
ಆಳ ಹೆಚ್ಚಾಗಿ; ವ್ಯರ್ಥ; ಅಗಾಧ.
ಆಳಜಾಳ ಭಿನ್ನಾಭಿನ್ನ.
ಆಳರ್ಪಿಸು ಇದಿರಿಸು.
ಆಳವಾಡು ನಿಂದಿಸಿ ಮಾತಾಡು.
ಆಳಂಬು ಆಳಬು, ಆಳುಬೆ, ನಾಯಿಕೊಡೆ.
ಆಳಾಪ ಆಲಾಪ, ಸಂಭಾಷಣೆ.
ಆಳಿ ಸಖಿ, ತೊತ್ತು; ಸಮೂಹ; ಗೆಳತಿ; ಪ್ರೀತಿಯುಳ್ಳವ, ಮುಳುಗು.
— ಪೋಗು ಮುಳುಗಿಹೋಗು.
ಆಳಿಕೆ ಆಳುವಿಕೆ, ರಕ್ಷಣೆ, ಅಧಿಕಾರ.

ಆಳಿಗೊಳ್ ಹೀನವೃತ್ತಿ ಪಡೆಯು, ವಿರೋಧಿಸು.

ಆಳಿನೇರಿಕೆ ಮಕ್ಕಳ ಒಂದು ಆಟ.

ಆಳು ರಾಜ್ಯವಾಳು, ಸೇವಕ, ಮನುಷ್ಯ.

—ತನ (ಆಳ್ತನ) ಪರಾಕ್ರಮ, ಪೌರುಷ, ಶೂರತನ.

ಆಳುವೇರಿ (ಆಳವೇರಿ, ಆಳ್ವೇರಿ) ಕಂದಕದಿಂದ ಸುತ್ತುವರಿದಿರುವ ಎತ್ತರವಾದ ಗೋಡೆ, ಕೋಟೆಯ ಗೋಡೆ.

ಆಳ್ದ ಆಳಿದವ, ಆಳುವವ, ಯಜಮಾನ; ಮುಳುಗಿದ.

ಆಳ್ಮ (ಆಣ್ಮ) ಒಡೆಯ.

ಆಳ್ವಸ ಸೇವಾವೃತ್ತಿ.

ಆಂಕೆ ಆನಿಕೆ, ಆಧಾರ, ಹಿಡಿತ, ಹತೋಟ; ಇದಿರಾಗುವುದು.

—ಕೊಳ್ ಇದಿರಿಸು, ಪ್ರತಿಭಟಸು.

ಆಂಗ ಅಂಗದೇಶದ, (ರಾಜಕುಮಾರ).

ಆಂಗಿಕ ಅಂಗಕ್ಕೆ ಸಂಬಂಧಿಸಿದವ.

ಆಂಗೀರಸ ವೇದಪ್ರಸಿದ್ಧಿಯ ಋಷಿಯು. ಸಪ್ತ ಮಹಾ ಋಷಿಗಳಲ್ಲೊಬ್ಬ. ಖಗೋಲ ರಾಜ್ಯದಲ್ಲಿ ಅವನೇ ಗುರು (ಬೃಹಸ್ಪತಿ). ಆತನು ಅಗ್ನಿಯ ಮೊಮ್ಮಗನೆಂದೂ ಹೇಳಿಕೆಯಿದೆ.

ಆಂಜನ ಲೇಪ, ಕಣ್ಣಿನ ಲೇಪನ.

ಆಂಜನೇಯ ಅಂಜನೆಯ ಮಗ ಹನುಮಂತ.

ಆಂತ ಧರಿಸಿದ; ಪ್ರತಿಭಟಸಿದ.

ಆಂದೋಲ (ಆಂದೋಲನ) ಜೋತಾಟ, ಓಲಾಟ, ಕುಲುಕಾಟ; ಕೂಗಾಟ; ಪಲ್ಲಕ್ಕಿ.

ಆಂದೋಳ (ಆಂದೋಲ) ಉಯ್ಯಾಲೆ; ತೂಗುತ್ತಿರುವುದು.

ಆಂಧ್ರ ತೆಲುಗು ಭಾಷೆ; ತೆಲುಗು ದೇಶ.

ಆಂಬರ ನನ್ನ ವರೆಗೆ; ಅಂಬರಕ್ಕೆ ಸಂಬಂಧಿಸಿದ.

# ಇ

ಇಕೊ ಇಗೊ.

ಇಕ್ಕಟ್ಟು ಎರಡು ನ್ಯಾಯ; ಎರಡು ದಾರಿ; ಎರಡು ಕಡೆ ಕಟ್ಟಾದುದು, ಸಪುರವಾದುದು, ಸಂದಿಗ್ಧ, ಸ್ಥಳ ಸಂಕೋಚ.

ಇಕ್ಕಡಿ (ಇರ್ಕಡಿ) ಎರಡು ತುಂಡು.

ಇಕ್ಕಡೆ ಎರಡು ಕಡೆ.

ಇಕ್ಕರಿಸು ಕೊಲ್ಲು; ಅತ್ತಿತ್ತ ಚೆದರಿಸು; ಬರಬರ ಶಬ್ದಮಾಡು; ಬೇರೆ ಬೇರೆ ಮಾಡು.

ಇಕ್ಕವಿಸು ಎರಡು ಪಾಲಾಗಿ ಮಾಡು.

ಇಕ್ಕಳ ಒಂದು ಬಗೆಯ ಚಿಮುಟ.

ಇಕ್ಕು ಹಾಕು; ಬಡಿಸು; ಮುಚ್ಚು; ತ್ಯಾಗ; ಹದನ; ಇಡು; ಕೊಲ್ಲು; ಗೋಣ್ಮುರಿ, ಒರಸು; ಒಡೆ.

—ಪಡು ಪೆಟ್ಟುತಾಳು.

ಇಕ್ಕುಳ್ ಇಕ್ಕಳ, ಚಿಮುಟ.

ಇಕ್ಕುಳಿಕೆ ಇಕ್ಷ್ವಾಲಿಕೆ (ಸಂ), ಕಾಶವೆಂಬ ಹುಲ್ಲು, ನೊಸೆ ಹುಲ್ಲು.

ಇಕ್ಕೆ ಎರಡು ಪಕ್ಕ, ಎರಡು ಮಗ್ಗಲು; ಆಶ್ರಯ; ನೆಲೆ; ಮನೆ; ಗವಿ; ವಾಸಸ್ಥಾನ.

ಇಕ್ಕೆಕ್ಕೆ ದಟ್ಟಣಿ.

ಇಕ್ಕೆಲ ಎರಡು ಕಡೆ.

ಇಕ್ಕೇರಿ ಬಿದನೂರು ಅರಸರ ರಾಜಧಾನಿಯ ಹೆಸರು.

ಇಕ್ಷು ಕಬ್ಬು.

ಇಕ್ಷುಚಾಪ (ಚಾಪ=ಬಿಲ್ಲಾಗಿ ಉಳ್ಳವ)

ಮನ್ಮಥ, ಕಾಮ; ಇಂಗೋಲ್, ಕಬ್ಬಿನ ಬಿಲ್ಲು.

ಇಕ್ಷ್ವಾಕು ವೈವಸ್ವತ ಮನುವಿನ ಮಗನು. ಅವನೇ ಅಯೋಧ್ಯೆಯಲ್ಲಿ ಆಳಿದ ಸೂರ್ಯ ವಂಶದ ಅರಸರಿಗೆ ಮೂಲಪುರುಷನು. ಅವನು ದ್ವಾಪರ ಯುಗದವನೆಂದು ನಂಬಿಕೆಯಿದೆ; ವಿಷ ಸೋರೇ ಗಿಡ, ಕಹಿ ಸೋರೇ ಗಿಡ.

ಇಗರು ಚಿಗುರು; ಆರಿಹೋಗು.

ಇಚ್ಛುಕ ಇಚ್ಛುಕ (ಸಂ), ಇಚ್ಛೆಗೆ ಸಮನಾಗಿ ಮಾತಾಡುವವ.

ಇಚ್ಚಟ ಎರಡುಮಡಿ, ಎರಡು ಕ್ರಮ; ಪಕ್ಕಾ ಕಳ್ಳ.

ಇಚ್ಚಿಡಿ ಎರಡು ಎಳೆಗಳುಳ್ಳ.

ಇಚ್ಚೆ ಇಚ್ಛೆ.

—ಗಾರ ಅಪೇಕ್ಷೆಯುಳ್ಳವ, ಕಾಮುಕ ನಾದವ.

—ಗಾರ್ತಿ ರತಿ, ಕಾಮುಕಿ.

ಇಚ್ಛಾನುಸಾರ ಇಷ್ಟ ಬಂದ ಹಾಗೆ.

ಇಚ್ಛಾವತಿ ಹಲವು ಬಯಕೆಗಳುಳ್ಳವಳು.

ಇಚ್ಛೆ ಇಚ್ಛಾ (ಸಂ), ಅಪೇಕ್ಷೆ.

ಇಜ್ಜೋಡು ಎರಡು ಜತೆ; ಒಂದಕ್ಕೊಂದು ಹೊಂದದ.

ಇಜ್ಯ(ಇಜ್=ಪೂಜೆ) ದೇವಗುರು, ಬೃಹಸ್ಪತಿ; ಪೂಜೆಗೆ ಯೋಗ್ಯನು.

ಇಜ್ಯೆ ಯಜ್ಞ, ದಾನ.

ಇಟಕು ಇಡುಕು; ಕಡಮೆ; ಎಡೆ.

ಇಟ್ಟಣ (ಇಟ್ಟಳ) ಸಂದಣಿ, ನಿಬಿಡ; ಶೋಭೆ; ತೊಂದರೆ, ತಡೆ.

—ಇಸು ಇಟ್ಟಳಿಸು, ಗುಂಪಾಗು, ದಟ್ಟಣಿಸು.

ಇಟ್ಟಳ (ನೋಡು—ಇಟ್ಟಣ).

ಇಟ್ಟಿ (ದ್ಭ), ಯಷ್ಟಿ (ಸಂ), ಸಬಳ, ಈಟ.

ಇಟ್ಟಿಗೆ (ದ್ಭ), ಇಷ್ಟಕ (ಸಂ), ಮನೆ ಕಟ್ಟಲು ಬಳಸುವ ಮಣ್ಣಿಂದ ಚೌಕವಾಗಿ ತಯಾರಿಸಿದ ತುಂಡು, ಒಂದು ಯಾಗ.

ಇಟ್ಟೆಡೆ ಸಂದಣಿ, ತುಂಬಿರುವ; ಸಂಕೋಚ ಸ್ಥಳ, ಇಕ್ಕಟ್ಟು.

ಇಡ (ಇಳ) ಆಹಾರಕ್ಕೆ ಸಂಬಂಧಿಸಿದ್ದುದು. ಇಡ ಎಂಬ ದೇವತೆಯು ಭೂಮಿಯ ಅಧಿಷ್ಠಾತ್ರಿಯೆಂದೂ ಮನುವಿನ ತಪಸ್ಸಿನ ಫಲವಾಗಿ ಅವಳು ಒಂದು ಯಜ್ಞದಲ್ಲಿ ಹುಟ್ಟಿದಳೆಂದೂ ಕಥೆಯಿದೆ. ಮನುವು ಆಕೆಯನ್ನು ಮದುವೆಯಾದನು. ಅವರಲ್ಲಿ ಹುಟ್ಟಿದ ಸಂತತಿಯೇ ಮನುವಂಶ.

ಇಡಕು(ಇಡುಗು) ಒತ್ತು,ಚಿವುಟು, ತುರುಕು.

ಇಡಿ ತುಂಬು, ವ್ಯಾಪಿಸು, ತುರುಕು; ಸಮೃದ್ಧವಾಗು.

—ಕಿರಿ ಸಮೃದ್ಧವಾಗಿರು, ಸಮೂಹವಾಗಿರು, ಒತ್ತೊತ್ತಾಗಿರು.

ಇಡು ಎಸೆ, ಹೊಡೆ; ಕೈಬಿಡು; ಇರಿಸು.

ಇಡುಪು ರಾಶಿ; ತೂತು; ಹಳ್ಳ.

ಇಡುಮುಡುಕು ಇಡಕುಮುಡುಕು, ಕಿರಿದಾದ ಡೊಂಕು ದಾರಿ.

ಇಡ್ಡಲಿ (ಇಡ್ಡಲಿಗೆ) ಕಡುಬಿನಂಥ ಪದಾರ್ಥ.

ಇಣಕು ಬಗ್ಗಿ ನೋಡು.

ಇಣಚಿ ಅಳಿಲು, ಚಣಿಲು; ಎಣಿ.

ಇತರ ಬೇರೆಯ.

—ಇತರ ಅನ್ಯೋನ್ಯ, ಪರಸ್ಪರ.

ಇತರೆ ಹೀನ ಗುಣವುಳ್ಳವಳು; ಸಾಮಾನ್ಯ.

ಇತರೇದ್ಯುಸ್ ಮತ್ತೊಂದು ದಿನ.

ಇತಿ ಇಂತು, ಈ ಪ್ರಕಾರ.

ಇತಿಹಾಸ ಚರಿತ್ರೆ.

ಇತ್ತಟ ಇತ್ತಣ, ಇತ್ತಡ, ಎರಡು ದಡ.

ಇತ್ತರ(ಇರ್ತರ) ಎರಡು ಸಾಲು; ಎರಡು ವಿಧ.

ಇತ್ತಲು ಇತ್ತ, ಈ ಕಡೆ.

ಇತ್ತಂಡ ಎರಡು ತಂಡ.

ಇತ್ತಿಗ ಇತ್ತಡ, ಎರಡು ದಡ, ಎರಡು.

ಇತ್ತು ಇದ್ದಿತು; ಕೊಟ್ಟು.

ಇತ್ಯರ್ಥ ಒಟ್ಟು ತಾತ್ಪರ್ಯ; ಹೀಗೆಂದು ತೀರ್ಮಾನ.

ಇತ್ವರ ದಾರಿಕಾರ, ಪಯಣಿಗ, ಹಾದಿಹೋಕ.

ಇದಕೊ ಇದೇಯೆ, ಇಗೊ, ಇದೊ.

ಇದಂದೇವ ದೇವರು.

ಇದಾನೀ ಈಗ.

ಇದಿರ್ ಎದುರು, ವಿರೋಧವಾಗಿ.

—ಆನ್ ಪ್ರತಿಭಟಸು, ಅಭಿಮುಖವಾಗಿ ನಿಲ್ಲು, ಇದಿರಾಗಿ ನಿಲ್ಲು.

—ಇಡು ಇದಿರಿಕ್ಕು.

—ಇಳಿ ಎದುರು ಬೀಳು.

—ಏಳು ಇದಿರಾಗಿ ಎದ್ದು ನಿಲ್ಲು, ಗೌರವಾರ್ಥವಾಗಿ ಎದ್ದು ನಿಲ್ಲು.

—ಕೊಳು ಎದುರುಗೊಳ್ಳು, ಗೌರವಕ್ಕಾಗಿ ಇದಿರಿಗೆ ಹೋಗು.

—ಚು ಎದುರಿಸು, ಪ್ರತಿಭಟಸು.

ಇದಿರುತ್ತರ ಪ್ರತ್ಯುತ್ತರ; ಪ್ರತಿಭಟಸಿ ಮಾತಾಡುವುದು.

ಇದು (ಭೂತನ್ಯೂನದ ಒಂದು ಪ್ರತ್ಯಯ) ಕೇಳಿದು, ಕೇಳಿ, ಈ.

ಇದ್ದಲ್ (ಇದ್ದಲು) ಮಸಿ, ಮರದಿದ್ದಲು; ಕಲ್ಲಿದ್ದಲು.

ಇದ್ಧ ಪ್ರಕಾಶ; ಆಶ್ಚರ್ಯ; ನಿರ್ಮಲ.

ಇಧ್ಮ (ಇಂದ್ = ಉರಿ, ಬೆಂಕಿಯು ಇದರಿಂದ ಉರಿಯುವ ಕಾರಣ) ಕೊಳ್ಳಿ, ಕಟ್ಟಿಗೆ, ಸುಮಿಧೆ.

ಇನ್ ಇಂ, ಇನ್ನು, ಇಂತಲೂ.

ಇನ ಅರಸು, ಸೂರ್ಯ; ಸ್ವಾಮಿ; ಒಡೆಯ; ಪತಿ, ಗಂಡ.

—ಕುಲ ಸೂರ್ಯವಂಶ.

—ಜ ಯಮ, ಸುಗ್ರೀವ, ಕರ್ಣ, (ಸೂರ್ಯನಿಂದ ಹುಟ್ಟಿದವ).

—ಜಾತ ಯಮ.

—ರಿಪು ರಾಹು.

—ಸುತ (ಸೂರ್ಯನ ಮಗ) ಯಮ; ಸುಗ್ರೀವ; ಕರ್ಣ.

ಇನಂ ವರೆಗೆ, ಮಾಡುವ ವರೆಗೆ.

ಇನಾಮತಿ ಉಂಬಳಿ ಬಿಟ್ಟ ಜಾಗ, ಜಹಗೀರು.

ಇನಿತು ಸ್ವಲ್ಪವೂ, ಇಷ್ಟೂ.

ಇನಿದು ಮಧುರ; ಪ್ರಿಯ; ಮನೋಹರ.

—ಕಂಪು ಮಧುರ ಪರಿಮಳ.

ಇನಿಬರು ಇಷ್ಟು ಮಂದಿ.

ಇನಿಯ (ಇನೆಯ) ಪತಿ, ವಲ್ಲಭ, ಗಂಡ, ಪ್ರಿಯ.

ಇನಿವಾತು ಮಧುರವಾದ ನುಡಿ.

ಇನಿವಿರಿದು (ಇನಿತು + ಪಿರಿದು) ಇಷ್ಟು ದೊಡ್ಡದು.

ಇನಿವಿಲ್ ಇನಿವಿಲ್ಲು, ಸಿಹಿಯಾದ ಬಿಲ್ಲು; ಕಬ್ಬಿನ ಕೋಲು.

ಇನಿಸು ಇನಿತು; ತುಸು; ಇಷ್ಟು.

ಇನ್ನರ್ ಇಂಥವರು.

ಇನ್ನವು ಇಂಥವು.

ಇನ್ನು ಮತ್ತೂ, ಮುಂದೆ.

ಇನ್ನುಣಿಸು (ಇನಿ=ಸವಿ) ಸವಿಯಾದ ಊಟ.

ಇನ್ನೆಗ ಈ ವರೆಗೆ, ಈ ವರೆಗೂ.

ಇನ್ನೆಬರ ಇನ್ನೆವರ, ಈ ವರೆಗೆ.

ಇಪ್ಪ (ಇರ್ಪ) ಇರುವ.

ಇಪ್ಪೆ ಒಂದು ಜಾತಿಯ ಮರ, ಮೆಲುಕು ಹಾಕು.

ಇಬ್ಬನಿ ಹಿಮ, ಮಂಜು.

ಇಬ್ಭಾಗ ಎರಡು ಭಾಗ.

ಇಭ (ಮದವನ್ನು ಹೊಂದುವ ಪ್ರಾಣಿ) ಆನೆ, ಎಂಟೆಂಬ ಸಂಖ್ಯಾ ಸೂಚಕ ಪದ.

ಇಭನಗರ ಹಸ್ತಿನಾ ನಗರ, ಕೌರವರ ರಾಜಧಾಗಿಯಾಗಿದ್ದ ಪಟ್ಟಣ.
ಇಭಮುಖ ಗಣೇಶ, ವಿನಾಯಕ.
ಇಮರು ಕಾದು; ಆರು, ಆವಿಯಾಗು.
ಇಮ್ಮಡಿ (ಇರ್ಮಡಿ) ಎರಡರಷ್ಟು, ಎರಡು ಪಾಲು.
ಇಮ್ಮನೆ ಸವಿಯಾದ ಬಗೆಯಲ್ಲಿ.
ಇಮ್ಮಾವು (ಇನಿದು + ಮಾವು) ಸಿಹಿಮಾವು, ರಸಾಲ.
ಇಮ್ಮಿಗಿಲ್ ಎರಡು ಪಾಲು ಹೆಚ್ಚು.
ಇಮ್ಮಿದಳ್ ಚೆಲುವಿನ ಸ್ತ್ರೀ.
ಇಮ್ಮು ಇಂಪು; ಸವಿ; ಚೆಲುವು.
ಇಮ್ಮೆ (ಇರ್ + ಮೆ) ಎರಡು ಸಲ ಮದುವೆಯಾದವನು; ಪುನರ್ಭೂ.
ಇಮ್ಮೆಯ್ ಎರಡು ಪಕ್ಕಗಳು.
ಇಮ್ಮೆಯ್ಗಾಣಿಕೆ ದೇಹದ ಎರಡು ಭಾಗಗಳನ್ನು ಕಾಣಿಸುವುದು.
ಇಮ್ಮೆಯ್ಜೋಡು ಒಂದರೊಳಗೊಂದಾಗಿರುವ ಎರಡು ಕವಚ.
ಇಯತ್ತೆ ಇಷ್ಟು; ತರಗತಿ, ಕ್ಲಾಸು.
ಇರವು ಸ್ಥಿತಿ, ಇರುವಿಕೆ, ಅಸ್ತಿತ್ವ.
ಇರಿ ತಿವಿ, ಕೊಲ್ಲು.
—ತ ತಿವಿತ, ಹೊಡೆತ.
ಇರಿದು ಕರೆದು.
ಇರಿವಿಟ್ಟಿ ಸೇವಾಕಾರ್ಯ.
ಇರಿವಿಡು ಹಾಲು ತೊಟ್ಟಿಡು; ಹಾಲನ್ನು ಧಾರೆಯಾಗಿ ಸುರಿಸು.
ಇರಿಂಕು (ನೋಡು: ಇರುಕು) ಹಿಸುಕು.
ಇರು ಇದ್ದುಬಿಡು.
ಇರುಕು ಒತ್ತು, ಅಮುಕು, ತುರುಕು; ಇಕ್ಕಟ್ಟಾದ ಸ್ಥಳ.
ಇರುಚಿ ಗುಂಪು, ಸಂದಣಿ.
ಇರುಪೆ (ಇರುಂಪೆ) ಇರುವೆ.
ಇರುವಂತಿಗೆ ಇರವಂತಿಗೆ, ಸೇವಂತಿಗೆ, ಒಂದು ಜಾತಿಯ ಮಲ್ಲಿಗೆ.
ಇರುವಾರ ಎರಡಷ್ಟು, ಎರಡು ಭಾಗ; ಭೂಸ್ವಾಮಿಯ ಮತ್ತು ಸಾಗುವಳಿದಾರನ ಪಾಲು.
ಇರುಳು ರಾತ್ರಿ.
ಇರುಹು ಇರುವಿಕೆ.
ಇರುಹೆ ಇರುಪೆ, ಇರುವೆ, ಪಿಪೀಲಿಕೆ, ಇರುಂಪೆ.
ಇರುಂಬು ಇರುಬು, ಇಕ್ಕಟ್ಟು; ಮೃಗಗಳನ್ನು ಕೆಡಹುವ ಗುಳಿ, ಆನೆಗಳನ್ನು ಹಿಡಿಯುವ ಕುಳಿ.
—ಕೊಂಡು ಸಂಕಟದಲ್ಲಿ ಸಿಕ್ಕಿ.
ಇರ್ಕಟ್ಟು (ಇಕ್ಕಟ್ಟು) ಎರಡುತರ; ಎರಡು ಕಡೆ ಕಟ್ಟಾದುದು.
ಇರ್ಕು (ಇಕ್ಕು) ಹಾಕು; ಕೊಲ್ಲು, ತಿವಿ.
ಇರ್ಚಿಡಿ ಎರಡು ಕಡೆಗೆ ಸಿಡಿ, ಎರಡು ಎಳೆ.
ಇರ್ತರ ಎರಡು ಸಾಲಾಗಿ.
ಇರ್ತಂಡ (ಇತ್ತಂಡ) ಎರಡು ಕಡೆ, ಎರಡು ಗುಂಪು.
ಇರ್ಪು ದ್ರವ; ಇಂಪು, ಸವಿ; ರಸ.
—ಓಡು ದ್ರವಹೀನವಾಗು, ಒಣಗು.
—ಕುಂದು ನೀರಾರು, ಒಣಗು.
ಇರ್ಮಕಾರ ಕ್ಷೌರಿಕ.
ಇರ್ಮೆ ಆಸೆ; ಸೊಗಸು; ಎರಡು ಸಲ.
ಇಲರ್ ಇಲ್ಲದವರು, ಸಾವಿಲ್ಲದವರು; ದೇವತೆಗಳು.
ಇಲಾ (ಸಂ) ಇಲೆ, ಇಳೆ, ಭೂಮಿ; ದನ; ಶಬ್ದ.
—ಅಧಿಪ ಅರಸು.
—ತಲ ಭೂತಲ.
—ಪುತ್ರಿ ಸೀತೆ.
ಇಲಾಖೆ ಸಂಸ್ಥಾನ, ಕಾರ್ಯವಿಭಾಗ.
ಇಲಾಜು ಔಷಧ, ಮದ್ದು; ಹಂಗು.
ಇಲಿ ಒಂದು ಕಿರಿ ಪ್ರಾಣಿ, ಮೂಷಕ.

ಇಲಿಕಿವಿ ಇಲಿಯ ಕಿವಿ; ಇಲಿಯ ಕಿವಿಯಂತೆ ಸಣ್ಣ ಎಲೆಗಳನ್ನು ಬಿಡುವ ಒಂದು ಗಿಡ.

ಇಲಿಪಾಷಾಣ ಇಲಿಗಳಿಗೆ ಹಾಕುವ ಒಂದು ವಿಷ, ಶಂಖಪಾಷಾಣ.

ಇಲ್ಲದ ಅಲ್ಲದ, ಅಸ್ತಿತ್ವವನ್ನು ಅಲ್ಲಗಳೆವ.

ಇಲ್ಲವೆ ಇಲ್ಲದಿರುವಿಕೆ, ಅಭಾವ.

ಇಶಾನೆ ಸೂಚನೆ.

ಇಶಿಬಿ ಪಾದದ ಮೇಲೆ ಆಗುವ ಒಂದು ಹುಣ್ಣು.

ಇಷುಧಿ (ಇಷು = ಬಾಣಗಳನ್ನು, ಧಿ = ಧರಿಸಿರುವುದು) ಬಾಣಗಳುಳ್ಳುದು, ಬತ್ತಳಿಕೆ.

ಇಷ್ಟ ಇಚ್ಛೆ, ಬಯಕೆ.

ಇಷ್ಟಗಂಧ ಸುಗಂಧ.

ಇಷ್ಟದೇವತೆ ಮನಸ್ಸಿನ ಬಯಕೆಯ ದೇವತೆ.

ಇಷ್ಟಾಪೂರ್ತ ಯಜ್ಞಾದಿಗಳನ್ನು ಮಾಡುವುದೂ, ಕೆರೆಬಾವಿಗಳನ್ನು ಕಟ್ಟಿಸುವುದೂ; ಇಷ್ಟಸಿದ್ಧಿ.

ಇಷ್ವು ಎಸೆಯಲಿಕ್ಕೆ ಬರುವುದು; ಬಾಣ.

ಇಸು ಬಾಣಪ್ರಯೋಗಮಾಡು.

ಇಸುವೆಸ ಆಜ್ಞಾ ಕಾರ್ಯ.

ಇಹ ಇರುವ; ಈ ಲೋಕ.

ಇಹಗೆ ಹೀಗೆ ಇರುವವನಿಗೆ, ಹೀಗೆ.

ಇಹಪರ ಈ ಲೋಕ ಮತ್ತು ಪರಲೋಕ, ಭೂಮಿ ಮತ್ತು ಸರ್ಗ.

ಇಹುದು ಇರುವುದು.

ಇಳಕಲು ಇಳಿಜಾರು.

ಇಳವಾರೆ ಇಳಿಜಾರು.

ಇಳಾನಾಡಿ ಬಲಮೂಗು; ಬಲ ಮೂಗಿನಿಂದ ಎಳೆಯುವ ಪ್ರಾಣವಾಯು.

ಇಳಿ ಕೆಳಗಿಳಿ; ದೀರ್ಘ ಸ್ವರದ ಸಂಜ್ಞೆ; ಮೈಗುಂದು; ಅವಮಾನ, ಹೀನತೆ.

—ತ ಕೆಳಗಿಳಿಯುವಿಕೆ, ಕಡಲು ನೀರಿನ ಉಬ್ಬು ತಗ್ಗುವಿಕೆ.

—ಪು ಇಳಿಸು, ಇಳಕಲು.

ಇಳಿಮುಳುಗು ಪೂರ್ಣ ಮುಳುಗು.

ಇಳಿಹೊತ್ತು ಮಧ್ಯಾಹ್ನದ ಮೇಲಿನ ಸಮಯ.

ಇಳು ಚುಚ್ಚು.

ಇಳುಹು (ಇಳುಗು) ಇಳಿಸು.

ಇಳೆ (ನೋಡು: ಇಲಾ).

—ಆಣ್ಮ ಭೂಮಿಯೊಡೆಯ, ರಾಜ.

ಇಳ್ದುವರಿ ಸೆಳೆದುಕೊಂಡು ಹರಿ; ಎಳೆದು.

ಇಂಕ್ರು ಇಡಕರ, ಸ್ವಲ್ಪ.

ಇಂಗಡಲ್ ಕ್ಷೀರಸಾಗರ.

ಇಂಗದಿರ್ (ಇನಿದು = ಸವಿಯಾದ, ಮನೋಹರವಾದ + ಕದಿರ್ = ಪ್ರಕಾಶ) ಮನೋಹರವಾದ ಪ್ರಕಾಶ, ಚಂದ್ರಕಿರಣ, ಬೆಳದಿಂಗಳು.

ಇಂಗದಿರುಣಿ (ಉಣಿ = ಉಣ್ಣುವ) ಚಕೋರ.

ಇಂಗಲೀಕ ಒಂದು ವಿಧದ ಕೆಂಪು ಬಣ್ಣ.

ಇಂಗಳ ಅಂಗಾರ (ಸಂ), ಅಗ್ನಿ, ಕೆಂಡ; ಇಂಗುದ, ಇಂಗುದಿ; ಪೂರ್ವಕಾಲದಲ್ಲಿ ತಪಸ್ವಿಗಳಿಗೆ ಉಪಯೋಗವಾಗಿರುತ್ತಿದ್ದ ಒಂದು ಮರ.

ಇಂಗಿತ ಅಭಿಪ್ರಾಯ, ಆಶಯ; ಅಭಿಪ್ರಾಯವನ್ನು ಪ್ರಕಾಶಪಡಿಸುವ ಚೇಷ್ಟೆ; ಭಾವ.

—ಜ್ಞ ಬೇರೊಬ್ಬರ ಅಭಿಪ್ರಾಯವನ್ನು ಸೂಚನೆ ಮಾತ್ರದಿಂದ ತಿಳಿಯಬಲ್ಲವ.

ಇಂಗು ಬತ್ತು, ಬರಿದಾಗು; ಹಿಂಗು.

—ಇಸು ಬತ್ತಿಸು.

ಇಂಗೋಲ್ (ಇನಿದು = ಸವಿಯಾದ) ಸವಿಯಾದ ಕೋಲು, ಕಬ್ಬು.

ಇಂಗ್ರೇಜಿ ಇಗರ್ಜಿ, ಚರ್ಚು; ಇಂಗ್ಲಿಷ್.

ಇಂಚರ (ಇನಿದು=ಮಧುರ) ಇಂಪಾದ ಸ್ವರ, ಮಧುರ ಧ್ವನಿ.

ಇಂಡೆ (ಇಂಡ) ಒಟ್ಟಲು, ರಾಶಿ.

ಇಂತು (ಇಂತಿ) ಹೀಗೆ; ಈ ಪ್ರಕಾರ.

—ಟು ಇನಿತು, ಇಷ್ಟು.

ಇಂದಗಿ ಇಂದ್ರಜಿತು.

ಇಂದಾಳೆ ಹಿಂದುಗಡೆಯಿಂದ ಮೇಲೆ ಬೀಳುವುದು.

ಇಂದಿರ (ದ್ಭ) ಇಂದ್ರ (ಸಂ), ದೇವತೆಗಳ ನಾಯಕ.

ಇಂದಿರವಿಲ್ ಇಂದ್ರಧನುಸ್ಸು, ಮಳೆಬಿಲ್ಲು.

ಇಂದಿರೆ ಇಂದಿರಾ (ಇಂದಿ=ಸಂಪತ್ತನ್ನು+ ರಾ=ಕೊಡುವವಳು) ತನ್ನ ಭಕ್ತರಿಗೆ ಸಂಪತ್ತನ್ನು ಕೊಡುವವಳು; ಸಂಪತ್ತಿನ ಅಧಿಕಾರಿಣಿಯಾದ ದೇವತೆ, ಲಕ್ಷ್ಮಿ.

ಇಂದಿಂದಿರ ಗುಂಗೀ ಹುಳು; ಭ್ರಮರ, ತುಂಬಿ.

ಇಂದೀವರ (ಇಂದೀ=ಲಕ್ಷ್ಮಿಯಿಂದ, ವರ=ಕೊಡಲ್ಪಡುವುದು) ಲಕ್ಷ್ಮಿಯಿಂದ ಅಪೇಕ್ಷಿಸಲ್ಪಡುವುದು, ಕೆನ್ನೈದಿಲೆ.

ಇಂದು ಚಂದ್ರ, ಶಶಿ; ಈ ದಿನ.

ಇಂದುಧರ (ಚಂದ್ರನನ್ನು ಧರಿಸಿದವ) ಶಿವ.

ಇಂದುಪುತ್ರ ಚಂದ್ರನ ಮಗ, ಬುಧ.

ಇಂದುಮಣಿ ಚಂದ್ರಕಾಂತ ಶಿಲೆ.

ಇಂದುಮತಿ ಚಂದ್ರನುಳ್ಳುದು, ಪೂರ್ಣಿಮೆ; ಅಜರಾಜನ ಹೆಂಡತಿ.

ಇಂದುಮುಖಿ ಚಂದ್ರನಂತೆ ಸುಂದರವಾದ ಮುಖವುಳ್ಳವಳು.

ಇಂದೂಪಲ ಚಂದ್ರಕಾಂತ ಶಿಲೆ.

ಇಂದೊಳ (ಇಂದೋಳ) ಭ್ರಮರ, ತುಂಬಿ.

ಇಂದೊವರ್ ರುಚಿಯಾದ ಒಗರು.

ಇಂದೋಳ ಇಂಪಾದ ಸ್ವರ.

ಇಂದ್ರ ವಾತಾವರಣಕ್ಕೆ ದೊರೆಯಾದ ದೇವತೆ. ವೇದಗಳಲ್ಲಿ ಅವನು ಬಲು ಮುಖ್ಯನಾದ ದೇವತೆ. ಅವನಿಗೆ ಸೋಮರಸವು ಪ್ರಿಯವೆಂದೂ, ಅವನು ಅದರಿಂದ ಮತ್ತನಾಗಲು ರಥವೇರಿ ವೈರಿಗಳನ್ನು ನಾಶಮಾಡಲು ಹೊರಡುವನೆಂದೂ ಹೇಳಿಕೆ. ಇವನೇ ಮಳೆಗೆ ಕಾರಣನು. ಅವನ ಆಯುಧವೇ ಸಿಡಿಲು. ಈ ದೇವತೆಯನ್ನು ಕುರಿತು ಪುರಾಣಗಳಲ್ಲಿ ಅಸಂಖ್ಯಾತ ಕಥೆಗಳಿವೆ.

ಇಂದ್ರಕೀಲ ಇಂದ್ರನ ಕೀಲಿನಂತೆ ಅತ್ಯುನ್ನತವಾದ ಒಂದು ಪರ್ವತ. ಇಲ್ಲಿ ಅರ್ಜುನನು ತಪಸ್ಸು ಮಾಡಿದನು; ಮಂದರ ಪರ್ವತ.

ಇಂದ್ರಗೋಪ (ಇಂದ್ರನಿಂದ ರಕ್ಷಿಸಲ್ಪಡುವುದು) ಬೆಂಕಿ ಹುಳು, ಮಿಣುಕು ಹುಳು.

ಇಂದ್ರಚಾಪ ಮಳೆಬಿಲ್ಲು.

ಇಂದ್ರಜಿತು ಇಂದ್ರನನ್ನು ಗೆದ್ದವ, ರಾವಣನ ಹಿರಿಯ ಮಗನಾದ ಮೇಘನಾದ, ಇಂದಗಿ.

ಇಂದ್ರದಿಕ್ ಇಂದ್ರನು ಅಧಿದೇವತೆಯಾಗಿರುವ ದಿಕ್ಕು, ಪೂರ್ವದಿಕ್ಕು.

ಇಂದ್ರದ್ಯುಮ್ನ ಭರತನಿಗೆ ಸುಮತಿಯಲ್ಲಿ ಹುಟ್ಟಿದ ಮಗನು.

ಇಂದ್ರನೀಲ ಆಕಾಶದಂತೆ ಕಡುನೀಲ ಬಣ್ಣವಾದ ಒಂದು ರತ್ನ.

ಇಂದ್ರಪ್ರಸ್ಥ ಇಂದ್ರನ ಸ್ಥಾನವಾದ ಮೇರುವಿನ ತಪ್ಪಲಿನಂತಿರುವುದು, ಹಸ್ತಿನಾಪುರದ ಹತ್ತಿರವಿರುವ ಪಾಂಡವರ ರಾಜಧಾನಿ, ಯಮುನಾ ನದಿಯ ದಡದ ಮೇಲಿರುವ ಹಳೆಯ ದಿಲ್ಲಿ.

ಇಂದ್ರಸೇನ ನಳರಾಯನ ಮಗ.

ಇಂದ್ರಸೇನೆ ನಳರಾಯನ ಮಗಳು; ಇವಳ ತಾಯಿ ದಮಯಂತಿ.

ಇಂದ್ರಾಣಿ ಇಂದ್ರನ ಹೆಂಡತಿಯಾದ ಶಚಿ, ಸಪ್ತಮಾತೃಕಾ ದೇವತೆಗಳಲ್ಲಿ ಒಬ್ಬಳು; ಲಕ್ಕೀಗಿಡ.

ಇಂದ್ರಾಯುಧ ಇಂದ್ರನ ವಜ್ರ ಆಯುಧ; ಚಂದ್ರಾಪೀಡನೆಂಬವನ ಕುದುರೆ.

**ಇಂದ್ರಾವರ** ಇಂದ್ರನ ತಮ್ಮ; ವಿಷ್ಣು; ಕೃಷ್ಣ.

**ಇಂದ್ರಿಯ** ಇಂದ್ರನಿಗೆ ಅನ್ವಯಿಸುವ; ಕಣ್ಣು, ಕಿವಿ, ನಾಲಗೆಯಂಥ ಅನುಭವಗಳನ್ನು ಕೊಡುವ ಅವಯವ.

**—ನಿಗ್ರಹ** ಇಂದ್ರಿಯಗಳ ಆಸೆಯನ್ನು ಬಿಗಿ ಹಿಡಿಯುವುದು, ಮನಸ್ಸಿನ ಆಸೆಗಳನ್ನು ಬಿಗಿಹಿಡಿಯುವಿಕೆ, ಸಂಯಮ.

**ಇಂದ್ರೇಭ** ಇಂದ್ರನ ಆನೆ, ಐರಾವತ.

**ಇಂಧನ**(ಇಂಧ್=ಉರಿ) ಕಟ್ಟಿಗೆ, ಉರುವಲು.

**ಇಂಪು** ಸವಿ, ಮನೋಹರ.

**— ಪಡೆ** ಒಳ್ಳಿತಾಗು, ಮನೋಹರವಾಗು.

**ಇಂಬಳು** ನೆಲ ಜಿಗಳೆ.

**ಇಂಬಳಿಕ್ಕೆ** (ಇನ್+ಬಳಿಕ್ಕೆ) ತರುವಾಯ.

**ಇಂಬಿಡಿಸು** ಸ್ಥಳದಲ್ಲಿಡಿಸು, ವಿಸ್ತಾರವಾಗಿ ಇಡಿಸು.

**ಇಂಬು** ನೆಲೆ, ಆಶ್ರಯ, ಸ್ಥಾನ; ವಿಸ್ತಾರ; ಲೇಸು; ಸ್ಥಿತಿ.

**—ಅರಿ** ಆಶ್ರಯ ತಿಳಿ.

**—ಆಗು** ಆಶ್ರಯವಾಗು, ಸ್ಥಳವಾಗು.

**—ಎನೆ** ಮನೋಹರವಾಗಿರುವ ಹಾಗೆ.

**—ಕೊಳ್** ಇಂಬಾಗು, ಆಶ್ರಯಿಸು; ಆಶ್ರಯವನ್ನು ಹೊಂದು.

**—ವೆತ್ತ** ಮನೋಹರವಾದ.

**ಇಂಬೆಳಸು** ಇಂಪಾದ ಬೆಳೆ, ಸಮೃದ್ಧವಾದ ಬೆಳೆ.

## ಈ

**ಈ** (ಈಯು) ಕೊಡು; ಇದು.

**ಈಕೆ** ಈ ಹೆಂಗಸು.

**ಈಕ್ಷಣ** ನೋಡುವಿಕೆ; ಕಣ್ಣು.

**ಈಕ್ಷಣಿಕ** ಭವಿಷ್ಯವನ್ನು ಹೇಳುವವ.

**ಈಕ್ಷಿತ** ನೋಡಿದ, ಗ್ರಹಿಸಿದ.

**ಈಗ** (ಈಗಳು) ಈ ಸಮಯ.

**ಈಗೆ** ಕೊಡಲಿ.

**ಈಚಲ** (ಈಚಲು) ಒಂದು ಜಾತಿಯ ತಾಳೆ ಮರ.

**—ನೀರು** ಕಳ್ಳು, ಹೆಂಡ.

**ಈಚು** ಕಾವು, ನೇಗಿಲಿನ ಹಿಡಿ.

**ಈಚೆ** ಇತ್ತೀಚೆಗೆ.

**ಈಜು** ಈಸು.

**ಈಟಿ** ಸಬಳ; ಕೊಂತ.

**ಈಟು** ಇಷ್ಟು; ಸಸ್ಯಸಾರ.

**ಈಡಾಡು** ಬಿಡು, ಬಿಸುಡು; ಚೆಲ್ಲು; ತ್ಯಜಿಸು.

**ಈಡಿಗ** ಹೆಂಡ ಇಳಿಸುವ ಪಂಗಡದವ.

**ಈಡಿರಿ** ಬಲವಾಗಿ ಹಾಯು; ಬಲವಾಗಿ ಹೊಡೆ; ರಭಸದಿಂದ ಮುಂದುವರಿ; ಹಿಡಿದು ಜಗ್ಗು.

**ಈಡು** ಸರಿ, ಸಮ; ಜೊತೆ; ಹಾಕುವ ವಸ್ತು, ಕೋವಿಯಲ್ಲಿ ಸೇರಿಸುವ ಮದ್ದು, ತೋಟೆಯಂಥ ವಸ್ತು; ಅಡವು, ಅಡಮಾನ.

**—ಗಾರ** ಬಲಶಾಲಿ, ಶಕ್ತಿವಂತ; ಅಡವುದಾರ; ಗುರಿ ತಪ್ಪದೆ ಹೊಡೆಯುವವ.

**ಈಡೇರಿಸು** ವಚನಪಾಲಿಸು, ನೆರವೇರಿಸು.

**ಈತ** ಇವ, ಈ ಮನುಷ್ಯ.

**—ಗಳ್** ಇವರು.

**ಈತಿಬಾಧೆ** ಷಡೀತಿ ಬಾಧೆ. ಬಹಳ ಮಳೆ ಬರುವುದು—ಮಳೆಯೇ ಬಾರದಿರುವುದು—ಇಲಿಗಳು ಬೆಳೆ ತಿಂದು ಹಾಳು ಮಾಡುವುದು—ಮಿಡಿತೆಯ ಹಿಂಡು ಬರುವುದು—ಗಿಳಿಗಳು ಹೆಚ್ಚಿ ತೆನೆಯನ್ನು ಕಚ್ಚಿಕೊಂಡು ಹೋಗುವುದು—ದೇಶದ ಅರಸರು ಸಮೀಪದಲ್ಲಿದ್ದು ಪ್ರಜೆಗಳನ್ನು ಪೀಡಿಸುತ್ತಿರುವುದು—ಇವೇ ಬಾಧೆಗಳು, ಪೀಡೆಗಳು.

ಈದೊರೆತು ಈ ಪ್ರಕಾರ.
ಈನ್(ಈಯು)ಹೆರು,ಪ್ರಸವಿಸು,ಮರಿಹಾಕು.
ಈಪ್ಸಿತ ಕಾಂಕ್ಷೆ.
—ಅರ್ಥ ಮನಸ್ಸಿನ ಬಯಕೆ.
ಈರ್ ಎರಡು.
—ಆರು ಹನ್ನೆರಡು.
—ಐದು ಹತ್ತು.
ಈರಣ ನಡಿಸುವುದು; ಏಳಿಸುವುದು.
ಈರು ಹೇನಿನ ಮೊಟ್ಟೆ; ಅಂಟು.
—ಹಣಿಗೆ (ಈರಣಿಗೆ) ಹೇನಿನ ಮೊಟ್ಟೆಗಳನ್ನು ತೆಗೆಯುವ ಹಣಿಗೆ.
ಈರ್ಮ ಗಾಯ.
ಈರ್ಷೆ ಸಿಟ್ಟು; ಮತ್ಸರ.
ಈಲು ಪ್ರಾಣಿಗಳು ಮನುಷ್ಯನನ್ನು ಪ್ರೀತಿಸುವಿಕೆ.
—ಮಾಡು ಪಳಗಿಸು, ಸಾಧುಮಾಡು.
ಈಶ ಒಡೆಯ, ಯಜಮಾನ; ಶಿವ.
ಈಶಾನ ಪರಮೇಶ್ವರ, ಶಿವನ ಅಷ್ಟಮೂರ್ತಿಗಳಲ್ಲಿ ಸೂರ್ಯಮೂರ್ತಿ; ಒಡೆಯ; ಶಮೀವೃಕ್ಷ, ಬನ್ನಿಮರ.
ಈಶಾನ್ಯ ಈಶಾನನ ಸಂಬಂಧವಾದ ದಿಕ್ಕು; ಬಡಗು ಮೂಡಲ ನಡುವೆ; ಶಿವ.
ಈಶ್ವರ ಶಿವ, ಒಡೆಯ, ದೇವರು.
—ಸದ್ಮ ದೇವರ ಗುಡಿ, ದೇವಾಲಯ.
ಈಶ್ವರಿ ದುರ್ಗಾದೇವಿ; ಈಶ್ವರೀಬಳ್ಳಿ.
ಈಷಣ ಕೋರಿಕೆ, ಅಪೇಕ್ಷೆ.
—ತ್ರಯ ಈ ಮೂರು ಅಪೇಕ್ಷೆಗಳು—ಮಕ್ಕಳ ಅಪೇಕ್ಷೆ, ಹೆಂಡತಿಯ ಅಪೇಕ್ಷೆ, ದ್ರವ್ಯಾಪೇಕ್ಷೆ.
ಈಷತ್ ತುಸು, ಸ್ವಲ್ಪ; ವ್ಯತ್ಯಾಸ.
ಈಷೆ ಈಸು (ದ್ಭ), ನೇಗಿಲ ದಂಟು.
ಈಸರ (ದ್ಭ) ಈಶ್ವರ (ಸಂ).
ಈಸು ಈಜು, ಈಚು; ಇಪ್ಪು; ಬಂಡಿಯ ಮೂತಿ; ನೇಗಿಲಿನ ದಿಂಡು.
—ಕುಂಬಳ ಈಜು ಕಲಿಯಲು ಉಪಯೋಗಿಸುವ ಕುಂಬಳಕಾಯಿ ಬುರುಡೆ.
ಈಹಾ ಚೇಷ್ಟೆ; ಉದ್ಯೋಗ; ಅಪೇಕ್ಷೆ.
—ಮೃಗ ಜಿಂಕೆ ಮೊದಲಾದ ಮೃಗಗಳನ್ನಿಟ್ಟಿಸುವುದು; ತೋಳ; ರೂಪಕ ಭೇದ.
ಈಹಿತ ಅಪೇಕ್ಷಿಸಿದುದು; ಹುಡುಕಲ್ಪಟ್ಟುದು; ಅಪೇಕ್ಷೆ.
ಈಳ್ (ಈಳು) ಸೆಳಕೊಳ್ಳು; ಅಪಹರಿಸು, ಎಳೆದು ಹಾಕು.
—ಕೊಳ್ಳು ಕಸುಕೊಳ್ಳು, ಸೆಳೆದುಕೊಳ್ಳು.
ಈಳಿಗೆ ಹೆರೆಮಣೆ, ತುರಿಮಣೆ.
ಈಳೆ ಕಿತ್ತಿಳೆ, ಹೇರಿಳೆ.
ಈಂಟು ಕುಡಿ.

# ಉ

ಉಕ್ಕಡ ಪಟ್ಟಣದ ಹೊರಗಡೆ; ಕಾವಲ ಮನೆ; ಮುಂಗಾವಲು; ಸುಂಕದ ಮನೆ.
ಉಕ್ಕಲಿಸು ಮಿರು, ಕೈಮಿರು.
ಉಕ್ಕಂದ ಉಬ್ಬು; ಸಮೃದ್ಧಿ; ದೃಢ; ವಿಶೇಷ.
ಉಕ್ಕು ಹೆಚ್ಚಾಗು; ಉಬ್ಬು, ಗರ್ವ, ಶಕ್ತಿ; ಮೇಲೆ ಬರು; ಸೊಕ್ಕು; ಹದಮಾಡಿದ ಕಬ್ಬಿಣ.
—ಲ (ಉಕ್ಕುಳ) ಉಕ್ಕುವಿಕೆ, ಏಳಿಗೆ.
ಉಕ್ಕುಡಿಸು ಶಕ್ತಿಗುಂದು, ಶಕ್ತಿಗುಂದಿಸು.
ಉಕ್ಕೆ (ಉಳ್ಕೆ) ಉಳುವುದು; ಉಳಿದ.
—ಹೊಡೆ ಉಳು.
ಉಕ್ಕೆವ ಠಕ್ಕು, ಮೋಸ; ಉತ್ಸವ(ಸಂ).
ಉಕ್ತ ಹೇಳಿದ.
ಉಕ್ತಿ ಮಾತು, ಶಬ್ದ; ಹೇಳಿದಂಥದು.

ಉಕ್ಷ ಎತ್ತು.

—ಗ ಎತ್ತನ್ನು ಸವಾರಿಮಾಡುವವ ಶಿವ.

—ತರ ದೊಡ್ಡ ಎತ್ತು, ಯೌವನದ ಎತ್ತು.

ಉಖೆ ಪಾತ್ರೆ, ಕುದಿವ ಪಾತ್ರೆ.

ಉಗಮ ಉದ್ಗಮ, ಹುಟ್ಟು.

ಉಗರಿಸು ಕಷ್ಟದಿಂದ ಉಸಿರುಬಿಡು.

ಉಗಾದಿ ಯುಗಾದಿ, ವರ್ಷದ ಮೊದಲನೆ ದಿನ.

ಉಗಿ ಹೊರಕ್ಕೆ ಎಳೆ; ಹರಿ; ಉಗುರಿನಿಂದ ಗಾಯಮಾಡು; ನೀರಿನ ಆವಿ; ಹೊಗು, ಪ್ರವೇಶಿಸು; ದಾಟು; ಜಗ್ಗು; ಸುರಿ; ಬೀಳು; ಸೀಳು.

—ಬಿಗಿ ಸೀಳು.

ಉಗಿಪದ ಸುಲಿಗೆ.

ಉಗು (ಒಗು) ಸುರಿ; ಒಗೆದುಬಿಡು; ಬಿಡು.

ಉಗುರ್ ಉಗುರು.

—ಇಸು ಉಗುರಿನಿಂದ ಪರಚು, ಉಗುರಿನಿಂದ ಸರಿಗೊಳಿಸು.

ಉಗುಳ್ ಉಗುಳು; ಕಾರು, ವಾಂತಿಮಾಡು; ಬಾಯಲ್ಲಿ ಹೊರಡುವ ನೀರು, ಲಾಲಾಜಲ.

ಉಗೆ ಒಗೆ; ಹುಟ್ಟುವುದು.

ಉಗ್ಗ ಪಾತ್ರೆಗಳನ್ನು ಎತ್ತಿ ಹಿಡಿಯಲು ಕಟ್ಟುವ ಹಗ್ಗದ ಹಿಡಿ.

ಉಗ್ಗಡ (ದ್ಭ) ಉತ್ಕಟ (ಸಂ), ಹೆಚ್ಚಿಗೆ, ಅಧಿಕ; ಉಗ್ಗಡಣೆ, ಹೊಗಳಿಕೆ.

—ಇಸು ಗಟ್ಟಿಯಾಗಿ ಕೂಗಿ ಹೊಗಳು, ಪರಾಕು ಹೇಳು.

—ಣೆ ಸಂಗೀತದಿಂದ ಹೊಗಳುವುದು, ಘೋಷ.

ಉಗ್ಗು ತೊದಲು ಮಾತು, ಬಿಕ್ಕಳಿಕೆ; ಬಿಕ್ಕು.

ಉಗ್ರ ಶಿವ; ಕ್ಷತ್ರಿಯನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ ಸಂಕೀರ್ಣ ಜಾತಿ; ಬಜೆ; ಒಂದು ವಿಧವಾದ ವಿಷ; ನಯವಿಲ್ಲದ, ಕ್ರೂರ, ಬಹಳ ಸಿಟ್ಟುಳ್ಳ.

ಉಗ್ರಗಂಧ ಸಂಪಗೆ.

ಉಗ್ರಧನ್ವ ಇಂದ್ರ.

ಉಗ್ರಶ್ರವ (ಉಗ್ರ=ತೀಕ್ಷ್ಣವಾದ+ಶ್ರವ=ಕಿವಿಯುಳ್ಳವ) ಉಪದೇಶಿಸಿದುದನ್ನು ತ್ವರೆಯಾಗಿ ಗ್ರಹಿಸಬಲ್ಲವ; ರೋಮಹರ್ಷಣನೆಂದು ಹೆಸರುಳ್ಳ ಸೂತ ಪೌರಾಣಿಕನ ಮಗ.

ಉಗ್ರಸೇನ (ಉಗ್ರ=ತೀವ್ರವಾದ+ಸೇನ=ಸೈನ್ಯವುಳ್ಳವ) ಕಂಸನ ತಂದೆ, ಆಹುಕನ ಮಗ, ಇವನ ಸಹೋದರನು; ದೇವಕಿಯ ತಂದೆ ದೇವಕನು.

ಉಗ್ರಾಕ್ಷ ಶಿವ.

ಉಗ್ರಾಣ ದಾಸ್ತಾನಿನ ಕೋಣೆ, ಕೊಟ್ಟಾರ, ಖಜಾನೆ.

ಉಗ್ರಾಣಿ ಉಗ್ರಾಣದ ಸೇವಕ, ಗ್ರಾಮ ಉದ್ಯೋಗಸ್ಥರ ಸೇವಕ.

ಉಗ್ರಾನ್ವಯ ಉಗ್ರಸೇನನ ವಂಶ.

ಉಗ್ರಾಹಿ ಕ್ರೂರ ಸರ್ಪ.

ಉಘೆ ಭಲೇ; ಸಂತೋಷದ ಕೂಗು.

ಉಚಾಯಿಸು ಉಚ್ಚಾಯಿಸು, ದಾಟಹೋಗು.

ಉಚಿತ ಯೋಗ್ಯ, ಅನುಕೂಲ; ಇನಾಮು, ದಾನ; ಪುಕ್ಕಟೆ.

—ಜ್ಞ ಯಾವುದು ಯೋಗ್ಯವೆಂದು ತಿಳಿದವ, ವಿವೇಕಿ.

ಉಚ್ಚ ಮೇಲಕ್ಕೆ, ಎತ್ತರ; ಉನ್ನತ; ಗ್ರಹಗಳು ಶುಭ ಫಲಗಳನ್ನು ಕೊಡುವ ಸ್ಥಾನ.

ಉಚ್ಚಲತ್ ಮೇಲಕ್ಕೆ ಹಾರುತ್ತಿರುವ.

ಉಚ್ಚಯ ಸಂಗ್ರಹ, ಪುಂಜ.

ಉಚ್ಚರಿಸು ಉಚ್ಚಾರ ಮಾಡಿ ಹೇಳು.

**ಉಚ್ಚಳಿಸು** ಹೊರಡು, ಹೊರಹೊಮ್ಮು; ಮೇಲೆ ಹಾರು; ಪಾರಾಗಿ ಹೋಗು; ಒಡೆದು ಹೊರಗೆ ಬರು.

**ಉಚ್ಚಂಡ** ಬಲವಾದ.

**ಉಚ್ಚಾಟನೆ** ಭೂತಪ್ರೇತಗಳನ್ನು ಬಿಡಿಸಿ ಓಡಿಸುವುದು, ಸ್ಥಳ ತಪ್ಪಿಸುವುದು.

**ಉಚ್ಚಾಪತಿ** ಅಂಗಡಿಯ ಕಡ, ಉದ್ದರಿ.

**ಉಚ್ಚಾರ** ಉಚ್ಚರಿಸುವಿಕೆ, ಉಚ್ಚಾರಣೆ; ಮಲ.

**ಉಚ್ಚಾಲಿಸು** (ನೋಡು: ಉಚ್ಚಳಿಸು).

**ಉಚ್ಚಾಸನ** ಎತ್ತರದ ಆಸನ, ವೇದಿಕೆ.

**ಉಚ್ಚು** ಸಡಿಲಾಗು; ಹೊರಗೆ ಹೊರಡು, ಬಿಚ್ಚು.

**ಉಚ್ಚೆ** ಮೂತ್ರ.

**ಉಚ್ಚೈಸ್** ಉನ್ನತ, ಗಟ್ಟಿಯಾಗಿ.

**ಉಚ್ಚೈಸ್ಸ್ವರ** ಮೇಲಿನ; ಅತಿ ಎತ್ತರದ.

**ಉಚ್ಚೈಃಶ್ರವ** (ಉಚ್ಚೈಃ = ಉದ್ದವಾದ + ಶ್ರವ = ಕಿವಿಯುಳ್ಳುದು) ಉನ್ನತವಾದ ಕಿವಿಯುಳ್ಳುದು, ಇಂದ್ರನ ಕುದುರೆ.

**ಉಚ್ಛಾದನ** ಸುಗಂಧಲೇಪನದಿಂದ ಮೈತೊಳೆಯುವುದು.

**ಉಚ್ಛಿಷ್ಟ** ಉಂಡಮೇಲೆ ಉಳಿವ ಎಂಜಲು.

**ಉಚ್ಛೃಂಖಲ** (ಶೃಂಖಲ=ಸಂಕಲೆಯಿಂದ+ ಉತ್=ಬಿಡುಗಡೆ) ಸಂಕಲೆಯಿಲ್ಲದುದು, ತಡೆಯಿಲ್ಲದುದು.

**ಉಚ್ಛ್ರಾಯ** ಎತ್ತರ, ಉನ್ನತಿ; ಉತ್ತಮ.

**ಉಚ್ಛ್ರಿತ** ಉನ್ನತವಾದ, ಅಧಿಕವಾದ; ಸೊಕ್ಕಿದ.

**ಉಜಾಡು** ನಿರ್ಜನ ಪ್ರದೇಶ, ಹಾಳೂರು.

**ಉಜ್ಜನಿತ** ಹುಟ್ಟಿದ.

**ಉಜ್ಜಯಿನಿ** ವಿಕ್ರಮಾದಿತ್ಯನ ರಾಜ್ಯಧಾನಿ.

**ಉಜ್ಜವಣೆ**(ದ್ಭ) ಉದ್ಯಾಪನ(ಸಂ), ತೊಡಗಿದ ವ್ರತವನ್ನು ಸಮಾಪ್ತಿಗೊಳಿಸುವುದು.

**ಉಜ್ಜಳ**(ದ್ಭ) ಉಜ್ಜ್ವಲ(ಸಂ), ಪ್ರಕಾಶವಾದ; ಸುಂದರವಾದ; ಬಂಗಾರ; ಶೃಂಗಾರ ರಸ.
—**ಇಕೆ** ಉಜ್ಜ್ವಲಿಕೆ(ಸಂ), ಪ್ರಕಾಶ, ಉಜ್ಜ್ವಲವಾದ ಕಾಂತಿ.

**ಉಜ್ಜ್ವಾಸನ** ಕೊಲೆ.

**ಉಜ್ಜೀವಿಸು** ಬದುಕುವ ಹಾಗೆ ಮಾಡು, ಬದುಕು.

**ಉಜ್ಜು** ತಿಕ್ಕು.
—**ಕೊರಡು** (ಉಜ್ಜುಗೊರಡು) ಮರವನ್ನು ಉಜ್ಜಿ ನಯಮಾಡುವ ಸಾಧನ, ಕೀಸುಳಿ.

**ಉಜ್ಜುಗ** (ದ್ಭ) ಉದ್ಯೋಗ (ಸಂ), ಕೆಲಸ.
—**ಇಸು** (ದ್ಭ) ಉದ್ಯೋಗಿಸು; ಪ್ರಯತ್ನಿಸು; ಮಾಡು.

**ಉಜ್ಜೃಂಭಿತ** ಅಭಿವೃದ್ಧಿಗೊಂಡ, ವಿಸ್ತರಿಸಲ್ಪಟ್ಟ, ಅರಳಿದ.

**ಉಜ್ಜ್ವಲ** ಪ್ರಕಾಶ; ಕಾಂತಿಯುಕ್ತ.

**ಉಟಜ** (ಉಟ=ಹುಲ್ಲು ಎಲೆಗಳಿಂದ+ಜ= ಹುಟ್ಟಿದುದು, ಆದುದು) ಹುಲ್ಲು ಎಲೆಗಳಿಂದ ಮಾಡಿದುದು, ಋಷಿಗಳ ಎಲೆಮನೆ, ಪರ್ಣಶಾಲೆ.

**ಉಟಾಯಿಸು** ಎಬ್ಬಿಸು; ಉಠಾವಣೆ.

**ಉಠಾವುರಿ** ತ್ವರೆಯಾದ; ಫಕ್ಕನೆ, ಫಕ್ಕನೆ ಮುಂದುವರಿ; ಬಲದಿಂದ ಮುಂದೆ ಹೋಗು.

**ಉಡಾಫೆ** ತಿರಸ್ಕಾರ.

**ಉಡಾಯಿಸು** ಇಲ್ಲೆಂದು ತಿರಸ್ಕರಿಸು.

**ಉಡಾಳ** ಉಂಡಾಡಿ; ಹೊಣೆಯರಿಯದವ; ಆಲಸಿ.

**ಉಡಿ** ತುಂಡುಮಾಡು, ಮುರಿ, ಒಡೆ; ಚಿವುಟು, ಜಜ್ಜು; ಸೊಂಟ, ಕಟಿ, ಶ್ರೋಣಿ; ಮಡಿಲು.
—**ದಾರ** ಸೊಂಟದ ದಾರ, ನೇವಳ.

—ಉ ಯಾವ ಪದಾರ್ಥವನ್ನಾದರೂ ತುಂಬಿಕೊಳ್ಳುವುದಕ್ಕಾಗಿ ಉಟ್ಟ ಬಟ್ಟೆಯ ಸೆರಗನ್ನು ಮಡಿಸಿ ಮಾಡಿದ ಚೀಲ, ಮಡಿಲು.

**ಉಡಿಕೂಸು** ತೋಳಲ್ಲಿಟ್ಟು ಸಾಕಬೇಕಾದ ಮಗು, ಉಡಿಯಲ್ಲಿಟ್ಟು ಸಾಕುವ ಮಗು.

**ಉಡಿಕೆ** ಪುನರ್ವಿವಾಹ.

—ಗಂಡ ವಿಧವೆಯನ್ನು ಮದುವೆಯಾದವ.

**ಉಡಿಗೆ** ಉಡುಗೆ; ಕೂಡಿಕೆ, ಕೂಡಾವಳಿ.

—ತೊಡಿಗೆ ಬಟ್ಟೆ ಮತ್ತು ಆಭರಣ.

**ಉಡು** (ಆಕಾಶದಲ್ಲಿ ಸಂಚರಿಸುವುದರಿಂದ ಉಡು) ನಕ್ಷತ್ರ; ಓತಿ ವರ್ಗದ ಪ್ರಾಣಿ ವಿಶೇಷ; ನೀರು; ಉಟ್ಟುಕೊಳ್ಳು.

—ಪ (ಉಡು = ನಕ್ಷತ್ರಗಳನ್ನು + ಪ = ಪಾಲಿಸುವವ, ಒಡೆಯ) ನಕ್ಷತ್ರಗಳೊಡೆಯ, ಚಂದ್ರ, (ಉಡು = ನೀರು, ಪ=ರಕ್ಷಿಸುವುದು) ನೀರಲ್ಲಿ ರಕ್ಷಿಸುವುದು, ತೆಪ್ಪ.

—ಪತಿ ತೆಪ್ಪ, ಚಂದ್ರ.

—ಪು ಉಡಿಗೆ.

—ರಾಜ ಉಡುಗಳ ಅರಸು, ನಕ್ಷತ್ರರಾಜನಾದ ಚಂದ್ರ.

**ಉಡುಗು** ಮರುಟು, ಮುದುರು, ಸಂಕೋಚವಾಗು.

**ಉಡುಗೊರೆ** ಉಚಿತವಾಗಿ ಕೊಡುವ ವಸ್ತ್ರಾದಿಗಳು; ಉಟ್ಟುಕೊಳ್ಳುವ ಬಟ್ಟೆ, ಪಾವುಡ.

**ಉಡುತೆ** ಚಣಿಲು, ಅಳಿಲು.

**ಉಡೆ** ಉಡುವ ಬಟ್ಟೆ.

—ಮಣಿ ನಡುವಿಗೆ ಕಟ್ಟುವ ಒಂದು ಆಭರಣ.

**ಉಡ್ಡೀನ** ಹಕ್ಕಿಗಳು ಮೇಲಕ್ಕೆ ನೆಗೆಯುವುದು, ಹಾರಾಟ.

**ಉಣ್** (ಉಣ್ಣು) ತಿನ್ನು.

—ಇಸು ಊಟ, ಊಟಮಾಡಿಸು.

**ಉಣುಗು** ದನಕರುಗಳಿಗೆ ಮತ್ತು ನಾಯಿಗಳಿಗೆ ಹತ್ತಿಕೊಳ್ಳುವ ಒಂದು ಕೀಟ, ಉಣ್ಣಿ.

**ಉಣ್ಣಿ** ಉಣುಗು.

**ಉಣ್ಣೆ** (ಉಣ್ಣಿ) ಊಟವಮಾಡಲು; ಕುರಿ ಆಡು ಮೊದಲಾದುವುಗಳ ಮೈರೋಮ.

**ಉಣ್ಮು** ಉಂಟಾಗು, ಹುಟ್ಟು; ಏಳು.

**ಉತ** ವಿಕಲ್ಪ; ಪ್ರಶ್ನೆ; ಬಹಳ; ಸಂಶಯ; ಭಯ; ಅಥವಾ; ಎದೆ.

**ಉತರಾಣ** ಉತ್ತರ ದಿಕ್ಕಿಂದ ಬೀಸುವ ಗಾಳಿ.

**ಉತರಾಯಿಸು** ನಕಲು ತೆಗೆ.

**ಉತಾವಳಿ** ಅವಸರ.

**ಉತಾಹೋ** ವಿಕಲ್ಪಾರ್ಥ; ಸಂದೇಹ, ಪ್ರಶ್ನೆ; ವಿಚಾರ.

**ಉತ್ಕ** ಚಲಿಸುತ್ತಿರುವ ಮನಸ್ಸು; ಆತುರ, ಮೈಮರೆತ; ಮದಿಸಿದ.

**ಉತ್ಕಚ** ನೆಟ್ಟಗೆ ಕೂದಲುಳ್ಳವ.

**ಉತ್ಕಟ** ಬಹಳ; ಮದವೇರಿದ; ಆನೆ; ಉತ್ಕೃಷ್ಟ; ಮಿತಿಮೀರಿದ; ಕಷ್ಟ, ಭಯಂಕರ, ಉಗ್ಗಟ (ದ್ಭ).

**ಉತ್ಕರ** ರಾಶಿ; ಅಧಿಕ; ಸಮೂಹ.

**ಉತ್ಕರ್ಷ** ಬಹಳ, ಅತಿಶಯ.

**ಉತ್ಕಲ** ಓಢ್ರದೇಶ, ಒರಿಸ್ಸಾ ಪ್ರಾಂತ.

**ಉತ್ಕಲಿಕೆ** (ಉತ್ಕಳಿಕೆ) ವಿರಹಚಿಂತೆ; ಅಂಜಿಕೆ; ತೆರೆ; ಆತುರ; ಕುತೂಹಲ; ಔತ್ಸುಕ್ಯ, ಕಮಂಡಲು; ಕೆರೆ; ಮೊಗ್ಗೆ.

**ಉತ್ಕಂಠ** ಉತ್ಕಂಠೆ, ಕಾತರ, ಆತುರ, ಆಸಕ್ತಿಯುಳ್ಳ.

**ಉತ್ಕಂಠೆ** (ಆತುರ) ಇಷ್ಟಾರ್ಥ; ಲಾಭಕ್ಕಾಗಿ ಪ್ರಿಯರಿಗಾಗಿ ಪಡುವ ಆತುರ; ದುಃಖ, ಶೋಕ.

ಉತ್ಕೀರ್ಣ ಕೊರೆದ, ತೂತುಮಾಡಿದ; ರಾಶಿ ಹಾಕಿದ.

ಉತ್ಕೃತ್ತ ಕತ್ತರಿಸಲ್ಪಟ್ಟ.

ಉತ್ಕೃಷ್ಟ ಶ್ರೇಷ್ಠ, ಉತ್ತಮ.

ಉತ್ಕೋಚ ಲಂಚ.

ಉತ್ಕ್ರಮಣ ಹಾದಿ ತಪ್ಪುವಿಕೆ; ಮೇಲೇರುವುದು, ಕಡೆಗೆ ಬಂದಿರುವುದು.

ಉತ್ಕ್ರಾಂತಿ ಹಾದಿ ಬಿಟ್ಟು ಚಲಿಸುವುದು; ಪದಭ್ರಷ್ಟನಾಗುವುದು.

ಉತ್ತ ಇನ್ನೊಂದು ಕಡೆ.

ಉತ್ತಪ್ತ ಶಿರೋಭೂಷಣ; ಕಾದ; ಒಣ ಮಾಂಸ.

ಉತ್ತಮ ಶ್ರೇಷ್ಠ, ಧ್ರುವನ ಸಹೋದರ.

—ಇಕೆ ಉತ್ತಮವಾಗಿರುವಿಕೆ, ಶ್ರೇಷ್ಠತನ.

—ಉತ್ತಮ ಬಹಳ ಮೇಲಾದುದು.

ಉತ್ತಮರ್ಣ (ಉತ್ತಮ + ಋಣ) ಸಾಲ ಕೊಟ್ಟವ.

ಉತ್ತಮಾಂಗ (ಉತ್ತಮ = ಶ್ರೇಷ್ಠವಾದ) ಶ್ರೇಷ್ಠವಾದ ಅವಯವ, ತಲೆ.

ಉತ್ತಮೌಜ ಕ್ಷತ್ರಿಯ; ಒಬ್ಬ ಪಾಂಚಾಲ. ಈತನು ಭಾರತ ಯುದ್ಧದಲ್ಲಿ ಪಾಂಡವರಿಗಾಗಿ ಕಾದಿದನು.

ಉತ್ತರ ಪ್ರತಿಮಾತು; ಭವಿಷ್ಯ; ಉತ್ತರಕುಮಾರ, ವಿರಾಟನ ಮಗ; ರಥೋದಾರ, ಇವನ ಸಹೋದರಶ್ವೇತ. ಇವನ ವಧೆಯು ಶಲ್ಯನಿಂದಾಯಿತು; ಮೇಲಿನ; ಬಡಗು ದಿಕ್ಕು; ದಾಟುವಿಕೆ, ತಪ್ಪುವಿಕೆ.

—ಇಸು ಉತ್ತರ ಕೊಡು; ತಪ್ಪಿಸಿಕೊಳ್ಳು; ದಾಟು; ಕತ್ತರಿಸು.

—ಣ ದಾಟುವಿಕೆ.

ಉತ್ತರಕುರು ಮೇರುವಿನ ಉತ್ತರಕ್ಕಿರುವ ದೇಶ.

ಉತ್ತರಕ್ರಿಯೆ ಅಪರಕ್ರಿಯೆ, ಮರಣದ ಬಳಿಕ ಮಾಡುವ ವಿಧಿಗಳು.

ಉತ್ತರಮೀಮಾಂಸೆ ಬೃಹದಾರಣ್ಯ ಉಪನಿಷತ್ತಿನಲ್ಲಿ ಅಡಗಿರುವ ತತ್ವಭಾಗವನ್ನು ವಿವರಿಸುವ ಆರನೆಯ ದರ್ಶನ.

ಉತ್ತರವಾದಿ ಪ್ರತಿವಾದಿ; ಹೊಣೆಗಾರ.

ಉತ್ತರಾಧಿಕಾರಿ ಮುಂದಿನ ಹಕ್ಕುದಾರ.

ಉತ್ತರಾಯಿ ಹಂಗಿನಿಂದ ಅಥವಾ ಉಪಕಾರದಿಂದ ಮಾಡಿದುದು; ದೂರದವ, ಪರಕೀಯ.

ಉತ್ತರೀಯ ಮೈಮೇಲೆ ಹಾಕಿಕೊಳ್ಳುವ ಶಾಲು.

ಉತ್ತರೆ ವಿರಾಟನ ಮಗಳು, ಅಭಿಮನ್ಯುವಿನ ಹೆಂಡತಿ. ಇವಳಲ್ಲಿ ಪರೀಕ್ಷಿತನು ಹುಟ್ಟದನು.

ಉತ್ತರೋತ್ತರ ಮೇಲಿಂದಮೇಲೆ, ಮುಂದೆ, ಅಧಿಕವಾಗಿ; ಹೆಚ್ಚು.

ಉತ್ಥವಳಿಕೆ ಪ್ರಯತ್ನ.

ಉತ್ತಂಸ ಶಿರೋಭೂಷಣ.

ಉತ್ತಾನಪಾದ ಮನುವಿನ ಮಗನಾದ ಒಬ್ಬ ಅರಸು, ಧ್ರುವನ ತಂದೆ.

ಉತ್ತಾನಿತ ಮೇಲ್ಮೊಗವಾಗಿ; ಕೊಡಲ್ಪಟ್ಟ.

ಉತ್ತಾರ ಉಚ್ಚಸ್ವರ; ಉಂಬಳಿ, ಇನಾಮು; ದಾಟಸುವಿಕೆ.

—ಕ ದಾಟಸುವವ.

ಉತ್ತಾಲ ಎತ್ತಿದ.

ಉತ್ತು ಕೂಡಿ, ಹೊಂದಿ; ಹೂಡಿ, ಉಳುಮೆ ಮಾಡಿ.

ಉತ್ತುತ್ತೆ ಒಣಗಿದ ಕರ್ಜೂರ.

ಉತ್ತುಂಗ ಉನ್ನತ, ಎತ್ತರ; ಶ್ರೇಷ್ಠ.

ಉತ್ತೇಜಕ ಮಾದಕ; ಪ್ರೋತ್ಸಾಹಕ.

ಉತ್ತೇಜನ ಪ್ರೋತ್ಸಾಹ.

ಉತ್ಥ ಎದ್ದ.

ಉತ್ಥಾನದ್ವಾದಶಿ ಕಾರ್ತಿಕ ಮಾಸದ ಶುಕ್ಲ ಪಕ್ಷದ ದ್ವಾದಶಿ (ಈ ದಿನ ವಿಷ್ಣು ತನ್ನ ನಾಲ್ಕು ತಿಂಗಳ ಯೋಗನಿದ್ರೆಯಿಂದ ಏಳುವನು).

ಉತ್ಥಾಪನ ಪ್ರತಿಷ್ಠೆ, ನಿಲಿಸುವಿಕೆ.

ಉತ್ಪತ್ತಿ ಹುಟ್ಟು; ಲಾಭ, ಪ್ರಯೋಜನ.

ಉತ್ಪಥ ತಪ್ಪು ಹಾದಿ.

ಉತ್ಪನ್ನ ಹುಟ್ಟುವಳಿ.

ಉತ್ಪಲ ಇಂದೀವರ, ನೈದಿಲೆ, ನೀಲ ಬಣ್ಣದ ಕಮಲ.

ಉತ್ಪಲಮಿತ್ರ ನೈದಿಲೆಯ ಗೆಳೆಯ, ಚಂದ್ರ.

ಉತ್ಪಾಟನ ನಾಶಮಾಡಿದ; ಕೀಳುವಿಕೆ.

ಉತ್ಪಾತ ಅಪಶಕುನ–ಭೂಕಂಪ–ಧೂಮಕೇತು ಕಾಣಿಸಿಕೊಳ್ಳುವುದು ಮೊದಲಾದುವು.

ಉತ್ಪಾದನ ಹುಟ್ಟಿಸುವಿಕೆ.

ಉತ್ಪಿಂಜ ಅವ್ಯವಸ್ಥೆ.

ಉತ್ಪ್ರಾಸ ನಗು; ಉಕ್ಕುವಿಕೆ; ಅತಿ.

ಉತ್ಪ್ರೇಕ್ಷೆ ಅಲಕ್ಷ್ಯ; ಒಂದು ಅಲಂಕಾರ; ಕವಿ ಕಲ್ಪಿತವಾದ ಹೋಲಿಕೆ.

ಉತ್ಫುಲ್ಲ ಪೂರ್ಣ ಅರಳಿದ.

ಉತ್ಸ ಬೆಟ್ಟದಿಂದಿಳಿಯುವ ನೀರು, ಝರಿ, ನಿರ್ಝರ.

ಉತ್ಸರ್ಗ ಬಿಡುವುದು, ದಾನ, ಕೊಡುವುದು; ಯಜ್ಞಭೇದ.

ಉತ್ಸವ ವಿವಾಹ ಮೊದಲಾದ ಮಂಗಲ ಕಾರ್ಯ; ಸಂತೋಷ; ಹಬ್ಬ.

ಉತ್ಸಂಗ ತೊಡೆ; ಬೆಟ್ಟದ ಇಳಿಜಾರು.

ಉತ್ಸಾದನ ತೆಗೆದುಹಾಕುವಿಕೆ, ನಾಶ ಮಾಡುವಿಕೆ; ಚೆನ್ನಾಗಿ ಉಳುವಿಕೆ; ಪರಿಮಳ ದ್ರವ್ಯ ಲೇಪನ.

ಉತ್ಸಾರಿತ ದೂರಕ್ಕೆ ಕಳಿಸಿದ.

ಉತ್ಸಾಹ ಉದ್ಯೋಗ; ಸುಖ; ಕಾರ್ಯಕ್ಕೆ ಇಚ್ಛೆ, ಹುಮ್ಮಸ, ಉಲ್ಲಾಸ; ರಾಜರಲ್ಲಿರುವ ಒಂದು ವಿಶೇಷ ಗುಣ; ಒಂದು ಬಗೆಯ ರಗಳೆ.

ಉತ್ಸಿಕ್ತ ಉದ್ಧತ; ವೃದ್ಧಿಗೊಂಡ; ಮರ್ಯಾದೆ ಮೀರಿದ.

ಉತ್ಸೃಷ್ಟ ಬಿಟ್ಟ.

ಉತ್ಸೇಕ ಅಹಂಕಾರ.

ಉತ್ಸೇಧ ಉದ್ದ; ಎತ್ತರ.

ಉದ (ಉದಕ) ನೀರು ದ್ರವವಾಗಿರುವುದು.

ಉದಕ್ಯೆ (ಉದಕ್ಯಾ) ಮುಟ್ಟಾದವಳು.

ಉದಗಯನ (ಉದಕ್ = ಉತ್ತರ ದಿಕ್ಕಿಗೆ+ ಅಯನ = ಹೋಗುವುದು) ಸೂರ್ಯನು ಉತ್ತರಕ್ಕೆ ಹೋಗುವುದು, ಉತ್ತರಾಯಣ.

ಉದಗ್ರ (ಉತ್ = ಮೇಲಕ್ಕೆ + ಅಗ್ರ = ತುದಿಯುಳ್ಳದು) ಎತ್ತರವಾದುದು, ಎತ್ತರವಾದ.

ಉದಧಿ ನೀರಿನ ಆಶ್ರಯಸ್ಥಾನ, ಸಮುದ್ರ, ಸಾಗರ.

ಉದನ್ವತ್ (ಉದನ್ = ನೀರು) ಸಮುದ್ರ, ಸಾಗರ.

ಉದಯ ಹುಟ್ಟು, ಆರಂಭ; ಬೆಳಕು; ಲಾಭ.

ಉದಯನ ಚಂದ್ರವಂಶದ ಒಬ್ಬ ದೊರೆ. ಅವನು ಕೌಸಂಬಿಯಲ್ಲಿ ಆಳಿದನು. ವತ್ಸರಾಜನೆಂದೂ ಅವನಿಗೆ ಹೆಸರಿದೆ. ಆತನು ಉಜ್ಜಯಿನಿಯ ರಾಜಕುಮಾರಿಯಾದ ವಾಸವದತ್ತೆಯನ್ನೂ ಬಳಿಕ ಮಗಧ ರಾಜಕನ್ಯೆ ಪದ್ಮಾವತಿಯನ್ನೂ ಲಗ್ನವಾದನು.

ಉದರ ಹೊಟ್ಟೆ.

—ನಿರ್ವಾಹ ಹೊಟ್ಟೆಯ ಪೂರಯಿಕೆ, ಹೊಟ್ಟೆ ಹೊರೆದುಕೊಳ್ಳುವಿಕೆ.

ಉದರಾವರ್ತ ಹೊಕ್ಕುಳು.

ಉದರಿ ಹೊಟ್ಟೆಯುಳ್ಳವಳು, ಉದ್ದರಿ, ಸಾಲ.

**ಉದರ್ಕ** ಮುಂದಿನ ಫಲ (ಶುಭಾಶುಭ), ಪರಿಣಾಮ, ಫಲ.
**ಉದವಾಸ** ನೀರಿನಲ್ಲಿ ವಾಸ.
**ಉದಂತ** (ಉತ್=ಉಂಟಾದ+ಅಂತ= ನಿರ್ಣಯವುಳ್ಳುದು) ನಿಶ್ಚಯವನ್ನು ಹುಟ್ಟಿಸುವುದು; ವೃತ್ತಾಂತ, ಸಮಾಚಾರ.
**ಉದಂಚತ್** ಏಳುತ್ತಿರುವ; ಅಲಂಕಾರವಾದ.
**ಉದಾತ್ತ** ಪ್ರಖ್ಯಾತವಾದ; ಉತ್ತಮ, ಮೇಲಾದ, ಉನ್ನತ; ಕುಲೀನ; ಮನೋಹರ, ದೊಡ್ಡ; ದಾತ, ದಾತೃ, ಅಲಂಕಾರಭೇದ.
**ಉದಾನ** ಗಂಟಲಿಂದ ಬರುವ ಒಂದು ವಾಯು ವಿಶೇಷ, ತೇಗು.
—**ವಾಯು** ಗಂಟಲಿನಿಂದ ತೇಗಿನ ರೂಪದಲ್ಲಿ ಹೊರಡುವ ವಾಯು.
**ಉದಾರ** ತ್ಯಾಗ, ದೊಡ್ಡ ಮನಸ್ಸು, ಧಾರಾಳ ಬುದ್ಧಿ.
**ಉದಾರಿ** ತ್ಯಾಗ ಗುಣವಿರುವವ, ದೊಡ್ಡ ಮನಸ್ಸಿನವ.
**ಉದಾಸೀನ** ಆಲಸ್ಯ; ತಾತ್ಸಾರ, ತಿರಸ್ಕಾರ.
**ಉದಾಹರಣೆ** ಮಾದರಿಗಾಗಿ ತೋರಿಸುವುದು, ಲಕ್ಷ್ಯ.
**ಉದಾಹರಿಸು** ಮಾದರಿಕೊಡು.
**ಉದಾಹೃತ** ಸೂಚಿಸಲ್ಪಟ್ಟ, ಹೇಳಿದ.
**ಉದಿತ** ಮಾತನಾಡಿದ, ಹೇಳಲ್ಪಟ್ಟ; ಹುಟ್ಟಿದ; ಪುರೋಭಿವೃದ್ಧಿಯುಳ್ಳ.
**ಉದಿರ್** (ಉದುರು) ಕೆಳಗೆ ಬೀಳು.
—**ಚು** ಉದುರಿಸು, ಚೆಲ್ಲು.
**ಉದೀಚಿ** ಉತ್ತರ, ಬಡಗು.
**ಉದೀಚೀನ** ಉದೀಚ್ಯ, ಬಡಗಣ.
**ಉದೀರ್ಣ** ಹೆಚ್ಚಾದ.
**ಉದುಗರಿಸು** ಉದ್ಗರಿಸು (ಸಂ), ವಾಂತಿ ಮಾಡು; ನಿವಾರಿಸು, ತಿರಸ್ಕರಿಸು, ಬಿಡು.
**ಉದುಬವಿಸು** (ಉದ್ಭವಿಸು) ಹುಟ್ಟು.
**ಉದುಂಬರ** ಅತ್ತಿಯ ಮರ.
—**ಮಶಕ** ಅತ್ತಿ ಹಣ್ಣಿನೊಳಗಿನ ನೊಣ.
**ಉದ್ಗತ** ಹೊರಹೊಮ್ಮಿದ, ಮೇಲಕ್ಕೆದ್ದ.
**ಉದ್ಗಮ** ಉಗಮ(ದ್ಭ), ಹೊರಡುವುದು, ಹುಟ್ಟುವುದು, ಏಳುವುದು; ಹೂವು, ಉತ್ಪತ್ತಿ.
—**ಮಂಜರಿ** ಹೂಗೊಂಚಲು.
—**ಮಾಲೆ** ಹೂಮಾಲೆ.
—**ಸಾರ** ಪರಾಗ.
**ಉದ್ಗಮನೀಯ** ಪಂಚೆಗಳು, ಎರಡು ಧೋತ್ರಗಳು.
**ಉದ್ಗಾತೃ** ಸಾಮವೇದವನ್ನು ಗಟ್ಟಿಯಾಗಿ ಹಾಡುವವ; ಯಜ್ಞದಲ್ಲಿ ಸಾಮಗಾನವನ್ನು ಮಾಡುವ ಋತ್ವಿಕ್ಕು.
**ಉದ್ಗಾರ** ವಾಂತಿ; ಅಭಿಪ್ರಾಯವನ್ನು ಹೊರಪಡಿಸುವುದು.
**ಉದ್ಗೀರ್ಣ** ಕಾರಿದ, ಹೊರಗೆ ಹಾಕಿದ.
**ಉದ್ಘ** ಮಾದರಿ; ಬಲ; ಆನಂದ; ಶ್ರೇಷ್ಠ.
**ಉದ್ಘಟ** ಒಂದು ಜಾತಿಯ ಪಾತ್ರೆ.
**ಉದ್ಘಾಟನೆ** ತೆರೆಯುವಿಕೆ, ಪ್ರಾರಂಭ.
**ಉದ್ಘಾತ** ಬಲವಾದ ಪೆಟ್ಟು; ಗದೆ.
**ಉದ್ಘಸಿ** ಉತ್ತಮವಾದ ಕತ್ತಿ.
**ಉದ್ಘೃಷ್ಟ** ಉಜ್ಜಲ್ಪಟ್ಟ.
**ಉದ್ಘೋಷಣ** ಗಟ್ಟಿಯಾಗಿ ಕೂಗುವುದು, ಜಯಜಯಕಾರ.
**ಉದ್ದ** ಊರ್ಧ್ವ (ಸಂ), ಮೇಲೆ; ದೀರ್ಘತೆ.
**ಉದ್ದರಿ** ಸಾಲ, ಕಡ.
**ಉದ್ದಂಡ** ಧೈರ್ಯ; ಹೆಮ್ಮೆ; ಔದ್ಧತ್ಯ; ಆಧಿಕ್ಯ.
**ಉದ್ದಾನ** ಉದ್ದಾಮ ಸೋಲಿಸುವಿಕೆ; ಅಗ್ಗಿಷ್ಟಿಕೆ.
**ಉದ್ದಾನಿ** ಅತಿಶಯ.

ಉದ್ದಾಮ ಶ್ರೇಷ್ಠ; ಅಧಿಕ; ತಡೆಯಿಲ್ಲದ; ಸೊಕ್ಕಿನ, ಹೆಮ್ಮೆಯ.

ಉದ್ದಾಲಕ ಚಂಡಿಯ ಗಂಡ. ಧೌಮ್ಯ ಮಹರ್ಷಿಯ ಶಿಷ್ಯ. ಈತನಿಗೆ ಆರುಣಿ ಯೆಂದು ಬೇರೊಂದು ಹೆಸರೂ ಇರುವುದು.

ಉದ್ದಿಶ್ಯ ಉದ್ದೇಶ, ಏನಾದರೊಂದನ್ನು ಕುರಿತದ್ದು.

ಉದ್ದಿಷ್ಟ ಸೂಚಿಸಿದ, ತೋರಿಸಿದ; ನಿಶ್ಚಿತ.

ಉದ್ದೀಪನ ಉರಿಸುವಿಕೆ, ಬೆಳಗುವಿಕೆ; ಕೆರಳಿಸುವಿಕೆ.

ಉದ್ದೀಪ್ತ ಬೆಳಗಿದ.

ಉದ್ದು (ಉಜ್ಜು) ತಿಕ್ಕು; ಒಂದು ವಿಧವಾದ ಕಪ್ಪು ಧಾನ್ಯ, ಮಾಷ.

ಉದ್ದೇಸ(ಧ್ಧ) ಉದ್ದೇಶ (ಸಂ), ಗುರಿ.

ಉದ್ದೇಶ ಹೇತು, ಗುರಿ.

—ಇಸು ಗುರಿಯಿಟ್ಟು ಕೆಲಸಮಾಡು.

ಉದ್ಧಟ ಉದ್ಧತ, ಹೆಮ್ಮೆಯ.

ಉದ್ಧತ ಅಹಂಕಾರಿ; ವಿಚಾರವಿಲ್ಲದೆ ಮಾತಾಡುವವ; ಸೊಕ್ಕಿ ನಡೆವವ, ಮಲೆತವ.

ಉದ್ಧರಣ ಮೇಲಕ್ಕೆ ಎತ್ತುವುದು, ಉದ್ಧಾರ ಮಾಡುವುದು.

ಉದ್ಧರಣೆ ತೀರ್ಥದ ಸಣ್ಣ ಸೌಟು.

ಉದ್ಧವ ಶ್ರೀ ಕೃಷ್ಣನ ಮಂತ್ರಿಯಾಗಿದ್ದ ಒಬ್ಬ ಯಾದವ.

ಉದ್ಧುರ ಬಂಧಮುಕ್ತನಾದ ಸಂತೋಷವುಳ್ಳ; ರಥದಿಂದ ಕಳಚಿದ.

ಉದ್ಧೂಲನ ಪುಡಿಯಿಂದ ಚೆಲ್ಲಲ್ಪಟ್ಟ, ದೂಳು ಮುಚ್ಚಿದ.

ಉದ್ಧೃತ ಎತ್ತಲ್ಪಟ್ಟ.

ಉದ್ಬಾಹು ಮೇಲಕ್ಕೆತ್ತಿದ ತೋಳುಳ್ಳ.

ಉದ್ಬುದ್ಧ ಅರಳಿದ, ವಿಕಸನಗೊಂಡ.

ಉದ್ಭವ ಹುಟ್ಟು, ಉತ್ಪತ್ತಿ, ಜನ್ಮ.

ಉದ್ಭಾವ ಹುಟ್ಟುವಿಕೆ, ಹೆಚ್ಚಾಗುವಿಕೆ.

ಉದ್ಭಿಜ (ಭಿತ್=ನೆಲವನ್ನು ಸೀಳಿ+ಜ=ಹುಟ್ಟುವುದು) ನೆಲವನ್ನು ಸೀಳಿ ಮೊಳಕೆ ಒಡೆಯುವ ಮರ ಗಿಡ ವೊದಲಾದುವು.

ಉದ್ಭಿನ್ನ ಒಡೆದ.

ಉದ್ಭೇದ ಒಡೆಯುವಿಕೆ.

ಉದ್ಭ್ರಮ ತಿರುಗು, ಗಲಿಬಿಲಿಹೊಂದು.

—ಇಸು ಹುಚ್ಚಾಗು.

ಉದ್ಯತ್ ಉದಯಿಸುವಿಕೆ, ಹುಟ್ಟುವಿಕೆ; ಮೇಲಕ್ಕೆ ಚಾಚಿದ; ಹುಟ್ಟುವ, ಏಳುವ; ಅಧಿಕ; ಹಸನಾದ.

ಉದ್ಯತ ಪ್ರಯತ್ನಶೀಲ; ತಯಾರಾದ.

ಉದ್ಯಮ ಪ್ರಯತ್ನ.

ಉದ್ಯಮಿ ಕಷ್ಟಶೀಲ, ಸಾಹಸಿ.

ಉದ್ಯಾನ ಹೂದೋಟ, ಅರಮನೆಯ ಬಳಿಯ ತೋಟ.

ಉದ್ಯುಕ್ತ ಸಿದ್ಧ; ತೊಡಗಿದ.

ಉದ್ಯೋಗ ಉಜ್ಜುಗ(ಧ್ಧ), ಕೆಲಸ, ಕೈಗಾರಿಕೆ, ಯಂತ್ರಗಳ ಮೂಲಕ ಮಾಡುವ ಕೆಲಸಗಳು.

—ಸ್ಥ ನೌಕರ.

ಉದ್ರು ನೀರಬೆಕ್ಕು.

ಉದ್ರುಂಕ ಹರಿಶ್ಚಂದ್ರನ ರಾಜಧಾನಿ.

ಉದ್ರಿಕ್ತ ಅಧಿಕ; ಕೆರಳಿದ.

ಉದ್ರೇಕ ಉದ್ಧಟತನ, ದಿಟ್ಟತನ, ಹೆಮ್ಮೆ, ಗರ್ವ; ಸಂಭ್ರಮ; ಆಧಿಕ್ಯ; ಕೆರಳಿಕೆ.

ಉದ್ವರ್ತನ ಲೇಪನ.

ಉದ್ವಹ ಸಂತೋಷ, ಆನಂದ.

ಉದ್ವಾಹ ವಿವಾಹ, ಮದುವೆ, ಆದರಿಸುವಿಕೆ.

ಉದ್ವಿಗ್ನ ಉದ್ವೇಗದಿಂದ ಕೂಡಿದ; ಗಲಿಬಿಲಿ ಹೊಂದಿದ, ಕಳವಳಗೊಂಡ.

ಉದ್ವೃತ್ತ (ವೃತ್ತ=ನಡತೆ) ನಡತೆ ಬಿಟ್ಟ ದುರಾಚಾರಿ; ಗರ್ವದಿಂದ ಕೂಡಿದ.

ಉದ್ವೇಗ (ಸಂ) ಉಬ್ಬೆಗ(ದ್ಭ), ಅಂತಸ್ತಾಪ, ದುಃಖ, ಚಿಂತೆ.
ಉದ್ವೇಲ (ವೇಲ = ತೀರ) ತೀರವನ್ನು ಮೀರಿಕೊಂಡು ಹೊರಗೆ ಬಂದುದು, ಮರ್ಯಾದೆಗೆಟ್ಟುದು, ಮರ್ಯಾದೆ ತಪ್ಪಿದುದು.
ಉನ್ನತ ಎತ್ತರವಾದ; ಮೇಲಿನ.
—ಆನತ ಏರುತಗ್ಗಾದ.
—ಉನ್ನತ (ಉನ್ನತೋನ್ನತ) ಬಹಳ ಎತ್ತರವಾದ.
ಉನ್ನತಿ ವೃದ್ಧಿ, ಏಳಿಗೆ; ಉದಯ; ಗರುಡನ ಹೆಂಡತಿ; ಆಧಿಕ್ಯ, ಅತಿಶಯ.
—ಕೆ ಆಧಿಕ್ಯ, ಉಬ್ಬಟೆ; ಪ್ರತಾಪ.
ಉನ್ನದ್ಧ ಚೆನ್ನಾಗಿ ಕಟ್ಟಿದ.
ಉನ್ನಮಿತ ಎತ್ತಿದ.
ಉನ್ನಯ ಏರುವ, ಏರುತ್ತ ಹೋಗುವ.
ಉನ್ನಾಳ ಮೇಲಕ್ಕೆದ್ದ ದಂಟುಳ್ಳ.
ಉನ್ನಿದ್ರ ನಿದ್ದೆಬಿಟ್ಟ; ಅರಳಿದ.
ಉನ್ನಿಧಿತ ವಿಕಸಿತವಾದ, ಅರಳಲ್ಪಟ್ಟ.
ಉನ್ನಿಸು ಪರ್ಯಾಲೋಚಿಸು, ವಿಚಾರಿಸು.
ಉನ್ನೆಗಂ ಅಲ್ಲಿಯ ವರೆಗೆ.
ಉನ್ಮತ್ತ ಸೊಕ್ಕಿದ; ಸೊಕ್ಕಿದವ.
ಉನ್ಮಥಿಷ್ಣು ಅಮಲೇರಿದ;ಹುಚ್ಚು; ಉದ್ರೇಕಗೊಂಡದ್ದು.
ಉನ್ಮಾಥ ಉರುಳು, ಬೋನು.
ಉನ್ಮಾದ ಮರುಳು, ಹುಚ್ಚುತನ; ಅತಿರೇಕ.
ಉನ್ಮಿಷಿತ ಅರಳಿದ, ತೆರೆದ.
ಉನ್ಮೀಲನ ಕಣ್ಣು ತೆರೆಯುವುದು.
ಉನ್ಮೀಲಿತ ತೆರೆದ, ಅರಳಿದ.
ಉನ್ಮುಖ ಮಹಾಹಿಷ್ಮತಿಯ ರಾಜನಾದ ನೀಲಧ್ವಜನ ಹೆಂಡತಿ ಜ್ವಾಲೆ ಎಂಬವಳ ತಮ್ಮ; ಮೇಲುಮೊಗವಾದ.
ಉನ್ಮೇಷ ಕಣ್ಣು ತೆರೆಯುವುದು, ಶಕ್ತಿ ಹುಟ್ಟುವುದು.
ಉಪ ಒಳಗಾದ; ಚಿಕ್ಕ; ಸಮೀಪದ; ಕೀಳಾದ.
ಉಪಕಥೆ ಪುಟ್ಟಕತೆ, ಕತೆಗೆ ಅನುವಾದ ಇನ್ನೊಂದು ಕತೆ.
ಉಪಕರಣ ಸಾಧನ, ಸಾಮಗ್ರಿ.
ಉಪಕರಿಸು ಉಪಕಾರಮಾಡು; ಸಿದ್ಧ ಮಾಡು, ಅನುಕೂಲಪಡಿಸು.
ಉಪಕಂಠ ಕುತ್ತಿಗೆಯ ಸಮೀಪವನ್ನು ಹೊಂದಿದುದು; ಹತ್ತಿರ, ಸಮೀಪ.
ಉಪಕಾರ ಸಹಾಯ, ಬೆಂಬಲ.
ಉಪಕುರ್ವಾಣ ಬ್ರಹ್ಮಚರ್ಯಾವಸ್ಥೆಯಿಂದ ಗೃಹಸ್ಥನಾಗಲಿರುವ ಬ್ರಾಹ್ಮಣ.
ಉಪಕುಲ್ಯೆ ಕಾಲುವೆ, ಚರಂಡಿ; ಸಾಲ.
ಉಪಕೃತಿ ಸಹಾಯ.
ಉಪಕ್ರಮ ಪ್ರಾರಂಭ, ತೊಡಗುವಿಕೆ.
ಉಪಕ್ಷಮ ತಾಳ್ಮೆ, ಕ್ಷಮೆ.
ಉಪಗತ ಜತೆಗೆ ಹೋದ, ಸೇರಿದ; ಸಮೀಪಿಸಿದ, ಬಂದ.
ಉಪಗಮನ ಹೋಗುವಿಕೆ.
ಉಪಗೃಹ ಒಳಗಿನ ಮನೆ, ಓವರಿ.
ಉಪಗ್ರಹ ಚಿಕ್ಕ ಗ್ರಹ, ಉಲ್ಕೆ; ಧೂಮಕೇತುವಿನಂಥ ಗ್ರಹೇತರ ವಸ್ತು, ಚಂದ್ರನಂತೆ ಗ್ರಹಕ್ಕೆ ಹೊಂದಿರುವ ವಸ್ತು.
ಉಪಗ್ರಹಣ ಸೆರೆ ಹಿಡಿಯುವಿಕೆ.
ಉಪಗ್ರಾಮ ನಗರದ ಗಡಿಯೊಳಗಿನ ಹಳ್ಳಿ.
ಉಪಘಾತ ಹಾನಿ, ಹಾವಳಿ; ಗಾಯ.
ಉಪಚಯ ಅಭಿವೃದ್ಧಿ.
ಉಪಚಾರ ಸೇವೆ.
ಉಪಚಿತ ಸೇರಿದ, ಒಟ್ಟಾದ.
ಉಪಜೀವನ ಹೊಂದಿ ಬದುಕುವುದು, ಹೊಟ್ಟೆ ಹೊರೆಯುವುದು.
ಉಪಜೀವಿ ಹೊಂದಿ ಜೀವಿಸುವವ, ಇನ್ನೊಂದರ ಆಶ್ರಯದಲ್ಲಿ ಜೀವಿಸುವದು.
ಉಪಟಳ ಉಪದ್ರ, ಉಪದ್ರವ, ತೊಂದರೆ.

ಉಪತ್ಯಕ ಪರ್ವತದ ಹತ್ತಿರದ ಭೂಮಿ.
ಉಪದಂಶ ನಂಜಿಕೊಳ್ಳುವ ವಸ್ತು, ಚಟ್ನಿ ಮೊದಲಾದುವು.
ಉಪದಿಶ್ಯಮಾನ ತೋರಿಸಲ್ಪಡುವ.
ಉಪದೇಶ ಬೋಧನೆ; ಪರಂಪರೆ, ಕಟ್ಟಳೆಯಿಂದ ಬಂದುದು.
ಉಪದ್ರುವ ಉಪಟಳ, ಹಿಂಸೆ, ಕಾಟ; ದುಃಖ.
ಉಪದ್ವೀಪ ದ್ವೀಪ, ನಡುಗಡ್ಡೆ.
ಉಪಧಾನ ದಿಂಬು, ತಲೆದಿಂಬು.
ಉಪಧಿ (ಉಪಧೆ) ಮೋಸ; ಸೇರಿಕೆ.
ಉಪನಗರ ಸೆರೆಯೂರು.
ಉಪನತ ಬಾಗಿದ.
ಉಪನದಿ ಮುಖ್ಯ ನದಿಯ ಕವಲು; ಹೋಗಿ ಸೇರುವ ತೊರೆ, ಹೊಳೆ.
ಉಪನಯನ ಜ್ಞಾನದ ಕಣ್ಣು ತೆರೆಯುವುದು, ಬ್ರಾಹ್ಮಣ್ಯದ ಒಂದು ವಿಧಿ.
ಉಪನಂದನ ಉದ್ಯಾನ.
ಉಪನಿಧಿ ಸಂಚಯ; ನಂಬಿಕೆಯಿಂದ ಇಟ್ಟುದು.
ಉಪನಿಷತ್ತು ಉಪನಿಷತ್, ಬ್ರಹ್ಮಜ್ಞಾನ. ಇವು ವೇದಗಳ ಒಂದು ಭಾಗವೆನಿಸಿ, ಶ್ರುತಿ ಎನಿಸಿವೆ. ಸುಮಾರು 150 ಉಪನಿಷತ್ತುಗಳಿವೆ. ಇವುಗಳು ಗದ್ಯ ಪದ್ಯವೆರಡರಲ್ಲೂ ಬರೆಯಲ್ಪಟ್ಟಿವೆ. ವಿಶ್ವದ ಮೂಲ, ನಾಶ, ಆತ್ಮ, ಅನಾತ್ಮ ಜ್ಞಾನ ದೇವತೆಗಳ ವಿಚಾರ—ಇವೇ ಮೊದಲಾದ ಹಲವು ತತ್ವಜ್ಞಾನದ ಪ್ರಶ್ನೆಗಳು ಇವುಗಳಲ್ಲಿ ಚರ್ಚಿಸಲ್ಪಟ್ಟಿವೆ; ಆರಣ್ಯಕಗಳು.
ಉಪನೀತ ತರಲ್ಪಟ್ಟ.
ಉಪನೇತ್ರು ಕನ್ನಡಕ.
ಉಪನ್ಯಾಸ ಮಾತಿನ ಪ್ರಾರಂಭ; ವಚನ; ರಚನೆ; ವಿಚಾರ; ಒಂದು ವಿಷಯದ ಮೇಲೆ ಭಾಷಣ ಮಾಡುವುದು.
ಉಪಪತಿ ಗಂಡನೊಡನೆ ಹೋಲಿಸಲ್ಪಟ್ಟವ, ಜಾರ, ಮಿಂಡ.
ಉಪಪತ್ತಿ ಯುಕ್ತಿ; ಸಂಗತಿ; ಸಿದ್ಧಿ; ಜನನ; ಅಂತ; ಉಪಾಯ; ಸಹಾಯ; ಗಳಿಮೆ.
ಉಪಪದ ಮುಖ್ಯ ಪದದೊಡನೆ ಉಚ್ಚಾರವಾಗತಕ್ಕ ಪದ; ಜತೆಯ ಶಬ್ದ.
ಉಪಪನ್ನ ಯುಕ್ತಿಯಿಂದ ಕೂಡಿದ; ಸಕಾರಣವಾದ.
ಉಪಪಾತಕ (ಪಾತಕ = ಪಾಪದೊಡನೆ + ಉಪ = ಹೋಲಿಸಲ್ಪಡತಕ್ಕುದು) ಬ್ರಹ್ಮಹತ್ಯಾದಿ ಪಾಪಗಳೊಡನೆ ಹೋಲಿಸಲ್ಪಡತಕ್ಕ ಇತರ ಪಾಪಗಳು.
ಉಪಪುರಾಣ ಪುರಾಣಗಳೊಡನೆ ಹೋಲಿಸಲ್ಪಡತಕ್ಕ ೧೮ ಇತರ ಸಣ್ಣ ಪುರಾಣಗಳು: ಸನತ್ಕುಮಾರ, ನಾರದೀಯ, ನಾರಸಿಂಹ, ಶಿವ, ಕಾಪಿಲ, ದುರ್ವಾಸ, ಮಾನವ, ವಾರುಣ, ಔಶನಸ, ಶಾಂಬ, ನಂದಿ, ಸೌರ, ಪರಾಶರ, ಮಾಹೇಶ್ವರ, ಆದಿತ್ಯ, ವಾಸಿಷ್ಠ, ಭಾಗವತ, ಬ್ರಾಹ್ಮ.
ಉಪಪ್ಲವ ಪೀಡೆ, ತೊಂದರೆ; ಉಲ್ಕಾಪಾತ, ಸೂರ್ಯಚಂದ್ರ ಗ್ರಹಣಾದಿ ಉಪದ್ರುವಗಳು.
ಉಪಭೋಗ ಸುಖ, ಸುಖವನ್ನನುಭವಿಸುವುದು.
ಉಪಮರಣ ಹಿಂಸೆ, ಕೊಲೆ; ಕಲಕುವುದು, ಮೊಗಚುವುದು.
ಉಪಮರ್ದ ಘರ್ಷಣೆ, ತಿಕ್ಕಾಟ.
ಉಪಮಾ (ಉಪಮೆ) ಹೋಲುವೆ (ಉಪ = ಸಮಾನ, ಮಾ = ಅಳೆಯುವುದು), ಸಮಾನವಾಗಿ ಎಣಿಸುವುದು.
ಉಪಮಾತೆ ಮಲತಾಯಿ.
ಉಪಮಾನ ಹೋಲುವೆ; ಹೋಲಿಸುವವಸ್ತು.
ಉಪಮಿತಿ ಸಾದೃಶ್ಯ ಜ್ಞಾನ, ಹೋಲುವೆ.

**ಉಪಮೇಯ** ಹೋಲಿಸಲ್ಪಡತಕ್ಕುದು, ಹೋಲುವೆಗೆ ಆಶ್ರಯವಾದುದು.
**ಉಪಯಮ** ಮದುವೆ.
**ಉಪರತಿ** ಸಾವು.
**ಉಪರಾಗ** ಸೂರ್ಯ–ಚಂದ್ರ ಗ್ರಹಣ.
**ಉಪರಿ** ಅ ಮೇಲೆ, ಮೇಲೆ.
**ಉಪರಿಮ** ಎತ್ತರ ಸ್ಥಳ.
**ಉಪರಿಲೋಕ** ಮೇಲಿನ ಲೋಕ, ಸ್ವರ್ಗ.
**ಉಪರೋಧ** ತಡೆಯುವುದು, ಅಡ್ಡಗಟ್ಟುವುದು, ಪ್ರತಿಭಟಿಸುವುದು.
—**ಇಸು** ತಡೆ, ಅಡ್ಡಿಮಾಡು.
**ಉಪಲ** ವಸ್ತುಗಳನ್ನು ತುಂಡುಮಾಡುವುದು, ವಸ್ತುಗಳನ್ನು ಒಡೆಯುವುದು, ಕಲ್ಲು.
**ಉಪಲಕ್ಷ್ಯ** ಗುರಿ.
**ಉಪಲಬ್ಧ** ದೊರಕಿದ, ಪರಿಶೀಲಿಸಿದ, ತಿಳಿದ.
**ಉಪಲಂಭನ** ನಿಂದೆ.
**ಉಪಲಾಲಿತ** ಮನೋಹರವಾದ; ಮುದ್ದುಮಾಡಿದ, ಆಲಿಂಗನಮಾಡಿದ.
**ಉಪವನ** ತೋಪು, ನೆರೆಯ ತೋಟ, ಉದ್ಯಾನವನ.
**ಉಪವಸ್ತ್ರ** ಉಪವಾಸ, ನಿರಾಹಾರ.
**ಉಪವಾಸ** ಊಟವಿಲ್ಲದಿರುವಿಕೆ, ನಿರಶನ.
**ಉಪವಾಹ್ಯ** ಆನೆಯಂಥ ಅರಸನ ವಾಹನ.
**ಉಪವೀತ** ಬಲದ ತೋಳು ಮೇಲಕ್ಕೆ ಬರುವಂತೆ ಎಡ ಹೆಗಲಿನಿಂದ ಇಳಿಬಿಟ್ಟ ಜನಿವಾರ.
**ಉಪವೇದ** (ವೇದ = ವೇದಗಳೊಡನೆ + ಉಪ = ಹೋಲಿಸಲ್ಪಡುವುದು) ಆಯುರ್ವೇದ, ಗಾಂಧರ್ವ, ಧನುರ್ವೇದ, ಅರ್ಥಶಾಸ್ತ್ರ—ಇವುಗಳು.
**ಉಪಶಮ** ಶಾಂತಿ, ಸಮಾಧಾನ; ಆಶೆಯನ್ನು ಬಿಟ್ಟಿರುವುದು.
—**ಇಸು** ಶಾಂತವಾಗು, ಸಮಾಧಾನ ಸ್ಥಿತಿಗೆ ಬರು.
**ಉಪಶಲ್ಯ** ಪಟ್ಟಣದ ಸಮೀಪದ ಮೈದಾನ, ಗ್ರಾಮದ ಸಮೀಪ.
**ಉಪಶಾಖೆ** ಎರಡನೆಯ ಸಣ್ಣ ಶಾಖೆ, ಕೊಂಬೆ; ವಿಭಾಗ.
**ಉಪಸನ್ನ** ಸೇರಿಕೆ.
**ಉಪಸರ** ಹೂ ಫಲಿಸುವ ಕಾಲ ಸಮೀಪಿಸುವಿಕೆ.
**ಉಪಸರ್ಜ** ತೊಂದರೆ, ಪೀಡೆ, ಬಾಧೆ; ದುರದೃಷ್ಟ; ಸಂಬಂಧ; ಹಿಂಸೆ; ಶುಭಾಶುಭವನ್ನು ಸೂಚಿಸುವ ಉತ್ಪಾತ; ವ್ಯಾಕರಣದಲ್ಲಿ ಪದಗಳ ಹಿಂದೂ ಮುಂದೂ ಬಂದು ಅರ್ಥಭೇದವನ್ನುಂಟುಮಾಡುವ ಪ್ರತ್ಯಯದಂತಿರುವ ಸ್ವರಗಳು.
—**ನ** ತೊಂದರೆ, ದುರದೃಷ್ಟ.
**ಉಪಸರ್ತ** ಸೇರುವುದು, ಹಿಂಬಾಲಿಸುವುದು,
**ಉಪಸಂಹಾರ** ಸಮಾಪ್ತಿ; ನಾಶ; ಕೊನೆಗಾಣಿಸುವಿಕೆ.
**ಉಪಸ್ಥಿತ** (ಸ್ಥಿತ = ಇರುವ) ಹತ್ತಿರವಿರುವ, ಸಮೀಪ ಸೇರಿದ.
**ಉಪಹತಿ** ತೊಂದರೆ, ಪೀಡೆ; ಬೆಳೆಯ ನಾಶ; ಕೇಡು, ಹಾನಿ.
**ಉಪಹಾರ** (ಉಪ=ಸಮೀಪಕ್ಕೆ+ಹಾರ=ತರಲ್ಪಟ್ಟುದು) ದೊಡ್ಡವರ ಬಳಿಗೆ ತರುವ ಕಾಣಿಕೆ, ಕೀರ್ತಿ ಮೊದಲಾದುವು, ಪೂಜೆ; ಬಲಿ.
**ಉಪಹಾಸ** (ಹಾಸ=ನಗೆಗೆ+ಉಪ=ಕಾರಣವಾದುದು) ನಗೆಗೆ ಕಾರಣವಾದುದು, ಚೇಷ್ಟೆ, ಹಾಸ್ಯಾಸ್ಪದವಾದ ನಗು.
**ಉಪಾಕರಣ** ಹತ್ತಿರ ಬರಮಾಡುವಿಕೆ.
**ಉಪಾಕರ್ಮ** ಸಿದ್ಧತೆ, ಒಂದು ವಿಧಿ.
**ಉಪಾದಾನ** ತೆಗೆದುಕೊಳ್ಳುವುದು.
**ಉಪಾದೇಯ** ಅಂಗೀಕರಿಸತಕ್ಕುದು.
**ಉಪಾಧಿ** ಧ್ಯೇಯಬದ್ಧ; ಎಡ; ಬಿರುದು, ವಿಶೇಷಣ, ಮೋಸ, ತೊಂದರೆ, ಅಡ್ಡಿ.

—ವಂತ ತುಂಬ ಕರ್ತವ್ಯವುಳ್ಳವ.
**ಉಪಾಧ್ಯಾಯ** ಗುರು, ಅಧ್ಯಾಪಕ.
**ಉಪಾನತಿ** ಮೆಟ್ಟು, ಕೆರವು.
**ಉಪಾಯ** ಸಮೀಪಿಸುವಿಕೆ, ಸುಲಭ ಸಾಧನ; ತಂತ್ರ.
**ಉಪಾಯನ** ಉಚಿತ, ಕಾಣಿಕೆ, ಬಾಗಿನ.
**ಉಪಾರೂಢ** ಬೆಳೆದ; ಹೆಚ್ಚಿದ; ಹತ್ತಿದ.
**ಉಪಾಲಂಭನ** ನಿಂದೆ ಗಳಿಸುವಿಕೆ.
**ಉಪಾಸನ** ಪೂಜೆ; ಸಮೀಪವಿದ್ದು ಮಾಡುವ ಕರ್ಮ; ಬಿಲ್ಲಿನ ಅಭ್ಯಾಸ.
**ಉಪಾಸಿತ** ಪೂಜ್ಯ.
**ಉಪಾಹಾರ** ಕಿರಿ ತಿಂಡಿ, ಪರಾಳ.
**ಉಪಾಹಿತ** ಸೇರಿದ; ಉಲ್ಕೆ.
**ಉಪಾಂಗ** ವಿಭಾಗ, ಅಂಶ.
**ಉಪಾಂತ** ಸಮೀಪ, ಉಪಧೆ; ಕಡೆಗೆ; ಹಿಂದಿನದು.
**ಉಪಾಂಶು** ಗುಟ್ಟು, ರಹಸ್ಯ: ಅಂತರಂಗ.
**ಉಪೇಕ್ಷೆ** ತಾತ್ಸಾರ, ತಿರಸ್ಕಾರ, ಉದಾಸೀನ, ಅಸಡ್ಡೆ.
—ಇಸು ತಾತ್ಸಾರಮಾಡು.
**ಉಪೇತ** ಕೂಡಿದ; ಸಮೀಪಿಸಿದ.
**ಉಪೇಂದ್ರ** (ಇಂದ್ರ= ಇಂದ್ರನನ್ನು+ಉಪ= ಹೊಂದಿದವನು) ಇಂದ್ರನ ತಮ್ಮನು, ವಾಮನ ರೂಪಿಯಾದ ವಿಷ್ಣು, ಕಶ್ಯಪ ಋಷಿಗೆ ಅದಿತಿಯಲ್ಲಿ ಇಂದ್ರನ ತರುವಾಯ ಹುಟ್ಟಿದ ವಾಮನ ರೂಪಿಯಾದ ವಿಷ್ಣು, ಕೃಷ್ಣ.
**ಉಪೋದ್ಘಾತ** ಆರಂಭ, ಉದಾಹರಣ; ಪೀಠಿಕೆ, ಪ್ರಸ್ತಾವನೆ.
**ಉಪೋಷಣ** ಉಪವಾಸ.
**ಉಪ್ಪಡ** (ದ್ಭ) ಉತ್ಪಟ (ಸಂ).
**ಉಪ್ಪರ** ಉಪವರಿ(ಸಂ), ಎತ್ತರ.
—ಇಸು ನೆಗೆ, ಹಾರು, ಮೇಲೆ ಹೋಗು, ಅಧಿಕವಾಗು, ಎತ್ತಿಕಟ್ಟು, ಮೇಲಕ್ಕೆ ನೆಗೆ; ಮುಚ್ಚಳ ತೆಗೆ.
**ಉಪ್ಪರವಟ್ಟ** ಮೇಲುಭಾಗದ ಅಲಂಕಾರ.
**ಉಪ್ಪರವೊಯ್ಲು** ಮೇಲುಗಡೆಯ ಪೆಟ್ಟು.
**ಉಪ್ಪರಿಗೆ** ಉಪರಿಕಾ (ಸಂ), ಸೌಧ, ಮೇಲು ಮಾಳಿಗೆ.
**ಉಪ್ಪಲಿಗ** ಉಪ್ಪು ಮಾಡುವ ಜನ.
**ಉಪ್ಪವಡಿಸು** ಹಾಸಿಗೆಯಿಂದ ಏಳು, ಎಚ್ಚರವಾಗು, ಎದ್ದು ಕುಳಿತುಕೊ.
**ಉಪ್ಪಳ** ವಿಶಾಲವಾಗುವಿಕೆ.
**ಉಪ್ಪಾರ** ಗಾರೆ ಹಾಕುವವ, ಗೋಡೆ ಮಾಡುವವ.
**ಉಪ್ಪಾರತಿ** ಉಪ ಆರತಿ; ಮದುಮಕ್ಕಳಿಗೆ ಒಂದು ಆರತಿ ಆದ ಮೇಲೆ ಅದಕ್ಕೆ ಸಂಬಂಧಪಟ್ಟು ಮಾಡುವ ಆರತಿ, ಓಕುಳಿ ಆರತಿ.
**ಉಪ್ಪು** ಲವಣ; ಪ್ರೀತಿ, ಮಮತೆ.
**ಉಬ್ಬಟೆ** ಉಬ್ಬುವಿಕೆ, ಉಬ್ಬರ; ಹೆಚ್ಚುಗೆ; ಶೌರ್ಯಾತಿರೇಕ; ಆಟೋಪ; ಅಧಿಕ.
**ಉಬ್ಬಡಿ** ಹೆಚ್ಚಾಗಿ, ಅಧಿಕ.
**ಉಬ್ಬಣ** ಒಂದು ಬಗೆಯ ಆಯುಧ, ಕತ್ತಿ, ಖಡ್ಗ.
**ಉಬ್ಬರ** ಹೆಚ್ಚುಗೆ, ಆಧಿಕ್ಯ; ಉಬ್ಬುವಿಕೆ.
**ಉಬ್ಬಸ** ತ್ರಾಸ, ಕಷ್ಟ, ಸಂಕಟ, ಕಷ್ಟವಾದ ಉಸಿರು.
**ಉಬ್ಬಿರಿತ** ಅಧಿಕವಾದ ಇರಿತ, ಉತ್ಸಾಹದಿಂದ ಹೊಡೆದ ಪೆಟ್ಟು.
**ಉಬ್ಬು** ಅಧಿಕವಾಗು, ಗರ್ವದಿಂದ ಉಬ್ಬು, ಹೆಮ್ಮೆಗೊಳ್ಳು; ಹರ್ಷಗೊಳ್ಳು, ಸಂತೋಷಪಡು.
—ಇಸು ಉತ್ಸಾಹಪಡಿಸು; ವಿನೋದಗೊಳಿಸು.
—ಕವಳ ಯುದ್ಧವೀರರು ಉತ್ಸಾಹ

ವುಂಟಾಗುವಂತೆ ತೆಗೆದುಕೊಳ್ಳುವ ಒಂದು ವಿಧವಾದ ತಿನಸು.

—ಕೆಡು ಗರ್ವನಾಶವಾಗು, ಉತ್ಸಾಹ ತಗ್ಗು.

—ಕೊಬ್ಬು ಅಧಿಕವಾದ ಗರ್ವ.

**ಉಬ್ಬೆ** ಉಷ್ಣ, ಸೆಕೆ; ಉಗಿ.

—ಮನೆ ಮಡಿವಾಳರು ವಸ್ತ್ರ ಬೇಯಿಸುವ ಮನೆ.

—ಹಾಕು ವಸ್ತ್ರ ಬೇಯಲು ಹಾಕು; ಬಿಸಿ ಉಸಿರು ಬಿಡು; ಶಾಖ ಕೊಡು.

**ಉಬ್ಬೆಗ** ಉದ್ವೇಗ(ಸಂ), ಸಂಭ್ರಮ, ಕಳವಳ, ಚಿಂತೆ, ಸಂತಾಪ, ದುಃಖ, ಮನೋವ್ಯಥೆ.

**ಉಭಯ** ದ್ವಂದ್ವ, ಎರಡು.

—ತ್ರ ಎರಡು ಕಡೆ.

**ಉಮರು** ಸೆಕೆ, ಸೆಕೆಯಾಗು.

**ಉಮಾಧವ** (ಉಮಾ = ಪಾರ್ವತಿಯ + ಧವ=ಗಂಡ)ಪಾರ್ವತಿಯ ಪತಿಯಾದಶಿವ.

**ಉಮಾಸುತ** ಪಾರ್ವತಿಯ ಮಗನಾದ ಕಾರ್ತಿಕೇಯ; ಗಣಪತಿ.

**ಉಮೇದ**(ಉಮೇದು) ಹುಮ್ಮಸ, ಉತ್ಸಾಹ.

—ವಾರ ಮುಂದಾಳು, ಸಾಹಸಿ, ಉತ್ಸಾಹಪಡುವವ.

**ಉಮೇಶ್ವರ** ಉಮೆಯ ಒಡೆಯ, ಶಿವ.

**ಉಮ್ಮಚ್ಚ** ಉನ್ಮತ್ತ(ಸಂ), ಭ್ರಮೆ, ಭ್ರಾಂತಿ, ಬುದ್ಧಿಭ್ರಮೆ.

**ಉಮ್ಮಳ** (ಉಮ್ಮಳು) ವ್ಯಥೆ, ಕಳವಳ, ವ್ಯಸನ.

—ಇಕೆ ಮನಸ್ತಾಪ; ಗ್ಲಾನಿ; ವ್ಯಥೆ, ಚಿಂತೆ.

**ಉಯ್** ಸೊಪ್ಪು, ಒಣಗಿದ ಓಲೆ; ಉಮಿ, ಭತ್ತದ ಹೊಟ್ಟು; ಒಯ್ಯು.

**ಉಯ್ಯಲ್** (ಉಯ್ಯಾಲೆ) ತೂಗಾಡುವ ತೊಟ್ಟಿಲು, ಜೋಕಾಲಿ.

**ಉರ** ಧೈರ್ಯ, ವೇಗ; ಕೊರತೆ.

—ದರ್ ಅಸಮಗ್ರರು, ಕೊರತೆಯುಳ್ಳವರು.

—ದೆ ವೇಗವಾಗಿ, ಲಕ್ಷ್ಯಮಾಡದೆ, ವಿಚಾರಮಾಡದೆ.

**ಉರಕಲ** (ಉರವಲು) ಕಟ್ಟಿಗೆ.

**ಉರಗ** (ಉರ=ಎದೆಯಿಂದ+ಗ=ಚಲಿಸುವುದು) ಎದೆಯಿಂದ ಚಲಿಸುವ ಪ್ರಾಣಿ, ಹಾವು, ಹಲ್ಲಿ ಮೊದಲಾದುವು.

—ಅಂಗನೆ (ಉರಗ=ಸರ್ಪಜಾತಿಯ+ಅಂಗನೆ=ಸ್ತ್ರೀ) ನಾಗಸ್ತ್ರೀ.

**ಉರಗಶಯನ** (ಉರಗ=ಶೇಷನೆಂಬ ಸರ್ಪ) ಶೇಷನ ಮೇಲೆ ಮಲಗಿದವ, ವಿಷ್ಣು.

**ಉರಗಾಶನ** (ಉರಗ = ಸರ್ಪಗಳನ್ನು + ಅಶನ= ತಿನ್ನುವವ) ಸರ್ಪಗಳನ್ನು ತಿನ್ನುವವ, ಗರುಡ.

**ಉರಗಿ** ಹೆಣ್ಣುಸರ್ಪ.

**ಉರಟು** (ಉರುಟು) ಒರಟು, ಗೋಲಾಕಾರ; ಉರುಳಿಸು.

**ಉರವಣೆ** ಆತುರ; ಸಂಭ್ರಮ, ಪ್ರಭಾವ; ವೇಗ; ದಿಟ್ಟತನ; ಆಧಿಕ್ಯ.

**ಉರಃಸೂತ್ರಿಕೆ** ಎದೆಯ ಮೇಲೆ ತೂಗುವ ಮುತ್ತಿನ ಹಾರ.

**ಉರಿ** ಜ್ವಾಲೆ, ಬೆಂಕಿ.

—ನಾಲಗೆ ಬೆಂಕಿ ಹೊತ್ತು, ಬೆಂಕಿ ಜ್ವಾಲೆ.

—ಪು ಸುಡಹತ್ತು, ಸುಡು, ಸುಟ್ಟು ನಾಶಮಾಡು.

—ಮನೆ ಸುಡುವ ಮನೆ.

—ಮಾತು ಬಿರುಸಾದ ಮಾತು, ಕಠಿನ ನುಡಿ.

—ಹೊಗು ಬೆಂಕಿಯನ್ನು ಪ್ರವೇಶಿಸು.

**ಉರಿಗೇಸು** ಉರಿಯಂತಿರುವ ಕೂದಲು, ಬೆಂಕಿಯ ಜ್ವಾಲೆಯಂತಿರುವ ಕೂದಲು.

ಉರು ದೊಡ್ಡ, ಶ್ರೇಷ್ಠ; ಹೆಚ್ಚಾಗು, ಹೊಂದಿಕೆಯಾಗು, ತಕ್ಕುದಾಗಿರು, ಸೇರಿರು; ಉರಿ.

—ಕಿಚ್ಚು (ಉರಿಗಿಚ್ಚು) ಉರಿಯುವ ಬೆಂಕಿ, ಪ್ರಜ್ವಲಿಸುವ ಅಗ್ನಿ.

— ಕೊಳ್ (ಉರಿಗೊಳ್) ಬೆಂಕಿಹೊತ್ತು, ಸುಟ್ಟುಹೋಗು.

—ತರ ಬಹಳ ಶ್ರೇಷ್ಠವಾದ, ಬಹು ದೊಡ್ಡ.

— ಪರಿಯು ಬೆಂಕಿ ಹರಡು.

—ಬೆ ಆಧಿಕ್ಯ; ಆವೇಶ; ಕಠೋರತನ; ಪರಾಕ್ರಮ.

ಉರುಕು ಚಲಿಸದಿರು, ನಿಲ್ಲು.

—ಇಸು ವಿಕಾರಗೊಳಿಸು; ಡೊಂಕಾಗಿಸು.

—ಕೊಳ್ ಹಿಮ್ಮೆಟ್ಟು, ಹಿಂದೆ ಸರಿ.

ಉರುಗು ಡೊಂಕಾಗು; ಕೋಪ, ಸಿಟ್ಟು.

ಉರುಟಣೆ ಹೊಸ ದಂಪತಿಗಳೊಳಗಿನ ಆಟ.

ಉರುಟು ಒರಟು, ದೊರಗು; ವೃತ್ತ; ತಳ ಸಮವಿಲ್ಲದೆ ಉರುಳಿಬೀಳುವುದು.

—ಇಸು ಉರುಳಿಸು.

—ತನ ಹಮ್ಮಿನ ನಡತೆ, ಉದ್ದಂಡತನ.

ಉರುಡು (ಉರುಳು) ಕಾದಾಡು, ಹೊರಳಾಡು; ತಳ ಸಮವಿಲ್ಲದ ಪಾತ್ರೆ.

ಉರುಬು (ಉರುಂಬು) ತ್ವರೆ; ತಡೆ; ಪರಾಕ್ರಮ; ಮೇಲೆ ಬೀಳು, ಹಲ್ಲಾಮಾಡು, ರಭಸದಿಂದ ಬರು; ಕೆರಳು.

ಉರುಮಿಗೆ ಆಧಿಕ್ಯ.

ಉರುಲು (ನೋಡು—ಉರುಳ್).

—ಕೊಲೆ ಉರುಳುಹಾಕಿ ಕೊಲ್ಲುವುದು.

ಉರುವ (ಉರ್ವ) ವಿಚಾರಮಾಡಬೇಕಾದ; ಶ್ರೇಷ್ಠವಾದ; ಅಧಿಕವಾದ, ಯೋಗ್ಯ.

ಉರುವಣಿಸು (ಉರವಣಿಸು) ಆತುರಿಸು.

ಉರುಳ್ (ಉರುಳು) ಹಗ್ಗದ ಕುಣಿಕೆ.

—ಇಸು ಉರುಳಿಸು.

—ಕಡಿ ಉರುಳಿ ಬೀಳುವಂತೆ ಕಡಿ.

—ಕೆಡಹು ಉರುಳುನಿಂದ ಬೀಳಿಸು, ಹಗ್ಗದ ಕುಣಿಕೆ ಹಾಕಿ ಹೊರಳುವಂತೆ ಬೀಳಿಸು; ನೆಲದಲ್ಲಿ ಬಿದ್ದು ಹೊರಳಾಡುವಂತೆ ಮಾಡು.

ಉರುಳಿ ಉಂಡೆ, ಚೆಂಡು; ಮುದ್ದೆ; ಒಂದು ತೆರನ ಕಂಚಿನ ಪಾತ್ರೆ.

—ಕೊಳ್ ಉಂಡೆಯಾಗು.

ಉರೆ ಅಧಿಕವಾಗಿ, ಹೆಚ್ಚಾಗಿ; ಪೂರಣಾರ್ಥ; ಮಿಗೆ, ಚೆನ್ನಾಗಿ.

ಉರೋಜ (ಎದೆಯಲ್ಲಿ ಹುಟ್ಟಿದುದು) ಮೊಲೆ.

ಉರ್ಕಾಳ್ಗಳ್ ಉದ್ಧತ ಭಟರು, ಹೆಮ್ಮೆಯ ವೀರರು.

ಉರ್ಕು (ಉಕ್ಕು) ಔದ್ಧತ್ಯ, ಹೆಮ್ಮೆ.

ಉರ್ಕುಡಿ ಪರಾಕ್ರಮ.

ಉರ್ಚು ಸೆಳೆ, ಹೊರಕ್ಕೆ ಸೆಳೆ; ಹಿರಿ, ಎಳೆ; ಚುಚ್ಚು; ಪಾರಾಗು; ಉಚ್ಚು.

ಉರ್ತು (ಉತ್ತು) ಹೂಡಿ.

ಉರ್ದು (ಉದ್ದು) ಉಜ್ಜು, ಉದ್ದು ಎಂಬ ಧಾನ್ಯ; ಉರ್ದೂ ಭಾಷೆ.

ಉರ್ಪು ಗರ್ವ, ಹೆಮ್ಮೆ; ತಗ್ಗು.

ಉರ್ಬು (ಉಬ್ಬು) ಹೆಚ್ಚು, ಮೇಲಕ್ಕೆ ಬರು; ಗರ್ವ.

ಉರ್ವ (ಉರುವ) ಶ್ರೇಷ್ಠವಾದ.

ಉರ್ವರೆ (ಉರ್ವರಾ= ಸಮಸ್ತ ಪೈರುಪಚ್ಚೆಗಳಿಂದ ಕೂಡಿರುವ ಭೂಮಿ) ಫಲವತ್ತಾದ ಭೂಮಿ, ಸಾರವತ್ತಾದ ನೆಲ.

ಉರ್ವೀ (ಉರುವ) ವಿಸ್ತಾರವಾದ, ದೊಡ್ಡದು; ಭೂಮಿ, ನೆಲ.

—ತಲ ಭೂತಲ.

—ಪ ರಾಜ.
**ಉರ್ವೀರುಹ** (ಉರ್ವೀ+ರುಹ=ಹುಟ್ಟಿದ) ಮರಗಿಡ ಮೊದಲಾದುವು.
**ಉರ್ವು** (ಉಬ್ಬು) ಹುಬ್ಬು.
**ಉಲಕ** (ನೋಡು: ಉಲ್ಕ).
**ಉಲಿ** ಶಬ್ದಮಾಡು, ಹೇಳು; ಧಾನ್ಯ; ದನಿ, ಸ್ವರ; ಕೂಗು.
—ವು (ಉಲಿಪು) ಶಬ್ದ, ಕೂಗು.
—ಹ (ಉಲುಹು) ಶಬ್ದ, ಧ್ವನಿ, ಕೂಗು.
**ಉಲುಕು** ಸಂದುಕಳಚಿದಂತಾಗು; ಹೊಳೆ; ಒಮ್ಮೆಗೇ ಮುಂಬರಿ; ಶರೀರ ಸ್ಫುರಣ; ನಡುಗು, ಅಲುಗಾಡು, ಕಂಪಿಸು.
**ಉಲೂಕ** (ಕಣ್ಣಿನ ತೇಜಸ್ಸಿನಿಂದ ಕಾಗೆಗಳನ್ನು ಹಿಂಸಿಸುವುದು) ಗೂಬೆ, ಗೂಗೆ; ಒಂದು ದೇಶ; ಶಕುನಿಯ ಮಗ.
**ಉಲೂಖಲ** ಒರಳು, ನಿಂದೊರಳು.
**ಉಲೂಪಿ** ಕಾರವ್ಯನೆಂಬ ಸರ್ಪರಾಜನ ಮಗಳು, ನಾಗಕನ್ಯೆ, ಅರ್ಜುನನ ಹೆಂಡತಿ.
**ಉಲ್ಕ** (ಉಲ್ಕೆ) ಬೆಂಕಿ ಹೊತ್ತಿ ಉರಿಯುವ ಕೊಳ್ಳಿ; ಖಗೋಲದಿಂದ ಉರಿದುಬೀಳುವ ಒಂದು ವಸ್ತು; ಕಾಂತಿ; ನೋಡುವಲ್ಲಿ.
—ಪಾತ (ಉಲ್ಕಾಪಾತ) ಆಕಾಶದಿಂದ ನಕ್ಷತ್ರದಂಥ ಪ್ರಕಾಶಮಾನವಾದ ಪದಾರ್ಥವು ಬೀಳುವುದು.
**ಉಲ್ಲಸ** (ಉಲ್ಲಾಸ) ವಿಲಾಸ.
—ತ್ ಕುಣಿದಾಡುವ, ಶೋಭಿಸುವ.
**ಉಲ್ಲಂಘಿಸು** (ಉತ್+ಲಂಘಿಸು) ಅತಿಕ್ರಮಿಸು, ದಾಟು, ಮೀರು.
**ಉಲ್ಲಾಸ** ಸಂತೋಷ, ಸೌಖ್ಯ; ಹಾರುವುದು.
**ಉಲ್ಲೊಳಿತ** (ಉಲ್ಲುಲಿತ) ಚಲಿಸುವ.
**ಉಲ್ಲೇಖ** (ಉಲ್ಲೇಖನ) ಲೇಖನ, ಬರೆಯುವುದು; ಉಚ್ಚಾರ, ಹೇಳುವುದು; ಒಂದು ಅರ್ಥಾಲಂಕಾರ ಭೇದ; ಕಾಂತಿ.
**ಉಲ್ಲೋಚ** ಮೇಲುಗಟ್ಟು.
**ಉಲ್ಲೋಲ** ದೊಡ್ಡ ತೆರೆ.
**ಉಶನ** (ಉಶನಸ್) ಭೃಗುಋಷಿಯ ಮಗನಾದ ಶುಕ್ರನು; ರಾಕ್ಷಸರ ಗುರು (ದೈತ್ಯರಿಗೆ ಶ್ರೇಯಸ್ಸನ್ನು ಬಯಸುವವನು), ಶುಕ್ರಗ್ರಹ.
**ಉಶೀರ** ಲಾವಂಚ.
**ಉಶ್ವಾಸ** ಉಚ್ಛ್ವಾಸ(ಸಂ), ಉಸಿರು ಹೊರಗೆ ಬಿಡುವುದು.
**ಉಷ** ಉಷಾ (ಸಂ) ಉಷಸ್, ಪ್ರಾತಃಕಾಲ, ಅರುಣೋದಯ ಪೂರ್ವ (ಇಪ್ಪತ್ತೈದು ಗಳಿಗೆ ರಾತ್ರಿಯ ಮೇಲಿನ ಸಮಯ), ಮುಂಜಾನೆ; ಮುಂಬೆಳಕು.
**ಉಷಃಕಾಲ** ಮುಂಜಾನೆ, ಹೊತ್ತಾರೆ.
**ಉಷಾ** ಉಷೆ, ಬಾಣಾಸುರನ ಮಗಳು, ಅನಿರುದ್ಧನ ಹೆಂಡತಿ; ಮುಂಜಾನೆ.
—ಪತಿ ಉಷೆಯ ಗಂಡನಾದ ಅನಿರುದ್ಧ.
**ಉಷಿತ** ಸುಟ್ಟ; ವಾಸವಾದ.
**ಉಷ್ಟ್ರ** (ಸಂ) ಒಟ್ಟೆ, ಒಂಟೆ (ದ್ಭ); ವಿದೇಶದ ಒಂದು ಜಾತಿಯ ದೊಡ್ಡ ಪಕ್ಷಿ, ಹಾರಲಾರದ ಒಂದು ಪಕ್ಷಿ.
**ಉಷ್ಣ** ಕಾವು.
**ಉಷ್ಣೋದಕ** ಬಿಸಿನೀರು.
**ಉಸಕನೆ** (ಉಸಿಕನೆ) ಮೌನವಾಗಿ, ಮಾತಾಡದೆ.
**ಉಸಕ್ಕನೆ** ಫಕ್ಕನೆ, ಒಮ್ಮೆಗೆ.
**ಉಸಾಬರಿ** ವಹಿವಾಟು, ಸುದ್ದಿ, ಗೊಡವೆ.
**ಉಸಿರ್** (ಉಸುರು) ಶ್ವಾಸ; ಪ್ರಾಣ; ಹೇಳು.
—ಆಡು ಶ್ವಾಸಬಿಡು, ಜೀವಂತ ಲಕ್ಷಣ ತೋರು.
—ಆರಿಕೆ ಉಸಿರು ಆರುವ ಸ್ಥಿತಿ, ಬಳಲಿಕೆ.
—ಒಗು ಉಸಿರು ಹೊರಡು, ನಿಟ್ಟುಸಿರು ಬಿಡು.

**ಉಸುಕು** (ಉಸಕು) ಉಸುಬು, ಹೊಯಿಗೆ, ಮರಳು.
**ಉಸುಗುಡು** ಗೊಣಗುಟ್ಟು.
**ಉಸುರ್ದಾಣ** (ಉಸಿರ್ದಾಣ) ಪ್ರಾಣಸ್ಥಾನ, ಜೀವಸ್ಥಳ, ಮರ್ಮಸ್ಥಾನ.
**ಉಸ್ರ** ಬೆಳಕಿನ ಕಿರಣ; ಗೂಳಿ.
**ಉಳಿ** ಬಿಡು, ಅಡಗು, ಬಚ್ಚಿಟ್ಟುಕೊಳ್ಳು; ಮಿಗು, ಮೀರು; ರಜಾದಿನ; ಮರಗೆಲಸದ ಒಂದು ಸಾಮಗ್ರಿ.
—ತ ಉಳಿತಾಯ, ಉಳಿದುದು; ಲಾಭ; ಹೂಟೆ.
—ವು (ಉಳುಹು) ಉಳಿಮೆ; ಉಳಿಸು.
—ಮೆ ಉಳಿಸಿದುದು.
**ಉಳಿಗ** (ಊಳಿಗ) ಶಕುನದ ಹಕ್ಕಿ.
**ಉಳಿಗಿತ್ತು** ನಿಂತಿರು.
**ಉಳುಕು** (ನೋಡು: ಉಲುಕು)
**ಉಳು** (ಉಳ್) ಇರು, ಹೂಡು, ನೇಗಿಲು ಹೊಡೆ.
—ಮೆ (ಉಳ್ಮೆ) ಹೂಟೆ, ಉಳುವಿಕೆ.
**ಉಳ್ಗೆ** ಪ್ರೀತಿ, ಅನುರಾಗ.
**ಉಳ್ಚು** ಹೊಳೆಯು.
**ಉಳ್ಳ** ಇರುವ.
—ಅವ (ಉಳ್ಳವ) ಶ್ರೀಮಂತ, ಉಳ್ಳವನು.
—ಅನ್ನೆವರ ಇರುವ ತನಕ.
**ಉಳ್ಳಲರು** ಒಳಗಿಂದಲೇ ಅರಳು.
**ಉಳ್ಳಂಜಿಸು** ಹೆದರಿಕೆ ಹುಟ್ಟಿಸು.
**ಉಳ್ಳಿ** ನೀರುಳ್ಳಿ, ಈರುಳ್ಳಿ.
**ಉಳ್ಳಿಮುಳ್ಗು** ಮುಳುಗು.
**ಉಳ್ಳುಳ್ಕು** ಹೆದರು, ಧೈರ್ಯಗುಂದು.
**ಉಂಕಿಸು** ಪರಿಶೀಲಿಸು.
**ಉಂಗುಟ** ಅಂಗುಷ್ಠ (ಸಂ), ಕೈಕಾಲು ಹೆಬ್ಬೆರಳು.
**ಉಂಗುರ** ಬೆರಳಿಗೆ ತೊಡಿಸುವ ಆಭರಣ.
**ಉಂಗುರ** ಕೂದಲು ಸುರುಳಿ ಕೂದಲು.
**ಉಂಚ** ಉಚ್ಚ; ಗಟ್ಟಿಯಾಗಿ; ಉದ್ದವಾಗಿ, ದೀರ್ಘವಾಗಿ; ಕೋಳಿಗಳನ್ನು ಮುಚ್ಚುವ ಬಿದಿರ ಸಲಿಕೆಯ ಮಾಡು.
**ಉಂಜ** ಪುಂಜ.
**ಉಂಡಲಿಗೆ** ಒಂದು ವಿಧವಾದ ಅಕ್ಕಿಯ ದೋಸೆ,ಅಕ್ಕಿಗೆ ತೆಂಗಿನತುರಿ ಸೇರಿಸಿ ಅರೆದು ಉಂಡುಂಡೆಯಾಗಿ ಬಾಣಲೆಗೆ ಹಚ್ಚಿ ಬೇಯಿಸಿದ ಉಂಡಲೀಕವೆಂಬ ತಿನಸು.
**ಉಂಡಾಡಿ** ಹೊಟ್ಟೆಬಾಕ, ಉಂಡು ತಿರುಗುವವ; ಸೋಮಾರಿ.
—ಭಟ್ಟ ಉಂಡಾಡಿ, ಆಲಸ್ಯಗಾರ.
**ಉಂಡಿಗೆ** ಮೊಹರು; ಮುದ್ರೆ; ಗಂಟಲು.
**ಉಂಡೆ** ಉರುಟಾಗಿರುವುದು, ಮುದ್ದೆ; ಲಡ್ಡುಗೆ.
**ಉಂತೆ** ನಿಷ್ಕಾರಣವಾಗಿ, ಕಾರಣವಿಲ್ಲದೆ, ಸುಮ್ಮನೆ.

# ಊ

**ಊಚು** ಉತ್ತಮ.
**ಊಜು** ಚೀಪು; ಚೀಪುವ ಸಾಧನ.
**ಊಟ** ಅಶನ, ಉಣ್ಣುವಿಕೆ.
**ಊಟೆ** ಬುಗ್ಗೆ, ಒರತೆ, ಚಿಲುಮೆ.
**ಊಡಿಕೊಳ್** ಚೆಲ್ಲಾಡು.
**ಊಡು** ಊಟಮಾಡಿಸು, ಉಣ್ಣಿಸು ತಿನ್ನಿಸು; ಲೇಪಿಸು, ಹಚ್ಚು.
**ಊಣೆಯ** ಊನ (ಸಂ), ನ್ಯೂನತೆ, ಕೊರತೆ; ಹೀನತೆ.
**ಊತ** ಈತ; ಕಂಬ; ಸ್ಥಿರ.

ಊತು ಆಧಾರ, ಒತ್ತಿಕೊಡುವ ವಸ್ತು.
ಊದು ಬೀಸು, ಗಾಳಿಬೀಸು; ಉಬ್ಬು; ಬಾಯಿಂದ ಊದಿ ವಾದ್ಯಮಾಡು.
—ಇಕೆ (ಊದಿಕೆ) ವಾದ್ಯಬಾರಿಸುವಿಕೆ; ಉಬ್ಬುವಿಕೆ.
ಊನ (ನೋಡು: ಊಣೆಯ)
ಊಬು ಊದು; ಮುಳ್ಳು ತೆನೆ.
ಊಮ ಗೆಳೆಯ, ಸ್ನೇಹಿತ; ಮೂಕ.
ಊಮೆ ಬಾಯಿಬಾರದವಳು; ಮೂಕತನ.
ಊರು (ಊರ್) ನಾಡು; ಗ್ರಾಮ, ಸಣ್ಣ ಪಟ್ಟಣ; ತೊಡೆ; ನೆಡು.
—ಉಂಬಳಿ ಊರನ್ನು ಉಂಬಳಿ ಕೊಡುವುದು; ಗ್ರಾಮ; ಸರ್ವಸಾಮಾನ್ಯ.
—ಗ ಗ್ರಾಮೀಣ, ಹಳ್ಳಿಗ.
ಊರ್ಜಿತ ಶಕ್ತಿಯುಕ್ತ, ಒಳ್ಳೆಯ ಸ್ಥಿತಿಯಲ್ಲಿರುವ.
ಊರ್ಣ(ಸಂ) ಉಣ್ಣೆ(ದ್ಭ), ನೂಲು, ಕುರಿಯ ರೋಮ.
—ನಾಭ (ಊರ್ಣ=ನೂಲು); ಜೇಡರ ಹುಳು, ಬಲೆಗಾರ; ಮಹಾಪುರುಷನ ಗುರುತು.
ಊರ್ಣಾಯು ಉಣ್ಣೆಯುಳ್ಳುದು, ಕುರಿ.
ಊರ್ಧ್ವ ಉನ್ನತ, ಎತ್ತರ, ಮೇಲಗಡೆ.
ಊರ್ಧ್ವಪುಂಡ್ರ ಹಣೆಯಲ್ಲಿ ಮೇಲ್ಮೊಗವಾಗಿ ಎಳೆದ ನಾಮ.
ಊರ್ಧ್ವರೇತಸ್ (ರೇತಸ್ = ವೀರ್ಯ) ವೀರ್ಯಪಾತವಾಗದವ, ಯೋಗಿಗಳು, ಸನ್ಯಾಸಿ; ಭೀಷ್ಮ ಪಿತಾಮಹ.
ಊರ್ಧ್ವಲೋಕ ಮೇಲಿನ ಲೋಕ; ಸ್ವರ್ಗ.
ಊರ್ಮಿ ತೆರೆ; ಮಳೆ; ಹಸಿವು ಮೊದಲಾದ ಬಾಧೆ.
ಊರ್ಮಿಕೆ ತೆರೆ; ಹಸಿವು ಮೊದಲಾದ ಬಾಧೆ; ಉಕ್ಕುವಿಕೆ; ಉಂಗುರ.
ಊರ್ಮಿಳೆ ಲಕ್ಷ್ಮಣನ ಹೆಂಡತಿ.
ಊರ್ವಶಿ ನಾರಾಯಣನ ತೊಡೆಯಲ್ಲಿದ್ದವಳು; ದೇವಲೋಕದ ಒಬ್ಬಳು ಅಪ್ಸರೆ.
ಊಹಾ (ಊಹೆ) ಅನುಮಾನ; ತರ್ಕ; ಕಲ್ಪನೆ.
—ಕಾರ ತರ್ಕಿಸಿ ತಿಳಿಯಬಲ್ಲವ.
ಊಳ್ (ಊಳು) ಕೂಗು, ಬಗುಳು.
—ಇಡು ಕೂಗು, ಕಿರಿಚು, ಬೊಬ್ಬಿಡು.
ಊಳಿಗ ಕೆಲಸ; ಸೇವೆ; ದಿನವಹಿ ಲೆಕ್ಕದ ಪುಸ್ತಕ.

## ಋ

ಋಕ್ಷ ಕರಡಿ; ನಕ್ಷತ್ರ, ಮೇಷಾದಿ ರಾಶಿಗಳು.
—ಪತಿ ಕರಡಿಗಳ ಒಡೆಯನಾದ ಜಾಂಬವ; ಚಂದ್ರ.
—ರಾಜ ಜಾಂಬವ; ವಾಲಿಸುಗ್ರೀವರ ತಂದೆಯ ಹೆಸರು.
ಋಗ್ವೇದ ಪರಮಾತ್ಮನ ಸ್ತುತಿಪರವಾದ ವೇದ; ನಾಲ್ಕು ವೇದಗಳಲ್ಲಿ ಮೊದಲನೆಯದು.
ಋಗ್ವೇದಿ ಋಗ್ವೇದದ ಸಂಪ್ರದಾಯವನ್ನು ಅನುಸರಿಸುವ ಬ್ರಾಹ್ಮಣ.
ಋಚ್ (ಋಚ) ಮಂತ್ರ; ಸ್ತೋತ್ರ; ವೇದದ ಸ್ತುತಿಪರವಾದ ಸೊಲ್ಲುಗಳು.
ಋಜು ಪ್ರಾಮಾಣಿಕತೆ; ನೆಟ್ಟಗೆ, ಸರಳ; ಸತ್ಯ.
ಋಣ ಸಾಲ.
ಋಣತ್ರಯು ದೇವರಿಗೂ ಪಿತೃಗಳಿಗೂ

ಋಷಿಗಳಿಗೂ ನಮ್ಮಿಂದ ಸಲಬೇಕಾದ ಕರ್ತವ್ಯಗಳು (ಸಾಲಗಳು).

**ಋಣಮುಕ್ತಿ** ಸಾಲದಿಂದ ಬಿಡುಗಡೆಯಾಗುವುದು.

**ಋಣಾನುಬಂಧ** ಹಿಂದಿನ ಜನ್ಮದ ಋಣ ಸಂಬಂಧ; ಹಿಂದಿನಿಂದ ಸುಖದುಃಖ ಭಾಗಿಗಳಾಗಿ ಬಂದುದು.

**ಋಣಿ** ಸಾಲ ಕೊಂಡವ.

—**ಗಾರ** ಸಾಲ ಸಲಿಸಬೇಕಾದವ.

**ಋತ** ಸತ್ಯ; ಪ್ರಾಮಾಣಿಕತೆ; ಯುಕ್ತ; ಯೋಗ್ಯವಾದ ಆಚಾರ; ಪ್ರಿಯವಾದ ಮಾತು.

**ಋತು** ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರಗಳೆಂದು ವರ್ಷದ ಹನ್ನೆರಡು ಮಾಸಗಳಿಗೆ ಆರು ಋತುಗಳು; ಸ್ತ್ರೀಯರ ಮುಟ್ಟು, ರಜ.

—**ರಾಜ** ಋತುಗಳಲ್ಲಿ ಶ್ರೇಷ್ಠವಾದ ವಸಂತ ಋತು.

**ಋತುಪರ್ಣ** ಅಯೋಧ್ಯೆಯ ದೊರೆಯೊಬ್ಬನು; ರಾಜ್ಯವನ್ನು ಕಳೆದ ನಳನು ಈತನ ಸಾರಥಿಯಾಗಿ ಕೆಲವು ಕಾಲ ಇದ್ದನು.

**ಋತುಸಂಹಾರ** ಕಾಳಿದಾಸನಿಂದ ರಚಿತವಾದ ಒಂದು ಕಾವ್ಯ.

**ಋತುಸ್ನಾನ** ಋತುಕಾಲದ ಬಳಿಕ ಮಾಡುವ ಸ್ನಾನ, ಎನೀರು.

**ಋತ್ವಿಕ್** ಋತ್ವಿಜ, ಯಜ್ಞವನ್ನು ಮಾಡುವವ; ಯಜ್ಞಕಾರ್ಯದಲ್ಲಿ ಭಾಗಿಯಾದವ.

**ಋದ್ಧ** ಸಂಪತ್ತು; ಚೆನ್ನಾಗಿ ಬೇಯಿಸಿದ ಧಾನ್ಯ; ಸಿದ್ಧಾಂತ.

**ಋದ್ಧರ್** ಸಂಪತ್ತುಳ್ಳವರು, ಸಂಪನ್ನರು.

**ಋಭು** (ಋ = ಅದಿತಿ + ಬು = ಹುಟ್ಟಿದವ) ದೇವ; ಸ್ವರ್ಗ.

**ಋಭುಕ್ಷ** ಸ್ವರ್ಗ; ಇಂದ್ರ.

**ಋಷಭ** (ವೃಷಭ) ಎತ್ತು; ಒಬ್ಬ ಮುನಿ; ಪಾಂಡ್ಯದೇಶದ ಒಂದು ಪರ್ವತ; ಮಗಧದೇಶದ ಒಂದು ಪರ್ವತ; ಅಲಂಗಿರಿ ಗುಡ್ಡಗಳು; ಸಪ್ತಸ್ವರಗಳಲ್ಲಿ ಎರಡನೆಯ ದನಿ; ಒಬ್ಬ ಚಕ್ರವರ್ತಿ; ಆದಿತೀರ್ಥಂಕರ.

**ಋಷಭಧ್ವಜ** ವೃಷಭಧ್ವಜನು; ಎತ್ತಿನ ಗುರುತುಳ್ಳ ಧ್ವಜವುಳ್ಳವನು; ಶಿವ.

**ಋಷಿ** ತಪಸ್ವಿ.

**ಋಷ್ಯ** ಬಿಳಿ ಕಾಲಿನ ಜಿಂಕೆ; ಕುದುರೆಯಂತೆ ಆಕಾರವೂ ಮೂರು ಕೊಂಬುಗಳೂ ಉಳ್ಳುವೆಂಬ ಕಲ್ಪನೆಯ ಪ್ರಾಣಿ.

**ಋಷ್ಯಮೂಕ** (ಋಶ್ಯಮೂಕ) ಮೃಗಗಳೂ ಮೀನುಗಳೂ ಸೇರಿರುವ ಒಂದು ಬೆಟ್ಟ; ಪಂಪಾ ಸರೋವರದ ಬಳಿಯ ಒಂದು ಪರ್ವತ. ಇಲ್ಲಿ ಸುಗ್ರೀವನೊಡನೆ ರಾಮಚಂದ್ರನು ಕೆಲಕಾಲ ವಾಸವಾಗಿದ್ದನು.

**ಋಷ್ಯಶೃಂಗ** ಒಬ್ಬ ಬ್ರಹ್ಮರ್ಷಿ. ವಿಭಾಂಡನೆಂಬ ಒಬ್ಬ ಮುನಿಯ ಮಗ. ಮಹಾಭಾರತದ ಹೇಳಿಕೆಯಂತೆ ಈತನಿಗೆ ಒಂದು ಕೊಂಬಿತ್ತೆಂದೂ, ಈತನು ಒಂದು ಹರಿಣಿಯಲ್ಲಿ ಜನಿಸಿದನೆಂದೂ ಕಥೆಯಿದೆ. ಈ ಋಷಿಯೇ ದಶರಥನಿಗಾಗಿ ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿದವನು. ಅಂಗದೇಶದ ದೊರೆ ಲೋಮಪಾದನ ಮಗಳಾದ ಶಾಂತಾದೇವಿಯು ಇವನ ಹೆಂಡತಿ.

**ಋಷ್ಯಶೃಂಗಾಶ್ರಮ** ಭಾಗಲಪುರ ಜಿಲ್ಲೆಯಲ್ಲಿ ಕೂಸೀ ನದೀತೀರದಲ್ಲಿನ ಒಂದು ಆಶ್ರಮ; ಋಷ್ಯಶೃಂಗ ಮುನಿಯು ವಾಸವಾಗಿದ್ದ ಸ್ಥಳ.

# ಎ

ಎಕಟೆ ಆಶ್ರಯ; ಹಿರಿಮೆ.
ಎಕರೆ (ಎಕ್ರೆ) ಜಮೀನಿನ ಒಂದು ಅಳತೆ, 4840 ಚ. ಗಜ ವಿಸ್ತೀರ್ಣ.
ಎಕ್ಕಟಿ ಏಕಾಂತ, ಗುಟ್ಟು; ಹತ್ತಿರ.
ಎಕ್ಕಟಿಗ ಶ್ರೇಷ್ಠ, ಯೋಗ್ಯ.
ಎಕ್ಕತುಳ ಒಂದೇ ಸಮ; ಅಧಿಕ ಶಕ್ತಿಯಿಂದ; ಅಧಿಕ; ಅಕಾಸ್ಮಾತ್ತಾಗಿ, ಥಕ್ಕನೆ.
ಎಕ್ಕಬಾಗೆ ಏಕಭಾಗ (ಸಂ), ಒಂದೇ ಪಾಲು.
ಎಕ್ಕರಿಸು ನಿಂದಿಸು, ಅಣಕಿಸು.
ಎಕ್ಕಲ ಕಾಡುಹಂದಿ; ದೊಡ್ಡ.
ಎಕ್ಕವಡ (ಎಕ್ಕಡ) ಪಾದರಕ್ಷೆ, ಬೇಟೆಯಲ್ಲಿ ಉಪಯೋಗಿಸುವ ಪಾದರಕ್ಷೆ, ಕೆರವು.
ಎಕ್ಕಸಕ್ಕತನ ಏಕಶಕ್ಯತಾ (ಸಂ), ಪರಾಕ್ರಮ; ಅವ್ಯವಸ್ಥೆ, ಅಪಹಾಸ್ಯ.
ಎಕ್ಕಸಕ್ಕೆ ಚಂಡಿ, ಕುಬುದ್ಧಿಯ ಸ್ತ್ರೀ.
ಎಕ್ಕಸರ ಏಕಸರ (ಸಂ), ಒಂದೆಳೆ ಮುತ್ತಿನ ಸರ; ಏಕಸ್ವರ (ಸಂ), ಅವಿಚ್ಛಿನ್ನವಾದ ಧ್ವನಿ, ಒಂದೇ ಧ್ವನಿ.
ಎಕ್ಕಳೆ (ಅಕ್ಕಳೆ) ಒಂದು ಜಾತಿಯ ಕೀಟ; ಜಿರಲೆ.
ಎಕ್ಕಾವಳಿ (ನೋಡು: ಎಕ್ಕಸರ).
ಎಕ್ಕು ಒಡೆಯು, ವಿಭಾಗಿಸು; ಪ್ರತ್ಯೇಕಿಸು, ಬಿಡಿಸು; ಮೇಲೆಬರು; ಎಟುಕು; ಹಿಂಜು.
— ಇಕ್ಕು ಹತ್ತಿ ಹಿಂಜುವುದು.
ಎಕ್ಕೆ(ಧ್ಬ) ಅರ್ಕ (ಸಂ), ಒಂದು ವಿಧದ ಹೂ; ಹತ್ತಿ ಕೊಡುವ ಗಿಡ; ಸಮೂಹ.
— ಹಿಂಡು ದೊಡ್ಡ ಸಮೂಹ.
ಎಕ್ಕೆಕ್ಕೆ ಮೇಲೆಮೇಲೆ, ಒಂದರ ಮೇಲೊಂದು; ಸಾಲುಸಾಲು; ಒಟ್ಟು.
ಎಗಚಿಗ ಹಾಸ್ಯಗಾರ.
ಎಗರು ಹಾರು, ಜಿಗಿ, ದುಬೀಳು.
— ಇಕೆ ಹಾರಿಕೆ, ಹಾರಾಟ.
ಎಗೆ ರೆಂಬೆ, ಮರದ ಶಾಖೆ, ಗೆಲ್ಲು.
ಎಗ್ಗ ಗಾಂಪ, ಹೆಡ್ಡ, ದಡ್ಡ; ಮೂರ್ಖ; ಅಪಮಾನ.
— ತನ ಹೆಡ್ಡತನ, ಮೂರ್ಖತೆ.
ಎಚ್ಚರ ಜಾಗ್ರತೆ, ಜಾಗರಣೆ; ಕಾವಲು.
ಎಚ್ಚು ಹಚ್ಚು; ಪ್ರಯೋಗಿಸು; ಬಾಣ ಪ್ರಯೋಗಮಾಡು.
— ಕೊಳು (ಎಚ್ಚಿಕೊಳು) ಕಾಡಿಗೆಯಂಥ ವಸ್ತುವನ್ನು ಹಚ್ಚಿಕೊಳ್ಳು.
ಎಜ್ಜ ತೂತು.
ಎಟಕು (ಎಟುಕು) ಕೈಗೆ ಸಿಗು; ಇಡಕು.
ಎಟ್ಟು ಕೈನೀಡು, ನಿಲುಕು, ಎಟಕು; ಒರಟ; ಪರರ ಮಾತನ್ನು ಕೇಳದವ.
ಎಡ ವಾಮ, ಬಲಕ್ಕೆ ವಿರುದ್ಧವಾದ.
— ಚು ಎಡಗೈಯಿಂದ ಕೆಲಸಮಾಡು.
— ವರಿಗೆ ಎಡಭಾಗ.
ಎಡತಾಕು ಯಾವಾಗಲೂ ಬಿಡದೆ ಬರುತ್ತಿರು.
ಎಡಪು (ಎಡಹು, ಎಡವು) ಮುಗ್ಗರಿಸು; ಕಾಲಿಗೆ ತಾಗು.
ಎಡರು ತೊಂದರೆ; ಪ್ರತಿಬಂಧಕ; ದಾರಿದ್ರ್ಯ, ಬಡತನ; ಕಷ್ಟ, ಕೇಡು.
ಎಡವ ಕೆಲಸಕ್ಕೆ ಬಾರದವ; ನಿರುಪಯೋಗಿ.
ಎಡವರಿಸು ಮಾತು ತಪ್ಪಿಸಿ ಓದು; ಬಾಯಿ ತಪ್ಪಿ ಮಾತನಾಡು; ಮುಗ್ಗರಿಸು.
ಎಡೆ ಠಾವು, ಸ್ಥಾನ, ಸ್ಥಳ; ಮಧ್ಯ; ಬಿಡುವು; ಊಟದ ಎಲೆ.
— ಅರಿ ವಿಚ್ಛಿನ್ನವಾಗು, ಬೇರೆಬೇರೆಯಾಗು.
— ಆಡು ಚಲಿಸು, ಸಂಚರಿಸು; ಅತ್ತಿಂದಿತ್ತ ಓಡಾಡು.

— ಕಿರಿ ಮುಚ್ಚು, ತುಂಬು, ಕಿಕ್ಕಿರಿ.
— ಕೆಡೆ ಕೆಳಗೆ ಬೀಳು, ನೆಲಕ್ಕೆ ಬೀಳು.
— ಕೊಡು ಸ್ಥಳಕೊಡು, ದಾರಿಬಿಡು, ಅವಕಾಶ ಮಾಡು.
— ಕೊಳ್ (ಳು) ಸೇರಿಸಿಕೊಳ್ಳು, ಅವಕಾಶಪಡೆ; ಸಂಭವಿಸು, ಪ್ರಾಪ್ತಿಸು; ಸ್ಥಾನವನ್ನು ಸೇರು.
— ಕೋದು ನಡುವೆ ಬಂದು.
— ತೆರಹು ಅವಕಾಶ, ವಿರಾಮ, ತೆರಪು.
— ನೆರೆ ಅಡಕವಾಗು, ಸ್ಥಳ ತುಂಬು.
ಎಡೆಗ ಕೆಲಸಕ್ಕೆ ಬಾರದವ.
ಎಡೆಗಟ್ಟು ಭೇದ; ಕಟ್ಟುನಿಟ್ಟು, ಕಟ್ಟುಪಾಡು.
ಎಡೆಗೆಡೆಗೆ ಅಲ್ಲಲ್ಲಿ, ಆಗಾಗ; ಅಲ್ಲಲ್ಲಿಗೆ, ಮೇಲೆಮೇಲೆ.
ಎಡೆಮುಡಗು ತಡಮಾಡು; ಸಂಕೋಚಪಡು; ಸ್ಥಳಬಿಡು.
ಎಡೆಯ ಆಗದು, ಕೂಡದು.
ಎಡೆವರ(ಎಡವರ) ನಡುವೆ ಮರೆತು ಹೋಗುವಿಕೆ, ಅಸ್ತ್ಯವಸ್ತ್ಯವಾಗುವಿಕೆ.
ಎಡೆವರಿ ಮುಂದುವರಿ; ನಡುವೆ ಕತ್ತರಿಸು.
ಎಡೆವಾಯ್ (ಎಡಪಾಯ್) ದಾರಿತಪ್ಪಿ ಬರು; ನಡುವೆ ಬರು.
ಎಡೆವೆರಸು ನಿಲ್ಲು, ಪ್ರತಿಭಟಿಸು.
ಎಡೆಸೆಳೆ ನಡುವಣ ಸೆಳವು; ಒಯ್ಯು.
ಎಡ್ಡ ಮನೋಹರ, ಸುಂದರ, ರಮ್ಯ.
ಎಣ್ ಲೆಕ್ಕಮಾಡು; ಆಲೋಚಿಸು.
— ಇಕೆ(ಎಣಿತೆ) ಯೋಚನೆ; ಲೆಕ್ಕಮಾಡುವಿಕೆ.
— ಇಸು ಲೆಕ್ಕಮಾಡು; ಆಲೋಚಿಸು.
ಎಣುತೆ (ನೋಡು: ಎಣಿಕೆ)
ಎಣೆ ಜತೆ, ಜೋಡು; ಸರಿ, ಸಮಾನ, ಸಾಟಿ.
— ಆಡು ಜತೆಯಿಂದ ಆಡು; ಹಾವುಗಳ ಕ್ರೀಡೆ.
— ಪಕ್ಕಿ (ಎಣೆವಕ್ಕಿ) ಜತೆಯಾಗಿರುವ ಹಕ್ಕಿ; ಚಕ್ರವಾಕ.
ಎಣ್ಣು (ಎಣ್) ಯೋಚಿಸು; ಚಿಂತೆಗೀಡಾಗು.
ಎಣ್ಣೆ ತೈಲ, ಕಾಳು ಕಾಯಿಗಳ ಜಿಡ್ಡು, ಎಳ್ಳನೆಯ್.
— ಕೊಪ್ಪರಿಗೆ ಎಣ್ಣೆ ತುಂಬಿದ ಕಡಾಯಿ.
— ಗಾಯ್ ಎಣ್ಣೆಯಲ್ಲಿ ಕಾಯಿಸು; ವ್ಯಂಜನ, ಎಣ್ಣೆಯಲ್ಲಿ ಕರಿದ ಒಡವೆ.
ಎಣ್ದೆಸೆ ಎಂಟು ದಿಕ್ಕು.
— ಸೆಣ್ ಎಂಟು ದಿಕ್ಕುಗಳೆಂಬ ಕನ್ಯೆಯರು; ದಿಗಂಗನೆಯರು.
ಎಣ್ಮೆಯ್ಯ ಎಂಟು ಮೈಯುಳ್ಳವ; ಐದು ಭೂತಗಳೂ, ಸೂರ್ಯ, ಚಂದ್ರ ಸೋಮಯಾಜಿಗಳೆಂಬ ಎಂಟು ವಸ್ತುಗಳು ತನ್ನ ದೇಹವಾಗಿ ಉಳ್ಳವ, ಶಿವ.
ಎಣ್ಸಾಸಿರ ಎಂಟು ಸಾವಿರ.
ಎತ್ತ ಎಲ್ಲಿ, ಎಲ್ಲಿಗೆ; ಹೇಗೆ; ಏನು.
— ಣ (ಎತ್ತಲ) ಎಲ್ಲಿಯ.
ಎತ್ತಗಡೆ ಒಂದು ಸಾಧನ; ಉಪಾಯ.
ಎತ್ತರ ಉನ್ನತ, ಮೇಲಿನ.
ಎತ್ತಿಕೊಳು ತಬ್ಬು; ಮೇಲಕ್ಕೆ ಹಿಡಿ.
— ವಳಿಕೆ ಎತ್ತುವಿಕೆ, ಸಂಗ್ರಹಿಸುವಿಕೆ.
ಎತ್ತಿಕಟ್ಟು ಒಬ್ಬನ ಮೇಲೊಬ್ಬನನ್ನು ಸ್ಪರ್ಧೆಗೆ ಹಿಡಿ, ಹಗೆಕಟ್ಟು.
ಎತ್ತಿಹಿಡಿ ಮೇಲಕ್ಕೆ ಹಿಡಿ; ಪ್ರೋತ್ಸಾಹಗೊಳಿಸು.
ಎತ್ತು ಮೇಲಕ್ಕೇರಿಸು; ಹೊಂದು, ಪಡೆಯು; ದೂಷಿಸು; ಎತ್ತಿದುದು; ವೃಷಭ, ಬಸವ.
ಎದುರು ಇದಿರು, ವಿರೋಧ, ಮುಂದೆ.
ಎದೆ (ದ್ಭ) ಹೃದಯ (ಸಂ), ಮುಂಡದಲ್ಲಿ ಕತ್ತಿನ ಕೆಳಭಾಗ; ಧೈರ್ಯ; ಮರುಕ.
— ಗಾರಿಕೆ ಧೈರ್ಯ, ಸಾಹಸ.

ಎದೆತಟ್ಟು ಆತ್ಮಸ್ತುತಿ ಮಾಡು; ಕೊಚ್ಚಿಕೊಳು.
ಎದೆವಡ ಎದೆಗೆ ಹತ್ತಿದ, ಎದೆಯ ಮೇಲೆ ಬಿದ್ದಿರುವ.
ಎನಸು ಸಲ್ಪವೂ; ವಿಶೇಷವಾಗಿ, ಹೆಚ್ಚಾಗಿ.
ಎನಿತು (ಎನಿತ್ತು) ಎಷ್ಟು.
ಎನಿಪ್ಪ ಎನಿಸುವ.
ಎನಿಬರ್ ಎಷ್ಟು ಜನರು.
ಎನು (ಎನ್ನು) ಹೇಳು; ಅನ್ನು.
—ಇಸು (ಎನ್ನಿಸು) ಮನಸ್ಸಿಗೆ ತೋಚು; ಹೇಳಿಸು; ಎಷ್ಟು.
ಎನ್ನಂ ಎಂಥವನು; ಎಂಥದು; ನನ್ನನ್ನು.
ಎನ್ನೆವರಂ ಎಲ್ಲಿಯ ವರೆಗೆ.
ಎನ್ನೊಂದಿಗ ನನ್ನಂಥವ; ನನ್ನವ.
ಎಬಡ ಮೂರ್ಖ; ಮರುಳ.
—ಇಸು ದಡಬಡಿಸು; ತಡವರಿಸು.
ಎಬ್ಬಟ್ಟು (ಎಳ್ಬಟ್ಟು) ತೀರಿಸು; ಬೆನ್ನಟ್ಟು.
ಎಬ್ಬು ಅಟ್ಟು; ಮೇಲೆತ್ತು.
—ಇಸು ಏಳಿಸು, ಹೊರಡಿಸು; ಉಪಾಯ ದಿಂದ ಪಾರುಗಾಣಿಸು.
ಎಮೆ (ನೋಡು: ಎವೆ) ರೆಪ್ಪೆ.
ಎಮ್ಮತು ನಮ್ಮ, ಎಮ್ಮ
ಎಮ್ಮೆ ಪಶುವರ್ಗದ ಪ್ರಾಣಿ.
ಎಯ್ತರು (ಅಯ್ತರು) ಬರು, ಸಮೀಪಿಸು.
ಎಯ್ದುಣ್ಮು ವಿಶೇಷವಾಗಿ ಏಳು.
ಎಯ್ದೆ ಚೆನ್ನಾಗಿ; ಪೂರ್ತಿಯಾಗಿ, ಸಮನಾಗಿ; ಹೋಗಲು, ಬರಲು.
ಎಯ್ಯಮಿಗ ಮುಳ್ಳುಹಂದಿ, ಕಣೆಹಂದಿ.
ಎರಕ ಎರೆಯುವುದು, ಹೊಯ್ಯುವುದು. ಆಕಾರವನ್ನು ಹೊಯ್ಯುವುದು; ಅನ್ಯೋನ್ಯ ಸೇರಿಕೆ; ಅಚ್ಚುಮೆಚ್ಚು; ಮೋಹ.
—ಇರು ಅನ್ಯೋನ್ಯವಾಗಿರು, ಸೇರಿರು, ಹೊಂದಿರು.
ಎರಕೆ (ಎರಂಕೆ) ರೆಕ್ಕೆ, ಪಕ್ಷ, ಪಕ್ಕ; ಒಂದು ಜಾತಿಯ ಹುಲ್ಲು, ಏರಕಾ (ಸಂ).
ಎರಗು ಪ್ರೀತಿಯಿಂದ ಸೇರು; ಬಾಗು, ನಮಿಸು; ಇಷ್ಟಪಡು; ಮೇಲೆ ಬೀಳು; ಒಮ್ಮೆಗೆ ಕಾವಿಂದ ಬೀಳು.
ಎರಗಿವಿ (ಎರವು + ಕಿವಿ) ಚಾಡಿ ಕೇಳುವ ಕಿವಿ.
ಎರಚು ಚಿಮುಕಿಸು, ಚೆಲ್ಲು.
ಎರಡು ಒಂದಲ್ಲದ್ದು; ಎರಡನೆಯ ಸಂಖ್ಯೆ; ಭೇದ; ಮೋಸ.
—ಎಣಿಸು ಕೇಡುಬಗೆ; ಎಣಿಸಿದ ಹಾಗೆ ಮಾಡದಿರು.
ಎರಣೆ ಅರಣೆ; ಗೌಳಿ ಜಾತಿಯ ಪ್ರಾಣಿ.
ಎರಲೆ (ಎರಳೆ) ಮಿಕ, ಕೃಷ್ಣಮೃಗ, ಹರಿಣ.
ಎರವ (ಎರಪ) ಎರಗುವ.
ಎರವು ಸಾಲ, ಕಡ; ಬೇಡು; ಅಸಂಗತ; ವೈರಭಾವ.
—ಇಗ ಸಾಲ ಪಡೆದವ; ಸಾಲಬೇಡುವವ.
ಎರವೆಟ್ಟು ದಿನ್ನೆ, ಎತ್ತರದ ಬೆಟ್ಟು.
ಎರಳೆ (ನೋಡು: ಎರಲೆ).
ಎರಂಕೆ (ನೋಡು: ಎರಕೆ).
ಎರೆ ಹೊಯ್ಯು; ದಾನಮಾಡು, ಕೇಡು; ಬೇಡು; ಪ್ರಾರ್ಥಿಸು. ಒಂದು ಬಗೆ ಜಿಗುಟಾದ ಕರಿಮಣ್ಣು; ಆಹಾರ; ಹುಳು ಹುಪ್ಪಟೆ, ನಕ್ಕುಳು.
ಎರೆಪಾಲು (ಎರೆವಾಲು) ಹೊಯ್ಯುವ ಹಾಲು, ಪಾತ್ರೆಯಲ್ಲಿ ಕುದಿಸುವ ಹಾಲು.
ಎರೆಯ ಒಡೆಯ, ಪತಿ, ಯಜಮಾನ, ಸ್ವಾಮಿ; ಪ್ರಿಯ.
ಎರೆವಟ್ಟು ಮನೆ; ಆಶ್ರಯ ಸ್ಥಾನ.
ಎರ್ದು (ಎದ್ದು) ಎಳ್ದು, ಹೊರಟು.
ಎರ್ದೆ (ನೋಡು: ಎದೆ)
ಎರ್ದೆವಲಾಕೆ ಚಿತ್ತ ಕ್ಷೋಭೆಗೊಂಡು, ಮನಸ್ಸು ಗಲಿಬಿಲಿಯಾಗಿ.

ಎರ್ದೆವಳಲ್ ಎದೆಯುಳಲು, ಮನಸ್ಸಿನ ಚಿಂತೆ, ಮನೋವ್ಯಥೆ; ಆಯಾಸ.

ಎಲರು ಗಾಳಿ, ಪವನ.

ಎಲರುಣಿ (ಗಾಳಿಯನ್ನುಣ್ಣುವುದು) ಸರ್ಪ.

ಎಲರ್ಚು ಜೊತೆಗೊಳ್ಳು.

ಎಲವ ಬೂರುಗದ ಮರ.

ಎಲವೋ ಎಲೆಲಾ.

—ಎಲವೋ . . . ಭಲಾ, ಎಲಾ, ಅಬ್ಬಾ.

ಎಲು (ಎಲುಬು) ಎಲುವು, ಮೂಳೆ, ಅಸ್ಥಿ.

ಎಲೆ ಪತ್ರ, ಪರ್ಣ; ತಾಂಬೂಲ; ಆಶ್ಚರ್ಯ ಇಲ್ಲವೆ ಸಂಬೋಧನ ಸೂಚಕ ಪದ.

—ಗಾರ ಎಲೆ ಮಾರುವವ.

ಎಲೆಮನೆ (ಎಲೆವನೆ) ಪರ್ಣಶಾಲೆ, ಋಷಿಗಳ ಗುಡಿಸಲು.

ಎಲೆಹಾವು ಮರಗಳ ಮೇಲೆ ವಾಸಿಸುವ ಹಾವು, ಹಸುರು ಹಾವು.

ಎಲ್ಲ ಸಮಸ್ತ, ಪೂರ.

ಎಲ್ಲಿ ಯಾವ ಕಡೆ.

ಎಲ್ಲೆ ಮೇರೆ, ಗಡಿ.

ಎಲ್ವುದೊಡಪು (ಎಲ್ವು+ತೊಡಪು) ಎಲುಬಿನ ಒಡವೆ.

ಎವೆ ರೆಪ್ಪೆ.

—ಇಡು ಕಣ್ಣೆವೆಮುಚ್ಚು.

—ಇಕ್ಕು ತೀಕ್ಷ್ಣವಾಗಿ ನೋಡು; ರೆಪ್ಪೆ ಬಡಿ.

ಎಷ್ಟು ಯಾವ ಗಾತ್ರ; ಯಾವ ಪ್ರಮಾಣ.

ಎಸಕ ಕೆಲಸ; ಸಾಮರ್ಥ್ಯ, ಬಲ, ಕೀರ್ತಿ; ಶೋಭೆ; ರಚನೆ.

—ದ ಖ್ಯಾತಿಯುಳ್ಳ.

ಎಸಗು ಉದ್ಯೋಗಮಾಡು; ಪ್ರಾರಂಭಿಸು; ತೋರಿಸು; ಬೀಸು; ಧ್ವನಿಕೇಳಿಸು.

ಎಸಗೆ ಮಾಡಲು; ಹೇಗೆ; ಎಸಯಲಿಕ್ಕೆ.

ಎಸಡಿ ನಳ್ಳಿ, ಎಡಿ.

ಎಸರು ಅನ್ನ ಬೇಯಿಸಲು ಇಟ್ಟ ನೀರು; ರಸ; ದ್ರವ.

ಎಸವು ಶೋಭೆ, ಚೆಲುವು.

ಎಸಳು ದಳ, ಹೂವಿನ ದಳ, ಹೂವಿನ ಪಕಳಿ.

—ಇಸು ದಳ ಬಿಡು, ಅರಳು; ಶೋಭಿಸು.

—ಒಡೆ ವಿಕಸನವಾಗು; ಅರಳು.

ಎಸಳ್ಗಣ್ಣು ತಾವರೆ ಹೂವಿನ ಎಸಳಂತಿರುವ ಕಣ್ಣು.

ಎಸು ಇಸು; ಬಾಣ ಪ್ರಯೋಗಮಾಡು.

—ಗೆ ಬಾಣ ಹಾರಿಸುವಿಕೆ; ಹೊಡೆತ.

ಎಸೆ ಬಾಣ ಹಾರಿಸು; ಧ್ವನಿ ಕೇಳಿಸು; ಶೋಭಿಸು.

ಎಳ್ ಎಳ್ಳು, ತಿಲ.

ಎಳ (ಎಳೆ), ಎಳೆಯ, ಸಣ್ಣ; ಹರೆಯದ; ಸಪುರವಾದ ಮರದ ಕಂಬ.

ಎಳಕ (ಎಳಮೆ), ಎಳೆ ವಯಸ್ಸು; ಸ್ಪಂದನ.

ಎಳಕುಳಿ ಆಕರ್ಷಣ; ಸೆಳೆತ.

ಎಳಕೊಳ್ಳು ಸೆಳೆಯು; ಆಕರ್ಷಿಸು.

ಎಳಗಂದಿ(ಎಳಗಂತಿ)(ಕಂದಿ=ಕರುವುಳ್ಳದನ) ಚಿಕ್ಕ ಕರುವುಳ್ಳ ದನ, ಕರುಹಾಕಿದ ದನ.

ಎಳತು (ಎಳದು) ಎಳೆಯದು, ಬಲಿಯದು.

ಎಳದಾಡು ಜಗಳಾಡು; ಸೆಳೆಯು, ಸ್ಪರ್ಧಿಸು.

ಎಳನಗೆ ಮುಗುಳು ನಗೆ.

ಎಳನೀರು ಸೀಯಾಳ, ಎಳ ತೆಂಗಿನಕಾಯಿ.

ಎಳಮೆ (ಎಳವೆ) ಎಳತನ; ಅಲ್ಪ ವಯಸ್ಸಾಗಿರುವಿಕೆ, ಕಿರಿವಯಸ್ಸು; ಬಾಲ್ಯ.

ಎಳಪೊಂಗಳ್ ಬಾಲ ನಕ್ಷತ್ರಗಳು.

ಎಳಲ್ ನೇಲು, ನೇತಾಡು, ಜೋಲು, ಜೋತಾಡು.

ಎಳವು ತೊನೆಯು, ತೂಗಾಡು.

ಎಳಸು ಅಪೇಕ್ಷಿಸು.

ಎಳೆ ಎಳತು, ಚಿಕ್ಕದು; ಸೆಳೆ; ಒಂದೇ ಸಾಲು, ಒಂದೇ ನೂಲು.

—ತ ಸೆಳೆತ, ಎಳೆಯುವಿಕೆ.

—ತಟ ಎಳೆದಾಡುವಿಕೆ, ಎಳೆದಾಟ, ತನ್ನ ಕಡೆಗೆ ಸೆಳೆಯುವಿಕೆ; ಬಲಹೀನವಾಗುವಿಕೆ.

—ತರು ಎಳೆದುಕೊಂಡು ಬಾ; ಬಲವಂತದಿಂದ ಕರೆದು ತಾ.

ಎಳೆಕುಳಿ ಆಕರ್ಷಣ.

ಎಳೆತಳಲು ಚಿಗುರು, ಚಿಗುರೆಲೆ ತಳೆ.

ಎಳೆದೇರ (ಇಳೆದೇರ) ಭೂಮಿಯೇ ರಥವಾಗಿ ಉಳ್ಳವ; ಶಿವ.

ಎಳೆವರೆಯ ಸಣ್ಣ ಪ್ರಾಯ, ಚಿಕ್ಕತನ.

ಎಳ್ತ್ತರ ಎತ್ತರ, ಆಡಂಬರ.

ಎಳ್ತರು ಸಮೀಪಿಸು.

ಎಳ್ಳು ತಿಲ.

ಎಳ್ಳುನೀರು ತಿಲಾಂಜಲಿ, ಮೃತರಿಗಾಗಿ ಮಾಡುವ ಒಂದು ವಿಧಿ.

ಎಳ್ಬು ಎಬ್ಬು, ಅಟ್ಟು.

—ಅಟ್ಟು ಹಿಂದಟ್ಟು; ಹಿಂಬಾಲಿಸು; ಹೊಡೆದೋಡಿಸು, ಅಟ್ಟಿಕೊಂಡು ಹೋಗು.

—ಇಸು ಎಬ್ಬಿಸು, ಬಿಡು; ಆಸೆ ಬಿಡು, ಸತ್ತಿತೆಂದು ತಿಳಿ.

ಎಂಕಲು ರೆಂಬೆ, ಗೆಲ್ಲು, ಕೊಂಬೆ.

ಎಂಜಲು ಉಗುಳು; ಉಚ್ಛಿಷ್ಟ; ಬಾಯಿಂದ ಉಗುಳಿದುದು; ತಂಬುಲ.

ಎಂಟಡಿ ಎಂಟು ಪಾದವುಳ್ಳ ಪ್ರಾಣಿ; ಅಷ್ಟಪದಿ; ಸಿಂಹದ ಶತ್ರುವಾದ ಶರಭ; ಏಡಿ.

ಎಂಟು ಸೊಕ್ಕು; ಎಂಟೆಂಬ ಸಂಖ್ಯೆ.

ಎಂತು ಹೇಗೆ.

—ಟು ಹೇಗೆ; ಯಾವ ರೀತಿಯಲ್ಲಿ.

ಎಂತೋ ಹೇಗೆಯೋ.

ಎಂದ ಹೇಳಿದ, ಅಂದ; ಯಾವಾಗ.

ಎಂಬುಕೆಯ್ ಒಪ್ಪು; ಸಮ್ಮತಿಸು.

## ಏ

ಏ ಏನು, ಯಾವ? ಸಂಬೋಧನೆಯ ಮಾತು.

ಏಕ ಒಂದು; ಮುಖ್ಯ; ಸಮಾನ; ಅಲ್ಪ; ಸ್ವಲ್ಪ.

—ಕ ಒಂದೇ ಆದ, ಅನ್ಯರ ಸಹಾಯವಿಲ್ಲದ.

—ತೆ ಒಂದಾಗಿರುವಿಕೆ.

—ತ್ರ ಒಂದು ಕಡೆ ಸೇರಿದ.

—ಸ್ಥ ಒಟ್ಟಾಗಿರುವ, ಒಂಟಿಯಾಗಿರುವ.

ಏಕಕಾಲ ಒಂದೇ ಕಾಲ, ಒಂದೇ ಸಮಯ.

ಏಕಕುಂಡಲ ಒಂದೇ ಕುಂಡಲವುಳ್ಳವ; ಬಲರಾಮ.

ಏಕಚಕ್ರ ಒಂದು ಚಕ್ರವುಳ್ಳುದು; ಸೂರ್ಯನ ರಥ; ದನುಪುತ್ರನಾದ ಒಬ್ಬ ರಾಕ್ಷಸ; ಬಕಾಸುರನಿಂದ ಆವರಿಸಲ್ಪಟ್ಟಿದ್ದ ಒಂದು ಪಟ್ಟಣ. ಅರಗಿನ ಮನೆಯಿಂದ ಪಾರಾದ ಪಾಂಡವರು ಇಲ್ಲಿ ಕೆಲಕಾಲ ವಾಸವಾಗಿದ್ದರು.

ಏಕಚಕ್ರಾಧಿಪತಿ ಸಾಮ್ರಾಟ, ಚಕ್ರವರ್ತಿ.

ಏಕಚ್ಛತ್ರ(ಛತ್ರ = ಆಡಳಿತೆಗೆ ಸೇರಿದ ರಾಜ್ಯ) ಒಬ್ಬ ಅರಸನ ಕೆಳಗಿರುವ ವಿಶಾಲ ರಾಜ್ಯ.

ಏಕಜಾತಿ ಒಮ್ಮೆ ಹುಟ್ಟಿದವ, ಶೂದ್ರ; ಒಂದೇ ಸಮನಾಗುವುದು.

ಏಕತಾನ ಒಂದೇ ರಾಗ; ಹೇಳಿದ್ದನ್ನೇ ಹೇಳುವಿಕೆ.

ಏಕತಾಲ ನಾಲ್ಕು ಮಾತ್ರೆಗಳ ತಾಲಕ್ಕೆ ಬೀಳುವ ಒಂದು ಪೆಟ್ಟು.

ಏಕದಂತ ಕುಮಾರ ಸ್ವಾಮಿಯಿಂದ ಇನ್ನೊಂದು ಹಲ್ಲು ಅಪಹೃತನಾದವ, ಗಣಪತಿ.

ಏಕದಾ ಒಮ್ಮೆ, ಒಮ್ಮೆಲೆ, ಕೂಡಲೆ.

ಏಕದೇಶಿ ಸ್ವಲ್ಪ ಭಾಗ.
ಏಕಪತಿಕ ಒಂದೇ ಗಂಡನುಳ್ಳ.
ಏಕಪತ್ನೀವ್ರತ ಒಬ್ಬ ಹೆಂಡತಿಯುಳ್ಳವ; ತನ್ನ ಹೆಂಡತಿಯಲ್ಲದೆ ಅನ್ಯ ಸ್ತ್ರೀಯಲ್ಲಿ ಸ್ನೇಹ ಬೆಳಸದವ.
ಏಕಪಾಠಿ ಒಂದು ಬಾರಿ ಕೇಳಿದುದನ್ನು ತಿರುಗಿ ಹೇಳಬಲ್ಲವ.
ಏಕಪಿಂಗಳ (ಪಿಂಗಳ=ಹಳದಿ) ಉಮೆಯ ಶಾಪದಿಂದ ಹಳದಿ ದೃಷ್ಟಿಯುಳ್ಳವನಾದ ಕುಬೇರ.
ಏಕಮತ (ಐಕಮತ್ಯ) ಒಂದು ಮನಸ್ಸು.
ಏಕಮಾತ್ರ ಒಂದೇ ಒಂದಾದ, ಎರಡಿಲ್ಲದ.
ಏಕಲಿಂಗದೇವ ಕುಬೇರ.
ಏಕಾಏಕಿ ಒಮ್ಮಿಂದೊಮ್ಮೆ.
ಏಕಾಕಿ ಒಬ್ಬಂಟಿಗ.
ಏಕಾಗ್ರ ಒಂದು ಕಡೆಗೇನೆ ಗುರಿ ಇರಿಸಿದ; ಮೊನೆಯಿರುವ.
—ಚಿತ್ತ ಒಂದೇ ಧ್ಯಾನವುಳ್ಳವ, ಒಂದೇ ಮನಸ್ಸು.
ಏಕಾದಶಿ ಪಕ್ಷದಲ್ಲಿ ೧೧ನೆಯ ದಿನ, ಹರಿವಾಸರ.
ಏಕಾನ್ನ ದಿನಕ್ಕೆ ಒಮ್ಮೆ ಮಾತ್ರ ಉಣ್ಣುವ.
ಏಕಾಯನ (ಅಯನ=ವಿಷಯವುಳ್ಳುದು) ಅನ್ಯ ವಿಷಯಗಳಿಗೆ ಮನಕೊಡದೆ ಒಂದೇ ಕಡೆಗೆ ಮನಸ್ಸಿಡುವಿಕೆ; ಏಕಾಗ್ರ ಮನಸ್ಸು.
ಏಕಾವಳಿ (ಆವಲಿ=ಮಣಿಗಳ ಸಾಲು) ಒಂದೆಳೆಯ ಮುತ್ತಿನ ಸರ, ಎಕ್ಕಸರ; ಅರ್ಥಾಲಂಕಾರಗಳಲ್ಲಿ ಒಂದು ಭೇದ.
ಏಕಾಂಕ ಒಂದೇ ಅಂಕವುಳ್ಳ.
ಏಕಾಂತ ಗುಟ್ಟು, ರಹಸ್ಯ, ಒಂದೇ ನಿಶ್ಚಯವುಳ್ಳ; ಬಹಳ.
ಏಕೀನಿ ನಂಬಿಗೆಗೆ ಅರ್ಹನು, ಪ್ರಾಮಾಣಿಕ.
ಏಕು (ಏಗು) ಬಿಕ್ಕಳಿಕೆ ತರು.
ಏಕೋಕ್ತಿ ಒಂದೇ ನುಡಿ.
ಏಕೋದ್ದೇಶ ಒಂದೇ ಗುರಿ.
ಏಗಳ್ ಯಾವಾಗಲೂ.
ಏಗು ಬೇಯು.
ಏಗುವವು ಏನು ಗೆಯ್ಯುವುವು.
ಏಗೊಳ್ ಒಪ್ಪು.
ಏಟು ಪೆಟ್ಟು, ಬಡಿತ; ಎಷ್ಟು.
ಏಡ ಕುರಿ; ಹೆಡ್ಡ.
—ಕ ಒಂದು ಜಾತಿಯ ಟಗರು.
ಏಡಮೂಡ ಕಿವುಡ; ಮೂಕ.
ಏಡಿ ನೀರಲ್ಲಿ ವಾಸಮಾಡುವ ಒಂದು ಜೀವಿ; ಎಸಡಿ, ನಳ್ಳಿ.
ಏಡಿಸು (ಏಳಿಸು) ಹಾಸ್ಯಮಾಡು, ಅಣಕಿಸು.
ಏಣ ಕರಿಬಣ್ಣದ ಜಿಂಕೆ, ಕೃಷ್ಣಮೃಗ.
—ಅಜಿನ (ಅಜಿನ=ಚರ್ಮ) ಜಿಂಕೆಯ ಚರ್ಮ.
ಏಣಧರ ಜಿಂಕೆಯ ಗುರುತು ಧರಿಸಿದ, ಚಂದ್ರ.
ಏಣರಿಪು (ಜಿಂಕೆಯ ಹಗೆ) ಸಿಂಹ.
ಏಣವಾಹನ ವಾಯು.
ಏಣಾಕ್ಷಿ ಜಿಂಕೆಯ ಕಣ್ಣಿಂತೆ ಕಣ್ಣುಳ್ಳವಳು, ಹರಿಣಾಕ್ಷಿ; ಸುಂದರಿ.
ಏಣಾಂಕ ಚಂದ್ರ.
ಏಣಿ ನಿಚ್ಚಣಿಕೆ; ಹೆಣ್ಣು ಜಿಂಕೆ, ಹರಿಣಿ.
ಏಣು ಅಂಚು, ಬದಿ; ಅಲಗು.
ಏಣೆವಾರ ಸಮಾನ, ಎಣೆಗಾರ.
ಏತ ಯಾತ, ನೀರೆತ್ತುವ ಸಾಧನ.
—ಕೆ ಯಾತಕ್ಕೆ, ಏತಕ್ಕೆ.
ಏತತ್ ಅದು, ಇದು.
ಏದು ಕಷ್ಟದಿಂದ ಉಸಿರುಬಿಡು, ಏಕು, ಮೇಲಿಂದ ಮೇಲೆ ಉಸಿರುಬಿಡು; ಮುಳ್ಳು ಹಂದಿ.
ಏದೊರೆ ಏನು ಶ್ರೇಷ್ಠ; ಎಂಥದು; ಏನು ಸಮಾನ.

ಏನ್ ಏನು
ಏನಃ ಏನಸ್ (ಸಂ), ಪಾಪ.
ಏಪಚ್ಚಂ ಏನುಭೂಷಣ.
ಏಬಂಡ ಯಾವ ಹಣ.
ಏಬಾಳ್ತೆ (ಏವಾಳ್ತೆ), ಏನು ಪ್ರಯೋಜನ; ಯಾವ ಸಂಪತ್ತು.
ಏರ್ ಏರು; ಗಾಯ, ಪೆಟ್ಟು.
—ಆಟ ಹತ್ತಿ ಸವಾರಿಮಾಡುವುದು, ಏರಿಕೆ, ಸವಾರಿ.
—ಆಳು ಕುದುರೆ ಏರುವುದರಲ್ಲಿ ನಿಪುಣ.
—ಇಕೆ ಹತ್ತುವಿಕೆ, ಏರುವಿಕೆ; ಸವಾರಿ.
—ಇಸು ಹತ್ತಿಸು, ಮೇಲೆ ಮೇಲೆ ಹೊರಿಸು.
ಏರಕಾ (ಸಂ) ಆಮಗರಿ, ಗಂಟಿಲ್ಲದ ಒಂದು ಜಾತಿಯ ಹುಲ್ಲು, ಧಾರೆಹುಲ್ಲು, ದೋರೆ ಹುಲ್ಲು.
ಏರಲಿಕ್ಕು ಪೀಠವನ್ನು ಕೊಡು.
ಏರಂಡ ಔಡಲು, ಹರಳು ಗಿಡ.
ಏರಿ ಕಟ್ಟೆ; ಮಣ್ಣಿನ ಸಾಲು, ದಂಡೆ.
ಏರಿಳಿತ ಅಲೆಗಳ ಉಬ್ಬರ–ಇಳಿತ, ಏರು ತಗ್ಗು; ಉನ್ನತಿ, ಅವನತಿ.
ಏರುಂಜವ್ವನ ಪ್ರೌಢ ವಯಸ್ಸು.
ಏರುಂಮನಂ ಕೊಬ್ಬುತ್ತಿರುವ ಮನಸ್ಸು.
ಏರೆದೆಗೆ ಎತ್ತರವಿಲ್ಲದಿರು, ತಗ್ಗಾಗಿರು.
ಏರ್ದೆ ಉಬ್ಬಿದ ಎದೆ; ಹುಣ್ಣಾದ ಎದೆ.
ಏರ್ಪಡು ಸಿದ್ಧವಾಗು; ವ್ಯವಸ್ಥೆಗೊಳು; ಗಾಯಗೊಳ್ಳು.
ಏರ್ಪಾಡು ವ್ಯವಸ್ಥೆ, ತಯಾರಿ.
ಏರ್ವಸೆ ಗಾಯಪಡು.
ಏರ್ವೆಸ (ಏರ್+ಬೆಸ) ಯುದ್ಧದ ಕೆಲಸ.
ಏಲಕ್ಕಿಯಾಲಕ್ಕಿ, ಸುಗಂಧ ಕೊಡುವ ಒಂದು ಕಾಳು.
ಏಲಂ ಹರಾಜು; ಲಿಲಾವು.
ಏವ ಸಂಕಟ, ವ್ಯಥೆ; ತಿರಸ್ಕಾರ; ಜುಗುಪ್ಸೆ; ಯಾವನು.
—ಇಸು (ಪವಯಿಸು) ಕೊರಗು.
ಏವಂಚ ಹೇಗಾದರೂ.
ಏವಾಳ್ತೆ (ನೋಡು: ಏ ಬಾಳ್ತೆ).
ಏವುದು ಯಾವುದು; ಏನು ಮಾಡುವುದು; ಏನು ಫಲ; ಎಲ್ಲಿಯದು.
ಏವೆಂ (ಏವೆನ್) ಏನುಮಾಡಲಿ, ಏನಗೈವೆನು.
ಏವೇಳ್ವೆಂ ಏನು ಹೇಳಲಿ.
ಏಷಣ ಇಚ್ಛೆ (ಪುತ್ರ, ವಿತ್ತ, ಸ್ತ್ರೀ ಮೊದಲಾದುವುಗಳಿಗಾಗಿ ಬಯಕೆ); ಕಬ್ಬಿಣದ ಬಾಣ.
ಏಸರ ಎಷ್ಟರ.
ಏಸಾಡು ಬಾಣ ಎಸೆ.
ಏಸು ಎಷ್ಟು.
ಏಳ್ (ಏಳು), ಎಳ್ತರ; ಆಡಂಬರ.
—ಗೆ ಅಭಿವೃದ್ಧಿ.
ಏಳಿಗೆ(ಏಳ್ಗೆ) ಅಭಿವೃದ್ಧಿ, ಉನ್ನತಿ, ಮೇಲ್ತನ.
ಏಳಿದ ಕೊರಚಾಟ; ತಿರಸ್ಕಾರ; ನಿಕೃಷ್ಟ, ಕೀಳು.
—ಇಕೆ ಏಳಿದಿಕೆ, ನೀಚತೆ; ತಿರಸ್ಕಾರ.
ಏಳು ಎದ್ದು ನಿಲ್ಲು; ಸಂಖ್ಯೆ; ಸ್ಥಾನ ಬಿಡು; ನಿಂದಿಸು.
—ಇಸು ಎಬ್ಬಿಸು; ಹೊರಡಿಸು; ಸ್ಥಾನ ಚ್ಯುತಿಮಾಡು, ಹಾಸ್ಯಮಾಡು, ನಿಂದಿಸು; ತಿರಸ್ಕರಿಸು.
ಏಳ್ನೆವಾಡಿವ (ಪಾಡಿವ=ಪಾಡ್ಯ) ಶುಧ್ಧ ಪಾಡ್ಯಮಿ; ಶುಕ್ಲಪಕ್ಷದ ಪಾಡ್ಯ; ವೃದ್ಧಿ ಗೊಳ್ಳುತ್ತಿರುವ ಪಾಡ್ಯ.
ಏಳ್ವರು ಏಳು ಜನರು.
ಏಂಬಡಿ ಏನನ್ನು ಪ್ರತಿಯಾಗಿ.

# ಐ

ಐಕಮತ್ಯ ಒಮ್ಮನಸ್ಸು, ಒಗ್ಗಟ್ಟು, ಒಂದೇ ವಿಧದ ಅಭಿಪ್ರಾಯ.

ಐಕಾಗಾರಿಕ (ಆಗಾರಿಕ=ಮನೆಯಿಂದ ಲಾಭ ಹೊಂದುವವ) ಜನರಿಲ್ಲದ ಮನೆಯಿಂದ ಲಾಭಹೊಂದುವವ, ಕಳ್ಳ, ಚೋರ.

ಐಕಾಗ್ರ್ಯ (ಏಕಾಗ್ರ) ಒಂದೇ ಗುರಿಯುಳ್ಳ; ಒಂದೇ ಮನಸ್ಸಿನ.

ಐಕಾತ್ಮ್ಯ (ಆತ್ಮ್ಯ=ಸ್ವರೂಪವೆಂಬ ಹೆಸರಿಗೆ ಕಾರಣವಾದ ಗುಣ) ಒಂದೇ ಸ್ವರೂಪವುಳ್ಳುದು, ಎರಡನೆಯದು ಇಲ್ಲದ್ದು.

ಐಕಾಂತಿಕ ಏಕಾಂತ ಸಂಬಂಧವಾದ; ವ್ಯಭಿಚಾರಿಯಲ್ಲದವ; ಬಲವಾದ.

ಐಕಿಲ್ ಹಿಮ, ಮಂಜುಗಡ್ಡೆ; ಚಳಿ.

ಐಕ್ಯ ಒಂದೇತನ, ಒಮ್ಮನಸ್ಸು; ಅಭೇದ; ಸೇರಿಕೆ; ಏಕರೂಪತೆ.

—ಆಗು ಸೇರಿರು, ಸೇರು; ಒಂದಾಗು; ತೀರಿಕೊಳ್ಳು.

—ಭಾವ ಒಂದಾಗಿರುವ ಸ್ಥಿತಿ.

ಐಕ್ಷವ (ಇಕ್ಷು=ಕಬ್ಬು) ಕಬ್ಬಿಂದಾದ ಒಡವೆ; ಬೆಲ್ಲ; ಸಕ್ಕರೆ.

ಐಕ್ಷ್ವಾಕ ಇಕ್ಷ್ವಾಕು ಅರಸನ ಸಂತತಿಯ.

ಐಗಳ (ಐ=ಐದು+ಗಳ=ಕುತ್ತಿಗೆ) ಐದು ಕುತ್ತಿಗೆಯುಳ್ಳವ, ಶಿವ; ಐದು ಕೊಳಗ.

ಐಗಳು ಅಯ್ಯಗಳು, ಉಪಾಧ್ಯಾಯ, ಗುರು.

ಐಚ್ಛಕ(ಐಚ್ಛಿಕ)(ಇಚ್ಛೆ=ಇಷ್ಟ), ಇಷ್ಟಗೊಂಡ.

ಐಣ ಏಣಕ್ಕೆ (ಜಿಂಕೆಗೆ) ಸಂಬಂಧಿಸಿದ.

ಐತರು ಬರು, ಬಾ.

ಐತರೇಯ ಈ ಹೆಸರಿನ 'ಬ್ರಾಹ್ಮಣ' ಗ್ರಂಥ, ಅರಣ್ಯಕ, ಉಪನಿಷತ್ತುಗಳ ಭಾಗಗಳು.

ಐತಿಹ್ಯ ಇತಿಹಾಸಕ್ಕೆ ಸಂಬಂಧಿಸಿದ; ಚರಿತ್ರೆ.

ಐದನೆ ಐದು ಸಂಖ್ಯೆಯ; ಇದ್ದಾನೆ.

ಐದು ಅಯ್ದು; ಹೋಗು; ಬರು; ಸಂಖ್ಯೆ.

ಐದೆ ಸುಮಂಗಲೆ.

—ತಾಳಿ ಸುಮಂಗಲೆಯ ಕೊರಲ ತಾಳಿ.

ಐನೀರು ಐದನೆ ದಿನ ಎರೆದುಕೊಳ್ಳುವ ನೀರು; ಮುಟ್ಟಾದವಳು ಮಾಡುವ ಸ್ನಾನ.

ಐಬು ಊನ, ಕೊರತೆ.

ಐರಣ (ಈರಣ=ಚೌಳು ಭೂಮಿ) ಸೌಳುಪ್ಪು, ಸೈಂಧಲವಣ.

ಐರದಾಳಿ ವಿವಾಹಕಾಲದಲ್ಲಿ ವರನು ವಧುವಿಗೊಪ್ಪಿಸುವ ಸರ; ಕರಿಮಣಿ ಸರ.

ಐರಾವತ (ಇರಾವಾನ=ಕಡಲು) ಕಡಲಿನಲ್ಲಿ ಜನಿಸಿದುದು; ಇಂದ್ರನ ಆನೆ; ಪೂರ್ವ ದಿಕ್ಕಿನ ಗಜ.

ಐರಾವತಿ ಇಂದ್ರನ ಹೆಣ್ಣಾನೆ; ಮಿಂಚು; ಮುಗಿಲು.

ಐರೀಯ (ಇರಾ=ಅನ್ನ) ಇರೆಯಲ್ಲಿ ಹುಟ್ಟಿದುದು; ಮದ್ಯ, ಸಾರಾಯಿ.

ಐಲ ಇಳೆಯೆಂಬವಳಲ್ಲಿ ಬುಧನಿಂದ ಹುಟ್ಟಿದ ಮಗ; ಚಂದ್ರವಂಶದ ಪ್ರಾಚೀನ ದೊರೆ ಪುರೂರವ.

ಐಲವಲ ವಿಶ್ರವಸು ಮುನಿಗೆ ಇಲವಿಲ ಎಂಬ ಮಡದಿಯಲ್ಲಿ ಜನಿಸಿದ ಮಗ; ಕುಬೇರ.

ಐವಜು ಆಸ್ತಿ; ಸಂಪತ್ತು, ನಗದು ಹಣ.

ಐಶಾನೀ (ಈಶಾನ=ಉತ್ತರ, ಪೂರ್ವಗಳ ನಡುವಣ ದಿಕ್ಕು) ಶಿವನೇ ದೇವತೆಯಾಗಿ ಉಳ್ಳ, ಬಡಗು ಮೂಡಣದ ನಡುವಿನ ದಿಕ್ಕು.

ಐಶ್ವರ್ಯ (ಸಂ) ಐಸಿರಿ (ದ್ಭ), ಈಶ್ವರನೆಂಬ ಹೆಸರಿಗೆ ಕಾರಣವಾದ ಗುಣ; ಸಂಪತ್ತು; ಅಣಿಮಾ, ಮಹಿಮಾ, ಲಘಿಮಾ, ಗರಿಮಾ,

ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು ವಿಧವಾದ ಸಂಪತ್ತು.

ಐಸರ (ಸರ=ಬಾಣ) ಐದು ಬಾಣ ಉಳ್ಳವನು; ಪಂಚಬಾಣ, ಮನ್ಮಥ; (ಅರವಿಂದ ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಈ ಐದು ಹೂಗಳೇ ಮನ್ಮಥನ ಐದು ಬಾಣಗಳು); ಐದೆಳೆಯ ಸರ.

ಐಸಲೆ ಅಷ್ಟೇ ಅಲ್ಲವೆ, ಅಷ್ಟೇ.

ಐಸಿರಿ (ದ್ಭ) ಐಶ್ವರ್ಯ, ಸಂಪತ್ತು.

ಐಸೆ ಅಷ್ಟೆ, ಅಲ್ಲವೆ.

ಐಹಿಕ ಈ ಲೋಕದ, ಇಳೆಗೆ ಸಂಬಂಧಿಸಿದ; ಮಾಲೆ, ಚಂದನ ಮೊದಲಾದ ಸುಖಾನುಭವ; ಈ ಲೋಕ.

ಐಂದವ (ಇಂದು=ಚಂದ್ರ) ಚಂದ್ರನಿಗೆ ಸಂಬಂಧಿಸಿದ, ಚಂದ್ರನೇ ದೇವತೆಯಾಗಿರುವ ಮೃಗಶಿರಾ ನಕ್ಷತ್ರ.

ಐಂದಾ ಹಿಂದಿನಿಂದ.

ಐಂದ್ರ ಇಂದ್ರನಿಗೆ ಸೇರಿದ; ಇಂದ್ರನೇ ದೇವತೆಯಾಗಿರುವ; ಜ್ಯೇಷ್ಠಾ ನಕ್ಷತ್ರ.

ಐಂದ್ರಜಾಲ ಮಾಯೆ; ಕಣ್ಣುಕಟ್ಟು ವಿದ್ಯೆ.
— ಇಕ ಮಾಯಗಾರ, ಜಾದುಗಾರ.

ಐಂದ್ರಸರ ಇಂದ್ರನೇ ದೇವತೆಯಾಗಿರುವ ಬಾಣ, ಇಂದ್ರಶರ.

ಐಂದ್ರಿ ಇಂದ್ರನ ಮಗ, ಜಯಂತ; ವಾಲಿ; ಅರ್ಜುನ; ಕಾಗೆ; ಪೂರ್ವದಿಕ್ಕು.

ಐಂದ್ರೀತನೂದರಿ ಪೂರ್ವ ದಿಕ್ಕೆಂಬ ಸ್ತ್ರೀ.

## ಒ

ಒಕ್ಕ ಹೊರಬಿದ್ದ; ಹಾಕಿದ; ಚೆಲ್ಲಿದ; ಬಡಿದು ಒಗೆದ; ಸುರಿದ.

ಒಕ್ಕಣೆ ಹೇಳಿಕೆ, ಮಾತಿನ ರಚನೆ.
— ಇಸು ಹೇಳು, ವಿವರಿಸು.

ಒಕ್ಕಣ್ಣ ಒಂದು ಕಣ್ಣಿನವ.

ಒಕ್ಕರ ಒಂದು ಪಕ್ಕ.

ಒಕ್ಕರಣೆ (ಹೊಕ್ಕರಣೆ), ಪುಷ್ಕರಿಣಿ (ಸಂ), ಕೊಳ, ಕೆರೆ.

ಒಕ್ಕರಿಸು (ಓಕರಿಸು), ಒಗಡಿಸು, ಕಾರು, ವಾಂತಿಮಾಡು.

ಒಕ್ಕಲು ನಿವಾಸಿ, ಮನೆಯೊಳಗಿರುವವ; ರೈತ; ಭಕ್ತ.

ಒಕ್ಕವಿಕ್ಕು ಕೆಡಿಸು, ನಾಶಮಾಡು; ಕೊಲ್ಲು.

ಒಕ್ಕಂದಿ ವರುಷಕ್ಕೊಮ್ಮೆ ಕರುಹಾಕುವ ದನ.

ಒಕ್ಕಾಲು ಒಂದೇ ಕಾಲು.

ಒಕ್ಕು ಚೆಲ್ಲು; ಹಂಚು; ಕೆಡಿಸು; ಈಡಾಡು; ನಾಶಮಾಡು; ಬತ್ತದ ಹುಲ್ಲನ್ನು ತುಳಿದು ಕಾಳನ್ನು ಬೇರೆಮಾಡು.

ಒಗಟು ಒಗಟೆ, ಸಮಸ್ಯೆ, ಒಡಪು.

ಒಗಡು ವಾಂತಿ, ಓಕರಿಕೆ.
— ಇಕೆ ವಾಂತಿಮಾಡುವಿಕೆ, ಓಕರಿಕೆ.

ಒಗತನ (ಒಗೆತನ) ಗಂಡಹೆಂಡರು ಕೂಡಿರುವ ಸಂಸಾರ.

ಒಗನಿ ಉಗುಣಿ; ಹುಳಿ ಹುಟ್ಟುವ ಮುಂಚಿರುವ ಎಳಪು ರುಚಿ.

ಒಗರೆ ಸಮತೆ, ಎಣೆ.

ಒಗರು ಸವುಳು ರುಚಿ; ಕನರು.

ಒಗಸುಗಂ ಅತಿಶಯ; ಆಶ್ಚರ್ಯ; ಬುದ್ಧಿಶಾಲಿ.

ಒಗು ಉಗು; ಸುರಿ; ದ್ರವಿಸು; ಕೆಳಗಿಳಿಸು; ಚೆಲ್ಲು, ಹೊರಸೂಸು.
— ಮಿಗೆ ಆಧಿಕ್ಯ, ಹೆಚ್ಚಳ, ಬಹಳ.

ಒಗೆ ಹುಟ್ಟು, ಉಂಟಾಗು; ಬಟ್ಟೆಯನ್ನು ತೊಳೆ; ನೀರಿಗೆ ಎಸೆ; ಹೊರಡು.
— ತರ್ ಹುಟ್ಟು.

ಒಗ್ಗಟ್ಟು (ಒಕ್ಕಟ್ಟು), ಐಕ್ಯ, ಒಂದು ಕಟ್ಟು.

ಒಗ್ಗರಣೆ ಮೇಲೋಗರದ ಪರಿಮಳ ಹೆಚ್ಚಲು ಸಾಸಿವೆ, ಹಿಂಗು, ಮೆಣಸು ಮೊದಲಾದು ವನ್ನು ಎಣ್ಣೆ ತುಪ್ಪಗಳಲ್ಲಿ ಕರಿದು ಹಾಕು ವುದು.

— ಹಾಕು ಮೇಲ್ಮಾತು, ಇತರ ಮಾತಿಗೆ ತಮ್ಮ ಮಾತು ಸೇರಿಸಿ ಕೊಡುವ ಪುಟ.

ಒಗ್ಗು ಒಂದಾಗು, ಜತೆಸೇರು, ಮೊತ್ತವಾಗಿ ನಿಲ್ಲು, ಹೊಂದಿಕೆಯಾಗು; ಸಮೂಹ, ಗೊಂದಣ, ಗುಂಪು; ಒಪ್ಪು.

ಒಗ್ಗೊಡೆ ಗುಂಪು ಚೆದರು, ಹಿಂಡು ತಪ್ಪು.

ಒಚ್ಚ ಅಚ್ಚುಗಟ್ಟಾದ; ಪ್ರಸಿದ್ಧವಾದ.

ಒಚ್ಚತ ಹಿತವಾಗುವಂತೆ, ಸಮನಾಗಿ, ಒಳಿ ತಾಗಿ; ಉಚಿತ, ಮನೋಹರ, ಅಚ್ಚುಗಟ್ಟು.

— ಕೊಳ್ ಒಟ್ಟಗೆ ಸ್ವೀಕರಿಸು.

ಒಚ್ಚು ಕಿತ್ತುಹೋಗು; ಕಿತ್ತುಬರು; ರೆಂಬೆ ಕಳಚು.

ಒಚ್ಚೇರೆಗಣ್ ಅಗಲವಾದ ಕಣ್ಣು, ದೊಡ್ಡ ಕಣ್ಣು.

ಒಟ್ಟಜೆ ಶೌರ್ಯೋದ್ರೇಕ; ಗುಂಪು, ರಾಶಿ; ಶ್ರೇಣಿ, ಸಾಲು; ಅತಿಶಯ; ಒಟ್ಟಲು.

— ಕೆಟ್ಟು ಗೌರವ ಕೆಡಿಸಿಕೊಂಡು; ಶಕ್ತಿ ಗುಂದಿ; ಚದರಿಹೋಗಿ.

ಒಟ್ಟೈಯಿಸು (ಒಟ್ಟವಿಸು) ಗುಂಪುಕೂಡಿಸು, ಒಟ್ಟುಸೇರು; ಸ್ಪರ್ಧಿಸು; ಹುರುಡಿಸು; ನೂಕು, ತಳ್ಳು.

ಒಟ್ಟೆ ಮೂರ್ಖಳಾದ ಸ್ತ್ರೀ; ಒಡ್ಡಿ, ಚಾಚಿ.

ಒಟ್ಟಲ್ ರಾಶಿ.

ಒಟ್ಟು ರಾಶಿಹಾಕು, ಸುರಿಯು; ಒಡ್ಡು; ಬೆಂಕಿ ಉರಿಸು.

— ಒಟ್ಟು ಜತೆಜತೆಯಾಗಿ; ಗುಂಪು ಗುಂಪಾಗಿ.

— ಕಿಚ್ಚು ದೊಡ್ಡ ಬೆಂಕಿ; ನಾವಾಗಿ ಹಾಕಿದ ಬೆಂಕಿ.

ಒಟ್ಟೆ (ದ್ಭ) ಒಂಟೆ, ಉಷ್ಟ್ರ (ಸಂ).

ಒಡಕು ಒಡೆದುದು, ಬಿರುಕಲು; ಭಿನ್ನಭಾವ.

ಒಡಗವಿಸು ಒಟ್ಟುಕೂಡಿಸು, ಒಡಗೂಡಿಸು; ನೆರವೇರಿಸು; ಒಟ್ಟಗೆ ಮುತ್ತುವಂತೆ ಮಾಡು.

ಒಡಗೂಡು ನೆರವೇರು; ಸಾಧ್ಯವಾಗು. ಜತೆಯಾಗು.

ಒಡಗೊಡು ಒಗೆದುಬಿಡು, ಬಿಸಾಡು.

ಒಡಗೊಳು ಜತೆಗೆ ಕರೆದುಕೊ.

ಒಡನಾಟ ಎಣೆ; ಗೆಳೆತನ; ಸ್ನೇಹದಿಂದ ಆಟ.

ಒಡನಾಡು ಗೆಳೆತನ ಬೆರಸು; ಸ್ನೇಹವಾ ಗಿರು; ಸೇರು.

ಒಡನೆ ಕೂಡಲೆ, ಸಂಗಡಲೆ.

— ಒಡನೆ ಕೂಡಲೆ; ಜತೆಜತೆಗೆ, ಒಟ್ಟೊ ಟ್ಟಗೆ.

ಒಡಬಡಿ ಮುರಿ.

ಒಡಬಡು(ಒಡಂಬಡು) ಒಪ್ಪು, ತೃಪ್ತಿಗೊಳ್ಳು.

— ಇಕೆ ಒಪ್ಪಂದ, ಕವಲು, ಸಂಧಾನ.

ಒಡಮೆ ಒಡವೆ, ವಸ್ತು, ಸಂಪತ್ತು.

ಒಡರ್ (ಒಡರು) ತಗಲು, ಹತ್ತು; ಒಪ್ಪು; ಕೂಡು; ತೊಡರು.

— ಇಚು (ಇಸು) ರಚಿಸು, ಮಾಡು, ಪ್ರಯತ್ನಿಸು; ಸೇರಿಸು; ತೊಡಗು.

— ಚು ಉಂಟುಮಾಡು, ಪ್ರಯತ್ನಿಸು, ಉದ್ಯೋಗಿಸು, ತೊಡಗು.

— ಪು ಉಂಟಾಗು, ಹುಟ್ಟು; ಬರು.

ಒಡಲ್ ಒಡಲು, ಮೈ, ಶರೀರ; ಹೃದಯ; ಮುಖ್ಯ ಭಾಗ; ಹೊಟ್ಟೆ.

ಒಡಲಿಚ (ಇಚ=ಹುಟ್ಟದ) ಕಾಮ.

ಒಡಲುರಿ ಸಂತಾಪ, ದುಃಖ; ಹೊಟ್ಟೆಯುರಿ.

ಒಡವೆ ಒಡಮೆ, ವಸ್ತು; ಅಲಂಕಾರ, ಆಭ ರಣ; ಸಂಪತ್ತು.

ಒಡವೆರಸು ಬೆರಸು, ಜತೆಗೆ ಸೇರು, ಕೂಡು.
ಒಡವೆರೆ ಜತೆಯಾಗು, ಒಟ್ಟಿಗೆ ಸೇರು.
ಒಡವೆಳೆ (ಒಡಬೆಳೆ) ಒಟ್ಟಿಗೆ ಬೆಳೆ, ಸಂಗಡ ಬೆಳೆ; ಒಡನೆ ಬೆರೆ.
ಒಡಸೀಳು ಚೂರುಮಾಡು, ರಭಸದಿಂದ ಸಿಗಿ.
ಒಡಹಾಯ್ ಒಡೆಯುವ ಹಾಗೆ ರಭಸ ದಿಂದ ದಾಟು, ದಾಟು.
ಒಡಹುಟ್ಟು ಸಂಗಡ ಹುಟ್ಟು, ಸೋದರ ತನ, ಸಹಜಾತಕ.
ಒಡೆ ವಿಭಾಗಿಸು, ಚೂರುಮಾಡು; ಒಟ್ಟ(ಸಂ), ಉದ್ದಿನಿಂದ ಮಾಡಿ ಎಣ್ಣೆ ಅಥವಾ ತುಪ್ಪ ದಲ್ಲಿ ಕರಿದ ಒಂದು ಭಕ್ಷ್ಯ.
ಒಡೆಗಲಸು ಮಿಶ್ರವಾಗು, ಸೇರು, ಒಡ ಬೆರಸು.
ಒಡೆತುಳಿ ಒಡೆಯುವಂತೆ ತುಳಿ, ಬೆರಸುವಂತೆ ತುಳಿ; ತಗ್ಗಿಸು; ಹಿಮ್ಮೆಟ್ಟಿಸು.
ಒಡೆಮುರಿ ಹಿಂದಿರುಗು.
ಒಡೆಯ ಯಜಮಾನ, ಸ್ವಾಮಿ, ಅರಸ.
ಒಡ್ಡ ಮುಂದಾಳು; ಒರಟ; ಒಂದು ಜಾತಿ.
ಒಡ್ಡಣ (ಒಡ್ಡಣೆ) ಗುಂಪು; ರಾಶಿ, ಸೈನ್ಯ.
ಒಡ್ಡಯಿಸು ಸೋಲಿಸು; ಅಡ್ಡಗಟ್ಟು, ತಡೆ ಮಾಡು.
ಒಡ್ಡವ ಸೈನ್ಯ; ಜೂಜಿನ ಪಣ; ಕಾವ್ಯದ ಶೈಲಿ; ಕಾವ್ಯ.
ಒಡ್ಡವಣೆ (ನೋಡು: ಒಡ್ಡಣ).
ಒಡ್ಡು ಇದಿರಿಗೆ ಹಿಡಿ; ಕ್ರಮದಿಂದ ನಿಲ್ಲು; ಇದಿರಿಸು; ಡೌಲು; ಗಾಂಭೀರ್ಯ; ವ್ಯೂಹ, ಸೈನ್ಯ.
—ಎರೆ ಸೈನ್ಯವು ಕಾಣಿಸಿಕೊಳ್ಳು.
ಒಡ್ಡುಂಗಲ್ ಬಂಡೆಕಲ್ಲು.
ಒಡ್ಡೈಸು (ನೋಡು: ಒಡ್ಡಯಿಸು).
ಒಡ್ಯಾಣ ಉಡಿಯ ಆಭರಣ, ಡಾಬು, ಮೇಖಲೆ.

ಒಣ ಒಣಗಿದ; ನೀರಸವಾದ.
—ಕಲು ಒಣಗಿದ.
—ಕು ನೀರಾರಿದ, ನೀರಸವಾದ.
—ಗು ನೀರಾರುವಿಕೆ, ಬಿಸಿಲಿನಲ್ಲಿ ನಿರ್ದ್ರವ ವಾಗುವಿಕೆ.
ಒಣರ್ ಭಾವಿಸು, ಎಣಿಸು; ತಿಳಿ.
ಒತ್ತಟೆ ಒತ್ತಡ, ಅಮುಕಾಟ; ಪ್ರತಿಭಟೆ; ಬೆದರಿಕೆ.
ಒತ್ತಟ್ಟು ಒಂದು ಕಡೆ.
ಒತ್ತಡ ಒತ್ತಟ; ಅಮುಕು ಇರುವ.
ಒತ್ತರ ಒತ್ತುವಿಕೆ, ಒತ್ತಡ, ಅಬ್ಬರ; ದಟ್ಟ.
—ಇಸು ಒತ್ತು; ಸಾಂದ್ರವಾಗು; ಒಂದು ಕಡೆಗೆ ಒತ್ತು; ಮಿತಿಮೀರು.
ಒತ್ತಂಬ (ಒತ್ತಂಬರ) ಬಲಾತ್ಕಾರ; ಅವಸರ.
ಒತ್ತಾಟೆ (ನೋಡು: ಒತ್ತಟ).
ಒತ್ತಾಯ ಬಲವಂತ.
ಒತ್ತಾಸೆ ಸಹಾಯ, ಬೆಂಬಲ.
ಒತ್ತಿವಿಡಿ (ಒತ್ತಿಪಿಡಿ) ಅಮುಕಿ ಹಿಡಿ.
ಒತ್ತು ಅಮುಕು, ಬಲಾತ್ಕಾರಿಸು, ತಳ್ಳು; ನೂಕು, ಸಮೀಪ; ದಟ್ಟ; ಆಧಾರ.
—ಇಕೆ ಒತ್ತುವಿಕೆ, ನೂಕಾಟ, ತಳ್ಳು ವಿಕೆ.
—ಇಗೆ ಸಂಗಡ, ಜತೆಗೆ; ಸಮೀಪಕ್ಕೆ.
ಒತ್ತುಕರಡು ಬ್ಲಾಟಿಂಗ್ ಕಾಗದ, ಒತ್ತಿ ಶಾಯಿ ಆರಿಸುವ ಕಾಗದ.
ಒತ್ತೆ ಅಡವು; ಭೋಗಕ್ಕಾಗಿ ಸೂಳೆಗೆ ತೆರುವ ಹಣ; ಪಣ ದ್ರವ್ಯ.
ಒದಗು ಹೆಚ್ಚಳ; ಅನುಕೂಲಿಸು; ಸಿದ್ಧ ವಾಗು; ಪ್ರಯೋಜನಕ್ಕೆ ಬರು; ನೆರ ವಾಗು.
—ಇಸು ಒಟ್ಟುಮಾಡು, ಅನುಕೂಲಿಸು, ಕೂಡಿಸು.
ಒದರು ಶಬ್ದಮಾಡು, ಕೂಗು, ಕರ್ಕಶ

ವಾಗಿ ಕಿರಿಚು; ಕೈತಟ್ಟು; ಚಪ್ಪಾಳೆ ಹಾಕು.
ಒದವು (ಒದಗು) ಉಂಟಾಗು; ಕೈಗೂಡು; ಫಲಕ್ಕೆ ಬರು; ಸಮೃದ್ಧಿಗೊಳ್ಳು.
—ಇದ ಒದಗಿದ, ಸೇರಿದ; ನೆರವಾದ.
ಒದೆ ಪೆಟ್ಟುಕೊಡು, ಕಾಲಿಂದ ತುಳಿ.
—ತ ಪೆಟ್ಟು, ಕಾಲ್ತುಳಿತ.
ಒದ್ದೆ ನೆನೆದ, ತೊಯ್ದ; ವೃಷ್ಟಿ, ಮಳೆ.
ಒನಕೆ ಬತ್ತ ಕುಟ್ಟುವ ಮರದ ದಂಡ.
ಒನಪು ಒಯ್ಯಾರ; ಲಾವಣ್ಯ; ನಯಗಾರಿಕೆ.
ಒನಲ್ (ಒನಲು) ರೇಗು, ಕೋಪಿಸು.
ಒನೆ ಕೇರು, ಮೊರದಲ್ಲಿಟ್ಟು ಗಾಳಿ ಗೊಡ್ಡು.
ಒಪ್ಪ ಒಳ್ಪು, ಪ್ರಕಾಶ; ಶೃಂಗಾರ, ಸೌಂದರ್ಯ; ನುಣುಪು; ಠೀವಿ.
—ಕೆಡಿಸು ಅಂದಗೆಡಿಸು.
ಒಪ್ಪಟೆ ಸ್ವಲ್ಪ.
ಒಪ್ಪಂದ ಕವಲು, ಒಡಂಬಡಿಕೆ.
ಒಪ್ಪಂಬಡೆ ಅಂದವಾಗು.
ಒಪ್ಪು (ಒಪ್ಪ) ಅಂಗೀಕರಿಸು, ಸಮ್ಮತಿಸು; ನುಣುಪು.
—ಇಸು (ಒಪ್ಪಯಿಸು) ಒಪ್ಪಿಸು.
ಒಪ್ಪುವಜ್ಜರ ಸಾಣೆಹಿಡಿದು ಥಳಿಸುವ ವಜ್ರ.
ಒಬ್ಬ ಏಕಾಕಿ, ಒಂಟಿಗ, ಒಬ್ಬೊಂಟಿಗ.
ಒಬ್ಬಟ್ಟು ಒಂದು ಬಗೆಯ ಖಾದ್ಯ, ಹೋಳಿಗೆಯಂಥ ಅಡುಗೆ.
ಒಬ್ಬುಳಿ ಹೊರಳಿ; ಒಟ್ಟಲ್; ಒಟ್ಟುಗೂಡುವಿಕೆ.
—ಇಸು ಒಟ್ಟಾಗು.
ಒಬ್ಬೆ ಪೊದೆ.
ಒಮ್ಮತ ಒಂದೇ ಅಭಿಪ್ರಾಯ.
ಒಮ್ಮನ ಒಂದೇ ಮನಸ್ಸು.
ಒಮ್ಮಾರು ಒಂದು ಮಾರು.

—ವೇಣಿ ಒಂದು ಮೂರು ಉದ್ದದ ಜಡೆ; ಮೂರುದ್ದದ ಜಡೆಯುಳ್ಳವಳು.
ಒಮ್ಮು ಒಪ್ಪು, ಒಪ್ಪಿಗೆ; ಸೇರಿಸು.
ಒಮ್ಮೆ ಒಂದು ಸಲ.
ಒಮ್ಮೆಯ್ ಒಂದು ತಳ; ಒಂದು ಶರೀರ.
ಒಮ್ಮೊಗ ಒಂದೇ ಕಡೆ, ಏಕಮುಖ.
ಒಯ್ಯಗೆ ಮೆಲ್ಲಗೆ, ಸಾವಕಾಶವಾಗಿ.
ಒಯ್ಯನಾಗು ಕಾಂತಿಹೀನವಾಗು.
ಒರಗು ಬಾಗು; ಮಲಗು, ನಿದ್ರೆಮಾಡು.
ಒರಟು ದೊರಗು, ನಯವಲ್ಲದ್ದು.
ಒರತೆ ಪ್ರವಾಹ; ಒಸರು; ನೀರು ಹುಟ್ಟುವಿಕೆ; ಚಿಲುಮೆ, ಊಟೆ; ಬುಗ್ಗೆ.
ಒರಲು (ಒರಲ್) ಸ್ನೇಹ, ಪ್ರೀತಿ; ಪ್ರೀತಿಸು; ಕೂಗು, ಬೊಬ್ಬಿಡು; ನರಳು; ಕೂಗಾಟ, ಆರ್ತಧ್ವನಿ; ಬತ್ತ ಕುಟ್ಟುವ ಅಡಿಗಲ್ಲು.
ಒರವು ಒರತೆ, ನೀರಿನ ಒಸರು.
ಒರೆ ಹೇಳು; ನೀರುಬಿಡು; ತೇಯು; ನಯವಾಗುವಂತೆ ತಿಕ್ಕು; ಸ್ರವಿಸು, ಸುರಿ, ಒಸರು; ಸಾಮ್ಯ, ಹೋಲುವೆ; ಖಡ್ಗ ಹಾಕುವ ಚೀಲ.
—ಇಡು ಹೋಲಿಸು.
—ಕಟ್ಟು ಎದುರು ಬೀಳು; ತೂಕ ಹಿಡಿ; ಗುಣ ನಿರ್ಧಾರ ಮಾಡು.
—ಗಾರ ಚಿನ್ನದ ಗುಣವನ್ನು ತಿಳಿಯ ಬಲ್ಲವ.
—ಹಿಡಿ ಒರೆಹಚ್ಚಿ ನೋಡು; ಗುಣವನ್ನು ತೂಗು.
ಒರೆದೊರೆ ಸಮಾನ.
ಒರೆಯಾಗು (ಓರೆಯಾಗು) ಮರೆಯಾಗು, ಅಡ್ಡಾಗು, ಒಳಗಾಗು.
ಒರ್ಕಾಲ ಒಂದು ಕಾಲ, ಒಂದು ವರ್ಷ.

ಒರ್ಗುಽ (ಒಗ್ಗು) ಗುಂಪು, ಸಮೂಹ; ಒಪ್ಪಿಗೆಯಾಗು.
ಒರ್ಗುಽಡಿಸು ಒಂದು ಕಡೆಗೆ ಬಾಗು; ಬಗ್ಗು; ಜೋಲು; ಓರೆಯಾಗು.
ಒರ್ಗೊಽಡೆ ಗುಂಪಿಂದ ಚದರು.
ಒರ್ಚಽರ ಒಂದು ಸರ, ಏಕಾವಳಿ.
ಒರ್ಪುಽ ಶಕ್ತಿ, ಅಳವು.
ಒರ್ಮೆಽ (ನೋಡು: ಒಮ್ಮೆ).
ಒರ್ಮೆಽಯ್ ಒಬ್ಬ; ಅಸಹಾಯ ಶೂರ, ಏಕಾಂಗವೀರ.
ಒರ್ಮೊಽದಲೆ ತಟ್ಟನೆ, ಪಕ್ಕನೆ.
ಒರ್ವಾಽಗ ಒಂದು ಭಾಗ.
ಒಲ್ (ಒಲಿ) ಸದೃಶ; ಪ್ರೀತಿಸು.
ಒಲ ಒಲವು, ಪ್ರೀತಿ; ಬಾಗುವಿಕೆ.
—ವು (ಒಲ) ದಯೆ; ಪ್ರೀತಿ.
—ಹು ತೂಗು, ಬಾಗು; ತೂಗಾಟ.
ಒಲಗಟ್ಟು ಎದುರು ಬೀಳು.
ಒಲಣಿಗೆ ಹಿಂಡುವ ಸಾಧನ, ಗಾಣ.
ಒಲಪು (ಒನಪು) ವಯ್ಯಾರ.
ಒಲವರ ಪ್ರೀತಿ; ಪಕ್ಷಪಾತ.
ಒಲಿ ಪ್ರಸನ್ನವಾಗು, ಮೆಚ್ಚು, ಇಷ್ಟಪಡು.
—ಮೆ (ಒಲುಮೆ, ಒಲ್ಮೆ), ಅನುರಾಗ, ಪ್ರೀತಿ; ಮೆಚ್ಚಿಸುವಿಕೆ.
ಒಲೆ ಅಲೆದಾಡು, ತೂಗಾಡು; ಬೆಳಗಿ ಕಾಣಿಸಿಕೊಳ್ಳು; ಅಡುಗೆಗೆ ಬೆಂಕಿ ಒಡ್ಡುವ ಸ್ಥಳ, ಅಗ್ಗಿಷ್ಟಿಕೆ.
—ಆಟ ತೂಗಾಟ.
—ತ ಒಂದು ಕಡೆಗೆ ಬಾಗುವಿಕೆ; ಒಂದು ಪಕ್ಷ ವಹಿಸುವಿಕೆ.
ಒವಜ ಓಜ, ಗುರು; ಉತ್ಸಾಹ.
ಒಸಗೆ ಉತ್ಸವ; ಶುಭ; ಸಂತೋಷ; ಮಂಗಳವಾರ್ತೆ; ಶುಭಸಮಾಚಾರ; ಸುದ್ದಿ.
ಒಸಗೆವರೆ ಮಂಗಲಕಾಲದಲ್ಲಿ ಬಾರಿಸುವ ನಗಾರಿ, ಭೇರಿ, ಬದ್ದಣ; ಮಂಗಲ ವಾದ್ಯ.
ಒಸರು ಸ್ರವಿಸು; ಸುರಿ; ಒರತೆ ಹೊರಡು, ದ್ರವಿಸು; ನೀರು ಹೊರಡುವ ಸ್ಥಾನ; ಸುರಿತ.
ಒಸೆ ಪ್ರಸನ್ನವಾಗು, ಮೆಚ್ಚು, ಪ್ರೀತಿಸು.
ಒಳ್ ಉಳ್; ಇರು; ಒಳ್ಳೆಯ.
ಒಳ ಒಳಗಿರುವ, ನಡುವಣ.
—ಗು ಒಳಗಡೆಯ ಅಂಶ; ಗುಟ್ಟು; ಅಧೀನ.
ಒಳಕುರುವ ಒಳದ್ವೀಪ, ಕಡಲೊಳಗಿನ ದ್ವೀಪ, ಪಾರು.
ಒಳಕೆಯ್ಕೊ ಪರಿಗ್ರಹಿಸಿ, ಸ್ವೀಕರಿಸಿ.
ಒಳಕೊಂಡು ಕೂಡಿಕೊಂಡು, ಸೇರಿಸಿಕೊಂಡು.
ಒಳಗಲ್ಲ ಸಾಧ್ಯವಿಲ್ಲ, ಒಳಗಾಗದು; ಅಧೀನವಾಗದು.
ಒಳಗಾಗು ಅಧೀನವಾಗು.
ಒಳಗುಡಿ ಒಳಗಿನ ಭಾಗ; ಗುಡಿಸಲಿನ ಒಳಭಾಗ; ಗರ್ಭಗೃಹ.
ಒಳಗುದೋರು ಮನಸ್ಸಿನ ಅಂತರ್ಯ ಪ್ರಕಟಿಸು, ಗುಟ್ಟು ತಿಳಿಸು.
ಒಳಗುಮಾಡು ತನ್ನ ಕಡೆಗೆ ಮಾಡು.
ಒಳಗೈ ಒಲಿಸಿಕೊಳ್ಳು, ಮೆಚ್ಚಿಸು; ವಶಪಡಿಸು; ಗುಪ್ತಚಾರ; ಪರರ ಗುಟ್ಟು ತಿಳಿಯುವವ.
ಒಳತೋಟಿ ಒಳಜಗಳ, ಅಂತಃಕಲಹ.
ಒಳದೆಗೆ ಒಳಕ್ಕೆ ಸರಿ, ಹಿಂದೆಗೆ.
ಒಳರು ಕಿರಿಚು, ಅರಚು, ಕೂಗು; ಇದ್ದಾರೆ.
ಒಳರೆ ಇದ್ದಾರೆಯೇ.
ಒಳವಗೆ (ಒಳಪಗೆ) ಅಂತಃಶತ್ರು; ಕಾಮ ಕ್ರೋಧಗಳಂಥ ಒಳಗಿನ ಹಗೆಗಳು.
ಒಳವು ಇರುವುವು, ಉಂಟು.

ಒಳಸರಿ ಹಿಂದೆಗೆ; ಸೋಲು.
ಒಳಸಂಚು ಗುಟ್ಟಿನಲ್ಲಿ ನಡೆಸುವ ಹೊಂಚು; ಸಂಚು; ಕಾರಸ್ಥಾನ; ಕಪಟ.
ಒಳಸೋರು ಧೈರ್ಯಗೆಡು.
ಒಳಹೊರಗು ಅಂತರಂಗ ಬಹಿರಂಗ.
ಒಳಿತು (ಒಳ್ಳಿತು) ಶುಭ, ಕಲ್ಯಾಣ.
ಒಳ್ಕು ಉಕ್ಕು, ಪ್ರವಹಿಸು; ಪ್ರವಾಹ.
ಒಳ್ಗು ಕೂಡಿಸು, ಸೇರಿಸು.
ಒಳ್ತನ ಒಳ್ಳೆಯತನ.
ಒಳ್ದಳೆ ಅಂದವಾಗು, ಚೆಲುವುದೋರು.
ಒಳ್ದೊಡೆ ಒಳತೊಡೆ, ತೊಡೆಯ ಒಳಭಾಗ; ಚೆಲುವಿನ ತೊಡೆ.
ಒಳ್ದೊರೆ ಒಳ್ಳೆಯ ಹೊಳೆ; ಒಳಪ್ರವಾಹ.
ಒಳ್ನುಡಿ ಒಳಗಿನ ಮಾತು, ಗುಟ್ಟಿನ ಮಾತು.
ಒಳ್ನೆರವು ಒಳ್ಳೆಯ ಸಹಾಯ.
ಒಳ್ಪು ಸೊಗಸು; ಲೇಸು; ಒಳ್ಳಿತು.
ಒಳ್ಪುದಿ ಚೆನ್ನಾಗಿ ವ್ಯಾಪಿಸು.
ಒಳ್ಳಿತು (ಒಳ್ಳಿತ್ತು) ಒಳಿತು; ಚೆನ್ನಾದುದು; ಸಾರವಿದ್ದುದು; ಶುಭವಾದುದು, ಒಳ್ಳಿಯದು.
ಒಳ್ಳೆ ನೀರುಹಾವು.
ಒಂಕಿ ಉರುಳು; ತೋಳುಬಳೆ; ತೋಳಿನ ಒಂದು ಆಭರಣ.
ಒಂಚ ತುಸು, ಸ್ವಲ್ಪ.
ಒಂಟಿ ಏಕಾಕಿ, ಒಬ್ಬಂಟಿಗ; ಒಂದು; ಜತೆಯಿಲ್ಲದುದು.
ಒಂಟು (ಒಂಡು) ಕೆಸರಿನ ರಾಶಿ.
ಒಂಟೆ(ದ್ಭ) ಉಷ್ಟ್ರ(ಸಂ), ಮರುಭೂಮಿಯ ಒಂದು ಪ್ರಾಣಿ.
ಒಂದಿಗ ಜತೆಯವ; ಸಂಬಂಧಿಕ.
ಒಂದಿಸು ಸೇರಿಸು; ಕಟ್ಟು.
ಒಂದು (ಹೊಂದು) ಸೇರು; ಮೊದಲ ಸಂಖ್ಯೆ.

## ಓ

ಓ ಪ್ರೀತಿಸು, ಮೆಚ್ಚು; ನೆನಪಿಗೆ ತರುವುದು; ಕರೆಯುವುದು; ದಯೆದೋರು; ಜಗತ್ತಿನ ಒಡೆಯ, ಬ್ರಹ್ಮ.
ಓಕ ಪಕ್ಷಿ; ಶೂದ್ರ.
ಓಕರು ಓಕರಿಕೆ, ವಾಂತಿ, ವಮನ.
—ಇಕೆ ವಮನ, ವಾಂತಿ.
—ಇಸು ಒಗಡಿಸು, ವಾಂತಿಮಾಡು.
ಓಕಸ ಮನೆ, ಬೀಡು; ವಾಸಸ್ಥಾನ, ಆಶ್ರಯ ಸ್ಥಾನ.
ಓಕುಳಿ (ಒಕಳಿ) ಮಂಗಳ ಜಲ; ಅರಿಸಿನ ಸುಣ್ಣ ಸೇರಿಸಿ ಮಾಡಿದ ಕೆನ್ನೀರು; ವಸಂತ ಕ್ರೀಡೆ; ಓಕುಳಿ ಚೆಲ್ಲುವ ಆಟ.
ಓಗತ್ಯ ಕಸವಿಸಿ; ಜಿಪುಣತೆ.
ಓಗರ ಅನ್ನ, ಆಹಾರ; ತಿನಸು.
ಓಘ ಪ್ರವಾಹ, ಭರ.
ಓಜ ಗುರು, ಕೆಲಸಗಾರ; ಮುಗಿಲು.
ಓಜೆ ಓಜಸ್ಸು, ಶಕ್ತಿ, ಬಲ; ಪ್ರಕಟಣೆ; ಆಧಾರ; ನೀರು; ಸಾಲು; ವರಸೆ; ಕ್ರಮ.
—ಗೆಡು ರೀತಿಕೆಡು; ಶಕ್ತಿಗುಂದು.
ಓಟು ಓಡಾಟ, ಓಡುವಿಕೆ.
—ಗಾರ ಓಡುವವ.
ಓಟೆ ಬಿದಿರ ನಳಿಗೆ; ಚಿಕ್ಕ ಜಾತಿಯ ಬಿದಿರು; ಓಟೆಹುಳಿ ಮರ; ಗೊರಟು; ಒಳಗಿನ ಬಿತ್ತು.
ಓಡ ದೋಣಿ, ಚಿಕ್ಕ ನಾವೆ.
ಓಡು ವೇಗವಾಗಿ ಸರಿ; ಪಲಾಯನಮಾಡು; ಹಿಂದೆಗೆ; ಚಿಪ್ಪು; ಏನಾದರೊಂದು ಕಾಯ ಹೊರಗಿನ ತೊಗಟೆ.
—ಆಟೆ ಶ್ರಮ; ಓಡಿ ಮಾಡುವ ಕೆಲಸ.
ಓಣಿ ಸಾಲು; ಕಿರುದಾರಿ, ಗಲ್ಲಿ.

ಓತಪ್ರೋತ ಹೆಚ್ಚುಕಡಿಮೆ, ಹಾಗೂ ಸಮ ಹೀಗೂ ಸಮ.
ಓತಿ ಗೌಳಿವರ್ಗದ ಒಂದು ಪ್ರಾಣಿ, ಓತಿಕಾಟ, ಓತಿಕೇತ.
ಓದನ ಅನ್ನ.
ಓದು ಓದುವಿಕೆ, ವಿದ್ಯೆ; ಬಾಯ್ದೆರೆದು ಹೇಳು; ಪುಸ್ತಕ ಪಠಿಸು.
—ಆಳಿ ಓದುವುದರಲ್ಲಿ ಇಷ್ಟವಿರುವವ.
—ಗಾರ ಬಲ್ಲಿದ, ಓದಿ ತಿಳಿದವ.
ಓನಾಮ ಓಕಾರದಿಂದ ತೊಡಗುವ ಪಾಠ; ಅಕ್ಷರದ ಗುರುತು.
ಓಪಾದಿ ಅಂತೆ, ಅದರಂತೆ.
ಓಬಿರಾಯ ಪ್ರಾಚೀನ ಕಾಲದವನೆನಿಸುವ ಒಬ್ಬ ದೊರೆ.
ಓಮ ವಾಮ, ಒಂದು ವಿಧದ ಸುಗಂಧದ ಕಾಳು.
ಓಯಾರಿಸು ಸಾಲಾಗಿರಿಸು.
ಓರ್ (ಒರ್) ಒಬ್ಬ.
ಓರಗಿತ್ತಿ ಅತ್ತಿಗೆ.
ಓರಗೆ ಸಮತೆ, ಸಮಾನತೆ.
ಓರಡಿ ಇಳಕಲು; ವ್ಯತ್ಯಾಸ; ತಕ್ಕಡಿಯ ಓರೆಪೀರೆ.
ಓರಣ ಸಾಲು; ಭಂಗಿ.
ಓರಂದ ಒಂದೇ ಸಮ; ಚೆಲುವು.
ಓರೆ ವಾಲಿರು, ಮಾಲಿರು; ತುಸು ಬಾಗಿರು.
—ಕಣ್ಣು ವಕ್ರದೃಷ್ಟಿ; ಕುದೃಷ್ಟಿ.
—ಕೋರೆ ಅಡ್ಡಾದಿಡ್ಡಿ, ಅವ್ಯವಸ್ಥಿತ.
—ಗಾರ ಬಣ್ಣ ಬಳೆಯುವವ.
ಓರೊರ್ವರ್ ಒಮ್ಮೊಮ್ಮೆ
ಓರೊರ್ವ ಯಾವನಾದರೂ ಒಬ್ಬ.
ಓರ್ಗುಡಿಸು ಒಂದು ಕಡೆ ರಾಶಿಯಾಗಿ ಬೀಳು.
ಓರ್ವ ಒಬ್ಬ, ಒಬ್ಬಂಟಿಗ.

ಓಲ್ ಒಲು, ಒಳಕು.
—ಆಡು ಹೊಂಗು; ಬಾಗು.
—ಆಟ ಒಲೆತ, ಆಚೀಚೆ ಬಾಗುವಿಕೆ.
ಓಲಗ ಸಭೆ, ರಾಜರ ಆಸ್ಥಾನ; ವಾದ್ಯ.
—ಇಸು ಸೇವಿಸು.
—ಕೊಡು ರಾಯಭಾರಿ ಮೊದಲಾದವರಿಗೆ ಭೇಟಿಕೊಡುವುದು; ವಾದ್ಯಮಾಡು.
—ಶಾಲೆ ರಾಜರ ಆಸ್ಥಾನ, ಓಲಗ ನಡೆಯುವ ಚಾವಡಿ.
ಓಲವಿಸು ಓಲಗಿಸು, ಓಲಗ ನಡಿಸು.
ಓಲು ಹೋಲು, ಹಾಗೆ; ತೂಗು; ಜಾಮೀನು.
—ಆಟ ತೂಗಾಟ, ಜೋತಾಟ; ಮಿತ್ರತ್ವ.
—ಗಾರ ಜಾಮೀನುದಾರ, ಹೊಣೆನಿಂತವ.
ಓಲೆ (ವಾಲೆ) ತಾಳೆಯ ಎಲೆ; ಓಲೆಯ ಸುರುಳಿ ಸುತ್ತಿ ಮಾಡುವ ಕಿವಿಯ ಆಭರಣ, ಮುತ್ತೈದೆಯ ಕಿವಿಯಾಭರಣ; ತಾಳೆಗರಿಯ ಮೇಲೆ ಬರೆದ ಪತ್ರ; ಪತ್ರ.
—ಕಾರ ಊಳಿಗದವ; ಪತ್ರಗಳನ್ನು ಮುಟ್ಟಿಸುವ ಚಾಕರ.
—ಭಾಗ್ಯ ಸೌಮಾಂಗಲ್ಯ, ಮುತ್ತೈದೆತನ.
ಓವದೆ ಲಕ್ಷ್ಯಮಾಡದೆ.
ಓವರಿ ಒಳಭಾಗ, ಕೋಣೆ; ಮುಚ್ಚುಮರೆ.
ಓವು ಎಚ್ಚರವಾಗಿರು, ರಕ್ಷಿಸು; ಕಾಪಾಡು; ಉಪಚರಿಸು.
ಓಷಧಿ ಮದ್ದಿನ ಗಿಡ, ವನಸ್ಪತಿ, ಮೂಲಿಕೆ; ಫಲಿಸಿದೊಡನೆ ಸಾಯುವ ಗಿಡಜಾತಿ.
—ಈಶ ಗಿಡಗಳ ಒಡೆಯನಾದ ಚಂದ್ರ.
—ಪ್ರಸ್ಥ ಹಿಮಾಲಯದ ಪಟ್ಟಣ.
ಓಷ್ಟ ಬಿಂಬ, ತೊಂಡೆ.
ಓಷ್ಠ ಮೇಲುದುಟಿ; ತುಟಿ.
—ಪಾನ ಚುಂಬನ.
ಓಷ್ಠಪುಷ್ಪ ತುಟಿಯಂತೆ ಕೆಂಪಾಗಿರುವ ಹೂ;

ತುಟಿಯಂತೆ ಎಸಳುಳ್ಳ ಹೂ, ಅವರೆ—ಅಲಸಂದೆ-ಎಳ್ಳು ಮೊದಲಾದ ಹೂಗಳು; ಕೆಂಪಾದ ಹೂಗಳು.

ಓಷ್ಠ್ಯ ತುಟಿಯಿಂದ ಹೊರಡುವ ದನಿಗಳು.

ಓಸರ ನಾಲಿಕೆ, ಒಲೆಯುವಿಕೆ; ಜಾರುವಿಕೆ.
— ಇಸು ಓರೆಮಾಡು; ಜಾರಿಸು, ಹಿಂದೆಗೆ; ಮರೆಯಾಗು, ತೆಗೆದುಹಾಕು.

ಓಸು ಅಷ್ಟು.

ಓಸುಗ ಓಸ್ಕರ, ಅದಕ್ಕಾಗಿ.

ಓಹೋ ಆಶ್ಚರ್ಯಸೂಚಕ ಪದ.

ಓಳ್ ಭೋಗಿಸು; ಸೀಳು; ಹೋಳು.

ಓಳಿ ಸಾಲು; ರಾಶಿ, ಸಮೂಹ.

ಓಳಿಕಾ ಓಳಿಗೆ.

ಓಹೋ ವಿಸ್ಮಯಸೂಚಕ ಪದ.

# ಔ

ಔಕ್ಷ (ಔಕ್ಷಕ) ಎತ್ತುಗಳ ಗುಂಪು.

ಔಘ ಓಘ, ಗುಂಪು, ಸಮೂಹ; ಸರಣಿ.

ಔಚಿತಿ ಉಚಿತವೆನಿಸಲು ಯೋಗ್ಯವಾದ ಗುಣ, ನ್ಯಾಯವಾದ್ದು, ಸತ್ಯವಾದ್ದು; ಯೋಗ್ಯತೆ; ಲಾಯಕು; ಶ್ಲಾಘ್ಯ; ಸಂತೋಷ.

ಔಜಸ ಕಾಂತಿ.

ಔಡಲು ಹರಳು, ಏರಂಡ.

ಔಡು ಅವುಡು, ದವಡೆ ಕೆಳತುಟಿ; ಔಡು ಕಚ್ಚು, ಹಲ್ಲುಕಡಿ.
— ಕಚ್ಚು ದವಡೆಯನ್ನು ಕಡಿಯು, ರೇಗು.

ಔತ್ಕಂಠ್ಯ ಉತ್ಕಂಠೆಗೆ ಕಾರಣವಾದ ಗುಣ; ಅಪೇಕ್ಷೆ; ವ್ಯಸನ; ಆತುರದ ಬಯಕೆ.

ಔತ್ತರೇಯ ಉತ್ತರ ದೇಶದ, ಬಡಗಣ.

ಔತ್ತಾನಪಾದ ಉತ್ತಾನಪಾದರಾಯನ ಮಗ, ಧ್ರುವ.

ಔತ್ಸರ್ಗಿಕ ಬಿಡಲು ಯುಕ್ತವಾದ; ಸ್ವಾಭಾವಿಕವಾದ.

ಔತ್ಸುಕ್ಯ ಉತ್ಸುಕನಾಗಿರುವುದು; ಉತ್ಸಾಹ, ಅಧಿಕ ಅಪೇಕ್ಷೆ.

ಔದಾರ್ಯ ಉದಾರತನ, ದೊಡ್ಡತನ, ಮಹತೆ.

ಔದಾಸೀನ್ಯ ಶುಭಾಶುಭಗಳ ಉಪೇಕ್ಷೆ; ಅಲಸ.

ಔದಾಸ್ಯ ವೈರಾಗ್ಯ, ಅಪ್ರೀತಿ.

ಔದುಂಬರ ಅತ್ತಿಯ ಮರ.

ಔದ್ಧತ್ಯ ವಿನೀತವಲ್ಲದ ಗುಣ; ಹೆಮ್ಮೆ.

ಔದ್ವಾಹಿಕ ವಿವಾಹ ಕಾಲದಲ್ಲಿ ದೊರೆತ ವಸ್ತುಗಳು.

ಔನ್ನತ್ಯ ಉನ್ನತವಾಗಿರುವಿಕೆ; ಎತ್ತರ, ಏರಿಕೆ.

ಔಪಮ್ಯ ಹೋಲಿಕೆ, ಹೋಲುವೆ.

ಔಪಾಸನೆ ಒಂದು ವಿಧದ ಅಗ್ನಿಪೂಜೆ; ಗೃಹಸ್ಥನ ಒಂದು ನಿತ್ಯ ಕರ್ಮ.

ಔರಸ ಎದೆಯಿಂದ ಉಂಟಾದ; ಧರ್ಮಪತ್ನಿಯಲ್ಲಿ ಹುಟ್ಟಿದ.

ಔರ್ಧ್ವದೇಹಿಕ ಪ್ರೇತಕ್ಕಾಗಿ ಮಾಡುವ ಕ್ರಿಯೆಗಳು; ಶವಸಂಸ್ಕಾರ; ಉತ್ತರಕ್ರಿಯೆ.

ಔರ್ವ ಊರ್ವ ಋಷಿಯ ಮಗ; ಊರ್ವಋಷಿಯಿಂದ ಕಡಲಲ್ಲಿ ಹುಟ್ಟಿದ ಕಿಚ್ಚು, ಬಡಬಾಗ್ನಿ.
— ಅಗ್ನಿ ಬಡಬಾನಲ.

ಔರ್ವಾನಳ ಬಡಬಾನಲ

ಔಲೂಕ ಗೂಬೆಗಳ ಗುಂಪು.

ಔಶನಸ್ (ಉಶನಸ್ = ಶುಕ್ರ) ರಾಜನೀತಿ; ಶುಕ್ರನೀತಿ.

ಔಷಧಿ ಔಸದ(ಧ) ಔಷಧಿ, ಮದ್ದು; ಚಿಕಿತ್ಸೆ.

ಔಷ್ಟ್ರಕ ಒಂಟೆಗಳ ಗುಂಪು.

ಔಷ್ಠ್ಯ (ಓಷ್ಠ = ತುಟಿ) ತುಟಿಯಿಂದ ಹುಟ್ಟುವ ಉಪವರ್ಗದ ಅಕ್ಷರಗಳು.

ಔಂಡು ಅವಳಿ, ಯಮಳ, ಜತೆಜತೆ.

# ಕ

ಕ ಬ್ರಹ್ಮ; ವಾಯು; ಆತ್ಮ; ಯಮ; ದಕ್ಷ; ಪ್ರಜಾಪತಿ; ಸೂರ್ಯ; ಅಗ್ನಿ; ವಿಷ್ಣು; ಕಾಲರಾಜ; ನವಿಲು; ಧನ; ಶಬ್ದ; ಸುಖ; ತಲೆ; ನೀರು; ರೋಗ; ಪ್ರಕಾರ.

ಕಕುತ್ಸ್ಥ (ಕಕುತ್ = ಎತ್ತಿನ ಹಿಣಿಲು) ಎತ್ತಿನ ಭುಜದ ಮೇಲೆ ಕುಳಿತು ಯುದ್ಧಮಾಡಿದ ಅರಸೊಬ್ಬ, ಇಕ್ಷ್ವಾಕು ವಂಶದ ಅರಸ ಶಶಾದನೆಂಬವನು. ಇವನಿಗೆ ಇಂದ್ರನು ಎತ್ತಿನ ರೂಪದಲ್ಲಿ ವಾಹನನಾದನೆಂದು ಕಥೆ.

—ಜ ಕುಕುತ್ಸ್ಥ ರಾಜನ ವಂಶದವನು, ರಾಮ.

ಕಕುದ ಎತ್ತಿನ ಹೆಗಲ ಮೇಲಿನ ಡುಬ್ಬ, ಹಿಣಿಲು, ಭುಜ; ಛತ್ರಚಾಮರಾದಿ ರಾಜ ಚಿಹ್ನೆ; ಬೆಟ್ಟದ ತಪ್ಪಲು; ಮುಖ್ಯ.

ಕಕುದ್ಮತ್ ಎತ್ತು.

ಕಕುಭ ಪ್ರಾಮುಖ್ಯ.

ಕಕ್ಕ ಚಿಕ್ಕಪ್ಪ.

ಕಕ್ಕಡ ದೊಂದಿ; ಉರಿವ ಎಣ್ಣೆವಸ್ತ್ರ; ದೀವಟಿ.

ಕಕ್ಕಡೆ ಖಡ್ಗ, ಒಂದು ಬಗೆಯ ಕಠಾರಿ.

ಕಕ್ಕರ ಬಾಣದಲ್ಲಿ ಒಂದು ವಿಧ; ಗಗ್ಗರ.

ಕಕ್ಕಸ (ದ್ಭ) ಕರ್ಕಶ (ಸಂ), ಕಠಿಣ, ಕ್ರೂರ.

—ಗಾರ ಕ್ರೂರ ಮನುಷ್ಯ.

ಕಕ್ಕಸು ಪಾಯಿಖಾನೆ.

ಕಕ್ಕಂಬು ಬಾಣ ವಿಶೇಷ; ಕಿರಿದು ಕಂಬ.

ಕಕ್ಕು ಚೂರಿ, ಖಡ್ಗಗಳ ತುದಿ; ವಾಂತಿ ಮಾಡು.

—ಇಸು (ಕಕ್ಕಿಸು) ವಾಂತಿಮಾಡು; ಹೊರಗೆ ಓಡಿಸು.

ಕಕ್ಕುಕದರಿ ಹಲ್ಲುಗಳುಳ್ಳ ದೊಡ್ಡ ಕತ್ತಿ.

ಕಕ್ಕುಲತೆ (ಕಕ್ಕುಲಿತೆ) ಚಿಂತೆ, ವ್ಯಸನ, ವ್ಯಾಕುಲ; ಸ್ಥಿತಿ; ಹಂಬಲ; ಆಸೆ; ಪ್ರೀತಿ; ಚಾಪಲ್ಯ; ಸಂದೇಹ.

—ಗಾರ ಆಸೆಗಾರ; ಪ್ರೀತಿಯುಳ್ಳವ.

ಕಕ್ಕೆಕೋಲು ಕಡಲಿನ ಶಂಖದಂಥ ಒಂದು ಜೀವಿ; ಕಡಲು ಜೀವಿಯೊಂದರ ನೀಳ ಹೊರ ಚಿಪ್ಪು.

ಕಕ್ಕೋಲ ಒಂದು ಪರಿಮಳ ವಸ್ತು.

ಕಗ್ಗ ನೀರಸ ಮಾತು, ಶುಂಠ.

ಕಗ್ಗತ್ತಲು (ಕರಿದು + ಕತ್ತಲು) ಗಾಢರಾತ್ರಿ; ತೀರ ಕತ್ತಲೆ.

ಕಗ್ಗನೆ ಕಪ್ಪಗೆ.

ಕಗ್ಗವಿ ಕತ್ತಲು ತುಂಬಿದ ಗವಿ.

ಕಗ್ಗಾಡು ಕತ್ತಲುತುಂಬಿದ ಕಾಡು, ದಟ್ಟವಾದ ಕಾಡು.

ಕಗ್ಗೊಲೆ ಕ್ರೂರ ಕೊಲೆ.

ಕಕ್ಷ ಕಂಕುಳ; ಕಂಕುಳ ಚೀಲ; ಎದೆಯ ಸೆರಗು, ಮೇದೆಲೆ; ರಾಣೀವಾಸ; ಆನೆ ಕಟ್ಟುವ ಮಿಣಿ; ಪಾಪ; ವನ; ರೋಗ ವಿಶೇಷ.

—ಪಾಲ ಕಂಕುಳ ಚೀಲ.

ಕಕ್ಷಿ ಜಗಳ, ವಿವಾದ.

—ಗಾರ ಜಗಳದಲ್ಲಿ ಭಾಗ ವಹಿಸಿದವ; ಪಕ್ಷಗಾರ.

ಕಕ್ಷೆ (ನೋಡು: ಕಕ್ಷ).

ಕಕ್ಷ್ಯೆ ತೊಟ್ಟಿ; ಕೋಣೆ.

ಕಚ ತಲೆಗೂದಲು; ಬೃಹಸ್ಪತಿಯ ಒಬ್ಬ ಮಗನು. ಈತನು ಸತ್ತವರನ್ನು ಬದುಕಿಸುವ ವಿದ್ಯೆಯನ್ನು ಕಲಿಯಲು ಶುಕ್ರನ ಶಿಷ್ಯನಾಗಿ ಸೇರಿಕೊಂಡನು. ಅವನಿಗೂ ಶುಕ್ರನ ಮಗಳಾದ ದೇವಯಾನಿಗೂ ಸ್ನೇಹವಾಯಿತು. ಶುಕ್ರನು ಕಚನ ಉ

ದ್ದೇಶ ತಿಳಿದು ಅವನನ್ನು ಕೊಂದರೂ ದೇವಯಾನಿಯು ಅವನನ್ನು ಉಳಿಸಿಕೊಂಡಳು. ಆದರೆ ಅವನು ಅವಳನ್ನು ವರಿಸದ ಕಾರಣ ಅವಳ ಶಾಪಕ್ಕೊಳಗುರಿಯಾದನು.

—ಬಂಧ ತಲೆಗೂದಲು; ತುರುಬು, ಜಡೆ.

—ಭರ ಕೂದಲರಾಶಿ, ಮುಡಿಗಟ್ಟು.

ಕಚಪ ಹುಲ್ಲು.

ಕಚಪು (ಕಶಿಪು) ಊಟಕ್ಕೆ ಮಾಡಿದ ಮೇಲೋಗರ.

ಕಚರಾ (ಕಚಡಾ) ಕಸ; ಕೆಲಸಕ್ಕೆ ಬಾರದ ವಸ್ತು.

ಕಚೇರಿ (ಕಚ್ಚೇರಿ) ಕಾರ್ಯಾಲಯ, ಕೆಲಸ ಮಾಡುವ ಮನೆ.

ಕಚ್ಚ (ಕಚ್ಚಾ) ಅಸಿದ್ಧ ಪದಾರ್ಥ, ಮೂಲ ವಸ್ತು.

ಕಚ್ಚಟ (ದ್ಭ) ಕಕ್ಷಾಪಟ (ಸಂ); ಕೌಪೀನ, ಕೋವಣ, ಕಚ್ಚೆ.

ಕಚ್ಚಡಿ ಗೊಜ್ಜು; ನೀರುಹಾಕಿ ಅರೆದು ಮಾಡಿದ ಚಟ್ಣಿ.

ಕಚ್ಚನೆ ಫಕ್ಕನೆ.

ಕಚ್ಚರಿ ಬಜ್ಜಿ, ಗೊಜ್ಜು.

ಕಚ್ಚಳಿ ಬಿರುದಿನ ಬಳೆ; ತೋಳುಸರಿಗೆ.

ಕಚ್ಚಿರಿ ಕಾಲನ್ನು ಜತೆಮಾಡು.

ಕಚ್ಚು (ಕರ್ಚು), ಹಲ್ಲಿಂದ ಕಡಿ; ತೊಳೆ; ಕಡಿದ ಗುರುತು.

—ಗಾಲಿ ಕಚ್ಚುಳ್ಳ ಗಾಲಿ; ಗಡಿಯಾರ ಮೊದಲಾದವಕ್ಕಿರುವ ಹಲ್ಲಿರುವ ಗಾಲಿ.

ಕಚ್ಛಪ (ಕಚ್ಛ) ಆವೆ; ಕುಬೇರನ ನವಸಿದ್ಧಿಗಳಲ್ಲೊಂದು; ಮಲ್ಲವಿದ್ಯೆ.

ಕಜ್ಜ (ದ್ಭ) ಕಾರ್ಯ (ಸಂ), ಕೆಲಸ.

ಕಜ್ಜಲ (ಕಜ್ಜಳ) ಕಾಡಿಗೆ, ಕಣ್ಣಪ್ಪು.

ಕಜ್ಜಾಯ ತಿಂಡಿಯೊಡನೆ, ಭಕ್ಷ್ಯ.

ಕಜ್ಜಿ ಹುಣ್ಣು, ಕಿರಿಹುಣ್ಣು.

ಕಟ ಗಂಡಸ್ಥಳ, ಕೆನ್ನೆ; ಕಡೆ, ಮೂಲೆ; ಚಾಪೆ; ಹಗ್ಗ.

ಕಟಕ ಪರ್ವತದ ನಡುಭಾಗ; ನಿತಂಬ; ಕಡಗ, ಬಳೆ, ಹಸ್ತಾಭರಣ; ರಾಜಧಾನಿ; ದಂತ; ಅಭಿನಯದ ಒಂದು ಹಾವ.

ಕಟಕಸೆ ಬಡಿದು ತುಂಡು ಮಾಡು.

ಕಟಕಿ ವ್ಯಂಗ್ಯ ನುಡಿ, ಚುಚ್ಚು ಮಾತು; ಹಾಸ್ಯದ ಮಾತು.

ಕಟವಾಯಿ ಕಡೆಬಾಯಿ; ಬಾಯ ಕೊನೆ ಭಾಗ.

ಕಟಾಕ್ಷ ಕೆನ್ನೆ ವ್ಯಾಪಿಸುವ ನೋಟ; ಕಡೆಗಣ್ಣ ನೋಟ.

ಕಟಾಗ್ನಿ ಹುಲ್ಲಿನ ಬೆಂಕಿ.

ಕಟಾವು ಪೈರು ಕತ್ತರಿಸುವಿಕೆ, ಕೊಯಿಲು.

ಕಟಾಹ (ಸಂ) ಕಡಾಯಿ (ದ್ಭ), ಕೊಪ್ಪರಿಗೆ.

ಕಟಿ ನಡು, ಸೊಂಟ.

ಕಟಿಗ (ನೋಡು: ಕಟುಕ).

ಕಟಿಬಂಧ ನೇವಳ, ಉಡಿದಾರ.

ಕಟಿಸೂತ್ರ ಉಡಿದಾರ, ಉಡಿನೂಲು; ಒಡ್ಯಾಣ, ಡಾಬು.

ಕಟು ಕಾರ; ನಿಂದೆ; ಕೆಟ್ಟ ಕೆಲಸ; ಕೆಟ್ಟ ವಾಸನೆ; ಸಂಪಗೆ; ಕ್ರೂರ.

ಕಟುಕ ಕೊಲೆಗಾರ, ಮಾಂಸಕ್ಕಾಗಿ ಪ್ರಾಣಿಗಳನ್ನು ಕೊಲ್ಲುವವ, ಕಸಾಯಿ; ಕಾರ.

ಕಟೂಕ್ತಿ ಬಿರುನುಡಿ, ಕ್ರೂರನುಡಿ; ಚುಚ್ಚು ಮಾತು.

ಕಟೆ (ಕಡೆ) ಮಂಥನಮಾಡು, ತಿಕ್ಕು.

ಕಟ್ಟ (ದ್ಭ) ಕಷ್ಟ (ಸಂ).

—ಕಡೆ ತೀರ, ಕೊನೆಯ.

ಕಟ್ಟಿಗೆ ಬಸಿಯಾಗಿ, ಕಾರವಾಗಿ, ತೀಕ್ಷ್ಣವಾಗಿ.

ಕಟ್ಟಚ್ಚರಿ ಕಡು ವಿಸ್ಮಯ, ಬಹಳ ಆಶ್ಚರ್ಯ.

ಕಟ್ಟಡ ಕಟ್ಟೋಣ, ಕಟ್ಟದ ಮನೆ; ಕಟ್ಟುವ ಕೆಲಸ.
ಕಟ್ಟಡವಿ ದಟ್ಟ ಕಾಡು.
ಕಟ್ಟಣಕ ಸುಂದರವಾದ; ಪ್ರಬಲವಾದ.
ಕಟ್ಟಣಿ ಸುಂದರ ಸ್ತ್ರೀ.
ಕಟ್ಟಲೆ (ಕಟ್ಟಳೆ) ನಿಯಮ, ಪದ್ಧತಿ.
ಕಟ್ಟಪ್ಪಣೆ ಕಟ್ಟಾಜ್ಞೆ, ಮಾಡಲೇ ಬೇಕಾದ ಅಪ್ಪಣೆ.
ಕಟ್ಟರಣ್ಯ ದಟ್ಟವಾದ ಕಾಡು, ದೊಡ್ಡ ಕಾಡು.
ಕಟ್ಟಳವಿ ಬಿಗಿಯಾದ ಹೋರಾಟ, ಭೀಕರ ಕಾಳಗ; ಪ್ರಬಲ ಶಕ್ತಿ.
ಕಟ್ಟಾಣಿ ಅಮೂಲ್ಯ; ಉರುಟಾಗಿ ದೊಡ್ಡದಾಗಿರುವ; ಉರುಟುಮಣಿಗಳ ಸರ.
ಕಟ್ಟಾಣೆ ಶಾಸನ, ವಿಧಿ, ಆಜ್ಞೆ, ಕಟ್ಟಪ್ಪಣೆ; ಕಠಿಣ ಆಜ್ಞೆ.
ಕಟ್ಟಾಯ ಬಹಳ ಸಾಮರ್ಥ್ಯ; ಬಿಗಿಯಾದ ನಿಯಮ; ಮಹಾಪ್ರತಿಜ್ಞೆ; ನಿಷ್ಕರ್ಷೆ.
ಕಟ್ಟಾಸರು ಕಡು ಬಾಯಾರಿಕೆ.
ಕಟ್ಟಾಳು ವೀರಭಟ, ಸಮರ್ಥ ಸೈನಿಕ, ಶೂರ.
—ತನ ವಿಶೇಷ ಪರಾಕ್ರಮ.
ಕಟ್ಟಿಗೆ (ದ್ಭ) ಕಾಷ್ಟಿಕಾ (ಸಂ), ಉರಿಸುವ ಮರ, ಉರುವಲು.
ಕಟ್ಟಿರುವೆ ಕ್ರೂರವಾಗಿ ಕಚ್ಚುವ ಇರುವೆ.
ಕಟ್ಟು ಸುತ್ತು, ಬಿಗಿ; ತಡೆ; ಕಡೆ; ನಿಯಮ; ನಿರ್ಬಂಧ; ದಂಡೆ; ಸಾರ; ನೀರ್ಕಟ್ಟೆ.
—ಕಡಿ ಮೇರೆಮೀರು, ಮರ್ಯಾದೆ ಮೀರು; ನಿಯಮ ಉಲ್ಲಂಘಿಸು; ವ್ಯಾಕುಲಪಡು.
—ಪಾಡು ನಿರ್ಬಂಧ, ಕಟ್ಟಳೆಯ ತಡೆ.
ಕಟ್ಟುಕತೆ ಕಾಲ್ಪನಿಕ ಕತೆ; ಸುಳ್ಳು.
ಕಟ್ಟುದ್ದ ಉನ್ನತ; ಅತಿ ದೀರ್ಘ.
ಕಟ್ಟುವಡೆ ಕಟ್ಟಲ್ಪಡು; ಮನಸ್ಸು ಬಿಗಿಹಿಡಿ.
ಕಟ್ಟೆ ಕಲ್ಲುಮಣ್ಣುಗಳಿಂದ ಮಾಡಿದ ಪೀಠ; ನೀರನ್ನು ತಡೆಯುವ ದಂಡೆ; ಗಂಟು.
ಕಟ್ಟೆಸಕ ಬಲು ಚೆಂದ; ಅತಿ ಚೆಲುವು.
ಕಟ್ಟೆಸುಗೆ ಬಲವಾದ ಬಾಣಪ್ರಯೋಗ.
ಕಟ್ಟೇಕಾಂತ (ಏಕಾಂತ=ಗುಟ್ಟು) ಬಹಳ ಗುಟ್ಟು, ಅತಿ ರಹಸ್ಯ.
ಕಟ್ಟೊರಲಿಕೆ ಬಹಳ ಕೂಗಾಟ.
ಕಟ್ಟೊಲ್ಮೆ ಬಹು ಪ್ರೀತಿ.
ಕಠಾರಿ ತಿವಿಯುವ ಆಯುಧ; ಬರ್ಚಿ.
ಕಠಿನ (ಕಠಿಣ) ಕ್ರೂರ; ಗಟ್ಟಿ.
ಕಠಿನೀ ಸೀಮೆಸುಣ್ಣ; ಚೋಕು.
ಕಠೋರ ಗಟ್ಟಿ, ಕಠಿನ; ಪೂರ್ಣ.
ಕಡ ಸಾಲ, ಋಣ; ಎರವು; ಕರ್ತವ್ಯ.
ಕಡಚಲು (ಕಡೆಚಲು).
ಕಡತ ಅರಿವೆ ಪುಸ್ತಕ; ಓಲೆ ಗರಿ ಪುಸ್ತಕ.
ಕಡನ್ (ನೋಡು: ಕಡ).
ಕಡದುಕ್ಕ ಕಣಜದ ಹುಳು; ಒಂದು ಜಾತಿಯ ಕಡಿಯುವ ನೊಣ.
ಕಡನೆ ಕಮ್ಮಿ, ಸ್ವಲ್ಪ.
ಕಡಲು ಸಮುದ್ರ; ಜಲಾಶಯ.
ಕಡಲೆ ನವಧಾನ್ಯಗಳಲ್ಲಿ ಒಂದು.
ಕಡಲ್ಗಿಚ್ಚು ಕಡಲೊಳಗಿರುವ ಬೆಂಕಿ; ಬಡಬಾನಲ.
ಕಡವ (ದ್ಭ) ಕದಯ (ಸಂ), ಕದ; ಈಚಲ ಮರ; ಕಾರ್ತಸ್ವರ, ಕಡವರ.
ಕಡವರ (ದ್ಭ) ಕಾರ್ತಸ್ವರ (ಸಂ), ಆರ್ತಧ್ವನಿ; ಚಿನ್ನ, ಬಂಗಾರ; ನಿಧಿ; ಬಯಕೆ.
ಕಡವಸ ಚರ್ಮ; ಕೃಷ್ಣಾಜಿನ; ಹಾಸುವ ಇಲ್ಲವೆ ಹೊದೆವ ಚರ್ಮ.
ಕಡವಳ ದೇವತೆ.
ಕಡವು (ಕಡು) ಹೊಳೆ ದಾಟುವ ಸ್ಥಳ.
ಕಡವೆ ಜಿಂಕೆ ವರ್ಗದ ಪ್ರಾಣಿ.

**ಕಡಸಿಗೆ** ಶೃಂಗಿ; ಕೊಡಸಿಗ; ಒಂದು ಕಹಿ ಔಷಧಿ ಗಿಡ.
**ಕಡಸು** ಬೆಳೆದ ಹೆಂಗರು; ಕರುಹಾಕುವ ಪ್ರಾಯಕ್ಕೆ ಬಂದ ದನಕರು.
**ಕಡಹ** ಕಡೆಯುವಿಕೆ.
**ಕಡಂಗರ** ಹುಲ್ಲು; ಹೊಟ್ಟು.
**ಕಡಂಗು** ಉತ್ಸಾಹಗೊಳ್ಳು; ಉತ್ಸಾಹ.
**ಕಡಂದುರು** ಕಣಜದ ಹುಳು.
**ಕಡಂಪರೀಯು** ಹುಲ್ಲು ತಿನ್ನುವ ದನ ಮೊದಲಾದುವು; ಸಸ್ಯಾಹಾರಿ ಮೃಗಗಳು.
**ಕಡಂಬ** (ಕದಂಬ) ಈಚಲು ಮರ.
**ಕಡಾಯ** (ದ್ಭ) ಕಡಾಹ (ಸಂ), ದೊಡ್ಡ ಪಾತ್ರೆ.
**ಕಡಾವು** (ಕಡಾವಿಗೆ) ಪಾದುಕೆ.
**ಕಡಿ** ಕತ್ತರಿಸು; ಕಚ್ಚು; ತುಂಡು, ಹೋಳು.
— **ದ** ಕಡಿತಗೊಂಡ; ತುಂಡಾದ.
— **ಕಡಿದು** ತುಂಡರಿಸಿ.
— **ಕಂಡ** ಕಡಿದು ತುಂಡುಮಾಡಿದುದು.
— **ಕು** ತುಂಡು, ಖಂಡ, ಭಾಗ.
— **ಭಾಗ** ಕಡಿದ ಅಂಶ.
**ಕಡಿಕೆ** ಕಣಜ, ಧಾನ್ಯದ ತಿರಿ.
**ಕಡಿತ** ಕಡಿಯುವಿಕೆ; ಹಿಂದಿನ ಕಾಲದ ಮೇಣದ ಅರಿವೆಯ ಪುಸ್ತಕ; ಚರ್ಮ.
— **ಕಾರ** ಕಡಿಯುವವ; ಬರೆಯುವಾತ.
**ಕಡಿದು** ಕಡು; ಕಡುಪು; ಕ್ರೂರ; ನೆಟ್ಟಗೆ ಇಳಿಯುವ.
**ಕಡಿಮೆ** (ಕಡಮೆ).
**ಕಡಿಯಣ** ಕಡಿವಾಣ; ಕುದುರೆಯನ್ನು ಹತೋಟಿಗೆ ತರಲು ಅದರ ಬಾಯಿಗೆ ತೊಡಿಸುವ ಸಾಧನ.
**ಕಡಿವಾಣ** ಕಡಿಯಣ.
**ಕಡು** ಬಹಳ; ಹೆಚ್ಚಿನ; ತೀರ; ತೀವ್ರ; ಅತಿ; ಕಡಿದಾದ ದಾರಿ; ಕಳು, ಕಡವು, ನದಿ ದಾಟುವ ಸ್ಥಳ, ತಾರಿ.
**ಕಡುಕೂರದ** ಹೆಚ್ಚೊಂದು ಪರಾಕ್ರಮವಿಲ್ಲದ; ಬಹಳ ಮೆಚ್ಚಿಕೆ ಇಲ್ಲದ.
**ಕಡುಕೆಯ್** ವೇಗ ತೋರಿಸು; ತೀವ್ರವಾಗು; ಸಾಮರ್ಥ್ಯ ತಳೆ.
**ಕಡುಗ** (ದ್ಭ) ಖಡ್ಗ (ಸಂ), ಕತ್ತಿ.
**ಕಡುಗಕ್ಕಸ** ಬಲು ಕ್ರೂರ; ಬಹಳ ಕರ್ಕಶ.
**ಕಡುಗಡಿಗ** ಬಲು ಕ್ರೂರ, ಕೊಲೆಗೆ ಸಿದ್ಧನಾದವ; ಹಿಂಸಕ.
**ಕಡುಗಲಿ** ಅತಿ ಪರಾಕ್ರಮಿ, ಬಹಳ ವೀರ.
**ಕಡುಗಂಪು** ಬಲು ಪರಿಮಳ.
**ಕಡುಗಾಯ್** ಬಲುವಾಗಿ ಕಾಯು; ಬಲು ಬಿಸಿಯಾಗು; ರೇಗು; ಕಸುಗಾಯಿ.
**ಕಡುಗು** ಪೌರುಷ; ಉತ್ಸಾಹ; ಇಚ್ಛೆ; ಸಿಟ್ಟುಗೊಳ್ಳು; ಕುದಿ; ಕಠಿಣವಾಗು, ಬಿರುಸಾಗು.
**ಕಡುಗೇಡುಗ** ಬಲು ಉಪದ್ರವಿ, ಬಲು ಕೇಡಿಗ.
**ಕಡುದವಕ** ತೀರ ಅವಸರ, ಬಲು ಆತುರ.
**ಕಡುಪು** ಅಧಟು; ಶೌರ್ಯ; ಕೊಬ್ಬು; ಹೆಮ್ಮೆ, ದರ್ಪ; ಕಡಿದಾದ ಬಣ್ಣ; ಕಪ್ಪೊತ್ತುವ ಬಣ್ಣ.
**ಕಡುಬೇಸಿಗೆ** ಬಲು ಬೇಸಿಗೆ; ತೀಕ್ಷ್ಣ ಉಷ್ಣಕಾಲ.
**ಕಡುಹು** (ಕಡುಪು) ಬಲ; ಪರಾಕ್ರಮ, ಶೌರ್ಯ.
— **ಕಾರ** ಬಲಿಷ್ಠ; ಪರಾಕ್ರಮಿ.
**ಕಡೆ** (ಕಡೆವ) ಕಟೆ, ಮಥಿಸು; ಕಳೆ; ತಿಕ್ಕು; ಅವಸಾನ, ಸಾವು; ತುದಿ; ರಂಗವಲ್ಲಿ.
— **ಚಲು** ಕಡೆಯುವ ಸಾಧನ.
— **ಪ** (ಕಡೆತ) ಕಡೆಯುವಿಕೆ, ಮಂಥನ.
**ಕಡೆಗಣ್** ಕಣ್ಣಿನ ತುದಿ, ಅಪಾಂಗ.

—ಇಸು ಅಲಕ್ಷಿಸು; ಕೀಳಾಗಿ ಎಣಿಸು; ತಿರಸ್ಕರಿಸು, ಮುಗಿಸು; ಕೊನೆಗಾಣಿಸು.

—ಉ ಕಣ್ಣಿನ ತುದಿ; ಕೇಕರ; ಓರೆ ನೋಟ.

—ಚು ಕೀಳಾಗಿ ತಿಳಿ; ತಾತ್ಸಾರ ಮಾಡು.

ಕಡೆಗಳ ಕುತ್ತಿಗೆಯ ತುದಿ.

ಕಡೆಗಂದಿ (ಕಡೆಗಂತಿ) ಕೊನೆಯ ಬಾರಿ ಕರುಹಾಕಿದ ದನ; ಕೊನೆಯ ಕರು.

ಕಡೆಗಾಲ ಅಂತ್ಯ, ಕೊನೆಗಾಲ; ಪ್ರಲಯ ಕಾಲ.

ಕಡೆಗೋಲು ಮೊಸರು ಕಡೆವ ಕೋಲು; ಬೆಂಕಿ ಕಡೆಯುವ ದಂಡ.

ಕಡೆಬಾಗಿಲು (ಕಡೆವಾಗಿಲು) ಕೊನೆಯ ಬಾಗಿಲು, ತುದಿಯ ಬಾಗಿಲು.

ಕಡೆಯ (ದ್ಭ) ಕಟಕ (ಸಂ), ಚಿನ್ನದ ಬಳೆ.

ಕಡೆವಗಲ್ ಕೊನೆಯ ಹಗಲು; ಸಾಯಂ ಕಾಲ, ಹಗಲಿನ ಕೊನೆ.

ಕಡೆಹಾಯ್ ದಾಟು; ಅಪಾಯದಿಂದ ದೂರಾಗು.

ಕಡ್ಡ ಧೈರ್ಯ; ಕೆಡ್ಡ, ಆನೆ ಹಿಡಿಯುವ ಕುಳಿ; ಕರ್ಪು; ಮೂರ್ಖ.

—ತನ ದಿಟ್ಟತನ, ಧೈರ್ಯ; ಮೂರ್ಖತೆ.

ಕಡ್ಡಣಿಗೆ ಜಡೆ.

ಕಡ್ಡವಾರ ಗಥಾಯುದ್ಧ.

ಕಡ್ಡಾಯ ಬಲವಂತ, ಮಾಡಲೇ ಬೇಕಾದ.

ಕಡ್ಡಿ ಕಾಷ್ಠ, ಸಪುರ ಕೋಲು; ಕಡ್ಡೆ, ದುಷ್ಟೆ.

ಕಣ್ ಕಣ್ಣು; ನೋಟ.

ಕಣ (ಕಳ) ಯುದ್ಧರಂಗ; ಅಂಗಳ; ಕಾಳಿನ ಚೂರು; ಜೀವಕಣ.

ಕಣಕ ಹಸಿ ಹಿಟ್ಟು.

ಕಣಗಿಲೆ ಕಣಗಿಲು, ಕರವೀರ, ನಾಯಿ ಸಂಪಿಗೆ.

ಕಣಜ ಧಾನ್ಯ ತುಂಬುವ ಕಡಿಕೆ, ಮರದ ಹಲಗೆಗಳಿಂದ ಮಾಡಿದ ಧಾನ್ಯದ ಕೋಣೆ; ಕಣಜಲು ಹುಳು.

ಕಣಯ ಆಯುಧ ವಿಶೇಷ.

ಕಣಾ (ಕಾಣಾ) ಕಂಡೆಯಾ; ಅಲ್ಲವೆ.

ಕಣಿ ಭವಿಷ್ಯತ್ತು; ಮುಂದಿನ ಶುಭಾಶುಭ, ಶಕುನ; ಖನಿ (ಸಂ), ಗನಿ, ಉತ್ಪತ್ತಿಸ್ಥಾನ.

—ಯನ್ ಕಣಿ ಹೇಳುವವ; ಭವಿಷ್ಯಜ್ಞ; ಕೊರವಂಜಿ.

ಕಣಿಕಾಲ್ ಮೊಣಕಾಲಿಂದ ಕೆಳಕಾಲು.

ಕಣಿಕು ಕಣಿಕೆ ಹುಲ್ಲಿನ ದಂಟು; ತೆನೆ ತೆಗೆದ ಜೋಳ, ನೆಲ್ಲು ಮೊದಲಾದುದು.

ಕಣಿಲೆ (ಕಳಿಲೆ) ಬಿದಿರಿನ ಎಳೆಯ ಮೊಳಕೆ.

ಕಣಿವೆ ಎರಡು ಬೆಟ್ಟ ಇಲ್ಲವೆ ಪರ್ವತಗಳ ಎಡೆಯ ತಗ್ಗು; ಕೊರಕಲು.

ಕಣಿಶ ತೆನೆ.

ಕಣೆ ಬಾಣ; ಕೋಲು.

—ಕರೆ (ಕಣೆಗರೆ) ಬಾಣಸುರಿಸು.

ಕಣೆಯ ನ್ಯಾಯ; ಕಥೆ; ಒಕ್ಕಣೆ.

ಕಣ್ಕಟ್ಟು ನೋಟದಿಂದ ಮರೆಯಿಸು; ಮೋಸ, ಐಂದ್ರಜಾಲ; ಭ್ರಾಂತಿ ಬೀಸು.

ಕಣ್ಗಡೆ ಕಣ್ಣಿನ ತುದಿ; ತುದಿಗಣ್ಣು.

ಕಣ್ಗಿದಿರು ಕಣ್ಣಿನ ಹೊಳಪು.

ಕಣ್ಗಾವುದ ನಿರೀಕ್ಷಣೆ.

ಕಣ್ಗಿಚ್ಚು ಕಣ್ಣಿಂದ ಹೊರಟ ಬೆಂಕಿ.

ಕಣ್ಗಿಸುರ್ ಕಣ್ಣಿನ ನೋವು; ದೃಷ್ಟಿದೋಷ.

ಕಣ್ಗೊನೆ ಕಣ್ತುದಿ, ತುದಿಗಣ್ಣು, ಕಡೆಗಣ್ಣು.

ಕಣ್ಬವರ್ು ನೋಟದಿಂದ ಬೆದರಿಸುವಿಕೆ.

ಕಣ್ಣ (ದ್ಭ) ಕೃಷ್ಣ (ಸಂ).

ಕಣ್ಣಪ್ಪ (ಕಣ್ಣಮಯ್ಯ) ಕಣ್ಣಂತಿರುವ; ಕರ್ಣಪಾರ್ಯನೆಂಬ ಕವಿ.

ಕಣ್ಣಮಣಿ ಕಣ್ಣಿಗೆ ಪ್ರಿಯವಾದವನು; ಹಿತವ.

ಕಣ್ಣಲರ್ ಹೂವಿನಂಥ ಕಣ್ಣು.

ಕಣ್ಣಳವು ಕಣ್ಣಿನ ಶಕ್ತಿ; ಕಣ್ಣಿಗೆ ಸಾಧ್ಯವಾದುದು.

ಕಣ್ಣಿವಲೆ (ಕಣ್ಣಿಬಲೆ) ನಾರಿನ ಬಲೆ.

ಕಣ್ಣೀರು ಕಂಬನಿ, ಅಶ್ರು.

ಕಣ್ಣು (ಕಣ್) ನೇತ್ರ, ನಯನ; ತೂತು; ಕಬ್ಬು ಮೊದಲಾದುವುಗಳ ಗಿಣ್ಣು.

—ಆರ್ ಕಣ್ಣುತುಂಬು; ಕಣ್ಣುಬತ್ತು.

—ಆರೆ ಕಣ್ತುಂಬ; ಪ್ರತ್ಯಕ್ಷವಾಗಿ.

ಕಣ್ಣೆಲೆ ಕಣ್ಣಿಗೆ ವಿಶ್ರಾಂತಿಸ್ಥಾನ.

ಕಣ್ಣೆವೆ ಕಣ್ಣಿನ ಎವೆ; ರೆಪ್ಪೆಕೂದಲು.

ಕಣ್ಣೆಂಜಲು ದೃಷ್ಟಿದೋಷ; ನೋಟದಿಂದ ಬರುವ ಹಾನಿ; ಸೋಂಕು.

ಕಣ್ತಣಿ ಕಣ್ಣಿಗೆ ತೃಪ್ತಿಯಾಗು; ನೋಡಿ ಸಂತೋಷವಾಗು.

ಕಣ್ತೆರವು ಕಣ್ಣು ತೆರೆಯುವಿಕೆ; ಕಣ್ಣಿಗೆ ವಿಶ್ರಾಂತಿ.

ಕಣ್ದಣಿ ಕಂಡು ದಣಿ; ನೋಡಿ ದಣಿ.

ಕಣ್ದೆರೆ ಕಣ್ಣನ್ನುತೆರೆ, ಅವಲೋಕಿಸು; ಎಚ್ಚರಗೊಳ್ಳು; ಕಣ್ಣ ರೆಪ್ಪೆ.

ಕಣ್ಬೊಳಲು ಕಣ್ಣಾಲಿಗಳನ್ನು ತಿರುವು; ಸುತ್ತ ನೋಡು.

ಕಣ್ಬಡಿಗ ಮೋಸಗಾರ.

ಕಣ್ಬರಿ ವಿವೇಕ, ವಿಚಾರ.

ಕಣ್ಬೀಲಿ (ಕಣ್+ಪೀಲಿ) ನವಿಲು ಗರಿ.

ಕಣ್ಬೇಟ ಕಣ್ಣು ಕಣ್ಣಿಗೆ ಭೇಟಿಯಾಗುವುದು; ನೋಟಗಳ ಮಿಲನ.

ಕಣ್ಬೊಲ ದೃಷ್ಟಿಪಥ; ನೋಡುವಷ್ಟು ಪ್ರದೇಶ; ದೃಷ್ಟಿಗೋಚರ.

ಕಣ್ಮಲರ್ ಹೂವಂತಿರುವ ಕಣ್ಣು; ಕಣ್ಣೆಂಬ ಹೂ.

ಕಣ್ಮಣಿ (ನೋಡು: ಕಣ್ಣಮಣಿ).

ಕಣ್ಮುಟ್ಟೆ ಕಣ್ಣಿಗೆ ಸಮೀಪ; ಕಣ್ಣಾರೆ; ಕಣ್ಣಿಣೆಯುವಷ್ಟು.

ಕಣ್ವ ಒಬ್ಬ ಋಷಿ. ಈತನು ಶಕುಂತಲೆಯ ಸಾಕುತಂದೆ.

ಕಣ್ವಾಪೆ (ಕಣ್ಪಾವೆ) ಕಣ್ಣಿನ ಗೊಂಬೆ, ಕಣ್ಣುಗುಡ್ಡೆ, ಕನೀನಿಕೆ.

ಕಣ್ಸುಳುಂಕು ಕಣ್ಣಿನ ಕಶ್ಮಲ.

ಕತ ಕೃತ (ಸಂ), ಕಪಟ; ಮಾಡಿದ್ದು; ಕಾರಣ.

—ಕ ಕೃತಕ, ಕಪಟ.

ಕತಕತಿಸು ಕುದಿಯು.

ಕತಕತನೆ ನೀರು ಕುದಿವ ಸದ್ದು.

ಕತಿ ಖತಿ (ಸಂ) ಕಿನಿಸು; ಸಿಟ್ಟು.

—ಕೊಳ್ ಸಿಟ್ಟಾಗು.

ಕತಿಪಯ ಕೆಲವು.

ಕತೆ (ದ್ಭ) ಕಥಾ (ಸಂ), ಹೇಳಿಕೆ.

ಕತ್ತರಿ ಕರ್ತರಿ (ಸಂ), ತುಂಡುಮಾಡುವ ಸಾಧನ.

—ಇಸು ತುಂಡುಮಾಡು; ನೆಟ್ಟಗೆಮಾಡು.

ಕತ್ತರಿವಾಣಿ ಮುಟ್ಟದರೆ ಕತ್ತರಿಸುವಂತಹ ನೀರು; ಕಟೂಕ್ತಿ; ನೀರನ್ನು ಕತ್ತರಿಸುವ ದೋಣಿಯ ಮುಂಗೋಟು.

ಕತ್ತಲು (ಕತ್ತಲೆ) ಅಂಧಕಾರ; ಮಬ್ಬು; ಬೆಳಕಿಲ್ಲದಿರುವಿಕೆ.

—ಇಸು ಕತ್ತಲು ಕವಿಸು.

ಕತ್ತಲೆಗುದ್ದು ಕತ್ತಲೆಯಲ್ಲಿ ಹುಡುಕಿಹೋಗುವ ಒಂದು ಆಟ.

ಕತ್ತಳ ಕೊಲೆ.

ಕತ್ತಿ ಖಡ್ಗ; ಕತ್ತರಿಸುವ ಸಾಧನ.

ಕತ್ತಿಗೆ ಕೃತ್ತಿಕಾ (ಸಂ); ನಕ್ಷತ್ರವೊಂದು; ಖಡ್ಗವಿಶೇಷ, ಕರ್ತಿಕಾ (ಸಂ).

ಕತ್ತು ಕೊರಳು, ಗೋಣು; ಉರಿಸು, ಹೊತ್ತಿಸು; ಬರಹ.

ಕತ್ತುರಿ (ದ್ಭ) ಕಸ್ತೂರಿ (ಸಂ).

—ಮಿಗ ಕಸ್ತೂರಿಯನ್ನು ಕೊಡುವ ಮೃಗ.

ಕತ್ತೆ ಒಂದು ಪಶು; ಗಾರ್ದಭ.
ಕಥಕ ಕಥೆ ಹೇಳುವವ.
ಕಥಕ್ಕಳಿ ಕೇರಳ ದೇಶದ ಒಂದು ನೃತ್ಯ ವಿಧಾನ; ಕಥೆ ಹೇಳುವ ಆಟ.
ಕಥನ ಕತೆ ಹೇಳುವಿಕೆ.
ಕಥಾನಕ ಕಥೆ ಹೇಳುವಿಕೆ; ಕಥಾಪ್ರಕರಣ.
ಕಥಾಭಿತ್ತಿ ಕತೆಯೊಳಗಿನ ವಸ್ತು.
ಕಥಾಲಾಪ ಕಥೆ ಹೇಳುವುದು; ಸಂಭಾಷಣೆ; ಮಾತುಕತೆ; ಹರಟೆ.
ಕಥಾಂತರ ಸರಣಿ ತಪ್ಪಿ ಮಾತಾಡುವಿಕೆ.
ಕದ ಬಾಗಿಲು, ದ್ವಾರ; ಮುಚ್ಚಳ.
ಕದಕ ಕಳ್ಳ; ಮೋಸಗಾರ.
ಕದಕದಪು ನಡುಕು, ಕಂಪನ.
ಕದಕದಿಸು (ಕದಕ್ಕದಿಸು) ನಡುಗು, ಕಂಪಿಸು.
ಕದಡಿ ಕರಡಿ, ಭಲ್ಲೂಕ.
ಕದಡು ಕಲಕಾಗು; ಕೆಸರಾಗು; ಗಲಿಬಿಲಿ; ತೊಂದರೆ; ನಡುಗಿಸು.
ಕದಧ್ವ (ಕತ್ = ಕೆಟ್ಟ, ಅಧ್ವ = ದಾರಿ) ಕೆಟ್ಟ ದಾರಿ; ಪಚ್ಚೆ ಕರ್ಪೂರ.
ಕದನ ಜಗಳ, ಕಾಳಗ, ಯುದ್ಧ.
—ಕಲಿ ಯುದ್ಧವೀರ.
ಕದನ್ನ ಕೀಳಾದ ಅನ್ನ; ಸವಿಯಿಲ್ಲದ ಅನ್ನ; ನಿಸ್ಸಾರ ಆಹಾರ.
ಕದಪು (ಕದಂಪು) ಕೆನ್ನೆ, ಗಲ್ಲ.
ಕದರ್ಥನ ತಿರಸ್ಕಾರ; ನೀಚಕಾರ್ಯ; ನಿರುಪಯೋಗವಾಗುವಿಕೆ; ಅರ್ಥಹೀನತೆ.
ಕದಲು (ಕದಡು) ಅಲ್ಲಾಡು.
ಕದಳಿ ಗುಂಪು, ಸಂದಣಿ; ಪತಾಕೆ, ಧ್ವಜ; ಬಾಳೆ.
ಕದಂಪು (ನೋಡು: ಕದಪು).
ಕದಂಬ (ಕಡಬ) ಒಂದು ಬಗೆಯ ಪರಿಮಳ ದ್ರವ್ಯ; ಸಮೂಹ; ದೇವತಾಯೋಗ್ಯವಾದ ಮರ; ಈಚಲ ಮರ; ಬನವಾಸಿಯಲ್ಲಾಳಿದ ಒಂದು ಅರಸು ಕುಲ; ಕಲಸನ್ನ.
ಕದಾಚನ ಯಾವಾಗಲೂ ಇಲ್ಲ.
ಕದಾಚಿತ್ ಒಮ್ಮೊಮ್ಮೆ; ಎಲ್ಲಾದರೂ.
ಕದಾಪಿ ಯಾವಾಗಲೂ, ಯಾವ ಸಮಯವೂ.
ಕದಾಳಿಕ ಧ್ವಜ.
ಕದಿ ಕದಿಯು, ಕಳವುಮಾಡು.
ಕದಿನ ಹಬ್ಬದ ಕಾಲದಲ್ಲಿ ಹಾರಿಸುವ ಸಣ್ಣ ಫಿರಂಗಿ.
ಕದಿರ್ (ಕದಿರು) ಧಾನ್ಯದ ತೆನೆ; ಕಿರಣ; ರಾಟೆಯಲ್ಲಿ ನೂಲು ಹೊರಡುವ ಕಡ್ಡಿ.
ಕದುಕು (ಕರ್ದುಂಕು) ಕಲುಕು; ಕಚ್ಚು.
ಕದುಪು ಮಂದೆ, ಹಿಂಡು.
ಕದುಬು ಮುತ್ತು, ಆವರಿಸು; ಒತ್ತಾಯ ಮಾಡು, ಬಲಾತ್ಕರಿಸು.
ಕದುಷ್ಣ ಸ್ವಲ್ಪ ಬಿಸಿ, ಬೆಚ್ಚಗೆ.
ಕದೃಕು (ನೋಡು: ಕದ್ರುಂಕು).
ಕದ್ದವಣೆ ರೋಮಾಂಚ.
ಕದ್ದಳಿಗ ಜಾಡ; ಸೇಕಾರರ ಜಾತಿ.
ಕದ್ದಿಕಾರ ವೀರ, ಪರಾಕ್ರಮಿ.
ಕದ್ರು ಪಿಂಗಲವರ್ಣ; ಒಂದು ಗ್ರಹ; ಸರ್ಪಗಳ ತಾಯಿ. ಕಾಶ್ಯಪನ ಹಲವು ಹೆಂಡಿರಲ್ಲಿ ಒಬ್ಬಳು.
ಕದ್ರುಂಕು (ಕರ್ದುಕು) ಕೊಕ್ಕಿಂದ ಕುಕ್ಕು, ಸೊಣೆ.
ಕದ್ವದ (ಕದ್ = ನೀಚ) ನೀಚ ಮಾತಾಡುವವ, ನೀಚ.
ಕನಕ (ಕನ್ = ಪ್ರಕಾಶಿಸು, ಪ್ರೀತಿಸು); ಜನಪ್ರಿಯವಾದ ಲೋಹ; ಹೊಳೆಯುವ ಲೋಹ; ಸುವರ್ಣ, ಚಿನ್ನ.
ಕನಕದಾಸ ಒಬ್ಬ ವೈಷ್ಣವ ಸಾಧು. ದಾಸ ಪಂಥದಲ್ಲಿ ಈತನು ಹೆಸರಾದವನು.
ಕನಕಾಕ್ಷ (ನೋಡು: ಹಿರಣ್ಯಾಕ್ಷ).

ಕನಕಾಚಲ ಬಂಗಾರದ ಬೆಟ್ಟ; ಮೇರು ಪರ್ವತ.
ಕನಕಾರವಿಂದ ಅರಿಸಿನ ತಾವರೆ; ಹೊಂದಾವರೆ.
ಕನರ್ (ಕನರು) ಹಣ್ಣಾಗದುದು; ಅಪಕ್ವವಾದುದು; ಒಂದು ಬಗೆಯ ಒಗರು; ಅಹಿತರುಚಿ; ಕೆಟ್ಟವಾಸನೆ.
ಕನಲ್ (ಕನಲು) ಸಿಟ್ಟು; ಬೇಗುದಿ; ಸಿಟ್ಟಾಗು, ರೇಗು.
—ಇಕೆ ಕೋಪ.
ಕನವನಿಪ ಭಯಂಕರವಾದ.
ಕನವರಿಸು ನಿದ್ರೆಯಲ್ಲಿ ಮಾತಾಡು; ಸ್ವಪ್ನದಲ್ಲಿ ನುಡಿ; ನೆನವರಿಕೆಮಾಡು.
ಕನಸು ಸ್ವಪ್ನ.
ಕನಂಬರಿ (ನೋಡು: ಕನವರಿಸು).
ಕನಿ ಪ್ರಕಾಶಿಸು.
ಕನಿಷ್ಕ ತುರುಷ್ಕ ಕುಲದ ಅರಸು. ಈತನು ಬುದ್ಧ ಮತಾವಲಂಬಿಯಾದನು.
ಕನಿಷ್ಠ ತೀರ ಕಡಮೆಯ; ಕಿರಿಯ.
ಕನೀನಿಕೆ ಕಣ್ಣಾಲಿ, ಕಣ್ಣುಗುಡ್ಡೆ.
ಕನೀಯ ಕಿರಿಯ, ಚಿಕ್ಕನ.
ಕನ್ನ ಕಳ್ಳರು ಕೊರೆದ ತೂತು; ಗೋಡೆ ಕೊರೆಯಲು ಕಳ್ಳರು ಉಪಯೋಗಿಸುವ ಸಾಧನ; ಕನ್ನಗತ್ತರಿ.
—ಗಾರ ಕನ್ನಹಾಕುವವ.
ಕನ್ನಡ ಕರ್ನಾಟ, ಕರ್ನಾಟಕ, ಕರ್ಣಾಟಕ; ಒಂದು ರಾಗದ ಹೆಸರು.
ಕನ್ನಡಕ ಉಪನೇತ್ರ, (ಛಷ್ಮ).
ಕನ್ನಡವಕ್ಕಿ ಗಿಳಿ.
ಕನ್ನಡಿ ಬಿಂಬ ನೋಡುವ ಸಾಧನ; ದರ್ಪಣ.
ಕನ್ನಮಾಡ ಕನ್ನಡಿಗಳಿಂದ ಹೊದೆಸಿದ ಮನೆ.
ಕನ್ನವುರ (ದ್ಭ) ಕರ್ಣಪೂರ (ಸಂ), ಕಿವಿಯ ಅಲಂಕಾರ.
ಕನ್ನಿಕೆ (ದ್ಭ) ಕನ್ಯಕಾ (ಸಂ), ಮದುವೆಯಾಗದ ಹುಡುಗಿ, ಕುಮಾರಿ; ಕಿರಿವಯಸ್ಸಿನ ಬಾಲೆ.
ಕನ್ನೆ ಕನ್ಯೆ, ಕನ್ಯಾ (ಸಂ), ಮದುವೆಯಾಗದ ಹುಡುಗಿ, ಎಳವಯಸ್ಸಿನ ಹುಡುಗಿ; ಮೇಷದಿಂದ ಎಣಿಸಲು ಆರನೆಯ ರಾಶಿ; ದುರ್ಗಾದೇವಿ.
—ವೆಣ್ ಮದುವೆಯಾಗದ ಹೆಣ್ಣು.
ಕನ್ನೆವಾಡ (ನೋಡು: ಕನ್ನೆಮಾಡ).
ಕನ್ಯಾಕುಮಾರಿ ದುರ್ಗೆ; ಕೊಮೊರಿನ್ ಭೂಶಿರ.
ಕನ್ಯಾಕುಬ್ಜ ಕುಶನಾಥನ ಮಕ್ಕಳಾದ ನೂರು ಕನ್ಯೆಯರನ್ನು ವಾಯು ಮೋಹಿಸಿದನೆಂದೂ, ಅವರು ಅವನನ್ನು ವರಿಸಲು ಒಪ್ಪದಿರಲು, ವಾಯು ಶಪಿಸಿ ಅವರನ್ನು ಕುಬ್ಜರನ್ನಾಗಿ ಮಾಡಿದನೆಂದೂ ಕಥೆ; ಈಗಿನ ಕನೋಜ; ಕುಳ್ಳಾದ ಕನ್ನೆಯರ ಊರು.
ಕನ್ಯಾರ್ಥಿ ಕನ್ಯೆಯನ್ನು ಮದುವೆಯಾಗಲು ಇಚ್ಛಿಸಿ ಬರುವವ.
ಕನ್ಯಾವರಣ ಕನ್ಯೆಯನ್ನು ಕೇಳುವುದು.
ಕನ್ಯಾಶುಲ್ಕ ವಧುದಕ್ಷಿಣೆ; ಕನ್ಯೆಯನ್ನು ಪಡೆಯಲು ಅವಳ ತಾಯಿತಂದೆಗಳಿಗೆ ಕೊಡುವ ಹಣ.
ಕನ್ಯೆ ಕನ್ನೆ (ದ್ಭ).
ಕಪಟ ಮೋಸ; ಕುತಂತ್ರ.
ಕಪಡ ಬಟ್ಟೆ; ಕರ್ಪಟ (ಸಂ).
ಕಪಲಿ (ಕಪಿಲೆ) ಯಾತ; ನೀರೆತ್ತುವ ಸಾಧನ.
ಕಪರ್ದ ಗಂಗೆಯಿಂದ ತೊಯ್ಯಲ್ಪಟ್ಟ ಜಡೆ ಮುಡಿ; ಶಿವನ ಜಡೆ.
ಕಪರ್ದಿ ಜಡೆಮುಡಿಯುಳ್ಳವ, ಶಿವ, ಮಹಾದೇವ.
ಕಪಾಟ (ಕವಾಟ) ಬಾಗಿಲಿನ ಮುಚ್ಚಳ; ನಿಲುಪೆಟ್ಟಿಗೆ.

ಕಪಾಲ ನೀರನ್ನು ತುಂಬುವ ಓಡು; ತಲೆಯೋಡು; ತಲೆಬುರುಡೆ; ಕೆನ್ನೆ.

ಕಪಾಲಿ ಶಿವ.

ಕಪಿ ಮಂಗ, ಕೋತಿ; ಕಪ್ಪಿ.

ಕಪಿತ್ಥ ಕಪಿಗಳಿಗೆ ಪ್ರಿಯವಾದ ಹಣ್ಣಿನ ಮರ, ಬೇಲದ ಮರ.

ಕಪಿಧ್ವಜ (ಕಪಿ=ಹನುಮಂತ) ಕಪಿಗುರುತಿನ ಧ್ವಜ ಉಳ್ಳವ, ಅರ್ಜುನ.

ಕಪಿಲ ಒಬ್ಬ ಪ್ರಾಚೀನ ಋಷಿ; ಈತನು ಸಾಂಖ್ಯ ತತ್ವಶಾಸ್ತ್ರ ರಚಿಸಿದವನು; ಕಂದು ಬಣ್ಣ.

ಕಪಿಲವಸ್ತು ಬುದ್ಧನ ಜನ್ಮಭೂಮಿ, ರೋಹಿಣಿ ನದಿಯ ಮೇಲಿನ ಪಟ್ಟಣ.

ಕಪಿಲೆ ಹಳದಿ ಕಂದು ಬಣ್ಣ; ಕೌಲಿ ದನ.

ಕಪಿಂಜಲ ಲಾವುಗೆ ಹಕ್ಕಿ; ಒಬ್ಬ ಋಷಿಯ ಹೆಸರು.

ಕಪೋತ (ಕ=ವಾಯು, ಪೋತ=ಮರಿ), ಹಾರುವುದರಲ್ಲಿ ಗಿಳಿಯ ಮರಿಯಂತಿರುವುದು; ಪಾರಿವಾಳ, ಪಾರಿವ.

ಕಪೋತಾಂಜನ ಸುರಮಾ.

ಕಪೋಲ ಗಂಡಸ್ಥಳ, ಕೆನ್ನೆ; ಗಲ್ಲ.

ಕಪ್ಪ ಪೊಗದಿ; ಸಾಮಂತರು ಚಕ್ರವರ್ತಿಗೆ ಕೊಡುವ ಕಾಣಿಕೆ; ವ್ರತದ ಗುರುತಾಗಿ ಧರಿಸುವ ಬಳೆ.

ಕಪ್ಪಡ ಕರ್ಪಟ (ಸಂ), ಬಟ್ಟೆ, ಅರಿವೆ.

ಕಪ್ಪಲ್ (ಕಪ್ಪಲು) ಹಡಗು.

ಕಪ್ಪಿ ಎರಡು ಮೂರು ಚಕ್ರಗಳಿರುವ ರಾಟೆ.

ಕಪ್ಪು (ಕರ್ಪು) ಆನೆಗಳನ್ನು ಹಿಡಿಯಲು ತೋಡಿದ ಕುಣಿ; ಕರಿ ಬಣ್ಣ; ಅಗೆ.

ಕಪ್ಪುರ ಕರ್ಪೂರ (ಸಂ), ಪಚ್ಚಕರ್ಪೂರ; ರಸಕರ್ಪೂರ.

ಕಬಟ ಕಪಟ (ಸಂ), ಮೋಸ.

ಕಬರಿ ಕೇಶಪಾಶ; ಜಡೆ, ತುರುಬು.

ಕಬಳ (ಕವಳ) ತುತ್ತು; ಬೇಡ.

ಕಬಂಧ (ಕ=ತಲೆ) ತಲೆ ಕತ್ತರಿಸಿದ ಮುಂಡ; ಮುಂಡ, ಅಟ್ಟೆ, ತಲೆಯಿಲ್ಲದೆ ಕುಣಿಯುವ ದೇಹ; ರಾಹು; ಧೂಮಕೇತು; ನೀರು. ಪ್ರಾಚೀನಕಾಲದ ಒಬ್ಬನು ಶಾಪದಿಂದ ರಕ್ಕಸನಾಗಿ ಇಂದ್ರನ ಮೇಲೆ ಯುದ್ಧಕ್ಕೆ ಹೋಗಿ ರುಂಡವನ್ನು ಕಳೆದುಕೊಂಡನು. ಅರಣ್ಯ ಸಂಚಾರಿಗಳಾದ ರಾಮಲಕ್ಷ್ಮಣರನ್ನು ಈತನು ಕಾಡಲು, ಅವರಿಂದ ಕಡಿಯಲ್ಪಟ್ಟು ಅವನ ಶಾಪ ವಿಮೋಚನೆಯಾಯಿತು.

ಕಬ್ಬ (ದ್ಭ) ಕಾವ್ಯ (ಸಂ), ಕವಿತೆ.
— ಇಗ ಕವಿ, ಕಾವ್ಯಕರ್ತೃ.

ಕಬ್ಬಾರೆ ನಾರಾಯಣಿ ಪಕ್ಷಿ; ಕೊಕ್ಕರೆ ವರ್ಗದ ಹಕ್ಕಿ.

ಕಬ್ಬಿ ಕಡಿವಾಣ.

ಕಬ್ಬಿಣ ಒಂದು ಲೋಹ, ಕರ್ಬೊನ್.

ಕಬ್ಬು ಇಕ್ಷು, ಹುಲ್ಲಿನ ಜಾತಿಗೆ ಸೇರಿದ ಸಿಹಿಯಾದ ಕಾಂಡವುಳ್ಳ ಗಿಡ.

ಕಬ್ಬುನ (ನೋಡು: ಕಬ್ಬಿಣ).

ಕಬ್ಬುವಿಲ್ ಕಬ್ಬಿನ ಬಿಲ್ಲು; ಮನ್ಮಥನ ಬಿಲ್ಲು.

ಕಬ್ಬುವಿಲ್ಲ ಕಬ್ಬೇ ಬಿಲ್ಲಾಗಿ ಉಳ್ಳವ; ಮನ್ಮಥ, ಕಾಮ.

ಕಬ್ಬೊಗೆ (ಕರಿದು+ಹೊಗೆ) ಕಪ್ಪಾದ ಹೊಗೆ.

ಕಮಠ (ಕ=ನೀರು) ನೀರಲ್ಲಿ ಮನೆಮಾಡಿಕೊಂಡಿರುವ ಜಂತು, ಆವೆ; ಸನ್ಯಾಸಿಗಳ ಜಲಪಾತ್ರ, ಕಮಂಡಲು.

ಕಮನ ಮನೋಹರ, ಸುಂದರ; ಕಾಮುಕ, ಕಾಮಿ; ಅಶೋಕ ವೃಕ್ಷ.

ಕಮನೀಯ ಮನೋಹರವಾದ; ಸುಂದರವಾದ; ಬಯಸಲು ಯೋಗ್ಯವಾದುದು.

ಕಮುನಚ್ಛದ (ಛದ=ರೆಕ್ಕೆ) ಸುಂದರವಾದ ರೆಕ್ಕೆಯುಳ್ಳದು; ಕಂಕಪಕ್ಷಿ, ಕಬ್ಬಾರೆ ಹದ್ದು.

ಕಮುರು (ಕವುರು) ಸುಟ್ಟ ವಾಸನೆ, ಹೊತ್ತಿದ ವಾಸನೆ; ದುರ್ವಾಸನೆ.

ಕಮುಲ (ಕಂ=ನೀರು, ಅಲ=ಅಲಂಕರಿಸು) ನೀರನ್ನು ಅಲಂಕರಿಸುವುದು, ತಾವರೆ; ತಾಮ್ರ; ಒಂದು ಜಾತಿಯ ಜಿಂಕೆ; ಸಾರಸ ಪಕ್ಷಿಯೆಂಬ ನೀರಹಕ್ಕಿ; ನೀರು.

—ಖಂಡ ತಾವರೆಗಳ ಗುಂಪು; ಪದ್ಮಾಕರ; ಸರೋವರ.

—ಜ ತಾವರೆಯಲ್ಲಿ ಹುಟ್ಟಿದವ; ಬ್ರಹ್ಮ.

ಕಮುಲಮುಖಿ ತಾವರೆಯಂತೆ ಮುಖವುಳ್ಳವಳು, ಸುಂದರಿ.

ಕಮುಲಾ ಕಮುಲೆ, ಲಕ್ಷ್ಮಿ; ಉತ್ತಮ ಸ್ತ್ರೀ; ಸುಂದರ ಸ್ತ್ರೀ.

—ಕುಮಾರ ಲಕ್ಷ್ಮಿಯ ಮಗ, ಕಾಮ.

ಕಮುಲಾರಿ (ಅರಿ=ಹಗೆ) ಚಂದ್ರ, ಶಶಿ.

ಕಮುಲಾಲಯೆ (ಆಲಯ=ಮನೆ) ತಾವರೆಯೇ ಮನೆಯಾಗಿ ಉಳ್ಳವಳು; ಲಕ್ಷ್ಮಿ.

ಕಮುಲಾಸನ (ಆಸನ=ಪೀಠ) ತಾವರೆಯೇ ಪೀಠವಾಗಿ ಉಳ್ಳವ, ಬ್ರಹ್ಮ.

ಕಮುಲಾಂಬಕ (ಅಂಬಕ=ಕಣ್ಣು) ತಾವರೆ ದಳದಂತೆ ಸುಂದರವಾದ ಕಣ್ಣುಳ್ಳವ, ಕಮುಲಾಕ್ಷ; ವಿಷ್ಣು; ಕೃಷ್ಣ.

ಕಮುಲಿನಿ ತಾವರೆ; ತಾವರೆ ಬೆಳೆಯುವ ಸ್ಥಳ; ತಾವರೆ ಉಳ್ಳವಳು.

ಕಮುಲೋದರ (ಉದರ=ಹೊಟ್ಟೆ) ಹೊಟ್ಟೆಯಲ್ಲಿ ಕಮುಲ ಉಳ್ಳವ; ವಿಷ್ಣು. (ಕಮುಲ=ಜಿಂಕೆ) ಚಂದ್ರ.

ಕಮುಂಡಲ ಜಲಪಾತ್ರೆ; ಒಳಗಡೆ ನೀರನ್ನು ಹಿಡಿದಿರುವುದು; ಪ್ಲಕ್ಷವೆಂಬ ಮರ.

ಕಮ್ಮ ಕಂಪು, ಪರಿಮಳ; ಕರ್ಮ (ಸಂ).

—ಗೆ ಕಮ್ಮನೆ, ಪರಿಮಳಿತವಾಗಿ.

—ನೆ ಪರಿಮಳಿತವಾಗಿ.

ಕಮ್ಮಟ ಅಕ್ಕಸಾಲೆಯ ಚಾವಡಿ; ಕೆಲಸದ ಮನೆ; ಟಂಕಸಾಲೆ.

—ಇ ಕಮ್ಮಟವಿರುವವ; ಅಕ್ಕಸಾಲಿ.

ಕಮ್ಮರ (ಕಮ್ಮಾರ) ಕರ್ಮಕಾರ (ಸಂ), ಲೋಹಕರ್ಮ ಮಾಡುವವ; ಕಮರಿಕೆ ಎಂಬ ಹಣ್ಣು.

ಕಮ್ಮರಿ ಪ್ರಪಾತ, ಇಳಿಜಾರು, ಝರಿ.

ಕಮ್ಮಂಗಳವೆ ಸುವಾಸನೆಯುಳ್ಳ ಬತ್ತ; ಗಂಧಶಾಲಿ ಬತ್ತ.

ಕಮ್ಮಂಗೋಲ ಪರಿಮಳಿಸುವ ಕೋಲುಳ್ಳವ; ಪರಿಮಳಿಸುವ ಬಾಣವುಳ್ಳವ; ಪುಷ್ಪಬಾಣ, ಕಾಮ, ಮನ್ಮಥ.

ಕಮ್ಮಾರ ಕರ್ಮಕಾರ; ಕಬ್ಬಿಣ ಕೆಲಸದವ.

—ಸಾಲೆ ಕಮ್ಮಾರನ ಕೆಲಸದ ಜಾಗ.

ಕಮ್ಮು (ಕಂಪು) ಪರಿಮಳ, ಸುವಾಸನೆ.

—ಇತು (ಕಮ್ಮಿತ್ತು) ಪರಿಮಳಯುಕ್ತ.

ಕಮ್ರು ಭೋಗಾಪೇಕ್ಷಿ, ಕಾಮುಕ; ಮನೋಹರ, ಸುಂದರ.

ಕಯ್ (ಕೆಯ್) ಕೈ, ಹಸ್ತ.

—ಕೊಡು ಮೋಸಕೊಡು; ಸಹಾಯ ಮಾಡು.

—ಕೊಳು ಸ್ವೀಕರಿಸು; ತೊಡಗು.

ಕಯ ಆಳದ ಜಲಾಶಯ, ನೀರಿನ ಗುಂಡಿ, ಮಡು.

ಕಯ್ಗಣ್ಮು ಹೆಚ್ಚಾಗು; ಕೈಮೀರು; ಕೈತೊಳೆ; ದಾಟಬರು; ಅತಿಕ್ರಮಿಸು.

ಕಯ್ಗೆಯ್ ಅಲಂಕರಿಸು; ರಕ್ಷಿಸು.

ಕಯ್ಗಳಿ ಕೈಮೀರು; ಅತಿಕ್ರಮಿಸು.

ಕಯ್ದು ಕೈಯದು, ಆಯುಧ; ಮುಗಿತ.

ಕಯ್ಮರೆ ಆಶ್ಚರ್ಯಪಡು, ವಿಸ್ಮಯಪಡು.

ಕಯ್ವರ್ ಕೈಗೆ ಬರು, ಫಲಿಸು, ಯಶಸ್ಸು ಹೊಂದು.
ಕಯ್ವಾರ ಹೊಗಳಿಕೆ.
ಕಯ್ವೊಲ ಹೊಲ, ಗದ್ದೆ, ಬಯಲು.
ಕರ ಕೈ; ಕಿರಣ; ತೆರಿಗೆ, ರಾಜನಿಗೆ ಕೊಡುವ ಹಣ ; ಕಪ್ಪ; ಆಲಿಕಲ್ಲು, ಆಣಿಕಲ್ಲು; ಆನೆಸೊಂಡಿಲು; ನಕ್ಷತ್ರ; ಅತಿಶಯ; ಉಂಟುಮಾಡುವ.
—ಜ ಉಗುರು; ವ್ಯಾಘ್ರನಖವೆಂಬ ಪರಿಮಳ ದ್ರವ್ಯ.
ಕರಕ (ಕರಗ).
ಕರಕನ್ನ ಹೊತ್ತಿಹೋದ ಅನ್ನ, ಅಡಿಸುಟ್ಟ ಅನ್ನ.
ಕರಕರೆ ವ್ಯಸನ, ಚಿಂತೆ; ರಗಳೆ.
—ಇಸು ವ್ಯಸನಕ್ಕೆಗುರಿಪಡಿಸು; ಹಿಂಸಿಸು; ಚಿಂತಿಸು.
ಕರಕಂಕಣ ನ್ಯಾಯ ಕಂಕಣ ಎಂಬ ಶಬ್ದಕ್ಕೆ ಕೈಬಳೆ ಎಂಬ ಮಾತಿದ್ದರೂ ತಿರುಗಿ ಕರ ಎಂಬ ಮಾತು ಪರಸ್ಪರ ಹೊಂದಿಕೆಯಾಗುವುದು—ಎಂದು ಸೂಚಿಸುವ ಬಗೆ.
ಕರಕಾಂಭಸ್ (ಕರಕ=ಜಲಪಾತ್ರ, ಅಂಭಸ್=ನೀರಿನಂತೆ) ತೆಂಗಿನಕಾಯಿ.
ಕರಕು (ಕರಿಕು), ಸುಟ್ಟು ಕರಿಯಾದುದು.
ಕರಗ ಕರಕ (ಸಂ), ಜಲಪಾತ್ರ, ನೀರಿನ ಪಾತ್ರ, ಕಮಂಡಲ; ಆಲಿಕಲ್ಲು.
ಕರಗತ ವಶ, ಅಧೀನ; ಕೈಯೊಳಗೆ ಬಂದ.
ಕರಗಸ (ದ್ಭ) ಕ್ರಕಚ (ಸಂ), ಮರ ಸಿಗುವ ಸಾಮಗ್ರಿ, ಗರಗಸ.
ಕರಗು ದ್ರವರೂಪವಾಗು, ನೀರಾಗು; ಮರುಗು.
ಕರಗ್ರಹ ಕೈಹಿಡಿತ, ಪಾಣಿಗ್ರಹಣ; ವಿವಾಹ, ಮದುವೆ.
ಕರಟ (ರಟ=ಕೂಗು) ಕ ಕ ಎಂದು ಕೂಗುವ ಕಾಗೆ; ಆನೆಯ ಕಪೋಲ; ಕೆನ್ನೆ; ತೆಂಗಿನ ಚಿಪ್ಪು.
ಕರಡ ಒಂದು ಜಾತಿಯ ಹುಲ್ಲು.
ಕರಡಿ ಒಂದು ಕಾಡುಮೃಗ, ಭಲ್ಲೂಕ.
ಕರಡಿಗೆ ಕರಂಡಕ (ಸಂ), ಪೆಟ್ಟಿಗೆ, ಸಂಪುಟ.
ಕರಡು ಕದಡು, ನೀರಲ್ಲಿ ಕದಡಿಸು; ಅಶುದ್ಧ; ಹಾಳು, ನಿಷ್ಪ್ರಯೋಜಕ.
ಕರಡೆ ಒಂದು ಬಗೆಯ ಕಾಯಿ; ಜರ್ಝರ; ಮದ್ದಲೆಯಂತಹ ಒಂದು ಚರ್ಮವಾದ್ಯ.
ಕರಣ ಕೆಲಸಮಾಡಲು ಬೇಕಾದ ಸಾಧನ; ಇಂದ್ರಿಯ; ದೇಹ; ಕ್ಷೇತ್ರ; ಭೂಮಿ; ಕಾಯಸ್ಥ; ವೈಶ್ಯನಿಂದ ಶೂದ್ರಳಲ್ಲಿ ಹುಟ್ಟಿದವ.
ಕರಣತ್ರಯ ಮನಸ್ಸು, ವಚನ, ಕಾಯ—ಈ ಮೂರು.
ಕರಣಸಾಲೆ ಕರಣಶಾಲಾ (ಸಂ), ಬರವಣಿಗೆಯ ಚಾವಡಿ, ಬರೆಯುವ ಮನೆ.
ಕರಣಿಕ (ಕರಣೀಕ) ಗುಮಾಸ್ತ, ಬರವಣಿಗೆಯವ.
ಕರಣೀಯ ಮಾಡತಕ್ಕುದು.
ಕರತಲ (ಕರತಳ) ಅಂಗೈ.
ಕರತಲಾಮಲಕ ಕೈಯೊಳಗಿನ ನೆಲ್ಲಿಕಾಯಿಯಂತೆ ಸುಲಭವೂ ಸ್ಪಷ್ಟವೂ ಆದ.
ಕರದಂಡ (ಕರ=ಕ್ರೂರ) ಮುಳ್ಳುಗಳ ದೆಸೆಯಿಂದ ಕ್ರೂರ ದಂಟುಳ್ಳುದು; ತಾವರೆ; ಕೈಬಡಿಗೆ.
ಕರಪತ್ರ ಕೈಯೊಳಗಿನ ಎಲೆಯಂತಿರುವುದು; ಗರಗಸ; ಚಿಕ್ಕ ಪ್ರಕಟಣ ಪತ್ರಿಕೆ, ಹಸ್ತಪತ್ರಿಕೆ.
ಕರಪಲ್ಲವ ಚಿಗುರಿನಂತೆ ಮಿದುವಾಗಿರುವ ಹಸ್ತ.
ಕರಪಾತ್ರ ಕೈಬಟ್ಟಲು, ಕೈಮರಿಗೆ.
ಕರಪುಟ ಅಂಗೈ, ಕೈಯೊಳಗಿನ ಭಾಗ.

ಕರಭ ಮಣಿಕಟ್ಟನಿಂದ ಕಿರುಬೆರಳ ತನಕ ಹಸ್ತದ ಹೊರಭಾಗ; ಒಂಟೆಯ ಮರಿ; ಆನೆಯ ಮರಿ.
ಕರಮೆ ಹೆಚ್ಚಾಗಿ.
ಕರವಲಯು ತಳಹತ್ತ್ರ, ಸರಿಸಮಂಕಡ, ಬಂಧಪಟ್ಟಸ, ಬಾಹುದಣಿ, ಡೊಕ್ಕರ, ಶಿರವಲಯು, ಕಂಡಡೊಕ್ಕರ—ಇವೇ ಮೊದಲಾದ ಮಲ್ಲವಿದ್ಯೆಯ ರೀತಿಗಳು.
ಕರವಾಳ (ವಾಳ=ರಕ್ಷಿಸು) ಕೈಯನ್ನು ರಕ್ಷಿಸುವುದು; ಖಡ್ಗ, ಕತ್ತಿ.
ಕರವೀರ ಕಣಗಿಲೆ ಹೂ; ಸೃಗಾಲನೆಂಬ ದುಷ್ಟ ದೊರೆಯ ರಾಜಧಾನಿ; ಒಂದು ದೇಶ; ಕತ್ತಿ.
ಕರಹ (ಕರಹು) ಆಹ್ವಾನ, ಆಮಂತ್ರಣ, ಕರೆಯುವಿಕೆ; ಹಾಲು ಹಿಂಡುವಿಕೆ; ಕರೆಯಲ್ಪಡುವುದು; ದನ.
ಕರಂ (ಕರ) ಅಧಿಕ, ಹೆಚ್ಚಾಗಿ.
ಕರಂಕ ಕರಡಿಗೆ; ಕಮಂಡಲು; ತಲೆ ಯೋಡು; ತೆಂಗಿನ ಚಿಪ್ಪು; ಕೈಚೀಲ.
—ವಾಹಿನಿ ಕೈಚೀಲ ಹೊರುವವಳು, ಸಂಚಿಯ ಹುಡುಗಿ.
ಕರಂಗು (ಕರಗು) ಒಂದು ದ್ರವದೊಡನೆ ಮಿಲಿತವಾಗು; ದ್ರುವಿಸು; ಕಪ್ಪಾಗು.
ಕರಂಡಕ (ಸಂ) ಕರಡಿಗೆ (ದ್ಭ), ಸಂಪುಟ, ಸಣ್ಣ ಪೆಟ್ಟಿಗೆ, ಭರಣಿ.
ಕರಂಬ (ದ್ಭ) ಕದಂಬ (ಸಂ).
ಕರಾಗ್ರ ಕೈತುದಿ; ಬೆರಳು.
ಕರಾಮತಿ ಪ್ರಭಾವ; ಕೆಲಸ.
ಕರಾರು ಶರ್ತ; ನಿರ್ಣಯ; ಒಪ್ಪಿಗೆಯ ಬರಹ.
ಕರಾಲ (ಕರಾಳ).
ಕರಾವಲಂಬನ (ಅವಲಂಬನ=ಆಶ್ರಯ) ಕೈಯ ಆಶ್ರಯ; ಕೈಗೂಡುವಿಕೆ.
ಕರಾವು ಹೈನ; ಹಾಲು ಬೆಣ್ಣೆಗಳ ಅನು ಕೂಲತೆ.
ಕರಾಳ (ಕರಾಲ) ಭಯಂಕರ, ಭೀಕರ.
—ಮುಖ ಭೀಕರ ರೂಪುಳ್ಳವ.
ಕರಾಸ್ಫೋಟ (ಆಸ್ಫೋಟ=ಶಬ್ದ) ಕೈತಟ್ಟ ಇಲ್ಲವೆ ಭುಜತಟ್ಟ ಮಾಡುವ ಶಬ್ದ.
ಕರಿ ಕರವುಳ್ಳದು, ಆನೆ; ಕಪ್ಪು; ಎಂಟು ಸಂಖ್ಯೆ; ಕಪ್ಪಾದ; ಎಣ್ಣೆಯಲ್ಲಿ ಹುರಿ.
—ಇಸು ಒಣಗಿಸು; ಮಾಡು.
—ಕು ಸೀದುಹೋಗು, ಕರಟು, ಸುಟ್ಟು ಕಪ್ಪಾಗು; ಮನೆ; ಇದ್ದಲು.
—ಣಿ ಹೆಣ್ಣಾನೆ.
—ಪೋತ ಆನೆಮರಿ.
—ವರಿ ಸೀದುಹೋಗು, ಕರಟು.
ಕರಿಮುಖ ಕರಿವದನ, ಆನೆ ಮುಖವುಳ್ಳವ, ಗಣಪತಿ.
ಕರಿಮುರಿಕು ಸೀದುಹೋಗು, ಕರಟ ಕಪ್ಪಾಗು.
ಕರಿಸ ಕಾರ್ಶ್ಯ (ಸಂ), ಒಣಗುವಿಕೆ; ಕೃಶ ವಾಗುವುದು, ಬಡವಾಗುವುದು.
ಕರಿಂಕು (ಕರಿಕು) ಅರೆವಾಸಿ ಸುಟ್ಟುದು.
ಕರೀರ ಕಳಿಲೆ.
ಕರೀರಕ ಜಗಳ, ಕಾಳಗ.
ಕರು ವತ್ಸ, ಕಂದು, ಮರಿ; ಪುತ್ಥಳಿ, ಬೊಂಬೆ, ಎರಕದ ಗೊಂಬೆ, ಪ್ರತಿಮೆ; ಎರಕದ ಅಚ್ಚು; ಎತ್ತರ; ಗುರಿಯಿಡು.
—ವಿಡು ಎರಕಹೊಯ್ಯು, ಎರೆ.
ಕರುಗಾಹಿ ದನಕಾಯುವವ, ಕರುಗಳನ್ನು ಕಾಯುವವ, ಗೋಪ.
ಕರುಣ (ಕರುಣೆ) ದಯೆ; ಕನಿಕರ.
—ಆಕರ ದಯಾನಿಧಿ, ದಯಾಶೀಲ.
ಕರುಣಾಂಬು ಕರುಣೆಯಿಂದ ಕರೆದ ಕಣ್ಣೀರು.

ಕಯ್ವಾರ್ ಕೈಗೆ ಬರು, ಫಲಿಸು, ಯಶಸ್ಸು ಹೊಂದು.
ಕಯ್ವಾರ ಹೊಗಳಿಕೆ.
ಕಯ್ವೊಲ ಹೊಲ, ಗದ್ದೆ ಬಯಲು.
ಕರ ಕೈ; ಕಿರಣ; ತೆರಿಗೆ, ರಾಜನಿಗೆ ಕೊಡುವ ಹಣ ; ಕಪ್ಪ; ಆಲಿಕಲ್ಲು, ಆಣೆಕಲ್ಲು; ಆನೆಸೊಂಡಿಲು; ನಕ್ಷತ್ರ; ಅತಿಶಯ; ಉಂಟುಮಾಡುವ.
—ಜ ಉಗುರು; ವ್ಯಾಘ್ರನಖವೆಂಬ ಪರಿಮಳ ದ್ರವ್ಯ.
ಕರಕ (ಕರಗ).
ಕರಕನ್ನ ಹೊತ್ತಿಹೋದ ಅನ್ನ, ಅಡಿಸುಟ್ಟ ಅನ್ನ.
ಕರಕರೆ ವ್ಯಸನ, ಚಿಂತೆ; ರಗಳೆ.
— ಇಸು ವ್ಯಸನಕ್ಕೆಗುರಿಪಡಿಸು; ಹಿಂಸಿಸು; ಚಿಂತಿಸು.
ಕರಕಂಕಣ ನ್ಯಾಯ ಕಂಕಣ ಎಂಬ ಶಬ್ದಕ್ಕೆ ಕೈಬಳೆ ಎಂಬ ಮಾತಿದ್ದರೂ ತಿರುಗಿ ಕರ ಎಂಬ ಮಾತು ಪರಸ್ಪರ ಹೊಂದಿಕೆಯಾಗುವುದು—ಎಂದು ಸೂಚಿಸುವ ಬಗೆ.
ಕರಕಾಂಭಸ್ (ಕರಕ=ಜಲಪಾತ್ರ, ಅಂಭಸ್=ನೀರಿನಂತೆ) ತೆಂಗಿನಕಾಯಿ.
ಕರಕು (ಕರಿಕು), ಸುಟ್ಟು ಕರಿಯಾದುದು.
ಕರಗ ಕರಕ (ಸಂ), ಜಲಪಾತ್ರ, ನೀರಿನ ಪಾತ್ರ, ಕಮಂಡಲ; ಆಲಿಕಲ್ಲು.
ಕರಗತ ವಶ, ಅಧೀನ; ಕೈಯೊಳಗೆ ಬಂದ.
ಕರಗಸ (ದ್ಭ) ಕ್ರಕಚ (ಸಂ), ಮರ ಸಿಗುವ ಸಾಮಗ್ರಿ, ಗರಗಸ.
ಕರಗು ದ್ರವರೂಪವಾಗು, ನೀರಾಗು; ಮರುಗು.
ಕರಗ್ರಹ ಕೈಹಿಡಿತ, ಪಾಣಿಗ್ರಹಣ; ವಿವಾಹ, ಮದುವೆ.
ಕರಟ (ರಟ=ಕೂಗು) ಕ ಕ ಎಂದು ಕೂಗುವ ಕಾಗೆ; ಆನೆಯ ಕಪೋಲ; ಕೆನ್ನೆ; ತೆಂಗಿನ ಚಿಪ್ಪು.
ಕರಡ ಒಂದು ಜಾತಿಯ ಹುಲ್ಲು.
ಕರಡಿ ಒಂದು ಕಾಡುಮೃಗ, ಭಲ್ಲೂಕ.
ಕರಡಿಗೆ ಕರಂಡಕ (ಸಂ), ಪೆಟ್ಟಿಗೆ, ಸಂಪುಟ.
ಕರಡು ಕದಡು, ನೀರಲ್ಲಿ ಕದಡಿಸು; ಅಶುದ್ಧ; ಹಾಳು, ನಿಷ್ಪ್ರಯೋಜಕ.
ಕರಡೆ ಒಂದು ಬಗೆಯ ಕಾಯಿ; ಜರ್ಝರ; ಮದ್ದಲೆಯಂತಹ ಒಂದು ಚರ್ಮವಾದ್ಯ.
ಕರಣ ಕೆಲಸಮಾಡಲು ಬೇಕಾದ ಸಾಧನ; ಇಂದ್ರಿಯ; ದೇಹ; ಕ್ಷೇತ್ರ; ಭೂಮಿ; ಕಾಯಸ್ಥ; ವೈಶ್ಯನಿಂದ ಶೂದ್ರಳಲ್ಲಿ ಹುಟ್ಟಿದವ.
ಕರಣತ್ರಯ ಮನಸ್ಸು, ವಚನ, ಕಾಯ— ಈ ಮೂರು.
ಕರಣಸಾಲೆ ಕರಣಶಾಲಾ (ಸಂ), ಬರವಣಿಗೆಯ ಚಾವಡಿ, ಬರೆಯುವ ಮನೆ.
ಕರಣಿಕ (ಕರಣೀಕ) ಗುಮಾಸ್ತ, ಬರವಣಿಗೆಯವ.
ಕರಣೀಯ ಮಾಡತಕ್ಕುದು.
ಕರತಲ (ಕರತಳ) ಅಂಗೈ.
ಕರತಲಾಮಲಕ ಕೈಯೊಳಗಿನ ನೆಲ್ಲಿಕಾಯಿಯಂತೆ ಸುಲಭವೂ ಸ್ಪಷ್ಟವೂ ಆದ.
ಕರದಂಡ (ಕರ=ಕ್ರೂರ) ಮುಳ್ಳುಗಳ ದೆಸೆಯಿಂದ ಕ್ರೂರ ದಂಟುಳ್ಳುದು; ತಾವರೆ; ಕೈಬಡಿಗೆ.
ಕರಪತ್ರ ಕೈಯೊಳಗಿನ ಎಲೆಯಂತಿರುವುದು; ಗರಗಸ; ಚಿಕ್ಕ ಪ್ರಕಟಣ ಪತ್ರಿಕೆ, ಹಸ್ತ ಪತ್ರಿಕೆ.
ಕರಪಲ್ಲವ ಚಿಗುರಿನಂತೆ ಮಿದುವಾಗಿರುವ ಹಸ್ತ.
ಕರಪಾತ್ರ ಕೈಬಟ್ಟಲು, ಕೈಮರಿಗೆ.
ಕರಪುಟ ಅಂಗೈ, ಕೈ ಒಳ ಭಾಗ.

ಕರಭ ಮಣಿಕಟ್ಟಿನಿಂದ ಕಿರುಬೆರಳ ತನಕ ಹಸ್ತದ ಹೊರಭಾಗ; ಒಂಟೆಯ ಮರಿ; ಆನೆಯ ಮರಿ.
ಕರಮೆ ಹೆಚ್ಚಾಗಿ.
ಕರವಲಯು ತಳಹತ್ತು, ಸರಿಸಮಂಕಡ, ಬಂಧಪಟ್ಟಸ, ಬಾಹುದಣಿ, ಡೊಕ್ಕರ, ಶಿರವಲಯು, ಕಂಡಡೊಕ್ಕರ—ಇವೇ ಮೊದಲಾದ ಮಲ್ಲವಿದ್ಯೆಯ ರೀತಿಗಳು.
ಕರವಾಳ (ವಾಳ=ರಕ್ಷಿಸು) ಕೈಯನ್ನು ರಕ್ಷಿಸುವುದು; ಖಡ್ಗ, ಕತ್ತಿ.
ಕರವೀರ ಕಣಿಗಿಲೆ ಹೂ; ಸೃಗಾಲನೆಂಬ ದುಷ್ಟ ದೊರೆಯ ರಾಜಧಾನಿ; ಒಂದು ದೇಶ; ಕತ್ತಿ.
ಕರಹ (ಕರಹು) ಆಹ್ವಾನ, ಆಮಂತ್ರಣ, ಕರೆಯುವಿಕೆ; ಹಾಲು ಹಿಂಡುವಿಕೆ; ಕರೆಯಲ್ಪಡುವುದು; ದನ.
ಕರಂ (ಕರ) ಅಧಿಕ, ಹೆಚ್ಚಾಗಿ.
ಕರಂಕ ಕರಡಿಗೆ; ಕಮಂಡಲು; ತಲೆಯೋಡು; ತೆಂಗಿನ ಚಿಪ್ಪು; ಕೈಚೀಲ.
—ವಾಹಿನಿ ಕೈಚೀಲ ಹೊರುವವಳು, ಸಂಚಿಯ ಹುಡುಗಿ.
ಕರಂಗು (ಕರಗು) ಒಂದು ದ್ರವದೊಡನೆ ಮಿಲಿತವಾಗು; ದ್ರವಿಸು; ಕಪ್ಪಾಗು.
ಕರಂಡಕ (ಸಂ) ಕರಡಿಗೆ (ದ್ಭ), ಸಂಪುಟ, ಸಣ್ಣ ಪೆಟ್ಟಿಗೆ, ಭರಣಿ.
ಕರಂಬ (ದ್ಭ) ಕದಂಬ (ಸಂ).
ಕರಾಗ್ರ ಕೈತುದಿ; ಬೆರಳು.
ಕರಾಮತಿ ಪ್ರಭಾವ; ಕೆಲಸ.
ಕರಾರು ಶರ್ತು; ನಿರ್ಣಯ; ಒಪ್ಪಿಗೆಯ ಬರಹ.
ಕರಾಲ (ಕರಾಳ).
ಕರಾವಲಂಬನ (ಅವಲಂಬನ=ಆಶ್ರಯ) ಕೈಯ ಆಶ್ರಯ; ಕೈಗೂಡುವಿಕೆ.
ಕರಾವು ಹೈನ; ಹಾಲು ಬೆಣ್ಣೆಗಳ ಅನುಕೂಲತೆ.
ಕರಾಳ (ಕರಾಲ) ಭಯಂಕರ, ಭೀಕರ.
—ಮುಖ ಭೀಕರ ರೂಪುಳ್ಳವ.
ಕರಾಸ್ಫೋಟ (ಆಸ್ಫೋಟ=ಶಬ್ದ) ಕೈತಟ್ಟ ಇಲ್ಲವೆ ಭುಜತಟ್ಟ ಮಾಡುವ ಶಬ್ದ.
ಕರಿ ಕರವುಳ್ಳುದು, ಆನೆ; ಕಪ್ಪು; ಎಂಟು ಸಂಖ್ಯೆ; ಕಪ್ಪಾದ; ಎಣ್ಣೆಯಲ್ಲಿ ಹುರಿ.
—ಇಸು ಒಣಗಿಸು; ಮಾಡು.
—ಕು ಸೀದುಹೋಗು, ಕರಟು, ಸುಟ್ಟು ಕಪ್ಪಾಗು; ಮನೆ; ಇದ್ದಲು.
—ಣಿ ಹೆಣ್ಣಾನೆ.
—ಪೋತ ಆನೆಮರಿ.
—ವರಿ ಸೀದುಹೋಗು, ಕರಟು.
ಕರಿಮುಖ ಕರಿವದನ, ಆನೆ ಮುಖವುಳ್ಳವ, ಗಣಪತಿ.
ಕರಿಮುರಿಕು ಸೀದುಹೋಗು, ಕರಟ ಕಪ್ಪಾಗು.
ಕರಿಸ ಕಾರ್ಶ್ಯ (ಸಂ), ಒಣಗುವಿಕೆ; ಕೃಶವಾಗುವುದು, ಬಡವಾಗುವುದು.
ಕರಿಂಕು (ಕರಿಕು) ಅರೆವಾಸಿ ಸುಟ್ಟುದು.
ಕರೀರ ಕಳಿಲೆ.
ಕರೀರಕ ಜಗಳ, ಕಾಳಗ.
ಕರು ವತ್ಸ, ಕಂದು, ಮರಿ; ಪುತ್ಥಳಿ, ಬೊಂಬೆ, ಎರಕದ ಗೊಂಬೆ, ಪ್ರತಿಮೆ; ಎರಕದ ಅಚ್ಚು; ಎತ್ತರ; ಗುರಿಯಿಡು.
—ವಿಡು ಎರಕಹೊಯ್ಯು, ಎರೆ.
ಕರುಗಾಹಿ ದನಕಾಯುವವ, ಕರುಗಳನ್ನು ಕಾಯುವವ, ಗೋಪ.
ಕರುಣ (ಕರುಣೆ) ದಯೆ; ಕನಿಕರ.
—ಆಕರ ದಯಾನಿಧಿ, ದಯಾಶೀಲ.
ಕರುಣಾಂಬು ಕರುಣೆಯಿಂದ ಕರೆದ ಕಣ್ಣೀರು.

ಕರುತ್ತು ಕೊಡಿಸಿ; ಕ್ರೋಧದಿಂದ ಧಿಕ್ಕರಿಸಿ; ಉದ್ದೇಶಿಸಿ, ಕುರಿತಾಗಿ.
ಕರುಬ ಅಸೂಯೆಪಡುವವ, ಮತ್ಸರಗ್ರಸ್ತ; ಶತ್ರು.
ಕರುಬು (ಕರುಂಬು) ಮತ್ಸರ, ಹೊಟ್ಟೆ ಉರಿ.
—ತನ ಮಾತ್ಸರ್ಯ.
ಕರುನಾಡು ಕನ್ನಡ ದೇಶ.
ಕರುಮಾಡ ಉಪ್ಪರಿಗೆ; ನೆಲೆಮನೆ.
ಕರುಹು (ನೋಡು: ಕರುಬು).
ಕರುಳ್ (ಕರುಳು) ಪಚನೇಂದ್ರಿಯಗಳಲ್ಲಿ ಒಂದಾದ ನೀಳ ಕೋಶ; ಮರುಕ, ಕರುಣೆ.
ಕರುಂಬು (ನೋಡು: ಕರುಬು).
ಕರೆ ಕರೆಯುವಿಕೆ, ಆಮಂತ್ರಣ, ಕರಹು; ಬರಮಾಡು; ಸುರಿ; ಹಾಲು ಕರೆ; ಮಳೆಗರೆ; ಕಣ್ಣೀರು ಕರೆ; ಕಳಂಕ; ಕಪ್ಪು; ಅಂಚು, ತುದಿ; ಸೆರಗು; ದಡ.
— ಕರೆದು (ಕರೆದುಕರೆದು) ಬಹಳವಾಗಿ ಕರೆದು.
ಕರೆಗಣ್ಮು ದಡಮೀರು, ದಡವನ್ನು ತೊಳೆ; ತುಂಬಿತುಳುಕು; ಮಿತಿಮೀರು, ಅತಿಕ್ರಮಿಸು.
ಕರೆಗಾಳಿ ಭೂಮಿಯಿಂದ ಕಡಲಿಗೆ ಬೀಸುವ ಗಾಳಿ.
ಕರೆಗೊರಲ ಕೊರಲಲ್ಲಿ ಕಪ್ಪುಳ್ಳವ; ಶಿವ.
ಕರೇಣು ತಲೆಯ ಮೇಲೆ (ರೇಣು=ಧೂಳಿ) ಧೂಳಿಯುಳ್ಳುದು, ಗಂಡಾನೆ; ಹೆಣ್ಣಾನೆ.
ಕರೋಟಿ ತಲೆಬುರುಡೆ; ಪಾತ್ರೆ.
ಕರೋಡ ಕೋಟ.
ಕರ್ಕಟಿ ಏಡಿ, ಎಸಡಿ, ನಳ್ಳಿ.
ಕರ್ಕಾಟಕ ಒಂದು ಸೌರಮಾನ ತಿಂಗಳು.
ಕರ್ಕಡೆ (ದ್ಭ) ಕರ್ಕಟಕಾ (ಸಂ), ಆಯುಧ ವಿಶೇಷ.
ಕರ್ಕಶ ಗಟ್ಟಿ; ಕಠಿಣ, ಬಿರುಸು.
ಕರ್ಕೇತನ ರತ್ನವಿಶೇಷ; ಬೆಳ್ಳಿ.
ಕರ್ಕೋಟಕ ಅನಂತ—ವಾಸುಕಿ—ಪದ್ಮ—ಮಹಾಪದ್ಮ—ತಕ್ಷಕ—ಕರ್ಕೋಟಕ—ಶಂಖಪಾಲ—ಕುಲಿಂದ ಎಂಬ ಎಂಟು ಸರ್ಪರಾಜರಲ್ಲಿ ಒಬ್ಬ.
ಕರ್ಚರೆ ದೇಹದ ಒಂದು ಭಾಗ.
ಕರ್ಚು ತೊಳೆಯು; ಕಚ್ಚು.
ಕರ್ಣ ಶಬ್ದವನ್ನು ಗ್ರಹಿಸುವುದು, ಕಿವಿ; ಕುಂತಿಯ ಹಿರಿಯ ಮಗ. ಈತನನ್ನು ಕುಂತಿ ಚಿಕ್ಕ ವಯಸ್ಸಿನಲ್ಲಿ ಪಡೆದು ತ್ಯಜಿಸಿದಳು. ಅದರಿಂದ ಅಧಿರಥನೆಂಬ ಬೆಸ್ತರವನು ಅವನನ್ನು ಸಲಹಿದನು. ಮುಂದೆ ಈತನು ದುರ್ಯೋಧನನ ಗೆಳೆಯನಾದನು. ಅವನಿಂದ ಅಂಗದೇಶದ ದೊರೆತನ ಪಡೆದನು; ಮೂರು ಭುಜವುಳ್ಳ ಕ್ಷೇತ್ರ.
—ಜ (ಜಾತ) ಕರ್ಣನ ಮಗ; ವೃಷಸೇನ; ವೃಷಕೇತು.
—ಸೂನು ಕರ್ಣನ ಮಗ.
ಕರ್ಣಕುಂಡಲ ಕಿವಿಯೊಡವೆ, ಕಿವಿಯ ಒಂದು ಆಭರಣ.
ಕರ್ಣಪೂರ (ಸಂ) ಕನ್ನವುರ (ದ್ಭ), ಕಿವಿಯ ಒಂದು ಆಭರಣ.
ಕರ್ಣಾಟ (ಕರ್ನಾಟ) ಕರ್ಣಾಟಕ, ಕನ್ನಡ ಭಾಷೆ; ಕನ್ನಡ ಜನ; ಕನ್ನಡ ದೇಶ.
ಕರ್ಣಿಕಾರ ಬೆಟ್ಟತಾವರೆ.
ಕರ್ಣಿಕೆ ಒಬ್ಬಳು ಅಪ್ಸರೆ; ತಾವರೆಯ ಒಳಗಿನ ಗೊಂಡೆ, ಬೀಜಕೋಶ.
ಕರ್ತನ ಕತ್ತರಿಸುವಿಕೆ.
ಕರ್ತರಿ ಕತ್ತರಿ (ದ್ಭ), ಕತ್ತಿ; ಕತ್ತರಿಸುವ ಒಂದು ಸಾಧನ; ಬಾಣದ ಒಂದು ಭಾಗ; ಪುಂಖ.
ಕರ್ತಲೆ (ನೋಡು: ಕತ್ತಲೆ).

ಕರ್ತವ್ಯ ಮಾಡತಕ್ಕ ಕೆಲಸ; ಕರ್ಮ; ಕಜ್ಜ.
ಕರ್ತಾರ ಕರ್ತೃ, ಮಾಡುವವ; ಬ್ರಹ್ಮ.
ಕರ್ತೃ ಮಾಡುವವನ, ಉಂಟುಮಾಡುವವ; ಒಡೆಯ; ಅರಸ.
ಕರ್ದಮ ಕೆಸರು; ಕರ್ದಮನೆಂಬ ಋಷಿ.
—ಜಾತೆ ತಾವರೆ; ಕರ್ದಮ ಋಷಿಯ ಮಗಳು.
ಕರ್ದುಕು (ಕರ್ದುಂಕು) ಕುಕ್ಕು, ಸೊಣೆ.
ಕರ್ಪಟ (ಸಂ) ಕಪ್ಪಡ (ದ್ಭ), ವಸ್ತ್ರ, ಸೀರೆ; ಹಳೆಯ ಬಟ್ಟೆ; ಹರಕು ವಸ್ತ್ರ.
ಕರ್ಪರ ಕಪಾಲ (ಸಂ); ತಲೆಬುರುಡೆ; ಮಡಕೆ; ಬೇಯಿಸುವ ಪಾತ್ರೆ; ಕೊಪ್ಪರಿಗೆ; ಕಡಾಯಿ.
ಕರ್ಪಾಸ ಹತ್ತಿ; ಹತ್ತಿಯ ಗಿಡ.
ಕರ್ಪು ಕಪ್ಪು, ಕರಿದು; ಆನೆ ಹಿಡಿಯುವ ಕುಳಿ; ಬೋನು.
ಕರ್ಪುರ ಕರ್ಪೂರ, ಕಪ್ಪುರ.
ಕರ್ಪೊಗೆ (ನೋಡು: ಕರ್ಬೊಗೆ).
ಕರ್ಬು ಕಬ್ಬು.
ಕರ್ಬುನ(ಕರ್ಬೊನ್) ಕಬ್ಬಿಣ, ಕರ್ಬೊನ್ನು.
ಕರ್ಬುರ ವಿಧವಿಧ ಬಣ್ಣ; ಬಂಗಾರ; ರಾಕ್ಷಸ.
ಕರ್ಬೊಗೆ ಕಪ್ಪಾದ ಹೊಗೆ.
ಕರ್ಮ ಕಮ್ಮ (ದ್ಭ), ಕೆಲಸ, ಕರ್ತವ್ಯ; ಹಿಂದಿನ ಕರ್ಮಕ್ಕೊದಗಿದ ಫಲ.
—ಕಾರ ಕಮ್ಮಾರ; ಕೆಲಸಗಾರ.
—ಠ ಕೆಲಸದಲ್ಲಿ ಚತುರ; ನಿಪುಣ; ಶ್ರದ್ಧಾಳು; ಆಚಾರನಿಷ್ಠ.
ಕರ್ಮಣಿ ಬಾಡಿಗೆ; ಸಂಬಳ; ಕರಿಯಮಣಿ; ಕ್ರಿಯಾಪದದ ಧೋರಣೆ (ವ್ಯಾಕರಣದಲ್ಲಿ).
ಕರ್ಮಫಲ ಹಿಂದೆ ಮಾಡಿದ ಕೆಲಸಕ್ಕೆ ಒದಗುವ ಫಲ.
ಕರ್ಮಶಾಲೆ ಕಮ್ಮಾರಸಾಲೆ; ಕೆಲಸದ ಮನೆ; ಉದ್ಯೋಗಶಾಲೆ.
ಕರ್ಮಿಷ್ಠ ಪಾಪಿ; ಚುರುಕಿನವ.
ಕರ್ರನೆ ಕಪ್ಪಾಗಿ, ಕರ್ರಗೆ.
ಕರ್ವೆಟ್ಟು ಕಪ್ಪು ಬೆಟ್ಟ; ನೀಲಾಚಲ.
ಕರ್ಷಕ ಕೃಷಕ, ಒಕ್ಕಲಿಗ, ರೈತ.
ಕರ್ಷಣ ಸೆಳೆತ; ಉಳುಮೆ; ಹಿಂಸೆ; ತಳ್ಳುವಿಕೆ; ತಿಕ್ಕಾಟ; ಒಣಗುವಿಕೆ.
ಕಲ ಇಂಕಲ; ಪಾತ್ರೆ; ಮಡಕೆ; ಪಾದ; ಅವ್ಯಕ್ತ; ಮಧುರ ಧ್ವನಿ; ವೀಣೆ ಮೊದಲಾದುವುಗಳ ನಾದ.
—ರವ ಮಧುರಧ್ವನಿ.
ಕಲಕು (ಕಲುಕು) ಕದಡು; ನೀರನ್ನು ಕುಲುಕು; ಕಲ್ಮಷ.
—ಆಡು ಕಲುಕು; ಕೆಸರಾಗು.
ಕಲಡು ಕದಡು.
ಕಲಭ ಆನೆಯ ಮರಿ, ಮರಿಯಾನೆ.
ಕಲಲ ಗರ್ಭಪಿಂಡ; ಗರ್ಭವನ್ನು ಆವರಿಸಿದ ಚರ್ಮ.
ಕಲವಿಂಕ (ವಿಂಕ=ಕೂಗು) ಇಂಪಾಗಿ ಕೂಗುವುದು, ಗುಬ್ಬಿ, ಗುಬ್ಬಚ್ಚಿ.
ಕಲವೆ ನೈದಿಲೆ; ನೈದಿಲೆಯ ನಡುವಿನ ಕೇಂದ್ರ.
ಕಲಶ (ಕಲ=ಶಬ್ದ, ಶ=ಹುಟ್ಟಿಸು) ನೀರು ಹುಟ್ಟಿಸುವಾಗ ಸದ್ದುಂಟುಮಾಡುವುದು; ಗಡಿಗೆ; ನೀರು ತುಂಬಿದ ಕಿರಿಬಾಯ ಪಾತ್ರೆ; 34 ಸೇರಿನ ಅಳತೆ.
—ಜ ಕಲಶದಲ್ಲಿ ಹುಟ್ಟಿದವನು, ದ್ರೋಣ; ಆಂಗೀರಸರಲ್ಲಿ ಶ್ರೇಷ್ಠನು; ಭರತಾಚಾರ್ಯ; ಭಾರದ್ವಾಜ.
ಕಲಹ ಜಗಳ, ಯುದ್ಧ; ವೈಮನಸ್ಸು.
ಕಲಹಂಸ ರಾಜಹಂಸ, ಕೊಕ್ಕುಪಾದಗಳು ಕೆಂಪಾಗಿ ಉಳಿದ ಭಾಗ ಬೆಳ್ಳಗಿರುವ ಒಂದು ಹಂಸ ಜಾತಿ.

ಕಲಹಾರ ಜಗಳ, ಯುದ್ಧ.
ಕಲಹಾರ್ದಿ ಕಲಹಪ್ರಿಯ, ನಾರದ.
ಕಲಹಾಶನ ಸದಾ ಜಗಳ ಗಂಟಕ್ಕುವುದೇ ಅನ್ನವಾಗಿರುವವ, ನಾರದ.
ಕಲಂಕ ಕಪ್ಪು; ಪಾಪ; ದೋಷ.
ಕಲಂಕು ಕಲಕು, ಕದಡು.
ಕಲಂಬ ಬಾಣ, ಅಂಬು.
ಕಲಂಬಾಸನ ಬಾಣ ಎಸೆಯಲು ಅನುಕೂಲ ಸಾಧನ; ಬಿಲ್ಲು.
ಕಲಂಬಿ ಕಡಾಯಿ, ಪತ್ರಾಸು.
ಕಲಾ ಕಲೆ, ಕುಶಲವಿದ್ಯೆ, ಸುಂದರವಿದ್ಯೆ, ರಸವಿದ್ಯೆ; ಚಿತ್ರಗಾರಿಕೆ, ಸಂಗೀತ, ಶಿಲ್ಪ ಮೊದಲಾದ ಲಲಿತವಿದ್ಯೆಗಳು; ಕಲಂಕ.
—ವಂತ ಕುಶಲಕಲೆಗಾರ, ಕಲಾವಿದ.
—ವಂತಿ ಕಲೆಯರಿತವಳು; ವೇಶ್ಯೆ.
ಕಲಾನಿಧಿ ಕಲೆಗಳುಳ್ಳವನು, ಕಲೆಯನ್ನು ಧರಿಸಿದವನು, ಚಂದ್ರ.
ಕಲಾಪ (ಅಪ=ಹೊಂದು) ಸಮೂಹ; ನವಿಲಿನ ಬಾಲ; ಅಲಂಕಾರ; ಮೇಖಲೆ; ಚಂದ್ರ.
ಕಲಾಪಕ ನಾಲ್ಕು ಪದ್ಯಗಳು ಕೂಡಿ ಒಂದು ವಾಕ್ಯವಾಗುವುದು.
ಕಲಾಪಿ ಕಲಾಪವುಳ್ಳದು, ನವಿಲು.
ಕಲಾಬತು (ಕಲಾಬತ್ತು) ಜರತಾರಿ.
ಕಲಾಯಿ ಪಾತ್ರೆಗಳಿಗೆ ತವರದಿಂದ ಹಾಕುವ ಹೊದ್ದಿಕೆ; ಆಚ್ಛಾದನ.
ಕಲಿ ಅಭ್ಯಾಸಿಸು; ಸ್ವರಮಾಡು; ವೀರ, ಶೂರ; ಭಟ; ತಾಳೆಮರ; ಕಲಿಪುರುಷ.
—ತನ ಶೌರ್ಯ, ಪರಾಕ್ರಮ.
ಕಲಿಕಾ (ಕಲಿಕೆ) ಮೊಗ್ಗು.
ಕಲಿಕೆ (ಕಳಿಕೆ) ಕಲಿಯುವಿಕೆ; ಚಮತ್ಕಾರ; ಎಳೆಯ ಫಲ.
ಕಲಿತ (ಕಲೆತ) ಸೇರಿದ.
ಕಲಿಜ ಮೂತ್ರಪಿಂಡ.
ಕಲಿನಾಶನ ಕಲಿಯುಗದ ಸಂಕಷ್ಟ ಹೋಗಲಾಡಿಸುವುದು.
ಕಲಿಮನ ಧೀರಮನುಷ್ಯ; ಗಟ್ಟಿ ಮನಸ್ಸು.
ಕಲಿಯುಗ ನಾಲ್ಕು ಯುಗಗಳಲ್ಲಿ ಕೊನೆಯದು.
ಕಲಿಲ ಬೆರೆತಿರುವ, ಕೂಡಿದ; ತುಂಬ; ತಳಮಳ, ಕಲ್ಲೋಲ.
ಕಲಿಂಗ ಒಬ್ಬ ಕ್ಷತ್ರಿಯ ಅರಸು—ಇವನು ಮನುವಿನ ಸಂತತಿಯವನು; ಈಗಿನ ಒರಿಸ್ಸಾ ದೇಶ.
ಕಲಿಂದ ಯಮುನಾನದಿಯು ಹೊರಡುವಲ್ಲಿಯ ಪರ್ವತ.
ಕಲು ಕಲ್ಲು.
ಕಲುಕು (ಕುಲುಕು) ಕೆಸರು, ಕಲ್ಮಷ; ಅಲುಗಾಡಿಸು.
ಕಲುಗುಟಿಕ ಕಲ್ಲಿನಲ್ಲಿ ಕೆಲಸಮಾಡುವವ; ಶಿಲ್ಪಿ; ಒಂದು ದೆವ್ವ.
ಕಲುಷ ಪಾಪ; ಕಲ್ಮಷ, ರಾಡಿ, ಕೆಸರು.
ಕಲುಹು (ಕಲುಹೆ) ಕಲಿಕೆ, ವಿದ್ಯಾಭ್ಯಾಸ; ಚಟುವಟಿಕೆ; ಚುರುಕು.
ಕಲುಂಬು ಕಿಲುಬು; ಕಲ್ಮಷ, ಕೆಸರು.
ಕಲೆ (ಕಲಾ) ಗುರುತು; ಲಲಿತವಿದ್ಯೆ; ವಿದ್ಯೆ; ಚಂದ್ರನ $\frac{1}{16}$ನೇ ಅಂಶ; ಕಲಂಕ; ಸೇರು. (ಕಲೆಯು) ಕಾಂತಿಯಿಂದ ಕೂಡು, ಪ್ರಕಾಶಿಸು; ಒಂದಾಗು.
ಕಲ್ಕಿ ಕಲ್ಮಷ; ಮಡ್ಡಿ; ಕೆಸರು. ವಿಷ್ಣುವಿನ ಹತ್ತು ಅವತಾರಗಳಲ್ಲಿ ಕೊನೆಯದು.
ಕಲ್ಕೆ (ನೋಡು: ಕಲಿಕೆ).
ಕಲ್ಪ ಒಂದು ವೇದಾಂಗ; ಪ್ರಳಯ; ಬ್ರಹ್ಮನ ಒಂದು ಹಗಲು; ಸಮಾನ; ಸಾಧ್ಯ; ನಿರ್ಧಾರ.
ಕಲ್ಪಕ ಪ್ರಮಿತಿ, ಆದರ್ಶ.

ಕಲ್ಪನೆ ಊಹೆ; ಕತೆ; ಹೋಲುವೆ; ಸೃಷ್ಟಿ; ಕೃತಿ; ರೂಪ.

ಕಲ್ಪದ್ರುಮ ಕಲ್ಪವೃಕ್ಷ; ಸ್ವರ್ಗದ ಒಂದು ಮರ; ಬಯಸಿದುದನ್ನೆಲ್ಲಾ ಕೊಡುವುದೆಂಬ ಮರ.

ಕಲ್ಪಾಗ್ನಿ ಪ್ರಳಯಾಗ್ನಿ; ಕಲ್ಪದ ಕೊನೆಗಾಲದ ಬೆಂಕಿ.

ಕಲ್ಪಾಂಘ್ರಿಪ (ಅಂಘ್ರಿಪ=ಮರ) ಕಲ್ಪವೃಕ್ಷ.

ಕಲ್ಪಿ ಕಲೆ, ಕುಶಲವಿದ್ಯೆ.

ಕಲ್ಬಸರಿ ಕಲ್ಲು ಬಸರೀಮರ.

ಕಲ್ಬಾಗಿ ಕಲ್ಲು ಬಾಗಿಯ ಮರ.

ಕಲ್ಮಷ ಕೊಳೆ, ಕಿಲುಬು; ಕೆಸರು.

ಕಲ್ಲರೆ ಕಲ್ಲಿನ ಗೂಡು; ಗೋರಿ, ಸಮಾಧಿ.

ಕಲ್ಲಿ ಬಲೆಯ ಚೀಲ; ಅಂಗಿ; ಕಂತೆ.

ಕಲ್ಲಿಗೂಳ್ ಬಲೆಚೀಲದಲ್ಲಿ ಕಟ್ಟದ ಅನ್ನ, ಕಲ್ಲಿಯಲ್ಲಿ ತಂದಿರಿಸಿದ ಅನ್ನ.

ಕಲ್ಲಿಯೋಗರ ಕಲ್ಲಿಗೂಳ್.

ಕಲ್ಲು ಶಿಲೆ, ಪಾಷಾಣ.

ಕಲ್ಲೋಲ (ಕ=ನೀರು, ಲೋಲ=ಅಲ್ಲಾಡು) ದೊಡ್ಡ ತೆರೆ, ಮಹಾತರಂಗ; ಗೊಂದಲ.

ಕಲ್ಯಾಣ (ಕಲ್ಯ=ಪ್ರಾತಃಕಾಲ; ಅಣ=ಹೇಳಲ್ಪಡುವುದು) ಸುವರ್ಣ, ಬಂಗಾರ; ಶುಭ, ಮಂಗಳ; ವಿವಾಹ.

—ರೂಪ ಶುಭರೂಪಿ; ಮಂಗಳಕರವಾದ.

ಕಲ್ಯಾಣಿ ಶುಭಕರೆ; ಸರಸ್ವತಿ; ಪಾರ್ವತಿ; ಲಕ್ಷ್ಮಿ; ಒಂದು ರಾಗದ ಹೆಸರು; ಕೆರೆ.

ಕಲ್ವೆಸ ಕಲ್ಲು ಕೆಲಸ.

ಕಲ್ಹಾರ ಸುಗಂಧವಾದ; ಕೆಂದಾವರೆ.

ಕವ (ದ್ಭ) ಕ್ರಮ (ಸಂ), ರೀತಿ.

ಕವಚ ಅಂಗಿ; ಮೈಜೋಡು; ಹೊದಿಕೆ.

ಕವಚಹರ ಅಂಗಿತೊಡುವ ಪ್ರಾಯಕ್ಕೆ ಬಂದವ; ವಯಸ್ಸಾದವ.

ಕವಡಿ (ಕವಡೆ) ಒಂದು ಬಗೆಯ ಕಡಲ ಚಿಪ್ಪು; ಕವಡಿಕೆ; ಒಂದು ಕಾಲದ ನಾಣ್ಯ.

ಕವಡು ಕಪಟ; ಮೋಸ; ಕವಲು; ಮಾಯೆ.

—ಇಕೆ ಕವಡೆ; ಮೋಸ; ಕಪರ್ದ; ಕಪಟ.

—ಬಿಜ್ಜೆ ಮಾಯಾವಿದ್ಯೆ; ಕಪಟ.

ಕವಣೆ ಕಲ್ಲೆಸೆಯುವ ಸಾಧನ; ಕಲ್ಲೆಸೆವ ಬಿಲ್ಲು; ಪಗರಿ; ಕವೆಗೋಲು.

ಕವತೆ (ಕವರ್ತೆ) ಅಪಹರಣ, ಚೌರ್ಯ.

ಕವನ ಕವಿತೆ, ಪದ್ಯಕೃತಿ.

ಕವರ್ (ಕವರು) ಸುಲಿ; ಸೆಳೆ; ಕಿತ್ತುಕೊಳ್ಳು; ರೆಂಬೆ; ಕವಲು.

ಕವರ್ತೆ (ನೋಡು: ಕವತೆ).

ಕವಲ್ (ಕವಲು) ಟಿಸಿಲು, ರೆಂಬೆ; ಸೀಳು.

—ಒಡೆ ಎರಡಾಗು; ರೆಂಬೆ ಹೊರಡು; ಎರಡು.

—ಬಟ್ಟೆ ಬೇರೆ ಮಾರ್ಗ, ಅಡ್ಡ ದಾರಿ.

—ಕಣೆ ರೆಂಬೆ ಒಡೆದಿರುವ ಸ್ಥಳ; ತುದಿ; ಒಡೆದಿರುವ ಬಾಣ.

ಕವಳ ಕಬಳ; ತುತ್ತು; ತಾಂಬೂಲ;

ಕವಳಿ ಮೂರ್ಛೆ.

ಕವಳಿಗೆ (ದ್ಭ) ಕಾಪಾಟಿಕಾ (ಸಂ), ಲೋಹದ ಪಾತ್ರೆ; ಶಿವನ ಭಿಕ್ಷಾಪಾತ್ರೆ; ಥಾಲಿ, ಪಂಚಪಾತ್ರೆ; ೫೦ ಎಲೆಗಳ ಕಟ್ಟು.

ಕವಾಟ (ಕಪಾಟ) ಬಾಗಿಲು; ಒಂದೇ ಕಡೆ ತೆರೆಯುವ ಮುಚ್ಚಳ.

ಕವಾತು ಕವಾಯತು, ಯುದ್ಧ ಶಿಕ್ಷಣ.

ಕವಿ ಆವರಿಸು, ಮುಚ್ಚು, ಮುತ್ತು; ಶುಕ್ರ; ವಾಲ್ಮೀಕಿ; ಕಾವ್ಯಕರ್ತೃ; ಪಂಡಿತ; ಕಡಿವಾಣ, ಲಗಾಮು; ನೀರು ಹಕ್ಕಿ.

—ಇಂದ್ರ ಕವಿಗಳಲ್ಲಿ ಶ್ರೇಷ್ಠ.

—ಸಮಯ ಕಾವ್ಯಸಮಯ; ಕವಿಗೆ ವಿಶೇಷವಾದ ರೂಪ; ಕವಿಪದ್ಧತಿ.
ಕವಿಚು (ಕವಚು) ಮೊಗಚು, ಅಡಿಮೇಲಾಗು; ಆವರಿಸು, ಮುತ್ತು; ಮೇಲೆ ಹೋಗುವಂತೆ ಮಾಡು.
ಕವಿಲೆ (ದ್ಭ) ಕಪಿಲೆ, ಹಳದಿ ಕಂದು ಬಣ್ಣ.
ಕವಿಲ್ತುಕಾಸೆ ಕಪಿಲ ಬಣ್ಣದ ವಸ್ತ್ರ.
ಕವುಚು (ನೋಡು: ಕವಿಚು).
ಕವುರು (ಕಮರು) ದುರ್ವಾಸನೆ; ಹೊತ್ತಿದ ನಾತ.
—ಇಡು ದುರ್ವಾಸನೆ ಹೊಡೆ.
—ಏಳು ನಾತ ಹೊರಡು.
ಕವುಳು ಕಪೋಲ, ಕೆನ್ನೆ;
ಕವುಳುಡೆ ತಲೆದಿಂಬು; ಗಾದಿ.
ಕವುಂಗು (ಕೌಂಗು) ಕಂಗು, ಕ್ರಮುಕ (ಸಂ), ಅಡಕೆಯ ಮರ.
ಕವೆ ಕೌರು, ಕವಲು; ರೆಂಬೆ.
ಕವ್ಯ ಪಿತೃಗಳಿಗೆ ಅರ್ಪಿಸುವ ಪಿಂಡ ಮೊದಲಾದುವು.
ಕವ್ವರೆ ಚಾಂಚಲ್ಯ, ಸುಳಿ; ಸಂಭ್ರಮ.
ಕಶೇರುಕ ಬೆನ್ನಿನ ಮುಖ್ಯ ನರ.
ಕಷ ಉಜ್ಜುವ, ತಿಕ್ಕುವ.
—ಣ ಉಜ್ಜುವಿಕೆ.
ಕಷಾಯ ಗಿಡಮೂಲಿಕೆಗಳನ್ನು ಬೇಯಿಸಿ ತೆಗೆದ ಸಾರ; ಭಾವಾತಿರೇಕ; ಕಾವಿ ಬಣ್ಣ.
ಕಷಾಯಾಂಬರ ಕಾವಿಬಟ್ಟೆ.
ಕಷ್ಟ ತೊಡಕು, ತೊಂದರೆ; ಸಂಕಟ.
ಕಸ ಉಪಯೋಗವಿಲ್ಲದ ವಸ್ತು, ಕೆಲಸಕ್ಕೆ ಬಾರದ ದೂಳು ಮೊದಲಾದುದು.
ಕಸರತ್ತು ಚಮತ್ಕಾರ; ಚಮತ್ಕಾರದ ಅಂಗ ಸಾಧನೆ; ವ್ಯಾಯಾಮ.
ಕಸರು ಬೇಸರ; ಕೊರತೆ; ಕೊಸರು; ಕೊಳೆ; ಬಿರುಕು ಬಿಡು; ಗಂಟಲುಕೆರೆ.
—ಇಕೆ ಬೇಸರಿಕೆ; ಕೊರತೆ.
ಕಸವರ (ದ್ಭ) ಕಾರ್ತಸ್ವರ (ಸಂ), ಆರ್ತಧ್ವನಿ; ಚೀರಾಟ; ಚಿನ್ನ, ಬಂಗಾರ, ಹೊನ್ನು; ದ್ರವ್ಯ.
ಕಸವಿಸಿ ಚೌಕಸಿ.
ಕಸಿ ಒಂದು ಗಿಡವನ್ನು ಇನ್ನೊಂದಕ್ಕೆ ಸೇರಿಸುವುದು.
ಕಸಿಕಿಸಿ ಸ್ಪರ್ಧೆ.
ಕಸುಗಾಯಿ ಕಸುರುಗಾಯಿ, ದೋರೆಕಾಯಿ, ಹಣ್ಣಾಗದ ಕಾಯಿ, ಅರೆಗಾಯಿ.
ಕಸುವು ತ್ರಾಣ, ಬಲ, ಶಕ್ತಿ.
ಕಸೂತಿ ಹೂಗೆಲಸ; ಹೊಲಿಗೆಯ ಮೂಲಕ ಚಿತ್ರ ಕೆಲಸ.
ಕಸೆ ಚಾಚು; ಒಂದು ಗಿಡಕ್ಕೆ ಇನ್ನೊಂದನ್ನು ಹೊಂದಿಸಿ ಕೃಷಿಮಾಡುವುದು; ಕಸಿ; ಕವಚ; ಕಟ್ಟುವ ಹಗ್ಗ; ದಾರ; ಹುರಿ.
ಕಸ್ತು ನೋವು; ಕಷ್ಟ.
ಕಸ್ತೂರಿ ಕತ್ತುರಿ, ಒಂದು ಜಾತಿಯ ಪ್ರಾಣಿಯಿಂದ ಹೊರಡುವ ಸುಗಂಧವಸ್ತು.
—ಮೃಗ ಕಸ್ತೂರಿ ಕೊಡುವ ಪ್ರಾಣಿ.
ಕಹಳೆ (ಕಾಳೆ) ತುತ್ತೂರಿ; ಒಂದು ವಾದ್ಯ.
ಕಹಿ ಒಂದು ರೀತಿಯ ರುಚಿ; ಅರುಚಿ.
ಕಹೋದ ಅಷ್ಟಾವಕ್ರನ ತಂದೆಯಾದ ಒಬ್ಬ ಬ್ರಾಹ್ಮಣ.
ಕಳ್ (ಕಳ್ಳು) ಮದ್ಯ, ಹೆಂಡ; ರಸ; ಕಳವು ಮಾಡು.
ಕಳ ಕಲ (ಸಂ), ಮನೋಹರ, ಮಧುರ; ಕಣ; ಯುದ್ಧಭೂಮಿ; ಜೂಜಿನ ರಂಗ.
ಕಳಕಳ ಕಲಕಲ, ಪಕ್ಷಿಗಳ ಧ್ವನಿ; ಗದ್ದಲ; ಜಿಂಕೆ.
ಕಳಕಳಿ ಮನೋವ್ಯಥೆ; ವ್ಯಾಕುಲತೆ, ಕಳವಳ; ಉತ್ಸಾಹ.

—ಇಸು ಪ್ರಕಾಶಿಸು; ಹೊಳೆ; ಕಳಕಳ ನಗು; ಆತುರಪಡು.
ಕಳಕಂಠ ಕೋಗಿಲೆ.
ಕಳಕುಳ ಚದರಿಹೋಗು.
ಕಳಚು ಜಾರಿಸು, ತೆಗೆ; ಕಳೆ.
ಕಳಚೂರ್ಯ (ಕಲಚೂರ್ಯ) ದಕ್ಷಿಣವನ್ನಾಳಿದ ಒಂದು ಅರಸುಮನೆತನದವರು.
ಕಳತ್ರ ಹೆಂಡತಿ.
ಕಳಮ (ಕಳಮೆ) ಬತ್ತ, ನೆಲ್ಲು.
—ಶ್ರೀ ಬತ್ತವೆಂಬ ಲಕ್ಷ್ಮಿ.
ಕಳಲ್ ಕಳಲು, ಬಡವಾಗು, ಬಲಹೀನವಾಗು, ಕ್ಷೀಣಿಸು; ಜಾರು, ಸಡಿಲಾಗು, ಕಳಚು, ಕಳಲ್ಚು; ನಾಶಮಾಡು; ಬಿಚ್ಚು; ತೆಳುವಾಗು; ಜೂರು.
ಕಳವಳ ವ್ಯಥೆ, ದುಃಖ; ಮನಸ್ಸಿನ ಪೀಡೆ.
—ಇಕೆ ಪ್ರಲಾಪ; ಗದ್ದಲ; ರೋದನ.
—ಇಗ ಕಳವಳಿಸುವವ, ವ್ಯಥೆಪಡುವವ.
—ಇಸು ದುಃಖಿಸು; ಸೀಳು.
ಕಳವು ಚೌರ್ಯ, ಕಳ್ಳತನ, ತುಡುಗು; ಕಡವು; ನದಿ ದಾಟುವ ತಾಣ.
ಕಳವೆ (ಕಳಮೆ), ತಿರಸ್ಕೃತ; ಕೆಟ್ಟ; ಮಿಶ್ರಗೊಂಡ; ಬತ್ತ.
—ಕೂಳ್ ಅಕ್ಕಿಯ ಅನ್ನ; ಉತ್ತಮ ಅನ್ನ.
ಕಳಶ (ಕಲಶ) ಸಪುರ ಬಾಯ ಜಲಪಾತ್ರೆ; ರಥಸತ್ತಿಗೆ; ಮಾಡುಗಳ ಮೇಲಿರಿಸುವ ಅಲಂಕಾರ.
ಕಳಸಿಗೆ ಧಾನ್ಯದ ಒಂದು ಅಳತೆ; ಧಾನ್ಯ ಅಳೆಯುವ ಪಾತ್ರೆ; ಜಲಪಾತ್ರೆ.
ಕಳಸು ಯುದ್ಧರಂಗ; ನಿವಾರಿಸು.
ಕಳಂಬು ಬಾಣ.
ಕಳಾಭಾವ ಒಲುಮೆ, ಪ್ರಣಯ ರೀತಿ.
ಕಳಾವಿದ (ಕಲಾವಿದ) ಕಲಾವಂತ.
ಕಳಾಸ (ಕಳಾಸು) ಹೊಂದಿಕೆ; ಜತೆ; ಮೊತ್ತ.
ಕಳಿ (ಕಳೆ) ದಾಟು, ಸಾಯು, ಅಳಿ; ಅತಿಯಾಗಿ ಕೂಗು; ಮಾಗು.
—ಪು ದೂರಕ್ಕೆ ಕಳಿಸು; ಹಿಂದೆ ಕಳುಹು; ಕದಿಯುವಿಕೆ; ಕೆಲಸಕ್ಕೆ ಬಾರದಿರುವಿಕೆ.
ಕಳಿಕೆ ಕಳಿಕಾ (ನೋಡು: ಕಲಿಕೆ).
ಕಳಿವಣ್ ಕಳಿತ ಹಣ್ಣು, ಮಾಗಿದ ಹಣ್ಣು.
ಕಳಿವರಿ ಮಿತಿಮೀರು; ಅಧಿಕವಾಗು.
ಕಳಿವೂ ಬಾಡಿದ ಹೂವು, ಮಾಸಿದ ಹೂವು.
ಕಳಿಂಗ (ನೋಡು ಕಲಿಂಗ).
ಕಳು ಕದಿ, ಕದ್ದುಕೊಳ್ಳು; ಕಡು, ನದಿ ದಾಟುವ ಸ್ಥಳ.
ಕಳುವು (ಕಳುಹು).
ಕಳೆ ಕಳೆಯು, ಬಿಡು, ತ್ಯಜಿಸು; ಕಡಿಮೆ ಮಾಡು, ಹರಿಸು, ನಿವಾರಿಸು; ಮುಖ್ಯ ಪೈರಿನ ಎಡೆಯಲ್ಲಿ ಹುಟ್ಟುವ ಇತರ ಕಾಡು ಗಿಡಗಳು; ಪ್ರಕಾಶ, ಕಾಂತಿ, ವಿದ್ಯೆ.
—ಏರು ಕಾಂತಿಯೇರು; ಪ್ರಕಾಶ ಹೊಂದು.
—ಕೊಳು ಕಾಂತಿಹೊಂದು, ಪುಟವೇರು.
—ವು ದಾಟುವಿಕೆ; ಕಡಿಯುವಿಕೆ, ಬಿಡುವಿಕೆ.
ಕಳೆದುಕೊಳ್ ನಿವಾರಿಸಿಕೊಳ್ಳು; ತೆಗೆದುಕೊ; ಇಸುಕೊಳ್ಳು, ಕಷ್ಟಪಡು.
ಕಳೇವರ ದೇಹ, ಮೈ; ಮೃತಶರೀರ.
ಕಳ್ಕತಿ ಕತ್ತಲೆ.
ಕಳ್ತಲೆ ಕತ್ತಲೆ, ನಿಶಿ, ಅಂಧಕಾರ.
ಕಳ್ಳ ಕದಿಯುವವ, ಚೋರ; ತುಡುಗ.
ಕಳ್ಳನೆ ಫಕ್ಕನೆ, ಆಕಸ್ಮಿಕವಾಗಿ.
ಕಳ್ದಿರಿ ಕದ್ದು ತಿರುಗು; ಗುಟ್ಟಾಗಿ ಮರಳು.
ಕಳ್ಳಿ ಒಂದು ಜಾತಿಯ ಬೇಲಿ ಗಿಡ; ಹಾಲಿ
ಕಳ್ಳುಕ್ಕು ಕಕ್ಕು, ಓಗಡಿಸು.
ಕಳ್ಳುಗ್ಗ ಕರಂಗು, ಕಪ್ಪಾಗು.

ನಂಥ ಸೊನೆಯುಳ್ಳ ಗಿಡ; ಮರುಭೂಮಿಯ ಒಂದು ಸಸ್ಯ.
ಕಳ್ಳು (ಕಳ್) ಹೆಂಡ; ಮದ್ಯ.
ಕಂಕ ಯಮ; ಯುಧಿಷ್ಠಿರನಿಗೆ ಅಜ್ಞಾತವಾಸದ ಸಮಯ ಈ ಹೆಸರಿತ್ತು; ನಾರಾಯಣಿ ಪಕ್ಷಿ; ಹದ್ದು.
ಕಂಕಟ ಕವಚ; ಚರ್ಮ.
—ಕ ಕವಚ; ಚರ್ಮ; ಹೊದ್ದಿಕೆ.
ಕಂಕಣ (ಕಂ=ನೀರು, ಶುದ್ಧ) ನೀರಹನಿ; ಮಾಂಗಲ್ಯದ ಗುರುತಾದ ಬಳೆ; ಕಡಗ.
ಕಂಕಣಗ್ರುಹಣ ಸೂರ್ಯಗ್ರಹಣದ ಒಂದು ವಿಧ. ಆಗ ಸುತ್ತಲೂ ಸೂರ್ಯನ ಅಂಚು ಬಿಳಿದಾಗಿ ನಡುವೆ ಕರಿದಾಗಿ ಕಾಣಿಸುವುದು.
ಕಂಕತಿಗೆ (ತಂಕತಿಗೆ) ಹಣಿಗೆ.
ಕಂಕನರಿ ನರಿಗಳಲ್ಲಿ ಒಂದು ಜಾತಿ. ಇದು ತೋಳನನ್ನು ಹೋಲುವುದು.
ಕಂಕಪತ್ರು ಹದ್ದಿನ ಗರಿ ಕಟ್ಟಿದ ಬಾಣ, ಬಾಣ.
ಕಂಕರ (ದ್ಭ) ಖಂಕರ (ಸಂ), ಜಲ್ಲಿಕಲ್ಲು; ಕಲ್ಲುಹರಳು; ಬೆಣಚುಕಲ್ಲು.
ಕಂಕರಿಕೆ (ದ್ಭ) ಕಂಕಣೀಕೆ (ಸಂ), ಮುಂಗೈ ಬಳೆ; ಗೆಜ್ಜೆಕಟ್ಟಿದ ಬಳೆ.
ಕಂಕರಿಗೋಲ್ ಚಬುಕು, ಚಾಟಿ, ಚಮ್ಮಟಗೆ.
ಕಂಕಾಲ ಅಸ್ಥಿಪಂಜರ, ಎಲುಬಿನ ಗೂಡು.
—ಧರ ಅಸ್ಥಿಪಂಜರ ಹಿಡಿದವ, ಶಿವ.
ಕಂಕುಳು ತೋಳುಸಂದಿನ ಒಳಭಾಗ.
ಕಂಗಡೆ ಕಡೆಗಣ್ಣು, ಅಪಾಂಗ; ಕಣ್ಣಕುಡಿ.
ಕಂಗಳ ಕುರುಡು.
ಕಂಗಾರು ಅಸಂತೃಪ್ತಿ, ಕೋಪ; ಆಸ್ಟ್ರೇಲಿಯದ ಒಂದು ಪಶು.
ಕಂಗಾಲ ದರಿದ್ರ, ಬಡವ; ಭಿಕ್ಷುಕ; ತಬ್ಬಲಿ.
ಕಂಗಾಲು ದಿಕ್ಕುಗೆಡುವಿಕೆ, ಬೆದರಿಕೆ.
ಕಂಗು (ದ್ಭ) ಕವುಂಗು, ಕ್ರಮುಕ (ಸಂ), ಅಡಕೆ ಮರ; ನವಣೆ.
ಕಂಗೆಡು (ಕಣ್ಗೆಡು) ದಿಕ್ಕು ತೋರದಿರು; ಗಾಬರಿಗೊಳ್ಳು.
ಕಂಗೊಳಿಸು ಹೊಳೆ, ಪ್ರಕಾಶಿಸು; ಮನೋಹರವಾಗಿ ಕಾಣು.
ಕಂಚರೆ ಕಂಚಿನ ಗೂಡು.
ಕಂಚಿ ನಿಂಬೆ ಜಾತಿಯ ಒಂದು ಕಹಿ ಕಾಯಿ.
ಕಂಚಿನಿ ನರ್ತಕಿ.
ಕಂಚು (ದ್ಭ) ಕಾಂಸ್ಯ (ಸಂ), ತಾಮ್ರ ಮತ್ತು ತವರಗಳ ಮಿಶ್ರಲೋಹ.
—ಗಾರ ಕಂಚಿನ ಕೆಲಸಮಾಡುವವ; ಒಂದು ಜಾತಿಯ ತುಂಬಿ ಹುಳು.
ಕಂಚುಕ ಕುಪ್ಪಸ; ಹಾವಿನ ಮೇಲಿನ ಹೆರೆ; ಯುದ್ಧಕವಚ.
ಕಂಚುಕಿ ಸೇವಕ, ರಾಣಿವಾಸದ ಕಾವಲುಗಾರ.
ಕಂಜ (ಕಂ=ನೀರು) ಕಮಲ, ತಾವರೆ; ಬ್ರಹ್ಮ.
—ಗುಣ (ಗುಣ=ನಾರು) ತಾವರೆನಾಳದ ನಾರು.
ಕಂಜರ ಆನೆ; ಸೂರ್ಯ; ಬ್ರಹ್ಮ; ಹೊಟ್ಟೆ.
ಕಂಜಸಖ ತಾವರೆಯ ಗೆಳೆಯ; ಸೂರ್ಯ.
ಕಂಜಾತ ಕಮಲ; ಚಂದ್ರ; ತಾರಕಾಸುರ.
ಕಂಟ (ದ್ಭ) ಕಂಠ (ಸಂ), ತಾಳೆ ಓಲೆಯ ಮೇಲೆ ಬರೆಯಲು ಉಪಯೋಗಿಸುವ ಒಂದು ಕಬ್ಬಿಣದ ಮೊನಚುಕಡ್ಡಿ.
ಕಂಟಕ ಮುಳ್ಳು; ಉಪದ್ರವ; ವಿಘ್ನ; ಅಲ್ಪ ಶತ್ರು; ರೋಮಾಂಚ; ಜನ್ಮಲಗ್ನಕ್ಕೆ 10 ನೆಯ ಇಲ್ಲವೆ 7ನೆಯ ಸ್ಥಾನ; ಕಾಳಗ; ಅಪಾಯ; ಸಿದ್ಧಾರ್ಥನ ಕುದುರೆಯ ಹೆಸರು.
—ಇ ಮುಳ್ಳುಳ್ಳುದು; ಉಪದ್ರಕಾರಿ.

ಕಂಟಕದ್ರುಮ ಮುಳ್ಳುಳ್ಳ ಮರ; ಬೂರುಗದ ಮರ.
ಕಂಟಣೆ ತಗ್ಗುವಿಕೆ; ಎದೆಗೆಡುವಿಕೆ.
—ಇಸು ಕುಗ್ಗು; ಬೆದರು.
ಕಂಟಿ (ದ್ಭ) ಕಂಠಿ (ಸಂ), ಕೊರಳ ಸರ; ಏಕಾವಳಿ, ಒಂದೆಳೆಯ ಹಾರ.
—ಕೆ ಕಂಠಿಕೆ (ಸಂ), ಕೊರಳ ಹಾರ, ಏಕಾವಳಿ.
ಕಂಠ ಕೊರಲ ಧ್ವನಿ; ಕೊರಲು; ನಾದ; ನದಿಯ ಒಳಭಾಗ; ಸಮೀಪ; ತಾಳೆಗರಿಯ ಮೇಲೆ ಬರೆಯುವ ಲೋಹದ ಕಡ್ಡಿ.
—ಪಾಠ ಬಾಯಿಪಾಠ.
ಕಂಠಣೆ (ನೋಡು: ಕಂಟಣೆ).
ಕಂಠಿ (ನೋಡು: ಕಂಟಿ).
ಕಂಠೀರವ ಕೊರಳಲ್ಲಿ ಧ್ವನಿಯುಳ್ಳುದು; ಸಿಂಹ; ಮದವೇರಿದ ಆನೆ; ಪಾರಿವಾಳ.
ಕಂಡ ಖಂಡ (ಸಂ), ಮಾಂಸ.
ಕಂಡಣೆ ಕಂಡಿತ, ನಿಜ; ಒಪ್ಪಂದ.
ಕಂಡರಣೆ ಕಡೆತ, ಕಡಿದು ಮಾಡಿದ ಕಲಾವಸ್ತು; ಆಕೃತಿ ಶಿಲ್ಪ; ಕೆತ್ತುವುದು.
ಕಂಡರಿಸು ಕೆತ್ತು, ಕೆತ್ತಿ ಚಿತ್ರಿಸು; ಆಕಾರವನ್ನು ಕೆತ್ತು; ಕೆತ್ತನೆ ಕೆಲಸಮಾಡು.
ಕಂಡಿ ವೇಷ; ಸ್ಥಿತಿ; ರಂಧ್ರ, ತೂತು; ಕಿಟಕಿ.
ಕಂಡಿಕೆ ಜೂರು; ತಾಳು; ನೇಕಾರನ ಲಾಲಿ.
ಕಂಡಿತ ನಿಜ, ದೃಢ.
ಕಂಡಿವಲೆ ಅನೇಕ ಜೂರು ಬಲೆಗಳನ್ನು ಕೂಡಿಸಿ ಮಾಡಿದ ಬಲೆ; ಕಂಡಿಯಲ್ಲಿ ಇರಿಸುವ ಚಿಕ್ಕ ಬಲೆ; ಕೂಡೊಲೆ.
ಕಂಡು (ದ್ಭ) ಖಂಡ (ಸಂ), ತುಂಡು; ನೋಡಿ.
ಕಂಡುಗ ಒಂದು ಅಳತೆ, 20 ಕೊಳಗ.
ಕಂಡೂತಿ ತುರಿಸುವಿಕೆ, ತಿಂಡಿ, ತುರಿಕೆ.
ಕಂಡೂಯನ ನವೆ, ತೀಟೆ, ತುರಿಕೆ.
ಕಂಡೆಯ ಖಂಡೆಯ (ಸಂ), ಖಡ್ಗ, ಕತ್ತಿ.
—ಸಿರಿ ಕತ್ತಿಯ ಸಂಪತ್ತು, ಪರಾಕ್ರಮ.
ಕಂಡೊರೆ (ನೋಡು: ಕಂಡೂತಿ).
ಕಂತಿ ಒಬ್ಬ ಜೈನ ಕವಯಿತ್ರಿ; ಯೋಗಿನಿ.
ಕಂತು ಮುಳುಗು; ಸುಖವುಳ್ಳವ; ಕಾಮ, ಮನ್ಮಥ.
ಕಂತುಕ ಕಂದುಕ; ಚೆಂಡು.
ಕಂತೆ ಹೊರೆ; ಹಾಳುಹರಟೆ.
ಕಂತೆಪುರಾಣ ವ್ಯರ್ಥಾಲಾಪ; ಪೊಳ್ಳು ಮಾತು.
ಕಂತೆವೂರೆ ಕಂತೆಬೊಂತೆಯಾಗಿ ಜೋಡಿಸು. ಹರುಕುಮುರುಕಾಗಿ ಸೇರಿಸು.
ಕಂಥೆ ಕಂತೆ, ಕವುದಿ; ಹರಕುಗಳನ್ನು ಸೇರಿಸಿ ಹೊಲಿದ ಹೊದಿಕೆ.
ಕಂದ ಕರು; ಗಡ್ಡೆ; ಕುತ್ತಿಗೆ; ಸಣ್ಣ ಮಗು, ಸಣ್ಣ ಮರಿ; ಒಂದು ಪದ್ಯ ಜಾತಿ.
ಕಂದಕ ಕೋಟೆಯ ಸುತ್ತಲಿನ ಕುಣಿ.
ಕಂದರ ಗುಹೆ, ಗವಿ.
ಕಂದರ್ಪ ಹೆಮ್ಮೆಯುಳ್ಳವ; ಕಾಮ, ಮನ್ಮಥ.
ಕಂದಲ್ ಮಣ್ಣಿನ ಪಾತ್ರೆ; ಮೊಳಕೆ; ಕೆನ್ನೆ.
ಕಂದವಿ ಗಡ್ಡೆಗಳನ್ನು ಕಿತ್ತುತಿನ್ನುವ ಒಂದು ಬಗೆಯ ಜಿಂಕೆ; ಒಂದು ಪೊದೆ; ಪತಾಕೆ, ಬಾವುಟ; ತಾವರೆಯ ಬೀಜ.
ಕಂದಳ ಕಪೋಲ; ಕೆನ್ನೆ; ಹೆಗಲು; ಗಡ್ಡೆ.
ಕಂದು ಬಾಡು; ಕುಂದು, ಮಲಿನವಾಗು, ಕಾಂತಿ ಕಳೆದುಕೋ; ಕರೆ; ಕಳಂಕ; ವ್ಯಸನ; ಎಳೆಯ ಬಾಳೆಗಿಡ.
—ಕುಂದು ವ್ಯಸನ, ದುಃಖ.
ಕಂದುಕ ಚೆಂಡು.
ಕಂಧರ ಕುತ್ತಿಗೆ; ಮುಗಿಲು, ಮೋಡ.
ಕಂಧರಬಂಧ ಹೆಗಲು.
ಕಂಧಿ ಕುತ್ತಿಗೆ.
ಕಂಪ ನಡುಕು; ಜವುಗು ನೆಲ.
ಕಂಪಣ (ಕಂಪನ) ನಡುಕ; ಒಂದು

ಆಯುಧ; ಒಂದು ದೇಶೀಯ ಅಂಕಿತ ನಾಮ.

**ಕಂಪಲ್** (ಕಂಪಲು) ಕಂಬಳ; ಗಂಗೆದೊಗಲು, ದನ ಎತ್ತುಗಳ ಕತ್ತಿನಲ್ಲಿ ತೂಗುವ ಮಾಂಸದ ಹಾಳೆ; ವಾಸನೆ; ನಡುಕು.

**ಕಂಪು** ಸೌರಭ, ಪರಿಮಳ; ಆಮೋದ.

—ಉಗು ಸುವಾಸನೆ ಬೀರು, ಪರಿಮಳ ಹರಡು.

—ಒಡೆ ಪರಿಮಳ ಸೂಸು.

—ಪಡೆ ಪರಿಮಳ ತಾಳು; ವಾಸನೆಗೊಳ್ಳು.

**ಕಂಬಚ್ಚು** ಅಕ್ಕಸಾಲೆ ಸರಿಗೆಗಳನ್ನು ಎಳೆದು ಸಪುರಮಾಡಲು ಉಪಯೋಗಿಸುವ ತೂತುಗಳುಳ್ಳ ಒಂದು ಅಚ್ಚು.

**ಕಂಬನಿ** ಕಣ್ಣಿನ ಹನಿ, ಕಣ್ಣೀರು.

—ಕರೆ ಅಳು, ಕಣ್ಣೀರು ಸುರಿಸು.

—ತುಳುಕು ಕಣ್ಣಿಂದ ನೀರು ಸೂಸು.

—ತುಂಬು ಕಣ್ಣೀರು ತುಂಬುವಿಕೆ.

—ತೊಡೆ ಕಣ್ಣೀರು ಒರಸು.

**ಕಂಬಲ** ಕಂಬಳಿ (ದ್ಭ), ಕುರಿ ರೋಮದಿಂದ ಮಾಡಿದ ಬಟ್ಟೆ; ಒಂದು ವಿಧದ ಜಿಂಕೆ; ಸರ್ಪ; ಪೀಠ; ಆಸನ.

**ಕಂಬಳ** ಕೋಣಗಳನ್ನು ಓಡಿಸುವ ಸ್ಪರ್ಧೆ; ಸಾಗುವಳಿಯ ಪ್ರಾರಂಭದ ಒಂದು ಉತ್ಸವ; ಉತ್ಸಾಹದ ಗದ್ದಲ.

**ಕಂಬಿ** ಭಾರಹೊರಲು ಉಪಯೋಗಿಸುವ ಬಿದಿರಿನ ಗಳ, ಕಾವಡಿಕೋಲು; ಅಡ್ಡೆ; ಕೋಲು; ಬೆತ್ತ; ಗದೆ; ಸರಿಗೆ; ಕಿರಣ ಪಂಕ್ತಿ.

**ಕಂಬಿಗ** ಕೈಯಲ್ಲಿ ಕೋಲು ಹಿಡಿದವ, ಪಡಿಯರ; ದ್ವಾರಪಾಲಕ.

**ಕಂಬು** (ಕಂ=ನೀರು, ಬು=ಹುಟ್ಟು) ಶಂಖ; ಮದ್ದಾನೆ; ಒಂದು ಬಗೆ ಧಾನ್ಯ.

—ಕಂಠ ಶಂಖದಂತೆ ಕೊರಳುಳ್ಳವ.

—ಗ್ರೀವೆ ಶಂಖದಂತೆ ಕೊರಳುಳ್ಳವಳು.

**ಕಂಬೋಜ** ಹಿಂದುಸ್ಥಾನದ ಉತ್ತರದ ಒಂದು ದೇಶ; ಅಫ್ಘಾನಿಸ್ಥಾನ; ಕಾಂಬೋದಿಯ ರಾಜ್ಯ; ಆನೆಗಳಲ್ಲಿ ಒಂದು ಜಾತಿ; ಶಂಖಭೇದ.

**ಕಂಭ** ಸ್ತಂಭ (ಸಂ), ಕಂಬ, ಆಧಾರಕ್ಕೆ ನಡುವ ಮರ ಇಲ್ಲವೆ ಕಲ್ಲಿನ ಒತ್ತು.

**ಕಂಸ** ಮಥುರೆಯ ದೊರೆ ಉಗ್ರಸೇನನ ಮಗ. ಇವನ ತಂಗಿ ದೇವಕಿಯಲ್ಲಿ ಕೃಷ್ಣನು ಹುಟ್ಟಿದನು. ಈ ಕ್ರೂರ ಅರಸನ ಕೊಲೆಯು ಕೃಷ್ಣನಿಂದ ಆಯಿತು. ಕಂಚು; ಚಿನ್ನಬೆಳ್ಳಿಗಳಿಂದಾದ ಪಾನಪಾತ್ರೆ; ಆಢಕ; ಹಿತ್ತಾಳೆ; ಬರೆಯುವಾಗ ಹಾಕುವ ( ) ಈ ಆವರಣ.

—ಅರಿ ಕೃಷ್ಣ.

—ಅಂತಕ ಕೃಷ್ಣ.

—ಆರಾತಿ ಕಂಸನ ಹಗೆ; ಕೃಷ್ಣ.

**ಕಂಸಾಳ** (ದ್ಭ) ಕಾಂಸ್ಯತಾಲ (ಸಂ), ಕಂಚಿನ ತಾಳ.

**ಕಂಸಾಳಕ** ಅಕ್ಕಸಾಲಿಗ.

**ಕಾ** ಕಾಯು, ರಕ್ಷಿಸು.

**ಕಾಕ** ಕಾ ಎಂದು ಕೂಗುವುದು, ಕಾಗೆ; ಹೆಮ್ಮೆಗಾರ; ಉದ್ಧಟ ವ್ಯಕ್ತಿ.

**ಕಾಕತಾಲೀಯ** ಕಾಗೆ ಬಂದು ಕುಳಿತುದಕ್ಕೆ ಸರಿಯಾಗಿ ತಾಳೆಯ ಹಣ್ಣು ಉದುರಿ ಬಾಯಿಗೆ ಬಿದ್ದಂತೆ—ಎಂಬ ನ್ಯಾಯ; ಅಕಸ್ಮಾತ್ ಆದುದು.

**ಕಾಕಪಕ್ಷ** ಕಾಗೆಯ ರೆಕ್ಕೆಯಂತೆ ಇಕ್ಕಡೆ ಕಪ್ಪಾಗಿ ಬೀಳುವ ತಲೆ ಕೂದಲು; ಮಕ್ಕಳ ಕುಚ್ಚು, ಜುಲ್ಪಿ ಕೂದಲು.

**ಕಾಕಬಲಿ** ಊಟದ ಮೊದಲು ಕಾಗೆಗೆ ನೀಡುವ ಅನ್ನ.

ಕಾಕಬಳಸು ದೈನ್ಯತೆ ತೋರು, ಅತಿ ವಿನಯ ತೋರು; ದುರ್ಮಾರ್ಗ ಹಿಡಿ.

ಕಾಕಬುದ್ಧಿ ಕುವಿಚಾರ; ಕೆಟ್ಟ ವಿಚಾರ; ಉದ್ಧಟತನ.

ಕಾಕಲಿ ಮೃದುವಾದ ಗಾನ.

ಕಾಕಂಬಿ ಸಕ್ಕರೆ ತಯಾರಿಯಲ್ಲಿ ಉಳಿಯುವ ಮಡ್ಡು.

ಕಾಕಾರಿ ಕಾಗೆಯ ವೈರಿ, ಗೂಬೆ.

ಕಾಕಿ ಹೆಣ್ಣು ಕಾಗೆ.

ಕಾಕು ಉದ್ರೇಕಗೊಳ್ಳು; ಗಡಿಬಿಡಿಯಾಗು; ಭೀತಿಗೊಳಗಾಗು; ವಕ್ರ; ಒರಟು; ಕೆಟ್ಟ; ದುರ್ವಾಸನೆ; ಕೊಂಕುನುಡಿ; ದೇಶಿ; ಒತ್ತು.

ಕಾಕುತ್ಸ್ಥ ಕಕುತ್ಸ್ಥವಂಶದಲ್ಲಿ ಹುಟ್ಟಿದವ; ಅದರಲ್ಲಿ ಹೆಸರಾದ ರಾಮಚಂದ್ರ.

ಕಾಕುನುಡಿ ತಿಳಿವಿಲ್ಲದ ಮಾತು; ಕೆಟ್ಟ ಮಾತು.

ಕಾಕುಮತಿ ಕೆಟ್ಟ ಮನಸ್ಸು; ದುರ್ವಿಚಾರ, ಹೀನ ವಿಚಾರ.

ಕಾಕೋದರ ಹಾವು.

ಕಾಕೋಲ ಮಂಡ ಕಾಗೆ, ಕಾಗೆಗಳಲ್ಲಿ ದೊಡ್ಡ ಜಾತಿ; ಹಗೆ; ವಿಷ.

ಕಾಗಜ ಕಾಗದ.

ಕಾಗಡಿ (ನೋಡು: ಕಾವಡಿ).

ಕಾಗಿಣಿ ಕವಡೆ.

ಕಾಗುಣಿತ ಕ ಕಾ ಕಿ ಕೀ ಇತ್ಯಾದಿ ವ್ಯಂಜನಾಕ್ಷರ ಸ್ವರಗಳ ಗುಂಪು.

ಕಾಗುದುರೆ ನೀಚ ಕುದುರೆ, ಕೆಟ್ಟ ಕುದುರೆ.

ಕಾಗೆ ಕಾಕ, ವಾಯಸ.

ಕಾಚು ಕದಿರಮರದ ಸಾರದಿಂದ ಮಾಡುವ ಒಗರು ಸತ್ವ.

ಕಾಜವಾರ ಕಾಸರಕ.

ಕಾಜು (ನೋಡು: ಗಾಜು).

ಕಾಟ ತೊಂದರೆ, ಉಪಟಳ; ಕಡಿತ.

ಕಾಟಕ ಕಾಡಿನ ರಕ್ಷಕ, ಬೇಡ; ಉಪದ್ರವ.

ಕಾಟಕಾಯಿ ಮುತ್ತಿಗೆ; ಸೂರೆ.

ಕಾಟಕೋನ ಸಮಕೋನ.

ಕಾಟಿ ಕಾಡೆತ್ತು; ಕಾಡುಕೋಣದ ಒಂದು ಭೇದ.

ಕಾಟು (ಕಾಡು) ಅಶಿಕ್ಷಿತ, ಅಸಂಸ್ಕೃತ; ಸಾಧುವಲ್ಲದ; ಡಜೆ; ಕಡಿತ.

ಕಾಟೆ ಗಂಜಿ; ಹುಳಿತ ಮದ್ಯ.

ಕಾಠಿಣ್ಯ ಕಠಿಣತೆ, ಗಟ್ಟಿತನ; ಬಿರುಸುತನ.

ಕಾಡವೆ (ಕಡವೆ).

ಕಾಡಿ ಕಾಡಿನ ಸ್ತ್ರೀ.

ಕಾಡಿಗೆ ಕಣ್ಕಪ್ಪು, ಕಣ್ಣಿಗೆ ಸವರುವ ಮಸಿ.

ಕಾಡು ಅರಣ್ಯ, ಕಾನನ; ಅನಾಗರಿಕ, ಅಸಭ್ಯ; ತೊಂದರೆಕೊಡು.

—ಇಕೆ ತೊಂದರೆ, ಉಪದ್ರವ.

—ಇಗ ತೊಂದರೆ ಕೊಡುವವ, ಉಪದ್ರವಿ.

—ಹ ಕಾಡುವಿಕೆ, ತೊಂದರೆ.

ಕಾಡೆಮ್ಮೆ ಕಾಡಿನ ಎಮ್ಮೆ; ದುಡ್ಡು.

ಕಾಡ್ಕೋಣ ಕಾಟ ಜಾತಿಯ ಒಂದು ಪ್ರಾಣಿ; ದುಡ್ಡು.

ಕಾಡ್ಗಿಚ್ಚು (ಕಾಳ್ಗಿಚ್ಚು) ಕಾಡನ್ನು ಹೊತ್ತಿ ಉರಿಸುವ ಬೆಂಕಿ, ದಳ್ಳುರಿ.

ಕಾಣ ಒಕ್ಕಣ್ಣಿನವ.

ಕಾಣಿ ಒಂದು ಜಾತಿಯ ಮೀನು; ನಾಣ್ಯದ $\frac{1}{64}$ನೇ ಅಂಶ; ಕಾಣಿಕೆ; ತಕ್ಕಡಿಯ ಏರುಪೇರು.

ಕಾಣಿಕೆ ಕಾಣುವಿಕೆ, ಕಾಣುವುದು; ನಜರು; ಬಹುಮಾನ; ಕಪ್ಪ.

—ಕೊಡು ನಜರುಮಾಡು.

—ಕೊಳು ಕಪ್ಪಪಡೆಯು; ನಜರು ಪಡೆಯು; ಗೆಲ್ಲು.

ಕಾಣು (ಕಾಣ್) ನೋಡು; ಈಕ್ಷಿಸು.
—ಹ ಕಾಣುವಿಕೆ, ನೋಟ.
ಕಾಣೂಕ ಒಂದು ವಿಧದ ಬಾತು; ಕಾಗೆ; ಹುಂಜ.
ಕಾಣ್ಕೆ (ನೋಡು: ಕಾಣಿಕೆ).
ಕಾಣ್ಮೆ ಶೌರ್ಯ, ಪರಾಕ್ರಮ.
ಕಾತರ ತಳಮಳ, ಗಾಬರಿ; ತವಕ; ಆತುರ.
—ಇಸು ಏನಾಗುವುದೋ ಎಂದು ಬೆದರು, ಬೆಚ್ಚು.
ಕಾತಳ ಕಾತರ; ತಳ್ಳಂಕ; ಭಯ.
ಕಾತಿ (ದ್ಭ) ಖಾತಿ (ಸಂ), ಸಿಟ್ಟು; ಹುರಿಹಗ್ಗ.
—ಗೊಳ್ ಸಿಟ್ಟಾಗು, ರೇಗು, ಕೋಪಿಸು.
ಕಾತ್ಯಾಯನಿ ದುರ್ಗೆ; ನಡು ಹರೆಯದ ವಿಧವೆ; ಯಾಜ್ಞವಲ್ಕ್ಯ ಋಷಿಯ ಹೆಂಡತಿ.
ಕಾತ್ಯಾಯನ ಪಾಣಿನಿಯ ವ್ಯಾಕರಣಗಳಿಗೆ ವ್ಯಾಖ್ಯಾನ ಬರೆದ ಹೆಸರಾದ ಬರಹಗಾರ. ಇವನಿಗೆ ವರರುಚಿಯೆಂದೂ ಹೆಸರಿತ್ತು.
ಕಾದಲ್ ಪ್ರೀತಿ; ನಲ್ಮೆ; ಕಾದಾಡಲು.
ಕಾದಲ ಪ್ರಿಯ, ಇನಿಯ; ಪತಿ, ನಲ್ಲ.
ಕಾದಲೆ ಪ್ರಿಯತಮ, ಪ್ರಿಯಳಾದವಳು.
ಕಾದಂಬ ಬಾಲಹಂಸ; ಬಾಣ; ಕಬ್ಬು; ಒಂದು ಜಾತಿಯ ಬಾತು; ಕದಂಬಕ್ಕೆ ಸಂಬಂಧಿಸಿದ; ಈಚಲ ಮರ.
ಕಾದಂಬನಿ ಮೇಘ, ಮುಗಿಲು, ಮೋಡ.
ಕಾದಂಬರಿ ನೀಳ್ಗತೆ; ಈಚಲ ಹೆಂಡ; ಬಾಣಭಟ್ಟನು ರಚಿಸಿದ ಮಹಾಶ್ವೇತೆಯ ಕತೆಯನ್ನು ಒಳಗೊಂಡ ಗದ್ಯ ಕಾವ್ಯ.
ಕಾದಿಗೆ (ದ್ಭ) ಖಾತಿಕಾ (ಸಂ), ಅಗಳು; ಕೋಟೆ ಹೊರಗಿನ ಕಂದಕ.
ಕಾದು ಯುದ್ಧಮಾಡು; ಜಗಳಾಡು; ಕಾಯ್ದು.
—ಹ ಕಾದಾಟ, ಸಮರ, ಕಾಳಗ.
ಕಾನ್ (ಕಾನು) ಕಾಡು.
ಕಾನನ ಅರಣ್ಯ, ಕಾಡು, ಅಡವಿ.
ಕಾನನಕುಸುಮ ಕಾಡ ಹೂವಿನಂತೆ ಯಾರ ಗಮನಕ್ಕೂ ಬಾರದಿರುವುದು.
ಕಾನನವಲ್ಲರಿ ಹೊನ್ನಿನ ಬಳ್ಳಿ.
ಕಾನೀನ ಕನ್ಯೆಯಲ್ಲಿ ಹುಟ್ಟಿದವ; ಮದುವೆಯಾಗದವಳಲ್ಲಿ ಜನಿಸಿದಾತ; ವ್ಯಾಸ; ಕರ್ಣ; ಯೇಸು.
ಕಾನೂನು ಸರಕಾರದ ಕಾಯಿದೆ, ಶಾಸನ.
ಕಾನ್ಮಿಗ ಕಾಡುಮೃಗ, ಕಾಡುಜಿಂಕೆ.
ಕಾನ್ಯಕುಬ್ಜ (ನೋಡು: ಕನ್ಯಾಕುಬ್ಜ).
ಕಾಪಥ (ಕಾ=ಕೆಟ್ಟ) ಕೆಟ್ಟ ದಾರಿ, ನೀಚ ಮಾರ್ಗ.
ಕಾಪಾಲ ಕಣತಲೆ, ಕೆನ್ನೆ.
ಕಾಪಾಲಿಕ (ಕಾಪಾಲಿ) ಒಂದು ಶೈವಪಂಥದ ಹೆಸರು; ಕಾಪಾಲಿಕ ಪಂಥದವ.
ಕಾಪು (ಕಾಹು) ಕಾಯುವಿಕೆ, ಕಾವಲು, ರಕ್ಷಣೆ; ದೃಷ್ಟಿಚುಕ್ಕೆ, ಸೋಂಕು.
—ಇಡು ರಕ್ಷಿಸು, ಕಾಯು, ಕಾವಲಿಡು.
ಕಾಪುರುಷ ನೀಚವ್ಯಕ್ತಿ; ಹೇಡಿ; ಅಲ್ಪ.
ಕಾಪೋತ ಸುರಮಾ; ಕಪೋತವರ್ಣ; ಬೂದುಬಣ್ಣ.
ಕಾಬಾ ಮಕ್ಕಾದಲ್ಲಿನ ಮುಸಲ್ಮಾನರ ಒಂದು ಮಜೀದಿ.
ಕಾಮ (ಸಂ) ಕಾವ (ದ್ಭ), ಮನ್ಮಥ, ಕಂದರ್ಪ, ಅನಂಗ; ಬಯಕೆ.
—ಇತ ಬಯಸಿದ.
—ಕೂಟ ವ್ಯಭಿಚಾರ.
—ಜ ಅನಿರುದ್ಧ.
—ನೆ ಬಯಕೆ.
ಕಾಮಗಾರಿ ಕೆಲಸ, ಉದ್ಯೋಗ.
ಕಾಮಚಾರ ಮನಬಂದಂತೆ ವರ್ತಿಸುವವ, ಸ್ವೇಚ್ಛಾಚಾರಿ.

ಕಾಮಜ್ವರ ವಿರಹತಾಪ; ಅನುರಾಗದಿಂದುಂಟಾಗುವ ಬೇನೆ.

ಕಾಮಣಿ ಕಾಮಿಲೆ, ಅರಸಿನ ಮುಂಡಿಗೆ.

ಕಾಮದಹನ ಹೋಳಿಹಬ್ಬ; ಕಾಮನನ್ನು ಸುಡುವುದು.

ಕಾಮಧೇನು ಬಯಸಿದುದನ್ನು ಕೊಡುವ ಸ್ವರ್ಗದ ಹಸು. ಸ್ವರ್ಗದ ಈ ಗೋವನ್ನು ಕಾರ್ತವೀರ್ಯನು ಜಮದಗ್ನಿಯಿಂದ ಕದ್ದು ತಂದನೆಂದೂ ಪರಶುರಾಮನು ಅದನ್ನು ಮರಳಿ ಗೆದ್ದನೆಂದೂ ಕಥೆ ಇದೆ.

ಕಾಮಧ್ವಂಸಿ ಶಿವ.

ಕಾಮಪಾಲ ಮನ್ಮಥನನ್ನು ತನ್ನ ಮಗನಂತೆ ಕಂಡವ, ಬಲರಾಮ.

ಕಾಮಬಾಣ ಪಂಚಬಾಣಗಳು; ಕಾಮಪ್ರೇರಣೆ.

ಕಾಮರೂಪ ಈಗಿನ ಅಸ್ಸಾಮು ದೇಶ; ನರಕಾಸುರನ ರಾಜ್ಯ; ಬಯಸಿದ ರೂಪ ತಾಳಬಲ್ಲವ.

ಕಾಮರೂಪಿ ಬಯಸಿದ ರೂಪವನ್ನು ತಾಳಬಲ್ಲವ.

ಕಾಮಂಚಿ ಮಜ್ಜಿಗೆ ಹುಲ್ಲು.

ಕಾಮಾಕ್ಷಿ ದುರ್ಗೆ.

ಕಾಮಾಂಧ ಕಾಮದಿಂದ ಕುರುಡಾದವ; ಕಾಮಗೊಂಡುದರಿಂದ ತನ್ನ ಕೆಲಸದ ಹಿತಾಹಿತಗಳನ್ನು ಚಿಂತಿಸಲಾರದವ.

ಕಾಮಿ ಕಾಮುಕ, ವಿಟ; ಕಾಮಪ್ರೇರಿತ; ಇಚ್ಛಿಸುವವ.

ಕಾಮಿತ ಬಯಸಿದ್ದು.

ಕಾಮಿನಿ ಪ್ರಿಯಳು; ಸ್ತ್ರೀ.

ಕಾಮಿಲೆ ಪಿತ್ಥದಿಂದಾಗುವ ರೋಗ; ಅರಸಿನ ಮುಂಡಿಗೆ.

ಕಾಮುಕ ಕಾಮಿ; ಭೋಗಾಪೇಕ್ಷಿ; ಘಟಂಗ.

ಕಾಯ್ (ಕಾಯು) ರಕ್ಷಿಸು, ಕಾಪಾಡು; ಕಾವಲಿಡು; ರೇಗು; ಬಿಸಿಯಾಗು; ಕನಲು; ಕಾಯಾಗು.

—ಇಕೆ ಕಾವಲು, ಕಾಹು.

ಕಾಯ ದೇಹ, ಶರೀರ.

—ಕ ಶರೀರಕ್ಕೆಸಂಬಂಧಿಸಿದ; ಉದ್ಯೋಗ, ಕೆಲಸ.

—ಜ ದೇಹದಿಂದ ಹುಟ್ಟಿದವ, ಮನ್ಮಥ.

ಕಾಯಮಾನ (ಸಂ) ಕಾವಣ (ದ್ಭ), ಮಂಟಪ, ಚಪ್ಪರ.

ಕಾಯಸ್ಥ ಬರಹಗಾರ, ಗುಮಾಸ್ತ; ಬಂಗಾಳ ದೇಶದ ಒಂದು ಜಾತಿಯ ಜನ; ನೆಲ್ಲಿಕಾಯಿ; ಅಣಿಲೆಕಾಯಿ.

ಕಾಯಿ ಸಿಟ್ಟು, ಕೋಪ; ಅಪಕ್ವ ಫಲ; ತೆಂಗಿನಕಾಯಿ; ಬಿಸಿಯಾಗು.

ಕಾಯು (ನೋಡು: ಕಾಯ್).

ಕಾಯ್ಪು ಉಷ್ಣ; ಸಿಟ್ಟು; ಮುನಿಸು; ಪರಾಕ್ರಮ.

ಕಾರ್ (ಕಾರು) ಕಪ್ಪು ಬಣ್ಣ; ಮಳೆಗಾಲ; ಮುಗಿಲು; ಸುರಿ; ಓಕರಿಸು.

—ಇಡು ಕಪ್ಪಾಗು; ಮುಗಿಲೊಡ್ಡು; ವಾಂತಿಮಾಡು, ಕಕ್ಕು.

—ತಿಂಗಳು ಮಳೆಯ ತಿಂಗಳು.

ಕಾರ (ದ್ಭ) ಕ್ಷಾರ (ಸಂ), ಉಪ್ಪು; ಕಟುವಾದುದು; ಮಾಡುವವ.

—ಕ ಮಾಡಿಸುವವ; ಹೇತು.

ಕಾರಕೂನ ಗುಮಾಸ್ತ, ಕರಣಿಕ.

ಕಾರಣ ನೆಪ, ನೆವ; ಕರ್ಮಕ್ಕೆ ಬೇಕಾದ ಆಧಾರ, ಹೇತು.

—ಪುರುಷ ಕಾರಣನಾದವನು, ಹೇತುವಾದವ; ಮಹಾಪುರುಷ.

ಕಾರಣಾಂತ ಕಾರಣವಿಲ್ಲದ, ಆಕಸ್ಮಿಕ.

ಕಾರಣಿಕ ಪರೀಕ್ಷಕ.

ಕಾರಣೆ ಗೋಡೆಯ ಕೆಳಗಡೆ ಸವರುವ ಬಣ್ಣದ ಅಂಚು; ಬಣ್ಣದ ಗೆರೆ.
ಕಾರಭಾರ (ಕಾರುಭಾರ) ಮಹತ್ವದ ಕೆಲಸ.
— ಇ ದೊಡ್ಡ ಕೆಲಸ ಮಾಡುವವ.
ಕಾರಮಿಂಚು ಮಳೆಗಾಲದ ಮಿಂಚು; ಕತ್ತಲೆಯಲ್ಲಿ ಹೊಳೆಯುವ ಮಿಂಚು.
ಕಾರಂಜಿ ನೀರಿನ ಚಿಲುಮೆ; ನೀರು ಹಾರುವ ಊಟೆ.
ಕಾರಂಡ ಒಂದು ಜಾತಿಯ ಬಾತು.
ಕಾರಾಗಾರ(ದ್ಭ) ಕಾರಾಗೃಹ(ಸಂ),ಸೆರೆಮನೆ.
ಕಾರಾಗೃಹ (ಕಾರಾಗಾರ).
ಕಾರಾವಾಸ ಸೆರೆಮನೆಯ ವಾಸ.
ಕಾರಿ ನದಿಯು ಕಡಲಿಗೆ ಕೂಡುವಾಗ ನೀರಿನ ಒತ್ತಡದಿಂದ ಭೂಮಿಯಲ್ಲಿ ಉಂಟಾಗುವ ನೀರಿನ ಕೋಡಿ.
ಕಾರಿರುಳು ಕಾರ್ಗತ್ತಲೆ, ಕಡುಕತ್ತಲೆ, ಕಗ್ಗತ್ತಲೆ.
ಕಾರುಗಿಡಿ ಸಿಡಿದ ಕಿಡಿ.
ಕಾರುಣ್ಯ ಕರುಣೆ, ದಯೆ.
ಕಾರುಭಾರ (ಕಾರಭಾರ) ಹೆಚ್ಚಿನ ಕೆಲಸ.
ಕಾರೆ ಒಂದು ಜಾತಿಯ ಹಣ್ಣು ಕೊಡುವ ಮುಳ್ಳುಗಿಡ; ಬಂಧನ.
ಕಾರ್ಖಾನೆ ಉದ್ಯೋಗಶಾಲೆ; ಗಿರಣಿ; ಸಿದ್ಧ ಪದಾರ್ಥಗಳನ್ನು ಉತ್ಪನ್ನಮಾಡುವ ಮನೆ.
ಕಾರ್ಗಾಲ ಮಳೆಗಾಲ.
ಕಾರ್ತವೀರ್ಯ ಕೃತವೀರ್ಯನ ಮಗನಾದ ಅರ್ಜುನನು. ಈತನು ತಪೋಬಲದಿಂದ ಸಾವಿರ ಹಸ್ತಗಳನ್ನು ಪಡೆದನು. ಈತನ ಶೌರ್ಯಕ್ಕೆ ಎಣೆ ಇಲ್ಲದಿತ್ತು. ಇವನು ರಾವಣನನ್ನು ಗೆದ್ದನೆಂದೂ ಕತೆಯಿದೆ. ಒಂದು ದಿನ ಈತನು ಜಮದಗ್ನಿಯ ಆತಿಥ್ಯ ಪಡೆದು, ಅಲ್ಲಿರುವ ಕಾಮಧೇನುವಿಗಾಗಿ ಬಾಯ್ಬಿಟ್ಟು ಅದನ್ನು ಕದ್ದು ಒಯ್ದನು. ಇದರಿಂದ ಜಮದಗ್ನಿಯ ಮಗನಾದ ಪರಶುರಾಮನು ಇವನನ್ನು ಇದಿರಿಸಿ ಕಾಳಗದಲ್ಲಿ ಕೊಂದನು.
ಕಾರ್ತಸ್ವರ ಕೃತಸ್ವರ, ಚಿನ್ನ, ಹೊನ್ನು.
ಕಾರ್ತಿಕ ಕಾರ್ತಿಕ ಮಾಸ.
ಕಾರ್ತಿಕೇಯ ಬುಧ; ಸಮರದೇವತೆ; ಕುಮಾರಸ್ವಾಮಿ; ಈತನು ಶಿವನ ದೆಸೆಯಿಂದ ಗಂಗೆಯಲ್ಲಿ ಜನಿಸಿದನು. ಮುಂದೆ ತಾರಕಾಸುರನನ್ನು ಗೆದ್ದು ಹೆಸರಾದನು.
ಕಾರ್ಪಣ್ಯ ತೊಂದರೆ, ಉಪದ್ರವ; ದುಃಖ.
ಕಾರ್ಪಾಸ ಹತ್ತಿ; ಹತ್ತಿಯಿಂದಾದ ವಸ್ತ್ರ.
ಕಾರ್ಪಾಸಿ ಹತ್ತಿಯ ಗಿಡ.
ಕಾರ್ಬೊಗೆ ಕಪ್ಪು ಹೊಗೆ.
ಕಾರ್ಬೊನ್ನ ಕಪ್ಪಾದ ಹೊನ್ನು, ಕರ್ಬುನ, ಕಬ್ಬಿಣ.
ಕಾರ್ಮುಕ ಬಿಲ್ಲು, ಧನುಸ್ಸು.
ಕಾರ್ಮುಗಿಲು ಕರಿಮೋಡ; ಮಳೆ ಮೋಡ; ಮಳೆಗಾಲದ ಮೋಡ.
ಕಾರ್ಮೋಡ (ಕಾರ್ಮುಗಿಲು).
ಕಾರ್ಯ ಕೆಲಸ, ಕಜ್ಜ (ದ್ಭ).
— ದಕ್ಷ ಕೆಲಸದಲ್ಲಿ ನಿಪುಣನಾದವ.
— ದರ್ಶಿ ಕಾರ್ಯವನ್ನು ನಡೆಸುವವ.
— ಭಾಗ ಮಾಡುವ ಕೆಲಸದ ಅಂಶ.
ಕಾರ್ಷಿಕ 80 ಕವಡೆಗೆ ಸಮನಾಗುವ ಒಂದು ನಾಣ್ಯ.
ಕಾರ್ಷ್ಣ್ಯ ಕೃಷ್ಣನ ಮಗ, ಪ್ರದ್ಯುಮ್ನ.
ಕಾಲ ಸಮಯ, ವೇಳೆ; ಅವಧಿ; ಯಮ.
ಕಾಲಕಂಠ ಶಿವ; ಗುಬ್ಬಿ.
ಕಾಲಕೂಟ (ಕಾಳಕೂಟ) ಮಹಾವಿಷ.
ಕಾಲಗಣನೆ ಖಗೋಲ; ಜ್ಯೋತಿಷ.
ಕಾಲತ್ರಯ ಭೂತ, ಭವಿಷ್ಯತ್ತು, ವರ್ತಮಾನ— ಈ ಮೂರು ಕಾಲಗಳು.
ಕಾಲದೂತ ಯಮ್ಮ, ಯಮನ ದೂತ.

**ಕಾಲಧರ್ಮ** ಯಮ; ಸಮಯಕ್ಕೆ ತಕ್ಕ ನೀತಿ; ಆಯಾ ಕಾಲದಲ್ಲಿ ಸಹಜವಾಗಿ ತೋರುವ ಧರ್ಮ; ಸಾವು.

**ಕಾಲಪಕ್ವ** ಕಾಲದಿಂದ ಮಾಗಿದ; ಅನುಭವ.

**ಕಾಲಭೇದ** ಋತುಮಾನ.

**ಕಾಲಭೈರವ** ಶಿವನ ಪ್ರಳಯಕಾಲದ ರೂಪ.

**ಕಾಲರಾತ್ರಿ** ನಾಶಕರವಾದ ರಾತ್ರಿ; ಪ್ರಲಯ ಕಾಲದ ಕೊನೆಯ ಗಳಿಗೆ; ಯಮನ ಸಹೋದರಿ, ದುರ್ಗಿ, ಮಾರಿ; ಕಾರ್ತಿಕ ಅಮಾವಾಸ್ಯೆಯ ರಾತ್ರಿ; ದೀಪಾವಳಿ.

**ಕಾಲವಶ** ಸಾವಿಗೀಡು; ಸಮಯದ ಪ್ರಭಾವ.

**ಕಾಲಹತಿ** ಕಾಲದ ಪೆಟ್ಟು; ಕಾಲದ ನಡಿಗೆ; ಪದ್ಧತಿ; ಕಾಲಸ್ಥಿತಿ.

**ಕಾಲಹರಣ** ವೇಳೆ ಕಳೆಯುವುದು, ಹೊತ್ತು ಕಳೆಯುವಿಕೆ; ಪ್ರಲಯದ ರಾತ್ರಿ; ಮೃತ್ಯು.

**ಕಾಲಾಗರು** ಅಸ್ಸಾಮಿನಲ್ಲಿ ಬೆಳೆಯುವ ಒಂದು ವಿಧದ ಕಪ್ಪು ಗಂಧ.

**ಕಾಲಾಗ್ನಿ** ಮೃತ್ಯುಸ್ವರೂಪವಾದ ಬೆಂಕಿ; ಪ್ರಲಯಕಾಲದ ಕಿಚ್ಚು.

**ಕಾಲಾಟ** ಕಾಲನ ನಡಿಗೆ; ನಡಿಗೆ.

**ಕಾಲಾಧೀನ** ಮೃತ್ಯುವಿಗೆ ವಶವಾಗುವಿಕೆ.

**ಕಾಲಾಪ** ಬಾವುಟ, ಪತಾಕೆ; ತಲೆಗೂದಲು; ಹೆಡೆ.

**ಕಾಲಾಯಸ** (ಕಾಲ=ಕಪ್ಪು, ಅಯಸ್=ಲೋಹ) ಕಪ್ಪಾದ ಲೋಹ, ಕಬ್ಬಿಣ.

**ಕಾಲಾಳು** ಪದಾತಿ, ಪಾದಚಾರಿ, ಯುದ್ಧ ದಲ್ಲಿ ಕಾಲು ನಡಿಗೆಯಿಂದ ಚಲಿಸಿ ಕಾದುವ ಸೈನಿಕ.

**ಕಾಲಿ** (ಕಾಳಿ).

**ಕಾಲಿಕ** ಕಾಲಕ್ಕೆ ಸಂಬಂಧಿಸಿದ.

**ಕಾಲಿಕೆ** (ಕಾಳಿಕೆ) ಕಪ್ಪಾಗಿರುವಿಕೆ; ಕಿಲುಬು, ಕಲ್ಮಷ.

**ಕಾಲಿಕ್ಕು** ಕಾಲಿರಿಸು, ಕಾಲೂರು.

**ಕಾಲಿವೆ** (ನೋಡು: ಕಾಲುವೆ).

**ಕಾಲಿಂದಿ** (ಕಾಳಿಂದಿ) ಕಲಿಂದ ಪರ್ವತದಿಂದ ಹೊರಡುವ ನದಿ, ಯಮುನಾನದಿ.

**ಕಾಲು** (ಕಾಲ್) ಪಾದ, ಮುಂಡದ ಕೆಳಗಿನ ಅವಯವ; ನಾಲ್ಕನೇ ಒಂದು ಪಾಲು.

**ಕಾಲುಗಣ್ಣಿ** ಕಲ್ಲನ್ನು ಸಿಕ್ಕಿಸುವ ಉರುಳು.

**ಕಾಲುಮೆಟ್ಟು** ಮುಂದುವರಿ; ಪರಸ್ಪರ ಉಂಟಾಗು.

**ಕಾಲುವಾಳು** ಕಾಲಾಳು.

**ಕಾಲುವೆ** (ಕಾಲಿವೆ) ನಾಲೆ; ನೀರು ಹರಿಯುವ ಕೃತಕ ಸಾಲು.

**ಕಾಲೂರ್** (ಕಾಲೂರು) ಹಳ್ಳಿ; ಚಿಕ್ಕ ಊರು. —ಇಗ ಹಳ್ಳಿಯಲ್ಲಿಹುಟ್ಟಿದವ; ಗ್ರಾಮಸ್ಥ; ಹಳ್ಳಿಯ ಒರಟ.

**ಕಾಲೂರು** ಕಾಲಿಡು; ಆಕ್ರಮಿಸು; ಹಳ್ಳಿ.

**ಕಾಲೆಳೆ** ಕಾಲನ್ನು ಎಳೆ, ಮೆಲ್ಲಗೆ ನಡೆ; ಸಮಯವನ್ನು ಕಳೆ.

**ಕಾಲೇಯ** ಕೇಸರಿ.

**ಕಾಲೋಚಿತ** ಕಾಲಕ್ಕೆ ತಕ್ಕುದಾದ, ಸಮ ಯೋಚಿತ.

**ಕಾಲೋರಗ** (ಕಾಳೋರಗ) ಕೃಷ್ಣಸರ್ಪ, ಕಾಳಿಂಗನ ಹಾವು.

**ಕಾಲ್ಕಾವು** ಕಾಲಿನ ರಕ್ಷೆ, ಕಾಲ್ಮುರಿ, ಮೆಟ್ಟು; ಕಾಲಾಳು; ಬೆಂಗಾವಲು.

**ಕಾಲ್ಗೆಡು** ಕಾಲಿನ ಶಕ್ತಿ ಕುಂದು; ನಡೆಯುವ ಶಕ್ತಿ ತಗ್ಗು; ಅಳುಕು, ಹೆದರು.

**ಕಾಲ್ಗೆರಹು** ಕಾಲ್ಕೆರ್ಪು, ಕಾಲ್ಮುರಿ, ಕಾಲಿನ ಜೋಡು, ಮೆಟ್ಟು.

**ಕಾಲ್ಗೊಳ್ಗೆದ** ಕಾಲಿಟ್ಟ, ವಾಹನವೇರಿದ.

**ಕಾಲ್ದಳ** ಕಾಲಿನ ತಳ, ಕಾಲಡಿ, ಅಂಗಾಲು; ಪದಾತಿ ಸೈನ್ಯ.

**ಕಾಲ್ದೆಗೆ** ಕಾಲನ್ನು ಹಿಂದೆಗೆ, ಹಿಮ್ಮೆಟ್ಟು; ಓಡು, ಪಲಾಯನಮಾಡು.

ಕಾಲ್ದೊರೆ ಕಾಲಿಂದ ದಾಟಬಹುದಾದ ಹಳ್ಳ, ಚಿಕ್ಕ ಹೊಳೆ.

ಕಾಲ್ನಡೆ ನಾಲ್ಕು ಕಾಲಿಂದ ನಡೆಯುವ ಪ್ರಾಣಿ; ದನಕರು, ಗಂಟ; ನಡದೇ ಸಾಗುವಿಕೆ.

ಕಾಲ್ಮಣೆ ಕಾಲುಳ್ಳ ಮಣೆ.

ಕಾಲ್ಯ ಸಮಯಕ್ಕನುಗುಣವಾದ; ಶುಭ; ಮುಂಜಾನೆ.

ಕಾಲ್ಪೊಣೆ ಕಾಲುಹೊಣೆ, ಕಾಲವೇ ಕಾರಣವಾಗಿರುವಿಕೆ.

ಕಾಲ್ಪೊರೆ ಕಾಲಿನ ಭಾರ; ಸಣ್ಣ ಹೊರೆ.

ಕಾವ ಕಾಯುವ; ಕಾಯುವವ; ಕಾಮ (ಸಂ), ಮನ್ಮಥ.

ಕಾವಡಿ ಕಾಗಡಿ, ಹೆಗಲಿನ ಮೇಲೆ ಹೇರುವ ಅಡ್ಡೆ; ಎರಡು ಚೀಲ ಇಲ್ಲವೆ ಕಲ್ಲಿಗಳನ್ನು ಸಾಗಿಸಲು ನಡುವೆ ತೊಡಿಸುವ ದಂಡ.

ಕಾವಣ (ದ್ಭ) ಕಾಯಮಾನ (ಸಂ), ಚಪ್ಪರ; ಮಂಟಪ.

ಕಾವರ ಕೋಪ; ಸೊಕ್ಕು; ಹಟ, ಚಲ; ಹುಲ್ಲುಗಾವಲು.

ಕಾವಲ್ (ಕಾವಲು) ಕಾಯುವಿಕೆ, ಪಹರೆ.

ಕಾವಲಿ ಕಾಯಿಸಲು ಉಪಯೋಗಿಸುವ ಪಾತ್ರೆ.

ಕಾವಲು ಕಾಯುವಿಕೆ, ಪಹರೆ.

—ಗಾರ ಕಾಯುವವ, ಪಹರಿ.

ಕಾವಳ ಕತ್ತಲೆ.

ಕಾವಿ ಮಣ್ಣಿನ ಬಣ್ಣ, ಕೇಸರ ಬಣ್ಣ.

ಕಾವು ಉಷ್ಣ, ಬಿಸಿ, ಸೆಕೆ; ತಾಳು; ಕತ್ತಿ, ಕೊಡಲಿಗಳ ಮರದ ಹಿಡಿ; ಉಕ್ಕಿನ ಸಾಧನಗಳಿಗೆ ಕೊಡುವ ಹದ.

ಕಾವೇರಿ (ಕಾ = ಜಲ, ವೇರಿ = ಶರೀರ) ನೀರಿನ ಮೈಯುಳ್ಳವಳು, ಕೊಡಗಿನಲ್ಲಿ ಹುಟ್ಟಿ ಬಂಗಾಳಾಖಾತಕ್ಕೆ ಕೂಡುವ ಒಂದು ನದಿ.

ಕಾವ್ಯ ಸಾಹಿತ್ಯದ ಒಂದು ಬಗೆ; ಕವನ ಮೊದಲಾದವು.

ಕಾಶ್ ಪ್ರಕಾಶಿಸು.

— ಇಕೆ ಪ್ರಕಾಶಿಸುವುದು.

ಕಾಶ ಕಾಶಿ ಹುಲ್ಲು; ನೋಟ; ಹೊಳಹು.

ಕಾಶಿ ಕಾಶಿಕಾ, ಕಾಶೀನಗರ, ವಾರಣಾಸಿ.

ಕಾಶೀರಾಜ ಒಬ್ಬ ಅರಸು; ದಿವೋದಾಸ; ಧನ್ವಂತರಿ; ಅನುಸಾಲ್ವನ ತಂದೆಯ ಹೆಸರು.

ಕಾಶ್ಮೀರ ಹಿಂದುಸ್ಥಾನದ ತೀರ ಉತ್ತರಕ್ಕಿರುವ ಒಂದು ಉನ್ನತ ದೇಶ; ಕುಂಕುಮ ಕೇಸರ.

ಕಾಶ್ಯಪ ಭೂಮಿ; ಅರುಣ; ಗರುಡ; ಈ ಹೆಸರಿನ ವೈದಿಕಕಾಲದ ಪ್ರಸಿದ್ಧ ಋಷಿಯೊಬ್ಬನು. ಈತನು ಮನುವಿನ ಅಜ್ಜನು. ಇವನ ಮಡದಿಯರು ದಿತಿ—ಅದಿತಿಯರೆಂದು. ಅದಿತಿಯ ಮಕ್ಕಳೇ ಆದಿತ್ಯರು. ಈತನು ಇತಿಹಾಸದ ದೃಷ್ಟಿಯಿಂದ ಶಿಲ್ಪ ಶಾಸ್ತ್ರವನ್ನೂ ಬರೆದವನು.

ಕಾಷಾಯ ಕಾವಿಬಟ್ಟೆ.

ಕಾಷಾಂಬರ ಕಾಷಾಯಾಂಬರ, ಕಾವಿ ಬಟ್ಟೆ, ಕಾವಿಸಾಟ.

ಕಾಷ್ಠ ಕಟ್ಟಿಗೆ; ಕಡ್ಡಿ; ಕೀಲು.

ಕಾಷ್ಠೆ ದಿಕ್ಕು; ಸ್ಥಲ; ಕಾಲಾಂತರ; ಉತ್ತಮ ಸ್ಥಿತಿ.

ಕಾಸ ಕೆಮ್ಮು; ಉಬ್ಬಸ.

ಕಾಸಕಾರ (ಕಾಸ್ಕಾರ) ಕುದುರೆಯಾಳು.

ಕಾಸಗಿ (ಖಾಸಗಿ) ಸ್ವಂತ.

ಕಾಸಟೆ ಕವಡೆ.

ಕಾಸರ ಕಾಡುಕೋಣ, ದುಡ್ಡು.

ಕಾಸರಕ ಒಂದು ಜಾತಿಯ ಮರ.

ಕಾಸಾಯ (ದ್ಭ) ಕಾಷಾಯ (ಸಂ), ಕಾವಿ ಸಾಟ.

ಕಾಸಾರ (ಕ = ನೀರು, ಆಸಾರ = ಹೊಂದಿರು) ನೀರುಳ್ಳುದು, ಸರೋವರ; ತಾವರೆಗಳುಳ್ಳ ಕೊಳ.

ಕಾಸಿಕಂಚಡಿ ಕಾಸೆ, ಕಾಚಾ, ಉಡಿದಾರ ಮತ್ತು ಕೌಪೀನ.

ಕಾಸು ಕಾಯಿಸು; ಆಯುಧ ವಿಶೇಷ; ಕವಡೆಗೆ ಸಮವಾದ ನಾಣ್ಯ; ಅರ್ಧ ಪೈ ಬೆಲೆಯ ನಾಣ್ಯ; ಪೈ.

—ಕಟ್ಟು ಕಡಮೆಯಾದುದನ್ನು ತುಂಬಿ ಕೊಡು.

—ಕಸುರು ಆಳತೆಯ ಹೆಚ್ಚುಕಡಮೆ ಸರಿಮಾಡಲು ಸೇರಿಸುವ ಅಂಶ.

ಕಾಸೆ ಚಡ್ಡಿ; ಯೋಧರು ಸೊಂಟಕ್ಕೆ ಬಿಗಿಯುವ ದಟ್ಟಿ.

ಕಾಹಕ ರಕ್ಷಕ, ಪೋಷಕ; ಎಚ್ಚರ ಹೇಳುವವ.

ಕಾಹಲ ಬೆಕ್ಕು; ಹುಂಜ; ಕಾಗೆ.

ಕಾಹಿ ಕಾಯುವವ.

ಕಾಹಿಲೆ (ಕಾಯಿಲೆ).

ಕಾಹು ಕಾವಲು; ರಕ್ಷಣೆ; ಕಾಮು; ಕಾಯುವಿಕೆ, ಉಷ್ಣ.

ಕಾಹುರ ಕಠಿಣ, ಕ್ರೂರ; ಗಡಿಬಿಡಿ, ಆತುರ; ವ್ಯಸನ, ಚಿಂತೆ.

ಕಾಹೇರು ಶಾಖವಾಗು.

ಕಾಹೊನಲ್ ಕಾಳ್ಪೊನಲ್, ಕಾಡಿನ ಒಂದು ಪ್ರವಾಹ.

ಕಾಳ ಕಪ್ಪಾದ; ಜೇಡರ ಹುಳು.

ಕಾಳಗ ರಣ, ಯುದ್ಧ, ಜಗಳ.

—ಕೊಡು ಯುದ್ಧಮಾಡು; ರಣಕ್ಕೆ ನಿಲ್ಲು.

ಕಾಳಗರು (ಕಾಲಗರು) ಕರಿಯ ಗಂಧ.

ಕಾಳಗವಲಗೆ ಯುದ್ಧಕಾಲದಲ್ಲಿ ಹೊಡೆಯುವ ಹಲಗೆ; ಚರ್ಮವಾದ್ಯ.

ಕಾಳಜ ಎದೆಯೊಳಗಿನ ಮಾಂಸ; ಎದೆ; ಗೋರೋಚನ.

ಕಾಳಜಿ ಎಚ್ಚರ, ಜಾಗ್ರತೆ, ಗೊಡವೆ.

ಕಾಳನೆ ಗಾಢತ್ವ; ಬಲವಾಗಿರು; ಕಪ್ಪಾಗಿ.

ಕಾಳಮುಖ ನೀಚ; ನಿಷ್ಕರುಣಿ.

ಕಾಳಮೂಳ (ಕಾಳುಮೂಳ).

ಕಾಳರಾತ್ರಿ (ಕಾಲರಾತ್ರಿ), ಮಾರಿ.

ಕಾಳಂಜಿ (ಕಾಳಾಂಜಿ) ಪೀಕದಾನಿ, ತಂಬುಲು ಉಗಿಯುವ ಪಾತ್ರೆ.

ಕಾಳಾಗು ಕೆಡು; ಕಡು.

ಕಾಳಿ ದುರ್ಗೆ; ಕಪ್ಪಾದುದು.

—ಮು ಕಪ್ಪು.

ಕಾಳಿಕ ಕಾಡಿಗೆ, ಕಜ್ಜಲ; ಅಂಜನ.

ಕಾಳಿಕೆ (ಕಾಲಿಕೆ) ಕಾಳಿ; ಕಿಲುಬು, ಕಲ್ಮಷ.

ಕಾಳಿಜ ದೇಹದೊಳಗಿನ ಕಪ್ಪು ಪಿಂಡ; ಕಲಿಜ; ಹೃದಯಪಿಂಡ; ಯಕೃತ್ತು.

ಕಾಳಿಂಗ ಕಪ್ಪಾದ ಹಕ್ಕಿ, ಕಾಗೆಹೊಡಕ; ಕೃಷ್ಣಸರ್ಪ, ಮಹಾಸರ್ಪ; ಕೃಷ್ಣನು ಕಾಲಿಂದೀ ನದಿಯಲ್ಲಿ ತುಳಿದ ಹಾವು.

ಕಾಳು ಕಪ್ಪಾದುದು; ಧಾನ್ಯ; ಕಾಡು ದನ.

ಕಾಳುಗಿಚ್ಚು (ಕಾಳ್ಗಿಚ್ಚು) ಕಾಡ್ಗಿಚ್ಚು.

ಕಾಳುಗೆಡೆ (ಕಾಳ್ಗೆಡೆ) ದೂರು, ನಿಂದಿಸು.

ಕಾಳುಮರೆ ನೀಚಬುದ್ಧಿ.

ಕಾಳುಮೂಳ ಕಾಡಾಡಿ, ಅಸಂಸ್ಕೃತ, (ಕಾಳಮೂಳ).

ಕಾಳೆ ಕಹಳೆ, ಒಂದು ವಾದ್ಯವಿಶೇಷ.

ಕಾಳೆಗ (ಕಾಳಗ).

ಕಾಳೋರಗ ಕರಿ ನಾಗರಹಾವು, ಕೃಷ್ಣಸರ್ಪ.

ಕಾಳ್ಗಿಡೆ (ಕಾಲ್ಗೆಡೆ) ದೂಷಿಸು; ನಿಂದಿಸು; ಬಯ್, ಕೆಟ್ಟ ಮಾತಾಡು.

ಕಾಳ್ಗೃತ ಕೆಟ್ಟ ಕೆಲಸ.

ಕಾಳ್ಪುರ ಕಾಡಿನ ಪ್ರವಾಹ, ಕಾಡಿನ ತೊರೆ.

ಕಾಳ್ಮಿಗ ಕಾಡಿನ ಮೃಗ, ಕಾಡಿನ ಜಿಂಕೆ.
ಕಾಂಕೆ ಉಷ್ಣತೆ, ಕಾವು.
ಕಾಂಕ್ಷೆ ಅಪೇಕ್ಷೆ, ಬಯಕೆ; ಕಣ್ಣಿನ ಬೇನೆ.
ಕಾಂಗರು (ಕಂಗಾರು) ಆಸ್ಟ್ರೇಲಿಯದ ಮೃಗ.
ಕಾಂಗು ಕಪ್ಪು.
ಕಾಂಚ ಗಾಜು (ದ್ಭ), ಕಾಜು.
ಕಾಂಚನ ಬಂಗಾರ; ನಾಗಸಂಪಿಗೆ, ಸಂಪಿಗೆ; ಉಮ್ಮತ್ತದ ಗಿಡ; ಪ್ರಕಾಶ, ಕಾಂತಿ.
ಕಾಂಚನಮಾಲೆ ಒಂದು ಪದ್ಯಜಾತಿಯ ಹೆಸರು; ಈ ಹೆಸರಿನ ವೃತ್ತ.
ಕಾಂಚನಿ ಅರಸಿನ.
ಕಾಂಚಾಳ ಕಂಚಿವಾಳ.
ಕಾಂಚಿ ಸ್ತ್ರೀಯರ ಸೊಂಟದ ಆಭರಣ, ಡಾಬು; ಕಂಚೀ ನಗರ.
ಕಾಂಚೀಧಾಮ ಡಾಬು, ಮೇಖಲೆ.
ಕಾಂಚೀಪದ ನಡು, ಜಘನ.
ಕಾಂಡ ಗಿಡದ ದಂಟು, ತಾಳು; ಬಾಣ; ಒಂದು ದೊಡ್ಡ ಗ್ರಂಥದ ಭಾಗ; ನೀರು; ನಿಂದೆ; ತೆರೆ; ವೇಗ; ಕುದುರೆ.
—ಜ ತಾವರೆ; ಜಲಧಿ, ಸಾಗರ.
ಕಾಂಡವ (ದ್ಭ) ಖಾಂಡವ (ಸಂ), ಸರಸ್ವತೀ ದೃಷದ್ವತೀ ನದಿಗಳ ಪೂರ್ವಕ್ಕಿದ್ದ ಒಂದು ಕಾಡು. ಇದನ್ನು ಅರ್ಜುನನು 15 ದಿನಗಳ ತನಕ ಸುಟ್ಟನೆಂದು ಕಥೆಯಿದೆ.
ಕಾಂಡವಪ್ರಸ್ಥ ಖಾಂಡವಪ್ರಸ್ಥ(ಸಂ), ಇಂದ್ರಪ್ರಸ್ಥ, ಯಮುನಾನದಿಯ ದಂಡೆಯ ಮೇಲಿದ್ದ ಹಳೆಯ ದೇಹಲಿ ಪಟ್ಟಣ.
ಕಾಂತ ಮನೋಹರ; ನಿರ್ಮಲ; ಪ್ರಿಯ; ಗಂಡ; ಮನೆ; ಚಂದ್ರ.
ಕಾಂತಾರ ದೊಡ್ಡ ಅರಣ್ಯ; ಕಠಿಣ ದಾರಿ.
ಕಾಂತಿ ಶೋಭೆ; ಪ್ರಕಾಶ, ಹೊಳಹು.
—ಸ್ತಂಭ ದೀಪದ ಕಂಬ; ದೀಪ.
ಕಾಂತೆ ಪ್ರಿಯೆ; ಮನೋಹರೆ.
ಕಾಂಬ ಕಾಣುವ, ನೋಡುವ.
ಕಾಂಭೋಜ ಈಗಣ ಅಫಘಾನಿಸ್ತಾನ; ಕಾಂಭೋಜದ ಜನರು.
ಕಾಂಭೋದಿ ಒಂದು ರಾಗದ ಹೆಸರು.
ಕಾಂಭೋದಿಯ ಇಂಡೋ ಚೀನಾದಲ್ಲಿನ ಒಂದು ದೇಶ; ಒಂದು ಜಾತಿ ಹತ್ತಿ.
ಕಾಂಸ್ಯ (ಸಂ) ಕಂಚಿನಿಂದಾದುದು; ಕಂಚು.
ಕಾಂಸ್ಯತಾಲ ಕಂಸಾಳ; ಕಂಚಿನ ತಾಳ.
ಕಿಕ್ಕಿರಿ ಒತ್ತೊತ್ತು; ದಟ್ಟವಾಗು; ಇಕ್ಕಟ್ಟು; ಇಕ್ಕಟ್ಟಾಗು.
—ಕಿರಿ ಒತ್ತೊತ್ತಾಗಿರು.
ಕಿಕ್ಕು ಕಿರಿಚು, ಅರಚು.
ಕಿಗ್ ಕಿರಿದು, ಸಣ್ಣ.
ಕಿಗ್ಗಟ್ಟು ಕಿರಿದಾದ ಕಟ್ಟು, ಸಣ್ಣ ಗಂಟು.
ಕಿಗ್ಗಣ್ಣು ಕಿರಿಯ ಕಣ್ಣು, ಸಣ್ಣ ಕಣ್ಣು.
ಕಿಗ್ಗಂಟು ಸಣ್ಣ ಗಂಟು, ಸಣ್ಣ ಕಟ್ಟು.
ಕಿಚಕು ಕಿಸುಗುಟ್ಟು; ಗುಬ್ಬಚ್ಚಿಯಂತೆ ಕೂಗು.
ಕಿಚಿಕಿಲ್ ಕೆನೆಯು, ಕಿಳಿರು.
ಕಿಚುಕುಲಿ (ಕತಕುಳಿ) ಮೈಮುಟ್ಟಿ ಅಸಹ್ಯ ಪಡುವಂತೆ ಕೆದಕು.
ಕಿಚ್ಚಡಿ ಹುಗ್ಗಿ; ಸಿಹಿ ತಿಂಡಿಯೊಂದು.
ಕಿಚ್ಚು (ಕಿರ್ಚು) ಬೆಂಕಿ.
ಕಿಟಿ ಸ್ವೇಚ್ಛೆಯಿಂದ ತಿರುಗುವುದು; ಮನ ಬಂದಂತೆ ಅಲೆ; ಕಾಡುಹಂದಿ.
ಕಿಟಿಕಿ ಕಂಡಿ, ರಂಧ್ರ, ಬೆಳಕಿನ ತೂತು.
ಕಿಟ್ಟ ಕಬ್ಬಿಣ ಕಾಯಿಸಿದಾಗ ಹೊರಡುವ ಕೊಳೆ; ಒಡಕು ಪಾತ್ರೆಗೆ ಹಾಕುವ ಪತ್ತೆ; ಹಿಚಿಕೆ; ಗಜ್ಜುಗ.
ಕಿಟ್ಟೆ ಒಂದು ಬಗೆಯ ದಂಡನೆ.
ಕಿಟ್ಟು ಮುಟ್ಟು, ಸ್ಪರ್ಶಿಸು.
ಕಿಡ ಕೆಟ್ಟವ; ಹಾನಿಗೊಂಡವ.
ಕಿಡಿ ಕಿಚ್ಚಿನ ಕಣ; ಬೆಂಕಿಯ ಸಣ್ಣ ಕಣ.
—ಇಡು ಪ್ರಜ್ವಲಿಸು, ಕಿಡಿಗೆದರು, ಉರಿ.

—ಕರೆ ಬೆಂಕಿಯ ಕಿಡಿಯನ್ನು ಸುರಿಸು; ಕೋಪಿಸು.

—ಕಾರು ಬೆಂಕಿಯನ್ನು ಸುರಿ; ಸಿಟ್ಟಾಗು, ರೌದ್ರ ತಾಳು.

—ಕೆದರು ಪ್ರಜ್ವಲಿಸು.

ಕಿಡಿಗಣ್ ಕೆಂಡವಾದ ಕಣ್ಣು, ಸಿಟ್ಟಿಂದ ತುಂಬಿದ ಕಣ್ಣು.

ಕಿಡಿಗೇಡಿ ತಿಳಿಗೇಡಿ; ತಂಟೆಕೋರ, ದುಷ್ಟ.

ಕಿಡು (ಕೆಡು) ನಾಶವಾಗು.

ಕಿಣ ಮಾಂಸದ ಗಂಟು; ಬಾಸಳು, ದಡ್ಡು, ಜಡ್ಡು.

ಕಿಣಿ ಹಲ್ಲಿನ ಕಶ್ಮಲ.

ಕಿತವು (ದ್ಭ) ಕೃತ್ರಿಮ (ಸಂ), ಕಪಟ, ಮೋಸ.

ಕಿತವ ಜೂಜಾಡುವವ; ಮೋಸಗಾರ, ಕಪಟ; ನೀಚ; ಚೋರ; ಈ ಹೆಸರಿನ ಒಂದು ಪರಿಮಳದ್ರವ್ಯ; ಉಮ್ಮತ್ತದ ಗಿಡ.

ಕಿತ್ತಡ ಕಿಸುರು; ಮುನಿಸು; ಜುಗುಪ್ಸೆ; ಕಪಟ.

ಕಿತ್ತಡಿ ವ್ರತಧಾರಿ; ತಪಸಿ, ಜೋಗಿ.

ಕಿತ್ತಾನಾರು ಅಗಸೆನಾರು; ಒಂದು ಜಾತಿಯ ನಾರುಗಿಡ, ಸಣಬು ನಾರು; ನಾರುಮಡಿ.

ಕಿತ್ತಿಳೆ (ಕಿತ್ತೀಳೆ) ಒಂದು ಹಣ್ಣು; ಅರಸಿನ ಕೆಂಪು ಮಿಶ್ರಿತ ಬಣ್ಣ.

ಕಿತ್ತು (ಕಿಳ್ತು) ಕಿರಿದು; ಗಿಡ್ಡ; ಕೀಳು.

ಕಿತ್ತೆಸಳ್ (ಕಿರಿದು ಎಸಳು) ಸಣ್ಣ ಎಸಳು.

ಕಿನಾರೆ ಕರೆ, ಕಡಲಿನ ಅಂಚು; ಸೆರಗು; ದಡಿ.

ಕಿನಿಸು ಕೋಪ, ಸಿಟ್ಟು.

ಕಿನ್ನ (ದ್ಭ) ಖಿನ್ನ (ಸಂ), ಬಾಡಿದ, ಮ್ಲಾನ.

ಕಿನ್ನರ ಕುದುರೆಯ ಮುಖ ಮತ್ತು ಮನುಷ್ಯ ಶರೀರದ ದೇವತೆಗಳ ವರ್ಗ; ಅಪ್ಸರ ವರ್ಗ.

—ಈಶ ಕಿನ್ನರರ ಒಡೆಯ, ಕುಬೇರ.

ಕಿನ್ನರಿ ಒಂದು ತಂತಿಯ ವಾದ್ಯ; ಏಕತಾರಿ; ಅಪ್ಸರೆಯರಲ್ಲಿ ಒಂದು ಜನ.

ಕಿಪಾಯತಿ ಲಾಭ, ಮುನಾಫೆ.

ಕಿಪ್ಪರಿ ಹಾರು, ಕುಪ್ಪಳಿಸು.

ಕಿಬ್ಬಡಿ ಕೆಳಗಿನ ಬದಿ, ಕಿಬ್ಬದಿ; ಚಿಕ್ಕ ಭಾಗ.

ಕಿಬ್ಬದಿ ಕಿರಿದಾದ ಬದಿ.

ಕಿಬ್ಬಸುರು ಕೆಳಗಿನ ಹೊಟ್ಟೆ; ಹೊಟ್ಟೆಯ ಕೆಳಭಾಗ; ವಸ್ತಿ.

ಕಿಬ್ಬೊಟ್ಟು ಕಿರಿ ಬೆರಳು.

ಕಿಮ್ಮತ್ತು ಬೆಲೆ, ವೌಲ್ಯ.

ಕಿಮ್ಮೀರ (ದ್ಭ) ಕಿರ್ಮೀರ (ಸಂ), ಬಕಾಸುರನ ಸೋದರ, ಒಬ್ಬ ರಾಕ್ಷಸ.

—ವೈರಿ ಕಿಮ್ಮೀರನನ್ನು ಕೊಂದವ, ಭೀಮ.

ಕಿರ್ (ಕಿರು) ದಾರಿಗಟ್ಟು, ಬೇಲಿಹಾಕು; ಮೌನವಾಗು; ಆವರಿಸು, ಮುಚ್ಚಿಕೊಳ್ಳು.

ಕಿರಣ ಕದಿರು, ಸೂರ್ಯನ ಪ್ರಕಾಶ.

ಕಿರಾಣಿ ದವಸಧಾನ್ಯ, ಮೆಣಸು ಇತ್ಯಾದಿಗಳು.

ಕಿರಾತ ಶಬರ, ಬೇಡ.

ಕಿರಾಯ ಕ್ರಯ (ಸಂ); ಕರಕರ ಸದ್ದು ಮಾಡು.

ಕಿರಿ ಕಿಸಿ; ತೆರೆ; ಬೋಳಿಸು; ಬಾಡಿಗೆ; ಬೆಲೆ; ಪ್ರವಾಹ; ಹಂದಿ; ಸಣ್ಣ, ಚಿಕ್ಕ.

—ದು ಚಿಕ್ಕದು; ತೆರೆದು; ಕಿರ್ಗುಟ್ಟೆ.

ಕಿರಿಗೆ ಕಿರಿ ಸೀರೆ.

ಕಿರಿಚು ಕಿರ್ರೆಂದು ಕೂಗು, ಅರಚು.

ಕಿರೀಟ ಮುಕುಟ, ಮಕುಟ, ಅರಸರ ಶಿರೋಭೂಷಣ.

ಕಿರೀಟಿ ಇಂದ್ರನಿಂದ ಶ್ರೇಷ್ಠವಾದ ಕಿರೀಟ ವನ್ನು ಪಡೆದವನು, ಅರ್ಜುನ.

ಕಿರು ನಡುವೆ ಬರು.

ಕಿರುಕುಣಿ ಕಿರುಕುಣಿಕೆ, ಕಿರಿಬೆರಳು; ಸಣ್ಣ ಗಂಟು.

ಕಿರುಕುಳ ಸಾಮಾನ್ಯ, ಅಲ್ಪ; ಉಪದ್ರವ; ಹಿಂಸೆ; ಪಿಕಲಾಟ.

ಕಿರುಗಣೆ ಲಂಗ, ಪರಿಕಾರ.
ಕಿರುನಾಲಿಗೆ ಕಿರಿನಾಲಿಗೆ, ಗಂಟಲೊಳಗಿನ ಜೋತಾಡುವ ಒಂದು ಮಾಂಸಪಿಂಡ.
ಕಿರುಬ ನಾಯಿಚಿರತೆ, ಕತ್ತೆಕಿರುಬ.
ಕಿರುವಕ್ಕಳು ಚಿಕ್ಕ ಮಕ್ಕಳು.
ಕಿರುವನಿ ಸಣ್ಣ ಹನಿ.
ಕಿರುವರಿ ಸಣ್ಣ ಮರಿ.
ಕಿರುವಾಯ್ ಸಣ್ಣ ಬಾಯಿ, ಪುಟ್ಟ ಬಾಯಿ.
ಕಿರುವೆಟ್ಟು ಸಣ್ಣ ಬೆಟ್ಟ; ಕಿರಿ ಬೆರಳು.
ಕಿರುವೆರಳು (ಕಿರಿಬೆರಳು) ಕಿರುಕುಣಿ.
ಕಿರುವೆಲರ್ ಸಣ್ಣ ಗಾಳಿ; ಮಂದಮಾರುತ.
ಕಿರುಳ ಅಲ್ಪ; ಬಾಲಕ.
ಕಿರ್ದಿ ಊಳಿಗದ ಪುಸ್ತಕ; ಲೆಕ್ಕದ ಪುಸ್ತಕ.
ಕಿರ್ರನೆ ಕಿರ್ರೆಂದು ಸದ್ದುಮಾಡಿ.
ಕಿಲ ಆಟ.
ಕಿಲಕಿಲಾ ಹರುಷದ ಚಿಲಿಮಿಲಿ.
ಕಿಲಕಿಂಚಿತ ಪ್ರಣಯದ ಚಟುವಟಿಕೆ, ಅನುರಾಗದ ಕೂಗು ನಗು ಮೊದಲಾದುವು, ಒಲುಮೆ.
ಕಿಲುಬು (ಕಿಲುಂಬು) ಕೊಳೆ, ವಿಷ.
ಕಿಲ್ಬಿಷ ಪಾಪ; ಕೆಸರು.
ಕಿಲ್ಲೆ ಕೋಟೆ, ದುರ್ಗ.
— ದಾರ ಕೋಟೆಯ ಒಡೆಯ.
ಕಿವಿ ಕೇಳುವ ಅವಯವ, ಕರಣ; ಆಸ್ಟ್ರೇಲಿಯದ ರೆಕ್ಕೆಯಿಲ್ಲದ ಒಂದು ಪಕ್ಷಿ.
— ಆರೆ ಕಿವಿಯಿಂದಲೇ, ಕಿವಿಯಲ್ಲೆ.
— ಕೊಡು ಕೇಳು, ಆಲಿಸು.
— ತೆರೆ ಕೇಳು, ತೆರೆದ ಕಿವಿ; ಕಿವಿಯಲ್ಲೆ.
ಕಿವಿಚು (ಕಿವುಚು).
ಕಿವಿಮುಳ ಕಿವಿಯಿಲ್ಲದವ, ಕಿವುಡ.
ಕಿವುಚು (ಗಿವುಚು) ಕೈಯಿಂದ ಹಿಸುಕು, ಹಿಂಡು.
ಕಿವುಡು ಕಿವುಡಿಕೆ; ಕೇಳದಿರುವಿಕೆ, ಬಧಿರತೆ.
— ಕೇಳ್ ಕಿವುಡನಂತೆ ಕೇಳದಿರುವುದು.
ಕಿವುಳ್ ಕಿವಿಚು, ಹಿಸುಕು, ಹಿಂಡು.
ಕಿವುಳೇಳ್ ಅಲಕ್ಷಿಸು, ಲಕ್ಷ್ಯಮಾಡದಿರು.
ಕಿಶೋರ (ಕಿಶೋರಕ) ಮರಿ; ಆನೆ ಮರಿ; ಕುದುರೆ ಮರಿ; ಎಳೆಯ.
ಕಿಷ್ಕಿಂಧ ಇಕ್ಕಟ್ಟು; ಒತ್ತು, ದಟ್ಟಣೆ; ಜಾಗ ಸಾಲದಿರುವಿಕೆ.
ಕಿಷ್ಕಿಂಧೆ ಕಿಷ್ಕಿಂಧಾಪಟ್ಟಣ. ವಾಲಿಯ ರಾಜಧಾನಿ. ಈಗಣ ಹಂಪಿ, ಆನೆಗೊಂದಿ ನಗರಗಳಿರುವ ತಾವು.
ಕಿಷ್ಕು ಗೇಣು, ಹನ್ನೆರಡಂಗುಲ.
ಕಿಸಕ್ಕನೆ ಫಕ್ಕನೆ ನಗುವಿಕೆ.
ಕಿಸರು ಕೆಂಪು; ಕೋಪ.
ಕಿಸಲಯ ಚಿಗುರು, ಎಲೆ, ತಳಿರು.
ಕಿಸಿ ಅರಳಿಸು; ತೆರೆ.
ಕಿಸು ಕೆಂಪು, ಕೆಂಚು.
ಕಿಸುಕುಳ (ಕಿರುಕುಳ) ತುಚ್ಛ, ಅಲ್ಪ; ಉಪದ್ರವ.
ಕಿಸುಗಣ್ಣು ಕೋಪಿಸು; ಕೆಂಪು ಕಣ್ಣು.
ಕಿಸುಗಲ್ ಕೆಂಪು ರತ್ನ, ಕೆಂಪಾದ ಕಲ್ಲು.
ಕಿಸುಬಾಸುಳ್ ಕೆಂಪು ಬಾಸಳು, ಕೆಂಪು ದಡಿಕೆ, ಕೆಂಪಾದ ಉಬ್ಬು.
ಕಿಸುರ್ (ಕಿಸುರು) ಅಸಹ್ಯಭಾವ; ಜಗಳ; ಕೋಪ.
ಕಿಸ್ಗಾರ (ಕಿಸುಗಾರ) ಕೇಪಳ, ಕೆಂಪು ಹೂ.
ಕಿಳಿರು (ಕಿಳಿರ್) ಕೆನೆ, ಕುದುರೆಯ ಕೂಗು, ಹೇಷಾರವ.
ಕಿಳಿಂದಲೆ ಬಗ್ಗಿದ ತಲೆಯುಳ್ಳದು.
ಕಿಳ್ಕಬ್ಬಿಗ ಕೀಳು ಕವಿ, ಅಲ್ಪ ಕವಿ.
ಕಿಳ್ನೆಲ ನೆಲದ ಕೆಳಗು; ಅಧೋಲೋಕ.
ಕಿಳ್ಬಗೆ (ಕೀಳು ಬಗೆ) ಕೀಳು ಮನಸ್ಸು; ಹೀನ ವಿಚಾರ.

ಕಿಳ್ಳೊಪ್ಡೆ ಕಿಬ್ಬೊಟ್ಟೆ.
ಕಿಳ್ಪರಿ ಕೆಳಗು ಬದಿ, ಕಿಬ್ಬದಿ; ಪರ್ವತ ಪ್ರಾಂತ್ಯ.
ಕಿಳ್ವಾಳವಳ್ ಕಿರಿದ ಕತ್ತಿಯುಳ್ಳ ಅರಸನ ಅಂಗರಕ್ಷಕಳು.
ಕಿಂ ಏನು; ಹೇಗೆ.
ಕಿಂಕರ ಸೇವಕ, ಚಾಕರ.
—ತೆ ಸೇವೆ, ಚಾರಕನಾಗಿರುವಿಕೆ, ದಾಸ್ಯ.
ಕಿಂಕಿಣಿ ಸ್ವಲ್ಪ ಶಬ್ದಮಾಡುವುದು; ಘಂಟೆ; ಗೆಜ್ಜೆ; ಡಾಬು.
ಕಿಂಕಿರಾತ ಅಶೋಕದ ಮರ.
ಕಿಂಕಿರಿ ಕಿಕ್ಕಿರಿ, ದಟ್ಟನಾಗು.
—ಹೋಗು ದಟ್ಟವಾಗಿ ಸೇರು; ಸಿಟ್ಟಾಗು.
ಕಿಂಕುರ್ವಾಣ ಸೇವಕ.
ಕಿಂಚಿತ್ ಸ್ವಲ್ಪ.
ಕಿಂಚುಳಕ (ಕಿಂ=ಸ್ವಲ್ಪ, ಚುಳಕ=ಚಲಿಸುವುದು) ಮೆಲುನಡೆಯ ಪ್ರಾಣಿ; ಎರೆ ಹುಳು.
ಕಿಂಜಲ್ಕ ಕೇಸರ, ತಾವರೆಯ ಕುಸುಮ.
ಕಿಂಡಿ (ಕಂಡಿ) ರಂಧ್ರ, ಕಿಟಕಿ.
ಕಿಂತು ಆದರೆ.
ಕಿಂಪಾಕ ವಿಷವೃಕ್ಷ.
ಕಿಂಪುರುಷ ದೇವತೆಗಳಲ್ಲಿನ ಒಂದು ವರ್ಗ.
ಕಿಂಶುಕ ಒಂದು ಪ್ರಾಚೀನ ಪ್ರಸಿದ್ಧಿಯ ಅಡವಿ; ಒಂದು ಜಾತಿಯ ಹಕ್ಕಿ.
ಕೀ ಕೀವು ತುಂಬು.
ಕೀಚಕ ವಿರಾಟರಾಯನ ಹೆಂಡತಿ ಸುದೇಷ್ಣೆಯ ತಮ್ಮನು. ಇವನು ಕೇಕಯ ರಾಜನ ಮಗನು. ಪಾಂಡವರು ವಿರಾಟನೊಡನಿರುವಾಗ ಈತನು, ಸೈರಂಧ್ರಿ (ದ್ರೌಪದಿ) ಯ ಮೇಲೆ ಅತಿಕ್ರಮಿಸ ಹೋಗಿ ಭೀಮನ ಬಲಕ್ಕೆ ತುತ್ತಾದನು; ಗಾಳಿಯಿಂದ ಶಬ್ದ ಮಾಡುತ್ತಿರುವ ಒಣಬಿದಿರು.
—ಅರಿ ಕೀಚಕಾಂತಕ; ಕೀಚಕನನ್ನು ಕೊಂದವ, ಭೀಮ.
ಕೀಚು ಕ್ರೌಂಚ ಪಕ್ಷಿ.
ಕೀಟ (ಕೀಟಕ) ಹುಳುವರ್ಗದ ಅಲ್ಪ ಜೀವಿ; ಶರೀರವು ಮೂರು ಸಂದಾಗಿ ಉಳ್ಳ ಪ್ರಾಣಿ ವರ್ಗ; ಅಲ್ಪ.
—ಕ ಕೀಟ; ಹುಳು.
ಕೀಟಲೆ ತೊಂದರೆ, ಉಪದ್ರ, ಪಿಕಲಾಟ; ಚೇಷ್ಟೆ.
ಕೀಟಾಲಯು ಬಚ್ಚಲ ಮನೆ, ಸ್ನಾನ ಗೃಹ.
ಕೀಟು ಅಲ್ಪ; ತಿರಸ್ಕಾರ, ಅನಾದರ.
ಕೀತು ಸೀಳು, ಸಿಗಿದ ಚೂರು.
ಕೀನ ಕಿರಿದು; ಕೊರತೆ
ಕೀನಾಶ ಯಮ, ಅಂತಕ; ಕಿಂಕರ; ಸಾಗುವಳಿ; ಮಾಂಸಾಹಾರಿ.
ಕೀನಾಶನಗರಿ ಯಮನ ಪಟ್ಟಣ; ಶೈಮಿನಿ.
ಕೀನಿ ತೆರೆ.
—ಕೆ ಹಲ್ಲು ಕಡಿಯುವಿಕೆ.
ಕೀರ ಕೀ ಎಂದು ಕೂಗುವದು, ಗಿಳಿ; ಮುಂಗುಸಿ; ಕ್ಷೀರ (ಸಂ), ಹಾಲು.
ಕೀರಾರ (ಕೀಲಾರ).
ಕೀರಿಂದ ಹಾಲು ಬೆಣ್ಣೆಯ ಮನೆ.
ಕೀರು ಕೆರಳು; ಚೀರು; ಮೊನಚು ವಸ್ತುವಿನಿಂದ ಕೆರೆ; ಆಗ್ರಹಪಡು, ಸಿಟ್ಟಿಂದ ಸುಡು; ಕಟ್ಟುಮೀರಿ ನುಗ್ಗು; ಗೀರು, ಪರಚು; ಕೆದರು; ತಿಕ್ಕು; ಹಾಲು ಪಾಯಸ.
ಕೀರುತಿ (ದ್ಭ) ಕೀರ್ತಿ (ಸಂ).
ಕೀರೆ ತರಕಾರಿ, ಹಸುರುವಾಣಿ.
ಕೀರ್ಣ ಚದರಿದುದು; ವಿಸ್ತಾರವಾದುದು; ವ್ಯಾಪ್ತವಾದುದು; ಗೀರಿ ಅಥವಾ ಕೊರೆದು ಮಾಡಿದುದು; ಚೆದರಿದ, ಚೆಲ್ಲಿದ; ಅವ್ಯವಸ್ಥಿತ; ತುಂಬಿದ; ಗುಪ್ತ, ಅಡಗಿದ.
ಕೀರ್ತನೆ ಹೇಳಿಕೆ; ಸ್ತುತಿ; ಹೊಗಳಿಕೆ.

ಕೀರ್ತಿ ಪ್ರಶಂಸೆ; ಹೊಗಳಿಕೆ; ಹೆಸರುವಾಸಿ.
—ಶೇಷ ಕೀರ್ತಿಯಷ್ಟೇ ಉಳಿದಿರುವ; ಮೃತಗೊಂಡ; ಸಾವು.
ಕೀರ್ತಿಮುಖ ಅಣಸು; ಕೊಂಬೆಗೆ ಸಿಕ್ಕಿರುವ ಒಂದು ಬಗೆಯ ವಸ್ತ್ರ.
ಕೀಲ ಕೀಲು; ಅಗ್ನಿಜ್ವಾಲೆ; ಪರ್ವತ; ಅರಗು.
ಕೀಲಣ ತಂತ್ರ; ಕೀಲು; ಕಟ್ಟುವಿಕೆ.
ಕೀಲಾರ (ದ್ಭ) ಕ್ಷೀರಾಗಾರ (ಸಂ), ಹಾಲಿನ ಮನೆ.
—ಇ ಹಾಲುಮಜ್ಜಿಗೆಯ ವ್ಯಾಪಾರಿ.
ಕೀಲಾಲ ನೀರು; ಪಶು; ದೊಡ್ಡ ಜ್ವಾಲೆ; ರಕ್ತ; ಸವಿ ಪಾನೀಯ.
ಕೀಲಿ ಕೀಲು, ಕಡ್ಡಿ; ಬೆಂಕಿಯ ಕಿಡಿ; ಬೀಗದ ಕೈ; ಗೂಟ, ಆಣಿ.
ಕೀಲಿಗ ಬಡಿಗ.
ಕೀಲು ಕೀಲಿ, ಗೂಟ, ಆಣಿ; ಸಂದು; ಗುಟ್ಟು.
—ಇಸು ಕುಟ್ಟು; ಗಟ್ಟಿಮಾಡು; ನಾಟಿಸು.
ಕೀವು ರಸಿಕೆ, ಹಾಳಾದ ರಕ್ತ.
ಕೀಶ ಹನುಮಂತನು ಸ್ವಾಮಿಯಾಗಿ ಉಳ್ಳವ; ವಾನರ, ಕಪಿ.
ಕೀಸು ಕೆತ್ತು, ನುಣುಪುಮಾಡು; ಗೀರು; ಒಬ್ಬು, ಕಿತ್ತು ಬರು; ಕಿವಿಯೋಲೆ.
ಕೀಸುಳಿ ಉಜ್ಜುಗೊರಡು; ಮರವನ್ನು ನಯ ಮಾಡುವ ಉಳಿ.
ಕೀಳ್ (ಕೀಳು) ಅಲ್ಪ, ಹೀನ, ಕಡಿಮೆತರ; ಕೆಳಗು; ಕಡಿವಾಣ; ಛೀಳಿಡು, ಶಬ್ದ ಮಾಡು; ಕಿತ್ತುತೆಗೆ; ನಿರ್ಮೂಲಿಸು; ಕೊಲೆ, ಪ್ರೇತ.
—ಆಗು ಕೆಳತರಗತಿಗೆ ಬಾ, ಹೀನ ವಾಗು.
—ಆಳು ಅಲ್ಪಮನುಷ್ಯ; ಬದಿಗ, ಬಡಿಗ.
ಕೀಳೆ ಕೆಳಗಿನ ಭೂಮಿ, ಪಾತಾಳ.
ಕೀಳೆಸಳ್ ಕೆಳಗಿರುವ ಪಾತ್ರ; ಕೆಳ ತಳ.
ಕೀಳ್ಗಳ್ ಕೆಳಗಿನವರು; ಸಾಮಾನ್ಯರು; ಪ್ರೇತಗಳು.
ಕೀಳ್ವಳಿ ದುರ್ಮಾರ್ಗ.
ಕೀಳ್ವಾಳವಳ್ ಹೀನೆ.
ಕು ಕೆಟ್ಟ; ಭೂಮಿ; ಪಾಪ; ಶಬ್ದಮಾಡು.
ಕುಕರ ವಕ್ರವಾದ ಕೈ ಉಳ್ಳವ.
ಕುಕವಿ ಕೆಟ್ಟ ಕವಿ.
ಕುಕಿಲ್ (ಕುಕಿಲು) ಕೋಗಿಲೆಯ ಕೂಗು; ಕೋಗಿಲೆ; ಅಲ್ಪ ಕವಿ.
—ಇಡು ಶಬ್ದಮಾಡು, ಕೂಗು.
ಕುಕುರ (ಕುರ=ಪರಚಿ ಶಬ್ದಮಾಡು) ನಾಯಿ; ಯದುವಂಶದ ಒಬ್ಬ ರಾಜ; ದಶಾರ್ಹ ದೇಶ.
ಕುಕುಂದರ ತೊಡೆಸಂದಿನ ತಗ್ಗು.
ಕುಕೂಲ ಹೊಗೆವ ಬೆಂಕಿ; ಸಾನುಭೂಮಿ; ಉತ್ಕೃಷ್ಟ.
ಕುಕ್ಕಟಿ ಕಾಗೆಹೊಡೆಕ, ಕಲಿಂಗ ಪಕ್ಷಿ.
ಕುಕ್ಕರಿಸು ಕುಳಿತುಕೊಳ್ಳು; ಬಲವಂತದಿಂದ ಕುಳ್ಳಿರಿಸು; ನಾಶಪಡಿಸು.
ಕುಕ್ಕು ಸೊಣೆ, ಕುಟುಕು; ಕೆಣಕು; ಕುಲುಕು; ಬಟ್ಟೆಯನ್ನು ಮೆಲ್ಲಗೆ ಒಗೆ; ಬೆಳಕಿಂದ ಕಣ್ಣು ಚುಚ್ಚು; ಕೊಕ್ಕು; ಕೊಕ್ಕರೆ.
ಕುಕ್ಕುಟ (ಸಂ) ಕೋಳಿ (ದ್ಭ).
ಕುಕ್ಕುಭ ಕಾಡುಕೋಳಿ.
ಕುಕ್ಕುರ ನಾಯಿ; ಒಂದು ದೇಶ.
ಕುಕ್ಕುರಿಸು ಮುದುರು; ಬಿದ್ದು ಪುಡಿಯಾಗು.
ಕುಕ್ಕೆ ಬುಟ್ಟಿ.
ಕುಗ್ಗು (ಕುರ್ಗು) ಬಾಗು; ವಿನಯದೋರು; ಮುದುರು; ಕ್ಷೀಣಿಸು; ನಿಲಿಸು.
—ಇಸು ಸಣ್ಣದು ಮಾಡು; ಕ್ಷೀಣಿಸು ವಂತೆ ಮಾಡು.
ಕುಗ್ರಹ ಪ್ರತಿಕೂಲ ಗ್ರಹಗತಿ; ಕೆಟ್ಟ ಗ್ರಹ.

ಕುಗ್ರಾಮ ಚಿಕ್ಕ ಹಳ್ಳಿ.
ಕುಕ್ಷಿ ಕುಣಿ; ಹೊಟ್ಟೆ.
ಕುಚ ಮೊಲೆ, ಸ್ತನ; ಕುಡಿಮೊಲೆ.
ಕುಚರ ವಕ್ರ, ಡೊಂಕು ನಡಿಗೆ.
ಕುಚಂದನ ಚಂದನ, ಕೆಂಪು ಗಂಧ.
ಕುಚಾಳಿ ಕೆಟ್ಟ ಚಾಳಿ, ಕೀಳ್ನಡೆ.
ಕುಚುಗುಡು ಗುಜುಗುಜಿಸು, ಪಿಸುಮಾತಾಡು, ಪಿಸುಗುಡು.
ಕುಚೇಲ ಚಿಂದಿ ವಸ್ತ್ರ; ಪ್ರಾಚೀನ ಪ್ರಸಿದ್ಧಿಯ ಒಬ್ಬ ಬಡ ಬ್ರಾಹ್ಮಣ.
ಕುಚೇಷ್ಟೆ ಕೆಟ್ಟ ಚೇಷ್ಟೆ; ಅಪಹಾಸ್ಯ.
ಕುಚೋದ್ಯ ಪರಿಹಾಸ, ಅಪಹಾಸ, ನಕಲಿ.
ಕುಚ್ಚ ಕುರುಡ.
ಕುಚ್ಚಿ (ನೋಡು: ಕುಚ್ಚು).
ಕುಚ್ಚಿತ (ದ್ಭ) ಕುತ್ಸಿತ (ಸಂ), ಕೆಡುಕು ಚಾಳಿ.
ಕುಚ್ಚು ಕುದುಸು, ಕುದಿಸು; ಕುಂಚ, ಗೊಂಚಲು; ಒಂದು ಜಾತಿ ಮೀನು.
ಕುಜ ಕಿರಾತ, ಪುಲಿಂದ; ಕೆಟ್ಟಬುದ್ಧಿ; ಮಂಗಳ ಗ್ರಹ; ಮರ.
—ವಾರ ಮಂಗಳವಾರ.
ಕುಜನ ಕೆಟ್ಟ ಜನ, ದುರ್ಜನ.
ಕುಜಿ ಕೀಳು ಹೆಂಗುಸು.
ಕುಜ್ಜಿ (ಗುಜ್ಜೆ) ಬೆಳೆಯದ ಹಲಸಿನ ಕಾಯಿ, ಕಡಿಗೆ.
ಕುಟ ಕೊಡ; ಮನೆ, ಗುಡಿ; ಕೊಡತಿ.
ಕುಟಕ ಬಡಿವವ, ಹೊಡೆವವ; ಕುಡಿಕ; ನೇಗಿಲ ಕುಳ.
ಕುಟಕು ಕುಲುಕು; ಕಿಲಿಸು, ತುರುಕು.
ಕುಟಜ (ಸಂ) ಕೊಡಸಿಗೆ (ದ್ಭ).
ಕುಟರು ಡೇರೆ, ಗೂಡಾರ; ಪಾರಿವಾಳದ ಕೂಗು.
ಕುಟಿ (ಸಂ) ಗುಡಿ (ದ್ಭ); ಹೂಗೊಂಚಲು; ಬಾಗು; ಮೂಗುತಿ; ಗುಡಿಸಿಲು.
ಕುಟಿಕ ಕುಟಗ, ಕುಟಗ, ಕುಟ್ಟಗ.
ಕುಟಿಲ ವಂಚನೆ; ಬಾಗು; ಮೋಸ; ನೇರವಲ್ಲದ, ಡೊಂಕಾದ.
—ತನ ಮೋಸ, ಕಪಟ, ವಂಚಕವೃತ್ತಿ.
—ತ್ವ ಮೋಸಗಾರಿಕೆ.
ಕುಟೀರ ಗುಡಿಸಿಲು, ಚಿಕ್ಕಮನೆ, ಗುಡಿ.
ಕುಟುಕು ನುಂಗು; ಕಡಿ; ಸೊಣೆ; ಬಡಿ.
—ಇಸು ಗುಟಕಿಸು, ನುಂಗು.
ಕುಟುಂಬ ಗಂಡ ಹೆಂಡತಿ ಅವರ ಮಕ್ಕಳು; ಮಡದಿ.
—ಇನಿ ಮನೆ ಯಜಮಾನಿ, ಗೃಹಿಣಿ; ಮಡದಿ.
—ಸ್ಥ ಹೆಂಡತಿ ಮಕ್ಕಳಿರುವವ.
ಕುಟ್ಟಣ (ಕೊಟ್ಟಣ) ಒನಕೆ, ಕುಟ್ಟುವ ದಂಡ; ಕುಟ್ಟ ಆದುದು.
ಕುಟ್ಟಿ ಒಂದು ಜಾತಿಯ ಕೀಟ; ಒಡೆದು.
ಕುಟ್ಟನಿ ವ್ಯಭಿಚಾರಕ್ಕೆ ಸಹಾಯಕಳಾಗುವವಳು; ಕೆಟ್ಟ ಕೆಲಸಕ್ಕೆ ಹುಡುಗಿಯನ್ನು ಒದಗಿಸುವವಳು.
ಕುಟ್ಟಿಮ ನೆಲಗಟ್ಟು, ಪಾಯ.
ಕುಟ್ಟು ಹೊಡಿ, ಬಡಿ; ಪುಡಿಮಾಡು; ಎಸೆ; ಉಸುರು, ನುಡಿ.
ಕುಟ್ಟೆ (ಕುಟ್ಟ) ಮರ ತಿನ್ನುವ ಹುಳು.
ಕುಟ್ಮಲ (ಕುಡ್ಮಲ) ಮೊಗ್ಗೆ.
ಕುಠ (ಕುಟ) ಮರ.
ಕುಠಾರ (ಸಂ) ಕೊಡಲಿ (ದ್ಭ), ಕಟ್ಟಿಗೆ ಒಡೆಯುವ ಸಾಧನ.
—ಕ ಕೊಡಲಿ ಆಯುಧವಾಗಿರುವವ, ಪರಶುರಾಮ; ಕೇಡಿಗ.
ಕುಡ (ಕುಳ) ನೇಗಿಲುಕುಂಟೆ, ಗುಳ; ಕುಡಿ; ಅರಗಿನ ಕಡ್ಡಿ.
ಕುಡತೆ (ಕುಡಿತೆ) ಒಂದು ಅಳತೆ.
ಕುಡಿ ಕುಡಿಯುವಿಕೆ; ತುದಿ, ಮೊನೆ; ಮೊಳಕೆ;

ಶೃಂಗ; ಚಿಗುರು; ಬೆಟ್ಟದ ತುದಿಯಲ್ಲಿರುವ ಜನರು; ಮನೆತನ, ವಂಶ; ಕುಳ; ಒಕ್ಕಲು.
—ಕ ಮದ್ಯಪಾಯಿ, ಕುಡಿಯುವವ.
—ಚಿ ಕುಡಿವಾಕೆ, ಕುಡಿಯುವ ಶೀಲ ಉಳ್ಳವಳು.
—ತ ಮದ್ಯಪಾನ.
—ಪರೆಯರ್ ವಂಶದ ಪುರಾತನರು, ಮೊದಲ ಮನೆತನದವರು.
ಕುಡಿಕೆ ಮಣ್ಣಿನ ಚಿಕ್ಕ ಪಾತ್ರೆ.
ಕುಡಿತೆ ಬೊಗಸೆ.
ಕುಡಿನ ನೇಗಿಲ ಮರ.
ಕುಡಿವರಿ ಬಳ್ಳಿಯಾಗಿ ಹಬ್ಬು.
ಕುಡು ಕೊಡು; ಕುಡಿ; ದಾನಮಾಡು; ಹೊಡೆ, ಬಡಿ; ಬಾಗು, ಕೊಂಕು.
ಕುಡುದಾಡೆ ಕೋರೆ ಹಲ್ಲು.
ಕುಡುಪು ಕುಡುಹು; ದೊಣ್ಣೆ; ತಂತಿ ವಾದ್ಯ ಬಾರಿಸುವ ಕೋಲು, ಕಮಾನು.
ಕುಡ್ಡ ಕುರುಡ; ಕುದುಂಬಳ ಹಕ್ಕಿ; ಬೆಳ್ಳಕ್ಕಿಯ ಜಾತಿಯ ಒಂದು ಹಕ್ಕಿ; ಕೌಜಲು.
ಕುಡ್ಮಲ (ಕುಟ್ಮಲ) ಮೊಗ್ಗು.
ಕುಡ್ಯ ಗೋಡೆ.
ಕುಣಪ ಶಿವ; ಹೆಣ.
ಕುಣಿ ಕುಳಿ, ಹೊಂಡ; ಚಿಂದಿವಸ್ತ್ರ; ವಸ್ತ್ರ, ನರ್ತಿಸು.
—ತ ನರ್ತನ, ಕುಣಿದಾಟ; ಅಲುಗಾಟ.
ಕುಣಿಕ ಕುಂಟ, ಮೋಟ.
ಕುಣಿಕೆ ಕುಳಿ; ಸರಪಳಿಯ ಅಂಗವಾದ ಉಂಗುರ; ಸರಿಗಂಟು; ಬೆರಳು; ಕೊನೆ.
ಕುಣಿಲು ದಂಡ, ದೊಣ್ಣೆ; ಎಣ್ಣೆ ಇಲ್ಲವೆ ದ್ರಾವಕ ಸುರಿಯುವ 'ಫನೆಲು'.
ಕುಣಿಹ ನೃತ್ಯ, ಕುಣಿತ; ನೆಗೆದಾಟ.
ಕುಣ್ಮು ಬಾಗು, ಕುಳುಕು.
ಕುತಪ ಅಪರಾಹ್ನ, ಸಂಜೆ.
ಕುತರ್ಕ ನ್ಯಾಯವಲ್ಲದ ವಾದ.
ಕುತಂತ್ರ ವಂಚಕ ಮಾರ್ಗ.
ಕುತುಕ (ಕೌತುಕ) ಆತುರ; ಇಚ್ಛೆ.
ಕುತೂಹಲ ಆತುರ; ಬಯಕೆ; ಆಶ್ಚರ್ಯಕರ; ಆಟ.
ಕುತ್ಕೀಲ ಪರ್ವತ.
ಕುತ್ತ ಕೊರತೆ, ಊನ; ಕಾಯಿಲೆ, ಬೇನೆ; ವಿಪತ್ತು.
ಕುತ್ತರಿ (ಕುತ್ತುರು) ಮೆದೆ, ಬಣವೆ; ತಿರಿ.
ಕುತ್ತರು ಪೊದರು, ಪೊದೆ.
ಕುತ್ತಿಗೆ ಕತ್ತು, ಕೊರಲು; ಗಂಟಲು.
ಕುತ್ತು ಚಿಕ್ಕದು; ಕೊತ್ತು, ಕೊಚ್ಚು; ತಿವಿ; ಹೊಡೆ; ವಿಪತ್ತು.
ಕುತ್ತೆ ರೋಗಿಷ್ಠ ಸ್ತ್ರೀ.
ಕುತ್ಸಿತ (ಸಂ) ಕುಚ್ಚಿತ (ದ್ಭ); ತಿರಸ್ಕೃತ; ನಿಂದ್ಯ; ಕೆಡುಕಿ.
ಕುದಕಲು (ಕುದುಪಲು) ಕುಚ್ಚಲು, ಅರೆ ವಾಸಿ ಬೆಂದುದು; ಅರೆಬೆಂದ ಬತ್ತದಿಂದ ಮಾಡಿದ ಅಕ್ಕಿ.
ಕುದರು ಕುದುರು, ತಗ್ಗುಭೂಮಿ; ಕುಳಿ; ಹೊಳೆ; ಹೊಳೆಯ ತಳ; ಹೊಳೆಯಲ್ಲಿನ ದ್ವೀಪ.
ಕುದಿ ದೃಷ್ಟಿಸೋಂಕು; ಬೇಯು, ಕತಕತಿಸು; ಸಂಕಟಪಡು; ನೆಗೆ.
—ಕೊಳ್ ಸಂಕಟಪಡು.
—ಪ ಕುದಿಯುವಿಕೆ.
ಕುದಿರ್ ಕುತ್ತರಿ, ಕಣಜ.
ಕುದಿರು (ನೋಡು: ಕುದುರು).
ಕುದುಕು ಜಗಿ, ನೆಗೆ; ಲಘು ನೆಗೆತದ ನಡಿಗೆ.
ಕುದುಗುಳಿ ತ್ವರೆ; ಆತುರಪಡುವವ.
ಕುದುರ್ ಗೋಡೆ.
ಕುದುರು ಸ್ಥಿರಪಡು; ಕೂಡು; ಹೊಂದು; ನೆಲ

ದಲ್ಲಿ ಹೊಂದಿಕೆಯಾಗು; ಶಾಂತವಾಗು; ಯಶಸ್ವಿಯಾಗು; ಅಭಿವೃದ್ಧಿಗೊಳ್ಳು; ನಡುಗಡ್ಡೆ; ನದಿಯಲ್ಲಿನ ದ್ವೀಪ.

**ಕುದುರೆ** ಅಶ್ವ, ತಟ್ಟು, ಟಾಕಣ.

—ಕಾರ ಸವಾರ; ಕುದುರೆಯವ; ಕಾಸ್ತಾ್ರ.

**ಕುದೃಷ್ಟಿ** ಕಿಡುನೋಟ; ಕ್ಷೀಣ ನೋಟ.

**ಕುದೆ** ಬಂಧನ; ಕುಣಿಕೆ; ಗಂಟು.

**ಕುಧ್ರ** ಬೆಟ್ಟ, ಪರ್ವತ.

**ಕುನಿ** ಬಾಗು; ಮುದುರು.

**ಕುನಿಕಿಲು** ಚೀಲ; ಬಾಗಿಡುದು.

**ಕುನುಂಗು** (ಕುನುಗು) ಮುದುರು; ಬಾಗು; ಸರಿ.

**ಕುನ್ನಗೆಯ್** ಮೊಂಡು ಕೈ.

**ಕುನ್ನಿ** ನಾಯಿ ಮರಿ.

**ಕುಪಥ** ಕೆಟ್ಟ ದಾರಿ, ಕೆಟ್ಟ ನಡೆ.

**ಕುಪಿತ** ರೇಗಿದ, ಸಿಟ್ಟಾದ, ಕೋಪಗೊಂಡ.

**ಕುಪ್ಪಡಿಗೆ** ಪುಟ್ಟ ಕುಲುಮೆ, ಅತ್ತಿತ್ತ ಸಾಗಿಸಬಲ್ಲ ಅಗ್ಗಿಷ್ಟಿಕೆ; ಅಂಗಾರ ದಾನಿ.

**ಕುಪ್ಪರಿಸು** ಕುಪ್ಪಳಿಸು, ಹಾರು, ನೆಗೆ, ಜಿಗಿ.

**ಕುಪ್ಪಸ** (ದ್ಭ) ಕೂರ್ಪಾಸ (ಸಂ), ಅಂಗಿ; ರವಕೆ.

**ಕುಪ್ಪಿ** ಸೀಸೆ, ಬುಡ್ಡಿ; ಗುಪ್ಪೆ; ಹಾರಿ, ನೆಗೆದು.

**ಕುಪ್ಪು** ಹಾರು, ಜಿಗಿ, ನೆಗೆ; ರಾಶಿಯಾಗಿ ಬಿದ್ದಿರು; ಒಂದು ಬೇನೆ.

**ಕುಪ್ಪೆ** ಗುಪ್ಪೆ; ರಾಶಿ; ಗೊಬ್ಬರದ ರಾಶಿ.

**ಕುಪ್ಯ** ಕಬ್ಬಿಣ ಮೊದಲಾದ ಕೀಳು ಲೋಹಗಳು; ಚಿನ್ನ ಬೆಳ್ಳಿಯಲ್ಲದ ಉಳಿದ ಲೋಹಗಳು.

**ಕುಬಸ** ಕುಪ್ಪಸ, ರವಕೆ; ಕವಚ.

**ಕುಬುಜ** (ಕುಬ್ಜ) ಕುಳ್ಳ.

**ಕುಬುಬು** ಒಂದು ಬಗೆಯ ಕೂಗು, ಗುಬ್ಬಳಿಕೆ, ಕುಟುರು.

**ಕುಭೃತ್** ರಾಜ; ಪರ್ವತ.

**ಕುಬೇರ** ವೇದಗಳಲ್ಲಿ ಕುಬೇರನು ಎಲ್ಲ ಕೆಡುಕಿನ ಜೀವಿಗಳಿಗೂ ನಾಯಕನೆಂದಿದೆ. ಅವನು ಪುಲಸ್ತ್ಯನ ಮಗನು. ಅವನೇ ಯಾವತ್ತು ಐಶ್ವರ್ಯಕ್ಕೆ ಒಡೆಯನು. ಅವನ ರಾಜಧಾನಿ ಅಳಕಾ ನಗರ. ಈತನು ರಾವಣನ ಸೋದರನೆಂದೂ ಕಥೆಯಿದೆ.

**ಕುಬ್ಜ** ಕುಳ್ಳ; ವಕ್ರ; ಕೊಂಕಾದ ಶರೀರ ಉಳ್ಳವ.

**ಕುಬ್ಜೆ** ಗೂನು ಬೆನ್ನಿನವಳು.

**ಕುಮುಕಿ** ಕುಮ್ಮಕ್ಕು, ಸಹಾಯ; ಕಂದಾಯ ಕೊಡುವ ಜಮೀನಿಗೆ ಸಮೀಪದ ಸರಕಾರಿ ಭೂಮಿ.

**ಕುಮನ** ಕೆಟ್ಟ ಮನಸ್ಸು, ದುರ್ಬುದ್ಧಿ; ಕ್ರೂರ ಮನಸ್ಸು.

**ಕುಮರಿ** (ಕುಮೆರು) ಕಾಡಿನ ಮಗ್ಗುಲು ಸವರಿ ಸುಟ್ಟು ಬೆಳೆ ಮಾಡುವ ಸ್ಥಳ.

**ಕುಮಂತ್ರ** ದುರುಪದೇಶ, ಕೆಟ್ಟ ಸಲಹೆ.

**ಕುಮಾಯೆ** ಕೆಟ್ಟ ಮೋಸ.

**ಕುಮಾರ** (ಸಂ) ಕೋರ, ಕುವರ (ದ್ಭ), ಮಗ; ಸ್ಕಂದ; ಯುವರಾಜ.

**ಕುಮಾರ ವಾಲ್ಮೀಕಿ** ತೊರವೆರಾಮಾಯಣವನ್ನು ಬರೆದ ಕವಿ.

**ಕುಮಾರ ವ್ಯಾಸ** ಗದುಗಿನ ಭಾರತವನ್ನು ಬರೆದ ಕವಿ.

**ಕುಮಾರಸ್ವಾಮಿ** ಶಿವನ ಮಗ ಷಣ್ಮುಖ; ಸುಬ್ರಹ್ಮಣ್ಯ.

**ಕುಮಾರಿ** ಕುವರಿ (ದ್ಭ), ಚಿಕ್ಕ ಹುಡುಗಿ; ದುರ್ಗಿ.

**ಕುಮಾರಿಲ ಭಟ್ಟ** ಈತನು ಮಿಮಾಂಸಕಾರನು; ತನ್ನ ವಿದ್ವತ್ತಿನಿಂದ ಬುದ್ಧಧರ್ಮವನ್ನು ಹಿಮ್ಮೆಟ್ಟಿಸಲು ಯತ್ನಿಸಿದನು.

**ಕುಮಾರ್ಗ**. ಕೆಟ್ಟ ಹಾದಿ.

ಕುಮುಟು ಕಮರು; ಕೊಳೆತ ನಾತ; ಕಮ್ಮುವಿಕೆ.

ಕುಮುದ ಕೈರವ, ಕೋಳೆ, ನೈದಿಲೆ; ಚಂದ್ರ; ಕರ್ಪೂರ; ಕಶೋರ.

—ಬಾಂಧವ ನೈದಿಲೆಯ ಗೆಳೆಯ, ಚಂದ್ರ.

ಕುಮುದಿನಿ ನೈದಿಲೆಗಳು ತುಂಬಿದ ಕೊಳ.

ಕುಮುದ್ವತಿ ಒಂದು ನದಿಯ ಹೆಸರು; ಕೋಳೆಗಳು ತುಂಬಿದ ಕೊಳ; ಒಬ್ಬ ನಾಗಕನ್ಯೆ. ರಾಮನ ಮಗನಾದ ಕುಶ ನನ್ನು ಈಕೆ ವಿವಾಹವಾದಳೆಂದು ಕಥೆ.

ಕುಮ್ಮಟು ಕುಮರು, ನಾತ ನಾರು.

ಕುಮ್ಮು ಒನಕೆಯಿಂದ ಕುಟ್ಟು.

ಕುಯ್ (ಕುಯ್ಯು).

ಕುಯಕ ಕೊಯಕ, ಕುಹಕ, ಠಕ್ಕು.

ಕುಯಂತ್ರ ಕೆಟ್ಟ ಸಾಧನ.

ಕುಯಿಲು ಕೊಯ್ಲು, ಕಟಾವು.

ಕುಯುಕ್ತಿ ಕೆಟ್ಟ ಯುಕ್ತಿ, ಕೆಟ್ಟ ಉಪಾಯ.

ಕುಯ್ಯು ಕೊಯ್ಯು, ಕತ್ತರಿಸು.

ಕುರ (ಕುರು) ಮೈಮೇಲೆ ಏಳುವ ಒಂದು ಬಾವು.

ಕುರಗ ಅಧ್ಗಣೆ; ಅಡಿಗಲ್ಲು.

ಕುರಲ್ ಕೂಗು, ಕಿರುಚು, ಒರಲು.

ಕುರರ ಒಂದು ಹಕ್ಕಿ.

ಕುರವಕ ಗೋರಟೆ.

ಕುರಂಗ ಒಂದು ಬಗೆಯ ಜಿಂಕೆ, ಎರಳೆ.

—ರಿಪು ಹುಲಿ, ಚಿರತೆ.

ಕುರಾಣ ಇಸ್ಲಾಮ ಧರ್ಮಗ್ರಂಥ; ಮಹಮ್ಮದ ಪೈಗಂಬರನು ಹೇಳಿದ ವಚನಗಳುಳ್ಳ ಗ್ರಂಥ.

ಕುರಿ ಮೇಷ, ಮೇಕೆ ಬಳಗದ ಒಂದು ಪ್ರಾಣಿ.

—ತರಿ ಕುರಿಯ ಮಂದೆಯನ್ನು ತರಿದಂತೆ ಹಿಂಸಿಸು.

—ತನ ಹೆಡ್ಡತನ.

ಕುರಿತು ಒಂದರ ವಿಷಯವಾಗಿ.

ಕುರಿಪು ಗುರುತು.

ಕುರು ಒಂದು ಪ್ರಸಿದ್ಧ ಪ್ರಾಚೀನ ವಂಶ; ಕುರುಹು; ಬಾವು; ಪಾಂಡುರಾಯನ ಹಿರಿಯರಾದವರು; ಎತ್ತರ ಕಡಮೆಯಾದ, ಕುಳ್ಳ.

ಕುರುಕುಲ ಕುರು ಅರಸನ ವಂಶದವರು.

—ಅಧಿಪ ದುರ್ಯೋಧನ.

ಕುರುಕ್ಷೇತ್ರ ದೇಹಲಿಯ ಬಳಿ ಥಾನೇಶ್ವರ ಪಾನಿಪತ್ತುಗಳ ನಡುವಣ ಸೀಮೆ. ಇಲ್ಲಿ ಭಾರತ ಯುದ್ಧವಾಯಿತು.

ಕುರುಜೆ ಕುರುಚು, ಪೊದೆ.

ಕುರುಜಾತ ಕುರುವಂಶದವರು; ಧೃತರಾಷ್ಟ್ರ ಕೌರವ ಮೊದಲಾದವರು.

ಕುರುಜಾತು ಹಿಂದಿನ ಕಾಲದ ಒಂದು ಚಿನ್ನದ ನಾಣ್ಯ.

ಕುರುಜಾಂಗಲ ಒಂದು ದೇಶ; ಒಂದು ದೇಶದ ಜನರು.

ಕುರುಜು ಬುರುಜು, ಅಟ್ಟಳೆಯಂಥ ಮಂಟಪ.

ಕುರುಟಿಕೆ ಅಜಶೃಂಗಿ ಗಿಡ, ಸುರಟ ಗಿಡ.

ಕುರುಡ ಕಣ್ಣಿಲ್ಲದವ; ದೃಷ್ಟಿಹೀನ.

ಕುರುದಾರಿ ಅಸ್ಪಷ್ಟ ದಾರಿ; ಕುರುಹು ಮಾತ್ರ ಉಳಿದಿರುವ ದಾರಿ.

ಕುರುನಾಯಕ ಕೌರವೇಶ್ವರ, ದುರ್ಯೋಧನ.

ಕುರುಪು ಅಭಿಪ್ರಾಯ; ಉದ್ದೇಶ, ಗುರಿ.

ಕುರುಪೆ (ದ್ಭ) ಕೃಪಾ (ಸಂ).

ಕುರುಬ (ಕುರುಂಬ) ಕುರಿ ಕಾಯುವವ; ಕಿರುಬ.

ಕುರುವ ದ್ವೇಷ; ಬೆಟ್ಟ.

ಕುರುವಕ ಮದರಂಗಿ; ಗೋರಟೆ.

ಕುರುಳ್ (ಕುರುಳು) ಕೂದಲು; ಸುರುಳಿ ತಲೆಕೂದಲು; ಬೆರಣಿ; ಕುರುಡು; ಅಗಲ ಬಾಯ ಮಣ್ಣಿನ ಪಾತ್ರೆ.
—ಇಡು ಮುಡಿ ತೊಡು; ತುರುಬು ಹಾಕು.
ಕುರುಳಿ ಅಗಲ ಬಾಯ ಕಂಚಿನ ಪಾತ್ರೆ.
ಕುರುಳ್ಚು ಕತ್ತಿ ತಿರುಗಿಸು, ಖಡ್ಗ ತಿರುವು.
ಕುರುಹು ಗುರುತು.
ಕುರುಂಡ ಚಿನ್ನ; ಸಾಣೆಗೆ ಬರುವ ಒಂದು ಬಗೆಯ ಮರಳು ಕಲ್ಲು.
ಕುರುಂಬ (ಕುರುಬ) ಮುಖಂಡ; ಕೋಟೆ ಯವ.
ಕುರುಂಬು ಹಟ; ಹುಚ್ಚುತನ.
ಕುರೂಪ ವಿಕಾರ ರೂಪು.
ಕುರೆ ಶುದ್ಧ ಬೆಳ್ಳಿ; ಕೂಗು.
ಕುರ್ಕುರ (ಕುಕ್ಕುರ) ನಾಯಿ, ಶ್ವಾನ.
ಕುರ್ಗು (ಕುಗ್ಗು), ಕುಗ್ಗಿದ ಇಲ್ಲವೆ ಬಾಗಿದ ಸ್ಥಿತಿ, ಗೂನು.
ಕುರ್ಚಿ (ದ್ಭ) ಕೂರ್ಚ (ಸಂ), ಕುಳಿತುಕೊಳ್ಳುವ ಒಂದು ಆಸನ.
ಕುರ್ಚಿಕೆ (ಕೂರ್ಚಿಕೆ) ಗಿಣ್ಣು.
ಕುರ್ವ ಕುರುವ; ಕಿರುಬ, ಕತ್ತೆಕಿರುಬ.
ಕುರ್ವಾಣ ಮೂಡುವಿಕೆ; ಮೂಟ.
ಕುಲ (ಕುಳ) ಗುಂಪು, ಸಮೂಹ; ವಂಶ; ಮನೆತನ, ಜಾತಿ; ಪ್ರಾಮುಖ್ಯ.
—ಜೆ ಒಳ್ಳೆಯ ವಂಶದಲ್ಲಿ ಹುಟ್ಟಿದವಳು.
ಕುಲಕರಣಿ ಕಾರಕೂನ, ಶ್ಯಾನುಭೋಗ, ಕರಣಿಕ.
ಕುಲಕು (ನೋಡು: ಕುಲುಕು).
ಕುಲಗುರು ಆಚಾರ್ಯ, ಪುರೋಹಿತ.
ಕುಲಗೃಹ ಯೋಗ್ಯ ಮನೆ; ತವರು.
ಕುಲಗೋತ್ರ ಮನೆತನ, ವಂಶ.
ಕುಲಟೆ ಹೀನವೃತ್ತಿಯವಳು; ನೀಚ ಸ್ತ್ರೀ.
ಕುಲತಿಲಕ ಕುಲಕ್ಕೆ ಮಾನತರುವಂಥವ; ಕುಲದಲ್ಲಿ ಶ್ರೇಷ್ಠನಾದವ.
ಕುಲದೇವತೆ ವಂಶದವರು ನಂಬಿ ಬಂದ ದೇವರು.
ಕುಲಧನ ಪಿತ್ರಾರ್ಜಿತ ಸಂಪತ್ತು.
ಕುಲನಾರಿ ಕುಲೀನೆ; ಪತಿವ್ರತೆ.
ಕುಲವಧು ತನ್ನ ಮನೆತನದ ಇಲ್ಲವೆ ಜಾತಿಯ ಹೆಮ್ಮೆ.
ಕುಲಸ್ತ್ರೀ ಕುಲನಾರಿ, ಸತ್ಕುಲ ಪ್ರಸೂತೆ.
ಕುಲಾಯ (ಕುಲಾಯಿ) ಗೂಡು; ಕುಲಾವಿ, ಶಿರಸ್ತ್ರಾಣ.
ಕುಲಾಲ ಕುಂಬಾರ, ಮಡಕೆ ಮಾಡುವವ.
—ಚಕ್ರ ತಿಗುರಿ, ಕುಂಬಾರನ ಚಕ್ರ.
ಕುಲಾವಿ ತಲೆಗೆ ಹಾಕುವ ಟೊಪ್ಪಿ, ಶಿರಸ್ತ್ರಾಣ; ಸಿಡಿಲು.
ಕುಲಿಶ ಇಂದ್ರನ ವಜ್ರಾಯುಧ; ಒಂದು ಜಾತಿಯ ಮೀನು.
ಕುಲೀನ ಉತ್ತಮ ಕುಲದವ; ಸತ್ಕುಲ ಪ್ರಸೂತ.
ಕುಲುಕು (ಕುಲುಂಕು) ಕುದುಕು, ಅಲುಗಿಸು.
—ಗಾತಿ ಒಯ್ಯಾರಿ, ಬಿನ್ನಾಣಗಿತ್ತಿ.
ಕುಲುಮೆ ಅಗ್ಗಿಷ್ಟಿಕೆ; ಕಮ್ಮಾರನ ತಿದಿ ಬೆಂಕಿ.
ಕುಲ್ಯ ಕಾಲುವೆ; ತೋಡು, ತೊರೆ; ಅರಣ್ಯ; ವ್ಯಸನ; ಅಸ್ತಿ, ಎಲುಬು.
ಕುವರ ಕುಂಬಾರ; ಕುಮಾರ, ಮಗ; ಮುಸುಕು.
ಕುವಲಯ ಕೋಳೆ, ನೈದಿಲೆ; ನೀಲಕೋಳೆ; ಭೂಮಿ.
ಕುವಾದ ಪ್ರಸಂಗ ತಪ್ಪಿ ಮಾತನಾಡುವುದು, ವಿಷಯಕ್ಕೆ ಹೊಂದದ ಮಾತುಗಾರಿಕೆ.
ಕುವಿ ಕೂಗು.
ಕುವಿಂದ ನೇಕಾರ, ಜಾಡ.

**ಕುವೇರ** (ನೋಡು: ಕುಬೇರ).
**ಕುವ್ವೆ** ಕೂವೆ, ಒಂದು ಜಾತಿಯ ಗಡ್ಡೆ.
**ಕುಶ** ದರ್ಭೆ; ರಾಮಚಂದ್ರನ ಇಬ್ಬರು ಮಕ್ಕಳಲ್ಲಿ ಒಬ್ಬನ ಹೆಸರು; ಒಂದು ಭೂಖಂಡ.
**ಕುಶಲ** ಸಮನಾದುದು; ಕ್ಷೇಮ; ಸುಖ, ಸೌಖ್ಯ; ಚತುರ; ಯುಕ್ತ.
—**ಗಾರ** ಚತುರ.
**ಕುಶಲಪ್ರಶ್ನೆ** ಕ್ಷೇಮಸಮಾಚಾರ.
**ಕುಶಲವ** ರಾಮಚಂದ್ರನ ಇಬ್ಬರು ಮಕ್ಕಳು.
**ಕುಶಸ್ಥಲ** ಕನ್ಯಾಕುಬ್ಜದ ಒಂದು ಪಟ್ಟಣ.
**ಕುಶಾಗ್ರಮತಿ** ಚುರುಕು ಬುದ್ಧಿಯುವ.
**ಕುಶಾಲು** ತಮಾಷೆ, ಚೇಷ್ಟೆ, ವಿನೋದ.
**ಕುಶಿ** (ಖುಷಿ) ಕುಳ, ನೇಗಿಲು; ಸಂತೋಷವಾಗಿರುವಿಕೆ, ಉಲ್ಲಾಸ.
**ಕುಶೀಗೌತಮಿ** ಕೃಷ್ಣ ಗೌತುಮಿ. ಈಕೆ ತನ್ನ ಮೃತ ಕೂಸಿಗಾಗಿ ಬುದ್ಧನಲ್ಲಿಗೆ ಬದುಕನ್ನು ಬೇಡಹೋಗಿ ಉಪದೇಶ ಅವನಿಂದ ಪಡೆದಳು.
**ಕುಶೀಲವ** ನಟ, ನರ್ತನಗಾರ; ರಾಮನ ಮಕ್ಕಳಾದ ಕುಶಲವರು.
**ಕುಷ್ಠ** ತೊನ್ನು, ಒಂದು ಬೇನೆ; ಮಧುಕರಿ.
**ಕುಷ್ಕಿ** ಬೆಟ್ಟು ನೆಲ.
**ಕುಸಿ** ಬಾಗು; ಇಳಿಸಲ್ಪಡು; ಜರಿದುಬೀಳು; ತಗ್ಗು; ಎಡವು; ತಳದಲ್ಲಿ ತಂಗು; ಕಳಚಿಬೀಳು; ಕುಶಿ, ಖುಷಿ.
**ಕುಸುಕು** ಹೊಡೆ, ಬಡಿ.
**ಕುಸುಕುರು** ಇಕ್ಕಟ್ಟಿನ ಸ್ಥಳ; ಗುಟ್ಟಿನ ಸ್ಥಳ.
**ಕುಸುಬು** ಕುಕ್ಕು, ಮೃದುವಾಗಿ ಬಟ್ಟೆಯನ್ನು ಒಗೆ; ಕೆಡಹು.
**ಕುಸುಬೆ** (ದ್ಭ) ಕುಸುಂಭ (ಸಂ); ಕುಸಿಬೆ, ಹುಚ್ಚೆಳ್ಳು.
**ಕುಸುಮ** ಹೂ; ಯೋನಿಸ್ರಾವ.
—**ಬಾಣ** ಹೂಬಾಣವುಳ್ಳವ, ಮನ್ಮಥ.
—**ಶರ** ಮದನ, ಮನ್ಮಥ, ಕಾಮ.
**ಕುಸುಮರಸ** ಜೇನು, ಮಧು.
**ಕುಸುರಿ**(ಕುಸುರು) ಸಸ್ಯಗಳ ಗೊಜ್ಜು; ಗಂಜಿ; ಅಪಕ್ವ.
**ಕುಸುವು** ಸಣಬು.
**ಕುಸ್ತಿ** ಮಲ್ಲಯುದ್ಧ, ಕಸರತ್ತು.
**ಕುಸ್ತುಂಬರ** (ಸಂ), ಕೊತ್ತಂಬರಿ (ದ್ಭ).
**ಕುಸ್ವರ** ಅಹಿತವಾದ ಧ್ವನಿ.
**ಕುಹಕ** ಕಪಟ, ಕೊಯಕ, ಮೋಸ; ಕೆಟ್ಟ ಮನಸ್ಸು.
**ಕುಹರ** ಗುಹೆ; ಪೊಟರೆ.
**ಕುಹಳ** ವೀಳೆಯದೆಲೆಯ ಹಂಬು.
**ಕುಹು** ಚಂದ್ರನು ಕಾಣಿಸದ ಅಮಾವಾಸ್ಯೆ.
**ಕುಹೂರವ** ಕೋಗಿಲೆಯ ಧ್ವನಿ.
**ಕುಳ** (ಕುಲ) ನೇಗಿಲಿನ ಕಬ್ಬಿಣದ ಮೊನೆ; ವಂಶ.
—**ಮಂದಿರ** ಕುಲದ ಮನೆ; ತವರುಮನೆ.
**ಕುಳಂಬಿತ** (ಕುಲಂಬಿತ) ನೆಲದ ಮೇಲೆ ಜೋಲಾಡುತ್ತಿರುವ.
**ಕುಳ್ಳಾಡಿ** ಚಿಕ್ಕ.
**ಕುಳಿ** ಕುಣಿ, ಗುಂಡಿ, ತಗ್ಗು, ಹೊಂಡ; ಛಿದ್ರ; ಸಮಾಧಿ.
— **ಕೊಳ್** ಛಿದ್ರವಾಗು; ಜಿಡುಕು; ಕೋಲಾಹಲ.
**ಕುಳಿಕೆ** ಕುಣಿಕೆ.
**ಕುಳಿರ್** ಶೀತವಾಗಿರು; ಶೀತ, ಹಿಮ; ತಂಪು.
—**ಬೆಟ್ಟ** ಹಿಮಾಲಯ ಪರ್ವತ.
—**ಬೆರಸು** ತಂಪಿಂದ ಕೂಡಿರು.
—**ವ** ಶೀತವಾದ, ತಣ್ಣಗಾದ.
**ಕುಳಿಸ** ಕುಲಿಶ (ಸಂ), ವಜ್ರ.
**ಕುಳೀರ** ಏಡಿ, ನಳ್ಳಿ, ಎಸಡಿ.
**ಕುಳು** (ಕೊಳು) ಕುಡು; ಗಟ್ಟ.
**ಕುಳುಂಪೆ** ನೀರು ನಿಂತಿರುವ ಗುಂಡಿ.

**ಕುಳ್ತಡಿ** ಚಿಕ್ಕದಾದ.

**ಕುಳ್ಳ** ಗಿಡ್ಡಾದವ.

**ಕುಳ್ಳಿರ್** ಕುಳಿತಿರು, ಕೂಡು.

**ಕುಳ್ಳು** ಗಿಡ್ಡವಾದುದು; ಕಡಿಮೆಯಾಗು; ಸೆಗಣಿ ಬೆರಣಿ.

**ಕುಂಕುಮ** ಕೇಸರವರ್ಣ; ಅರಿಸಿನ ಸುಣ್ಣಗಳನ್ನು ಬೆರಸಿಮಾಡಿದ ಕೆಂಪು ಪುಡಿ.

**ಕುಂಕುಮಕೇಸರಿ** ಕೇಸರವರ್ಣದ ಒಂದು ಹೂ; ಸುಗಂಧ ದ್ರವ್ಯ.

**ಕುಂಕೆ** ಗೊಂಕೆ, ಭುಜದ ಡುಬ್ಬ.

**ಕುಂಗು** ಮೌನ; ಕುಗ್ಗು.

**ಕುಂಚ** ಕುಚ್ಚು, ಗೊಂಚಲು; ಚವರಿ, ಚಾಮರ.

**ಕುಂಚಟಿಗ** ತೊಗರಿಕಾಳು ಮಾರುವವ.

**ಕುಂಚವಡಿಗ** ಕುಂತದಿಂದ ನೊಣ ಓಡಿಸುವವ; ಚಾಮರ ಬೀಸುವವ.

**ಕುಂಚಿತ** ವಕ್ರ, ಬಾಗಿದ; ಮುದುರಿದ.

**ಕುಂಚು** (ನೋಡು: ಕುಂಚ).

**ಕುಂಜ** ಪೊದೆ, ಲತಾಮಂಟಪ; ದವಡೆ; ಆನೆಯ ದಾಡೆ.

**ಕುಂಜರ** ಆನೆ; ಉತ್ತಮ, ಉತ್ಕೃಷ್ಟ.

**ಕುಂಜರಾರಿ** ಸಿಂಹ; ಶರಭ; ಶಿವ.

**ಕುಂಜಲ** ಗಂಜಿ; ಹುಳಿ ಗಂಜಿ.

**ಕುಂಜು** ಹಾರು, ಕುಪ್ಪು, ನೆಗೆ.

**ಕುಂಟ** ಕಾಲಿಲ್ಲದವ; ಕುಳ್ಳ.

**ಕುಂಟಣಿ** ಕಾಲಿಲ್ಲದವಳು; ಅಲ್ಪಶಕ್ತಿಯವಳು.

—ಗ ವ್ಯಭಿಚಾರಕ್ಕೆ ನೆರವಾಗುವವ.

—ಗಿತ್ತಿ ಹಾದರಕ್ಕೆ ನೆರವಾಗುವವಳು.

**ಕುಂಟಣಿ** ಕುಟ್ಟನೀ (ಸಂ), ತಲೆ ಹಿಡುಕಿ; ದೂತಿ.

**ಕುಂಟೆ** ದಿಂಡು; ನೆಲ ಸಮಮಾಡುವ ಮರದ ಹಲಗೆ; ಕಳೆ ಕೀಳುವ ಸಾಧನ; ನೀರ ಕುಣಿ, ಕೊಳ.

—ಹೊಡೆ ಕುಂಟೆಯಿಂದ ಕೆಲಸಮಾಡು, ನೆಲದ ಏರುತಗ್ಗನ್ನು ತೆಗೆ.

**ಕುಂಠ** ಮೋಟ; ಕಾಲಿಲ್ಲದವ; ನಡೆಯಲು ಆಗದವ; ಮೊಂಡ; ಚುರುಕಿಲ್ಲದವ.

—ಇತ ಚಲನೆ ತಡೆಯಲ್ಪಟ್ಟ; ಮೊಂಡ, ದಡ್ಡ; ದೂಷಿತ.

**ಕುಂಡ** (ಸಂ) ಕೊಂಡ (ದ್ಭ), ಅಗ್ನಿ ಉರಿವ ಹೊಂಡ; ಕುಳಿ; ಕೊಳ; ವ್ಯಭಿಚಾರಕ್ಕೆ ಹುಟ್ಟಿದವ.

**ಕುಂಡಲ** ಕಿವಿ ಒಡವೆ; ಉಂಗುರ; ಕಂಸದ ಗೆರೆಗಳು.

**ಕುಂಡಲದೀಕ್ಷಿತ** ಕುಂಡಲವನ್ನು ಬಹುಮಾನವಾಗಿ ಪಡೆದ ಪಂಡಿತ; ವಿದ್ವಾಂಸರಲ್ಲಿ ಶ್ರೇಷ್ಠ.

**ಕುಂಡಲಿ** ಕುಂಡಲವಿರುವವ; ಸುರುಳಿಯಾಗಿರುವುದು; ಹಾವು; ಜ್ಯೋತಿಷದ ಒಂದು ಗುರುತು.

**ಕುಂಡಲಿನಿ** ಹೃದಯದಲ್ಲಿರುವ ಯೋಗ ಶಕ್ತಿಯ ಕೇಂದ್ರ.

**ಕುಂಡಿ** ಚಿಪ್ಪಿನ ಕಮಂಡಲು, ನೀರ ಪಾತ್ರೆ.

**ಕುಂಡಿನ** ಧೃತರಾಷ್ಟ್ರನ ಒಬ್ಬ ಮಗ; ವಿದರ್ಭ ದೇಶದ ರಾಜಧಾನಿ.

**ಕುಂಡೆ** ಪೃಷ್ಠ; ಬುಡ; ತಳ; ಚಲ್ಲಣ; ಮೈಗೊತ್ತುವ ಚಲ್ಲಣ; ಚಡ್ಡಿ.

**ಕುಂತ** ಕೊಂತ (ದ್ಭ); ಈಟಿ; ಒಂದು ಕೀಟ.

**ಕುಂತಲ** ತಲೆ ಕೂದಲು; ಕೇಶಪಾಶ; ಈಗಣ ಆದವಾನಿ ಸಮೀಪದ ಪ್ರಾಚೀನ ಕಾಲದ ಒಂದು ದೇಶ.

**ಕುಂತಲಹಸ್ತ** ಜಡೆ, ಇಳಿ ಜಡೆ.

**ಕುಂತಳ** (ಕುಂತಲ) ದಕ್ಷಿಣದ ಒಂದು ಪ್ರದೇಶ. ಈಗಣ ಆದವಾನಿ ಪ್ರಾಂತ.

ಕುಂತಿ ಪಾಂಡವರ ತಾಯಿ; ಪಾಂಡುರಾಯನ ಹೆಂಡತಿ ಆಗಿದ್ದಳು. ಈಕೆಯು ವಸುದೇವನ ತಂಗಿ. ಈಕೆಯ ಮೊದಲಿನ ಹೆಸರು ಪೃಥೆ. ಆದರೆ ಕುಂತಿಭೋಜನೆಂಬ ದೊರೆಯು ಸಾಕುತ್ತಬಂದುದರಿಂದ ಕುಂತಿ ಎಂದು ಹೆಸರಾಯಿತು.

ಕುಂತಿಭೋಜ ಕುಂತೀ ದೇವಿಯ ಸಾಕು ತಂದೆ.

ಕುಂತೀಸುತ ಕರ್ಣ; ಧರ್ಮರಾಯ; ಅರ್ಜುನ; ಭೀಮ.

ಕುಂದ ಮಲ್ಲಿಗೆ, ಕೋಲು ಮಲ್ಲಿಗೆ; ಬಿಡು ಕಲ್ಲಿಂದ ಮಾಡಿದ ಕಂಬ; ಚಿಕ್ಕ ಬೆಟ್ಟ.

ಕುಂದಕ ಕೊರತೆ, ನ್ಯೂನ, ಊನ; ತಡೆ.

ಕುಂದಣ (ಕುಂದನ) ರತ್ನವನ್ನು ಚಿನ್ನದಲ್ಲಿ ಕಟ್ಟುವಿಕೆ; ಒಳ್ಳೆಯ ಚಿನ್ನ.

ಕುಂದಲು ಹಾಳಾದುದು; ಕಡಮೆ ಬಂದ ಅಂಶ.

ಕುಂದಿ ತಗ್ಗು ಭೂಮಿ, ಬಾಗಿದ ನೆಲ.

ಕುಂದು ಕಡಮೆಯಾಗು, ಕ್ಷೀಣಿಸು; ತೆಳ್ಳಗಾಗು, ಮುಳುಗು; ಕೊರತೆ; ದುಃಖ; ನಿರುತ್ಸಾಹ.

—ಹ ಕುಂದುವಿಕೆ; ಅಪಹಾರ.

ಕುಂಪಣಿ ಕಂಪೆನಿ, ವ್ಯಾಪಾರ ಸಂಸ್ಥೆ.

—ಸರಕಾರ ಇಸ್ಟ್ ಇಂಡಿಯಾ ಕಂಪೆನಿಯವರು ನಮ್ಮ ದೇಶದಲ್ಲಿ ನಡಸಿದ ಸರಕಾರ.

ಕುಂಬ (ದ್ಭ) ಕುಂಭ (ಸಂ), ಆವರಣ; ಚರು; ಉಗಿಸ್ನಾನ.

ಕುಂಬತಲ (ದ್ಭ) ಕುಂಭಸ್ಥಳ (ಸಂ), ಆನೆಯ ಹಣೆ.

ಕುಂಬಳ ಕೂಷ್ಮಾಂಡ (ಸಂ), ಒಂದು ಬಳ್ಳಿ.

ಕುಂಬಾರ ಕುಂಭಕಾರ (ಸಂ), ಕುಲಾಲ, ಮಡಕೆಮಾಡುವವನ.

—ತನ ಕುಲಾಲವೃತ್ತಿ; ಆವೆಮಣ್ಣಿನ ಕೆಲಸ; ಹೆಡ್ಡುತನ.

ಕುಂಬು ಕೊಳೆ; ಕೆಡುವಿಕೆ.

ಕುಂಭ (ಸಂ) ಕುಂಬ (ದ್ಭ), ಮಡಕೆ, ಜಲಪಾತ್ರೆ; ಆನೆಯ ಹಣೆ; ಗುಗ್ಗಳು.

—ಕಾರ ಮಡಿಕೆ ಮಾಡುವವ, ಕುಂಬಾರ (ದ್ಭ).

ಕುಂಭಕ ಉಸಿರು ಬಿಗಿಹಿಡಿಯುವ ಒಂದು ಪ್ರಾಣಾಯಾಮದ ರೀತಿ.

ಕುಂಭಕರ್ಣ ರಾವಣನ ತಮ್ಮ. ಈತನು ಬ್ರಾಹ್ಮಣನ ಶಾಪದಿಂದಾಗಿ ಆರು ತಿಂಗಳ ಕಾಲ ನಿದ್ರೆ ಮಾಡುತಿದ್ದರೆ ಒಂದೇ ದಿನ ಎಚ್ಚರವಾಗಿರುತ್ತಿದ್ದನೆಂಬ ಕಥೆಯಿದೆ. ಆತನನ್ನು ರಾಮನು ಯುದ್ಧದಲ್ಲಿ ಕೊಂದನು.

ಕುಂಭಕುಚ ಜಲಕುಂಭಗಳನ್ನು ಹೋಲುವ ಸ್ತನ.

ಕುಂಭಸಂಭವ ಜಲಪಾತ್ರೆಯಲ್ಲಿ ಹುಟ್ಟಿದವ, ಅಗಸ್ತ್ಯ.

ಕುಂಭಸ್ಥಲ ಆನೆಯ ಹಣೆಯ ಭಾಗ.

ಕುಂಭಾನಸ ಒಂದು ಜಾತಿಯ ಹಾವು.

ಕುಂಭಿ ಆನೆ; ಮಡಕೆ.

ಕುಂಭಿನಿ ಭೂಮಿ.

ಕುಂಭೀಪಾಕ ನರಕದ ಒಂದು ಭಾಗ; ಇಲ್ಲಿ ಪಾಪಮಾಡಿದ ಜನರನ್ನು ಮಡಕೆ ಸುಡುವಂತೆ ಸುಡುವರು ಎಂಬ ನಂಬಿಕೆ.

ಕುಂಭೀರ ಮೊಸಳೆ, ನೆಗಳ, ನಕ್ರ.

ಕುಂಯಿ ನಾಯಿಮರಿಯ ಕೂಗು.

—ಕುಡು ನಾಯಿ ಕೂಗು, ಕೂಗುವುದು.

ಕೂಕಲು ಕೂಗು, ಕೂಗಾಟ; ಕಾಳಿಂಗನ ಹಕ್ಕಿ; ಕಾಗೆಹೊಡಕ.

ಕೂಕಂಬಿ ಬಹುದೂರ.

ಕೂಕಂಬ ಕೂವೆ ಕಂಬ, ಹಾಯಿ ಕಂಬ.
ಕೂಕಿರಿ ಆರ್ಭಟಿಸು, ಅಬ್ಬರಿಸು.
ಕೂಕು (ಕೂಗು).
ಕೂಗಟೆ ಅಂಟವಾಳದ ಮರ.
ಕೂಗು ಗಟ್ಟಿಯಾಗಿ ಧ್ವನಿಗೆಯ್ಯು; ಅರಚು.
—ಇಡು ಅರಚು, ಕಿರಿಚು.
ಕೂಚಿ ದಂಡಿನ ಪಯಣ, ದಂಡು ನಡೆಸುವುದು.
—ಇಸು ಚಲನೆ; ಸೈನ್ಯ ನಡೆಸು; ಪಡೆಯ.
ಕೂಚು ಗುಜ್ಜು; ಕುರುಚು; ಚಿಕ್ಕ; ಗೋಡೆಯ ಮೇಲೆ ತೊಲೆಗೆ ಆಧಾರವಾಗಿರಿಸುವ ಕಂಬ.
ಕೂಜ ಹೂಜಿ; ಕುಹೂ ಅನ್ನು.
—ಇತ ಶಬ್ದಮಾಡುತ್ತಿರುವ.
ಕೂಟ ಕೂಡುವಿಕೆ, ಮೇಳ, ಸಂಧಿ; ಸಮೂಹ, ಗುಂಪು; ಯೋಗ; ಬೆಟ್ಟದ ತುದಿ, ಶಿಖರ, ಕೋಡು; ಸುಳ್ಳು; ಸಾಲು.
—ಸ್ಥ ಯೋಗದಲ್ಲಿರುವ; ಗುಂಪಿನವ; ಯಾವ ಕಾಲದಲ್ಲೂ ಸ್ಥಿರವಾದ ಆಕಾಶ ಬ್ರಹ್ಮ ಮೊದಲಾದುವು.
ಕೂಟಕ ರಾಶಿ; ನೊಗ.
ಕೂಟಕುಳಿ ಸೋಮಾರಿ.
ಕೂಟಪಾಕಳ ಆನೆಗೆ ಬರುವ ಒಂದು ಜ್ವರ.
ಕೂಟಯಂತ್ರ ಉರುಳು.
ಕೂಟಸಾಕ್ಷಿ ಸುಳ್ಳು ಸಾಕ್ಷಿ.
ಕೂಟು ಹಲವು ತರಕಾರಿಗಳ ಒಂದು ಮೇಲೋಗರ, ಅವಿಲು.
ಕೂಡ ಸಹ, ಕೂಡೆ, ಜತೆಯಲ್ಲಿ; ಹಾಗೆಯೇ; ಆಗದು.
—ಇರಿಸು ಜತೆಗಿರಿಸು, ರಾಶಿಮಾಡು; ಶೇಖರಿಸು.
—ದವ ಸೇರದವನು.
ಕೂಡಲ್ (ಕೂಡಲು) ಸಂಗಮ; ಜತೆಸೇರುವುದು; ಸೇರಲಾಗಿ.
ಕೂಡಲಸಂಗಮ ಕೃಷ್ಣಾ, ಮಲಾಪಹಾರಿ ನದಿಗಳ ಸಂಗಮ ಸ್ಥಾನದಲ್ಲಿನ ಒಂದು ದೇವಾಲಯದ ಶಿವಲಿಂಗ.
ಕೂಡು ಹೊಂದಿಕೆಯಾಗು, ಒಂದಾಗು; ಭೋಗಿಸು; ಸಾಧ್ಯವಾಗು; ಸಂಭವಿಸು.
—ಇಕೆ ಕೂಡುವಿಕೆ; ಉಡಿಕೆ ಮದುವೆ.
—ಇಸು ಹೊಂದಿಸು; ಜತೆಸೇರಿಸು; ಶೇಖರಿಸು. (ನೋಡು: ಕೂಡ)
—ಹ ಕೂಟ, ಕೂಡಿಕೆ, ಭೋಗ.
ಕೂಡುದಲೆ ಯಶಸ್ಸು; ಅಭಿವೃದ್ಧಿ.
ಕೂಡೆ (ಕೂಡ) ಸೇರಿದ್ದು; ಒಮ್ಮೆ; ಕೂಡಲೆ.
ಕೂತು ಆಡು; ಕುಣಿ; ಕುಳಿತು.
—ಕೊ ಕುಳಿತುಕೋ.
ಕೂದಲ್ (ಕೂದಲು) ತಲೆಗೂದಲು; ರೋಮ.
ಕೂನ ಗೂನು; ಕುರುಹು, ಗುರುತು; ಬಾಗು.
ಕೂನು (ಖೂನು) ಪತ್ರೆ; ಸ್ತ್ರೀಯ ಜನನೇಂದ್ರಿಯ, ಯೋನಿ.
ಕೂಪ (ಕು = ಸ್ವಲ್ಪ, ಅಪ = ನೀರು) ಬಾವಿ; ಪ್ರಿಯ; ಸ್ನೇಹಿತ; ಕೂರ್; ಕೂವ; ಕುಣಿ.
—ಕ ಕುಣಿ; ಕೂವೆ ಮರ; ನೀರಿನ ನಡುವೆ ನೆಟ್ಟ ಕಂಬ; ನದಿ ನಡುವಣ ಬಂಡೆ.
ಕೂಪಾರ (ಕು=ಭೂಮಿ) ಸಮುದ್ರ, ಕಡಲು.
ಕೂಬರ ನೊಗ.
ಕೂರ್ (ಕೂರ) ಹರಿತ; ವೀರ; ಮೊನೆ, ಕ್ರೂರ, ಕಠಿಣ; ಮನಸ್ಸಿರಿಸು; ಪ್ರೀತಿಸು; ನಿದ್ದೆ ತೂಕಡಿಸು; ಕುಳಿತುಕೊಳ್ಳು.
—ಅಲಗು ಹರಿತವಾದ ಬಾಣ.
—ಅಸಿ ಹರಿತವಾದ ಖಡ್ಗ.
—ಇಕೆ ಮೊನೆಯಾಗಿರುವಿಕೆ.
—ಕಣೆ ಹರಿತವಾದ ಬಾಣ.
—ಗೆಯ್ಯು ಹರಿತಮಾಡು, ಮಸೆಯು.

ಕೂರ (ದ್ಭ) ಕ್ರೂರ (ಸಂ), ಕಠಿಣ.
ಕೂರಹು ಖಡ್ಗ.
ಕೂರಂಗಿ (ಕುರಂಗಿ) ಹೆಣ್ಣು ಸಾರಂಗ; ಹರಿಣಿ.
ಕೂರಾಂಬು ಗಂಜಿ.
ಕೂರಿಗೆ ಬೀಜ ಬಿತ್ತುವ ಯಂತ್ರ.
ಕೂರಿತು (ಕೂರಿತ್ತು) ಹರಿತವಾದುದು, ತೀಕ್ಷ್ಣವಾದುದು.
ಕೂರು ನಿದ್ರೆಕೂರು, ತೂಕಡಿಸು; ಕೂಲು.
ಕೂರೆ ಚಿಕ್ಕಾಡು; ಹಾಸಿಗೆಗೆ ಬರುವ ಒಂದು ಬಗೆಯ ಹೇನು.
ಕೂರ್ಚ (ಕುರ್ಚಿ) ಕುಚ್ಚು, ಕುಂಚು; ಗಡ್ಡ; ಕಪಟ; ದರ್ಭೆ; ಮುಷ್ಟಿ; ಪಾದ; ತಲೆ.
—ಶೀರ್ಷ ಗಡ್ಡದಂತೆ ತಲೆಯುಳ್ಳದು, ತೆಂಗಿನಕಾಯಿ.
ಕೂರ್ತು (ಕೂರಿತು) ಕಟುವಾಗಿ, ಕ್ರೂರವಾಗಿ; ಪ್ರೀತಿಸಿ.
ಕೂರ್ದನ ಹಾರಾಟ; ಆಟ.
ಕೂರ್ದಸಿ ಮೊನೆಯಾದ ಗೂಟ.
ಕೂರ್ಪ ಹುಬ್ಬುಗಳ ನಡುವಣ ಜಾಗ; ಕೆರಸೆ, ಮೊರ; ಪ್ರೀತಿಸುವವ, ಪ್ರಿಯ.
ಕೂರ್ಪರ ಭುಜ, ಹೆಗಲು, ಜಂಗು.
ಕೂರ್ಪಾಸ (ಸಂ) ಕಂಚುಕ, ರವಕೆ, ಕುಪ್ಪಸ (ದ್ಭ).
ಕೂರ್ಪು ಹರಿತ; ಶೌರ್ಯ; ಪ್ರೀತಿ; ಬಿರುನೋಟ; ನಾಶ, ಹಾನಿ.
ಕೂರ್ಮ (ಕೂ=ಕಡಿಮೆ, ಊರ್ಮ=ವೇಗ) ಆವೆ, ಆಮೆ; ಭೂಮಿಯನ್ನು ಹೊತ್ತಿರುವನೆಂದು ನಂಬಲಾದ ಮಹಾಕೂರ್ಮ; ದೇಹದ ಒಂದು ವಿಧವಾದ ವಾಯು.
—ಅವತಾರ ವಿಷ್ಣುವಿನ ಎರಡನೆಯ ಅವತಾರ.
ಕೂರ್ಮಚಕ್ರ ಜ್ಯೋತಿಷ್ಯದಲ್ಲಿ ಬರುವ ಒಂದು ಗಣಿತ ಚಕ್ರ.
ಕೂರ್ಮೆ ಸ್ನೇಹ, ಪ್ರೇಮ, ನಲ್ಮೆ; ಮೋಹ, ಪ್ರೀತಿ.
ಕೂಲ ರಾಶಿ; ದಿನ್ನೆ; ದಡ.
ಕೂಲಂಕಷ (ಕೂಲ=ದಡ, ಕಷ=ತಿಕ್ಕು) ಕಡಲು, ಸಮುದ್ರ; ನದಿ; ಪೂರ್ಣವಾಗಿ; ಎರಡು ಮೈತುಂಬಿ ಕಿತ್ತು ಹರಿಯುವುದು.
ಕೂಲಿ ಕೆಲಸಗಾರ; ಶರೀರ ಶ್ರಮ ಮಾಡುವವ; ಪಡಿ, ಮಜೂರಿ, ಕೆಲಸಗಾರಗೆ ಕೊಡುವ ಸಂಬಳ.
—ಕಾತಿ ಕೆಲಸಮಾಡುವವಳು.
—ಕಾರ ಶರೀರ ಶ್ರಮ ಮಾಡುವವ.
—ಸು ಬೀಳು, ನಾಶಗೊಳ್ಳು.
ಕೂಲು (ಕೂಲ್) ಕೂರು, ಬೀಳು; ತಲೆಕೆಳಗಾಗು; ಇಳಿಯುವ ಸೋಪಾನಗಳು.
ಕೂವ ಕೂಪ, ಕುವ್ವೆ.
ಕೂವಕಂಬ (ದ್ಭ) ಕೂಪಸ್ತಂಭ (ಸಂ), ಹಡಗಿನ ಹಾಯಿಕಂಬ; ಧ್ವಜಸ್ತಂಭ.
ಕೂವರ (ಕೂಬರ)
ಕೂವೆ ಒಂದು ಬಗೆಯ ಹಿಟ್ಟು; ಅರಾರೂಟ್; ಕೂವೆಮರ; ಲೋಹ ಕರಗಿಸುವ ತಟ್ಟೆ.
ಕೂವೆಮರ (ನೋಡು: ಕೂವಕಂಬ).
ಕೂಷ್ಮಾಂಡ (ಸಂ) ಕುಂಬಳ (ದ್ಭ), ಬೂದುಕುಂಬಳ; ಚೀನಿಕಾಯಿ.
ಕೂಸು ಚಿಕ್ಕಮಗು; ಎಳೆಯ ಶಿಶು; ಮನುಷ್ಯ; ಕನ್ಯೆ; ವ್ಯಕ್ತಿ.
ಕೂಳ್ (ಕೂರ್) ಕ್ರೂರ; ದುಷ್ಟ; ಓಗರ, ಅನ್ನ.
ಕೂಳಿ (ಗೂಳಿ) ಮೀನನ್ನು ಹಿಡಿಯುವ ಬುಟ್ಟಿ; ವ್ಯರ್ಥ; ನೀಚಮನುಷ್ಯ; ಅಡನಾಡಿ ಹೆಂಗುಸು; ನೀಚ ಸ್ತ್ರೀ.

—ತನ ನೀಚತನ, ಬಂಢಾಟಕೆ.

ಕೂಳು ಅನ್ನ; ಓಗರ.

ಕೂಳೆ ಬತ್ತ ಕೊಯ್ದ ಬಳಿಕ ಉಳಿಯುವ ಹುಲ್ಲಿನ ಬುಡ; ಹೀನ ಹೆಂಗುಸು.

ಕೂಳ್ಗುದಿ ಅನ್ನ ಕುದಿಯುವಂತೆ ಅಂತ ರಂಗದಲ್ಲಿ ಕುದಿಯು; ಅತಿ ಚಿಂತೆ; ಅಸೂಯೆ.

ಕೂಂಕು ಏರು, ಮೇಲಕ್ಕೇರು; ಓಡಿ ಹೋಗು; ತಳ್ಳು; ಹೊಗಿಸು.

ಕೂಂದಲ್ (ನೋಡು: ಕೂದಲ್).

ಕೃಕರ ಒಂದು ಪಕ್ಷಿಜಾತಿ; ಕಣ್ಣುಮುಚ್ಚು ವಿಕೆ; ತೆರೆಯುವಿಕೆ.

ಕೃಕವಾಕು (ಕೃಕ=ಕಂಠ, ವಾಕು=ಧ್ವನಿ ಯುಳ್ಳದು) ಕೋಳಿ, ನವಿಲು.

ಕೃಕಾಟಿಕೆ ಹೆಡತಲೆ, ಕತ್ತಿನ ಹಿಂಬದಿ.

ಕೃಚ್ಛ್ರ ವಿಪತ್ತು; ತೊಡಕು; ವ್ರತ; ತಪಸ್ಸು; ಕಷ್ಟ; ಪಾಪ; ತಪ್ಪಿಗೆ ಹೊರಿಸುವ ಶಿಕ್ಷೆ, ಪ್ರಾಯಶ್ಚಿತ್ತ.

ಕೃತ್ ಕತ್ತರಿಸುವಿಕೆ; ಮಾಡುವಿಕೆ, ಸಾಧನೆ.

ಕೃತ ಮಾಡಿದ; ಕತ್ತರಿಸಿದ; ನಾಲ್ಕು ಯುಗಗಳಲ್ಲಿ ಮೊದಲನೆಯದು, ಸತ್ಯ ಯುಗ; ಫಲ; ರಚನೆ; ಯಮ.

ಕೃತಕ (ಸಂ) ಗತಕ (ದ್ಭ), ಕಪಟ; ಮೋಸ; ಬನಾವಟು, ನಕಲಿ, ಸಹಜವಲ್ಲದ.

ಕೃತಕರ್ಮ ಕೃತಕೃತ್ಯ, ಮಾಡಬೇಕಾದು ದನ್ನು ಮಾಡಿ ಧನ್ಯನೆನಿಸಿದವ, ಕೃತಾರ್ಥ; ವಿದ್ವಾಂಸ.

ಕೃತಕ್ಷಣ ಸಮಯಹೊಂದಿ ಕೆಲಸ ಮಾಡು ವವ.

ಕೃತಘ್ನ ಉಪಕಾರಕ್ಕೆ ವಿರುದ್ಧವಾಗಿ ಅಪ ಕಾರವೆಣಿಸುವವ, ಅಪಕಾರಿ.

ಕೃತಜ್ಞ, ಒಳಿತಿಗೆ ಪ್ರತಿಯಾಗಿ ಒಳಿತನ್ನು ಮಾಡುವವ, ಪ್ರತ್ಯುಪಕಾರಿ.

ಕೃತಧೀ ಶಾಸ್ತ್ರಾಭ್ಯಾಸದಿಂದ ಮನಸ್ಸು ಶುದ್ಧ ವಾದ; ತಿಳಿವಳಿಕೆ ಪಡೆದ.

ಕೃತಮರಿಯ ಕೃತಘ್ನ.

ಕೃತಮುಖ ಚತುರ; ಯಶಸ್ಸಿನ ಬಗೆ ಅರಿ ತವ.

ಕೃತಯುಗ ಸತ್ಯಯುಗ—ಇದರ ಕಾಲ ದೇವಮಾನದ 4000 ವರ್ಷಗಳು.

ಕೃತವರ್ಮ ಹೃದಿಕನೆಂಬ ಯಾದವನ ಮಗ. ಇವನೊಬ್ಬ ಕುರುವಂಶದ ಯೋದ್ಧನು. ಇವನಿಗೆ ಭೋಜನೆಂಬ ಹೆಸರೂ ಇತ್ತು.

ಕೃತವೀರ್ಯ ಮಾಹಿಷ್ಮತಿಯ ದೊರೆ ಕಾರ್ತ ವೀರ್ಯನ ತಂದೆ.

ಕೃತಾರ್ಥ ಧನ್ಯ; ತುಷ್ಟ, ತೃಪ್ತ; ಇಷ್ಟದೊರೆತ.

ಕೃತಾಸ್ತ್ರ ಶಸ್ತ್ರವಿದ್ಯಾ ನಿಪುಣ.

ಕೃತಾಂಜಲಿ ಜೋಡಿಸಿದ ಕೈ.

ಕೃತಾಂತ ಯಮ.

ಕೃತಿ ಮಾಡಿದುದು; ಪುರುಷಪ್ರಯತ್ನ; ಪಂಡಿತ; ಚತುರ; ಕಾವ್ಯ, ಸಂಗೀತ ದಲ್ಲಿನ ಒಂದೊಂದು ರಚನೆ.

—ಪತಿ ಕಾವ್ಯದೊಡೆಯ,ಕವಿ; ನಾಯಕ.

ಕೃತ್ತಿ ಚರ್ಮ; ಭುಜಪತ್ರ.

ಕೃತ್ತಿಕೆ ಅಶ್ವಿನಿಯಿಂದ ಲೆಕ್ಕಮಾಡಲು ಬರುವ 3ನೆಯ ನಕ್ಷತ್ರ.

ಕೃತ್ತಿವಾಸ ಚರ್ಮವೇ ಬಟ್ಟೆಯಾಗಿ ಉಳ್ಳವ, ಶಿವ.

ಕೃತ್ಯ ಕೆಲಸ; ಮಾಟ; ದೇವತೆ.

ಕೃತ್ರಿಮ ಕಪಟ; ಅಸ್ವಾಭಾವಿಕ.

ಕೃತ್ಸ್ನ ಸಂಪೂರ್ಣ, ಎಲ್ಲಾ; ಹೊಟ್ಟೆ; ಸಾರ; ನೀರು.

ಕೃಪ ಶರದ್ವಂತ ಋಷಿಯ ಮಗನು. ಇವ ನನ್ನು ಶಂತನು ದೊರೆ ಬೆಳಸಿಬಂದನು. ಮಹಾಭಾರತದಲ್ಲಿ ಪೆಸರಾದ ಆಚಾರ್ಯ ರಲ್ಲಿ ಈತನು ಒಬ್ಬನು.

ಕೃಪಣ ಸಂಕುಚಿತಬುದ್ಧಿಯುವ; ಜಿಪುಣ(ದ್ಭ), ಲೋಭಿ; ಮೂರ್ಖ; ದೀನ.
ಕೃಪಾ (ಕೃಪೆ) ದಯೆ, ಅನುಗ್ರಹ.
—ಆಕರ ಮಹಾ ದಯಾಳು.
—ಕಟಾಕ್ಷ ದಯೆದೋರುವ ಕಣ್ಣು.
ಕೃಪಾಣ ದಯೆ ಮೀರಬಲ್ಲ ಕತ್ತಿ, ಕಠಾರಿ.
ಕೃಪಾಲು (ಕೃಪಾಳು) ದಯಾವಂತ.
ಕೃಪೀಟ ಕಂಚು; ಹೊಟ್ಟೆ; ಕಟ್ಟಿಗೆ; ನೀರು.
—ಯೋನಿ (ಕೃಪೀಟ=ನೀರು) ನೀರಿನ ಹುಟ್ಟಿಗೆ ಕಾರಣವಾದುದು, ಬೆಂಕಿ.
ಕೃಶ ಅಲ್ಪ; ಕ್ಷೀಣ, ಬಡವಾದ; ಸೂಕ್ಷ್ಮ ವಸ್ತು.
—ಅಂಗ ಬಡವಾದ ಶರೀರವುಳ್ಳವ.
ಕೃಶಾನು ಅಗ್ನಿ, ಬೆಂಕಿ; ಜಡವಾದರೂ ಪ್ರಜ್ವಲಿಸಬಲ್ಲವನು.
—ರೇತ ಅಗ್ನಿರೂಪದ ವೀರ್ಯವುಳ್ಳವ, ಶಿವ.
ಕೃಷಿ ಸಾಗುವಳಿ, ಬೇಸಾಯ.
—ಗಾರ ಬೇಸಾಯಗಾರ, ಸಾಗುವಳಿ ದಾರ, ರೈತ.
ಕೃಷಿಕ ಒಕ್ಕಲಿಗ, ರೈತ, ಬೇಸಾಯಗಾರ.
ಕೃಷ್ಣ ವಸುದೇವನ ಮಗ. ಇವನು ಯಾದವ ವಂಶದವನು. ವಿಷ್ಣುವಿನ ೮ನೆಯ ಅವ ತಾರ; ಈತನು ಪಾಂಡವರಿಗೆ ಬೆಂಬಲ ವಾಗಿ ಕೌರವರಿಗೆ ಇದಿರಾಗಿ ಭಾರತ ಯುದ್ಧವನ್ನು ನಡೆಸಿದನು. ಈತನ ಬಾಲ್ಯದ ವಿಷಯದಲ್ಲಿ ತುಂಬಾ ಕಥೆಗಳು ಹುಟ್ಟಿವೆ. ಕೃಷ್ಣನಿಗೆ ರುಕ್ಮಿಣಿ ಸತ್ಯಭಾಮೆಯರೆಂಬ ಇಬ್ಬರು ಮಡದಿಯರು. ರುಕ್ಮಿಣಿಯ ಮಗ ನೇ ಪ್ರದ್ಯುಮ್ನ. ವೇದವ್ಯಾಸ; ಅರ್ಜುನ; ಕಾಗೆ; ಕೋಗಿಲೆ; ಕಪ್ಪು ಬಣ್ಣದವ.
—ತೆ ಕಪ್ಪುಬಣ್ಣ.
—ವರ್ಣ ಕರಿಯ ಬಣ್ಣ.
ಕೃಷ್ಣದ್ವೈಪಾಯನ ಪರಾಶರ ಋಷಿಯ ಮಗನು; ವ್ಯಾಸ, ವೇದವ್ಯಾಸ.
ಕೃಷ್ಣಪಕ್ಷ ಚಂದ್ರನ ಕಳೆ ಇಳಿಯುವ ಹದಿನೈದು ದಿನಗಳು.
ಕೃಷ್ಣವೇಣಿ ಕಪ್ಪಾದ ಜಡೆಯುಳ್ಳವಳು; ಕೃಷ್ಣಾನದಿ.
ಕೃಷ್ಣಸರ್ಪ ಕಾಳೋರಗ, ಕರಿಯ ಹಾವು; ಕಾಳಿಂಗನ ಹಾವು.
ಕೃಷ್ಣಹೃದಯ ಕಲಂಕಿತ ಹೃದಯ.
ಕೃಷ್ಣಾಗುರು ಕರಿಯ ಅಗಿಲು ಗಂಧ.
ಕೃಷ್ಣಾಜಿನ ಕೃಷ್ಣಮೃಗದ ಚರ್ಮ; ಹರಿಣದ ಚರ್ಮ.
ಕೃಷ್ಣಾಂಕ ಕೃಷ್ಣನ ಹೆಸರು; ಕಪ್ಪು ಗುರುತು.
ಕೃಷ್ಣಾಂಗಿ ಕಪ್ಪಾದವಳು, ಕೃಷ್ಣೆ; ದ್ರೌಪದಿ.
ಕೃಷ್ಣೆ ಕೃಷ್ಣಿ, ದ್ರೌಪದಿ; ದುರ್ಗಿ; ಕಾಳು ಮೆಣಸಿನ ತೆನೆ; ಅಗ್ನಿಯ ಒಂದು ನಾಲಗೆ.
ಕೃಷ್ಯ ಕೃಷಿತ ಭೂಮಿ.
ಕೃಂತನ ಕತ್ತರಿಸುವಿಕೆ,
ಕೆಕ್ಕರ ಕಲ್ಲಂಗಡಿ, ಕರಗುಂಜಿ ಬೀಳಲು; ಕೆಕ್ಕಾರಿಕೆ ಎಂಬ ಹಣ್ಣು.
ಕೆಕ್ಕರಿಸು ಕೆಂಪಾಗು, ಕೆಂಚಾಗು.
ಕೆಕ್ಕಸ ನಿಂದೆ, ನಿಂದೆಯ ನುಡಿ.
ಕೆಕ್ಕಳ ಭಯಂಕರ; ಭಯವಿಕಾರ.
ಕೆಕ್ಕು ದನಗಳನ್ನು ಕೂಗು; ಕೇಕೆ ಹಾಕು, ಕೇಗು
ಕೆಕ್ಕೆ ಕೆನ್ನೆ, ಕಪೋಲ, ಕದಪು.
ಕೆಚ್ಚನೆ ಕೆಂಪಾಗಿರುವ.
ಕೆಚ್ಚಲ್ (ಕೆಚ್ಚಲು) ಹಸುವಿನ ಮೊಲೆ.
ಕೆಚ್ಚು ತರುಸಾರ; ತಿರುಳು; ಬಲ; ಧೈರ್ಯ; ಕೊಬ್ಬು.
—ಎದೆ ಧೈರ್ಯವುಳ್ಳ ಮನಸ್ಸು.
—ಮನ ದೃಢಮನಸ್ಸು.
ಕೆಟ್ಟ ನಾಶವಾದ, ಹಾಳಾದ.

—ತನ ಶೌರ್ಯ, ವೀರ್ಯ; ಹೆಮ್ಮೆ; ಕಿಡುಬುದ್ಧಿ.
ಕೆಡಕಿ ಕೆಟ್ಟ ಕೆಲಸ ಮಾಡುವವ.
ಕೆಡಕು ಕೆಟ್ಟಕೆಲಸ; ಹಾನಿ; ಅಪಾಯ.
ಕೆಡಹು (ಕೆಡಪು); ಬೀಳಿಸು; ಕೆಳಕ್ಕೆ ಹಾಕು.
ಕೆಡು ಹಾಳಾಗು; ನಾಶವಾಗು.
—ನುಡಿ ದೂಷಣೆ, ನಿಂದೆ, ಕೆಟ್ಟಮಾತು.
ಕೆಡೆ ಬೀಳಿಸು; ಉರುಳಿಸು; ಬೀಳು; ಮುಳುಗು.
—ಎಡೆ ಮಲಗಿಕೊಳ್ಳುವ ಸ್ಥಳ.
—ಹೊಯ್ ನೆಲಕ್ಕುರುಳಿಸು.
ಕೆಣಕು ಕೆರಳಿಸು; ರೇಗಿಸು, ಸಿಟ್ಟಗೆಬ್ಬಿಸು.
ಕೆತ್ತು ಆವರಿಸು, ಮುಚ್ಚು; ನಡುಗು; ಬಾಚಿಯಿಂದ ಕಡಿದು ತೆಗೆ.
—ಅನೆ ಕೆತ್ತುವಿಕೆ; ಕತ್ತರಿಸಿ ಮಾಡುವ ಕೆಲಸ; ನಡುಗಾಟ, ಕಂಪನ; ಶಿಲ್ಪ.
ಕೆತ್ತೆ ಕತ್ತರಿಸಿ ತೆಗೆದ ಚೂರು.
ಕೆದಕು ಪರಚು; ಕಾಲಿಂದ ಕೆರೆ.
ಕೆದರ್ (ಕೆದರು) ಕೆದಕು; ಚೆಲ್ಲು; ವಿಸ್ತರಿಸು, ಹರಡು.
—ಇಕೆ ಹರಡಿದ ಸ್ಥಿತಿ.
—ಕಿಡಿ ಹರಡುವ ಕಿಡಿ; ವಿಸ್ತರಿಸುವ ಕಿಚ್ಚು.
ಕೆನೆ ಮನೋಹರ; ಹಾಲನ್ನು ಕಾಸಿದಾಗ ಸಿಗುವ ಮೇಲಿನ ಪರೆಯಂತಹ ಸತ್ವ; ಕುದುರೆಯ ಕೂಗು.
—ಕಟ್ಟು ಹಾಲಿನಲ್ಲಿ ಕೆನೆ ತಲೆದೋರು; ಹೆಪ್ಪುಗೂಡು.
—ಪಾಲ್ ಕೆನೆಯುಳ್ಳ ಹಾಲು.
ಕೆನ್ನ ಅಧಿಕ, ವಿಶೇಷ; ಕೆಂಪಾದ.
ಕೆನ್ನಾಯಿ (ಚೆನ್ನನಾಯಿ) ಕೆಂಪಾದ ಒಂದು ಜಾತಿಯ ಕಾಡುನಾಯಿ, ಸೀಳ್ನಾಯಿ.
ಕೆನ್ನಾಲಿಗೆ ಕೆಂಪು ನಾಲಿಗೆ.
ಕೆನ್ನೀರ್ ಕೆಂಪು ನೀರು; ಓಕಳಿ ನೀರು; ರಕ್ತ.
ಕೆನ್ನೆತ್ತರ್ ರಕ್ತ, ಕೆಂಪಾದ ರಕ್ತ.
ಕೆನ್ನೆಲ ಕೆಂಪಾದ ನೆಲ; ಕೆಮ್ಮಣ್ಣು.
ಕೆಬ್ಬೆ ಕೆಂಪುತನ, ಕೆಂಚು.
ಕೆಬ್ಬಾರೆ ಒಂದು ಜಾತಿಯ ಹದ್ದು.
ಕೆಮ್ (ಕೆನ್), ಕೆಂಪು.
ಕೆಮ್ಮು ಕಾಡುಕುರಿ; ನೆಗಡಿಯಿಂದ ಕಾಕರಿಸುವುದು, ಕೆಮ್ಮಲು.
ಕೆಮ್ಮಗೆ (ಕೆಮ್ಮನೆ) ಸುಮ್ಮನೆ, ಫಲವಿಲ್ಲದೆ.
ಕೆಮ್ಮಣ್ಣು ಕೆಂಪಾದ ಮಣ್ಣು.
ಕೆಮ್ಮನೆ (ನೋಡು: ಕೆಮ್ಮಗೆ).
ಕೆಮ್ಮೀನು ಕೆಂಪು ಮೀನು.
ಕೆಮ್ಮು ಕೆಮ್ಮಲು, ನೆಗಡಿ; ಶೀತದಿಂದ ಬರುವ ಕಾಕರು; ಕೆಮ್ಮಲು ಮಾಡು.
ಕೆಯ್ (ಗೆಯ್), ಮಾಡು, ಸಹಾಯಕವಾಗು; ಹಸ್ತ; ಸುಂಡಿಲು; ಮರದ ಗೆಲ್ಲು; ಕೋಲು; ಕೀಲಿ; ನೆಲ್ಲುಹುಲ್ಲು.
—ಕರಣ ನಿತ್ಯದ ಮದ್ದು, ಎಲ್ಲರಿಗೂ ತಿಳಿದ ಮದ್ದು; ಕೈಮದ್ದು.
—ಕಷ್ಟ ಸ್ವಂತ ಕೃಷಿ, ಶ್ರಮ.
—ಕೆಲಸ ಕೈಯಿಂದಾಗುವ ಕೆಲಸ.
—ಕೊಡು ಸಹಾಯಮಾಡು, ಬೆಂಬಲವಾಗು; ಮೋಸಮಾಡು.
—ಕೊಳು ತೊಡಗು, ಪ್ರಾರಂಭಿಸು.
ಕೆಯ್ಗಳಿ ಹೆಚ್ಚಾಗು; ಮಿತಿಮೀರು.
ಕೆಯ್ಚಳಕ ಕೈಯ ಕೌಶಲ.
ಕೆಯ್ದೆಗೆ ಹಿಂದೆಕ್ಕೆ ತೆಗೆ, ಹಿಂಜರಿ, ಹಿಮ್ಮೆಟ್ಟು.
ಕೆಯ್ದೋರು ಶಕ್ತಿಯನ್ನು ಪ್ರಕಟಿಸು, ಬಲ ತೋರು.
ಕೆಯ್ಮೀರು ಮಿಂಚಿಹೋಗು, ಶಕ್ತಿ ಮೀರು.
ಕೆಯ್ಯಾಡಿಸು ಕೈಯನ್ನು ಚಲಿಸು; ಔದಾರ್ಯ ತೋರು; ಶ್ರಮಿಸು.
ಕೆಯ್ಯಿ (ಕಯ್), ಕೈ; ಹೊಲ; ಸಸಿ.
ಕೆಯ್ಯಿಕ್ಕು ಕೈಹಾಕು.

ಕೆಯ್ಸನ್ನೆ ಕೈಯಿಂದ ಮಾಡುವ ಸಂಕೇತ.
ಕೆಯ್ಸುರಿಗೆ ಚೂರಿ, ಚಾಕು; ಕಠಾರಿ.
ಕೆಯ್ವೊಲ ಗದ್ದೆ; ಕೃಷಿಭೂಮಿ; ತಾನೇ ಉತ್ತು ಸಾಗುಮಾಡುವ ಪುಟ್ಟ ಹೊಲ.
ಕೆರ ಕೆರಹು, ಪಾದುಕೆ, ಕೆರ್ಪು.
—ಹು (ಕೆರ) ಪಾದುಕೆ, ಮೆಟ್ಟು.
ಕೆರಕಲು ಕೆರೆಯುವಿಕೆ; ಹೊತ್ತಿದ ಅನ್ನ.
ಕೆರಕು ಕೆದರು, ಕೆರೆ.
ಕೆರಳ್ (ಕೆರಳು) ಸಿಟ್ಟಾಗು; ಅಡರು; ಅಡರುವಿಕೆ.
—ಚು ಸಿಟ್ಟುಗೊಳ್ಳು.
ಕೆರೆ ಕೊಳ, ಜಲಾಶಯ, ತಟಾಕ; ದನಕರುಗಳ ಹಿಂಡು; ಕ್ಷೌರಮಾಡಿಸು; ಕೆದರು.
ಕೆರ್ಪು ಎಕ್ಕಡ; ಪಾದರಕ್ಷೆ, ಪಾದುಕೆ.
ಕೆಲ (ಕೆಲವು) ಸಮೀಪ, ಪಕ್ಕ.
—ಸಾರು ಓರೆ ಹೋಗು; ಅಡ್ಡ ಹೋಗು; ಆಚೆ ಹೋಗು; ಬಳಿಗೆ ಬರು.
ಕೆಲಂಚು ಸಹಾಯ ಮಾಡು.
ಕೆಲಬಲ ಎಡಬಲ ಭಾಗ; ಸುತ್ತು ಮುತ್ತು.
ಕೆಲವಟ್ಟಲು ಊಟದ ಬಟ್ಟಲಿನ ಸುತ್ತಲಿನ ಬಟ್ಟಲು.
ಕೆಲವು (ಕೆಲ) ಸ್ವಲ್ಪ; ಅಲ್ಪ ಸ್ವಲ್ಪ.
ಕೆಲಸ ಉದ್ಯೋಗ, ಉಜ್ಜುಗ, ಕಾರ್ಯ.
ಕೆಲಸಿ ಕೆಲಸಗಾರ; ಕ್ಷೌರಕ.
ಕೆಲೆ ಉತ್ಸಾಹದಿಂದ ಕೂಗು; ಚೀರಾಡು; ಕೋಳಿಯ ಕೂಗು; ಸಿಟ್ಟಿಂದ ಗದರಿಸು; ಬಯ್ಯು.
ಕೆಲ್ಲಯಿಸು ಸಿಟ್ಟಾಗು, ರೇಗು; ಮಂದವಾಗು; ಸಿಗುರೇಳು; ತೊಂದರೆಪಡು.
ಕೆಲ್ಲೆ ಚಕ್ಕೆ, ಕಿತ್ತುಬಿದ್ದ ಭಾಗ; ಆಯುಧ.
—ಕೆಡೆ ಚೂರುಚೂರಾಗಿ ಬೀಳಿಸು.
ಕೆಸ (ಕೆಸವು) ಮೇಲೋಗರಕ್ಕೆ ಬರುವ ಒಂದು ಬಗೆಯ ಹಸುರೆಲೆ ಗಿಡ.
—ತಿನ್ನು ಕೆಸುವಿನ ಎಲೆ ತುರಿಸಿದಂತೆ ಬಾಯಿತುರಿಕೆ ಮಾತಾಡು.
ಕೆಸರು ಕಲಂಕು, ಜಲಾಶಯದ ಕೆಳಗೆ ಕೂಡುವ ಕೊಳೆ; ರಾಡಿ; ಹೀರುವುದು.
ಕೆಳ (ಕೆಲ) ಮಗ್ಗುಲು, ಪಕ್ಕ; ಅಡಿ.
—ಗು ಕೆಳ; ತಗ್ಗಿನಲ್ಲಿರುವಿಕೆ, ಅಡಿಯಲ್ಲಿರುವಿಕೆ; ಅಡಿ; ಕೆಳಗಡೆ; ಹೀನಸ್ಥಿತಿ.
—ಗೆ ಕೆಳಗಡೆ, ಕೆಳಕ್ಕೆ; ಅಡಿಯಲ್ಲಿ.
ಕೆಳದಿ ಗೆಳತಿ; ನಗರ ಸಂಸ್ಥಾನದ ರಾಜಧಾನಿ.
ಕೆಳಮನೆ ಅಧೋಲೋಕ.
ಕೆಳರ್ ಕೇಳು, ಕೂಗು, ಆರ್ಭಟಿಸು; ಚೀರು; ಹರಡು; ವಿಶಾಲಿಸು; ಅರಳು; ಮೊಳೆಯು; ಹುಟ್ಟು; ವಿಜೃಂಭಿಸು; ಉಬ್ಬು; ಕೋಪಿಸು; ಬಿರಿ.
—ಇಸು ಕೋಪಿಸು; ಉದ್ರೇಕಗೊಳ್ಳು; ಕೂಗಿಕೊಳ್ಳು.
—ದು ಉರವಣಿಸಿ, ವಿಜೃಂಭಿಸಿ; ರೇಗಿ.
ಕೆಳವ ಮುದುಕ, ಹೆಳವ.
ಕೆಳವಾಡಿ ಒಂದು ಬಗೆಯ ಕಬ್ಬು.
ಕೆಳೆ ಸೆಳೆ, ಆಕರ್ಷಿಸು; ಸ್ನೇಹ; ಸ್ನೇಹಿತ.
—ತನ ಸ್ನೇಹ, ಗೆಳೆತನ.
—ಯ (ಗೆಣೆಯ) ಸ್ನೇಹಿತ.
ಕೆಂ ಕಿಸು, ಕೆನ್, ಕೆಂಪು, ಕೆಂಚು.
ಕೆಂಕ ಹೊಂಬಣ್ಣ, ಕೆಂಚು ಬಣ್ಣ.
ಕೆಂಕಣೆ ಕೆಂಚು ಬಣ್ಣದ ಕೊಕ್ಕರೆ.
ಕೆಂಕಲು ಕೆಂಗಲು, ಕೆಂಚು ಬಣ್ಣ; ಹೊಂಬಣ್ಣ.
ಕೆಂಗಣ್ಣು ಕೆಂಪು ಬಣ್ಣದ ಕಣ್ಣುಳ್ಳುದು; ಕೋಗಿಲೆ.
ಕೆಂಚ ಕೆಂದ, ಕೆಂಪು ಕೂದಲುಳ್ಳ.
ಕೆಂಚಳಿಲು (ಕೆಂಜಳಿಲು) ಕೆಂಪು ಅಳಿಲು.
ಕೆಂಚು ಕೆಂಪು, ಕೆಂದು.
ಕೆಂಜಿಗ (ಕೆಂಜುಗ) ಕೆಂಪು ಬಣ್ಣದ ದೊಡ್ಡ ಇರುವೆ; ಕೇಸಿರುವೆ; ಚೌಳಿ.

ಕೆಂಜೋಳ ಕೆಂಪು ಜೋಳ.
ಕೆಂಡ ಬೆಂಕಿಯ ಕೆಂಡ; ಇಂಗಳ.
ಕೆಂಡಲಿಸು ಸೀಳು.
ಕೆಂದಳಿರು ಕೆಂಪು ತಳಿರು; ಕೆಂಪಾದ ಚಿಗುರು.
ಕೆಂದಾವರೆ ಕೆಂಪು ತಾವರೆ.
ಕೆಂದಾಳಿ (ಚೆಂದಾಳಿ) ಕೆಂಪು ತೆಂಗು.
ಕೆಂದು ಕೆಂಪು, ಕೆಂಚು.
ಕೆಂದುಟಿ ಕೆಂಪಾದ ತುಟಿ.
ಕೆಂದೂಳು ಕೆಂಪಾದ ದೂಳು.
ಕೆಂಪು ಕೆಂಪು ಬಣ್ಣ, ರಕ್ತವರ್ಣ.
ಕೆಂಬಾರೆ ಸಂಜೆಯ ಹೊಂಬಣ್ಣ ಕೆಂಬಣ್ಣ.
ಕೆಂಬೆರಲ್ ಕೆಂಪು ಮಾಡಿಕೊಂಡ ಬೆರಲು.
ಕೆಂಬೊಗರ್ ಕೆಂಪು ಕಾಂತಿ.
ಕೆಂಬೊನಲ್ ಕೆಂಪಾದ ಪ್ರಕಾಶ.
ಕೆಂಬೋತ ಕೋಗಿಲೆ.
ಕೇ ಮಲಗುವದು, ನಿಧುವನ, ಸುರತ.
ಕೇಕಟ ಬಂಜೆ; ಒರಟು.
ಕೇಕಯ ಒಂದು ಬಗೆಯ ತೋಟ; ದೇಶ ಭೇದ; ಕೀಚಕನ ತಂದೆ; ಸೂರ್ಯ ವಂಶದ ಅರಸನೊಬ್ಬ.
ಕೇಕರ ಕುಡಿನೋಟ; ಓರೆನೋಟ; ಕೋಸು ಗಣ್ಣವ.
ಕೇಕರಿಸು ನವಿಲು ಕೂಗುವುದು; ತಿರಸ್ಕಾರ ದಿಂದ ಮುಖ ಹಿಂದೆಗೆ; ಉಗುಳು.
ಕೇಕಾರವ ನವಿಲಿನ ಕೇಕೇ ಧ್ವನಿ.
ಕೇಕೇ ಕೇಕೇ ಎಂಬ ಕೂಗಾಟ; ಅಬ್ಬರದ ಕೂಗು.
ಕೇಗು (ದ್ಭ) ಕೇಕಾ (ಸಂ), ನವಿಲಿನ 'ಕೇಕೇ' ಕೂಗು; ಕೇಕೆಹಾಕು.
ಕೇಗಿ ನವಿಲು.
ಕೇಡಾಳಿ ಕೇಡುಮಾಡುವವ, ಕೇಡಿಗ.
ಕೇಡು ಬಾಧೆ; ನಾಶ, ಹಾನಿ; ಕೆಡುವ ಭಾವ.
—ಇಗ (ಕೇಡುಗ) ಹಾನಿಕಾರ, ಉಪ ದ್ರವಿ; ಕೇಡಾಳಿ.
—ಇಗತನ ಕೇಡುಮಾಡುವ ಬುದ್ಧಿ.
ಕೇಣ ಮತ್ಸರ, ಅಸೂಯೆ; ಯೋಜನೆ; ದುರಾಸೆ; ದೀರ್ಘವಿಚಾರ.
—ಕೊಳ್ ಮತ್ಸರಿಸು, ಅಸೂಯೆಪಡು.
ಕೇಣಿ (ದ್ಭ) ಶ್ರೇಣಿ (ಸಂ), ತಾತ್ಕಾಲಿಕವಾಗಿ ಅಗೆದ ಬಾವಿ; ಕೋಳಿ; ಆಟ; ಉದ್ಯೋಗ.
—ಗ ಉದ್ಯೋಗಿ, ವೃತ್ತಿಯವ.
—ಕಾರ ಚತುರ, ಬುದ್ಧಿವಂತ; ಮನೆ ಯಿಂದ ಮನೆಗೆ ಹೋಗುವ ವ್ಯಾಪಾರಿ.
—ಕೊಳು ಸ್ವೀಕರಿಸು; ಒಟ್ಟಾಗು.
ಕೇತ ಓತಿಕ್ಯಾತ, ಅರಣೆ.
ಕೇತಕಿ ಕೇದಗೆ (ದ್ಭ), ತಾಳೆ ಹೂ.
ಕೇತನ ಧ್ವಜ, ಬಾವುಟ; ಗುರುತು; ಮನೆ; ಉಪನಿಮಂತ್ರಣ.
ಕೇತು ಕಾಂತಿ; ಪ್ರಕಾಶ; ಉತ್ಪಾತ; ಶತ್ರು; ಗುರುತು; ಗ್ರಹಗಳು ಸಂಧಿಸುವ ಸ್ಥಳ; ಕಾಲ್ಪನಿಕ ರಾಕ್ಷಸನೊಬ್ಬ.
ಕೇತುಮಾಲ ಪುರಾಣದಲ್ಲಿ ಹೇಳಿದ ಒಂಭತ್ತು ಭೂಖಂಡಗಳಲ್ಲಿ ಒಂದು.
ಕೇದಗೆ ಕೇತಕಿ (ಸಂ), ತಾಳೆ ಹೂ.
ಕೇದಾರ ಪರ್ವತಭೇದ; ಕೇದಾರನಾಥವೆಂಬ ಯಾತ್ರಾಸ್ಥಳ; ಅಲ್ಲಿನ ಮಹಾದೇವ; ಗದ್ದೆ; ಪಾತಿ.
ಕೇನಾರ ಕಪೋಲದ ಮೇಲುಗಡೆ; ಕೆನ್ನೆ.
ಕೇನಿಪಾತ ಗುದ್ದಲಿ.
ಕೇಪಲ ಕಿಸ್ಗಾರ; ಕೆಂಪು ಹೂ.
ಕೇಪು ತುಬಾಕಿಗೆ ಉಪಯೋಗಿಸುವ 'ಕ್ಯಾಪ್'
ಕೇಯೂರ ತೋಳಿನ ಬುಡದಲ್ಲಿ ಧರಿಸುವ ಒಂದು ಆಭರಣ; ತೋಳುಬಂದಿ, ವಂಕಿ.
ಕೇರ್ (ಕೇರು).
ಕೇರ ಕಸ, ಚೇರ.

ಕೇರಲ(ಕೇರಳ) ಮಳಯಾಳ ದೇಶ; ಕ್ಷತ್ರಿಯ ಭೇದ.

ಕೇರಿ ಬೀದಿ; ಅಂಗಡಿ ಬೀದಿ.

— ಕೊಳು ಒಂದು ಹಾದಿ ಹಿಡಿಯುವುದು.

ಕೇರು (ಗೇರು) ಕಾಳುಕಡಿಗಳನ್ನು ಮೊರದಲ್ಲಿ ಹಾರಿಸಿ ಚೊಕ್ಕಮಾಡು; ಗೋಡೆ.

ಕೇರೆ ಒಂದು ಜಾತಿಯ ಹಾವು; ಹೆಗ್ಗಣ ತಿಂದು ಜೀವಿಸುವ ವಿಷವಿಲ್ಲದ ಹಾವು.

ಕೇಲನ ಕೇಳಿ, ಆಟ, ವಿನೋದ.

ಕೇಲಿ (ಕೇಳಿ) ವಿನೋದ.

ಕೇಲೀವನ ಆಟದಬಯಲು, ವಿಹಾರೋದ್ಯಾನ

ಕೇಲು ಹೂಜಿ, ರಂಜಣಿಗೆ.

ಕೇವ ಹೆಮ್ಮೆ, ಉದ್ಧಟತನ.

ಕೇವಣ (ದ್ಭ) ಕ್ಷೇಪಣ (ಸಂ), ನೂಕುವುದು; ಸಂಬಂಧಿಸುವುದು; ಕುಂದಣದ ಕೆಲಸ; ಸಾಲಾಗಿ ಪೋಣಿಸುವುದು.

— ಇಸು ಪೋಣಿಸು.

ಕೇವಲ ಪೂರ್ಣ; ನಿಶ್ಚಯ; ಶುದ್ಧ; ಒಂದು.

— ಜ್ಞಾನ ದೇವರ ವಿಷಯವಾದ ಖಚಿತ ಜ್ಞಾನ.

ಕೇವಲಿ ಕೇವಲ ಜ್ಞಾನ ಪಡೆದವರು; ಜೈನ ಸಿದ್ಧರು.

ಕೇಶ ತಲೆಕೂದಲು, ಕೂದಲು.

— ಪಾಶ ಜುಟ್ಟು, ಜಡೆ, ವೇಣಿ.

— ಮಾರ್ಜಕ ತಲೆ ಬಾಚುವ ಸಾಮಗ್ರಿ, ಹಣಿಗೆ.

— ಮಾರ್ಜನ ಬಾಚಣಿಗೆ, ಹಣಿಗೆ.

ಕೇಶರ (ಕೇಸರ) ಸಿಂಹದ ಕತ್ತಿನ ಸುತ್ತಲಿರುವ ಕೂದಲು; ಕುದುರೆಯ ಕತ್ತಿನ ಮೇಲಿನ ಜೂಲುಗೂದಲು; ನಾಗಕೇಸರದ ಮರ; ಅಡಕೆ ಹೋಳು; ಕುಂಕುಮ ಕೇಸರ.

ಕೇಶವ ವಿಷ್ಣು; ಕೇಶಿ ಎಂಬ ರಾಕ್ಷಸನನ್ನು ಕೊಂದವ, ಕೃಷ್ಣ.

ಕೇಶಹಸ್ತ ಕೂದಲ ಜಡೆ, ಕೂದಲಿನ ಸಮೂಹ.

ಕೇಶಾಕೇಶಿ ಜುಟ್ಟು ಜುಟ್ಟು ಹಿಡಿದು ಕಾದುವ ಕಾಳಗ; ಕಟ್ಟಾದ ಜಗಳ.

ಕೇಶಿ ಕೂದಲುಳ್ಳವ; ಕೇಶಿ ಎಂಬ ಒಬ್ಬ ರಾಕ್ಷಸ.

ಕೇಸ (ದ್ಭ) ಕೇಶ (ಸಂ), ತಲೆಗೂದಲು.

ಕೇಸಕ್ಕಿ ಕೆಂಪು ಅಕ್ಕಿ.

ಕೇಸಡಿ ಕೆಂಪಾದ ಅಡಿ; ಕೆಂಗಾಲು.

ಕೇಸರ (ಕೇಶರ) ಹೂವಿನೊಳಗಿನ ಕುಸುಮ; ಕೇಶರ; ಸಿಂಹ ಕುದುರೆಗಳ ಕತ್ತಿನ ಮೇಲಿನ ಜೂಲುಗೂದಲು.

ಕೇಸರಿ ಕೇಸರ ಉಳ್ಳದು; ಸಿಂಹ.

ಕೇಸವೆ ಕೆಸವು, ಕೆಸ.

ಕೇಸುರಿ ಕೆಂಪಾದ ಉರಿ, ಜ್ವಾಲೆ; ಕೆಂಪು ಇರುವೆ.

ಕೇಳ್ (ಕೇಳು) ಕಿವಿಗೊಡು, ಆಲಿಸು, ಲಾಲಿಸು; ಪ್ರಶ್ನೆ ಹಾಕು.

— ಇಕೆ ಕೇಳೋಣ; ಲಾಲಿಸುವಿಕೆ.

ಕೇಳ ಕೀಳು.

ಕೇಳಿ (ಕೇಲಿ) ಕ್ರೀಡೆ, ಆಟ, ವಿನೋದ; ಪಾಳಿ; ಪಂಕ್ತಿ, ಸಾಲು.

ಕೇಳಿಕಾಗೃಹ ಆಟದ ಮನೆ, ವಿನೋದ ಗೃಹ.

ಕೇಂದ್ರ ನಡುವಣ, ಮಧ್ಯ.

— ಇಸು ಒಂದು ಕಡೆ ಸೇರು; ಬೆಳಕಿನ ಕಿರಣಗಳ ಕೂಡುವಿಕೆ; ಮಧ್ಯಪ್ರದೇಶದಲ್ಲಿ ಸೇರು.

— ಗಾಮಿ ಮಧ್ಯಭಾಗಕ್ಕೆ ಸೆಳೆಯಲ್ಪಡುವ, ಒತ್ತಟ್ಟು ಕೂಡುವ.

— ತ್ಯಾಗಿ ನಡುವಿಂದ ಹೊರಕ್ಕೆ ಸಿಡಿಯುವ.

ಕೈ (ಕಯ್) ಹಸ್ತ; ಕೋಲು; ಸೊಂಡಿಲು; ಶಬ್ದಾಲಂಕಾರ; ಗದ್ದೆ; ಕಹಿ.

ಕೈಕಯಿ (ಕೈಕಯಾ) ದಶರಥನ ಎರಡನೆ ಹೆಂಡತಿ, ಭರತನ ತಾಯಿ.

ಕೈಕಸೆ ರಾವಣ ಕುಂಭಕರ್ಣರ ತಾಯಿ.

ಕೈಕೆ (ಕೈಕಯಿ).

ಕೈಕೇಯ ಕೇಕಯದ ರಾಜಕುಮಾರ; ಕೇಕಯ ದೇಶದ.

ಕೈಕೊಳು ಕೈಕೊಳ್ಳು; ಸ್ವೀಕರಿಸು, ಅಂಗೀಕರಿಸು; ತೊಡಗು.

ಕೈಗಟ್ಟಿ ಗಂಧ.

ಕೈಗಂಬ ಹಾದಿ ತೋರಿಸುವ ಬರಹವುಳ್ಳ ನಿಲುಗಂಬ.

ಕೈಗಂಬಿ ಕೈಯ ಕೋಲು, ಕೈಯ ಬೆತ್ತ.

ಕೈಗಾಣಿಕೆ ಕೈಯಲ್ಲಿರಿಸುವ ಕಾಣಿಕೆ, ನಜರು.

ಕೈಗುದಿಕೆ ದೊಣ್ಣೆ, ಟೊಣಪೆ.

ಕೈಗುದುರೆ ಸಹಾಯಕವಾದ ಕುದುರೆ; ಚದುರಂಗದ ಆಟಕದ ಕುದುರೆ; ಕೈಗೆ ಬೀಳಲು.

ಕೈಗುಂದು ಕೈಸೋಲು, ಹಿಂದಾಗು.

ಕೈಗೆಯ್ (ಕೈಗೈ) ಕಾರಣವಾಗು; ಸಿದ್ಧವಾಗು, ಅಲಂಕರಿಸು.

ಕೈಗೊಪ್ಪೆ ಕೈಯಿಂದ ಎದೆಯನ್ನು ಅಪ್ಪಿ ಹಿಡಿ; ಚಳಿಯಿಂದ ಅಪ್ಪು ಕೈ ಹಾಕುವುದು.

ಕೈಗೊರೆ ಸಮಾನ.

ಕೈಗೊಲೆ ಕೈಯಿಂದ ಕೊಲ್ಲುವುದು.

ಕೈಚಪ್ಪಾಳೆ ಕೈತಟ್ಟುವಿಕೆ, ಕರತಾಡನ.

ಕೈಚಳಕ ಹಸ್ತಲಾಘವ, ಹಸ್ತವೇಗ.

ಕೈಟಭ ಮಧು ಎಂಬ ರಕ್ಕಸನ ತಮ್ಮ. ಇವನು ವಿಷ್ಣುವಿಂದ ಹತನಾದನು.

ಕೈತ ಮಾಡಿದ.

ಕೈತವ ಕಪಟ, ಮೋಸ, ವಂಚನೆ; ಜೂಜು.

ಕೈತವಕ ಕೈಯ ವೇಗ; ಕೈಚಳಕ; ಆತುರ.

ಕೈದಾರಕ ಹೊಲಗದ್ದೆಗಳ ಸಮೂಹ.

ಕೈದಿ ಸೆರೆಯಾಳು; ಹಿಡಿಯಲ್ಪಟ್ಟವನು; ಬಂದಿ.

ಕೈದು (ಕೆಯ್ದು) ಯುದ್ಧ, ಕಾಳಗ; ಸೆರೆ. —ಕಾರ ಯೋದ್ಧ, ವೀರ, ಭಟ.

ಕೈದುಡುಕು (ಕೈತುಡುಕು) ತೊಡಗು, ಪ್ರಾರಂಭಿಸು; ಜಗಳ; ನಿರೋಧ; ಹಗೆತನ.

ಕೈದೆಗೆ ಕೈಯನ್ನು ಹಿಂದಕ್ಕೆ ಎಳೆ; ಮರಳು; ಸಹಾಯವನ್ನು ಹಿಂದೆಗೆ; ಹಿಮ್ಮೆಟ್ಟು.

ಕೈದೊಳಸು ಜಗಳದ ಸಮಾಚಾರ.

ಕೈದೋರಿಕೆ ಪರಾಕ್ರಮ ಪ್ರದರ್ಶನ.

ಕೈನೀರು ಮದುವೆ ಕಾಲದಲ್ಲಿ ಕೈಮೇಲೆ ಎರೆಯುವ ನೀರು; ಧಾರೆ.

ಕೈನೆ ದಾಸಿ, ಪರಿಚಾರಿಕೆ.

ಕೈನೆಗಹು ಕೈಯೆತ್ತು.

ಕೈಪರೆ ಕೈ ತಾಳ.

ಕೈಪಾವುಡ ಕೈವಸ್ತ್ರ, ಅಂಗವಸ್ತ್ರ, ರುಮಾಲು.

ಕೈಪಿಡಿ ಕೈಹಿಡಿ; ಕೈಯಲ್ಲಿ ಹಿಡಿಯುವಷ್ಟು ಚಿಕ್ಕ ಸಾಧನ; ಚಿಕ್ಕ ಪುಸ್ತಕ; ಕೈಗನ್ನಡಿ; ಪುಟ್ಟ ಸಾಮುಗ್ರಿ.

ಕೈಪೆ ಕಹಿ.

ಕೈಪೊಡೆ ಕೈಹೊಡೆ; ಬಾಣದ ಹಿಂಭಾಗ; ಕೈಗೆ ತೂಗಿಸುವ ತೊಗಲ ಚೀಲ.

ಕೈಫಿಯತ್ತು (ಕೈಫಿಯತ್ತು) ಫಿರ್ಯಾದಿ, ದೂರು, ಮನವಿ.

ಕೈಮರೆ ವಿಸ್ಮಯಪಡು; ಆಶ್ಚರ್ಯಪಡು; ಆಲಸ್ಯಪಡು; ಅಜಾಗರೂಕನಾಗಿರು.

ಕೈಮುಸುಕ ಕೈಯ ಕೊಳೆ; ಮೆಲ್ಲಗೆ ಕೊಲ್ಲುವ ಒಂದು ಜಾತಿಯ ವಿಷ.

ಕೈಮಾಟ ಮೋಸ, ವಂಚನೆ; ಸಂಜ್ಞೆ, ಸನ್ನೆ; ಹಾವ.

ಕೈಮಾಡು ಕಾದಾಟ ತೊಡಗು; ಯುದ ಮಾಡು.

ಕೈಮಿಗು ಕೈಮೀರು; ಅಧಿಕವಾಗು; ಮಿಂಚಿ ಹೋಗು.

ಕೈಮೊಗ ಹಸ್ತ, ಅಂಗೈ; ಕೈ ಮತ್ತು ಮುಖ.

ಕೈಮುಗಿ ವಂದಿಸು; ನಮಸ್ಕರಿಸು, ಶರಣು ಹೋಗು; ಕೈಜೋಡಿಸಿ ವಂದಿಸು.
ಕೈಮೆ (ಕೆಯ್ಮೆ) ಕೈ ಚಮತ್ಕಾರ.
ಕೈಯಾರೆ ತನ್ನ ಕೈಯಿಂದಲೇ; ಕೈತುಂಬ.
ಕೈಯಾಳು ಬಳಿಯ ಸೇವಕ.
ಕೈಯಿಕ್ಕು ಕೈಹಾಕು, ತೊಡಕಿಸು.
ಕೈಯೆಡೆ (ಕೈಯ್ಯೆಡೆ) ದಕ್ಷಿಣಾ ವಸ್ತು.
ಕೈಯೊಳಗೆ ಅಧೀನದಲ್ಲಿ.
ಕೈರವ (ಕೇರವ=ಹಂಸ) ಹಂಸಕ್ಕೆ ಪ್ರಿಯವಾದುದು; ಬಿಳಿ ನೈದಿಲೆ, ಕೋಳೆ.
ಕೈರವಿ ಹಂಸಕ್ಕೆ ಪ್ರಿಯವಾದುದು; ಚಂದ್ರ ಪ್ರಕಾಶ.
ಕೈರಾಟಣ ನೂಲುವ ಪುಟ್ಟ ರಾಟೆ.
ಕೈಲಾಸ ಸ್ಫಟಿಕ; ಶುಭ್ರವಾದ ಹಿಮಾಲಯದ ಒಂದು ಬೆಟ್ಟ; ಶಿವನ ನೆಲೆ; ಕುಬೇರನ ನೆಲೆ.
— ಪತಿ ಶಿವ.
ಕೈವರ್ತ ಕೈಸೇರು; ಕೈಗೆ ಬಾ; ನೀರಲ್ಲಿ ವ್ಯವಹರಿಸುವವ; ಮೀನುಗಾರ, ಬೆಸ್ತ, ಅಂಬಿಗ.
— ಇಸು ಒಪ್ಪಿಸು.
ಕೈವಲ್ಯ ಮೋಕ್ಷ, ಮುಕ್ತಿ.
ಕೈವಂದ ಕೈಗೆ ಬಂದ; ಪ್ರಾಪ್ತವಾದ; ಹಣ್ಣಾದ.
ಕೈವಾರ ಹೊಗಳಿಕೆ, ಪ್ರಶಂಸೆ.
ಕೈವೀಸು ಕಾಳಗ ತೊಡಗಲಿ ಎಂದು ಸಂಕೇತಮಾಡು; ಕೈ ಬೀಸು.
ಕೈವೆರಳು ಕೈಯ ಬೆರಳುಗಳು, ಕೈಯ ಬೆಟ್ಟು.
ಕೈವೊಡೆ (ಕೈಪೊಡೆ) ಬಾಣದ ಪುಂಖ.
ಕೈವೊಲ (ಕೆಯ್ವೊಲ) ಪುಟ್ಟ ಹೊಲ, ಗದ್ದೆ.
ಕೈಶಿಕಿ ಶೃಂಗಾರಕ್ಕೆ ತಕ್ಕ ಶೈಲಿ.
ಕೈಸಾರ್ (ಕೆಯ್ಸಾರ್) ದೊರಕು.
ಕೈಸೊಡರು ಕೈದೀಪ, ಹಿಡಿದು ಆಲೆಯಬಹುದಾದ ದೀವಿಗೆ; ತಿರುಗಾಟಕ್ಕೆ ಅನುಕೂಲವಾದ ದೀಪ.
ಕೈಹೊಡೆ ಬಿಲ್ಲುಗಾರರು ಕೈಗೆ ತೊಡಕಿಸಿಕೊಳ್ಳುವ ಚರ್ಮ.
ಕೈಂಕರ್ಯ ಕಿಂಕರತನ, ಸೇವೆ; ಆಳ್ತನ; ಉಪಚಾರ.
ಕೊ ಇಕೋ, ಇಲ್ಲಿದೆ ತೆಗೆದುಕೋ ಎಂಬ ಸೂಚನೆ, ತೋರಿಸುವ ರೀತಿ.
ಕೊಕ್ಕರಿಸು ಬೆದರಿಸು; ಉಪದ್ರವ ಮಾಡು; ಬಾಗು; ಮುದುರು; ಹಿಂಜರಿ; ಪ್ರತಿಭಟಿಸು; ಕಣ್ಣನ್ನು ಮುಚ್ಚಿಸು; ನಿಂದಿಸು.
ಕೊಕ್ಕರೆ ಬೆಳ್ಳಕ್ಕಿ; ಕತ್ತು ನೀಳವಾಗಿರುವ ಬಕ ಜಾತಿಯ ಹಕ್ಕಿ.
ಕೊಕ್ಕಿ ಕುಟುಕಿ; ಮೊಂಡಾದ ಕೊಂಬೆ.
ಕೊಕ್ಕು ಪಕ್ಷಿಗಳ ಚೂಚು; ಕುಟುಕು.
ಕೊಕ್ಕೆ ಕುಣಿಕೆ; ಬಾಗಿರುವ ಒಂದು ಸಾಧನ, ಗಾಳ; ಕೊಂಡಿ; ಅಡಚಣೆ.
ಕೊಗ್ಗ (ಕೊಂಗ) ವಕ್ರತೆ; ಕರ್ಕಶ ಧ್ವನಿಯುಳ್ಳವ.
ಕೊಗ್ಗು (ಕೊಗ್ಗಿ) ಕಿವಿಯ ಕೊಳೆ ತೆಗೆಯುವ ಒಂದು ಸಾಧನ.
ಕೊಚ್ಚಿ ಕತ್ತರಿಸಿ; ಹೊಗಳಿ; ಒಂದು ದೇಶ.
— ಕೆ ಹೊಗಳಿಕೆ; ತುಂಡರಿಸುವಿಕೆ.
ಕೊಚ್ಚು ಕತ್ತರಿಸು; ಆಯುಧದಿಂದ ನುಚ್ಚುನೂರಾಗಿ ತುಂಡರಿಸು; ಆತ್ಮಸ್ತುತಿ ಮಾಡಿಕೊಳ್ಳು; ಹೆಮ್ಮೆದೋರು; ಹರಟು; ಕುಲುಕು; ಪಡಿ ಅಕ್ಕಿ.
ಕೊಚ್ಚೆ ಕೆಸರು, ರಾಡಿ.
ಕೊಜೆ ಆನೆಮಣ್ಣು, ಜೇಡಿಮಣ್ಣು.
ಕೊಜ್ಜೆ ಖೋಜಾ; ಶಿಖಂಡಿ, ನಪುಂಸಕ.
ಕೊಟಡಿ (ಕೊಠಡಿ) ಕೋಣೆ, ಕಣಜ.
ಕೊಟಾರ (ಕೊಠಾರ) ಧಾನ್ಯ ತುಂಬಿಸಿಡುವ ಕೋಣೆ, ಉಗ್ರಾಣ.
ಕೊಟ್ಟೆ ಕೊಟ್ಟಗೆ, ಗುಡಿಸಿಲು; ದನ ಕಟ್ಟುವ ಮನೆ.

—ಗಾರ ಕೋಟಿಗಾರ, ಕೋಷ್ಠಾಗಾರ (ಸಂ), ಉಗ್ರಾಣ.
ಕೊಟ್ಟಿಗೆ (ನೋಡು: ಕೊಟ್ಟಗೆ)
ಕೊಟ್ಟಿಜ ಪೊಗದಿ, ಕಪ್ಪ.
ಕೊಟ್ಟಿಣ ಕುಟ್ಟಮಾಡಿದ ಅಕ್ಕಿ.
—ಗಿತ್ತಿ ಬತ್ತಕುಟ್ಟಿ ಅಕ್ಕಿಮಾಡುವವಳು.
ಕೊಟ್ಟಿಸ ಸುಟ್ಟ ಮಾಂಸ; ಸುಡುಬಾಡು.
ಕೊಟ್ಟಾರಿ ಉಗ್ರಾಣದವ; ಕಣಜದ ಯಜಮಾನ.
ಕೊಟ್ಟೆ ಒರಟ ಇಲ್ಲವೆ ಕೀಳು ಮನುಷ್ಯ; ಕಿರೀಟ; ಕುಡಿ; ಕೊಪ್ಪು.
ಕೊಟ್ಟಿಗ ಕೊಟ್ಟುಗ; ಕೀಚುಬಾಲ; ಸೀಳು ಬಾಲದ ಒಂದು ಹಕ್ಕಿ.
ಕೊಟ್ಟಿಗೆ ದನ ಕಟ್ಟುವ ಮನೆ; ಪುಟ್ಟ ಗುಡಿಸಿಲು.
ಕೊಟ್ಟು ಮೊನೆ; ಜುಟ್ಟು; ಕೊಪ್ಪು.
ಕೊಟ್ಟೆ ಗೊರಟು; ಮಾವು ಮೊದಲಾದ ಹಣ್ಣಿನ ಗಟ್ಟಿ ಬೀಜ; ಎಲೆಗಳ ಗೂಡು; ಕೊಂಕು.
ಕೊಡ (ದ್ಭ) ಕುಟ (ಸಂ), ನೀರು ತುಂಬುವ ಪಾತ್ರೆ.
ಕೊಡಕು ಕೊಂಕು.
ಕೊಡಕೆ (ಕೊಡಂಕೆ) ಕೊಡಿಗೆ, ಕಿವಿಯ ಆಭರಣವೊಂದು; ಕಿವಿಗೊಡುವಿಕೆ; ಕಿವಿ.
ಕೊಡಗ ಕೊಡಗಿನ ನಿವಾಸಿ, ಕೊಡವ.
ಕೊಡಗು ಕೊಡಗು ದೇಶ; ಕೊಡವ; ಕುಡನಾಡು.
ಕೊಡಚಿ ಒಂದು ಬಗೆಯ ಮುಳ್ಳು ಗಿಡ.
ಕೊಡಚು ಕಿವಿಯ ಕೊಳೆ ತೆಗೆ; ಪಾತ್ರೆ ತಿಕ್ಕು.
ಕೊಡತ ಶೀತ; ಜಾಡಿಸುವಿಕೆ; ಹಾಸುಗೋಲು.
ಕೊಡತಿ ಬಡಿಯುವ ಮರದ ಸಾಧನ; ಬಡತ್ತಿಗೆ; ಕೊಡತಿಗೆ; ಸುತ್ತಿ; ಒಂದು ಮೀನು.
ಕೊಡಪು (ಕೊಡಹು); ಕಳಚು; ಸಿಡಿಸು, ಉದುರಿಸು.
ಕೊಡಮೆ ಕೂಳೆ, ಮೀನು ಹಿಡಿವ ಬುಟ್ಟಿ.
ಕೊಡಲಿ (ದ್ಭ) ಕುಠಾರ (ಸಂ), ಮರಕಡಿಯುವ ಸಾಧನ, ಪರಶು.
—ರಾಮ ಪರಶುರಾಮ, ಜಮದಗ್ನಿಯ ಮಗ.
ಕೊಡವ ಕೊಡಗು ದೇಶದ ನಿವಾಸಿ.
ಕೊಡವಣಿಗ ಕೊಡದಲ್ಲಿ ಹುಟ್ಟಿದವ, ಕುಂಭೋದ್ಭವ, ಅಗಸ್ತ್ಯ; ದ್ರೋಣ.
ಕೊಡವು ಕೊಡಗು ದೇಶ; ಕೊಡವರ ಭಾಷೆ.
ಕೊಡಸಿಗೆ (ದ್ಭ) ಕುಟಜಕ (ಸಂ), ಒಂದು ಜಾತಿಯ ಮರ.
ಕೊಡಿ ಕುಡಿ; ಚಿಗುರು; ಅಂತ್ಯ; ಭಾದ್ರಪದ ಮಾಸ; ದಾರ್ಢ್ಯ.
ಕೊಡು ಈ; ಪರವಶಮಾಡು; ದಾನಮಾಡು.
—ಇಕೆ ಕೊಡುವ ಕೆಲಸ, ದಾನ.
—ಗೆ ಕೊಡುವಳಿ.
—ಹ ಕೊಡುವಿಕೆ, ದಾನ.
ಕೊಡುಗೂಸು (ಕೊಡಗೂಸು) ಮದುವೆ ಮಾಡಿಕೊಡಲಿರುವ ಕನ್ಯೆ.
ಕೊಡೆ ಸತ್ತಿಗೆ, ಮಳೆಗೆ ಹಿಡಿಯುವ ಸಾಧನ, ಹಾಲು ಕೆಡುವ ಒಂದು ಬಗೆ.
—ತ (ಕೊಡೆ) ಹಾಲು ಕಡಿಕಡಿ ಆಗುವುದು
ಕೊಣ (ಕೊಳ) ನೀರಿನ ಹೊಂಡ.
ಕೊಣಕು ಹಾರು, ನೆಗೆ, ಲಂಘಿಸು, ಜಿಗಿ; ದಿಂಕಿಡು.
ಕೊಣಗು (ಕೊಳಗು) ಗೊರಸು, ಖುರ.
ಕೊಣತ (ನೋಡು: ಕುಣಿತ) ಕೊಂತ, ಮುದ್ಗರ.
ಕೊಣಬಿಗೆ ಮರದ ಮರಿಗೆ.
ಕೊಣಸು ಕಡಸು; ಎಳೆಯ ಕರು; ಜಿಂಕೆಯ ಮರಿ; ಕೊಂತ.

ಕೊತ್ತಣಿ ಸಮೂಹ, ಗುಂಪು.
ಕೊತ್ತಳ ಕೋಟೆ ಗೋಡೆಯ ಮೇಲಿನ ಬುರುಜು; ಸೈನಿಕರು ನಿಂತು ಕಾದುವ ಏರಿನ ಅಟ್ಟಳೆ.
ಕೊತ್ತಳಿ (ಕೊತ್ತರಿ) ಕಾಗೆಯ ಗುಂಪು.
ಕೊತ್ತಂಬರಿ ಒಂದು ಬಗೆಯ ಮಸಾಲೆ ಕಾಳು, ಅದರ ಗಿಡ.
ಕೊತ್ತಿ ಕುತ್ತಿ, ಮೊನೆಯಿಂದ ಚುಚ್ಚಿ, ಕೊಚ್ಚಿ; ಹೆಣ್ಣು ಇಲ್ಲವೆ ಗಂಡು ಬೆಕ್ಕು.
ಕೊತ್ತು ಚುಚ್ಚು, ಇರಿ, ತಿವಿ; ಕೊಚ್ಚು; ಕತ್ತರಿಸು.
ಕೊದಲು (ತೊದಲು) ತೊದಲುನುಡಿ; ಅಸ್ಪಷ್ಟವಾಗಿ ಮಾತಾಡು.
ಕೊದ್ಲು ಕುದಿಯುವಿಕೆ; ಸೋಂಕಿನ ಕುದಿ.
ಕೊನಬು ದಟ್ಟ, ಒತ್ತೊತ್ತು.
ಕೊನರ್ (ಕೊನರು) ಕುಡಿ ಚಿಗುರು; ಮೊಳಕೆ; ಚಿಗುರು; ಅಧಿಕ; ಮೊಳೆಯು; ಅಧಿಕವಾಗು.
—ಏರು ಚಿಗುರು; ಮೊಳಕೆಯೊಡೆ.
ಕೊನೆ ತುದಿ, ಅಂತ್ಯ; ಅವಸಾನ; ಗೊನೆ; ಮೊನೆ; ಮೂಲೆ; ಮೊಳಕೆ; ಕೊಂಗೆ.
ಕೊಪ್ಪ ಊರು; ಕೇರಿ; ಗುಡಿಸಿಲಿನ ಸಮುದಾಯ.
ಕೊಪ್ಪರ ಬಡಿತ; ಕೊಪ್ಪರಿಗೆ, ಕಡಾಯಿ.
—ಇಸು ಹೊಡೆ, ಬಡಿ; ನಾಶ ಮಾಡು; ಸೆರೆಹಿಡಿ; ಸದೆಬಡಿ.
ಕೊಪ್ಪರಿಗೆ (ದ್ಭ) ಖರ್ಪರಿಕಾ (ಸಂ), ಅಗಲ ಬಾಯ ಕಡಾಯಿ.
ಕೊಪ್ಪಲು (ಕೊಪ್ಪ) ಊರು; ಕೇರಿ; ಗುಡಿಸಿಲಿನ ಸಮುದಾಯ.
ಕೊಪ್ಪು ಕೊಕ್ಕೆ; ಬಿಲ್ಲಿನ ತುದಿಯ ಕಚ್ಚು; ಕಿವಿಯಿಂದ ಜಡೆಗೆ ಸಿಕ್ಕಿಸುವ ಆಭರಣ.
ಕೊಪ್ಪೆ ಗುಪ್ಪೆ, ರಾಶಿ.

ಕೊಬರಿ ಕೊಬ್ಬರಿ, ತೆಂಗಿನ ಕಾಯ ತಿರುಳು; ಒಣಗಿಸಿದ ತೆಂಗಿನಕಾಯಿ.
ಕೊಬ್ಬಟ್ಟೆ ಅರ್ಧ ಕುಟ್ಟದ ಬತ್ತ.
ಕೊಬ್ಬಿಲ ಹಳ್ಳಿಯವ; ಕೀಳು ಮನುಷ್ಯ.
ಕೊಬ್ಬು (ಕೊರ್ಬು) ಸೊಕ್ಕು, ಗರ್ವ, ಹೆಮ್ಮೆ; ಮೈಯೊಳಗಿನ ಜರಬಿ.
ಕೊಮೆ ಸುಡು, ಉರಿ.
ಕೊಯ್ (ಕೊಯ್ಯು) ಕಿತ್ತುತೆಗೆ; ಹೆಕ್ಕು; ಹಣ್ಣು ಮೊದಲಾದುವನ್ನು ಗಿಡದಿಂದ ಎತ್ತು; ಕತ್ತರಿಸು.
—ಕ ಕೊಯ್ಯುವವ; ಕತ್ತರಿಸುವವ.
—ತ ಕೊಯ್ಲು, ಕೊಯ್ಯುವಿಕೆ, ಕಟಾವು.
—ಲು ಕೊಯ್ಲು; ಕತ್ತರಿಸುವಿಕೆ; ಹೊಲದ ಕಟಾವು,
ಕೊಯಕ ಕುಹಕ, ಕಪಟ.
ಕೊರ ಗೊರಕೆ; ಬೆಕ್ಕುಗಳ ಒಳದನಿ.
ಕೊರಕಲು ಪ್ರಪಾತ; ಕೊರೆದು ಆದ ಆಳವಾದ ಕಣಿವೆ; ನದಿ ಹಳ್ಳಗಳು ಹರಿದು ಆದ ಕಡಿದಾದ ದಾರಿ; ಒರಟು ಕಣಿವೆ.
ಕೊರಗ ಹೊಲೆಯರ ಒಂದು ಪಂಗಡ.
ಕೊರಗು ದುಃಖ, ಬೇನೆ; ರಸಹೀನವಾಗು; ದುಃಖಿಸು, ಸೊರಗು; ಕ್ಷೀಣಿಸು.
ಕೊರಚ ಕೊರವ, ಕೊರವಂಜಿ, ಒಂದು ಜನ ಪಂಗಡ.
ಕೊರಚು ನಿಂದಿಸು; ಹೀನೈಸು; ಚುಚ್ಚು, ಅಣಕಿಸು; ಕೊಂಕು ಮಾತಾಡು.
—ಆಡು ಕಣಿ ಹೇಳು; ಚುಚ್ಚು ಮಾತಾಡು; ನಿಂದಿಸು.
ಕೊರಟು ಗೊರಟು.
ಕೊರಡು (ಕೊರಂಡು) ಮರದ ತುಂಡು, ದಿಂಡು, ಕಟ್ಟಿಗೆ ತುಂಡು.
ಕೊರತೆ ಊನ, ಊಣೆಯ, ನ್ಯೂನತೆ.

ಕೊರಮ (ಕೊರಚ).
ಕೊರಲ್ (ಕೊರಲು) ಕೊರಳು; ಕತ್ತು, ಕಂಠ; ಧ್ವನಿ.
—ಚು ಕೂಗು, ಕರೆ; ಚೀರಾಡು.
ಕೊರವಂಚಿ (ಕೊರವ) ಕೊರಚರವಳು; ಕಣಿ ಹೇಳುವವಳು.
ಕೊರಳು (ಕೊರಲು) ಕತ್ತು, ಕುತ್ತಿಗೆ, ಕಂಠ.
ಕೊರಂಗು (ನೋಡು: ಕೊರಗು).
ಕೊರಂಟು ಗೊರಟು, ಗಟ್ಟಿ ಬೀಜ; ರೋಗಿಷ್ಟರನ್ನು ತಾತ್ಕಾಲಿಕವಾಗಿ ನಿರ್ಬಂಧದಲ್ಲಿ ನಿಲ್ಲಿಸುವ ಸ್ಥಳ.
ಕೊರೆ ತಿವಿ, ತೂತುಮಾಡು; ಮೊನೆಯಾದ ವಸ್ತುವಿನಿಂದ ಇನ್ನೊಂದನ್ನು ತಿವಿ; ಕತ್ತರಿಸು; ಗೊರಕೆಹೊಡೆ; ಗೊರೆ.
—ತ ಕೊರೆಯುವಿಕೆ, ತಿವಿತ.
ಕೊರ್ಚು ಕೊಚ್ಚು, ನುಚ್ಚುನುಚ್ಚು ಮಾಡು.
ಕೊರ್ಬು (ನೋಡು: ಕೊಬ್ಬು).
ಕೊರ್ವು ಕೊಬ್ಬು, ಹೆಮ್ಮೆ, ಗರ್ವ.
ಕೊಲ್(ಕೊಲ್ಲು) ನಾಶಮಾಡು; ಪ್ರಾಣತೆಗೆ.
ಕೊಲಪ ಜಾಡ, ನೇಕಾರ.
ಕೊಲೆ ಕೊಲ್ಲುವಿಕೆ, ಪ್ರಾಣ ತೆಗೆಯುವಿಕೆ; ನಿರ್ಗತಿಕ ಪ್ರೇತ, ಮರುಳು; ಮರಣ; ಹಿಂಸೆ.
—ಕಡಿಕ ಕೊಲ್ಲುವವ, ಕಟುಕ.
—ಕಾರ ಕೊಂದವ, ಕೊಲ್ಲುವವ.
—ಕೆಡುಕ ಘಾತಕ.
ಕೊಲ್ಲಟಿಗ ಡೊಂಬ.
ಕೊಲ್ಲಣಿಗೆ ಆಟ, ವಿನೋದ.
ಕೊಲ್ಲಾರ (ಕೊಲ್ಲಾರಿ) ಸರಕು ತುಂಬಿದ ಎತ್ತಿನ ಗಾಡಿ; ಗಾಡಿಯ ಮಾಡು.
ಕೊಲ್ಲಿ ಕಿರಿದಾದ ಕಡಲಿನ ಭಾಗ; ಬಾಗು.
ಕೊಲ್ಲು (ಕೊಲ್) ಕೊಲೆಮಾಡು, ಸಾಯಿಸು; ನಾಶಮಾಡು.
ಕೊಲ್ಲೆ ಮೂಲೆ, ಕೊಂಪೆ; ಬಾಗು.
ಕೊಸಗು ಬೆಟ್ಟದಾವರೆ, ಕರ್ಣಿಕಾರ.
ಕೊಸರು ಅಧಿಕವಾಗು, ವಿಸ್ತರಿಸು; ವರ್ಣಿಸು; ಕೂಗು; ಹೆಚ್ಚು ಕೇಳು; ಕುಸುರು.
—ಇಕೆ ಹೆಚ್ಚಳ, ವಿಸ್ತಾರ; ವರ್ಣನೆ; ಕೂಗಾಟ.
ಕೊಸೆ ಒಂದು ರೀತಿಯ ಕುದುರೆ ಸವಾರಿ.
ಕೊಳ್ (ಕೊಳ್ಳು) ಸ್ವೀಕರಿಸು, ಮನಸ್ಸಿಗೆ ಹಿಡಿ; ಗ್ರಹಿಕೆಗೆ ಬರು; ಪಡೆ; ಬೆಲೆಗೆ ಕೊಂಡುಕೊ; ಆತಿಕ್ರಮಿಸು; ಸೆಳೆದುಕೊಳ್ಳು, ಕಸಿದುಕೊ.
—ಇಸು (ಕೊಳ್ಳಿಸು) ಸೆಳೆದುಕೊಳ್ಳುವಂತೆ ಮಾಡು.
ಕೊಳ ಕೆರೆ, ಕುಂಟೆ, ತಟಾಕ, ಪುಷ್ಕರಿಣಿ; ನಿಶ್ಚಿತ ಸ್ಥಳ.
ಕೊಳಕು ರಾಡಿ, ಕೊಚ್ಚೆ, ಕೊಳೆ, ರೊಜ್ಜು.
ಕೊಳಕೆ ಬತ್ತದ ಮೂರನೆಯ ಬೆಳೆ.
ಕೊಳಗ ಒಂದು ಧಾನ್ಯದ ಅಳತೆ; ಕಾಲಿನ ಗೊರಸು; ವೀರರ ಶಿರಸ್ತ್ರಾಣ, ಕುಲಾವಿ.
ಕೊಳಗಾಹಿ ಕೊಳ ಕಾಯುವವ.
ಕೊಳಗು ಗೊರಸು.
ಕೊಳಚು (ಕೊಳಚೆ) ಕೆಸರು.
ಕೊಳರ್ ಲಾವಂಚ, ಬಾಳ, ಒಂದು ಜಾತಿಯ ಸುಗಂಧವುಳ್ಳ ಬೇರು.
ಕೊಳರ್ವಕ್ಕಿ ನೀರಬಳಿ ವಾಸಿಸುವ ಹಕ್ಕಿ.
ಕೊಳಲು ವೇಣು, ಬಿದಿರಿನ ವಾದ್ಯ.
ಕೊಳವಂಕೆ ಕೊಳಗುಳಿಕೆ; ಕಬ್ಬು.
ಕೊಳವಿ ಕೊಳವೆ, ನಳಿಗೆ.
ಕೊಳವೇರ್ (ಕೊಳರ್) ಬಾಳದ ಬೇರು, ಲಾವಂಚ.
ಕೊಳಹೆ (ಕೊಳ).
ಕೊಳಾಯಿ ನಳಿಗೆ, ನಲ್ಲಿ.
ಕೊಳಿಕೆ ಕುಣಿಕೆ, ಸಂದು.

ಕೊಳು (ಕೊಳ್ಳು) ಸ್ವೀಕರಿಸು; ತೊಡಗು.
—ಕೊಡೆ ಕೊಂಡುಕೊಳ್ಳುವುದು ಮಾರುವುದು, ವ್ಯಾಪಾರ; ಹೆಣ್ಣು ಕೊಡುವುದು ತರುವುದು.
—ಹ ಕೊಳ್ಳುವಿಕೆ.
ಕೊಳುಗಿಡಿ ಹರಡುತ್ತಿರುವ ಬೆಂಕಿ ಕಿಡಿ.
ಕೊಳುಗುಳ (ಕೊಳಗುಳ) ರಣ, ಕಾಳಗ.
ಕೊಳೆ ಕೆಸರು, ರೊಜ್ಜು, ಮಾಲಿನ್ಯ; ನವೆ.
ಕೊಳ್ಳ ತಗ್ಗು; ಪ್ರಸ್ಥಭೂಮಿ, ಸಾನು; ತೆವರು; ಕುಳ್ಳ.
ಕೊಳ್ಳಿ ಸೂಟೆ; ಬೆಂಕಿ ಉರಿವ ಕಟ್ಟಿಗೆ.
ಕೊಳ್ಳು (ಕೊಳು).
ಕೊಳ್ಳೆ ಸುಲಿಗೆ, ದರೋಡೆ, ಸೂರೆ; ಅತ್ಯಂತ ಲಾಭ.
ಕೊಂಕ ಕೊಂಗ, ಹೊಲೆಯ.
ಕೊಂಕಣ (ಕೊಂಗಣ) ಅರಬೀಸಮುದ್ರ ತೀರ ಪ್ರದೇಶ.
—ಸ್ಥ ಕೊಂಕಣದ ನಿವಾಸಿ; ಒಂದು ಬ್ರಾಹ್ಮಣ ವರ್ಗ.
ಕೊಂಕಿ ಬಾಗು, ಕೊಕ್ಕೆ; ವಕ್ರ ಮಾತಾಡು.
ಕೊಂಕು ವಕ್ರ, ಗೊಟ್ಟ; ಕಪಟ; ವಕ್ರನುಡಿ, ಡೊಂಕು ಮಾತು; ಅಸತ್ಯ.
—ಇಡು ವಕ್ರವಾಗಿ ವರ್ತಿಸು.
—ಕೊರತೆ ತಪ್ಪುಗಳು, ಐಬು, ನ್ಯೂನತೆ.
ಕೊಂಗ (ಕೊಂಕಣ) ಕೇರಳ ದೇಶ; ಒಂದು ಜನ ಪಂಗಡ.
—ಣ ಕೇರಳದವ; ಪಡುಕಡಲ ತೀರದವ.
ಕೊಂಗರಿ ಬಯ್ಯು, ಬೆದರಿಸು; ವಕ್ರ, ವಿಕಾರ.
ಕೊಂಗು ವಕ್ರತೆ; ಕವುಂಗು, ಕಂಗು, ಅಡಕೆ.
—ಆಟ ಅಡ್ಡತಿಡ್ಡವಾಗಿ ಓಡುವಿಕೆ; ಮಕ್ಕಳ ಮುದ್ದಾದ ನಡಿಗೆ; ದಟ್ಟ ಹಜ್ಜೆ.
ಕೊಂಗೆ ಟೊಂಗೆ, ಕೊಂಬೆ, ರೆಂಬೆ.
ಕೊಂಚ ಸ್ವಲ್ಪ; ಕ್ರೌಂಚ ಪಕ್ಷಿ; ಕುಂಚ, ಕುಚ್ಚು.
ಕೊಂಚಿಗೆ ಕುಂಚಿಕೆ, ಕುಚ್ಚು.
ಕೊಂಚೆ ಕ್ರೌಂಚಪಕ್ಷಿ, ಕೀಚು; ಒಬ್ಬ ರಕ್ಕಸ; ಒಂದು ದ್ವೀಪ; ಒಂದು ಪರ್ವತ.
ಕೊಂಟು ಗುದಿಗೆ, ಮುದ್ಗರ, ಗುದ್ದಿ.
ಕೊಂಡ (ದ್ಭ) ಕುಂಡ (ಸಂ), ಬೆಂಕಿ ಉರಿಸುವ ಕುಣಿ; ಕುಣಿ; ಬೆಟ್ಟ, ಪರ್ವತ.
ಕೊಂಡಾಡು ಹೊಗಳು; ಪ್ರಖ್ಯಾತಿಪಡಿಸು.
ಕೊಂಡುಕೊ ತೆಗೆದುಕೊಳ್ಳು; ಸ್ವೀಕರಿಸು; ಬೆಲೆಗೆ ಕೊಳ್ಳು.
ಕೊಂಡುಕೊನೆ ಹೊಗಳು.
ಕೊಂಡೆ ಗೊಂಡೆ, ಕುಂಚ; ಮುತ್ತಿನ ಜಲ್ಲರಿ.
ಕೊಂಡೆಗಾರ ನಿಂದೆಗಾರ.
ಕೊಂಡೆಯ ಚಾಡಿ; ಚಾಡಿತನ; ಕುತ್ಸಿತವಾದ; ಬಯ್ಯುವಿಕೆ.
—ಕಾರ ಚಾಡಿ ಹೇಳುವವ.
ಕೊಂಡೊಯ್ ತೆಗೆದುಕೊಂಡು ಹೋಗು.
ಕೊಂತ (ಕುಂತ) ಈಟ, ಬರ್ಚಿ.
ಕೊಂತಿ (ಕುಂತಿ).
ಕೊಂಪೆ ಪೊದೆ, ಮುಳ್ಳಿನ ಹೊರೆ; ಹಳ್ಳಿ.
ಕೊಂಬ ಕೊಳ್ಳುವ; ಸ್ವೀಕರಿಸುವ.
ಕೊಂಬು ಮರದ ಗೆಲ್ಲು, ಶಾಖೆ; ಪ್ರಾಣಿಗಳ ಕೋಡು; ಊದುವ ವಾದ್ಯ; ಆಶ್ರಯ; ಹೆಚ್ಚಿಗೆ.
—ಕೊಳು ಆಶ್ರಯವನ್ನು ಸೇರು; ಮರೆಯಾಗು.
ಕೊಂಬೆ ಮರದ ರೆಂಬೆ, ಗೆಲ್ಲು, ಟೊಂಗೆ.
ಕೋ ಪೋಣಿಸು, ಮಣಿಗಳೊಳಗೆ ದಾರ ಹಾಕು; ಹೂವನ್ನು ಮಾಲೆಯಾಗಿ ಹೊಸೆ.
ಕೋಕ ತೋಳ; ಕಪ್ಪೆ; ಅಕ್ಕ; ಒಂದು ಜಾತಿಯ ಖಾತುಕೋಳಿ; ಚಕ್ರವಾಕ;

ಖರ್ಜೂರದ ಮರ; ಕಾಮಶಾಸ್ತ್ರವನ್ನು ಬರೆದ ಒಬ್ಬ ಪಂಡಿತ.
ಕೋಕನದ ಕೆಂದಾವರೆ, ಕೆನ್ನೈದಿಲೆ.
ಕೋಕಶಾಸ್ತ್ರ ಪಂಡಿತ ಕೋಕನೆಂಬವನು ಬರೆದ ಕಾಮಶಾಸ್ತ್ರ.
ಕೋಕಿಲ ಕೋಗಿಲೆ (ಢ್ಬ).
—ಆವಾಸ ಕೋಗಿಲೆಯ ಮನೆ, ಮಾವಿನ ಮರ.
—ರವ ಕೋಗಿಲೆಯ ಕೂಗು, ಕೋಗಿಲೆಯ ಗಾನ.
—ಸ್ವನ ಕೋಗಿಲೆಯ ಧ್ವನಿ, ರಾಗ.
ಕೋಗಿಲ (ಕೋಕಿಲ).
ಕೋಗೀರು ಕುದುರೆಯ ಮೇಲೆ ಹಾಕುವ ತಡಿ; ನಿರ್ಬಂಧ.
ಕೋಚ ದೇಶಭೇದ; ಜಾತಿಭೇದ.
ಕೋಚು ಕೋಸು; ಹಾಸ್ಯ, ಅರೆಮರಳುತನ; ನಗೆಮಾತು, ಕುದುರೆಬಂಡಿ.
ಕೋಜಾಗರ ಲಕ್ಷ್ಮಿಯನ್ನು ಕುರಿತು ಮಾಡುವ ಒಂದು ವ್ರತ.
ಕೋಟ ಕೋಡು, ಶೀತ; ಒಂದು ಜಾತಿಯ ಹಕ್ಕಿ; ಕೋಟೆ; ಗುಡಿಸಿಲು; ವಕ್ರತೆ; ಕುಟಿಲತೆ.
ಕೋಟರ ಮರದ ಪೊಟರೆ, ಡೊಗರು, ಟೊಳ್ಳು; ಸಮೂಹ.
ಕೋಟರಿ ನಗ್ನ ಸ್ತ್ರೀ; ದುರ್ಗಿ.
ಕೋಟಲೆ ತೊಂದರೆ, ಉಪದ್ರವ, ನೋವು; ಸೀತಾಳಿ; ಒಂದು ಬೇನೆ.
—ಇಗ ಉಪದ್ರಕಾರಿ.
ಕೋಟಾ (ಸಂ) ಗೋಡೆ (ಢ್ಬ).
ಕೋಟಾನುಕೋಟಿ (ಕೋಟ್ಯನುಕೋಟಿ) ಕೋಟಿಗಳಲ್ಲಿ ಎಣಿಸಲ್ಪಟ್ಟ; ಅಸಂಖ್ಯಾತ.
ಕೋಟಿ ಕೋಡಿ; ಕೊನೆಯ ಭಾಗ; 100 ಲಕ್ಷಗಳು; ಹಡಗಿನ ಒಂದು ಜಾತಿ.
ಕೋಟಿಕ ಶಿಖರ, ತುದಿ, ಕೋಡು.
ಕೋಟಿಪಾತ್ರ ಹಡಗಿನ ಚುಕ್ಕಾಣಿ.
ಕೋಟೀರ ಕಿರೀಟ, ಮುಕುಟ.
ಕೋಟೆ ಸೇನೆಯ ರಕ್ಷಣೆಗೆ ಕಟ್ಟಿದ ಉನ್ನತ ಪ್ರಾಕಾರ, ಬಲವಾದ ಗೋಡೆಯ ಆವರಣ, ದುರ್ಗ, ಗಡ, ಕಿಲ್ಲೆ.
—ಕಾವಲು ಕೋಟೆಯನ್ನು ರಕ್ಷಿಸುವವ.
ಕೋಟ್ವಾರ ಕಳ್ಳರ ನಿಲುಗಡೆ; ತೆವರು; ಸೋಪಾನ; ಸ್ವೇಚ್ಛಾಚಾರಿ.
ಕೋಠಿ ಕಣಜ, ಗೋದಾಮು, ಮಳಿಗೆ; ದೊಡ್ಡ ಹಾಯಿ ಹಡಗು.
ಕೋಡ್ (ಕೋಡು) ಕೊಂಬು; ಭಯ; ಶೈತ್ಯ; ಕುಗ್ಗು.
—ಕಲ್ಲು ಬೆಟ್ಟದ ಶಿಖರ.
ಕೋಡ ಕೊಡುವವ, ದಾನ ಮಾಡುವವ; ಉದಾರಿ; ಉದಾರವಾದ.
ಕೋಡಗ ಕಪಿ, ಕೋತಿ, ಮಂಗ.
—ಕಟ್ಟು ಕಪಿ ಕಟ್ಟಿದಂತೆ ನಿಲ್ಲು; ಕೈಕೈ ಕಟ್ಟು.
ಕೋಡಬಳೆ ಕರಿದು ಮಾಡುವ ಒಂದು ತಿಂಡಿ.
ಕೋಡರತನ ಕೊಡಲಾಗದ; ದರಿದ್ರತನ.
ಕೋಡಂಗಿ ಆಟದಲ್ಲಿ ಮೊದಲಿಗೆ ಕುಣಿಯುವವ; ಕುಣಿತದ ಅಭ್ಯಾಸಿ; ಹಾಸ್ಯಗಾರ.
ಕೋಡಿ ಕೊರತೆ, ಕಲೆ; ಉತ್ಸಾಹ; ಧೈರ್ಯ; ಭೂಮಿಯ ತುದಿ; ನೀರು ದಾರಿ, ತೂಬು; ಹರಿಯುವಿಕೆ; ಕಾರಿ; ಕೊರತೆ, ಐಬು; ಧ್ವಜಸ್ತಂಭಕ್ಕೆ ಏರಿಸುವ ಗರುಡ ಪಟ, ಕುಡಿ.
—ಕಳೆ ತಿರಸ್ಕರಿಸು; ನಿರಾಕರಿಸು.
—ಕಾಣು ಕೊರತೆ ಕಾಣು.
—ಹರಿ ಹರಿದು ಹೋಗು.
ಕೋಡು ಕೊಂಬು; ಟೊಂಗೆ; ಭಯ; ಶೀತ; ಕೂಟ (ಸಂ); ಪರ್ವತ ಶಿಖರ; ಕುಗ್ಗಿ ಹೋಗು.

—ಕೈ ಉದಾರ ಹಸ್ತ; ನೀಡಿದ ಕೈ.
ಕೋಡೆ ಪಡುಗಾಳಿ, ತಂಗಾಳಿ; ಸೆಕೆ ಗಾಲ.
ಕೋಣ ತಂತಿವಾದ್ಯ ಬಾರಿಸುವ ಸಾಧನ, ಕಮಾನು; ದೊಣ್ಣೆ; ಮಂಗಳಗ್ರಹ; ಕ್ಷತ್ರಿಯ ಧಾರೆ; ಮೂಲೆ, ಕೋನ; ದಷ್ಟ; ಎಮ್ಮೆಯ ಜಾತೆಯಲ್ಲಿ ಗಂಡು.
ಕೋಣಪ ನಿಋತಿ ಎಂಬ ದಿಕ್ಪಾಲಕ.
ಕೋಣೆ ತಮಟೆ ಬಾರಿಸುವ ಕಡ್ಡಿ.
ಕೋಣೆ ಹೂಜಿ; ಕೊಟಡಿ, ಓವರಿ.
ಕೋತ ಕಳೆಯುವಿಕೆ; ಒಂದು ಜನ ವರ್ಗ; ಕಡಿಮೆಮಾಡುವಿಕೆ.
—ಲು ಉಳಿಮೆ, ಉಳಿತಾಯ; ಗಳಿಕೆ.
ಕೋತಿ ಕಪಿ, ಮಂಗ, ಕೋಡಗ.
ಕೋತು (ನೋಡು: ಕೋಡು).
ಕೋದಂಡ ಬಿಲ್ಲು; ಬ್ರಹ್ಮನಿಂದಾದುದು; ಒಂದು ಹಗ್ಗಕ್ಕೆ ಕೈಬಿಗಿದು ತೂಗುವಂತೆ ಮಾಡುವ ಶಿಕ್ಷೆ.
ಕೋನ (ಕೋಣ) ಮೂಲೆ, ದೃಷ್ಟಿಪಥ.
ಕೋಪ ಸಿಟ್ಟು.
—ಅಗ್ನಿ ಉಗ್ರವಾದ ಸಿಟ್ಟು, ಕೆಂಡದಂಥ ಕೋಪ.
—ಆಟೋಪ ರೌದ್ರಾವೇಶ; ಉಗ್ರವಾದ ಸಿಟ್ಟು, ಸಿಟ್ಟಿನ ಅಬ್ಬರ.
—ಉದ್ರೇಕ ರೇಗುವಿಕೆ; ಸಿಟ್ಟಾಗುವಿಕೆ; ಕೆರಳಿಕೆ.
ಕೋಪಿಷ್ಠ ಕೋಪಶೀಲ; ಯಾವಾಗಲೂ ಕೋಪಕ್ಕೆ ಗುರಿಯಾಗುವವ.
ಕೋಪು ಹಾವ ಭಾವ; ವ್ಯವಸ್ಥೆ.
ಕೋಮಟಿ ಕೋಮಟಿಗ; ವೈಶ್ಯ; ಜಿಪುಣ.
ಕೋಮಲ ಮೃದು; ಸುಂದರ, ಚೆಲುವ.
—ಅಂಗ ಮಿದುವಾದ ಮೈಯುಳ್ಳವ, ಎಳೆಯ.
ಕೋಮಲೆ (ಕೋಮಳೆ) ಚೆಲುವೆ; ಕೋಳೆ, ಕುವಲಯ.
ಕೋಮು ಜಾತಿ, ಪಂಗಡ; ಬಣ್ಣ.
ಕೋಯಷ್ಟಿ ದೇವನ ಹಕ್ಕಿ, ಟಿಟ್ಟಭ, ಲಾವುಗೆ.
ಕೋಯಂಡ (ದ್ಭ) ಕೋದಂಡ (ಸಂ) ಬಿಲ್ಲು.
ಕೋಯಿಲ್ (ಕೋವಿಲ್) ಗುಡಿ, ದೇವಾಲಯ
ಕೋರ್ (ಕೋರು) ಬಯಸು, ಇಚ್ಛಿಸು.
—ಇಕೆ ಬಯಕೆ, ಅಪೇಕ್ಷೆ; ಆಸೆ.
ಕೋರ (ಕೋರ್) ಕುವರ (ದ್ಭ), ಕುಮಾರ (ಸಂ), ಮಗ.
ಕೋರಕ ಮೊಗ್ಗು.
ಕೋರಕೆ ಅಗಲ ಬಾಯ ಪಾತ್ರೆ.
ಕೋರಡಿ ಹಿಂಸೆ; ವೀರತನ.
—ಗ ಹಿಂಸೆ ಮಾಡುವವ, ಹಿಂಸಕ.
ಕೋರದಾಡೆ (ದ್ಭ) ಕ್ರೂರದಂಷ್ಟ್ರಾ (ಸಂ), ಮೊನೆಯಾದ ದಾಡೆ.
ಕೋರಡೆ (ಕೊರಡೆ) ಚಾಟ.
ಕೋರಯಿಸು ಕುಕ್ಕು, ತಿವಿ, ಚುಚ್ಚು.
ಕೋರಂಗಿ ಏಲಕ್ಕಿ.
ಕೋರಂಬು ವಿಗ್ರಹಗಳ ಮೈ ಮತ್ತು ಮುಖವಾಡ.
ಕೋರಿ ಹರಕು, ಚಿಂದಿ; ಚಿಕ್ಕ.
ಕೋರು (ಕೋರ್) ಜರಿ, ಜರದ ನೂಲು.
ಕೋರೆ ಓರೆ, ವಕ್ರ; ಕ್ರೂರ.
ಕೋರ್ಟು ನ್ಯಾಯಸ್ಥಾನ.
ಕೋಲ್ (ಕೋಲು), ಬಡಿಗೆ; ಯಷ್ಟಿ; ಬಾಣ, ಸರಳು, ಅಂಬು; ಅಧಿಕಾರ; ತೆಪ್ಪ; ನಾಲ್ಕು ಗೇಣಿನ ಒಂದು ಅಳತೆ.
—ಕರೆ ಬಾಣವನ್ನು ಸುರಿಸು.
—ಕಾರ ಬಾಣ ಎಸೆವವ, ಬಿಲ್ಲುಗಾರ; ಅಧಿಕಾರಿ.
ಕೋಲ ಆಭರಣ; ಮುಖವಾಡ; ಉಡಿಗೆ; ಭೂತಗಳ ಉತ್ಸವ; ಮೆರವಣಿಗೆ.

ಕೋಲಾಟ ಬಾಣಗಳ ಹಾರಾಟ; ಒಂದು ಬಗೆಯ ಕುಣಿತ.

ಕೋಲಾರ ಹೀನಜಾತಿಯ ಕುದುರೆ; ಮೈಸೂರಿನ ಒಂದು ಊರು.

ಕೋಲಾಹಲ ಅಸ್ಪಷ್ಟ ಗದ್ದಲ; ಗದ್ದಲ; ತಳಮಳ; ಗೊಂದಲ.

ಕೋಲು (ಕೋಲ್).

ಕೋಲುಗಾರ ಕೋಲು ಹಿಡಿಯುವ ಆಳು, ಕಟ್ಟಿಗೆ ಕೋಲಿನವ, ಪೊದೆ.

ಕೋಲೆ ಕಾಳುಮೆಣಸು, ಸಣ್ಣ ಮೆಣಸು, ಕೋಲು ಮೆಣಸು.

ಕೋವ ಕುಂಬಾರ, ಮಡಕೆ ಮಾಡುವವ.

ಕೋವಣ (ದ್ಭ) ಕೌಪೀನ (ಸಂ), ಕಚ್ಚೆ, ಲಂಗೋಟ.

ಕೋವರಿ (ಕವ್ವರೆ), ಸಂಭ್ರಮ.

ಕೋವಿ ಗುಂಡು ಹಾರಿಸುವ ಸಾಧನ, ಬಂದೂಕು, ತುಬಾಕಿ.

ಕೋವಿದ ಎಲ್ಲ ತಿಳಿದವನು, ಜಾಣ, ನಿಪುಣ; ವಿದ್ವಾಂಸ.

ಕೋವು ಬಿಸುಡು; ಪೋಣಿಸು.

ಕೋವೆ ಚಿನ್ನ ಮೊದಲಾದುವನ್ನು ಕರಗಿಸುವ ಬಟ್ಟಲು; ಹಾಲನ್ನು ಕಾಯಿಸಿ ಮಾಡಿದ ಒಂದು ತಿಂಡಿ, ಪೇಡೆ.

ಕೋಶ (ಕೋಷ) ಪಾನಪಾತ್ರ; ಚೀಲ; ಖಡ್ಗದ ಒರೆ; ಹುಳುವಿನ ಹೊದ್ದಿಕೆ; ಸಂಗ್ರಹ ಸ್ಥಾನ; ದ್ರವ್ಯ ಸಂಗ್ರಹ, ನಿಧಿ; ಸಂದುಕ; ಚಿನ್ನ ಬೆಳ್ಳಿ; ಅಂಡ; ಕೊಲೆ.

—ಗೃಹ ಖಜಾನೆ, ಧನ ಸಂಗ್ರಹಾಲಯ.

ಕೋಶಿ ಹೊರಗಿನ ಹೊದಿಕೆ; ಓಡು; ತೊಗಟೆ.

ಕೋಷ್ಠ ತೊನ್ನು, ಕುಷ್ಠ ರೋಗ; ಹೊಟ್ಟೆಯ ಒಳಗು.

ಕೋಷ್ಟಕ ಕ್ರಮುಗತವಾಗಿ ಬರೆದ ವಿವರ, ಪಟ್ಟಿ.

ಕೋಷ್ಠಾಗಾರ (ಸಂ) ಕೊಟ್ಟಾರ (ದ್ಭ), ಉಗ್ರಾಣ, ಗೋದಾಮು, ಕಣಜ.

ಕೋಸರ ಓಸುಗ, ಅದಕ್ಕಾಗಿ; ಓಸ್ಕರ.

ಕೋಸಲ ಅಯೋಧ್ಯಾದೇಶ, ಸರಯೂ ನದಿಯ ಮಗ್ಗುಲ ಪ್ರದೇಶ.

ಕೋಸು ಓರೆ, ಒಡ್ಡು, ಡೊಂಕು; ಕೇಬೇಜು ತರಕಾರಿ.

—ಕಣ್ಣು ಓರೆಗಣ್ಣಿನವ, ಕಾಗೆನೋಟದವ.

ಕೋಸುಗಡ್ಡೆ ಕೆಬೇಜು ತರಕಾರಿ.

ಕೊಸುಂಬರಿ ಹಸಿ ಹೆಸರು ಇಲ್ಲವೆ ಕಡಲೆ ಬೇಳೆಯಿಂದ ಮಾಡುವ ಪಚ್ಚಡಿ.

ಕೋಹಳೆ ಒಂದು ವಿಧದ ಚೀಲ; ಲಕ್ಕೋಟೆ; ಹೊದ್ದಿಕೆ; ಪರೆ.

ಕೋಹು ತುದಿ, ಬುಡ; ಪಂಕ್ತಿ.

ಕೋಳ್ (ಕೋಳು) ಕೊಳ್ಳೆ, ಲೂಟಿ, ಸೂರೆ; ಹಿಡಿಯುವುದು; ಕಚ್ಚುವುದು.

—ಒಡವೆ ಕೊಳ್ಳೆ ಹೊಡೆದ ಒಡವೆ.

—ಪಡು ಕೊಳ್ಳೆಗೊಳಗಾಗು; ಎಲ್ಲವನ್ನು ಕಳೆದುಕೊಳು.

ಕೋಳ ಬೇಡಿ, ಕೈಸೆರೆ, ಬಂಧನ, ಸಂಕೋಲೆ.

ಕೋಳಾಹಳಿಕೆ (ನೋಡು: ಕೋಲಾಹಲ).

ಕೋಳಿ ಕುಕ್ಕುಟ; ಪಕ್ಷಿ ಜಾತಿ; ಚರಣಾಯುಧ; ಕಣ್ಣಿನ ಒಂದು ಬೇನೆ.

ಕೋಳು ಮರ್ಯಾದೆ, ಗೌರವ; ತಿವಿ; ಸುಲಿಯು, ದರೋಡೆಮಾಡು; ಲುಟಾಯಿಸು; ಸೂರೆಮಾಡು.

ಕೋಳೆ ಕೋಮಳೆ, ನೈದಿಲೆ, ಕುವಲಯ; ಕಫ; ಕಣ್ಣಿನ ಹೊರ ಕುಡಿ.

ಕೋಳ್ಗೆ ಪೆಟ್ಟಿಗೆ, ಸಂದುಕ.

ಕೋಳ್ಗೆಸರು ಶೀತಲವಾದ ಕೆಸರು; ಕೊಚ್ಚೆ.

ಕೋಳ್ಗೊಳು ವಿರೋಧ ಹೊಂದು.

ಕೋಳ್ಮೆಗ ಕೊಂಬಿರುವ ಮೃಗ.

ಕೋಳ್ಮೊಗ ವ್ಯಸನಕ್ರಾಂತ ಮುಖ.

ಕೋಳ್ಪಿಡಿ ಸೆರೆ ಹಿಡಿ, ಬಲಪ್ರಕಾಶದಿಂದ ಹಿಡಿ.
ಕೌಕ್ಷೇಯು ತಳವಾರು, ಖಡ್ಗ.
ಕೌಟವಿ ನಗ್ನ ಸ್ತ್ರೀ, ಬತ್ತಲೆ ಹೆಣ್ಣು.
ಕೌಟಿಕ (ಕೌಳಿಗ) ಉರುಳುಗಾರ; ಮಾಂಸಕ್ಕಾಗಿ ಪ್ರಾಣಿಗಳನ್ನು ಹಿಡಿದು ಮಾರುವವ.
ಕೌಟಿಲ್ಯ ಕುಟಿಲತೆ; ವಂಚನೆ; ವಂಚಕ; ಚಂದ್ರಗುಪ್ತನ ಮಂತ್ರಿಯಾಗಿದ್ದ ಚಾಣಕ್ಯ.
ಕೌಣಪ (ಕುಣಪ = ಹೆಣ) ಹೆಣ ತಿನ್ನುವವ, ರಾಕ್ಷಸ.
ಕೌತುಕ ಇಚ್ಛೆ; ಆತುರ, ಲವಲವಿಕೆ, ಕುತೂಹಲ; ವಿಚಿತ್ರ.
ಕೌತೂಹಲ ಇಚ್ಛೆ; ಆತುರ, ಲವಲವಿಕೆ.
ಕೌಪೀನ ಕೋವಣ, ಕಚ್ಚೆ; ಪಾಪ; ಪಾಪಿ.
ಕೌಪು ಕೌಪೀನ, ಕೃಪ, ಲಂಗೋಟ.
ಕೌಬೇರ ಕುಬೇರ; ಕುಬೇರನಿಗೆ ಸಂಬಂಧಿಸಿದುದು.
ಕೌಮಾರ ಐದು ವರ್ಷ ಪ್ರಾಯದೊಳಗಿನ ಅವಸ್ಥೆ; ಷಣ್ಮುಖನ ಶಕ್ತಿ; ಕುಮಾರಿಯ ಮಗಳು.
ಕೌಮುದಿ ಬೆಳುದಿಂಗಳು, ಕಾರ್ತಿಕ ಮಾಸದ ಹುಣ್ಣಿಮೆ.
ಕೌರವ ಕುರುಕಲದವನು; (ನೋಡು: ದುರ್ಯೋಧನ).
ಕೌರು ಕಮರು, ದುರ್ವಾಸನೆ; ಕವಲು.
ಕೌಲಟ ಹಾದರ, ಕುಲಟ ವೃತ್ತಿ, ವ್ಯಭಿಚಾರ.
ಕೌಲಟೇಯು ವ್ಯಭಿಚಾರಕ್ಕೆಂದು ಹುಟ್ಟಿದವ; ಹಾದರಗಿತ್ತಿಯ ಮಗ.
ಕೌಲಿಕ ಕುಲಕ್ಕೆ ಸಂಬಂಧಿಸಿದ, ಕುಲಧರ್ಮವನ್ನು ನಡಸುವವ; ಶಾಸ್ತ್ರಧರ್ಮ.
ಕೌಲೀನ ನಿಂದೆ; ದುಷ್ಟ ಅಪೇಕ್ಷೆ; ವಾಮಮಾರ್ಗಾದಿ ಶಕ್ತ್ಯುಪಾಸನೆ; ಉತ್ತಮ ಕುಲದಲ್ಲಿ ಹುಟ್ಟಿದವ.
ಕೌಲು ಕವಲು, ಒಪ್ಪಂದ; ಕವರು, ರೆಂಬೆ.
ಕೌವರೆ ಸಂಭ್ರಮ, ಸಡಗರ.
ಕೌವೇರ (ಕೌಬೇರ) ಕುಬೇರಗೆ ಸಂಬಂಧಿಸಿದ್ದು.
ಕೌಶಲ ಚಮತ್ಕಾರ, ಸಂಪತ್ತು; ಚಾತುರ್ಯ.
ಕೌಶಂಬಿ ಕುಶಾಂಬನೆಂಬವನು ಕಟ್ಟಿದ ಪಟ್ಟಣ.
ಕೌಶಿಕ ಕುಶಿಕ ರಾಜವಂಶದಲ್ಲಿ ಹುಟ್ಟಿದವ; ವಿಶ್ವಾಮಿತ್ರ ಋಷಿ; ಗೂಗೆ; ಕೋಶಾಧ್ಯಕ್ಷ; ಜರಾಸಂಧನ ಸೇನಾನಿ; ಒಬ್ಬ ಮುನಿ.
ಕೌಶೀಯು ಕೋಶದಿಂದ ಹುಟ್ಟಿದುದು; ರೇಶ್ಮೆ.
ಕೌಸಲ್ಯೆ ಕೋಸಲ ದೇಶದ ಭಾನುಮಂತ ರಾಯನ ಮಗಳು. ದಶರಥರಾಯನ ಹಿರಿ ಹೆಂಡತಿ, ರಾಮನ ತಾಯಿ.
ಕೌಸಾಳ ಕಂಚಿನ ತಾಳ.
ಕೌಸ್ತುಭ ಸಾಗರದಲ್ಲಿ ಹುಟ್ಟಿದುದು; ವಿಷ್ಣುವಿನ ಎದೆಯ ಮೇಲಿನ ಒಂದು ರತ್ನ, ಆಭರಣ.
—ವಕ್ಷ ಕೌಸ್ತುಭವು ಎದೆ ಮೇಲುಳ್ಳವ, ವಿಷ್ಣು.
ಕೌಳಿಕ (ದ್ಭ) ಕೌಟಕ (ಸಂ), ಮೋಸಗಾರ, ವಂಚಕ.
ಕೌಳುಡೆ ದಿಂಬು, ಮೆತ್ತೆ; ಲೋಡು.
ಕೌಂಗು (ಕವುಂಗು) ಅಡಕೆ ಮರ, ಕ್ರಮುಕ (ಸಂ).
ಕೌಂಡಿನ್ಯ ಪ್ರಾಚೀನ ಕಾಲದ ಒಬ್ಬ ಋಷಿ.
ಕೌಂತಿ ಒಂದು ಪರಿಮಳ ದ್ರವ್ಯ.
ಕೌಂತೇಯು ಕುಂತಿಯ ಮಗ; ಯುಧಿಷ್ಠಿರ ಭೀಮ, ಅರ್ಜುನ.
ಕ್ರಕಚ ಗರಗಸ (ದ್ಭ), ಕರಗಸ.
ಕ್ರತು ಯಾಗ; ಪ್ರಜಾಪತಿಯರಲ್ಲೊಬ್ಬನು.
ಕ್ರತುಧ್ವಂಸಿ ಯಾಗಧ್ವಂಸಿ, ದಕ್ಷನ ಯಾಗವನ್ನು ನಾಶಪಡಿಸಿದ ಶಿವ.
ಕ್ರಥ ಯಾದವರಲ್ಲಿ ಒಂದು ಕುಲ.

ಕ್ರಮ ಕವ (ದ್ಭ), ಹೋಗುವಿಕೆ; ನಿಯಮ; ವ್ಯವಸ್ಥೆ; ಅಡಿ; ಕಟ್ಟಲೆ.

ಕ್ರಮಗಣನ ಕ್ರಮದಿಂದ ಎಣಿಸುವಿಕೆ.

ಕ್ರಮಸಂಧಾನ ವ್ಯವಸ್ಥಿತವಾಗಿ ಸೇರಿಸುವುದು ಇಲ್ಲವೆ ನಡೆಸುವುದು.

ಕ್ರಮಿಸು ನಡೆ, ಮುಂದುವರಿ; ದಾಟು.

ಕ್ರಮೇಣ ಮೆಲ್ಲಗೆ, ಸಾವಕಾಶವಾಗಿ; ವ್ಯವಸ್ಥಿತವಾಗಿ, ನಿಯಮಕ್ಕೆ ಅನುಸರಿಸಿ, ಕ್ರಮವಾಗಿ.

ಕ್ರಮೇಲಕ ಒಂಟೆ.

ಕ್ರಯ ಬೆಲೆ, ಮೌಲ್ಯ.

—ವಿಕ್ರಯ ವ್ಯಾಪಾರ, ಕೊಡೋಣ ಕೊಳ್ಳೋಣ.

—ಶಾಸನ ಮಾರಾಟ ಮಾಡಿದುದಕ್ಕೆ ಬರಹದ ದಾಖಲೆ; ದಾನದ ಕಟ್ಟಲೆ.

ಕ್ರವ್ಯ ಹಸಿ ಮಾಂಸ.

ಕ್ರವ್ಯಾದ ಹಸಿಮಾಂಸ ತಿನ್ನುವವ, ರಾಕ್ಷಸ; ಮರುಳು, ದೆವ್ವ.

ಕ್ರಂದನ ಆರ್ತನಾದ; ದುಃಖ, ಅಳುವಿಕೆ, ಮರುಕ.

ಕ್ರಾಯಿಕ ಕೊಳ್ಳುವವ, ಗಿರಾಕಿ.

ಕ್ರಾಂತ ಹೋದ; ಹೋಗುವ, ಚಲಿಸುವ, ಕ್ರಮಿಸುವ.

ಕ್ರಾಂತಿ ಚಲನೆ; ಗಮನ; ಗ್ರಹಗಳ ಗತಿ; ತೀವ್ರವಾದ ಮಾರ್ಪಾಟು.

ಕ್ರಾಂತಿವೃತ್ತ ಗ್ರಹಗಳು ಚಲಿಸುವ ವೃತ್ತಾಕಾರದ ಹಾದಿ.

ಕ್ರಿಮಿ ಹುಳು, ಕೀಟ.

—ಜ ಹುಳುವಿನಿಂದಾದ್ದು, ರೇಶ್ಮೆ.

ಕ್ರಿಯಾಖಂಡನ ಆಕ್ಷೇಪಣೆ, ನಿರೋಧ; ಚೂರಾಗಿಸುವುದು.

ಕ್ರಿಯಾಪದ ಒಂದು ವಾಕ್ಯದಲ್ಲಿನ ಕೆಲಸವನ್ನು ಸೂಚಿಸುವ ಮಾತು.

ಕ್ರಿಯಾಲೋಪ ಕರ್ತವ್ಯ ಮಾಡದಿರುವಿಕೆ; ಮಾಡಬೇಕಾದ ಕರ್ಮ ಮಾಡದಿರುವಿಕೆ.

ಕ್ರಿಯಾವಂತ ನಿಷ್ಠಾವಂತ; ಸತ್ಯವಂತ; ಚಟುವಟಿಕೆಗಾರ.

ಕ್ರಿಯಾಂಗ ಉಡುಗೆತೊಡುಗೆ ಧರಿಸಿ ಕ್ರಿಯೆಗೆ ಸಜ್ಜಾಗುವಿಕೆ.

ಕ್ರಿಯೆ ಕೆಲಸ; ವ್ಯಾಪಾರ; ಕಾರ್ಯ; ಕಾವ್ಯ; ಪ್ರಾಯಶ್ಚಿತ್ತ; ತೊಡಗುವಿಕೆ; ಉತ್ತರಕ್ರಿಯೆ.

ಕ್ರಿಸ್ತ ಯೇಸುಕ್ರಿಸ್ತನು. ಈತನು ಆಸ್ಯಾವ್ಯೈನರಿನಲ್ಲಿ ಹಿಬ್ರೂ ಜನರಲ್ಲಿ ಹುಟ್ಟಿದನು. ಇವನ ತಾಯಿ ಮೇರಿ. ಇವನು ಕ್ರಿಸ್ತಿಯನ್ ಮತ ತತ್ವಗಳನ್ನು ಮೂಲದಲ್ಲಿ ಸಾರಿದವನು.

—ಶಕ ಕ್ರಿಸ್ತನ ಕಾಲದಿಂದ ವರ್ಷಗಳನ್ನು ಎಣಿಕೆ ಮಾಡುವ ಪದ್ಧತಿ.

ಕ್ರೀಡಾ (ಕ್ರೀಡೆ) ಆಟ, ವಿನೋದ; ವಿಲಾಸ.

—ಇಸು ಆಡು, ಆಟವಾಡು; ರಮಿಸು.

—ಕುಳಿ ಆಡುವ ಕೊಳ.

—ಗೃಹ ಆಡುವ ಮನೆ; ಕೇಳಿಗೃಹ.

—ವನ ಉಪವನ, ಆಡುವ ತೋಟ.

ಕ್ರೀತ ಕೊಂಡ, ಬೆಲೆಗೆ ಕೊಂಡ; ಹುಡುಗ.

ಕ್ರುದ್ಧ ಕುಪಿತನಾದ, ಸಿಟ್ಟಾದ; ನೊಂದ.

ಕ್ರುಂಚು ಕ್ರೌಂಚಪಕ್ಷಿ, ಕೊಂಚೆ, ಕೀಚುಗ.

ಕ್ರೂರ ಅಸಂಸ್ಕೃತ; ಕಠಿಣ, ಕರುಣೆಯಿಲ್ಲದ; ಒರಟ; ಹರಿತ; ಅನ್ನ.

—ಕರ್ಮಿ ಕೆಟ್ಟ ಕೆಲಸ ಮಾಡುವವ.

—ಗ್ರಾಹ್ಯ ಚಾಡಿಗೆ ಕಿವಿ ಕೊಡುವವ.

ಕ್ರೇಣಿ(ಸಂ)ಕೇಣಿ(ದ್ಭ), ವ್ಯಾಪಾರ, ಕೊಡು–ಕೊಳ್ಳುವಿಕೆ.

ಕ್ರೇಯ ಕೊಳ್ಳಬಹುದಾದ್ದು.

ಕ್ರೋಡ ಎದೆ; ಹೃದಯ; ಶನಿಗ್ರಹ; ವರಾಹ.

ಕ್ರೋಡೀಕರಣ ಅಪ್ಪುವಿಕೆ;ಸಂಗ್ರಹಿಸುವಿಕೆ.

ಕ್ರೋಧ ಸಿಟ್ಟು, ಮುನಿಸು; ಚಲವಾಗಿ ಬೆಳೆಸಿದ ಕೋಪ.

ಕ್ರೋಧಿ ಸಿಟ್ಟಾದವ, ಮುನಿಸುಗೊಂಡಾತ; ಅರವತ್ತು ಸಂವತ್ಸರಗಳಲ್ಲಿ 38ನೆಯದು.

ಕ್ರೋಶ ಕೂಗು, ಕಿರಿಚು; ಪ್ರಸಂಗ; ಹರಿದಾರಿ.

ಕ್ರೌಂಚ ಕೊಕ್ಕರೆ ಜಾತಿಯ ಹಕ್ಕಿ; ಹಿಮಾಲಯದ ಒಂದು ಪರ್ವತ ಪ್ರದೇಶ; ಒಂದು ಭೂಖಂಡ.

ಕ್ರೌಂಚಾರಿ ಕ್ರೌಂಚ ಬೆಟ್ಟವನ್ನು ಸೀಳಿದವ, ಶಿವನ ಮಗ ಸ್ಕಂದ.

ಕ್ಲಿಪ್ತ ನಿಶ್ಚಿತ, ಗೊತ್ತುಮಾಡಿದ.

ಕ್ಲಿಷ್ಟ ಕಷ್ಟವಾದ, ಕಠಿಣವಾದ, ಬಿಗಿಯಾದ.

ಕ್ಲೀವ (ಕ್ಲೀಬ) ನಪುಂಸಕ; ಕ್ಲೇಶ ತರುವ.

ಕ್ಲೇಶ ದುಃಖ, ಸಂಕಟ, ವ್ಯಥೆ; ನೋವು.

ಕ್ವಚಿತ್ ಒಮ್ಮೊಮ್ಮೆ; ಎಲ್ಲಿಯೋ; ರಹಸ್ಯವಾಗಿ; ಸ್ವಲ್ಪ.

ಕ್ಷಣ (ಚಣ) ಅತಿ ಬೇಗ; ವಿರಾಮ; ಅವಕಾಶ; ಉದ್ಯೋಗ; ಉತ್ಸಾಹ.

—ನ ಕೊಲ್ಲುವಿಕೆ.

—ಭಂಗುರ ಬೇಗ ಸಾಯುವ; ಈಗಿದ್ದು ಇಲ್ಲದಾಗುವ, ಚಂಚಲವಾದ.

ಕ್ಷಣಲಕ್ಷ್ಮಣೆ ಮಿಂಚು.

ಕ್ಷಣಾರ್ಧ ಅರೆ ನಿಮಿಷ, ಅರೆಚಣ.

ಕ್ಷಣಿಕ ಚಂಚಲ, ತೀವ್ರ, ನಶಿಸುವ.

ಕ್ಷಣಿಕೆ ಕ್ಷಣದಲ್ಲಿ ಕಾಣಿಸಿಹೋಗುವ, ಮಿಂಚು.

ಕ್ಷತ ಒಡೆದ; ಗಾಯಗೊಂಡ.

ಕ್ಷತವ್ರತ ನೋತು ಮುರಿದವ; ದೀಕ್ಷೆ ಮುರಿದವ, ಕಟ್ಟು ಮೀರಿದವ.

ಕ್ಷತ್ರ ಕ್ಷತ್ರಿಯ ಕುಲದವ, ನಾಲ್ಕು ವರ್ಣಗಳಲ್ಲಿ ಎರಡನೆಯ ಗುಂಪು.

ಕ್ಷತ್ರಿಯ (ಕ್ಷತ್ರ).

ಕ್ಷಪಣ ಶ್ರಮಣ, ನಾಶವಾಗುವ; ಜಿನ ಇಲ್ಲವೆ ಬುದ್ಧ ಬಿಕ್ಕು.

ಕ್ಷಮಾ (ಕ್ಷಮೆ) ಶಾಂತಿ; ಸಹನೆ, ತಾಳ್ಮೆ.

—ಇಸು ಸಹಿಸು, ಮನ್ನಿಸು, ತಾಳ್ಮೆದೋರು, ತಾಳು.

—ಪಣೆ ಮನ್ನಿಸುವಿಕೆ; ಅಪರಾಧವನ್ನು ಮರೆಯುವಿಕೆ.

ಕ್ಷಯ ಕಡಮೆಯಾಗುವಿಕೆ, ಹಾನಿ, ನಷ್ಟ; ಮನೆ; ಕೊನೆಯ ಸಂವತ್ಸರ; ಒಂದು ಬೇನೆ.

—ಇಸು ನಾಶವಾಗು, ಹಾಳಾಗು; ಕ್ಷೀಣವಾಗು.

ಕ್ಷಾತ್ರ ಕ್ಷತ್ರಿಯನಿಗೆ ಯೋಗ್ಯವಾದ ಗುಣ, ಪರಾಕ್ರಮ, ಶೌರ್ಯ, ಪೌರುಷ, ಎದೆಗಾರಿಕೆ.

ಕ್ಷಾಮ ಬರಗಾಲ; ಮಳೆಯಿಲ್ಲದೆ ಸಸ್ಯಗಳಿಗೆ ಬರುವ ಕ್ಷೋಭೆ.

ಕ್ಷಾರ ಕಾರ (ಧ್ವ), ಒಂದು ಜಾತಿಯ ಲವಣ; ಆಮ್ಲವೂ ಒಂದು ಲೋಹವೂ ಸೇರಿ ಆದುದು; ಕಟು ನುಡಿ.

ಕ್ಷಾಲನ ತೊಳೆಯುವುದು.

ಕ್ಷಿತ ಹಾಳಾದ; ಕ್ಷೀಣಿಸಿದ, ಕಡಮೆಯಾದ; ಸವೆದ.

ಕ್ಷಿತಿ ಭೂಮಿ; ಮನೆ, ನಿವಾಸ.

—ಜ ಭೂಮಿಯಲ್ಲಿ ಹುಟ್ಟಿದುದು, ಮರ.

—ಪ ಭೂಮಿಯ ಒಡೆಯ, ಅರಸು.

ಕ್ಷಿತಿಧರ ಭೂಮಿಯನ್ನು ಧರಿಸುವುದು; ಪರ್ವತ.

ಕ್ಷಿತಿವಧು ಭೂಲಕ್ಷ್ಮಿ, ಭೂದೇವಿ.

ಕ್ಷಿಪ್ತ ತಿರಸ್ಕೃತ, ಎಸೆದ, ಬಗೆದ; ಕಳುಹಿದ.

ಕ್ಷಿಪ್ರ ತೀವ್ರ, ತತ್‌ಕ್ಷಣ, ಕೂಡಲೆ; ಬೇಗನೆ.

ಕ್ಷೀಣ ಸವೆದ; ಕಡಮೆಯಾದ; ನಾಶವಾದ; ತೆಳ್ಳಗಿನ; ದುರ್ಬಲವಾದ, ತ್ರಾಣಗೆಟ್ಟ.

ಕ್ಷೀಬ ಮತ್ತ, ಕುಡಿದು ಅಮಲೇರಿದ.

ಕ್ಷೀರ ಹಾಲು; ಮುಗಿಲು.

—ಆಗಾರ(ಸಂ) ಕೀಲಾರ(ದ್ಭ), ಹಾಲಿನ ಮನೆ.

—ದೋಹನ ಕರಾನೆ, ಹಾಲು ಇಳಿಸುವಿಕೆ; ಹಾಲು ಹಿಂಡುವಿಕೆ.

ಕ್ಷೀರಸಮುದ್ರ ಹಾಲಿನ ಕಡಲು.

ಕ್ಷುಣ್ಣ ಪುಡಿಯಾದ; ನುರಿತ, ಜಜ್ಜಿದ.

ಕ್ಷುದ್ಬಾಧೆ ಹಸಿವು.

ಕ್ಷುದ್ರ ಕಡಮೆ; ಹೀನ, ಅಲ್ಪ; ಬಡ; ದುಷ್ಟ; ಬಿಸಿಲು; ತುಂಬಿ; ಇರುವೆ.

—ಗಾರ ನಿಂದೆ ಹೇಳುವವ, ನಿಂದಕ.

ಕ್ಷುದ್ರಾಂಡ ಪುಟ್ಟ ತತ್ತಿಯಲ್ಲಿ ಜನಿಸಿದ.

ಕ್ಷುಧೆ ಹಸಿವು.

ಕ್ಷುರ ಬಾಳು; ಕ್ಷೌರ; ಗೊರಸು.

ಕ್ಷುರಿ ನಾಪಿತ, ನಾಯಿಂದ, ಕ್ಷೌರಕ, ಕೆಲಸಿಗ, ಕಷ್ಪದವ.

ಕ್ಷುಲ್ಲಕ ಸಣ್ಣ; ದರಿದ್ರ; ಅಲ್ಪ, ಕೀಳ.

ಕ್ಷೇತ್ರ(ಯಾತ್ರಾ)ಸ್ಥಳ; ಹೊಲ, ಗದ್ದೆ; ಪ್ರದೇಶ; ಶರೀರ; ಹೆಂಡತಿ.

—ಜ ಹೆಂಡತಿಯಲ್ಲಿ ಹುಟ್ಟದ ಮಗ; ತಂದೆಯ ಅಧಿಕಾರಿ.

—ಜ್ಞ ಬಲ್ಲವ, ಚತುರ; ಆತ್ಮಜ್ಞ.

ಕ್ಷೇತ್ರಪಾಲ ಹೊಲ ಕಾಯುವವನ; ಭೈರವ.

ಕ್ಷೇತ್ರಫಲ ವಿಸ್ತೀರ್ಣ; ಒಂದು ಕಾರ್ಯದ ಫಲಿತ.

ಕ್ಷೇಪಣ ಎಸೆಯುವುದು; ಕಳುಹುವುದು.

ಕ್ಷೇಮ ಸುಖದಾಯಕ; ಮನೆ; ಆಲಿಂಗನ; ಒಂದು ಸುಗಂಧ.

ಕ್ಷೋಣಿ ಭೂಮಿ; ಹೊಲ.

—ಪ ಕ್ಷಿತಿಪತಿ, ಅರಸು.

ಕ್ಷೋದ ಮರ್ದಿಸುವುದು, ಅರೆಯುವುದು; ಪುಡಿ, ದೂಳು; ತಳಮಳ.

ಕ್ಷೋಭ (ಕ್ಷೋಭೆ) ಕುಲುಕುವಿಕೆ; ಕಂಪನ; ಭೀತಿ; ಉದ್ವೇಗ.

ಕ್ಷೋಭಿತ ಭೀತ, ಬೆದರಿದ; ನಡುಗಿದ.

ಕ್ಷೌಮ ಪೀತಾಂಬರ, ರೇಶ್ಮೆ ಬಟ್ಟೆ; ಪಟ್ಟವಾಳಿ.

ಕ್ಷೌರ ಕೂದಲು ಕೆರೆಯುವಿಕೆ, ಚೌಲ.

—ಕ ನಾಯಿಂದ, ನಾಪಿತ, ಕೆಲಸಿಗ.

—ಗೃಹ ಕ್ಷೌರ ಮಾಡುವ ಸ್ಥಳ.

ಕ್ಷ್ಮಾಣಿತ ಹರಿತ ಮಾಡಿದ.

ಕ್ಷ್ವೇಡ ವಿಷ, ನಂಜು.

## ಖ

ಖ ಆಕಾಶ; ಇಂದ್ರಿಯ; ಮನಸ್ಸು; ಬ್ರಹ್ಮ; ಸ್ವರ್ಗ; ಅರ್ಗಲ.

ಖಗ ವಾಯುವಿನಲ್ಲಿ ಚಲಿಸುವ, ಹಕ್ಕಿ; ಬಾಣ; ಅಮರ; ಸೂರ್ಯ; ಪತಂಗ.

—ಈಶ್ವರ ಗರುಡ.

—ಗತಿ ಪಕ್ಷಿಗಳ ಚಲನೆ, ಹಾರಾಟ.

—ತ್ವ ಹಾರಾಟ, ಗಗನದಲ್ಲಿ ಸಂಚರಿಸುವಿಕೆ.

—ಪ (ಪತಿ) ಪಕ್ಷಿಗಳಿಗೊಡೆಯ, ಗರುಡ.

ಖಗೋಲ ನಭೋಮಂಡಲಕ್ಕೆ ಸಂಬಂಧಿಸಿದ್ದು; ವಿಶ್ವದ ಯಾವತ್ತು ಗ್ರಹ, ತಾರೆಗಳಿಗೆ ಸಂಬಂಧಿಸಿದ ಶಾಸ್ತ್ರ.

ಖಚರ (ಖೇಚರ) ವಾಯುಮಂಡಲದಲ್ಲಿ ಚಲಿಸುವ—ಬಾಣ; ಹಕ್ಕಿ; ಗಂಧರ್ವ; ಸೂರ್ಯ; ವಾಯು; ಗ್ರಹ.

ಖಚಿತ ಬಂಧಿತ, ಸಿಕ್ಕಿಸಿದ, ತೊಡಕಿಸಿದ; ನಿಶ್ಚಿತ, ಖಂಡಿತ; ಬಿಗಿದ.

ಖಜಕ (ಖಚರ) ಮೇಲುಗಟ್ಟು.

ಖಜಾನೆ ಕೋಶ; ಹಣವಿರುವ ಮನೆ.

ಖಜಾನ್ಜಿ ಹಣದ ಯಜಮಾನ, ಕೋಶಾಧಿಕಾರಿ.

ಖಟ ಹುಲ್ಲು; ಕೊಡಲಿ; ಕಫ; ನೇಗಿಲು.

ಖಟಿಕೆ (ಖಡಿಕೆ) ಸೀಮೆಸುಣ್ಣ, ಚೋಕು, ಮಟ್ಟ, ಖಡು.

ಖಟ್ಟಿಕೆ ಕಸಾಯಿಯವ, ಕಡಿಕ; ಮುದ್ಗರ; ತಲೆಯೋಡು, ತಲೆಪರಟೆ.

ಖಟ್ವೆ ಮಂಚ; ಉಯ್ಯಾಲೆ.

ಖಟ್ವಾಂಗ ಒಬ್ಬ ಅರಸು; ಮನುಷ್ಯನ ಅಸ್ಥಿಪಂಜರ; ಮಂಚದ ಕಾಲು.

ಖಡ ವಿಂಗಡ; ಹುಲ್ಲು.

ಖಡಾಖಡಿ (ಖಡ್ಗಾಖಡ್ಗಿ) ಕತ್ತಿಕತ್ತಿಯಿಂದ ಕಾದಾಟ; ಖಂಡುತುಂಡ.

ಖಡ್ಗ (ಕಡುಗ) ಕತ್ತಿ; ಖಡ್ಗಮೃಗ, ಗಂಡಮೃಗ.

ಖಡ್ಗಪಿಧಾನ ಒರೆ.

ಖಡ್ಗ:ಮೃಗ ನೇಪಾಲದಲ್ಲಿ ಸಿಗುವ ಮೂಗಿನ ಮೇಲೆ ಕೊಂಬಿರುವ ಒಂದು ಮೃಗ, ಗಂಡಮೃಗ, ಗಂಡಕ.

ಖಡ್ಗಹಸ್ತ ಭೈರವ.

ಖಡ್ಗಿ ಆಯುಧಪಾಣಿ.

ಖಣಿಗುಟ್ಟು ಖಣಿ ಖಣಿ ಎಂದು ಲೋಹದ ಸದ್ದುಮಾಡು; ಆಯುಧಗಳ ಬಡಿತದಿಂದ ಶಬ್ದಹುಟ್ಟಿಸು.

ಖತಮಾಲೆ ಮುಗಿಲು; ಹೊಗೆ.

ಖತಿ (ಕತಿ) ಖಾತಿ, ಸಿಟ್ಟು.

ಖದಿರ ಕಾಚಿನ ಗಿಡ, ಕದಿರೆ ಮರ.

ಖದ್ಯೋತ ಮಿಣುಕು ಹುಳ, ಹೊನ್ನಿ ಹುಳ, ಮಿಂಚು ಹುಳ, ಗುಂಗೀ ಹುಳ; ಸೂರ್ಯ.

ಖನಕ ಅಗೆತಮಾಡುವವ; ಹೆಗ್ಗಣ; ಕನ್ನಗಳ್ಳ.

ಖನನ ಅಗೆತ; ಹೂಳುವಿಕೆ.

ಖನಿ (ಸಂ) ಖಣಿ, ಆಗರ; ಆಣೆ; ಧಾತು ರತ್ನ ಮೊದಲಾದುವು ಹುಟ್ಟುವ ಸ್ಥಾನ.

—ಜ ಅದುರು, ಗನಿಯಲ್ಲಿ ದೊರೆಯುವ ಅಶುದ್ಧ ವಸ್ತು.

—ತ್ರ ನೆಲವನ್ನು ಅಗೆಯುವ ಸಾಧನ, ಗುದ್ದಲಿ, ಪಿಕ್ಕಾಸು.

ಖಪ್ರವಾಹ ಆಕಾಶಗಂಗೆ, ದುಗ್ಧಪಥ.

ಖಯ ಖೋಡಿ; ದಾಕ್ಷಿಣ್ಯ.

ಖರ ಕಠಿಣ, ಒರಟ, ಹರಿತ; ಕತ್ತೆ; ಒಬ್ಬ ರಾಕ್ಷಸ; ಮುಳ್ಳುಳ್ಳ ಮರ.

—ವೈರಿ ಖರಾಸುರನನ್ನು ಕೊಂದನ, ಖರಾರಿ, ರಾಮ.

ಖರಕರ ತೀಕ್ಷ್ಣ ಕಿರಣವುಳ್ಳುದು, ಸೂರ್ಯ.

ಖರೀದಿ ಕೊಳ್ಳುವಿಕೆ; ಬೆಲೆ; ಬೆಲೆ ಕಟ್ಟಿಕೊಳ್ಳುವಿಕೆ.

ಖರೆ ನಿಶ್ಚಯ, ಸಹಜ.

ಖರ್ಚು (ಕರ್ಚು) ವೆಚ್ಚ, ವ್ಯಯ.

—ದಾರ (ಗಾರ) ವೆಚ್ಚಮಾಡುವವ; ದುಂದುಗಾರ.

ಖರ್ಜೂರ (ಕಜ್ಜೂರ) ಒಂದು ಹಣ್ಣು; ಉತ್ತುತ್ತಿ; ಬೆಳ್ಳಿ, ತವರ.

ಖರ್ಪರ ತಲೆಯೋಡು, ಚಿಪ್ಪು; ತಲೆಪರಟೆ; ಕಮಂಡಲು; ಕೊಡೆ; ಕುಳ್ಳ.

ಖರ್ವ ಮುರಿದ; ತಗ್ಗಾದ; 100,000 ಲಕ್ಷ; ಕುಬ್ಜ, ಕುಳ್ಳ.

ಖರ್ವಡ (ಖರ್ವಟ) ಬೆಟ್ಟ ಅಥವಾ ನದಿ ಬಳಿಯ ಗ್ರಾಮ.

ಖಲ (ಕಳ) ನೀಚ, ಘಟಿಂಗ; ಕೀಳು ಮನಸ್ಸು; ಅಂಗಳ, ಕಣ; ಮಡ್ಡು, ಗಸಿ; ಕೆಸರು; ಒರಳು; ಯುದ್ಧ.

ಖಲಂದರ ಮಹಮ್ಮದೀಯ.

ಖಲಿನಿ ಕಾಳು ಬಡಿಯುವ ಅಂಗಳ.

ಖಲೀನ ಕಡಿವಾಣ.

ಖಲು ತಿಳಿವು; ನಿಶ್ಚಯ; ಅನುಮಾನಗಳಿಂದ ಕೂಡಿದ.

ಖಳಿಲೆ ಕರ್ಕಶ ಧ್ವನಿಯಿಂದ; ಗಟ್ಟಿಯಾಗಿ.
ಖಳ್ಗ (ಖಡ್ಗ).
ಖಂಕರ ಕುರುಳು, ತಲೆಗೂದಲು.
ಖಂಕರಿ ಕುರುಳುಳ್ಳ.
ಖಂಜ ವೋಟುಗಾಲಿನವ; ಕುಂಟ.
ಖಂಜನ ಮಡಿವಾಳ ಹಕ್ಕಿ, ಗೌಜುಗ.
—ಅಕ್ಷಿ ಮಡಿವಾಳ ಹಕ್ಕಿ ಆಕಾರದ ಕಣ್ಣುಳ್ಳವಳು.
ಖಂಜರಿ ಒಂದು ಚರ್ಮವಾದ್ಯ.
ಖಂಡ (ಕಂಡ) ತುಂಡಾದ; ಅಂಶ, ಭಾಗ; ವಿಶಾಲ ಭೂಭಾಗ; ತಿರುಳು; ಅರ್ಧಚಂದ್ರ.
—ನ ತುಂಡುಮಾಡುವುದು; ವಿರೋಧಿಸುವುದು; ಸೋಲಿಸುವುದು.
ಖಂಡಣೆ (ಖಂಡನ).
ಖಂಡಪರಶು ಕೊಡಲಿಯಿಂದ ಕಡಿಯುವವ, ಪರಶುರಾಮ; ಪರಶು ಎಂಬ ರಾಕ್ಷಸನನ್ನು ಕೊಂದವ, ಗಣೇಶ; ಶಿವ.
ಖಂಡಮಾಣಿಕ್ಯ ಕೆಂಪಿನ ತುಂಡು; ರತ್ನದ ತುಣುಕು; ಕೆಂಪು ಕಮಲ.
ಖಂಡಶಶಿ ಅರ್ಧ ಚಂದ್ರ.
—ಧರ ಅರ್ಧೇಂದುಧರ, ಶಿವ.
ಖಂಡಿ ಕಿಂಡಿ; ಕೋಟೆಯ ಕಿರುದಾರಿ; ೨೦ ಮಣಗಳ ತೂಕ.
ಖಂಡಿಕ ಬಟ್ಟಗಡಲೆ, ನೆಲಗಡಲೆ.
ಖಂಡಿತ (ಕಂಡಿತ) ತುಂಡಾದ; ನಾಶವಾದ; ಪ್ರತಿಭಟಸಲ್ಪಟ್ಟ; ನಿಶ್ಚಿತ.
ಖಂಡೆಯ ಕತ್ತಿ, ಖಡ್ಗ.
ಖಂಡೋಬಾ ಶಿವನ ಒಂದು ಅವತಾರ, ಮಲ್ಲಾರಿ.
ಖಾಡ ಖಡ್ಗ.
ಖಾಡಾಖಾಡಿ ಪರಸ್ಪರ ಖಡ್ಗದಿಂದ ಕಾದಾಡುವ ಯುದ್ಧ.
ಖಾಣ ಹುಲ್ಲು, ಮೇವು.
ಖಾತ ಕೆರೆ; ಅಗೆದ ಕುಣಿ.
ಖಾತಕ (ಸಂ) ಗಾರಿಗೆ (ಧ್ಭ), ಪರಿಘೆ, ಕಂದಕ, ಅಗಳ್ತೆ.
ಖಾತಿ ಕೋಪ, ಸಿಟ್ಟು.
ಖಾತೆ ಕೃತಕ ಕೊಳ; ದಿನದ ಊಳಿಗ, ಲೆಕ್ಕ; ಇಲಾಖೆ.
ಖಾದನ ಜಗಿಯುವಿಕೆ, ತಿನ್ನುವುದು; ಆಹಾರ.
ಖಾದ್ಯ ತಿನ್ನುವ ಪದಾರ್ಥ, ತಿನಿಸು.
ಖಾನ ನಾಯಕ; ಅರಸು.
ಖಾಮುಖಾ ನಿಶ್ಚಯವಾಗಿ, ಖಂಡಿತವಾಗಿ.
ಖಾಸಾ ಸ್ವಂತ, ತನ್ನದೇ ಆದ.
ಖಾಂಡವ (ಕಾಂಡವ) ಸರಸ್ವತೀ ದೃಷದ್ವತೀ ನದಿಗಳ ಮೂಡಣಕ್ಕಿದ್ದ ಒಂದು ವನ.
ಖಾಂಡವಪ್ರಸ್ಥ (ಕಾಂಡವಪ್ರಸ್ಥ).
ಖಿನ್ನ ದುಃಖ; ಕುಗ್ಗಿದ; ನೊಂದ, ವ್ಯಥಿತ.
ಖಿಲ ಬಂಜರುಭೂಮಿ; ಕಳಚಿದ; ಉಳಿದ, ತಿಲ್ಲು; ಶೂನ್ಯ; ವ್ಯರ್ಥ; ಪ್ರಯೋಗದಲ್ಲಿಲ್ಲದ ಗ್ರಂಥಭಾಗ ಇಲ್ಲವೆ ಗ್ರಂಥದ ಅಂಶ.
ಖುದ (ಖುದಾ) ದೇವರು.
ಖುದ್ದು ತಾನಾಗಿ.
ಖುರ ಗೊರಸು, ಕೊಳಗ.
ಖುರ್ನೀಸು ನಮಸ್ಕಾರ, ವಂದನೆ.
ಖುಲಾಸೆ ವೈಶಾಲ್ಯ; ಸ್ವಾತಂತ್ರ್ಯ; ಸ್ವಚ್ಛ; ಮುಗಿಸುವುದು, ಬಿಡುಗಡೆ.
ಖುಲ್ಲ ತೆರೆದ; ಚಿಕ್ಕ; ನೀಚ; ಸಿಟ್ಟು, ಮುನಿಸು.
—ತನ ನೀಚತನ.
ಖೂನ್ ಗುರುತು, ಪರಿಚಯ; ಪತ್ತೆ.
ಖೂನಿ ಕೊಲೆ.
ಖೇಚರ ಆಕಾಶದಲ್ಲಿ ಅಲೆಯುವ, ಪಕ್ಷಿ; ಗಂಧರ್ವ; ಗ್ರಹ.
ಖೇಟ ಹಳ್ಳಿ; ತೊಪ್ಪಲು, ಸಾನುಭೂಮಿ; ಗುರಾಣಿ; ಬೇಟೆ; ಕಫ.
—ಕ ಹಳ್ಳಿ; ಗುರಾಣಿ, ಡಾಲು.

—ನ ಬೇಟೆ.
ಖೇಡ (ಖೇಟ) ದಿಗಿಲು; ಗ್ರಾಮ.
—ತನ ಗಾಬರಿ, ಭಯ, ದಿಗಿಲು.
ಖೇಡಾಕುಳಿ ಅಟ್ಟ; ತಗ್ಗುಭೂಮಿ.
ಖೇಡೆಯ ಅಡ್ಡಣ, ಗುರಾಣಿ; ಚರ್ಮ.
ಖೇಡ್ಯ ಕೆಡ್ಡ, ಆನೆಹಿಡಿವ ಕರ್ಪು.
ಖೇದ ದುಃಖ, ಶೋಕ.
ಖೇಲ (ಖೇಳ) ಆಟ.
ಖೇಲಮೇಲ ಜತೆಯಲ್ಲಿ ವಿಹರಿಸುವುದು.
ಖೋಜಾ ಕೊಜ್ಜೆ; ಮುಸಲ್ಮಾನರಲ್ಲಿನ ಒಂದು ಪಂಗಡ; ನಪುಂಸಕ.
ಖೋಡ ಕುಂಟುವಿಕೆ.
ಖೋಡಿ ನೀಚ, ಹೀನ; ತಪ್ಪು; ನೀಚಸ್ವಭಾವಿ; ಹೀನಶೀಲ; ಕೊರತೆ.
—ತನ ಕೆಡುಬುದ್ಧಿ; ನೀಚತ್ವ; ಹೀನಸ್ಥಿತಿ.
ಖೋಲಿ ಒರೆ; ಕೋಣೆ.
ಖ್ಯಾತ ತಿಳಿದ; ಹೇಳಲ್ಪಟ್ಟ; ಹೆಸರಾದ, ಪ್ರಸಿದ್ಧವಾದ.
—ಕ ಹೆಸರಾದವ, ಮಹಾಶೂರನೆಂದು ಹೆಸರಾದವ.
—ಯಶ ಅತಿ ಪ್ರಸಿದ್ಧ.
ಖ್ಯಾತಿ ಕೀರ್ತಿ, ಗೌರವ; ಹೊಗಳಿಕೆ.

## ಗ

ಗಕ್ಕನೆ ಗಳ್ಕನೆ, ಪಕ್ಕನೆ, ಒಮ್ಮೆಗೇ.
ಗಕ್ಕು ಒಂದು ಜಾತಿಯ ಕೊಕ್ಕರೆ.
—ಪಾಡು ಅಕಸ್ಮಾತ್, ಪಕ್ಕನೆ.
ಗಗನ ಆಕಾಶ, ವಾತಾವರಣ; ಶೂನ್ಯ.
—ಅಂಗಣ ಆಕಾಶ, ನಭೋಮಂಡಲ, ಬಾನು.
—ಚರ ಆಕಾಶದಲ್ಲಿ ಚಲಿಸುವವ.
ಗಗನಚಾಪ ಕಾಮನಬಿಲ್ಲು, ಮಳೆಬಿಲ್ಲು.
ಗಗನದರಳು ಆಕಾಶದ ಹೂ; ಅಸಾಧ್ಯ ವಾದ ಸಂಗತಿ; ಇಲ್ಲದ ಸಂಗತಿ.
ಗಗನಮಣಿ ಸೂರ್ಯ, ದಿನಮಣಿ.
ಗಗ್ಗರ (ಗಗ್ಗರಿ) ಕಾಲಿನ ಕಡಗ, ಸದ್ದುಮಾಡುವ ಕಾಲಿನ ಬೆಳ್ಳಿಯ ಒಂದು ಆಭರಣ; ಕೈಯಲ್ಲಿ ಹಿಡಿದು ಅಲುಗಾಡಿಸಲು ಗರ ಗರ ಸದ್ದು ಆಗುವ ಒಂದು ಸಾಧನ.
ಗಚ್ಚು ನೆಲ ಇಲ್ಲವೆ ಗೋಡೆಗೆ ಹಾಕುವ ಸುಣ್ಣದ ಗಾರೆ; ಸುಣ್ಣ ಇಲ್ಲವೆ ಸಿಮೆಂಟು ಗಳ ಮೆತ್ತುಗೆ.
ಗಜ ಆನೆ; ಒಬ್ಬ ರಾಕ್ಷಸನ ಹೆಸರು; ಒಂದು ಮರ; 3 ಅಡಿ ಉದ್ದ.
—ತೆ ಆನೆಗಳ ಗುಂಪು.
—ದಂತ ಆನೆದಾಡೆ; ಗಣಪತಿ.
—ದಾನ ಆನೆಯನ್ನು ದಾನಮಾಡುವುದು; ಆನೆಯ ಮದಜಲ.
ಗಜಕರ್ಣ ದದ್ರು, ದದ್ದು, ಹುಳುಕಜ್ಜಿ.
ಗಜಗ ಒಬ್ಬ ಕನ್ನಡ ಮಹಾಕವಿ.
ಗಜಗಮನ ಮೆಲುನಡೆ, ಆನೆಯಂತೆ ನಡಿಗೆ.
ಗಜಗಲಸು ಪ್ರಕಾಶಿಸು, ಪ್ರಜ್ವಲಿಸು.
ಗಜಗಾಮಿನಿ ಆನೆಯಂತೆ ನಡಿಗೆಯವಳು.
ಗಜಬಿಜಿ (ಗಜಬಜಿ) ಗದ್ದಲ, ಕೋಲಾಹಲ; ಸಂತೆ ಕೂಗು.
—ಇಸು ಗುಜುಗುಂಪಲು ಮಾಡು; ರಹಸ್ಯ ಮಾತಾಡು; ಗದ್ದಲುಮಾಡು.
ಗಜರಗಳೆ ಹಾಳುಹರಟೆ; ತಲೆಬುಡವಿಲ್ಲದ ಮಾತು.
ಗಜರು ಗದರಿಸು, ಬಯ್ಯು; ಗರ್ಜಿಸು; ಉದುರು.
ಗಜವದನ ಗಜಮುಖ, ಆನೆ ಮುಖವುಳ್ಳವ, ಗಣಪ.
ಗಜಾರಿ ಆನೆಯ ವೈರಿ; ಶಿವ; ಸಿಂಹ.

ಗಜಾಲು ಗದ್ದಲು, ಗುಲ್ಲು; ಗಟ್ಟಮಾತು.
ಗಜುಗ (ಗಜ್ಜುಗ) ಒಂದು ಜಾತಿಯ ಬೀಳಿ ನಲ್ಲಾಗುವ ಬೀಜ; ಕಣ್ಣಿಗೆ ಬರುವ ಹೂ.
ಗಜೆ (ಗದೆ).
ಗಜ್ಜಿ (ಕಜ್ಜಿ).
ಗಜ್ಜು ಕೊಚ್ಚೆ ನೀರು, ರಾಡಿ ನೀರು.
ಗಟ (ಘಟ).
ಗಟ್ಟ(ಘಟ್ಟ), ಪರ್ವತಾವಳಿ; ಸ್ನಾನದ ದಂಡೆ.
ಗಟ್ಟಣೆ ಗಟ್ಟಸುವಿಕೆ; ಗಟ್ಟಿಯಾಗಿ ಕುಟ್ಟು ವಿಕೆ, ಹೊಡೆತ.
ಗಟ್ಟಿ ಸ್ಥಿರ; ಕಠಿಣ; ಶಕ್ತಿ, ಬಲ; ಬಾಳಿಕೆ.
—ಗ ಬುದ್ಧಿವಂತ, ಚತುರ; ಬಲಶಾಲಿ.
—ತನ ಬುದ್ಧಿವಂತಿಕೆ; ಚಾತುರ್ಯ, ಶೌರ್ಯ; ಕೌಶಲ, ಪಟುತ್ವ.
ಗಟ್ಟಿವಳ್ತಿ ಗಂಧ ತೇಯುವವಳು.
ಗಟ್ಟು (ಕಟ್ಟು), ದಡ, ತೀರ, ದಂಡೆ.
ಗಡ ಅಂತೆಯೆ; ಸಹಜವೆ; ನಿಶ್ಚಯವಾಗಿ; ಕಿಲ್ಲೆ, ದುರ್ಗ.
ಗಡಚು (ಗಡುಸು) ಕಠಿಣತೆ; ಬಿರುಸಾಗಿರು ವಿಕೆ; ಕೆಲಸಕ್ಕೆ ತುಂಬ ಕಷ್ಟವಾದುದು; ಭಾರತರವಾದ್ದು.
ಗಡಣ ಗುಂಪು, ರಾಶಿ, ಸಮೂಹ.
—ಇಸು ಸೇರು, ಸಮೂಹವಾಗು, ರಾಶಿ ಯಾಗು; ಅನುಕೂಲಿಸು.
—ಕೊಳ್ಳು ಲಕ್ಷಿಸು, ಎಣಿಕೆಗೆ ತರು.
ಗಡದ (ಗಡದು) ದಟ್ಟವಾದುದು; ಬಲವಾ ದುದು; ಜೋರಾದುದು; ಗಟ್ಟಿಯಾದುದು.
ಗಡಪು ಅಡಗುವಿಕೆ.
ಗಡಸು ಗಡಚು; ಗಂಡಸು.
ಗಡಂ ಆಶ್ಚರ್ಯವಾಚಕ ಪದ, ನಿಶ್ಚಯಾರ್ಥ.
ಗಡಂಗು ಸಾರಾಯಿ ಇಲ್ಲವೆ ಹೆಂಡ ಮಾರುವ ಮನೆ; ಅಂಗಡಿ, ಗೋದಾಮು, ದಾಸ್ತಾನಿನ ಉಗ್ರಾಣ.

ಗಡಾವಣೆ ಗದ್ದಲ, ಸಂಭ್ರಮ.
ಗಡಾಂ ಪಾರಂಗಿ, ಹಾರುಗೋಲು.
ಗಡಿ ಮಿತಿ, ಅವಧಿ, ಮೇರೆ; ಅಂತರ; ಕೋಟೆ.
ಗಡಿಗೆ ನೀರುತರುವ ಪಾತ್ರೆ, ಮಣ್ಣಿನ ಪಾತ್ರೆ.
ಗಡಿಬಿಡಿ (ಗಡಬಿಡಿ) ಅವಸರ; ಗದ್ದಲ, ಗೊಂದಲ; ಗಾಬರಿ, ಬೆದರಿಕೆ.
ಗಡಿಯಾರ ವಾಚು ಮೊದಲಾದ ಗಂಟೆ ತೋರಿಸುವ ಸಾಧನ.
ಗಡು ಅವಧಿ, ಮೇರೆ, ಹದ್ದು; ಕುರ; ಡುಬ್ಬ.
—ತರ ಕಠಿಣ, ಗಾತ್ರವಾದ.
ಗಡುಲ ಭುಜವುಳ್ಳ, ಹಿಣಿಲುಳ್ಳ, ಡುಬ್ಬವುಳ್ಳ.
ಗಡುಸು (ಗಡುಚು) ಬಿರುಸು; ಗಂಡುಸುತನ, ಕೆಚ್ಚು, ಕೊಬ್ಬು.
ಗಡೆ (ಗಣೆ) ಬಿದಿರಿನ ಕೋಲು; ಜಲ್ಲೆ, ಗಳ; ಸಾಟ, ಸಮತೆ; ನೀರು ಜಗ್ಗುವ ರಾಟ.
—ಕಾರ ದೋಣಿ ನಡಿಸುವವ; ಡೊಂಬ.
ಗಡ್ಡ ಗಲ್ಲದ ಮೇಲಿನ ಕೂದಲು; ಗದ್ದ.
ಗಡ್ಡೆ ಕಂದಮೂಲ; ರಾಶಿ, ಹೆಪ್ಪುಗಟ್ಟಿದ ವಸ್ತು; ನಡುಗಡ್ಡೆ, ಕುದುರು; ದಡ, ದಂಡೆ.
ಗಣ ಗಣಗಣ ಸದ್ದು; ಸಮೂಹ; ಪಡೆ, ಪಂಗಡ; ಶಿವನ ಹಿಂಬಾಲಿಗರು; ಸಂಖ್ಯೆ; ಒಂದು ಮಾತ್ರಾಸಮೂಹ.
—ಪ (ಗಣಪತಿ) ವಿನಾಯಕ, ಗಣೇಶ.
ಗಣಕ ಲೆಕ್ಕಬಲ್ಲವ; ಗಣಿತ ತಿಳಿದವ, ಶ್ಯಾನು ಭೋಗ; ಜೋಯಿಸ; ದೈವಜ್ಞ.
ಗಣಜಿಲೆ ಸೀತಾಳಿ; ಮೈಲಿಗೆ ರೋಗ.
ಗಣಜೆ ಜಿಂಕೆಯ ಜಾತಿಯ ಮೃಗ.
ಗಣತಿ ಎಣಿಕೆ, ಪರಿಗಣನೆ.
ಗಣದೇವತೆ ಗುಂಪಾಗಿರುವ ದೇವತಾ ವಿಶೇಷ; ಆದಿತ್ಯರು—ವಿಶ್ವರು—ವಸುಗಳು—ತುಷಿತರು—ಅಭಾಸ್ವರರು — ಅನಿಲರು—ಮಹಾರಾಜಿಕರು—ಸಾಧ್ಯರು—ರುದ್ರರು ಈ ದೇವಗಣಗಳು ಶಿವನ ಅನುಯಾಯಿ

ಗಳು. ಅವರಿಗೆ ಗಣೇಶನು ನಾಯಕ. ಕೈಲಾಸವು ಅವರ ನಿವಾಸ.

**ಗಣದ್ರವ್ಯ** ಹತ್ತು ಜನರ ಸಂಪತ್ತು, ಸಾರ್ವಜನಿಕ ಸಂಪತ್ತು.

**ಗಣನ** (ಗಣನೆ) ಎಣಿಕೆ; ಮಾನ್ಯತೆ.

—**ಅತೀತ** ಎಣಿಕೆಗೆಬಾರದಷ್ಟು; ವಿಶೇಷ, ವಿಪುಲ, ಅಪಾರ.

**ಗಣನಾಥ** ಪ್ರಮಥಗಳೆಂಬ ಗಣಗಳ ಒಡೆಯ, ಗಣೇಶ; ಶಿವ.

**ಗಣನೀಯ** ಎಣಿಕೆಗೆ ಬರುವ; ಮಾನ್ಯ, ವಂದ್ಯ.

**ಗಣಲು** (ಗಣಿಕೆ) ಬೆರಳುಗಂಟು, ಬೆತ್ತ, ಇಲ್ಲವೆ ಬಿದಿರಿನ ಗಂಟು, ಗಣ್ಣೆ.

**ಗಣಿ** (ನೋಡು: ಕಣಿ).

**ಗಣಿಕೆ** ಗಂಟು, ಬೆರಲಗಂಟು; ವೇಶ್ಯೆ, ಸೂಳೆ; ಹೆಣ್ಣಾನೆ; ಜಾಜಿ.

**ಗಣಿತ** ಲೆಕ್ಕ; ಜ್ಯೋತಿಷ.

—**ಜ್ಞ** ಲೆಕ್ಕ ಬಲ್ಲವ; ಜ್ಯೋತಿಷ್ಕ.

**ಗಣೆ** (ಗಡೆ), ಡೊಂಬನೇರುವ ಉನ್ನತ ಮರ; ದೋಣಿ ನಡೆಸುವ ಜಲ್ಲೆ.

—**ಗಾರ** ಡೊಂಬ; ದೋಣಿಕಾರ.

**ಗಣೇಶ** ಇವನು ಶಿವಪಾರ್ವತಿಯರ ಮಗನು. ಒಂದು ಕಥೆಯಲ್ಲಿ ಈತನು ಪಾರ್ವತಿಯ ಬೆವರಿನಿಂದ ಜನಿಸಿದನೆಂದೂ ಇದೆ. ಆತನಿಗೆ ಆನೆಯ ಮುಖವು ಕಾರಣಾಂತರಗಳಿಂದ ಬಂದಿತು. ಈತನು ಗಣಗಳ ಒಡೆಯ; ಅಲ್ಲದೆ ಎಲ್ಲ ವಿಘ್ನಗಳಿಗೂ ಒಡೆಯನು. ಯಾವ ಕೆಲಸಕ್ಕೂ ಮೊದಲು ಈತನನ್ನು ವಂದಿಸುವುದು ನಮ್ಮ ಸಾಂಪ್ರದಾಯ.

**ಗಣ್ಣ** ಹೊಲದ ಭಾಗ; ಗದ್ದೆ, ಹಾಳಿ.

**ಗಣ್ಣೆ** ಕಬ್ಬು ಬಿದಿರುಗಳ ಗಂಟು.

**ಗಣ್ಯ** ಗಣನೀಯ; ಗೌರವಾರ್ಹ; ಎಣಿಕೆಗೆ ತಕ್ಕುವ.

**ಗತ** ಆದ, ಕಳೆದ; ಹೋದ; ಗಮಿಸಿದ.

—**ಕಾಂತಿ** ನಷ್ಟವಾದ ಪ್ರಕಾಶ; ಕಳೆದ ವೈಭವ.

**ಗತಕ** ಘಾತುಕ (ಸಂ), ಮೋಸ, ಕಪಟ.

**ಗತಪ್ರತ್ಯಾಗತ** ಅನುಲೋಮ ವಿಲೋಮ; ಮೊದಲಿಂದ ಕೊನೆಗೆ.

**ಗತಾಗತ** ಬರುವುದು ಹೋಗುವುದು.

**ಗತಾನುಗತಿಕ** ಹಿಂದಿನವರು ಹೋದಂತೆ ಈಗ ಹೋಗುವ; ಪರಂಪರೆಯ.

**ಗತಾರ್ತವ** ಮುಟ್ಟು ನಿಂತವಳು; ತಾಯಿ ಆಗಲಾರದವಳು, ಬಂಜೆ, ಸುಗುಡಿ.

**ಗತಾಸು** ಗತಪ್ರಾಣ, ಅಸುಕಳೆದ, ಸತ್ತ, ಪ್ರಾಣಹೋದ.

**ಗತಿ** ಚಲನೆ, ನಡಿಗೆ; ಅಭಿವೃದ್ಧಿ, ಮುಂಬರಿಯುವಿಕೆ; ಭಂಗಿ; ಹಾದಿ; ಉಪಾಯ, ಆಶ್ರಯ; ಸ್ಥಿತಿ, ಅವಸ್ಥೆ; ತಿಳಿವು; ಪಾಪ; ಯಾತ್ರೆ.

—**ಕೆಡು** ಪದಭ್ರಷ್ಟನಾಗು; ಪ್ರಾಯಶ್ಚಿತ್ತವಿಲ್ಲದೆ ಹೋಗು; ಹೀನಾವಸ್ಥೆಗೆ ಬರು.

—**ಕೇಡಿ** ಕೆಟ್ಟವ; ಹಾಳಾದವ; ದರಿದ್ರ.

—**ಕೊಡು** ಹಾದಿ ಹಿಡಿ; ಒಳ್ಳೆಯ ಸ್ಥಿತಿಯನ್ನು ಕೊಡಿಸು.

—**ಭಂಗ** ಹಾದಿ ತಪ್ಪುವಿಕೆ.

—**ಲಂಘನ** ವಿಧಿಯನ್ನು ಮೀರುವುದು.

—**ವಿಹೀನ** ನಿರ್ಗತಿಕ, ದರಿದ್ರ; ಆಶ್ರಯವಿಲ್ಲದವ.

**ಗತ್ತು** ಕಾಲಾವಧಿ, ಲಯ; ಧೋರಣೆ, ಬಗೆ.

—**ಗಾರ** ಕಾಲಕ್ಕೆ ತಕ್ಕಂತೆ ನಡೆಯುವವ.

**ಗತ್ಯಂತರ** ಬೇರೆ ದಾರಿ; ಉಪಾಯ; ಅವಕಾಶ.

**ಗದ** ಮಾತು, ವಾಕ್ಯ; ರೋಗ; ವಿಷ; ಒಬ್ಬ ಯಾದವನ ಹೆಸರು.

**ಗದಕ** (ಧ್ಬ) ಕೃತಕ; ಕಪಟ.

**ಗದಕಿ** ಕಪಟ, ಮೋಸಗಾರ.

**ಗದಗದಿಸು** ನಡುಗು, ಕಂಪಿಸು.

**ಗದಗು** (ಗದುಗ) ಒಂದು ಊರು; ಇಲ್ಲಿ ಕುಮಾರವ್ಯಾಸನು ಕನ್ನಡ ಭಾರತವನ್ನು ರಚಿಸಿದನು.

**ಗದಡು** (ಕದಡು) ಕಲಕು; ಕಲಕಿದ ನೀರು.

**ಗದರು** (ಗಜರು) ಕೂಗು, ಆರ್ಭಟೆ; ಆರ್ಭಟಿಸು, ಗರ್ಜಿಸು.

**—ಇಸು** ಆರ್ಭಟಿಸು; ಗರ್ಜಿಸು.

**ಗದಾ** (ಗದೆ) ಮುದ್ಗರ; ಒಂದು ಆಯುಧ.

**—ಧರ** ಗದೆ ಹಿಡಿದವ, ಕೃಷ್ಣ.

**ಗದು** (ಗದುವು) ಬಾಪು, ಉಬ್ಬು.

**ಗದೆ** (ಗದಾ) ಕೊಂತ, ಮುದ್ಗರ.

**ಗದೋತ್ಕರ** ವ್ಯಾಧಿ, ಬೇನೆ, ಅರಿಷ್ಟ.

**ಗದ್ಗದ** ಧ್ವನಿಯ ತೊಡಲು, ಮಾತಿನ ನಡುಕ.

**—ಇಕೆ** ನಡುಗುವಿಕೆ; ಮಾತಿನ ಕಂಪ.

**—ಕಂಠ** ನಡುಗುವ ಧ್ವನಿ; ದುಃಖಿತ ಕಂಠ.

**ಗದ್ದ** ಗಡ್ಡ, ಗಲ್ಲ, ತುಟಿಯ ಕೆಳಭಾಗ.

**ಗದ್ದಾಣ** (ಗದ್ಯಾಣ) 32 ಇಲ್ಲವೆ 64 ಗುಂಜಿ ತೂಕ; ತೀರ ಕಡಮೆ ಬೆಲೆಯ ತಾಮ್ರದ ನಾಣ್ಯ; ಒಂದು ಚಿನ್ನದ ನಾಣ್ಯ.

**ಗದ್ದರಿಸು** (ಗಜರಿಸು) ಬೆದರಿಸು; ಗರ್ಜಿಸು.

**ಗದ್ದಲ** ಗೌಜು, ಕೋಲಾಹಲ, ಹಲವು ಮಂದಿ ಸೇರುವಲ್ಲಿ ಆಗುವ ಗಲಾಟೆ; ಸಂಭ್ರಮ.

**ಗದ್ದಿಗೆ** (ಗದ್ದುಗೆ).

**ಗದ್ದುಗೆ** ಪಟ್ಟವಣೆ, ಪೀಠ; ಸಿಂಹಾಸನ; ಕಟ್ಟೆ; ಸಮಾಧಿ.

**ಗದ್ದೆ** ಬತ್ತ ಬೆಳೆಯುವ ಸ್ಥಳ, ಹೊಲ.

**ಗದ್ಯ** ಮಾತಾಡುವ ನುಡಿಯ ರೀತಿ.

**ಗನಹ** ಶಿವ; ಬ್ರಾಹ್ಮಣ.

**ಗನಿ** (ಖನಿ).

**ಗನೆ** ಗರ್ಜಿಸು, ಆರ್ಭಟಿಸು.

**ಗನ್ನ** (ಗನ್ನೆ) ಮರೆಮೋಸ, ವಂಚನೆ, ಕಪಟ; ಟೊಳ್ಳು.

**—ಗತಕ** ಮೋಸಗಾರಿಕೆ.

**—ಗರುವ** ಟೊಳ್ಳು ಗೌರವ; ಬಡಿವಾರ.

**ಗಪ್‌ಚಿಪ್** ಸುಮ್ಮಗಾಗುವಿಕೆ, ಮೌನ.

**ಗಪ್ಪನೆ** ಒಮ್ಮೆಗೇ, ಪಕ್ಕನೆ, ಒಮ್ಮೆಲೇ.

**ಗಪ್ಪು** (ಕುಪ್ಪು) ಹಾರು, ಗಡಪು; ಸುಳ್ಳು; ಮೋಸ, ಮರೆ; ಮೌನ.

**ಗಬಕ್ಕನೆ** ಒಮ್ಮೆಗೇ, ಪಕ್ಕನೆ.

**ಗಬ್ಬ** (ಗರ್ವ) ತನ್ನ ಬಲವನ್ನರಿತವ; ಗರ್ಭ (ಸಂ), ಬಸಿರು; ತನ್ನ ಬಲವನ್ನು ತಿಳಿದವ.

**ಗಬ್ಬರಿಸು** ವ್ಯಾಪಿಸು, ಹರಡು; ಉಬ್ಬು; ಅಗೆ.

**ಗಬ್ಬಿ** ಗರ್ವಿಷ್ಠ, ಹೆಮ್ಮೆಯುಳ್ಳಾತ.

**ಗಬ್ಬಿಲ** ಬಾವಲಿ.

**ಗಬ್ಬು** ಕಮರು, ಕೆಟ್ಟ ನಾತ; ಗರ್ವ.

**ಗಭಸ್ತಿ** ಕಿರಣ; ಸೂರ್ಯ; ತೆಳು.

**ಗಭೀರ** ಗಂಭೀರ, ಆಳವಾದ; ರಹಸ್ಯವಾದ; ಪರಿಚಯಕ್ಕೆ ಅಸಾಧ್ಯವಾದ.

**ಗಮಕ** ರಾಗಬದ್ಧವಾದ ಕಾವ್ಯವಾಚನ; ಬೋಧಕ; ತ್ವರೆ, ವೇಗ; ರೀತಿ.

**ಗಮಕಿ** ರಾಗಬದ್ಧವಾಗಿ ಹಾಡಬಲ್ಲವ; ಲಿಪಿ ಓದುವವ.

**ಗಮನ** ಹೋಗುವಿಕೆ; ಬರುವಿಕೆ, ಸರಿಯುವಿಕೆ, ಸಂಚಾರ; ಕಂಪು; ವಾಸನೆ.

**—ಆಗಮನ** ಹೋಗಿಬರುವಿಕೆ.

**ಗಮಾರ** (ಗವಾರ), ಹೆಡ್ಡ.

**ಗಮಿಸು** ಹೋಗು.

**ಗಮ್ಮತ್ತು** ಸಂಭ್ರಮ; ಸಂತೋಷ; ಉತ್ಸಾಹ.

**ಗಮ್ಮು** ಚೆದರಿಸು; ಕೋತಿಗಳಂತೆ ಕಿರಿಚು.

**ಗಮ್ಯ** ಹೋಗತಕ್ಕದು; ಹೋಗಬಹುದಾದುದು; ಎಣಿಸಬಹುದಾದುದು.

ಗಯ ಗಯೆ ಎಂಬ ಕ್ಷೇತ್ರ; ಬುದ್ಧ ಗಯೆ, ಒಬ್ಬ ರಾಕ್ಷಸನ ಹೆಸರು; ಒಬ್ಬ ಗಂಧರ್ವ.
ಗಯಾವಳ ಗಯಾಳ, ಗಯೆಯವ.
ಗಯ್ಯಾಳ ಗಯೆಯಲ್ಲಿರುವವ; ವಂಚಕ, ನೀಚ.
—ತನ ನೀಚತನ, ವಂಚಕವೃತ್ತಿ; ವಿಷ.
ಗರ (ಗಿರ) ಗ್ರಹ (ಸಂ), ಕೆಟ್ಟ ದೆವ್ವ, ಪಿಶಾಚಿ; ಕೆಡುಕುಗೆಯ್ಯುವ ಯಾವುದೇ ಶಕ್ತಿ.
—ಪಟ್ಟಿಗೆ ಭ್ರಮೆ; ಮಂಕು; ಉದ್ವೇಗ.
—ಹಿಡಿ ಪಿಶಾಚಿ, ಹಿಡಿದವನಂತೆ ಮಾಡು ದೆವ್ವ ಬಡೆದಂತೆ ಮಾಡು.
—ಹೊಡೆ ಪಿಶಾಚಿಯನ್ನೋಡಿಸು.
ಗರಕು ಏರುತಗ್ಗು, ಒರಟು; ದೊರಗು.
ಗರಗರಿಕೆ ಸೊಗಸು; ಠಕ್ಕು; ಹೆಮ್ಮೆ.
ಗರಗಸ (ದ್ಭ) ಕ್ರಕಚ (ಸಂ), ಮರಸಿಗಿಯುವ ಸಾಧನ.
ಗರಡಿ (ನೋಡು: ಗರುಡಿ).
ಗರತಿ ಕುಲೀನೆ, ಮಾನವಂತ ಸ್ತ್ರೀ.
ಗರಮಿ (ಗರ್ಮಿ) ಕಾವೇರುವಿಕೆ; ಒಂದು ರೋಗವಿಶೇಷ; ಹುಣ್ಣು.
ಗರಲ (ಗರಳ) ವಿಷ.
—ಕೊರಳ ಕೊರಳಲ್ಲಿ ವಿಷವುಳ್ಳವ, ಶಿವ.
—ಗ್ರೀವ ಕಂಠದಲ್ಲಿ ವಿಷವುಳ್ಳವ, ಶಿವ.
—ಧರ ಶಿವ.
ಗರವಟಿಗೆ ಗದ್ದಲ; ಯಜ್ಞಶಾಲೆ; ಗೃಹ; ಎಲೆ ಮನೆ.
ಗರವಲ (ದ್ಭ) ಗ್ರಹಬಲ (ಸಂ).
ಗರವು ಸೆಳೆಯು, ಆಕರ್ಷಿಸು, ಜಗ್ಗು.
ಗರವೊಟ್ಟಿಗೆ ಅದ್ಭುತ, ಪ್ರಚಂಡ.
ಗರಾಣ (ಘರಾಣಾ), ಮನೆತನ; ಸಂಗೀತಗಾರರ ಶಿಷ್ಯ ಪರಂಪರೆ.
—ದಾರ ಹಿರಿಯ ವಂಶಸ್ಥ.
ಗರಾಸ (ದ್ಭ) ಗ್ರಾಸ (ಸಂ).
ಗರಿ (ಗರಿಕೆ) ಕರಿಕೆ ಹುಲ್ಲು, ಒಂದು ಜಾತಿಯ ಹುಲ್ಲು; ಪಕ್ಷಿಯ ಪುಕ್ಕದ ಭಾಗ, ತುಪ್ಪಳ; ತೆಂಗಿನ ಸೋಗೆ.
—ಕಟ್ಟು ರೆಕ್ಕೆಹುಟ್ಟು; ರೆಕ್ಕೆಕಟ್ಟು; ಬಲ ಹೊಂದು.
—ಕಣೆ ಗರಿಕಟ್ಟದ ಬಾಣ.
—ಕೆದರು ರೆಕ್ಕೆ ಹರಡು; ಕಾರ್ಯ ಉದ್ಯುಕ್ತನಾಗು.
—ಕೋಲು ಗರಿಕಟ್ಟದ ಬಾಣ.
ಗರಿಕೆ ಒಂದು ಜಾತಿಯ ಹುಲ್ಲು, ಕರ್ಕಿ ಹುಲ್ಲು, ಕರಿಕೆ.
ಗರಿಗ ಒಂದು ಹಕ್ಕಿ.
ಗರಿಮೆ ಗರಿಮಾ (ಸಂ), ಗುರುತ್ವ; ದೊಡ್ಡತನ, ಹೆಚ್ಚುಗೆ.
ಗರಿಷ್ಠ ಬಲು ದೊಡ್ಡ; ಭಾರವಾದ, ಒಜ್ಜೆಯಾದ; ಶ್ರೇಷ್ಠ.
ಗರಿಹೂ ತಾಳೆ ಹೂ; ಕೇದಿಗೆ ಹೂ.
ಗರೀಬ ಬಡವ, ದರಿದ್ರ.
ಗರೀಯ ಹಿರಿಯ, ದೊಡ್ಡ; ಶ್ರೇಷ್ಠ.
ಗರುಡ (ಗರು=ರೆಕ್ಕೆ, ಡ=ಹಾರು) ಪಕ್ಷಿರಾಜ; ಗರುಡಪಕ್ಷಿ. ಈತನು ಕಾಶ್ಯಪ, ವಿನತೆಯರಲ್ಲಿ ಹುಟ್ಟದ ಮಗನು. ಈತನು ಅರ್ಧ ಪಕ್ಷಿ ಅರೆ ಮನುಷ್ಯನಂತೆ. ಈತನು ವಿಷ್ಣುವಿನ ವಾಹನನೆಂದೂ ಹೇಳಿಕೆಯಿದೆ. ಇವನ ಮಗನು ಸಂಪಾತಿ.
—ಕಂಭ ಗರುಡಸ್ತಂಭ, ಧ್ವಜ, ದೇವಾಲಯಗಳ ಮುಂದಿನ ಧ್ವಜಸ್ತಂಭ.
ಗರುಡಧ್ವಜ ಗರುಡನ ಗರುತಿನ ಪತಾಕೆಯುಳ್ಳ; ವಿಷ್ಣು; ಕೃಷ್ಣ.
ಗರುಡಪಾತಾಳ ಬಾವಿಗೆ ಬಿದ್ದ ವಸ್ತುವನ್ನು ತೆಗೆಯುವ ಒಂದು ಸಾಧನ.
ಗರುಡಪುರಾಣ ಹದಿನೆಂಟು ಮಹಾ ಪುರಾಣಗಳಲ್ಲಿ ಒಂದು; ಇದರಲ್ಲಿ ನರಕ ಶಿಕ್ಷೆಯ ವರ್ಣನೆ ಬಹಳವಾಗಿ ಇದೆ.

ಗರುಡವಾಹನ ಗರುಡನೇ ವಾಹನನಾಗಿ ಉಳ್ಳವ, ವಿಷ್ಣು.

ಗರುಡಿ ಗೊತ್ತು, ನೆಲೆ; ಚಾವಡಿ; ಗವಿ; ಗೋದೆ, ವ್ಯಾಯಾಮ ಶಾಲೆ.

—ಗೈಮೆ ಕುಸ್ತಿ, ಸಾಮು.

ಗರುವ ಗೌರವ (ಸಂ), ಯೋಗ್ಯತೆ, ಮರ್ಯಾದೆ; ಭಾರ, ಗರಿಮೆ.

ಗರುವಲಿ ಗಾಳಿ.

ಗರುವಾಯಿ ಗಾಂಭೀರ್ಯ, ಗರುವಿಕೆ.

ಗರ್ಗ ಯಾದವರ ಪುರೋಹಿತನಾದ ಋಷಿ.

—ಕಡಗೋಲು ಗರ್ಗರಿ ಗಿಡಿ.

ಗರ್ಘರ (ನೋಡು: ಗಗ್ಗರ).

ಗರ್ಜನೆ ಕೂಗಾಟ, ಆರ್ಭಟೆ.

ಗರ್ಜಿಸು ಗಟ್ಟಿಯಾಗಿ ಕೂಗು, ಗಜರು.

ಗರ್ತ ಹಳ್ಳ; ತಗ್ಗು, ಕುಣಿ, ಕುಳಿ, ಗುಣಿ.

ಗರ್ದನ ಲುಬ್ಧ, ಲೋಭಿ, ಜಿಪುಣ.

ಗರ್ದಭ ಕತ್ತೆ.

ಗರ್ದುಗೆ (ಗದ್ದುಗೆ) ಪಟ್ಟವಣೆ, ಸಿಂಹಾಸನ.

ಗರ್ಭ (ಗಬ್ಬ) ಬಸಿರು; ಶಿಶು; ಒಳಗೆ, ನಡುವೆ.

—ಆಗಾರ ಗರ್ಭಕೋಶ.

—ಆದಾನ ಸಂತಾನಕ್ಕೆ ಕಾರಣವಾಗುವಿಕೆ; ಒಂದು ಶಾಸ್ತ್ರವಿಧಿ.

—ಧಾರಣ ಬಸುರಿಯಾಗುವುದು.

—ವತಿ ಬಸಿರಿ, ಗರ್ಭಿಣಿ.

—ಸ್ರಾವ ಗರ್ಭ ಕಳೆಯುವುದು; ಮೈ ಇಳಿಯುವುದು.

ಗರ್ಭಕ ತಲೆ ಮೇಲೆ ಮುಡಿಯುವ ಹೂ.

ಗರ್ಭಗೃಹ ದೇವರ ಗುಡಿಯ ಒಳಮನೆ.

ಗರ್ಭಿಣಿ ಬಸಿರಿ, ತಾಯಾಗಲಿರುವವಳು.

ಗರ್ಭಿತ ಗರ್ಭತುಂಬಿದ; ತುಂಬಿದ; ಪೂರ್ಣವಾದ.

ಗರ್ವ ಹೆಮ್ಮೆ, ಕೆಚ್ಚು.

—ಇಸು ಹೆಮ್ಮೆದೋರು, ಪರಾಕ್ರಮದೋರು.

ಗರ್ವು (ದ್ಭ) ಗರ್ವ (ಸಂ).

ಗರ್ಶಕ ಬಾಣಲೆ, ಗುಂಡಿಯಾದ ಬಟ್ಟಲು.

ಗರ್ಹೆ ಹಳಿವು, ನಿಂದೆ; ಅಪವಾದ.

ಗಲಕಂಬಲ ಗಂಗೆದೊವಲು.

ಗಲಬರಿಕೆ ತೊಳಸುವುದು.

ಗಲಭೆ (ಗಲಬೆ) ಗದ್ದಲ.

ಗಲಹಸ್ತ (ಗಳಹತ್ತ) ಕುತ್ತಿಗೆಗೆ ಕೈಯಿಕ್ಕುವುದು; ಕೊರಳು ಹಿಡುಕುವುದು; ಮಲ್ಲವಿದ್ಯೆಯ ಒಂದು ರೀತಿ.

ಗಲಿತ (ಕಳಿತ) ಹಣ್ಣಾದ, ಹಣ್ಣಾಗಿ ಉದುರಿದ; ಕರಗಿದ.

ಗಲೀಜು ಕೆಸರು, ಕೊಳೆ, ಕೊಚ್ಚೆ, ಹೊಲಸು.

ಗಲುಹು ಗೆಜ್ಜೆಯ ಜಣರು.

ಗಲ್ಲ ತುಟಿಯ ಕೆಳಗಡೆ, ಗದ್ದ; ಶೂಲ.

ಗಲ್ಲಣೆ ಘಾಸಿ, ತೊಂದರೆ, ಉಪಹತಿ.

ಗಲ್ಲಿ ಕಿರುದಾರಿ, ಕಿರುಬೀದಿ, ಓಣಿ, ಸಂದಿ.

ಗಲ್ಲಿಸು ಪೀಡಿಸು, ಕಷ್ಟಪಡಿಸು; ಹೆಚ್ಚು.

ಗಲ್ಲು (ಗಲ್ಲ) ಅಪರಾಧಿಗಳಿಗೆ ಮರಣ ಕೊಡುವ ಗಲ್ಲಿಮಣೆ.

ಗಲ್ಲೆ ಕೊಟ್ಟೆ; ಒಣಗಿ ಗಂಟಾಗು.

ಗವನ (ದ್ಭ) ಗಮನ (ಸಂ), ಹೋಗುವಿಕೆ; ಎಚ್ಚರ, ಜಾಗರ.

ಗವನಿ ಆವರಣ.

ಗವನಿಸು (ಗಮನಿಸು).

ಗವಯ ರಾಮನ ಕಪಿಸೇನೆಯ ಒಬ್ಬ ನಾಯಕ; ಒಂದು ಬಗೆಯ ಎತ್ತು.

ಗವಯಿ ಗಾನವಿಶಾರದ, ಹಾಡುಗಾರ.

ಗವಲ್ಗಣ ಧೃತರಾಷ್ಟ್ರನ ಸಾರಥಿ, ಸಂಜಯನ ತಂದೆ.

ಗವಸಣಿಕೆ ಚೀಲ; ಮರೆ; ವೀಣೆ, ಪಿಟಲು ಮೊದಲಾದುವನ್ನು ಮುಚ್ಚುವ ಚೀಲ, ಗೌಸು.

ಗವಾಕ್ಷ ಕಿಟಕಿ, ರಂಧ್ರ, ಬೆಳಕುಕಿಂಡಿ.
ಗವಾರ (ಗಮಾರ) ಹಳ್ಳಿಯವ; ಮಂಕ, ಹುಂಬ.
ಗವಿ ಗುಹೆ; ಹಳ್ಳಿಗಾಡು; ಕವಿ; ಹರಡು.
ಗವುಜಲ ಖಂಜನ, ಮಡಿವಾಳ ಹಕ್ಕಿ.
ಗವುರು ದೊಡ್ಡ ಸ್ವರ; ಶತ್ರುವನ್ನು ತಿರಸ್ಕರಿಸುವುದು.
— ಕಹಳೆ ರಣಕಹಳೆ.
ಗವುಳಿ (ಗೌಳಿ) ಮನೆ ಹಲ್ಲಿ.
ಗವೇಂದ್ರ ಒಳ್ಳೆಯ ಎತ್ತು.
ಗವ್ಯ ದನಕ್ಕೆ ಸಂಬಂಧಿಸಿದ್ದು.
ಗವ್ಯೂತಿ ಎರಡು ಹರದಾರಿ ದೂರ.
ಗವ್ಹರ (ಗಹ್ವರ).
ಗಸಣೆ (ದ್ಭ) ಘರ್ಷಣ (ಸಂ), ತಿಕ್ಕಾಟ; ಜಂಜಡ, ಸಂಕಟ; ತೊಂದರೆ; ಆಪತ್ತು.
ಗಸಿ ಮಡ್ಡು, ಕೆಸರು, ಕಸಿರು.
— ಕೊಡು ಸಾರವಡೆದು ಕೆಸರು ಬಿಡು; ಮೋಸಕೊಡು.
ಗಸ್ತು (ಗಸ್ತಿ) ಪೋಲೀಸರು ಊರಿನ ಎಚ್ಚರಕ್ಕಾಗಿ ಮಾಡುವ ತಿರುಗಾಟ; ಮೋಸ.
ಗಹಗಹಿಸು ಗಹಗಹ ನಗು, ಗೊಳ್ಳೆಂದು ನಗು
ಗಹನ ಕೊರತೆ; ಮಾತು; ಗೂಢ, ಅರ್ಥಪೂರಿತ; ಪೊದೆ, ಕಾಡು; ರಹಸ್ಯ, ಭೇದಿಸಲು ಅಸಾಧ್ಯವಾದ.
ಗಹ್ವರ (ಗಂಹರ) ಗುಹೆ; ಕಾಡು; ಕಠಿಣ ಸ್ಥಳ; ಪೊದರು.
ಗಹ್ವರೀ ಭೂಮಿ.
ಗಳ ನೋವಿನಿಂದಾಗುವ ಬಾಪು; ಬಿದಿರು ಕೋಲು; ಗಂಟಲು, ಕತ್ತು; ಬೀಳು.
ಗಳಗಳನೆ ಬೇಗನೆ, ತೀವ್ರ.
ಗಳಗಾಳ ಕತ್ತನ್ನು ಹಿಡಿವ ಕೊಕ್ಕೆ.
ಗಳಲೆ (ಗಳ) ನೋವಿನಿಂದ ಸಂದುಗಳಲ್ಲಿ ಗ್ರಂಥಿಗಳು ಬಾತುಕೊಳ್ಳುವಿಕೆ.
ಗಳಪು ಹರಟು; ಪೊಳ್ಳು ಮಾತಾಡು.
ಗಳಂತಿಕಾ (ಸಂ) ಗಳಂತಿಗೆ (ದ್ಭ), ಕೋಣೆ.
ಗಳಿ ಮಾಗು, ಹಣ್ಣಾಗು.
ಗಳಿಗೆ (ದ್ಭ) ಘಟಿಕಾ (ಸಂ) 24 ನಿಮಿಷ ಕಾಲ; ಹೊತ್ತು.
ಗಳಿತ (ಕಳಿತ) ಬಿದ್ದ; ಮಾಗಿದ.
ಗಳಿಪ ಹರಟೆಗಾರ, ಬಾಯಿಬಡಿಕ.
ಗಳಿಸು ಸಂಪಾದಿಸು, ಪಡೆ.
ಗಳಿಹು (ಗಳಿಪು).
ಗಳೆ ಉಳುವ ಸಾಧನಗಳು.
ಗಳೇವಳಿ ರೆಕ್ಕೆ ತೊಟ್ಟಿರುವ.
ಗಳ್ಳೆ ಮುದ್ದೆ.
ಗಂಗ ದಕ್ಷಿಣವನ್ನಾಳಿದ ಒಂದು ಮನೆತನ.
ಗಂಗಡಿಕಾರ ಗಂಗಾವಾಡಿಯ ಶೂದ್ರ.
ಗಂಗಸಾಗರ (ಗಂಗಸರ) ಸಾರಾಯಿ, ಒಂದು ವಿಧದ ಹೆಂಡ.
ಗಂಗಳ (ಗಂಗಾಳ) ತಟ್ಟೆ, ಬಟ್ಟಲು.
ಗಂಗಾ (ಗಂಗೆ) ಉತ್ತರ ಹಿಂದುಸ್ಥಾನದಲ್ಲಿ ಹರಿಯುವ ಈ ಹೆಸರಿನ ನದಿ. ಈ ನದಿಯು ಭಗೀರಥನ ತಪಸ್ಸಿಗೆ ಮೆಚ್ಚಿ, ಅವನ ಕುಲದವರನ್ನು ತೊಳೆದು ಪಾವನ ಮಾಡಲು ಸ್ವರ್ಗದಿಂದ ಇಳಿದು ಬಂದಳೆಂದೂ, ನಡುವೆ ಶಿವನ ಜಟೆಯಲ್ಲಿ ಸಿಲುಕಿಕೊಂಡಳೆಂದೂ ಪುರಾಣವಿದೆ. ಗಂಗಾದೇವತೆ ಹಿಮವಂತ ಮತ್ತು ಮೇನೆಯರ ಮಗಳು; ಶಂತನುವಿನ ಹೆಂಡತಿ.
— ಧರ ಗಂಗೆಯನ್ನು ತಲೆಯಲ್ಲಿರಿಸಿಕೊಂಡವ; ಈಶ್ವರ.
— ಪುತ್ರ ಗಂಗೆಯ ಮಗ; ಭೀಷ್ಮ; ಬೆಸ್ತ, ಅಂಬಿಗ.
ಗಂಗಾಳ ಬಟ್ಟಲು; ನೀರಿನ ಕಡಾಯಿ.
ಗಂಗೆ (ಗಂಗಾ).
ಗಂಗೆತ್ತು ಆಟದ ಬಸವ, ಕವಲೆತ್ತು.

ಗಂಗೆದೊಗಲು ದನಗಳ ಕುತ್ತಿಗೆಯ ಕೆಳಗೆ ತೂಗುವ ಮೃದು ಚರ್ಮ.

ಗಂಗೋತ್ರಿ ಗಂಗೆ ಮೇಲಿಂದ ಕೆಳಗೆ ಇಳಿಯುವಲ್ಲಿ, ಹಿಮಾಲಯದಲ್ಲಿ ಗಂಗಾತೀರದ ಒಂದು ಯಾತ್ರಾಸ್ಥಳ.

ಗಂಜ (ಗಂಜಿ) ಖಜಾನೆ, ಭಂಡಾರ; ಗನಿ; ಹೆಂಡದಂಗಡಿ.

ಗಂಜಣಿ (ಗಂಜಳಿ) ಪೊದೆ.

ಗಂಜಳ ದನಕರುಗಳ ಮೂತ್ರ.

ಗಂಜಿ (ದ್ಭ) ಕಾಂಚಿ (ಸಂ), ಅಕ್ಕಿ ಗೋಧಿ ಮೊದಲಾದುವನ್ನು ಬೇಯಿಸಿ ಮಾಡಿದ ಆಹಾರ; ಬಟ್ಟೆ ತಯಾರಿಯಲ್ಲಿ ಸವರುವ ಅಂಟು.

ಗಂಜೆ (ನೋಡು: ಗಂಜ).

ಗಂಟ ವರೆಗೆ, ಅಲ್ಲಿಯತನಕ.

ಗಂಟಲು ತಾಳಿಗೆ; ಕೊರಳೊಳಗಿನ ನಾಳ; ಧ್ವನಿ.

ಗಂಟಿ ಜಾನುವಾರು, ದನಕರು; ಕುಂಡಲ.

ಗಂಟಿಕೆ ಗುಚ್ಛ; ಗುಂಪು.

ಗಂಟು (ದ್ಭ) ಗ್ರಂಥಿ (ಸಂ), ಶರೀರದ ಕೆಲವೊಂದು ರಸೋತ್ಪಾದಕ ಅವಯವಗಳು; ಮೂಟೆ; ಬಂಧನ; ಕಟ್ಟು.

—ಇಕ್ಕು ಬಂಧನದಲ್ಲಿರಿಸು; ಹೊಂದಿಸು; ಹುಟ್ಟಿಸು.

ಗಂಟುಗಳ್ಳ ಹಣವಿದ್ದೂ ಬಡತನದ ಸೋಗು ಹಾಕುವವ.

—ಮೋರೆ ಕೋಪದ ಮುಖ; ಕೆರಳಿದ ಮುಖ.

ಗಂಟೆ ಘಂಟೆ; ಗಡ್ಡೆ.

ಗಂಡ ಸಮರ್ಥ; ಪತಿ; ಯಜಮಾನ; ಶೂರ; ದಿಟ್ಟ; ಕೆನ್ನೆ.

—ಸ್ಥಳ ಕಪೋಲ.

ಗಂಡಕ ಖಡ್ಗಮೃಗ, ಗಂಡಮೃಗ.

ಗಂಡಕಿ ಗಂಗಾನದಿಯ ಒಂದು ಉಪನದಿ.

ಗಂಡಕೀಶಿಲೆ ಗಂಡಕೀನದಿಯಲ್ಲಿ ಸಿಗುವ ಒಂದು ಕಲ್ಲು, ಸಾಲಿಗ್ರಾಮ.

ಗಂಡಭೇರುಂಡ ಎರಡು ತಲೆಯ ಹಕ್ಕಿಯೊಂದು, ಮೈಸೂರು ಅರಸರ ಲಾಂಛನ.

ಗಂಡಮಾಲೆ ಗ್ರಂಥಿಗಳು ಕತ್ತಿನಲ್ಲಿ ಬಾತು ಉಂಟಾಗುವ ಒಂದು ಗ್ರಂಥಿರೋಗ.

ಗಂಡಶೈಲ ಗುಂಡುಕಲ್ಲು; ಬೆಟ್ಟದಿಂದ ಉರುಳಿಬಿದ್ದ ಬಂಡೆ.

ಗಂಡಸು (ಗಂಡುಸು) ಗಂಡುಕೂಸು, ಪುರುಷ.

ಗಂಡಸ್ಥಲ ಕೆನ್ನೆ; ಆನೆಯ ಕೆನ್ನೆ, ಕರಟ.

ಗಂಡಾಗುಂಡಿ ಅವಾಂತರ; ಅವ್ಯವಸ್ಥೆಮಾಡುವಿಕೆ; ಕಾಲು ಕೆರೆದ ಜಗಳ; ಅಡಸಲಬಡಸ.

ಗಂಡಾಡಿ ಸಾಹಸಿಗ; ಸತ್ವಶಾಲಿ.

ಗಂಡಾಂತರ ವಿಪತ್ತು, ಸಂಕಟ.

ಗಂಡಿ (ಕಂಡಿ) ಕೋಟೆಯ ಕಿರುದಾರಿ; ಬೆಟ್ಟದ ಇಳಿವೆ ಬಂಡೆಯೊಳಗಿನ ಕಿರು ಹಾದಿ, ನದಿ ಪ್ರವಾಹದ ಕಿರಿದಾದ ದಾರಿ.

ಗಂಡು ವೀರ, ಬಲಿಷ್ಠ; ದೊಡ್ಡ; ಪುರುಷ.

—ಇಗ ಗಂಡುತನ ಉಳ್ಳವ, ಧೈರ್ಯಶಾಲಿ.

—ಉಡೆ ಗಂಡುಡುಗೆ; ವೀರಕಚ್ಚೆ.

—ಕಲಿ ಗಂಡಸರಲ್ಲಿ ವೀರ, ಪುರುಷರಲ್ಲಿ ವೀರನು.

—ಕೊಳ್ ಧೈರ್ಯ ಕೊಳ್ಳು.

ಗಂಡುಗಾಡಿ ಗಂಡಸಿನ ವಿಶೇಷ ಸೊಬಗು.

ಗಂಡುಗೊಡಲಿ ಕೈಕೊಡಲಿ; ಯುದ್ಧಪರಶು; ಚಪ್ಪುಗೊಡಲಿ.

ಗಂಡುಸು ಗಂಡುಕೂಸು.

ಗಂಡೂಪದ ಎರೆಹುಳು.

ಗಂಡೂಷ ಬಾಯಿ ಮುಕ್ಕಳಿಸುವಿಕೆ.

ಗಂತಿ (ಗ್ರಂಥಿ) ದುರ್ಮಾಂಸ ಬೆಳೆದು ಗಡ್ಡೆಯಾಗುವುದು.

ಗಂತು ದಾರಿ, ಗಡಿ; ಉಪಾಯ; ಪಯಣಿಗ; ಕುಣಿತ.
ಗಂದ (ಗಂಧ).
ಗಂದಿಗ ಗಂಧವ್ಯಾಪಾರಿ; ಔಷಧ ಮಾರುವವ.
ಗಂಧ ಸುವಾಸನೆ, ಪರಿಮಳ; ಪರಿಮಳ ಕೊಡುವ ಒಂದು ಜಾತಿಯ ಮರ; ಒಂದು ಶಿಲೆ; ನೆರೆಯುವ; ಹೆಮ್ಮೆ, ಗರ್ವ.
ಗಂಧಕ ಒಂದು ಲೋಹೇತರ ಧಾತು.
— ದ್ರಾವಕ ಸಲ್ಫ್ಯೂರಿಕ್ ದ್ರಾವಕ.
ಗಂಧನ ಹಟ, ಸಾಧನೆ; ಪ್ರಕಟಣೆ, ತಿಳಿಸುವಿಕೆ; ಸಂತೋಷ.
ಗಂಧಮೂಷಿಕೆ ಪುಣುಗಿನ ಇಲಿ; ಕಸ್ತೂರಿ ಮೃಗ.
ಗಂಧರ್ವರು ಇಂದ್ರನ ಪರಿವಾರದ ಜನರು; ಅಮರಲೋಕದ ಗಾಯಕರು. ಇವರು ಗಗನವಾಸಿಗಳು. ಸ್ವರ್ಗಲೋಕದ ಇಂದ್ರನು ಇವರಿಗೆ ನಾಯಕನು. ದೇವತೆಗಳಿಗೆ ಸೋಮರಸವನ್ನು ಒದಗಿಸುವುದು ಇವರ ವೃತ್ತಿ. ಗಾನಕಲೆಯಲ್ಲಿ ಇವರು ನಿಷ್ಣಾತರು. ಅಥರ್ವ ವೇದದಲ್ಲಿ 6333 ಗಂಧರ್ವರಿದ್ದಾರೆಂದು ಹೇಳಿದೆ. ಪುರಾಣ ಕಥೆಗಳಲ್ಲಿ ಇವರ ವಿಷಯವಾದ ಅನೇಕ ಸಂಗತಿಗಳು ಹೇಳಿವೆ.
ಗಂಧರ್ವವಿವಾಹ ಒಂದು ವಿವಾಹ ಪದ್ಧತಿ; ಗಂಡಸರು ಹೆಂಗಸರು ಮನಸ್ಸಾಕ್ಷಿಯೊಂದರಿಂದಲೇ ವರಿಸುವಿಕೆ, ಪ್ರೇಮವಿವಾಹ.
ಗಂಧರ್ವವೇದ ಸಾಮವೇದ; ಸಂಗೀತ ವಿದ್ಯೆ.
ಗಂಧವತಿ ವ್ಯಾಸಮುನಿಯ ತಾಯಿ ಸತ್ಯವತಿ; ಪೃಥ್ವೀ; ವಾಯು ಮತ್ತು ವರುಣರ ನಗರ; ಮದ್ಯ.
ಗಂಧವಾಹ (ಗಂಧವಹ) ಗಾಳಿ, ವಾಯು; ವಾಸನೆಯನ್ನು ಹೊರುವುದು.
ಗಂಧಸಿಂಧೂರ ಮದ್ದವೇರಿದ ಆನೆ.
ಗಂಧಿ ವಾಸನೆಬರುವ.
ಗಂಪು (ಕಂಪು) ಪರಿಮಳ.
ಗಂಭೀರ (ಗಭೀರ) ಆಳವಾದ; ಪ್ರೌಢ.
— ವೇದಿ ಜಾಣನಾದ; ಆನೆಯಂತೆ ಅಶಾಂತವಾದ.
ಗಾಗಳ ಗೌಜು, ಗದ್ದಲ, ಗೊಂದಲ.
ಗಾಜು (ದ್ಭ) ಕಾಜು, ಕಾಚ (ಸಂ), ಕನ್ನಡಿ.
ಗಾಟ (ದ್ಭ) ಗಾಢ (ಸಂ), ಅತಿಶಯ, ಬಹಳ, ದೊಡ್ಡ.
ಗಾಟಳಿಸು ಪೀಡಿಸು, ತೊಂದರೆಕೊಡು.
ಗಾಟು ಕಾರ; ಗಟ್ಟದ ಹಾದಿ; ಬೆಟ್ಟದ ಸಾಲು.
ಗಾಡ (ಗಾಢ) ದೃಢ; ಬಹಳ, ಅತಿಶಯ.
— ಇಸು ಅಧಿಕವಾಗು, ಹೆಚ್ಚಾಗು; ಗಟ್ಟಿಯಾಗು; ಬಲವಾಗಿ ಪ್ರವೇಶಿಸು.
ಗಾಡಿ ಸೌಂದರ್ಯ, ಸೊಬಗು, ಚೆಲುವು, ಬೆಡಗು; ಚೊಕ್ಕಟ; ಬಂಡಿ.
— ಕಾರ ಸೊಗಸುಗಾರ, ಚೆಲುವ; ಬಂಡಿ ನಡೆಸುವವ.
— ಕಾತಿ ಸುಂದರಿ; ವಿಲಾಸವತಿ.
— ಕೆ ಅತಿಶಯ, ಅಧಿಕ್ಯ; ವೈಶಿಷ್ಟ್ಯ.
ಗಾಢ ದೃಢ; ಅತಿಶಯ.
ಗಾಢಾಲಿಂಗನ ಬಲವಾದ ಅಪ್ಪುವಿಕೆ.
ಗಾಢಾಂಧಕಾರ ಕಗ್ಗತ್ತಲು.
ಗಾಢಿಕೆ ಅಧಿಕ್ಯ.
ಗಾಣ (ದ್ಭ) ಗಾನ (ಸಂ) ಸಂಗೀತ; ರಸಹಿಂಡುವ ಸಾಧನ, ಆಲೆ; ಗ್ರಹಣ.
— ರ್ ಗಾಯಕರು.
ಗಾಣೆ ಗಾಯಕಿ, ಹಾಡುಗಾರ್ತಿ.
ಗಾಣಿಕ್ಯ ವೇಶ್ಯೆಯರ ಗುಂಪು.
ಗಾಣಿಗ ಗಾಣ ನಡೆಸುವವ, ಗಾಣದಿಂದ ಎಣ್ಣೆ ತೆಗೆಯುವ ಜಾತಿ; ಬಿಳಿ ಬಾಲದ ಕಾಳಿಂಗನ ಹಕ್ಕಿ.
ಗಾತ (ದ್ಭ) ಘಾತ (ಸಂ)

ಗಾತ್ರ ದೇಹ; ವೈಶಾಲ್ಯ; ಪರಿಮಾಣ; ಆನೆಯ ಮುಂಗಾಲು.

ಗಾಥಿ ಹಾಡುಗಾರ.

ಗಾಥೆ (ಗಾಹೆ) ಹಾಡು, ಗತಿಬದ್ಧವಾದ ಮಾತು; ಗಾದೆ, ನಾಣ್ಣುಡಿ.

ಗಾದರಿ ಬಾಸಳ, ಕೊರಡೆ ಏಟಿನ ದಡಿ.

ಗಾದಿ ದಿಂಬು, ಲೋಡು; ಹತ್ತಿ ತುಂಬಿದ ಹಾಸಿಗೆ; ಉಚ್ಚಾಸನ; ಗದ್ದುಗೆ.

ಗಾದು ಹುಲ್ಲುಪೊದೆಗಳು ತುಂಬ ಬೆಳೆದಿರುವ ಎಡೆ, ಹುಲ್ಲು ಗದ್ದೆ.

ಗಾದೆ ಆಡುಮಾತು, ಅನುಭವದ ಹೇಳಿಕೆ, ನಾಣ್ಣುಡಿ.

—ಕಾರ ಗಾದೆ ಮಾತಿನ ಪರಿಚಯ ತುಂಬ ಉಳ್ಳವ.

ಗಾಧ ಆಳವಿಲ್ಲದ; ಸ್ವಲ್ಪ ಆಳ.

ಗಾಧಿ ಕುಶಿಕವಂಶದ ಒಬ್ಬ ದೊರೆ, ವಿಶ್ವಾಮಿತ್ರನ ತಂದೆ.

ಗಾಧೇಯ ಗಾಧಿಯ ಮಗ, ವಿಶ್ವಾಮಿತ್ರ.

ಗಾನ ಸಂಗೀತ ವಿದ್ಯೆ, ಹಾಡುಗಾರಿಕೆ.

ಗಾಬರಿ ಬೆದರಿಕೆ, ಅಳುಕು, ಭೀತಿ.

ಗಾಬು ಭೀತಿ; ತಬ್ಬಿಬ್ಬು; ಜಂಭ.

ಗಾಯ ಏರು, ಇರಿದ ಇಲ್ಲವೆ ಕಡಿದ ಪೆಟ್ಟು.

—ಕಾಣಿಸು ಗಾಯಮಾಡು.

—ಪಡೆ ಗಾಯಹೊಂದು.

ಗಾಯಕ ಹಾಡುಗಾರ, ಗವಾಯಿ.

ಗಾಯತ್ರಿ ಒಂದು ಮಂತ್ರವಿಶೇಷ; ಸೂರ್ಯ; ಆ ಹೆಸರಿನ ದೇವತೆ; ಒಂದು ಛಂದಸ್ಸು.

ಗಾಯನ ಸಂಗೀತವಿದ್ಯೆ, ಹಾಡುಗಾರಿಕೆ.

ಗಾರಣ ಪ್ರಕಟಣೆ; ಚಾಡಿ ಹೇಳುವಿಕೆ.

ಗಾರಣೆ ಕಾರಣೆ, ಗೋಡೆಯ ಬುಡಕ್ಕೆ ಬರೆಯುವ ಒಂದು ಬಣ್ಣದ ರೇಖೆ.

ಗಾರಿಗೆ ಅಕ್ಕಿ ಕಾಯಿ ಅರೆದು ಮಾಡುವ ಒಂದು ತಿಂಡಿ; ಕರಿದ ಒಂದು ತಿಂಡಿ.

ಗಾರು ಕಾಡು; ಅಪರಾಧ, ತಪ್ಪು; ಆವೇಶಯುಕ್ತ; ಒಣಗಿದ, ನೀರಿಲ್ಲದ; ಒಣಗು.

—ಕೆಡೆ ಯದ್ವಾತದ್ವಮಾಡು; ಹಾಳುಮಾಡು; ಒಣಗಿಹೋಗುವಂತೆ ಮಾಡು.

ಗಾರುಡ ಗರುಡನೇ ದೇವತೆಯಾಗಿ ಉಳ್ಳದು; ವಿಷ ಪರಿಹರಿಸುವ ವಿದ್ಯೆ; ಮರಕತ ರತ್ನ.

ಗಾರುಡಿ ಜಾದು, ಯಕ್ಷಿಣಿ ವಿದ್ಯೆ; ಜಾದುಗಾರ, ಐಂದ್ರಜಾಲಿಕ; ಹಾವಾಡಿಗ.

—ಸು ಸಮಾಧಾನಗೊಳಿಸು; ಗುಟ್ಟನಲ್ಲಿ ಬುದ್ಧಿ ಹೇಳು; ಮಂಕು ತಳೆ.

ಗಾರುಥಕ್ಕೆ ನೌಕಾಶ್ರಯಗಳಲ್ಲಿ ಹಡಗುಗಳನ್ನು ಕಟ್ಟಲು, ದುರುಸ್ತಿ ಮಾಡಲು ಅನುಕೂಲಿಸುವಂತೆ ಕಡಲು ನೀರನ್ನು ಬೇಕಾದಂತೆ ತೆಗೆದು ತುಂಬುವ ನಿಲ್ದಾಣ.

ಗಾರೆ ಗೋಡೆಗೆ ಹಾಕುವ ಮಣ್ಣು ಸುಣ್ಣಗಳ ಸಾರಣೆ, ಗಚ್ಚು; ಕಾರೆ ಗಿಡ, ಕಾರಿಕಂಚಿ.

—ಗಾರ ಗಚ್ಚು ಗಾರೆ ಹಾಕುವವ.

ಗಾರ್ಗ್ಯ ಬಾಲಾಕಿ ಎಂಬವನ ಮಗನು. ಈತನು ವೇದಪಾರಂಗತನೂ ಹೆಸರಾದ ವಯ್ಯಾಕರಣಿಯೂ ಆಗಿದ್ದನು.

ಗಾರ್ದಭ ಕತ್ತೆ.

ಗಾರ್ಹಸ್ಥ್ಯ ಗೃಹಸ್ಥಧರ್ಮ; ಗೃಹಕ್ಕೆ ಸಂಬಂಧಿಸಿದ.

ಗಾಲ ಸೋಸುವಿಕೆ; ಜರಡೆಯಲ್ಲಿ ಕಸ ಬೇರೆ ಮಾಡುವಿಕೆ; ಸುರಿಯುವ; ನುಂಗುವ.

—ಇಸು ಸೋಸು; ಗಾಳಿಸು; ಸಾರಣೆ ಮಾಡು, ಸಾರಣೆಗೆಗೆ ಹಿಡಿ.

ಗಾಲವ ವಿಶ್ವಾಮಿತ್ರ ಋಷಿಯ ಮಗ; ವಿಶ್ವಾಮಿತ್ರನ ಶಿಷ್ಯ.

ಗಾಲಿ ರಥಚಕ್ರ; ಬಂಡಿಯ ಚಕ್ರ.

ಗಾಲಿಮಾತು ಬೈಗಳು; ನಿಂದೆ; ತಿಟ್ಟು.

ಗಾಲು (ಗಾಳು) ಹಾಳು; ಆಪತ್ತು; ಅನಸರ; ಶರೀರ ಸಂಕಟ.

ಗಾವ (ದ್ಭ) ಗ್ರಾಮ (ಸಂ), ಹಳ್ಳಿ, ಜನನಿವಾಸ.
ಗಾವಟಿ (ಗಾಂವಟ) ಗ್ರಾಮದಲ್ಲಾದ್ದು.
ಗಾವದಿ ಮೂಢ, ಹೆಡ್ಡ.
ಗಾವರ (ಗಾವಳ) ಅಬ್ಬರ; ಧನಿ, ಉಲಿ; ಝೇಂಕಾರ.
—ಇಸು ಗದ್ದಲಮಾಡು, ಸದ್ದುಮಾಡು; ಝೇಂಕಾರಮಾಡು.
ಗಾವಲ್ಲಣಿ ಧೃತರಾಷ್ಟ್ರನ ಮಂತ್ರಿಯಾದ ಸಂಜಯ.
ಗಾವಸಿಂಗ(ದ್ಭ) ಗ್ರಾಮಸಿಂಹ(ಸಂ),ನಾಯಿ.
ಗಾವಳಿ (ಗಾವರ).
ಗಾವಳಿಗ ಗದ್ದಲಮಾಡುವವ; ಗುಲ್ಲುಗಾರ.
ಗಾವಿಲ ಗ್ರಾಮೀಣ (ಸಂ), ಹಳ್ಳಿಗ; ಹೆಡ್ಡ.
ಗಾವುದ 10–12 ಮೈಲು ದೂರದ ಒಂದು ಅಳತೆ; ನಾಲ್ಕು ಹರದಾರಿ ದೂರ.
ಗಾವುಳಿ ಗುಂಪು.
ಗಾವುಂಡ ಗೌಡ.
ಗಾಸಿ (ಘಾಸಿ) ತೊಂದರೆ, ಹಾನಿ.
ಗಾಹ ಮುಳುಗುವಿಕೆ; ಕತ್ತಲಲ್ಲೋ ಆಳದಲ್ಲೊ ಅವಿತಿರುವುದು.
—ಕ ಆಳಕ್ಕಿಳಿಯುವುದು.
ಗಾಹಗತಕ (ಗಾಹಗತನ) ಮೋಸಗಾರಿಕೆ.
ಗಾಹು ಮೋಸ, ವಂಚನೆ, ಠಕ್ಕು.
ಗಾಹೆ (ದ್ಭ) ಗಾಥಾ (ಸಂ), ಆರ್ಯಾ ಎಂಬ ಛಂದಸ್ಸು; ದೇಶೀಯ ನುಡಿಗೀತ.
ಗಾಳ (ಗಾಣ) ಮೀನು ಹಿಡಿಯುವ ಕೊಕ್ಕೆ.
ಗಾಳಕ ಯೋಗ್ಯ, ಸಂಭಾವಿತ, ಸಭ್ಯ.
ಗಾಳಿ ಬೀಸುವ ವಾಯು; ಹವೆ.
—ಗ ಪಿಶಾಚಾದಿಗಳು; ಗಾಳಿಯಲ್ಲಿ ಸಂಚರಿಸುವಂಥವು, ದೆವ್ವ, ಭೂತ.
—ತೇರು ಗಾಳಿಯಲ್ಲಿ ಚಲಿಸುವ ತೇರು, ವಿಮಾನ.
—ಬಟ್ಟೆ ವಾಯುಮಾರ್ಗ, ಆಕಾಶ.
—ಸು ಗಾಳಿಗೆ ಹಿಡಿದುಕೊಳ್ಳು; ದೂಳನ್ನು ಬೇರೆ ಮಾಡು; ತೂರು.
ಗಾಳು (ಗಾಲು) ಗದ್ದಲ; ಗಾಳಿ; ಮದಿಸಿದವಳು.
ಗಾಂಗೇಯ ಗಂಗೆಯ ಮಗ, ಭೀಷ್ಮ.
ಗಾಂಜ (ಗಾಂಜಿ) ಭಂಗಿ, ಒಂದು ಅಮಲು ಪದಾರ್ಥ.
ಗಾಂಡಿ ಗಂಟು.
ಗಾಂಡೀವ ಅರ್ಜುನನ ಬಿಲ್ಲು.
ಗಾಂಡೀವಿ ಗಾಂಡೀವವೆಂಬ ಬಿಲ್ಲುಳ್ಳವ, ಅರ್ಜುನ; ಮತ್ತಿಮರ.
ಗಾಂಡು ಮುದ್ಗರ; ಬುದ್ಧಿ ಇಲ್ಲದ ದಾಂಡಿಗ.
ಗಾಂದಿನೀ ಕಾಶೀರಾಜನ ಒಬ್ಬಳು ಮಗಳು; ಗಂಗೆ.
ಗಾಂಧರ್ವ ಗಂಧರ್ವರಿಗೆ ಸಂಬಂಧಿಸಿದ; ಹಿಂದುಸ್ಥಾನದ ಒಂದು ಉಪದ್ವೀಪ; ಒಂದು ಉಪವೇದ; ಸಂಗೀತ.
—ಭವನ ಸಂಗೀತದ ಮನೆ, ಗಾಯನಶಾಲೆ.
ಗಾಂಧರ್ವವಿವಾಹ ಸ್ತ್ರೀಪುರುಷರ ಸ್ವೇಚ್ಛೆಯಿಂದಾಗುವ ಮದುವೆ.
ಗಾಂಧಾರ ಸಿಂಧೂ ನದಿತಡಿಯ ಪ್ರದೇಶ. ತಕ್ಷಶಿಲೆಯು ಅದರ ರಾಜಧಾನಿಯಾಗಿತ್ತು.
ಗಾಂಧಾರಿ ಗಾಂಧಾರ ದೇಶದ ದೊರೆಯ ಮಗಳು; ಧೃತರಾಷ್ಟ್ರನ ಹೆಂಡತಿ.
ಗಾಂಪ ಹೆಡ್ಡ, ದಡ್ಡ; ಗಾವಿಲ, ಹಳ್ಳಿಗ.
ಗಾಂಪು ಮೌಢ್ಯ, ಹೆಡ್ಡತನ, ಮೂಢತನ, ಎಬ್ಬರಿಕ.
ಗಿಜಟಿ (ನೋಡು: ಗುಲಗಂಜಿ).
ಗಿಜಿಬಿಜಿ ನಿಗ್ಗು, ಇಡುಕಾಗಿರುವುದು; ಅವ್ಯವಸ್ಥೆ; ಕಸರು ಕುಸುರು.
ಗಿಜುಗಾರ ಖಂಜನ, ಗೀಜಗ ಹಕ್ಕಿ; ಮಡಿವಾಳ ಹಕ್ಕಿ.

ಗಿಟಕು (ಗಿಟಕ) ತೆಂಗಿನ ಕಾಯೊಳಗಿನ ಇಡಿ ಕೊಬರಿ.

ಗಿಟ್ಟು ಪಡೆ; ದಕ್ಕು; ಒತ್ತಾಗಿ ಸೇರು, ದಕ್ಕಾಗು.

ಗಿಡ (ಗಿಡು) ಸಸಿ.

ಗಿಡಿ ತುರುಕು.

ಗಿಡಿಬಿಡಿ ಒಂದು ವಾದ್ಯ ವಿಶೇಷ.

ಗಿಡು (ಗಿಡ).

ಗಿಡುಗ (ಗಿಡಗ) ಹದ್ದುಗಳ ಜಾತಿಗೆ ಸೇರಿದ ಒಂದು ಹಕ್ಕಿ.

ಗಿಡ್ಡ ಕುಳ್ಳ.

ಗಿಣಿ ಗಿಳಿ; ಒಂದು ಪಕ್ಷಿ; ಗೋಡೆಗೆ ಬಟ್ಟೆ ತೂಗಲು ನಾಟಿಸಿದ ಗೂಟ.

ಗಿಣ್ಣಿಲು ದುಂಡಾಗಿಯೂ ತುದಿ ಸಪುರವಾಗಿಯೂ ಇರುವ ಗಿಂಡಿ.

ಗಿಣ್ಣು ಈಗ ತಾನೆ ಕರುಹಾಕಿದ ದನದ ಹಾಲಿಂದ ಮಾಡುವ ಒಂದು ಪದಾರ್ಥ; ಕಬ್ಬು ಬಿದಿರುಗಳ ಗಂಟು, ಗಣ್ಣಿ.

ಗಿರ್ ಆಲೋಚಿಸು.

ಗಿರ ಒಂದನ್ನು ಕುರಿತು ಓಡುವ ಮನಸ್ಸು; ಮಂಕು; ಅಪಸ್ಮಾರ, ಮಾತು.

ಗಿರಕು ನೆಟ್ಟಗಿರುವಿಕೆ; ನಿಬಿಡವಾಗಿರುವಿಕೆ; ಒತ್ತಿರುವಿಕೆ.

ಗಿರಕೆ ಹತ್ತಿ ಮತ್ತು ಅದರ ಬೀಜ ಬೇರೆ ಮಾಡುವ ಯಂತ್ರ; ಜೇನು.

ಗಿರಣಿ ಆಲೆ, ಗಾಣ; ಹಿಂಡುವ ಇಲ್ಲವೆ ಹುಡಿ ಮಾಡುವ ಯಂತ್ರ; ಯಂತ್ರಶಾಲೆ.

ಗಿರಸ್ತ (ದ್ಭ) ಗೃಹಸ್ಥ (ಸಂ).

ಗಿರಾಕಿ ಕೊಳ್ಳುವವ, ಬೆಲೆಗೆ ಪಡೆಯುವವ.

ಗಿರಾಗತಿ (ದ್ಭ) ಗ್ರುಹಗತಿ (ಸಂ), ದುರ್ದೆಸೆ; ಗ್ರುಹಬಲದಿಂದಾಗುವ ಪ್ರಾಪ್ತಿ.

ಗಿರಿ ಬೆಟ್ಟ, ಪರ್ವತ.

ಗಿರಿಕಿ (ಗಿರ್ಕಿ), ತಿರುಗಾಟ, ಸುತ್ತುವಿಕೆ.

ಗಿರಿಕೆ ಚಿಕ್ಕ ಇಲಿ; ಸುತ್ತಾಟ; ಉಪರಿಚರ ಎಂಬ ವಸುವಿನ ಹೆಂಡತಿ, ಬೃಹದ್ರಥನ ತಾಯಿ.

ಗಿರಿಗಿಟ (ಗಿರ್ಗಿಟ) ಆಟ, ಬುಗರಿ; ಗಾಳಿಗೆ ತಿರುಗುವ ಆಟದ ಸಾಮಗ್ರಿ, ಗಿರಿಗಿರಿ.

ಗಿರಿಜಾ (ಗಿರಿಜೆ) ಪರ್ವತನ ಮಗಳು; ಉಮೆ, ಪಾರ್ವತಿ.

—ಇಂದ್ರು ಪಾರ್ವತಿಯ ಒಡೆಯ, ಶಿವ.

—ಕಾಂತ ಪಾರ್ವತಿಯ ಪತಿ, ಶಿವ.

ಗಿರಿಸುತ ಪರ್ವತನ ಮಗ, ಮೈನಾಕ.

ಗಿರು ಪರಿಭಾವಿಸು, ಯೋಚಿಸು.

ಗಿರುಗಟೆ (ನೋಡು: ಗಿರ್ಗಿಟ).

ಗಿಲಕು ಗೆಜ್ಜೆ ದನಿ, ಗಿಲಿಗಿಲಿ ಸದ್ದು.

ಗಿಲಿ ಗಿಲಿಗಿಲಿ, ಮಕ್ಕಳ ಆಟದ ವಸ್ತು; ಬೆದರಿಕೆ.

ಗಿಳಿ (ಗಿಣಿ), ಕೀರ, ಶುಕ, ಪಂಡಿತವಕ್ಕಿ.

ಗಿಂಜು ಬೀಜ ತುಂಬಿರುವಿಕೆ; ಅಗಲವಾಗಿ ತೆರೆ.

ಗಿಂಟೆ ಒರಟು ಬಟ್ಟೆ.

ಗಿಂಡಿ ಕಿರಿ ಬಾಯಿಯುಳ್ಳ ಬಿಂದಿಗೆ.

ಗಿಂಡು ಚಿವುಟು, ಉಗುರಿನಿಂದ ಚಿವುಟು; ನೋವಿಗಾಗಿ ತೀಡು.

ಗೀಚು ಗೀರು ಹಾಕು; ನೇಗಿಲ ಸಾಲು.

ಗೀಜಗ ಸೀಸೆಯಾಕಾರದ ಗೂಡು ಕಟ್ಟುವ ಒಂದು ಹಕ್ಕಿ, ತಾಳೆ ಗುಬ್ಬಿ.

ಗೀಟು ಗೆರೆ, ಪಂಕ್ತಿ.

ಗೀಣ್ ಹೊಗಳಲ್ಪಟ್ಟ; ನುಂಗಿದ.

ಗೀತ ಹಾಡು; ರಾಗಬದ್ಧವಾದ ಉಲಿ; ಆಲಾಪ; ಪದ್ಯ, ಕವನ; ಉಪದೇಶ.

ಗೀತಗೋವಿಂದ ಜಯದೇವನೆಂಬ ಕವಿ ಬಾಲ ಕೃಷ್ಣನ ವಿಚಾರವಾಗಿ ಬರೆದ ಶೃಂಗಾರ ಕಾವ್ಯ.

ಗೀತಿಕೆ ಚಿಕ್ಕ ಹಾಡು.

ಗೀತೆ ಹಾಡು; ಭಗವದ್ಗೀತೆ ಎಂಬ ತತ್ವಶಾಸ್ತ್ರ.

ಗೀಥೆ ಹಾಡಿಕೆ; ಹಾಡು.

ಗೀಬು ಮನೆ, ಗುಡಿಸಲು.

ಗೀರು ಗೀಚಿದ ಗುರುತು, ಕೆರೆದ ಗುರುತು; ಗೆರೆ; ಕಡಿದ ಗುರುತು.

ಗೀರ್ವಾಣ ಮಾತೇ ಬಾಣವಾಗಿ ಉಳ್ಳವ, ದೇವತೆ.

—ಭಾಷೆ ಸಂಸ್ಕೃತ ಮಾತು.

ಗೀರ್ವಾಣಿ ಸರಸ್ವತಿ.

ಗೀಳ್ (ಗೀಳು) ಆರ್ಭಟಿಸು, ಕೂಗು, ಕಿರಿಚು; ಹಂಬಲಿಸು, ಅತಿ ಹಂಬಲ.

—ಇಡು ಗರ್ಜಿಸು.

ಗುಕ್ಕು ತೊದಲು, ಮಾತಿನಲ್ಲಿ ತಡವರಿಸು; ಗುರುಕು, ನಿಟ್ಟುಸಿರಿನಿಂದ ಮಾತಿನ ಸ್ಪಷ್ಟ ತೆಯನ್ನು ಕೆಡಿಸು; ಗುಟುಕು; ಬಾಯಿ ತುಂಬ.

ಗುಗ್ಗರಿ ಹುರಿಗಾಳು; ಗೋಧಿ ಕಡಲೆ ಮೊದ ಲಾದುವನ್ನು ಬೇಯಿಸಿ ಮಾಡಿದ ಒಂದು ತಿಂಡಿ, ಉಸಳಿ.

ಗುಗ್ಗಳ (ಗುಗ್ಗುಳ) ಧೂಪ, ಲೋಬಾನ.

ಗುಗ್ಗೆ (ಕುಗ್ಗೆ) ಕಿವಿ ಕುಗ್ಗಿ, ಕಿವಿಯೊಳಗಿನ ಕೊಳೆ, ಕೂಗಣಿ.

ಗುಚ್ಛ ಗೊಂಚಲು (ದ್ಭ); ಮೂವತ್ತೆರಡು ಸರಗಳ ಮುತ್ತಿನ ಜಲ್ಲೆ; ಲಡಿ; ಕುಚ್ಚು.

ಗುಜರಣೆ ದಿನಹರಣೆ, ಕಾಲಯಾಪನೆ.

ಗುಜರಾಥ ಮುಂಬಯಿ ಉತ್ತರಕ್ಕಿರುವ ಒಂದು ದೇಶ, ಗುರ್ಜರ ದೇಶ.

ಗುಜರಿ ಕಚರಾ ಸಾಮಾನು ಸಿಗುವ ಸ್ಥಳ.

ಗುಜುಗುಟಿಸು ಮೆಲ್ಲಗೆ ಕಿವಿಯಲ್ಲಿ ಹೇಳು.

ಗುಜುರು ಕುಳ್ಳು; ಕುಳ್ಳ.

ಗುಜ್ಜ ಕುಬ್ಜ, ಕುಳ್ಳ; ಚಿಕ್ಕದಾದ.

ಗುಜ್ಜರ (ದ್ಭ) ಗುರ್ಜರ (ಸಂ), ಗುಜರಾಥಕ್ಕೆ ಸಂಬಂಧಿಸಿದ.

ಗುಜ್ಜಾರಿ ಕುಳ್ಳ, ಕುಬ್ಜ, ಗಿಡ್ಡನಾದವ.

ಗುಜ್ಜುಗುರುಳು ಠೀವಿ, ಸಂಭ್ರಮ.

ಗುಜ್ಜುಗೊರಳ ಕತ್ತು ಗಿಡ್ಡಾದವ.

ಗುಜ್ಜುಗೊಳ್ಳು ಮುದುರಿಕೊಳ್ಳು.

ಗುಟಿಕೆ ಗುಳಿಗೆ, ಮಾತ್ರೆ, ಉಂಡೆ.

ಗುಟುಕು ನೀರಿನ ತುತ್ತು; ಒಂದು ಬಾರಿ ಕುಡಿವಷ್ಟು ದ್ರವ್ಯ; ಕುಡಿತೆ.

ಗುಟುರು ಗೂಳಿಯ ಕೂಗು; ಕೂಗುಹಾಕು, ಗುಬ್ಬಳಿಸು, ಡುರುಕು; ಡುರುಕು ಹಾಕು.

ಗುಟ್ಟು ರಹಸ್ಯ, ಗೂಢ; ಕಿವಿಮಾತು.

ಗುಡ ಬೆಲ್ಲ; ಗುಳ; ಗೋಲ.

—ಪಾನ ಬೆಲ್ಲದ ಪಾನಕ ಕುಡಿಯು ವುದು.

ಗುಡಸಲು (ನೋಡು: ಗುಡಿಸಲು) ಗುಡಿಸಿದ ಕಸದ ತೊಟ್ಟೆ, ತಿಪ್ಪೆಗುಂಡಿ.

ಗುಡಸು ಉರುಟಾದುದು, ಉರುಟಾಗಿ ಬಾ ಗಿದ್ದ ಈ ಿ ಗುರುತು.

ಗುಡಾಕು ಸುಗಂಧ ದ್ರವ್ಯದೊಡನೆ ತಯಾರಿ ಸಿದ ತಂಬಾಕು.

ಗುಡಾಕೇಶ ಅರ್ಜುನ.

ಗುಡಾಣ ಹಂಡೆ, ದೊಡ್ಡ ಜಲಪಾತ್ರೆ.

ಗುಡಾರ (ದ್ಭ) ಗೂಢಾಗಾರ (ಸಂ), ಡೇರೆ, ವಸ್ತ್ರದ ಮನೆ.

ಗುಡಿ (ದ್ಭ) ಕುಟ (ಸಂ), ಗುಡಿಸಲು, ಮಂಟಪ; ಧ್ವಜ; ಬಣ್ಣ.

—ಕಟ್ಟು ಸುತ್ತಿಕೊಳ್ಳು; ಧ್ವಜವೇರಿಸು; ಉತ್ಸಾಹಗೊಳ್ಳು, ರೋಮಾಂಚಗೊಳ್ಳು.

—ಕಾರ ಮರ ಮತ್ತು ಬಣ್ಣಗಳಿಂದ ಗೊಂಬೆ ಮೊದಲಾದುವನ್ನು ಮಾಡುವವ; ಬಣ್ಣಗಾರ, ಚಿತ್ರಗಾರ.

ಗುಡಿಗುಡಾರ ಬಿಡಾರ, ಸಣ್ಣ ಮನೆ.

ಗುಡಿರಿ ಮಿತಿಮೀರು, ಅಧಿಕವಾಗು.

ಗುಡಿಲು ಗುಡಿಸಲು.

ಗುಡಿವಿರಿ ಮಿತಿಮೀರು, ಅಧಿಕವಾಗು.

ಗುಡಿಸಿಲು ಮನೆ, ಕುಟೀರ.

ಗುಡಿಸು ದೂಳನ್ನು ಝಾಡಿಸು; ಿ ಈ ಗುರುತು.

ಗುಡುಗು ಮುಗಿಲಿನ ಧ್ವನಿ; ದೂರದ ಸಿಡಿಲಿನ ಸದ್ದು; ಚಿಣಿಕೋಲಿನಲ್ಲಿ ಓಡುವುದು.
ಗುಡುಗುಡಿ ಹುಕ್ಕಾ, ತಂಬಾಕು ಸೇದುವ ಒಂದು ಸಾಧನ.
—ಸು ಗುಡುಗಿನಂತೆ ಕೂಗು, ಆರ್ಭಟಿಸು.
ಗುಡೆ ಚೆಂಡು, ಗುಳಿಗೆ; ನೀರು ಮೊಗೆವ ಪಾತ್ರೆ.
—ಹೊಡೆ ನೀರು ಮೊಗೆ.
ಗುಡ್ಡ ಹುಡುಗ; ಶಿಷ್ಯ; ಬೆಟ್ಟ; ರಾಶಿ; ಕುಬ್ಜ.
ಗುಡ್ಡು ಅಕ್ಕಿಯ ಒಂದು ಜಾತಿ; ಗುಡ್ಡೆ, ಕಣ್ಣಾಲಿ; ತತ್ತಿ; ಕುಳ್ಳಾದುದು.
ಗುಡ್ಡೆ (ಗುಡ್ಡ) ರಾಶಿ, ಕಣ್ಣಾಲಿ.
ಗುಣ ಒಳ್ಳೆಯ ರೀತಿ; ಲಕ್ಷಣ; ವಿನಯ ಮೊದಲಾದ ಚೆಲುವಿನ ನಡೆ; ಬಿಲ್ಲಿನ ಹೆದೆ; ಗರಿಕೆ ಹುಲ್ಲು.
—ವಂತ ನೀತಿವಂತ; ಶೌರ್ಯಾದಿ ಗುಣಗಳುಳ್ಳವ.
ಗುಣಕ ಗುಣಿಸುವ ಸಂಖ್ಯೆ; ಘಂಟೆ ಬಾರಿಸುವ ಕೋಲು.
ಗುಣಕಥನ ಹೊಗಳಿಕೆ, ಒಬ್ಬನ ಗುಣವನ್ನು ಪ್ರಶಂಸಿಸುವುದು.
ಗುಣಕು ಕೊಂತ, ಗುದಿಗೆ.
ಗುಣಗಣ ಗುಣಸಮೂಹ.
ಗುಣಗ್ರಾಹ ಒಳ್ಳೆಯದನ್ನು ಆಯುವ ಇಲ್ಲವೆ ತಿಳಿಯುವ ಯೋಗ್ಯತೆ.
ಗುಣಣೆ ನಾಟಕಶಾಲೆ; ಆಟದ ಮನೆ.
ಗುಣತ್ರಯ ಸತ್ವ, ರಜಸ್, ತಮ ಎಂಬ ಮೂರು ಗುಣಗಳು.
ಗುಣನಾಮ ಸ್ವಭಾವಕ್ಕೆ ಸಮನಾದ ಹೆಸರು.
ಗುಣಪಣ ಸದ್ಗುಣವೆಂಬ ಹಣ.
ಗುಣವಾಚಿ ವಸ್ತುಗಳ ಗುಣಗಳನ್ನು ಹೇಳುವ ಮಾತು, ಗುಣದರ್ಶಿ, ವಿಶೇಷಣ.
ಗುಣವೃಕ್ಷಕ ಕೂವೆಮರ, ಹಾಯಿಮರ.
ಗುಣಾಕಾರ ಗುಣಿಸುವುದು, ಹೆಚ್ಚಿಸುವುದು.
ಗುಣಾತಿಶಯ ಹೆಚ್ಚಿನ ಗುಣಗಳು, ಉತ್ತಮ ಶೀಲ.
ಗುಣಿ ಗುಣವಂತೆ, ಗುಣವಂತ; ಗುಂಡಿ; ಕುಣಿ; ಚಾಟಿಯ ಕೋಲು, ಬಾರುಕೋಲಿನ ಹಿಡಿ.
ಗುಣಿಕೆ (ನೋಡು: ಕುಣಿಕೆ).
ಗುಣಿತ ಗುಣಿಸುವಿಕೆ.
ಗುಣ್ಪು ಆಳ.
ಗುತ್ತ ಸಮೀಪ, ಮುಟ್ಟ; ಬಿಗಿಯಾಗಿ; ಹತ್ತ.
—ನೆ ಹತ್ತಿರವೆ; ಬಿಗಿಯಾಗಿ, ಹತ್ತಾಗಿ.
ಗುತ್ತಾದಾರ (ಗುತ್ತೇದಾರ) ವಹಿಸಿಕೊಳ್ಳುವವ; ಸಾಟಮಾಡುವವ.
ಗುತ್ತಿ ಮರೆ, ಗೋಡೆ, ಪೌಳಿ, ಪ್ರಾಕಾರ; ಪಾಯಿಖಾನೆ, ಕಕ್ಕಸ; ಗೊಂಚಲು.
—ಗೈದು ಮುಚ್ಚಿ, ಮರೆಮಾಡಿ.
ಗುತ್ತಿಗೆ ಗೊತ್ತುವಳಿ, ತಾನೇ ಮಾಡುವೆನಾಗಿ ವಹಿಸಿಕೊಳ್ಳುವಿಕೆ; ಮದ್ಯದ ಅಂಗಡಿ.
ಗುತ್ತು (ಗೊತ್ತು) ಗೊತ್ತಿರು; ಗುರುತು; ಠಾವು; ಬೀಡು.
ಗುದ ಮಲದ್ವಾರ, ಕುಂಡೆ, ಕುಂಡಿ.
ಗುದಿ ಗೊಂಚಲು; ಗುಂಪು; ಕಾಲುಕಟ್ಟು; ಹಾರು; ತುಳಿ.
ಗುದಿಗೆ ಕುಂತ, ಗದೆಯಂತಹ ಕೋಲು.
ಗುದ್ದರಿಸು ನೂಕು, ತಳ್ಳು.
ಗುದ್ದಲಿ (ದ್ಭ) ಕುದ್ದಾಲ (ಸಂ), ಅಗೆಯುವ ಸಾಧನ, ಹತೋಟಿ, ಪಿಕ್ಕಾಸು.
ಗುದ್ದು ಮುಷ್ಟಿಯಿಂದ ಹೊಡೆ; ಪೆಟ್ಟು, ಹೊಡೆತ; ಬಲ.
ಗುನಿ ಗುಂಗು, ಉಮಿ; ಕಾಲಿನ ಮೇಲಿನ ಕುಚ್ಚು, ಹೊಟ್ಟು.
ಗುನ್ನ ದಿಬ್ಬ, ಗುಡ್ಡ; ಸಣ್ಣದು.
ಗುನ್ಹೆ ಅಪರಾಧ; ಪತ್ತೆ; ಜುಲ್ಮಾನೆ, ದಂಡ.
ಗುಪ್ತ ಗುಟ್ಟಿನ; ರಹಸ್ಯ; ಮರೆಯಾಗಿ ಇರಿಸಿದ; ಅಡಗಿದ; ರಕ್ಷಿಸಲ್ಪಟ್ಟ.

ಗುಪ್ತರು ಮಗಧ ದೇಶವನ್ನಾಳಿದ ದೊರೆಗಳ ಒಂದು ಕುಲ.

ಗುಪ್ತಿ ಅಡಗಿರುವಿಕೆ; ಅಡಗಿರುವ ಒಡವೆ; ಒರೆಯಲ್ಲಿರುವ ಖಡ್ಗ.

ಗುಪ್ಪು (ಕುಪ್ಪು), ಕುಪ್ಪಳಿಸು; ಮರೆಯಾಗಿರು, ಮುಚ್ಚಿರು, ಮುಸುಕುಗೊಳು.

ಗುಪ್ಪೆ (ಕುಪ್ಪೆ), ರಾಶಿ.

ಗುಬರು ಪೊದೆ, ತಾಯ ರೆಕ್ಕೆಗಳಲ್ಲಿ ಮರೆಯಾಗಿರು; ತುಂಬ ಅಡಗಿರು.

ಗುಬ್ಬಚ್ಚಿ (ಗುಬ್ಬಿ), ಒಂದು ಪುಟ್ಟ ಹಕ್ಕಿ.

ಗುಬ್ಬಿ ಗುಬ್ಬಚ್ಚಿ, ಹಕ್ಕಿ; ಅಂಗಿಗುಂಡಿ, ಗುಂಡಿ.

ಗುಬ್ಬಿಲ್ (ಗುಬ್ಬಿ).

ಗುಮಟೆ (ಗೊಮ್ಮಟ), ಕಮಾನು; ಅರ್ಧಗೋಲಾಕಾರದ ಗೋಪುರದಂಥ ರಚನೆ; ಗೋಮಟ.

ಗುಮಾನೆ ಅನುಮಾನ, ಸಂಶಯ; ಲಕ್ಷ್ಯ; ದಾಕ್ಷಿಣ್ಯ; ಅಹಂಕಾರ.

ಗುಮಾಸ್ತ ಕಾರಕೂನ, ಬರವಣಿಗೆಯವ, ಶ್ಯಾನುಭೋಗ, ಕುಲಕರಣಿ.

ಗುಮಿ ರಾಶಿ; ಗುಂಪು, ಸಮೂಹ.

ಗುಮಿತ ರಹಸ್ಯವಾದ ಒಸಗೆ.

ಗುಮ್ಮ ದೆವ್ವ; ಗೂಬೆ; ಗುಂಡಿ; ಎತ್ತರ.

ಗುಮ್ಮಕ್ಕಿ ಗೂಬೆ, ಗೂಗೆ.

ಗುಮ್ಮಟ (ಗುಮಟ).

ಗುಮ್ಮನ ಮಕ್ಕಳ ಒಂದು ಆಟ.

ಗುಮ್ಮನೆ ಒಮ್ಮೆಗೇ, ಪಕ್ಕನೆ.

ಗುಮ್ಮಿ ನೀರಗುಂಡಿ; ರಾಶಿ.

ಗುಮ್ಮು (ಕುಮ್ಮು) ಶಬ್ದಮಾಡು; ಹೊಡೆ.

—ಇಕ್ಕು ಮರುಧ್ವನಿಕೊಡು; ವ್ಯಾಪ್ತವಾಗು.

—ಇಡು ಮರುಧ್ವನಿ ಕೊಡು; ಗುಮ್ಮೆಂದು ಶಬ್ದಮಾಡು.

ಗುರ (ಕುರ).

ಗುರಣ ಎತ್ತುವುದು, ಏರಿಸುವುದು.

ಗುರವ ಹೊಡೆತ.

ಗುರಾಣಿ ಡಾಲು, ಅಡ್ಡಣ, ಹಲಗೆ.

ಗುರಿ ಲಕ್ಷ್ಯ, ನೋಟ, ದೃಷ್ಟಿ; ಧ್ಯೇಯ.

ಗುರಿಕಾರ ಯಜಮಾನ, ಒಡೆಯ, ನಾಯಕ.

ಗುರಿಯಾಳು ಹುಡುಗರ ಒಂದು ಆಟ.

ಗುರು ಬೃಹಸ್ಪತಿ; ತಂದೆ; ಉಪದೇಶಕ, ಪಾಠ ಹೇಳುವವ; ಪೂಜ್ಯ; ಭಾರವಾದ ವಸ್ತು; ಎರಡು ಮಾತ್ರೆಗಳ ಅಕ್ಷರ; ದ್ರೋಣಾಚಾರ್ಯ.

—ತರ ಭಾರವಾದ, ಶ್ರೇಷ್ಠವಾದ.

ಗುರುಕು ಗೊರಕೆ ಹೊಡೆ.

—ಇಡು ಗೊರೆ, ಗೊರಕೆಹೊಡೆ.

ಗುರುಗುರಿಸು ಗೊರಕೆಹೊಡೆ, ಗುರುಗುರು ಧ್ವನಿಮಾಡು, ಗುರುಗುಟ್ಟು; ರೇಗು.

ಗುರುತಲ್ಪ ಗುರುಪತ್ನಿಯೊಡನೆ ಹಾದರ ಮಾಡುವವ.

ಗುರುತು ಗೊತ್ತು, ಪತ್ತೆ, ಪರಿಚಯ.

ಗುರುತ್ವ ಭಾರವಾಗಿರುವಿಕೆ; ಹಿರಿಮೆ; ಭೂರಾಶಿಯ ಸೆಳೆತ.

—ಶಕ್ತಿ ಭೂಮಿ ಕಡೆಗೆ ಸೆಳೆಯುವ ಶಕ್ತಿ; ಭೂಮಿಯ ಆಕರ್ಷಣ ಶಕ್ತಿ.

ಗುರುವಾರ ಒಂದು ವಾರದ ಹೆಸರು.

ಗುರುಸ್ಫೂರ್ತಿ ದೊಡ್ಡತನ; ಗುರುವಿನ ಹರಕೆ.

ಗುರುಹಸ್ತ ಗುರುವಿನ ಅಧೀನವಾದವ; ಲಿಂಗವಂತ.

ಗುರುಳಿ ಗುಳ್ಳೆ; ಬೊಕ್ಕೆ, ಕುರು; ಕಾಲುಂಗುರ.

ಗುರ್ಜರ ಒಂದು ದೇಶ, ಗುಜರಾಥ.

ಗುರ್ದು (ಗುದ್ದು).

ಗುರ್ಬು ಆಶ್ಚರ್ಯ, ವಿಸ್ಮಯ.

ಗುರ್ವಿಣೀ (ಗುರ್ವಿಣಿ), ಗರ್ಭವತಿ, ಬಸಿರಿ.

**ಗುರ್ವು** (ಗುರುವ) ವಿಸ್ಮಯ; ಭೀತಿ; ಭೀಕರ.
**ಗುಲ** ಗುಲಗಂಜಿ; ಗುಡ; ಗುಳ.
**ಗುಲಗಂಜಿ** (ಗುರುಗುಂಜಿ), ಒಂದು ಕೆಂಪು ಕಾಳು, ಗುಂಜಿ.
**ಗುಲಾಬಿ** ಒಂದು ಹೂಗಿಡ; ಅದರ ಹೂ; ಗುಲಾಲಿ ಬಣ್ಣ, ಪಾಟಲಿ ಬಣ್ಣ.
**ಗುಲಾಮ** ದಾಸ, ಸೇವಕ.
**ಗುಲಾಲಿ** ಗುಲಾಬಿ ಬಣ್ಣ, ಪಾಟಲಿ ಬಣ್ಣ.
**ಗುಲ್ಫ** ಪಾದಗ್ರಂಥಿ, ಕಾಲಿನ ಹರಡು, ಹಡಡ.
**ಗುಲ್ಮ** ಪೊದರು; ಒಂದು ಸೇನಾವಿಭಾಗ; ಒಂದು ಬೇನೆ, ಪ್ಲೀಹ ವ್ಯಾಧಿ.
**ಗುಲ್ಲು** ಗದ್ದಲ, ಮುದ್ದು; ಗೌಜು.
**ಗುಹ** ಕಾರ್ತಿಕೇಯ; ರಾಮನ ಒಬ್ಬ ಅಂಬಿಗ.
**ಗುಹಕ** (ಗುಹ) ರಾಮನನ್ನು ವನವಾಸಕ್ಕೆ ಹೋಗುವಾಗ ನದಿ ದಾಟಿಸಿದವ.
**ಗುಹಾ** (ಗುಹೆ), ಗವಿ; ಷಣ್ಮುಖ.
**—ಜನಕ** ಷಣ್ಮುಖನ ತಂದೆ, ಶಿವ.
**ಗುಹೆ** (ಗುಹಾ).
**ಗುಹ್ಯ** ಗುಟ್ಟಾದ; ಮರೆಯಾದ.
**ಗುಹ್ಯಕ** ಕುಬೇರನ ಕಾವಲಿನವ; ಕುಬೇರ.
**ಗುಹ್ಯಕೇಶ್ವರ** ಗುಹ್ಯಕರ ಒಡೆಯ, ಕುಬೇರ.
**ಗುಳ** ಹಕ್ಕರಿಕೆ, ಜೂಲು; ಆನೆ ಕುದುರೆಗಳ ಮೇಲೆ ಹಾಕುವ ಪಾವುಡ; ಕುಳ, ಸಲಾಕೆ.
**ಗುಳಿ** ಕುಳಿ, ಹೊಂಡ.
**—ದ** ತಗ್ಗಾದ.
**ಗುಳುಚ್ಛ** ಗರಿಯ ತುದಿ.
**ಗುಳಿ** (ಗುಳ್ಯ) ಗುಂಪು.
**ಗುಳ್ಯ** ಬರಗಾಲದಿಂದ ಊರುಬಿಡುವುದು.
**ಗುಳ್ಳ** ಬದನೆ ಜಾತಿಯ ಒಂದು ತರಕಾರಿ, ಪಲ್ಲೆಯ, ಉರುಟು ಬದನೆ.
**ಗುಳ್ಳೆ** ನೀರಿನ ಉಬ್ಬು, ನೊರೆಯುಬ್ಬು; ದುಂಡಾದುದು, ಬೊಕ್ಕೆ.
**ಗುಂಛ** ಗುಚ್ಛ; ಕುಚ್ಚು.
**ಗುಂಜ** ಗುಲಗುಂಜಿ; ಒಂದು ವಿಧದ ಬಳ್ಳಿ; ಹೆಂಡದಂಗಡಿ.
**ಗುಂಜತ್** ಧ್ವನಿಮಾಡುತ್ತಿರುವ.
**ಗುಂಜಾಭರಣ** ಗುಲಗುಂಜಿಯ ಸರ.
**ಗುಂಜು** ಗೋಜು; ಸಿಕ್ಕು, ಜಡೆ; ಕತ್ತ, ಕಾತಿ; ಎಳೆ; ಮುದುರು, ಮುರುಟು.
**ಗುಂಟ** ಸೇರಿಕೆ, ಬೆರಿಕೆ, ಹೊಂದುವಿಕೆ; ಸಮೀಪ; ಗೂಟ; ತನಕ.
**ಗುಂಟೆ** $\frac{1}{40}$ನೇ ಎಕರೆ ವಿಸ್ತೀರ್ಣ.
**ಗುಂಡ** ಸೇವಕ; ದುಂಡ; ಘಟಿಂಗ.
**—ಗೆ** ದುಂಡಾಗಿರುವಿಕೆ, ಗುಂಡಿನಂತಿರುವಿಕೆ; ಉರುಟು.
**ಗುಂಡಾಂತರ** ಪಾಯಹಾಕು; ಹಾಳು ಮಾಡು; ಕೆಲಸಕ್ಕೆ ಕಲ್ಲುಹಾಕು.
**ಗುಂಡಿ** ಆಳ, ಕುಣಿ, ಕುಳಿ; ಕ್ಷಯ.
**ಗುಂಡಿಗೆ** (ದ್ಭ) ಕುಂಡಿಕಾ (ಸಂ), ಕಮಂಡಲು; ಎದೆಗುಂಡಿಗೆ, ಹೃದಯ.
**ಗುಂಡು** ಉರುಟು ಗೋಲಿ, ಗೋಲಿ; ತುಬಾಕಿ ಇಲ್ಲವೆ ಫಿರಂಗಿಯ ಗುಂಡು; ನೆರವಿ; ಗುಂಪು; ಶ್ರೇಣಿ.
**—ಕಿಡಿ** ಉರುಟು ಕಿಡಿ; ರಾಶಿಯಾಗಿ ಬೀಳುವ ಕಿಡಿ.
**ಗುಂಪು** ಸಮೂಹ; ಆಳ; ರಾಶಿ.
**ಗುಂಫನ** (ಗುಂಪನೆ) ಉತ್ತಮ ವಾಕ್ಯರಚನೆ; ರಚನೆ.
**ಗುಂಫಿತ** ಗಂಟುಹಾಕಲ್ಪಟ್ಟ, ರಚನೆಗೊಂಡ.
**ಗುಂಬ** ಗಂಭೀರವಾದ; ತಿಳಿವಿಗೆ ದೊರಕದ; ಮೌನವಾದ.
**ಗೂಕು** ಚಿಗುರು, ಹಲಸಿನ ಮಿಡಿ.
**ಗೂಗು** (ಗುಂಗು), ಉಮಿ, ಹೊಟ್ಟು.
**ಗೂಗೆ** (ದ್ಭ) ಘೂಕ (ಸಂ), ಗೂಬೆ.
**ಗೂಟ** ನೆಲಕ್ಕೆ ಅಥವಾ ಗೋಡೆಗೆ ನಟ್ಟ ಒಂದು ಕಂಬ, ಗುಂಟ.

ಗೂಡಾರ (ಧ್ಭ) ಗೂಢಾಗಾರ (ಸಂ), ಡೇರೆ, ವಸ್ತ್ರದ ಮನೆ, ಗುಡಿ.

ಗೂಡು ಪಕ್ಕಿಯ ಮನೆ; ದೇಹ; ಅಸ್ಥಿಪಂಜರ; ಪಂಜರ.

—ಇಕ್ಕು ಗೂಡು ಕಟ್ಟು, ಮನೆ ಕಟ್ಟು.

—ಕೊಳು ಮನೆಯನ್ನು ಸೇರು.

ಗೂಡೆ ಬುಟ್ಟಿ, ಕುಕ್ಕೆ; ಹುಡುಗಿ.

ಗೂಢ (ಸಂ) ಗುಟ್ಟು, (ಧ್ಭ) ಗುಪ್ತ.

—ಚರ (ಗೂಢಚಾರ) ಗುಟ್ಟಾಗಿ ನಡೆವವ.

—ಸಾಕ್ಷಿ ಗುಟ್ಟಿನ ದಾಖಲೆ.

ಗೂಢಾಂಗ ಅಮೆ, ಗುಪ್ತವಾದ ಭಾಗ.

ಗೂಣು (ಗೂಡು).

ಗೂದೆ ಕುಂಡೆ; ಟೊಮೆಟೋ.

ಗೂನು ಬಾಗು; ಬಗ್ಗಿದ ಬೆನ್ನು, ಡೂಗು.

ಗೂಬೆ (ಗೂಗೆ).

ಗೂರಲು (ಗೂರು) ನೇವಸ, ಉಬ್ಬಸ.

ಗೂರು (ಗೂರಲು), ನೆಲವನ್ನು ಕೊಂಬಿಂದ ತಿವಿದು ಕೆರಳು; ನೇವಸ.

ಗೂರ್ಣಿಸು ಗೂರ್ಮಿಸು, ಪ್ರತಿಧ್ವನಿಸು; ಅಬ್ಬರಿಸು; ಕಡಲ ಕೂಗು, ನೀರಿನ ಅಬ್ಬರ.

ಗೂವ ಕಪೋತ, ಪಾರಿವಾಳ.

ಗೂವಾಕ ಅಡಕೆ ಮರ.

ಗೂಹನ ಅಡಗಿರುವಿಕೆ.

ಗೂಳಿ ವೃಷಭ, ಬೀಜದ ಹೋರಿ, ಬಸವ; ಮೀನು ಹಿಡಿಯುವ ಬುಟ್ಟಿ.

ಗೃಧ್ರ (ಸಂ) ಹದ್ದು, ಪಕ್ಷಿ; ಲೋಭಿ.

—ರಾಜ ಹದ್ದುಗಳ ಒಡೆಯ; ಜಟಾಯು.

ಗೃಷ್ಟಿ ಒಂದು ಕರುಹಾಕಿದ ದನ, ಮಣಕ.

ಗೃಹ ಮನೆ; ಹೆಂಡತಿ; ಸ್ತ್ರೀ; ಮೇಷಾದಿರಾಶಿಗಳ ಮನೆ.

—ಆಗತ ಮನೆಗೆ ಬಂದವ, ಅತಿಥಿ.

—ಕಲಹ ಮನೆಯೊಳಗಿನ ಜಗಳ.

—ಕೃತ್ಯ ಮನೆವಾರ್ತೆ ಕೆಲಸ.

—ಸ್ಥ ಮನೆಯಲ್ಲಿ ಕುಟುಂಬಿಕನಾಗಿರುವವ; ಎರಡನೆಯ ಆಶ್ರಮ.

—ಸ್ಥಿಕೆ ಒಳ್ಳೆತನ, ಗೌರವದ ನಡೆ, ಸಂಭಾವಿತ ವರ್ತನೆ.

ಗೃಹಿಣಿ ಹೆಂಡತಿ, ಮನೆಗೆಲಸದಲ್ಲಿ ಚತುರಳಾದವಳು.

ಗೃಹ್ಯ ಮನೆಯಲ್ಲಿ ಆಸಕ್ತವಾದ; ಕೆಲವು ಸೂತ್ರ ವಿಶೇಷಗಳು.

ಗೃಂಜನ ಬೆಳ್ಳುಳ್ಳಿ.

ಗೆಜ್ಜೆ ಕಾಲಿನ ಗಗ್ಗರ, ಸದ್ದುಮಾಡುವ ಪುಟ್ಟ ಒಡವೆ; ಒಂದು ಬಗೆಯ ಹುಲ್ಲು, ಒಂದು ಗಿಡ; ಗಳಲೆ.

—ಗಾರ ಗೆಜ್ಜೆ ತಯಾರಿಸುವವ.

ಗೆಡಪ ಗಿಣಿಯ ಕೂಗು.

ಗೆಡೆ (ಗೆಣೆ) ಸ್ನೇಹ, ಜತೆ, ಸಂಪರ್ಕ; ಪೊಳ್ಳು ಮಾತಾಡು, ಹರಟು.

—ಕೊಳು ಜತೆ ಸೇರು, ಎಣೆಯಾಗು.

—ಪಕ್ಕಿ ಚಕ್ರವಾಕ.

ಗೆಡ್ಡೆ (ಗಡ್ಡೆ), ಗೆಂಡೆ, ಮೂಲ.

ಗೆಣತಿ (ಗೆಳತಿ), ಸಂಗಾತಿ, ಸಖಿ.

ಗೆಣಸು ಒಂದು ಬಗೆಯ ಮೂಲ, ಗಡ್ಡೆ.

ಗೆಣೆಗಾತಿ (ನೋಡು: ಗೆಣತಿ)

ಗೆಣೆಗಾರ ಗೆಳೆಯ, ಮಿತ್ರ.

ಗೆತ್ತು ತಿಳಿದು, ಭಾವಿಸಿ; ಭ್ರಮಿಸಿ.

ಗೆದಿ ಗಳಿಸು; ಜಯಿಸು, ಗೆಲ್ಲು.

ಗೆದ್ದಲು (ಗೆದ್ದಲಿ), ಒರಳೆ, ಒಂದು ಬಗೆಯ ನಾಶಕರ ಇರುವೆ, ಬಿಳಿ ಇರುವೆ.

ಗೆಬರು ಕೆದರು, ನೆಲ ಕೆರಳು; ಅಗಿ.

ಗೆಯ್ ಮಾಡು; ದುಡಿ; ಉಳು.

—ಮೆ ಮಾಡುವಿಕೆ; ದುಡಿಯುವಿಕೆ; ಶ್ರಮಿಸುವಿಕೆ, ದುಡಿಮೆ.

ಗೆರಸೆ (ಕೆರಸೆ), ಮೊರ, ಕಾಳುಕಡಿ ಕೇರುವ ಬುಟ್ಟಿ.

ಗೆರೆ ರೇಖೆ, ಗೀಟು; ಅದೃಷ್ಟ.
ಗೆಬ್ರ್ಯ ರಮಿಸು, ಭೋಗಿಸು.
ಗೆಲ್ (ಗೆಲು), ಗೆಲಿ, ಜಯಿಸು; ಗೆಲವು.
ಗೆಲ (ಗೆಲವು), ಜಯ, ಜಯದಿಂದ ದೊರೆವ ಹರ್ಷ, ಹೆಮ್ಮೆ; ಸೊಗ, ದುಃಖ ಅಥವಾ ಬೇಸರ ಕಳೆದ ಬಗ್ಗೆ ಆಹ್ಲಾದ, ಉಬ್ಬು.
ಗೆಲು ಜಯಿಸು, ಗೆಲ್ಲು, ಸೋಲಿಸು; ಹರ್ಷ ಗೊಳ್ಳುವಂತೆ ಮಾಡು; ಆಹ್ಲಾದಿಸು.
—ಗೆ ಜಯ; ಗೆಲವು.
—ಗೆಯ್ ಇಷ್ಟಾರ್ಥ ಕೈಗೂಡು.
ಗೆಲ್ಲವೆಣ್ ಜಯಲಕ್ಷ್ಮಿ.
ಗೆಲ್ಲು (ನೋಡು: ಗೆಲು) ಕೊಂಬೆ, ಟೊಂಗೆ.
ಗೆಳತಿ (ಗೆಣತಿ) ಸಖಿ, ಕೆಳದಿ.
ಗೆಳೆ (ಕೆಳೆ) ಸ್ನೇಹ, ಒಡನಾಟ.
—ತನ ಸ್ನೇಹ, ಮಿತ್ರತ್ವ.
—ಯ ಸ್ನೇಹಿತ, ಸಂಗಾತಿ, ಮಿತ್ರ.
ಗೆಂಟು ದೂರ; ಹತ್ತಿರ; ಅವಕಾಶ; ಬಿಡುಗಡೆ; ದೂರದೂರವಿರುವ ಕಟ್ಟು.
ಗೆಂಟೆ (ಗೆಂಡೆ).
ಗೆಂಡೆ ಗಡ್ಡೆ, ದಪ್ಪನಾದ ಬೇರು; ಪುರುಷನ ಜನನೇಂದ್ರಿಯ.
ಗೇ ದುಡಿ; ಮಾಡು.
ಗೇಣ್ ಉದ್ದವಾದ ಕತ್ತಿ; ಸುರಗಿ; ಹೆಬ್ಬೆಟ್ಟಿನ ತುದಿಗೂ ಕಿರಿಬೆರಳ ತುದಿಗೂ ಇರುವ ಅತ್ಯಂತ ದೂರ.
ಗೇಣಿ ಲಾವಣಿ, ಹೊಲ ಸಾಗುವಳಿಗೆ ಪಡೆದವನು ಕೊಡುವ ತೆರಾನೆ.
ಗೇಣು (ಗೇಣ್) ಒಂಬತ್ತು ಅಂಗುಲದ ಅಳತೆ.
ಗೇನ (ದ್ಭ) ಜ್ಞಾನ (ಸಂ).
ಗೇಬೆ ಬಾಪು, ಬಾವು, ಉಬ್ಬಿರುವುದು.
ಗೇಯ ಗಾನ, ಸಂಗೀತ; ಹಾಡುಗಾರ.
ಗೇಯು (ಗೇ) ದುಡಿ, ಶ್ರಮಿಸು, ಗಳಿಸು.
ಗೇರು (ಕೇರು), ಕಾಳು ಕಸ ಬೇರೆ ಮಾಡು; ಒಂದು ಜಾತಿಯ ಮರ; ಗೋಡಂಬಿ ಕೊಡುವ ಮರ, ಕೇರು ಮರ.
ಗೇರೆ ಬೇಲಿ; ತಾತ್ಕಾಲಿಕ ಆವರಣ.
ಗೇಲಿ ಕುಚೋದ್ಯ, ಅಣಕ, ಪರಿಹಾಸ್ಯ.
ಗೇಹ (ದ್ಭ) ಗೃಹ (ಸಂ), ಮನೆ.
ಗೇಹನಿ ಗೃಹಿಣಿ, ಮನೆಯಾಕೆ, ಹೆಂಡತಿ.
ಗೇಂಡುಕ ಗಂಡುಮೃಗ, ಖಡ್ಗಮೃಗ.
ಗೈ (ಗೆಯ್) ಮಾಡು; ಹೂಡು.
ಗೈರು ತಪ್ಪು, ರೀತಿ ಅಲ್ಲದ್ದು, ಅಲ್ಲದು.
ಗೈರುವಿಲೆ ಹೆಚ್ಚು ಕಡಮೆಯಾಗು, ಅವ್ಯವಸ್ಥಿತವಾಗು.
ಗೊಗ್ಗ ಗುಮ್ಮ, ಮಕ್ಕಳಿಗೆ ಬೆದರಿಕೆ ಹುಟ್ಟಿಸಲು ಹೇಳುವ ಒಂದು ಕಲ್ಪನೆಯ ಪ್ರಾಣಿ; ಬಾಯಿ ಬಾರದವ.
ಗೊಜಗು ತೊದಲು; ಅಸ್ಪಷ್ಟ ನುಡಿ.
ಗೊಜ್ಜಲು ಕೆಸರು, ರಾಡಿ.
ಗೊಜ್ಜು ಅರೆದ ಹಿಟ್ಟು, ಕಡೆದು ದೊರೆತ ಒಡವೆ; ನೀರು ಕಲಸಿದ ಪುಡಿ; ಒಂದು ಬಗೆ ಚಟ್ನಿ; ಜಲ್ಲಿಕಲ್ಲು; ಮಣ್ಣು ಸೇರಿದ ಮಿಶ್ರಣ.
ಗೊಜ್ಜೆ ಕೆಸರು, ರೊಜ್ಜು, ರಾಡಿ; ಹಳಸಿದ್ದು.
ಗೊಟರು ಕುಣಿ; ಬಿಲ.
ಗೊಟ್ಟೆ ಗೋಷ್ಠ (ಸಂ), ದನಗಳು ನಿಲ್ಲುವ ಸ್ಥಳ, ಕೊಟ್ಟಿಗೆ; ಗೋಶಾಲೆ; ಗುಂಪು.
ಗೊಟ್ಟಿ ಗೋಷ್ಠಿ (ಸಂ), ಸಭೆ, ಸಮೂಹ.
—ಗಾಣರು ಗುಂಪಾಗಿ ಹಾಡುವವರು.
ಗೊಡಚಿ ಕಣ್ಣು ಕೋಸು, ಕಣ್ಣಿಗೆ ಬರುವುದು.
ಗೊಡರು ಗುಟುರು, ಗುಬ್ಬಳಿಸು, ಡುರಿಕೆ ಹಾಕು.
ಗೊಡಲು ಹೊಟ್ಟು, ಉಮಿ.
ಗೊಡವೆ ಸಂಬಂಧ, ಗೋಜು, ಸಂಪರ್ಕ; ತಳ್ಳಿ, ಉಸಾಬರಿ.
ಗೊಡ್ಡ ತೊಂದರೆ; ತುಂಟತನ, ದುಶ್ಚೇಷ್ಟೆ.

—ಆಟ ಕಾಟ; ಕಿತ್ತಾಟ; ಒಂದು ಬಗೆ ಚೆಂಡಾಟ.
**ಗೊಡ್ಡು** ಫಲವಿಲ್ಲದ, ಸಾರವಿಲ್ಲದ; ಬಂಜೆ.
**ಗೊಣಗ** ಮಾತಾಡುವಾಗ ಮೂಗಿನಿಂದ ಧ್ವನಿಮಾಡುವವ, ಚಾಡಿಕೋರ.
**ಗೊಣಗು** ಒಳಂಗಿದೊಳಗೆ ದೂರು; ಕೇಳಿ ಕೇಳಿಸದಂತೆ ಮಾತಾಡು; ಮೂಗಿನಿಂದ ಮಾತಾಡು.
**ಗೊಣಸು** ಕುಣಿಕೆ, ಸರಪಳಿ, ಕೊಂಡಿ.
**ಗೊಣೆ** (ಗೊಣೆಯ) ಕೊಂಡಿ, ಬಿಲ್ಲಿನ ಹೆದೆ.
**ಗೊತ್ತು** ನಿಶ್ಚಯ, ಗುರಿ; ತಿಳಿವಳಿಕೆ; ಇರುವ ಸ್ಥಾನ, ನೆಲೆ; ದನ ಕಟ್ಟುವ ಸ್ಥಳ.
—ಗಾರ ಪರಿಚಿತ; ನಾಲ್ಕು ಜನರಿಗೆ ತಿಳಿದವ.
**ಗೊದ** ದಪ್ಪವಾದ ಗಂಜಿ; ದಪ್ಪಗಟ್ಟುವುದು.
**ಗೊದ್ದ** ಒಂದು ಮರ; ಕರಿಯ ದೊಡ್ಡಿರುವೆ.
**ಗೊನಗ** (ಗೊಣಗ).
**ಗೊನೆ** (ಕೊನೆ) ತೆನೆ; ಫಲಸಮುದಾಯ; ಕಾಯಿಗೊಂಚಲು.
**ಗೊಪ್ಪೆ** ಪಪ್ಪಾಯಿ ಮರ, ಫರಂಗಿ ಮರ.
**ಗೊಬ್ಬರ** ಸಸ್ಯಾಹಾರ; ಗಂಜಳ ಎಲೆ ಮೊದಲಾದುವು ಸೇರಿ ಆಗುವ ವಸ್ತು; ಕೋಟಲೆ.
**ಗೊಬ್ಬು** ಆಟ, ವಿನೋದ; ಕುಣಿತ.
**ಗೊಬ್ಬುಳಿ** ಬೊಬ್ಬುಳಿ.
**ಗೊರಗು** (ಗೊರಬು).
**ಗೊರಬು** ಎಲೆಗಳಿಂದ ಮಾಡಿದ ಒಂದು ಮೈಮರೆ. ಕೊಂಕಣದಲ್ಲಿ ಇದನ್ನು ಮಳೆಗೆ ಹೊದೆಯುವರು.
**ಗೊರವ** (ದ್ಭ) ಗುರು (ಸಂ), ಶೈವ ಭಿಕ್ಷು; ತಪಸ್ವಿ, ಸನ್ಯಾಸಿ.
**ಗೊರವಂಕ** ಒಂದು ಪಕ್ಷಿ; ಮೈನಾ ಹಕ್ಕಿ.
**ಗೊರವಿ** ಸೂಟಿಗೆ ಆಗುವ ಒಂದು ಜಾತಿಯ ಮರ.
**ಗೊರಸು** ದನ ಎತ್ತುಗಳ ಕಾಲುಗುರು.
**ಗೊರೆ** ಸದ್ದು, ಮಾತು; ಗೊರಕೆಹಾಕು.
**ಗೊಲಸು** ಗೊಣಸು, ಕುಣಿಕೆ; ಕೊಂಡಿ; ಸರಪಣಿ; ಒಂದು ಆಭರಣ.
**ಗೊಲೆ** ಬಿಲ್ಲಿನ ಕೊಪ್ಪು; ಬಿಲ್ಲಿನ ತುದಿ; ಗೊನೆ, ಗೊಲ್ಲೆ.
**ಗೊಲಿ** ಬತ್ತದ ಹೊಟ್ಟು, ಸಿಪ್ಪೆ, ಉಮಿ.
**ಗೊಲ್ಲ** (ದ್ಭ) ಗೋವಳ (ಸಂ), ಗೋಪಾಲಕ, ದನಕಾಯುವವ.
—ತಿ ಗೊಲ್ಲರವಳು.
**ಗೊಲ್ಲಿ** ಸಂದುಗೊಂದು, ಮೂಲೆ; ಗೊಲ್ಲತಿ.
**ಗೊಳಲಿ** ಹೊಟ್ಟು, ಉಮಿ.
**ಗೊಂಚಲು** ವಲ್ಲರಿ, ಜೊಲ್ಲೆ, ಜೊಂಕೆ.
**ಗೊಂಚಿ** ಆಟದ ಒಡವೆ; ಪ್ರತಿಮೆ, ಪುತ್ಥಳಿ; ಕಣ್ಣಾಲಿ; ಸಮೂಹ.
**ಗೊಂಟೆ** ಸಮೂಹ, ಗೊಲ್ಲೆ, ಜೊಲ್ಲೆ.
**ಗೊಂಟು** ದಿಕ್ಕು.
**ಗೊಂಡೆ** (ಗೊಂಡೆಯ) ಕುಚ್ಚಿ, ಗೊಂಚಲು.
**ಗೊಂತ** (ಗೋತ) ಗಂಜಳ, ದನಗಳ ಮೂತ್ರ.
**ಗೊಂತರು** ಕೂಗಾಟ.
**ಗೊಂದಣ** (ಗೊಂದಣಿ) ಗಡಣ, ಸಾಲು; ನಿಕುರುಂಬ, ಗುಂಪು.
—ಇಸು ನೆರೆಯು, ಗುಂಪುಕೂಡು.
**ಗೊಂದಳ** (ನೋಡು: ಗೊಂದಣ); ಮಹಾರಾಷ್ಟ್ರದ ಜನರ ಒಂದು ಹಬ್ಬ.
**ಗೊಂದಿ** ಇಕ್ಕಟ್ಟು, ಇಡುಕು.
**ಗೊಂದೆ** ನಂದಿ, ವೃಷಭ, ಬಸವ.
**ಗೋ** ಬಸವ; ದನ; ಕಿರಣ; ವಜ್ರ; ಜಲ; ಪಶು; ಚಂದ್ರ; ವಾಯು; ಕಣ್ಣು; ಬಾಣ; ತೀರ; ದಿಕ್ಕು; ತಾಯಿ; ಸರಸ್ವತಿ; ಭೂಮಿ.
**ಗೋಕರ್ಣ** ಕಣ್ಣೇ ಕಿವಿಯಾಗಿ ಉಳ್ಳುದು; ಸರ್ಪ; ದನದಂತೆ ಕಿವಿಯುಳ್ಳುದು, ಕತ್ತೆ; ಗಣ; ಉತ್ತರ ಕನ್ನಡದಲ್ಲಿ ಒಂದು ಕ್ಷೇತ್ರ.

ಗೋಕುಲ ಯಮುನಾ ನದಿಯ ದಂಡೆಯ ಮೇಲಿನ ಒಂದು ಊರು. ಇಲ್ಲಿ ಕೃಷ್ಣನು ತನ್ನ ಬಾಲ್ಯವನ್ನು ಕಳೆದನು; ದನಕಟ್ಟುವ ಸ್ಥಳ.

ಗೋಗರೆ ಗುಟುರು ಹಾಕು; ಕಪ್ಪೆಗಳ ಕೂಗುವಿಕೆ; ದೀನವಾಗಿ ಬೇಡುವುದು.

ಗೋಚರ ಕಾಣುವಿಕೆ, ನೋಟಕ್ಕೆ ಸಿಗುವುದು.

—ಇಸು ತೋರಿಸಿಕೊ.

ಗೋಚರಾವು ದನಗಳು ಮೇಯುವ ಸ್ಥಳ.

ಗೋಚು (ದೋಚು) ಬಕಬಕನೆ ಬಾಚು, ಸೂರೆಮಾಡು.

ಗೋಜಾಗತ ಸಿಕ್ಕು, ತೊಡರು.

ಗೋಜು ಗೊಡವೆ, ಸಂಬಂಧ, ಉಸಾಬರಿ.

ಗೋಟು ಗುಟುಕು; ಮೂಲೆ, ಕೋನ; ಬದಿ, ಅಂಚು, ಸೆರಗು; ಸೇರಿಕೆ; ಗಟ್ಟಿಯಾಗಿ ಬೆಳೆಯುವುದು; ಕಳಪೆ; ಗೊಡ್ಡು; ಒರಟು.

ಗೋಡು ಬಾವಿ, ನದಿ ತಳಗಳ ಕೆಸರು.

ಗೋಡೆ ಕುಡ್ಯ (ಸಂ), ಭಿತ್ತಿ; ಆವರಣ.

ಗೋಣಿ ಆಲ, ಹಸಿಬೆ ಚೀಲ; ಗೋಣಿನಾರು.

ಗೋಣು (ಗೋಣ್), ಕೊರಳು, ಕುತ್ತಿಗೆ.

—ಕೊಯ್ಲು ಕೊರಳು ಕತ್ತರಿಸುವಿಕೆ.

—ಮುರಿ ಕೊಲ್ಲು, ಕುತ್ತಿಗೆ ಮುರಿ.

ಗೋತ ಗಂಜಳ; ಲಾಗ.

ಗೋತಮ ಬ್ರಹ್ಮಪುತ್ರನಾದ ಒಬ್ಬ ಋಷಿ.

ಗೋತ್ರ ಪರ್ವತ; ಕಾಡು; ವಂಶ; ಗುಂಪು; ಭೂಮಿ.

—ಜ ಕುಲದಲ್ಲಿ ಹುಟ್ಟಿದವ.

—ಭಿದ್ ಪರ್ವತ ಸೀಳುವವ, ಇಂದ್ರ.

—ವಧೆ ಕುಲನಾಶ, ವಂಶನಾಶ.

ಗೋದಣ (ಗೋದಲಿ) ತಳಿ; ಹಟ್ಟಿಯ ಬದಿಯ ತಿಟ್ಟೆ.

ಗೋದಾನ ಸಮಾವರ್ತನ ಸಂಸ್ಕಾರ; ಗೋವನ್ನು ದಾನಮಾಡುವುದು.

ಗೋದಾಮು ಉಗ್ರಾಣ, ಕೊಟ್ಟಾರ, ಗಡಂಗು, ಮಳಿಗೆ.

ಗೋದಾರಣ ನೇಗಿಲು, ಗುದ್ದಲಿ.

ಗೋದಿ (ಗೋಧಿ).

ಗೋದು ಗರಡಿಮನೆ, ವ್ಯಾಯಾಮ ಶಾಲೆ.

ಗೋದುವೆ (ದ್ಭ) ಗೋಧೂಮ (ಸಂ), ಗೋಧಿ ಎಂಬ ಧಾನ್ಯ.

ಗೋದೆ ಮರದ ಗಂಟು, ಗಂಟುಳ್ಳ ಬೇರು; ಗೋದು, ಗರಡಿ ಮನೆ.

ಗೋಧನ ದನರೂಪದ ದ್ರವ್ಯ; ದನಗಳ ಹಿಂಡು; ಪಶುಸಂಪತ್ತು ಉಳ್ಳವ.

ಗೋಧಿ (ಗೋದುವೆ) ಒಂದು ಧಾನ್ಯ.

ಗೋಧೂಮ (ಗೋದುವೆ).

ಗೋಧೂಳಿ (ಗೋಧೂಲಿ), ದನಗಳ ಕಾಲಿಂದ ದೂಳೆಬ್ಬಿಸಲ್ಪಡುವ ಸಮಯ; ಮುಸ್ಸಂಜೆ ಹೊತ್ತು.

ಗೋಧೆ ದೊಡ್ಡ ಜಾತಿಯ ಗೌಳಿ; ಬಿಲ್ಲುಗಾರನು ಕೈಗೆ ಕಟ್ಟಿಕೊಳ್ಳುವ ತೊಗಲಿನ ರಕ್ಷಣೆ.

ಗೋನಾಳಿ ಗಂಟಲು.

ಗೋನಿಕಾಯ ದನಗಳ ಹಿಂಡು.

ಗೋಪ ಗೋವುಗಳೊಡೆಯ, ಪಶುಪಾಲಕ; ಕಿರಣಗಳ ಒಡೆಯ, ಸೂರ್ಯ; ಅರಸು; ನಂದರಾಜನ ಮಗ; ಹಿಮಾಚಲ; ವೃಷಭ; ವಿಷ್ಣು; ಇಂದ್ರ.

—ಧ್ವಜ ನಂದಿಧ್ವಜವುಳ್ಳವ, ಶಿವ.

—ಸ್ತ್ರೀ ಗೊಲ್ಲಕನ್ನೆ, ಗೊಲ್ಲತಿ.

ಗೋಪವಾಹನ ಐರಾವತ; ಹಂಸ; ಗರುಡ; ಬಸವ; ಇಂದ್ರ.

ಗೋಪಾಲ ಗೋಪ, ಗೊಲ್ಲ; ಕೃಷ್ಣ.

—ಕ (ಗೋಪಾಲ).

ಗೋಪಿ ಗೋಪಕನ್ಯೆ, ಗೊಲ್ಲತಿ.

ಗೋಪು ಕೊರಳ ಕಟ್ಟಾಣಿ.

**ಗೋಪುರ** ಪುರದ್ವಾರ, ಅಗಸೆ ಬಾಗಿಲು; ಹೆಬ್ಬಾಗಿಲು; ದೇವಾಲಯಗಳ ಮುಂದಿನ ವಿಮಾನ; ಶಿಖರ.

**ಗೋಪ್ಯ** ಗುಟ್ಟಾದ, ರಹಸ್ಯವಾದ.

**ಗೋಮನಾಳಿ** ಗಂಟಲು, ಗಂಟಲಿನ ಬುಡ, ಮತ್ತು ಸ್ತನಭಾಗಗಳು ಸೇರಿ.

**ಗೋಮಯ** ಸೆಗಣಿ.

**ಗೋಮಂತ** ದ್ವಾರಕೆಯ ಬಳಿಯ ಒಂದು ಪರ್ವತ.

**ಗೋಮಾಯು** (ಗೋ = ವಿಕಾರ ನುಡಿ) ನರಿ; ಗಂಧರ್ವ.

**ಗೋಮಾರಿ** ದನಗಳ ಒಂದು ಬೇನೆ.

**ಗೋಮಾಳ** ದನಕರುಗಳು ಮೇಯುವ ಜಾಗ, ಗೋಚರಾವು, ಹುಲ್ಲುಬನ್ನಿ.

**ಗೋಮಾಳೆ** ಕತ್ತಿನ ಹಿಂಭಾಗ; ಹೆಡಕು.

**ಗೋಮಾಂತಕ** ಗೋವೆ.

**ಗೋಮಿನಿ** ಲಕ್ಷ್ಮಿ.

**ಗೋಮು** ಸೋಗು; ಡಂಭ, ಒಣ ಡಂಭ.

**ಗೋಮುಖ** ದನದಂತೆ ಮುಖವುಳ್ಳದು; ಯಕ್ಷವಿಶೇಷ; ಮೊಸಳೆ; ಒಂದು ವಾದ್ಯ; ಗಂಗೋತ್ರಿ ಎಂಬ ಸ್ಥಳ.

**ಗೋಮೇದ** ಒಂದು ವಿಧದ ರತ್ನ, ಜವಾಹಿರ; ಒಂದು ದ್ವೀಪ.

**ಗೋಮೇಧ** ದನಗಳನ್ನು ವಧಿಸುವ ಯಜ್ಞ.

**ಗೋಮೋಧಿಕ** ಗೋಮೇಧಕ; ನೇರಳೆ ವರ್ಣದ ರತ್ನವೊಂದು.

**ಗೋರ್** ಮೀನು ಹಿಡಿ, ಬಲೆ ಹಾಕು.

**ಗೋರಟೆ** (ದ್ಭ) ಒಂದು ಹೂಗಿಡ; ಕರಂಟ.

**ಗೋರಿ** ಮೃಗಗಳನ್ನು ಮೋಹಿಸುವ ಗಾನ; ಆಸೆಹುಟ್ಟಿಸು, ಮರುಳುಮಾಡು; ಬೇಟೆ ಸೆಳೆಯಲು ಉಪಯೋಗಿಸುವ ಬಲಿ ಮೃಗ; ಸಮಾಧಿ.

**ಗೋರಿಕಲ್** ಬೆಣಚುಕಲ್ಲು, ಸಮಾಧಿಕಲ್ಲು.

**ಗೋರು** ರಾಶಿಮಾಡು; ದೋಚು; ನೆಲವನ್ನು ಮಟ್ಟಮಾಡು, ಹರಗು; ಸುಲಿಗೆಮಾಡು. — ಮಣೆ ನೆಲ ಸಮಮಾಡುವ ಹಲಗೆ.

**ಗೋರೆ** ಹಡಗಿನಲ್ಲಿ ಕಸತೆಗೆಯುವ ಒಂದು ಸಾಧನ; ಮೀನುಹಿಡಿಯುವ ಒಂದು ಬುಟ್ಟಿ.

**ಗೋರೋಚನ** ದನಗಳಲ್ಲಿ ಹುಟ್ಟುವ ಒಂದು ವಿಧದ ಅರಿಸಿನ ಔಷಧ ದ್ರವ್ಯ.

**ಗೋರ್ಧ** ಮಿದುಳು.

**ಗೋಲ** (ಗೋಳ) ಉರುಟಾಗಿರುವುದು; ವಿಧವೆಯಲ್ಲಿ ಹುಟ್ಟಿದ ಮಗ; ಸೂರ್ಯ ಚಂದ್ರಾದಿ ಗೋಲಗಳು.

**ಗೋಲಕ** ಉರುಟಾದ್ದು; ಗೋಲ.

**ಗೋಲಾಂಗೂಲ** ದನದ ಬಾಲದಂತೆ ಬಾಲವುಳ್ಳ ಕಪಿ, ಮುಸುವ, ಮುಜು.

**ಗೋಲಿ** ಆಟದ ಉರುಟುಕಲ್ಲು, ಗುಂಡು.

**ಗೋಲೆ** ಕೆಂಪು ಶಂಖಪಾಷಾಣ.

**ಗೋವ** ಗೋಪ (ಸಂ), ಗೊಲ್ಲ; ತುರುವಳ.

**ಗೋವರ್ಧನ** ವೃಂದಾವನದ ಒಂದು ಬೆಟ್ಟ. — ಧರ ಕೃಷ್ಣ.

**ಗೋವಳ** (ನೋಡು: ಗೋಪಾಲ).

**ಗೋವಿಂದ** ಕೃಷ್ಣ; ಬೃಹಸ್ಪತಿ; ಗೋವುಗಳ ಒಡೆಯ.

**ಗೋವು** (ಗೋ).

**ಗೋಶಾಲೆ** ಹಟ್ಟಿ ಕೊಟ್ಟಿಗೆ, ದನದ ಮನೆ.

**ಗೋಷ್ಟಿ** ಮಾತುಕಥೆ; ಸಮೂಹ, ಕೂಟ.

**ಗೋಷ್ಠ** ಹಟ್ಟಿ, ದನ ಕಟ್ಟುವ ಜಾಗ.

**ಗೋಷ್ಠಿ** (ಸಂ) ಗೊಟ್ಟಿ (ದ್ಭ), ಸಭೆ, ಸಮಾಜ; ಸಂಭಾಷಣೆ, ಮಾತುಕತೆ; ದನ ಕಟ್ಟುವ ಜಾಗ, ಹಟ್ಟಿ.

**ಗೋಷ್ಪದ** ದನಗಳ ಹಜ್ಜೆ; ದನಗಳ ಹಜ್ಜೆ ಗುರುತು.

**ಗೋಷ್ಪಾರೆ** ಮೇಲಿಂದ ಮೇಲೆ; ಸ್ಥೂಲವಾಗಿ.

**ಗೋಸ** ಘೋಷ (ಸಂ), ಸೇರುವುದು.

ಗೋಸಣೆ(ದ್ಭ) ಘೋಷಣ(ಸಂ), ಸಾರುವಿಕೆ.
—ಕಳೆ ಡಂಗುರ ಹೊಡೆ, ಸಾರು.
ಗೋಸವ (ನೋಡು: ಗೋಮೇಧ).
ಗೋಸಾವಿ (ಗೋಸ್ವಾಮಿ), ಭೈರಾಗಿ; ದನಗಳ ಒಡೆಯ; ವಿರಕ್ತ, ಸನ್ಯಾಸಿ.
ಗೋಸುಂಬೆ ಓತಿಕಾಟ.
ಗೋಸ್ತಾನಿ ದ್ರಾಕ್ಷಿಯ ಗೊಂಚಲು; ನಾಳ್ಕೆಳೆಯ ಹಾರ.
ಗೋಹುರ (ದ್ಭ) ಗೋಪುರ (ಸಂ).
ಗೋಳ (ಗೋಲ), ಚಂಡು; ಗಜಿಬಿಜಿ.
ಗೋಳಾಯ್ಲ (ಗೋಳಾಯಿಲ), ಕುದುರೆ ಸವಾರ, ರಾವುತ; ಗೋಣಿ, ಒಂದು ಜಾತಿಯ ಮರ; ಆಲ.
ಗೋಳಿ ಒಂದು ಜಾತಿಯ ಗಿಡ; ಗೋಲಿ.
—ಇಸು ತಿಕ್ಕು, ತುಪ್ಪದಲ್ಲಿ ಕರಿ.
ಗೋಳು ದುಃಖ, ರೋದನ; ಅಳು.
ಗೋಂಟು ಮೂಲೆ, ಮೊನೆ; ಕೋನ.
ಗೋಂದು ಅಂಟು.
ಗೋಂದೆ ಬಸವ, ಗೂಳಿ.
ಗೌಡ ಹಳ್ಳಿಯ ಯಜಮಾನ; ಮುಖಂಡ; ಒಂದು ಜಾತಿ; ಒಂದು ಪ್ರಾಂತ, ಮಧ್ಯ ಬಂಗಾಲ.
—ಮಾರ್ಗ ಗೌಡ ಪ್ರಾಂತದವರ ಬಗೆ.
ಗೌಡಿ ಬೆಲ್ಲದಿಂದ ಹುಟ್ಟಿದುದು; ಒಂದು ಬಗೆಯ ಸಾರಾಯಿ; ಒಂದು ಕಾವ್ಯ ರೀತಿ.
ಗೌಣ ಗುಣದಿಂದ ಬಂದುದು; ಮುಖ್ಯವಲ್ಲದ ವಿಷಯ; ಪ್ರಧಾನ ವಿಷಯಕ್ಕೆ ವಿರೋಧವಾದುದು.
—ಪಕ್ಷ ಯುಕ್ತಿಯಿಂದ ನಿರ್ಬಲವಾದ ಭಾಗ.
ಗೌತಮ ಗೌತಮ ಗೋತ್ರದಲ್ಲಿ ಹುಟ್ಟಿದ ಮೇದಾತಿಥಿ; ನಚಿಕೇತನ ತಂದೆ; ಶತಾನಂದನೆಂಬ ಮುನಿ; ಬುದ್ಧ; ಭಾರದ್ವಾಜ, ಅಹಲ್ಯೆಯ ಪತಿ.
ಗೌತಮಿ ಗೋದಾವರಿ ನದಿ; ಒಬ್ಬ ರಾಕ್ಷಸಿ; ದ್ರೋಣನ ಪತ್ನಿ; ಕೃಷಿ; ಗೋರೋಚನ; ದುರ್ಗೆ; ಕುತೀ ಗೌತಮಿ.
ಗೌರ ಬಿಳೇ ಬಣ್ಣ; ಬಿಳೇ ಸಾಸಿವೆ; ಚಂದ್ರ; ಶುದ್ಧಾತ್ಮ.
ಗೌರವ ಆದರ, ಮನ್ನಣೆ; ಗುರುತ್ವ, ದೊಡ್ಡಸ್ತಿಕೆ.
ಗೌರಾದೇವಿ ಗೌರಿ, ಪಾರ್ವತಿ.
ಗೌರಿ ಪರ್ವತನ ಮಗಳು, ಉಮೆ; ಹಳದಿ ಬಣ್ಣ; ಶುದ್ಧ, ತೊಳೆದ; ಎಂಟು ವಯಸ್ಸಿನ ಕನ್ನೆ.
—ಈಶ ಉಮೆಯ ಪತಿ, ಶಿವ.
ಗೌಳ (ನೋಡು: ಗೌಡ).
ಗ್ನಾನ (ದ್ಭ) ಜ್ಞಾನ (ಸಂ), ತಿಳಿವು.
ಗ್ನಾಪಕ (ದ್ಭ) ಜ್ಞಾಪಕ (ಸಂ), ನೆನಪು.
ಗ್ರಸ್ತ ಹಿಡಿದ; ಅಕ್ಷರ ಸ್ಪಷ್ಟವಾಗದಂತೆ ಓದುವುದು.
ಗ್ರಹ ಗರ (ದ್ಭ), ಸೂರ್ಯನನ್ನು ಸುತ್ತುವ ಗೋಲಗಳು; ಯುದ್ಧೋದ್ಯೋಗ; ಮಕ್ಕಳನ್ನು ಪೀಡಿಸುವ ಪೂತನಿ ಮೊದಲಾದವುಗಳು; ಹಿಡಿಯುವುದು.
—ಚಾರ ಗ್ರಹಗಳ ಗತಿಯಿಂದ ಬರುವ ಪ್ರಾಪ್ತಿ, ಪೀಡೆ.
—ಣ ಹಿಡಿಯುವುದು; ಸೂರ್ಯಚಂದ್ರರಿಗೆ ಬರುವ ಕತ್ತಲು; ಇಂದ್ರಿಯ.
ಗ್ರಹಣಿ (ಗೃಹಿಣಿ), ಮಕ್ಕಳು ಕೃಶವಾಗುವ ಒಂದು ಬೇನೆ, ಬಾಲಗ್ರಹ.
ಗ್ರಹಪತಿ ಗ್ರಹಗಳಲ್ಲಿಹಿರಿಯನಾದವ, ಗುರು.
ಗ್ರಹಿಕೆ ತಿಳಿವಳಿಕೆ; ಸ್ವೀಕಾರ.
ಗ್ರಹಿಸು ತಿಳಿ; ಸ್ವೀಕರಿಸು.
ಗ್ರಂಥ ಕಟ್ಟುವಿಕೆ, ಕಟ್ಟು; ಗದ್ಯ ಇಲ್ಲವೆ

ಪದ್ಯ ಬರಹ; ವೇದ; ಸಂಪತ್ತು; ಜ್ಞಾನ; ದಾನ.

— ಕರ್ತ ಬರಹಕಾರ, ಕಾವ್ಯಕಾರ.

— ಕಾರ ಬರಹಕಾರ, ಪುಸ್ತಕ ಬರೆವಾತ.

— ಲಿಪಿ ಬರೆಯುವ ಸಂಕೇತ.

**ಗ್ರಂಥಿ** ಗಂಟು (ದ್ಭ), ಗಂಡೆ; ಗಡ್ಡೆ; ಶರೀರದ ಕೆಲವು ರಸ ಹುಟ್ಟಿಸುವ ಅವಯವಗಳು.

**ಗ್ರಂಥಿಕ** ಗ್ರಂಥವಾಚನ ಮಾಡಿದ; ಗುಂಫಿತ; ಹಿಂದೆಮಾಡಿದ.

**ಗ್ರಾಮ** (ಸಂ) ಗ್ರಾವ (ದ್ಭ), ಹಳ್ಳಿ, ಜನ ನಿವಾಸ; ಗುಂಪು; ಭೋಗ; ರೇತಸ್ಸು; ಕಿರಣ; ಶಬ್ದ.

— ಕೀಟಿಕ ಹಳ್ಳಿಯ ಕಿಲಾಡಿ, ಹಳ್ಳಿಯಲ್ಲಿ ತಂಟೆಮಾಡುವವ.

— ಣಿ ಗ್ರಾಮಾಧಿಕಾರಿ, ಕೊತವಾಲ; ಕ್ಷೌರಕ, ನಾಯಿಂದ; ಪತಿ; ವೇಶ್ಯೆ.

— ತೆ ಗ್ರಾಮಸಮೂಹ, ಕೆಲವೊಂದು ಹಳ್ಳಿಗಳ ಗುಂಪು.

**ಗ್ರಾಮಸಿಂಹ**(ಸಂ) ಗಾವಸಿಂಗ(ದ್ಭ), ನಾಯಿ.

**ಗ್ರಾಮಾಂತ** ಹಳ್ಳಿಯ ಸುತ್ತಲಿನ ಪ್ರದೇಶ.

**ಗ್ರಾಮೀಣ** ಗಾವಿಲ (ದ್ಭ); ಅನಾಗರಿಕ; ಮೂಳ, ಹಳ್ಳಿಯ ಎಗ್ಗ, ಹುಂಬ.

**ಗ್ರಾಮೀಣೆ** ನೀಲಿ.

**ಗ್ರಾಮ್ಯ** ಗ್ರಾಮಕ್ಕೆ ಸಂಬಂಧಿಸಿದ; ದೇಶಿ, ಮಾರ್ಗಪದ್ಧತಿಯಲ್ಲದ; ಜನಪದ ರೀತಿ; ಅಶಿಕ್ಷಿತ ರೀತಿ.

**ಗ್ರಾವ** ಗ್ರಾಮ (ಸಂ); ಕಲ್ಲು; ಪರ್ವತ; ಮುಗಿಲು; ದಿಟ್ಟತನ, ಧೈರ್ಯ.

**ಗ್ರಾವಾಳ** ಕಲ್ಲು.

**ಗ್ರಾಸ** ತುತ್ತು, ಆಹಾರ.

**ಗ್ರಾಹ** ಮೊಸಳೆ, ನೆಗಳೆ; ನೀರಾನೆ; ಹಿಡಿವಿಕೆ.

**ಗ್ರಾಹಕ** ಕೊಳ್ಳುವವ, ಸಂಗ್ರಹಿಸುವವ, ಪರಿಶೀಲಿಸುವವ, ಹಿಡಿಯುವ.

**ಗ್ರಾಹಿ** ಪರಿಶೀಲಿಸು, ನೋಡು; ಹಿಡಿ, ಸ್ವೀಕರಿಸು; ಮೂರ್ಛಾರೋಗ, ಗಿರ.

**ಗ್ರಾಹ್ಯ** ಸ್ವೀಕಾರ ಅರ್ಹವಾದುದು, ತೆಗೆದುಕೊಳ್ಳಬಹುದಾದುದು.

**ಗ್ರೀವ** ಕಂಠ; ಕತ್ತಿನ ಹಿಂಭಾಗ; ಗೋಣು.

**ಗ್ರೀಷ್ಮ** ಆರು ಋತುಗಳಲ್ಲೊಂದು, ಜ್ಯೇಷ್ಠ ಆಷಾಢ; ಸೆಕೆಗಾಲ; ಸೆಕೆ, ಕಾವು.

— ರಾಜ ಬೇಸಗೆಯ ರಾಜನು.

**ಗ್ರೈವೇಯ** (ಸಂ) ಒಂದು ವಿಧವಾದ ಕಂಠ ಭೂಷಣ, ಕೊರಳಹಾರ.

**ಗ್ಲಹ** ಜೂಜು; ಪಣ.

**ಗ್ಲಾನ** ಬಡತನ; ಬಳಲಿಕೆ, ಅಶಕ್ತಿ.

**ಗ್ಲಾನಿ** ಸಂತೋಷವಿಲ್ಲದಿರುವುದು; ವೀರ್ಯ ನಾಶ; ಹಾನಿ; ಬಳಲಿಕೆ.

**ಗ್ಲೌ** ಚಂದ್ರ.

## ಘ

**ಘಟ** ಸೇರಿಕೆ, ಕೂಡಿಕೆ; ಬಡಿತ; ಸಂಗ್ರಹ; ಪಡೆ; ಆನೆಯ ಪಡೆ; ಶರೀರ; ಮಡಕೆ; ಅಂಚು, ಸೆರಗು.

— ಕ ಪಡೆಯ ಯಜಮಾನ; ಗಟ್ಟಿಗ; ಸೇರುವ ಭಾಗ; ಸೇರಿಕೆ; ಸೇರಿಸುವವ.

**ಘಟನ** (ಘಟನೆ) ಸೇರಿಕೆ, ಕೂಟ; ಆಗುವಿಕೆ; ಪ್ರಯತ್ನ; ಆದುದು, ಸಾಧಿಸಿದುದು.

**ಘಟಯೋನಿ** ಜಲಪಾತ್ರೆಯಲ್ಲಿ ಜನಿಸಿದವ, ಅಗಸ್ತ್ಯ.

**ಘಟಿ** ಗಡಿ(ದ್ಭ) ಗಳಿಗೆ; ಜಾಗಟೆ; ನೀರಿನ ಪಾತ್ರೆ.

— ಕೆ ಗಳಿಗೆ (ದ್ಭ) ಗಡಿಗೆ (ದ್ಭ).

— ತ ಸೇರಿದ, ಕೂಡಿದ.

**ಘಟೋತ್ಕಚ** ಹಿಡಿಂಬೆಯಲ್ಲಿ ಭೀಮನಿಗೆ ಜನಿಸಿದ ಮಗ.

ಘಟ್ಟ (ಗಟ್ಟ) ಸ್ಪರ್ಶ; ಸೋಪಾನಗಳು, ನದಿಯ ಸೋಪಾನಗಳು; ಪರ್ವತಾವಳಿ.

ಘಟ್ಟಣೆ ಸೇರಿಕೆ, ಸಂಘಟಣೆ; ತಾಕಲಾಟ.

ಘಟ್ಟಿಸು ಹೊಡೆ, ಬಡಿ.

ಘನ ಗುರುತರವಾದ ವಸ್ತು, ಭಾರವಾದ ವಸ್ತು; ಮುದ್ಗರ; ಬಲ; ಮುಗಿಲು; ಗಡ್ಡೆ; ಗಟ್ಟಿಯಾದುದು; ಅಗಾಧ; ಜಲ; ಮೋಹ; ನೃತ್ಯವಿಧಾನ; ಸಂಹಾರ, ಕಾಳಗ; ಗಾತ್ರವಿಶೇಷ; ಮಂತ್ರ ಪಠನೆಯ ಒಂದು ರೀತಿ.

— ತರ ಗಟ್ಟಿಯಾದುದು, ದೊಡ್ಡದು.

— ತೆ ಗಡಸಾದುದು; ಪೆಡಸಾದುದು; ದೊಡ್ಡತನ.

— ಪಥ ಮುಗಿಲಿನ ಹಾದಿ; ಆಕಾಶ.

ಘನಶ್ಯಾಮ ಕಡು ನೀಲ; ವಿಷ್ಣು; ರಾಮ; ಕೃಷ್ಣ.

ಘನಸಮಯ ಮಳೆಗಾಲ.

ಘನಿಸು ಗಟ್ಟಿಯಾಗು, ಸಾಂದ್ರವಾಗು.

ಘನೀಭೂತ ದಟ್ಟವಾದ, ಗಟ್ಟಿಯಾದ, ಒತ್ತೊತ್ತಾದ.

ಘರ್ಷಣ (ಘರ್ಷಣೆ) ತಿಕ್ಕಾಟ; ಪುಡಿಯಾಗುವಿಕೆ, ಮರ್ದನ; ಒರಸುವಿಕೆ, ಮುಸೆವಿಕೆ.

ಘಳಿಲು ಫಕ್ಕನೆ.

ಘಂಟಾ (ಘಂಟೆ) ಬಡಿಯುವ ಕಂಚಿನ ಸಾಧನ; ಗಂಟೆ ಕಾಲ, ತಾಸು; ಕಬ್ಬಿಣದ ಲೇಖನಿ.

— ಮಣಿ ಗಂಟೆ ಬಡಿವ ಕೋಲು, ಗುಣಕ.

— ರವ ಗಂಟೆಯ ದನಿ.

ಘಂಟಾಕರ್ಣ ಶಿವಮತ್ತುಸ್ಕಂದರ ಒಬ್ಬ ಗಣ.

ಘಾತ ಪೆಟ್ಟು; ಸಾವು; ಹಾನಿ; ಆಳ.

— ಕ ಕೊಲೆಗಡಿಕ, ವಂಚಕ, ಹಿಂಸಕ; ಕೊಲುವಿಕೆ, ಹಾನಿಕಾರಿಕೆ.

ಘಾತಿ ಪೆಟ್ಟು, ಹಾನಿ, ಕೊಲೆ.

ಘೂಸಿ ಹಿಂಸೆ; ದಣಿವು; ನೋವು; ಬಳಲಿಕೆ, ದಣಿವು; ಮೋಸ.

ಘೂಕ ಗೂಬೆ, ಗುಮ್ಮಕ್ಕಿ, ಗೂಗೆ.

ಘೂರ್ಣ ಅಲುಕಾಟ, ಓಲಾಟ, ಕಂಪನ; ಚಲನ; ಸುಳಿಸುತ್ತುವಿಕೆ.

— ಇಸು ತೆರೆ; ಮೊರೆ; ವಿಸ್ತರಿಸು.

ಘೃತ ತುಪ್ಪ; ನೀರು; ಹಾಲು; ಚಿಮುಕಾಟ.

ಘೃತಾಚಿ ಅಪ್ಸರೆಯರು.

ಘೃಷ್ಟಿ ಬೀಸುವಿಕೆ; ಮರ್ದನ.

ಘೋಟ (ಘೋಳ), ಕುದುರೆ.

ಘೋರ ಭೀಕರ, ಭಯಂಕರ; ಕ್ರೂರ, ಬಲವತ್ತರ; ಶಿವ.

ಘೋಷ ಸದ್ದು, ಗದ್ದಲ, ಕೋಲಾಹಲ; ಸಾರುವಿಕೆ, ಪ್ರಕಟಣೆ.

— ಇಸು ಗಟ್ಟಿಯಾಗಿ ಹೇಳುವೆ; ಸಾರು, ಪ್ರಕಟಿಸು.

— ಣೆ ಗದ್ದಲಗೊಳಿಸುವಿಕೆ, ಸಂದೇಶವನ್ನು ಸಾರುವಿಕೆ.

ಘ್ರಾಣ ಮೂಗು; ವಾಸನೆ ನೋಡುವಿಕೆ, ಮೂಸು.

— ಇಸು ಮೂಸು, ಮೂಸಿ ನೋಡು.

— ಇಂದ್ರಿಯ ಮೂಗು.

## ಚ

ಚಕಚಕ ಹೊಳೆವಂತೆ, ಮಿರುಗುವಂತೆ.

— ಇತ ಹೊಳೆವ, ಮಿರುಗುವ, ಥಳಿಸುವ.

ಚಕಡಾ (ದ್ಭ) ಚಕ್ಕಡಿ, ಶಕಟ(ಸಂ), ಎತ್ತಿನ ಗಾಡಿ.

ಚಕಮುಕಿ ಚಕುಮುಕಿ ಕಲ್ಲು, ಒಂದನ್ನೊಂದಕ್ಕೆ ಬಡಿಯಲು ಕಿಡಿಯುಂಟಾಗುವ ಕಲ್ಲು.

ಚಕಾರ ಒಂದಾದರೂ ಶಬ್ದ.

ಚಕಾಸ ಅರಳಿದ.
ಚಕಿತ ಹೆದರಿದ, ಭೀತಿಗೊಂಡ, ಅಂಜಿದ.
ಚಕೋತ (ಚಕ್ಕೋತ), ಒಂದು ಹಣ್ಣು, ಸಿಹಿ ಕಂಚಿ ಹಣ್ಣು.
ಚಕೋರ ಒಂದು ಪಕ್ಷಿ, ಬೆಳುದಿಂಗಳಲ್ಲಿ ಚಲಿಸುವ, ನಲಿಯುವ ಹಕ್ಕಿ, ಜೊನ್ನವಕ್ಕಿ. —ಕ ಚಕೋರ.
ಚಕ್ಕ ಹೊಳೆವ, ಚೆಲುವಿನ.
ಚಕ್ಕಡಿ (ಚಕಡಾ), ಎತ್ತಿನ ಬಂಡಿ, ಬಂಡಿ.
ಚಕ್ಕನೆ ಪಕ್ಕನೆ, ಒಮ್ಮೆಗೇ, ಒಮ್ಮೆಲೆ.
ಚಕ್ಕರಿಸು ಕುರಿ ಕೂಗುವಿಕೆ, ಬ್ಯಾಕರಿಸು.
ಚಕ್ಕಲಗಳಿಕಿ ಸುಗುಳಿ, ಕತಗುಳಿ, ಆಕಳ ಚಕಳ; ಕಟ್ಟಾಡಿಸು.
ಚಕ್ಕಳ ತಗ್ಗು ಮಂಚ, ಬೀಳಲಿನ ತಗ್ಗು ಮಂಚ; ಚರ್ಮ, ತೊಗಲು.
ಚಕ್ಕಳಿ ಭಾರದಿಂದಾಗಿ ಚಪ್ಪಟೆಯಾದುದು.
ಚಕ್ಕಂದ ಹರಟೆ, ವಿನೋದದ ಮಾತು; ಸುಖ, ತೃಪ್ತಿ; ವಿಲಾಸ, ಚೈನಿ.
ಚಕ್ಕುಬಂದಿ ಮೇರೆಯನ್ನು ನಿರ್ಣಯಿಸುವುದು; ರಖೋಲೆ.
ಚಕ್ಕುಮುಕ್ಕೆ (ನೋಡು: ಚಕಮಕಿ).
ಚಕ್ಕೆ ಚೂರು, ಮರದ ಇಲ್ಲವೆ ಕಲ್ಲಿನಿಂದ ಸಿಡಿದ ಇಲ್ಲವೆ ಕೆತ್ತಿದ ಚೂರು.
ಚಕ್ಕೋತ ಚಕೋರ ಪಕ್ಷಿ; ಚಕೋತದ ಹಣ್ಣು.
ಚಕ್ರ ಗಾಲಿ; ತಿಗುರಿ; ವೃತ್ತಾಕಾರದ ಆಯುಧ; ವೃತ್ತ; ಆವೃತ್ತಿಯಿಂದ ಬರುವ ಘಟನೆಗಳು; ಕಾಲಗತಿ; ಯುದ್ಧ; ಆಧಿಪತ್ಯ; ಆಗಸ; ವ್ಯೂಹ; ನಾಲ್ಕಾಣೆ ಪಾವಲಿ; ಬಡ್ಡಿಗೆ ಬಡ್ಡಿ, ತಿರುಗಣೆ; ಚಕ್ರ ವಾಕ; ಸಮೂಹ; ನೀರಿನ ಸುಳಿ.
ಚಕ್ರಧರ (ಚಕ್ರಪಾಣಿ) ಚಕ್ರಾಯುಧ ಹಿಡಿದವ, ವಿಷ್ಣು.
ಚಕ್ರಬಡ್ಡಿ ಬಡ್ಡಿಗೆ ಬಡ್ಡಿ, ಚವಲ ಬಡ್ಡಿ.
ಚಕ್ರವರ್ತಿ ಮಹಾರಾಜಾಧಿರಾಜ, ಸಂರಾಟ, ತನ್ನ ಕೆಳಗೆ ಹಲವು ಸಾಮಂತರುಳ್ಳ ಅರಸು.
ಚಕ್ರವಾಕ (ಸಂ) ಜಕ್ಕವಕ್ಕಿ (ದ್ಭ), ಎಣೆವಕ್ಕಿ; ಒಂದು ಜಾತಿಯ ಜಲಪಕ್ಷಿ.
ಚಕ್ರವಾಲ ಚಕ್ರದಂತೆ ಸುತ್ತುಗಟ್ಟದ ಒಂದು ಪರ್ವತವಿಶೇಷ, ಲೋಕಾಲೋಕವೆಂಬ ಪರ್ವತ, (ಚಕ್ರವಾಳ).
ಚಕ್ರವಾಳ ಮಂಡಲ.
ಚಕ್ರವೃದ್ಧಿ (ಚಕ್ರಬಡ್ಡಿ).
ಚಕ್ರಾದಿ ನದಿಯ ವಕ್ರವಾದ ಗತಿ.
ಚಕ್ರಾಂಗ ಉರುಟು ಮೈಯುಳ್ಳುದ್ದು, ಹಂಸ.
ಚಕ್ರಾಂಗಿ ಹಂಸೆ, ಹೆಣ್ಣು ಹಂಸ.
ಚಕ್ರಿ ಕುಲಾಲ, ಕುಂಬಾರ; ವಿಷ್ಣು, ಕೃಷ್ಣ; ಸರ್ಪ; ಚಕ್ರವಾಕ.
ಚಕ್ರಿಪತಿ ಹೇಸರಗತ್ತೆ.
ಚಕ್ರೀವತ್ ಕತ್ತೆ.
ಚಕ್ರೇಶ್ವರ (ಚಕ್ರ= ರಾಜ್ಯ) ಅರಸ, ರಾಜ; ಕೃಷ್ಣ.
ಚಕ್ಲಿ ಹುಣಿಸೆಮರ.
ಚಕ್ಷಣ ಗೋಚರ, ನೋಟ.
ಚಕ್ಷು (ಚಕ್ಷುಸ್) ಕಣ್ಣು.
ಚಕ್ಷುಷ್ಯ ಕಣ್ಣಿಗೆ ಸೊಗಸಾದುದು.
ಚಗಟೆ ತೊಗಚಿ ಗಿಡ, ಚೊಗಚಿ.
ಚಚ್ಚಕಾರ ಕಾಲಿಂದ ತಾಳಹಾಕುವುದು (ಸಂಗೀತದಲ್ಲಿ).
ಚಚ್ಚರ ಅವಸರ; ಬೇಗನೆ, ತ್ವರಿತ; ಜಾಗರ.
ಚಚ್ಚು ಹೊಡೆ, ಬಡಿ; ಕಾಳುಗಳು ಸಣ್ಣ ಕಡಿಗಳಿಂದ ದೂರಾಗುವಂತೆ ಮೊರದಲ್ಲಿ ಹಾಕಿ ಕೇರು; ಗಾಳಿಸು; ಕೊಚ್ಚು.
ಚಟ ಸದ್ದು; ಆಸಕ್ತಿ; ಚಾಳಿ, ದುರಭ್ಯಾಸ; ಕಿಡಿಗಳ ಸದ್ದು.
ಚಟಕ ಗುಬ್ಬಿ, ಗಂಡುಗುಬ್ಬಿ.

— ಶ್ರಾದ್ಧ ಶ್ರಾದ್ಧವಿಧಿಯಲ್ಲೊಂದು ಬಗೆ, ಪಿಂಡವನ್ನು ಅರ್ಪಿಸದ ಶ್ರಾದ್ಧ.

ಚಟಿಕಾಯಿಸು ಚಟುಕಿನಲ್ಲಿ ಮುಗಿಸು; ತುಂಡು ಹಾರಿಸು.

ಚಟಿಕೆ ಹೆಣ್ಣು ಗುಬ್ಬಿ.

ಚಟಿಕ್ಕನೆ ಪಕ್ಕನೆ, ಒಮ್ಮಿಗೇ, ಒಮ್ಮೆಲೆ.

ಚಟಿಲ್ಲನೆ ಚಟಲೆಂದು ಸದ್ದಾಗುವಂತೆ.

ಚಟಾಕು 3 ತೊಲೆ ತೂಕ, ಧಾನ್ಯದ ಅಳತೆ.

ಚಟಿಗೆ ಚಟ್ಟ, ಅಗಲ ಬಾಯ ಮಣ್ಣಿನ ಪಾತ್ರೆ.

ಚಟುಲ ನಡುಗುವ, ಅಲುಗಾಡುವ, ಸ್ಫುರಿಸುವ; ತೀಕ್ಷ್ಣವಾದ, ಕ್ರೂರವಾದ.

— ಇತ ನಡುಕ; ನಡುಗುವಿಕೆ.

ಚಟುವಟಿಕೆ ಚುರುಕುತನ, ತ್ವರೆಯ ಕೆಲಸ.

ಚಟೂಕ್ತಿ (ಚಾಟೂಕ್ತಿ) ಮುಖಸ್ತುತಿ, ಹೊಗಳಿಕೆ ಮಾತು.

ಚಟೂರಿಸು ಮೋಸಮಾಡು.

ಚಟ್ಟ (ಚರಟ) ಛಾತ್ರ (ಸಂ), ಶಿಷ್ಯ; ಗಾಳಿಸುವಿಕೆ; ಚಟ್ಟಾರ, ಚಪ್ಪಟೆಯಾದ; ಹೆಣ ಸಾಗಿಸುವ ಬಿದಿರಿನ ಏಣಿ, ಸಿದ್ದಿಗೆ; ವ್ಯವಸ್ಥೆ, ಚೊಕ್ಕತನ.

ಚಟ್ಟನೆ ಪಕ್ಕನೆ, ಒಮ್ಮಿಗೇ.

ಚಟ್ಟರಿ ಮೈಗೆ ಸುಗಂಧ ಲೇಪಿಸು.

ಚಟ್ಟಿ ಮಣ್ಣಿನ ಬಟ್ಟಲು.

ಚಟ್ಟು ಚಪ್ಪಟೆಯಾಗಿರುವಿಕೆ; ಹೊಟ್ಟುಬೀಜ; ಪಲ್ಲಕ್ಕಿಯ ಮೇಲೆ ಹೊದೆಸುವ ವಸ್ತ್ರ; ನಾಶ; ಕೆಡುಕು; ಗಟ್ಟಿಯಾದ ಕಾಲು.

— ಆಗು ಚಪ್ಪಟೆಗೊಳ್ಳು; ನಾಶವಾಗು.

— ಬಡಿ ನಾಶಮಾಡು, ಸದೆಬಡಿಯು.

ಚಟ್ಟೆ ಚಟ್ಟಾದುದು.

ಚಟ್ಟೆಕಾರ ಯುರೋಪಿಯರಂತೆ ಉಡುಗೆಯುಟ್ಟವ; ಯುರೋಪಿನವರ ಆಸ್ಯದವರ ಸಂಬಂಧದಿಂದ ಹುಟ್ಟದ ಮಿಶ್ರ ಜನಾಂಗದವ.

ಚಟ್ಟೆ ನುಜ್ಜುಗುಜ್ಜಾದುದು; ನಂಜಿಕೊಳ್ಳುವ ಸಂಬಾರ; ಕಾಡು; ಕೊಲ್ಲು.

ಚಡಾಯ ಬಡತಿ, ಏರಿಕೆ, ಹೆಚ್ಚಿಸುವಿಕೆ; ಬಿಗಿತ.

— ಇಸು ಬಿಗಿ; ಏರಿಸು; ಹೆಚ್ಚಿಸು; ಹೊಡೆ.

ಚಡಾವು ಏರು, ದಿನ್ನೆ, ಅಣೆ; ತೆಂಗೆ ಇಲ್ಲವೆ ಬೆಲೆಯ ಏರಿಕೆ; ಪಾದುಕೆ, ಕಡಾವಿಗೆ.

ಚಡಾಳ ಆಧಿಕ್ಯ, ಹೆಚ್ಚುಗೆ, ಏರಿಕೆ.

— ಇಸು ಏರಿಸು, ಹೆಚ್ಚಿಸು.

ಚಡಿ ಬೆತ್ತ; ಎಡೆ, ಬಿರುಕು; ಮೆಟ್ಟಲು.

ಚಡೆ ಒಂಟಿಯಾಗಿ ಹೋಗುವ; ಒಂಟಿ ಸೇನೆ.

ಚಡ್ಡಿ ಇಜಾರು, ಚಲ್ಲಣ, ಚಣ್ಣ.

ಚಣ (ದ್ಭ) ಕ್ಷಣ (ಸಂ), ಬಲ್ಲವ, ತಿಳಿದವ, ನಿಪುಣ; ಎವೆಯಿಕ್ಕಿ ತೆರೆಯುವಷ್ಟು ಕಾಲ.

ಚಣಕ (ನೋಡು: ಚಡ್ಡಿ).

ಚಣ್ಣ ಕುಳ್ಳ; ಇಜಾರು.

ಚತುರ್ ನಾಲ್ಕು (ಚೌ).

ಚತುರ ಗಟ್ಟಿಗ, ನಿಪುಣ, ದಕ್ಷ; ಆನೆ ಕಟ್ಟುವ ಲಾಯ.

— ಉದ್ದಾಮ ನಾಲ್ಕಕ್ಷರದಲ್ಲಿ ಯತಿ ಉಳ್ಳದ್ದು.

— ತನ ಗಟ್ಟಿಗತನ, ದಕ್ಷತೆ.

— ತರ ಅತಿ ಚತುರ, ವಿಶೇಷ ಜಾಣ.

ಚತುರಶ್ರ (ಅಶ್ರ = ಮೂಲೆ) ನಾಲ್ಕು ಮೂಲೆಯುಳ್ಳುದು; ಚಚ್ಚೌಕ; (ಜ್ಯೋತಿಷದಲ್ಲಿ) ಲಗ್ನಕ್ಕೆ ನಾಲ್ಕನೇ ಇಲ್ಲವೆ ಎಂಟನೇ ಸ್ಥಾನ.

ಚತುರಂಗ (ಚದುರಂಗ) ಒಂದು ವಿಧದ ಆಟ.

— ಬಲ ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿದ ಸೇನೆ.

ಚತುರಂತ ನಾಲ್ಕು ಕಡೆಯಿಂದ ಆವರಿಸಲ್ಪಟ್ಟ, ಭೂಮಿ; ಪಲ್ಲಕ್ಕಿ.

ಚತುರಾನನ ನಾಲ್ಕು ಮುಖವುಳ್ಳವ, ಬ್ರಹ್ಮ.

ಚತುರಾಂತರ ಚೌಕದ ಜಗುಲಿ.

**ಚತುರೋಪಾಯ** ಸಾಮ-ದಾನ-ಭೇದ-ದಂಡ ಎಂಬ ವೈರಿಯೊಡನೆ ವ್ಯವಹರಿಸುವ ನಾಲ್ಕು ರೀತಿಗಳು.

**ಚತುರ್ಗತಿ** ಆಮೆ; ಜೈನರ ತತ್ವದಂತೆ ಜೀವಿಗಳಿಗೆ ಬರುವ ನಾಲ್ಕು ಗತಿಗಳು.

**ಚತುರ್ಥ** ನಾಲ್ಕನೆಯ; ತುರೀಯ.

**—ಅಂಶ** ನಾಲ್ಕನೆ ಭಾಗ.

**—ಆಶ್ರಮ** ನಾಲ್ಕನೆ ಆಶ್ರಮವೆನಿಸಿದ ಸನ್ಯಾಸ.

**ಚತುರ್ದಶ** ಹದಿನಾಲ್ಕು.

**ಚತುರ್ದಶಿ** ಪಕ್ಷದ ಹದಿನಾಲ್ಕನೆಯ ದಿನ.

**ಚತುರ್ಬಲ** (ನೋಡು: ಚತುರಂಗ ಬಲ).

**ಚತುರ್ಭುಜ** ನಾಲ್ಕು ತೋಳುಳ್ಳವ, ವಿಷ್ಣು; ಶಕ್ತಿಯ ಹೆಚ್ಚಿಗೆ, ವಿವಾಹಿತ.

**ಚತುರ್ಮುಖ** ನಾಲ್ಕು ಮುಖವುಳ್ಳವ, ಬ್ರಹ್ಮ.

**ಚತುರ್ಯುಗ** ಕೃತ-ತ್ರೇತ-ದ್ವಾಪರ-ಕಲಿ ಯುಗಗಳೆಂಬ ನಾಲ್ಕು ಯುಗಗಳು.

**ಚತುರ್ವರ್ಣ** ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಗಗಳು.

**ಚತುರ್ವಿಧ** ಧರ್ಮ-ಅರ್ಥ-ಕಾಮ-ಮೋಕ್ಷವೆಂಬ ಜೀವನದ ನಾಲ್ಕು ಬಗೆಗಳು.

**ಚತುರ್ವಿಂಶತಿ** ಇಪ್ಪತ್ತನಾಲ್ಕು.

**ಚತುರ್ವೇದ** ಋಗ್ವೇದ-ಯಜುರ್ವೇದ-ಅಥರ್ವವೇದ-ಸಾಮವೇದ ಎಂಬ ನಾಲ್ಕು ವೇದಗಳು.

**ಚತುಶ್ಶಾಲ** ನಾಲ್ಕು ಕಡೆಗೂ ಮನೆಯುಳ್ಳುದು; ತೊಟ್ಟಿ.

**ಚತುಷ್ಕ** (ಚೌಕ) ನಾಲ್ಕು ಮೈಯುಳ್ಳ; ವಡ್ಡಿ.

**ಚತುಷ್ಪದಿ** ನಾಲ್ಕುಪಾದಗಳುಳ್ಳದು; ನಾಲ್ಕು ಕಾಲಿನ ಪ್ರಾಣಿ; ಒಂದು ಪದ್ಯ ಜಾತಿ.

**ಚತುಷ್ಪಾದ** ನಾಲ್ಕು ಕಾಲುಳ್ಳ ಪ್ರಾಣಿ.

**ಚತುಃ** (ಚತುರ್) ನಾಲ್ಕು.

**—ಪದ** ನಾಲ್ಕು ಕಾಲುಗಳುಳ್ಳ.

**—ಶತ** ನಾಲ್ಕು ಬಾರಿ ನೂರು.

**ಚತ್ತರಿ** (ಚತ್ತ್ರರಿಗೆ) ಛತ್ರಿಕೆ, ಕೊಡೆ.

**ಚತ್ತಾಣ** ಒಂದು ಪದ್ಯ ರೀತಿ.

**ಚತ್ತು** ಮುಚ್ಚಿಗೆ; ಮೇಲುಗಟ್ಟು.

**ಚತ್ರಿಗೆ** (ಚತ್ತ್ರರಿ) ಕೊಡೆ, ಸತ್ರಿಗೆ.

**ಚದರ** ಚತುರ; ಉದ್ದಕ್ಕೆ ಅಗಲದಿಂದ ಗುಣಿಸಿದರೆ ಆಗುವ ಫಲ; ವಿಸ್ತೀರ್ಣ.

**ಚದರಂಗ** (ನೋಡು: ಚದುರಂಗ).

**ಚದರು** (ದ್ಭ) ಚಾತುರ್ಯ (ಸಂ) ತಿಳಿವಳಿಕೆ, ಬಲ್ಲವನಾಗಿರುವಿಕೆ; ವಿಸ್ತರಿಸು, ಹರಡು.

**ಚದುರ** (ಚತುರ), ನಿಪುಣ.

**ಚದುರಂಗ** ಪಗಡೆಯಂಥ ಒಂದು ಆಟ.

**ಚದುರೆ** ಜಾಣೆ, ನಿಪುಣೆ.

**ಚದ್ಧರ** ಹೊದೆಯುವ ದಪ್ಪದ ವಸ್ತ್ರ.

**ಚನ್ನ** (ಚೆನ್ನ) ಚೆಲುವ, ಚೆಂದವಾದುದು.

**—ಗೆ** ಚಂದವಾಗಿ, ಚೊಕ್ಕವಾಗಿ; ಸಮನಾಗಿ.

**ಚನ್ನಂಗ** ಒಂದು ಜಾತಿಯ ನಾಟದ ಮರ.

**ಚನ್ನಂಗಿ** ಸಣ್ಣಗಿನ ಒಂದು ಧಾನ್ಯದ ಬೇಳೆ.

**ಚನ್ನೆ** ಚೆಲುವೆ; ಹೊಂಗರಕನ ಬೀಜ, ಹಾಲಿವಾಳದ ಬೀಜ.

**ಚಪ** ಬಿದಿರು ಸಲಕೆ.

**ಚಪಲ** ಚಂಚಲ, ಅಸ್ಥಿರತೆ; ಕ್ಷಣಿಕ; ಉದ್ಧತ; ಅಶಿಕ್ಷಿತ; ಲಕ್ಷ್ಮಿ; ಪಾದರಸ.

**—ತನ** ಅಸ್ಥಿರತೆ; ತಳಮಳ; ಉದ್ಧತೆ.

**—ತೆ** ಮಿಂಚು, ಚಂಚಲತೆ.

**ಚಪಲೆ** ಅಸ್ಥಿರ ಮನಸ್ಸಿನವಳು; ಹಾದರಗಿತ್ತಿ; ಮದ್ಯ, ನಾಲಗೆ.

**ಚಪಾಟ** ಚಪ್ಪಟೆಯಾದುದು.

**ಚಪಾತಿ** ಗೋಧಿ ರೊಟ್ಟಿ, ದಶಿಮೆ.

**ಚಪಾಯಿಸು** ಅಗಡಿಸು; ಕದಿ.

**ಚಪಾವಣ** (ಚಪಾವು) ಕಳವು; ಅಡಗಿಸುವಿಕೆ.

ಚಪೇಟ ಇನ್ನೊಬ್ಬನನ್ನು ಸಮಾಧಾನಗೊಳಿಸಲು ಕೈ ನೀಡುವುದು; ಅಭಯಹಸ್ತ.
ಚಪ್ಪಗೆ (ಸಪ್ಪಗೆ), ರುಚಿಯಿಲ್ಲದೆ.
ಚಪ್ಪಟೆ ಮಟ್ಟವಾದ, ಉಬ್ಬಿಲ್ಲದ; ಚಪ್ಪಟೆ ಕೈಯಿಂದ ಹೊಡೆವ ಬಡಿತ.
ಚಪ್ಪಡಿ ಹಾಸುಗಲ್ಲು; ಠಕ್ಕು, ಮೋಸ.
—ಹಾಕು ಹಾಸುಗಲ್ಲು ಹಾಕು; ಕಲ್ಲು ಹಾಕು; ನಾಶಮಾಡು.
ಚಪ್ಪನ್ನ ಐವತ್ತಾರು.
—ದೇಶ ಐವತ್ತಾರು ಪ್ರಮುಖ ರಾಷ್ಟ್ರಗಳು; ಅಖಿಲ ಪ್ರಪಂಚ.
ಚಪ್ಪರ ಹಂದರ; ಮಾಡು; ಮೇಲು ಚಾವಣಿ, ಮೇಲುಪ್ಪರ.
ಚಪ್ಪರಣೆ ಹಕ್ಕಿಗಳ ಕೂಗು; ಮೋಹಗೊಳಿಸುವುದು; ಹೇಂಟೆಯ ಕೆಲೆಯುವಿಕೆ; ತುಟಯಿಂದ ತುಟ ಸವರುವಿಕೆ.
ಚಪ್ಪರಿಗ ಒಂದು ಜಾತಿಯ ಹುಲ್ಲು.
ಚಪ್ಪರಿಸು ತಟ್ಟು, ಭುಜವನ್ನು ತಟ್ಟು; ತುಟಯನ್ನು ಅಲುಗಾಡಿಸು; ಗದರಿಸು.
ಚಪ್ಪಲಿ ಎಕ್ಕಡ, ಕೆರ, ಪಾದುಕೆ, ಮೆಟ್ಟು.
ಚಪ್ಪಳಿಸು ಕೈತಟ್ಟು, ಚಪ್ಪಾಳೆ ಹಾಕು.
ಚಪ್ಪಾಳೆ ಕರತಾಡನ, ಕೈತಟ್ಟುವಿಕೆ.
ಚಪ್ಪೆ (ಸಪ್ಪೆ) ರುಚಿಯಿಲ್ಲದ, ಸವಿಯಿಲ್ಲದ; ಮುದ್ರೆ.
ಚಬುಕು (ಚಬಕು) ಚಾಟ; ಗಾಳಿಮರ, ಸರ್ವೆಮರ.
ಚಮಕು ಹೊಳೆ; ಹೊಳೆಯುವಿಕೆ.
—ಇಸು ಹೊಳೆಯುವಂತೆ ಮಾಡು.
ಚಮಟಿಕೆ (ಚಮ್ಮಟಗೆ).
ಚಮಡ ಚರ್ಮ, ಚಕ್ಕಳ, ತೊಗಲು.
ಚಮತ್ಕಾರ ವಿಸ್ಮಯ, ಆಶ್ಚರ್ಯ; ವಿನೋದದ ಆಟ; ಚತುರತನ, ಚಳಕ.
ಚಮತ್ಕೃತಿ (ನೋಡು: ಚಮತ್ಕಾರ).

ಚಮರ ಚಮರಿ ಮೃಗ; ತಿಬೇತಿನ ಯಾಕ್ ಮೃಗ; ಒಬ್ಬ ದೈತ್ಯ; ಚೌರಿ.
ಚಮರಿ ಚಮರಿ ಮೃಗ, ಯಾಕ್ ಮೃಗ.
—ಚೌರಿ ಕೂದಲ ಜತೆಗೆ ಸೇರಿಸಿಕೊಳ್ಳುವ ಚಮರಿರೋಮದ ಎಳೆಗಳು.
ಚಮು (ಚಮೂ) ಸೈನ್ಯ, 729 ಆನೆ–729 ರಥ–2187 ಕುದುರೆ–3645 ಕಾಲಾಳುಗಳಿಂದ ಕೂಡಿದ ಸೇನೆ.
—ಪ (ಪತಿ) ಸೇನಾನಿ, ಸೈನ್ಯದ ಒಡೆಯ.
ಚಮೂರ ಹುಲಿ.
ಚಮೂರು ಮೃಗಭೇದ, ಒಂದು ವಿಧದ ಜಿಂಕೆ.
ಚಮ್ಚ (ಚಮಚೆ) ಸಣ್ಣ ಸೌಟು.
ಚಮ್ಮ (ಚರ್ಮ) ತೊಗಲು, ಚಕ್ಕಳ.
ಚಮ್ಮಟಿಕೆ (ದ್ಭ) ಚರ್ಮ ಪಟ್ಟಿಕಾ (ಸಂ), ಚಾವಟ, ಬಾರುಕೋಲು, ಚಾಟ; ಸುತ್ತಿ, ಕಬ್ಬಿಣದ ಕೊಡತಿ.
ಚಮ್ಮಳಿ (ಚಮ್ಮಳಿಕೆ) ಒಂದು ಜಾತಿಯ ಹಾವು ಮೀನು; ರಾಹುವಿನ ಕತ್ತರಿಸಲ್ಪಟ್ಟ ಒಂದು ಅಂಗ.
ಚಯ್ ವಿನೋದ, ವಿಲಾಸ.
ಚಯ ಸಮೂಹ, ಗುಂಪು, ರಾಶಿ.
—ನ ರಾಶಿಹಾಕುವಿಕೆ, ಗುಂಪು ಕೂಡಿಸುವಿಕೆ, ಶೇಖರಿಸುವಿಕೆ.
ಚರ ದೂತ, ಅರಸಾಳ್; ಸುದ್ದಿ; ಚಲಿಸುವ; ಬದುಕುವ; ಸ್ಥಳ ಬದಲಾಯಿಸಿಕೊಂಡು ಹೋಗಬಲ್ಲ.
ಚರಕ ಗುಪ್ತಚಾರ; ಉಂಡಾಡಿ; ಭಿಕ್ಷು; ವೈದ್ಯವಿದ್ಯೆಯ ಮೇಲೆ ಒಂದು ಗ್ರಂಥ ಬರೆದ ಪ್ರಾಚೀನ ಮುನಿ; ರಾಟ; ಮಂತ್ರವಾದ.
ಚರಟ ಚಟ್ಟ; ಹೊಟ್ಟು, ಉಮಿ; ಗಸಿ.
ಚರಣ ಪಾದ; ಪದ್ಯದ ನಾಲ್ಕನೆ ಭಾಗ; ಚಲಿಸುವ ಜಾತಿ; ಶಾಲೆ.

—ಆಯುಧ ಕಾಲೇ ಆಯುಧವಾಗಿರುವುದು, ಕೋಳಿ.
—ಕಮಲ ತಾವರೆಯಂತಿರುವ ಪಾದ.
—ತಲ ಅಂಗಾಲು; ಪಾದಭಾಗ.
—ಯುಗ ಎರಡು ಪಾದಗಳು.
ಚರಣವಾಲ್ಮೀಕಿ ವಲ್ಮೀಕ ಅಥವಾ ಇರುವೆ ಹುತ್ತದಂಥ ಕಾಲಿರುವ; 'ಆನೆಕಾಲು' ಜಾಡ್ಯ.
ಚರಬಂಡವಳ ಚಾಲತಿ ಬಂಡವಳ; ಜಾನುವಾರುಗಳಂಥ ಸೊತ್ತು.
ಚರಬಿ ಕೊಬ್ಬು.
ಚರಮ ಕೊನೆ, ಅವಸಾನ; ಪಶ್ಚಾತ್; ನೀಚ; ಕನಿಷ್ಠ.
—ಅಂಗ ಮೋಕ್ಷಕ್ಕೆ ಹಿಂದಿನ ದೇಹವುಳ್ಳ.
—ಗೀತೆ ಒಬ್ಬನು ತೀರಿಕೊಂಡುದಕ್ಕಾಗಿ ಹೇಳುವ ಹಾಡು.
—ಸ್ವರ ಕೊನೆಯ ಸ್ವರಾಕ್ಷರ.
ಚರಲಿಂಗ ಚಲಿಸುವ ಜಂಗಮ, ಲಿಂಗವಂತ.
ಚರವಿಗೆ (ಚರಿಗೆ) ದೊಡ್ಡ ಅಗಲ ಬಾಯ ತಾಮ್ರದ ಪಾತ್ರೆ.
ಚರಂತಿ ಬ್ರಹ್ಮಚಾರಿಯಾದ ಲಿಂಗವಂತ.
ಚರಾಚರ ಚಲಿಸುವ ಮತ್ತು ಚಲಿಸದ; ಸ್ಥಾವರ ಜಂಗಮ; ಜಗತ್ತು.
ಚರಾದಾಯ ಯಜಮಾನರಿಲ್ಲದ ಒಡವೆಗಳನ್ನು ಮಾರಿ ಸರಕಾರಕ್ಕೆ ಸಿಗುವ ಲಾಭ; ಲಂಚ ಇತ್ಯಾದಿ ಅಸಾಧು ಲಾಭಗಳು.
ಚರಾಯಿ (ಚರಾವು) ಮೇವಿನ ಬಯಲು.
ಚರಿ ಹೋಗುವಿಕೆ; ಇರುವಿಕೆ.
ಚರಿಕಿ ಚರಕ, ಕಿರಿದಾದ ಗಾಣ.
ಚರಿಗೆ ಒಂದು ಪಾತ್ರೆ; ಚರ್ಯೆ (ಸಂ), ನಡತೆ; ಜೈನ ಸಿದ್ಧರ ಪಾರಣೆ.
ಚರಿತ (ಚರಿತೆ) ಚರಿತ್ರೆ; ನಡತೆ; ಸ್ವಭಾವ; ಹಿಂದಾದುದರ. ಕಥನ, ಇತಿಹಾಸ.
—ಅರ್ಥ ಕೃತಕೃತ್ಯನಾಗುವುದು; ಶುಭವಾಗುವಿಕೆ.
ಚರಿತ್ರ (ಚರಿತ್ರೆ), ಇತಿಹಾಸ.
—ಗಾರ ಚರಿತ್ರೆ ಬರೆಯುವವ, ಇತಿಹಾಸ ಬರೆಯುವವ.
ಚರಿಷ್ಣು ಚಲಿಸುತ್ತಿರುವ; ಚಂಚಲ.
ಚರು (ಚರುಗ) ಹವಿಸ್ಸು, ಅಗ್ನಿಯಲ್ಲಿ ಹೋಮಿಸುವ ಭಾಗ; ಹವಿಸ್ಸು ಬೇಯಿಸುವ ಪಾತ್ರೆ; ಬಲಿ ವಸ್ತು.
ಚರೆ ಕೋವಿಯ ಮದ್ದು.
ಚರ್ಚ ಸೂರ್ಯ.
ಚರ್ಚರಿ ಒಂದು ಬಗೆಯ ಪದ್ಯ.
ಚರ್ಚಿತ ಬಳಿಯಲ್ಪಟ್ಟ; ವಾದಮಾಡಲ್ಪಟ್ಟ, ವಿಚಾರಿಸಲ್ಪಟ್ಟ.
ಚರ್ಚು ಚಪ್ಪು; ಇಗರ್ಜಿ; ಶಿಶುಗಳನ್ನು ಪಾಲಿಸುವಿಕೆ.
ಚರ್ಚೆ ಜಗಳ, ವಾದವಿವಾದ; ತರ್ಕ; ಲೇಪನ, ಹಚ್ಚುವಿಕೆ; ವಿಚಾರಮಾಡುವಿಕೆ; ಉತ್ಸವ; ಸುರತ, ಕೂಟ; ಮಾತು; ವ್ರತ; ಕುಚೋದ್ಯ.
ಚರ್ಮ ತೊಗಲು, ಚಕ್ಕಳ; ಗುರಾಣಿ.
—ಕಾರ ಸಮಗಾರ (ದ್ಭ).
—ಗತ ಚರ್ಮಕ್ಕೆ ಸಂಬಂಧಿಸಿದ; ಮೈಗೆ ಹತ್ತಿದ.
—ಚಕ್ಷು ಭೌತದೃಷ್ಟಿ; ಹೊರಗಣ್ಣು.
ಚರ್ಮಣ ಕೇಳಿದ್ದಕ್ಕೆ ತೀವ್ರವೇ ಉತ್ತರ ಕೊಡಬಲ್ಲ ಜಾಣ.
ಚರ್ಮರತ್ನ ಶ್ರೇಷ್ಠ ಗುರಾಣಿ.
ಚರ್ಯ (ಚರ್ಯೆ) ಚಲನೆ, ನಡತೆ; ವೃತ್ತಿ; ಅಭ್ಯಾಸ; ಊಟ.
ಚರ್ವಣ ಹಲ್ಲಿಂದ ಕಡಿವಿಕೆ, ಅಗೆವಿಕೆ.
ಚರ್ವಣೆ ಒಂದು ಜಾತಿಯ ನೀಲ ನೊಣ.
ಚರ್ವಿತ ಅಗಿದ, ಜಗಿದ.

ಚಲ ತಿರುಗುವ, ಚಲಿಸುವ; ನಡುಗುವ; ತಳಮಳ; ಛಲ, ಹಟ; ಗಟ್ಟಿ ಮಾತು.
—ಅಚಲ ಅಸ್ಥಿರ, ಚಲಿಸುವ.
—ನ ಪಾದ, ಚರಣ; ಸಂಚಾರ.
—ನೆ ನಡಿಗೆ; ಅಲುಗಾಟ; ಸರದಾರ.
—ವಾದಿ ಹಟವಾದಿ; ಹೊಲೆಯರಲ್ಲಿ ಒಂದು ಜಾತಿ.
ಚಲಕ (ಚಳಕ) ಕೈಯಲ್ಲಿ ಕಂಡೂ ಕಾಣ ದಂತೆ ಮಾಡುವ ಸಾಮರ್ಥ್ಯ, ಕರಕೌಶಲ.
ಚಲಕು (ಚಲಂಕು) ಎಸೆ, ಕೈಯಿಂದ ಸಡಿಲಿಸು; ಕೈಯಿಂದ ಆಡಿಸಿಕೊ.
ಚಲತ್ ಚಲಿಸುವ, ಅಲುಗುವ; ಸಡಲಿದ.
—ಚಿತ್ರ ವಾಕ್ಪಟ, ಸಿನೆಮಾ ಪಟ.
—ವ ತಿರುಗಾಟ; ಅಸ್ಥಿರತೆ; ನಡುಕ.
ಚಲದಿ ಸೆಳದಿ, ತಂಗುಳು.
ಚಲನಕ ಕುಪ್ಪಸ, ರವಕೆ.
ಚಲಾಯಿಸು ನಡೆಯಿಸು; ಹೇಳಿದ್ದನ್ನು ಮಾಡು; ಮುಗಿಸು; ಮೀರು.
ಚಲಾವಣೆ ರೂಢಿಯಲ್ಲಿರುವಿಕೆ; ನಾಣ್ಯಗಳ ಕೊಂಡು ಕೊಡೋಣ; ಹಣದ ಸಂಚಾರ.
ಚಲಿ (ಚಳಿ) ಶೀತ, ನೆಗಡಿ; ತಂಪು; ಮುಚ್ಚಳ; ಓಡುವವಳು, ಚಲಿಸುವಳು; ಹೊದಿಕೆ.
ಚಲಿತ ಹೋದ; ಅಲುಗುವ; ಸಂಚರಿಸುವ.
ಚಲುಕು (ಚಲುಂಕು) ಸುರಿ; ಎಸೆ.
ಚಲುವು (ಚೆಲುವು, ಚೆಲ್ವು).
ಚಲೋ ಸೊಗಸಾದ, ಸುಂದರವಾದ.
ಚಲ್ಲ ಸರಸ, ವಿನೋದ; ನಗು; ಹರಡಿಬೀಳು.
—ಆಟ ವಿನೋದ, ಓಕುಳಿಯಂತೆ ಚಲ್ಲುವ ಆಟ.
—ಗಾತಿ ಆಡುವವಳು; ಪರಿಹಾಸ್ಯಮಾಡುವವಳು, ಸರಸವತಿ.
—ಬಡಿ ನಾಲ್ಕು ಕಡೆಗೂ ಚೆದರುವಂತೆ ಹೊಡೆ.
—ವತ್ತುವಿನೋದದಿಂದಹೊಟ್ಟೆಹೊರೆವವ
ಚಲ್ಲಣ ಚಡ್ಡಿ, ಇಜಾರ.
ಚಲ್ಲಿ ಕನ್ನಡಿ, ದರ್ಪಣ.
ಚಲ್ಲು (ನೋಡು: ಚೆಲ್ಲು) ಉಂಡಾಡಿಯಂತೆ ಆಲೆ; ಹರಡಿ ಎಸೆ; ತುಳುಕು, ತುಳುಕಿ ಬೀಳು; ಕುಚೇಷ್ಟೆ; ಅಪಹಾಸ್ಯ.
—ತನ ಉಂಡಾಡಿತನ, ಅಪಹಾಸ್ಯ.
ಚಲ್ವು (ನೋಡು: ಚೆಲ್ವು).
ಚಲ್ಲೆ ಉದ್ದ.
ಚವಡಿಕೆ ಒಂದು ಜಾತಿ ಏಕತಾರು, ಕಿನ್ನರಿ.
ಚವರಿ (ಚಮರಿ).
ಚವಲ ನಾಲ್ಕಾಣೆ ಪಾವಲಿ; ಕ್ಷೌರ; ಚಕ್ರಬಡ್ಡಿ.
ಚವಿ ಹೊಳೆ; ಕಾಂತಿ; ಚರ್ಮ, ತೊಗಲು.
ಚವುಕಳಿ ನಾಲ್ಕು ಮುತ್ತುಗಳಿಂದ ಮಾಡಿದ ಆಭರಣ; ಒಂಟಿ; ಚೌಕದ ಗೆರೆಗಳಿರುವ.
ಚವುಡಿ (ಚಾಮುಂಡಿ).
ಚವುಳು ಸವಳು, ಒಗರು.
ಚಷಕ ಮದ್ಯಪಾನ ಮಾಡುವ ಪಾತ್ರ; ಮದ್ಯ.
ಚಹಾ ಚಾ ಎಂಬ ಪಾನೀಯ; ತೇ ಎಲೆ.
ಚಳ ಹೊಳ, ಹೊಳಪು; ಚಳಕ, ಚುರುಕು.
ಚಳಕ (ಚಳುಕು) ವಹಿಲ, ವೇಗ; ಚಮತ್ಕಾರ; ವಾತದ ಹಿಡಿತ.
—ನೀರು ಚಿಮುಕಿಸುವ ನೀರು.
ಚಳತೆ ಚಾಂಚಲ್ಯ.
ಚಳಬಳಿಕೆ ಚಮತ್ಕಾರ.
ಚಳವಳ ಅಶಾಂತಿ, ಜನಸಮುದಾಯದಲ್ಲಾಗುವ ಅಶಾಂತಿ.
ಚಳಿ ಶೀತ; ಹಿಮ, ಮಂಜು; ತಂಪು; ದಣಿವು; ಕುಗ್ಗುವಿಕೆ; ಅಂಗಾಲು; ಶೀತಗೊಳ್ಳು; ಶಕ್ತಿಗುಂದು.
—ತು ಶೀತಗೊಂಡು; ದಣಿದು.
—ಸು ದಣಿಸು; ಹಂಗಿಸು, ನಿಂದಿಸು.
ಚಳಿಕೆ ಹೂವಿನ ಬಳೆ.

ಚಳಿಯ ಕೊಳೆಯುವಿಕೆ.
ಚಳಿ ಹಬ್ಬಿರು; ತುಂಬಿರು; ಸೂಸು.
ಚಳಿಯ ನೀರು ಸಿಂಪಿಸುವುದು, ನೀರು ಚಿಮುಕಿಸುವುದು.
ಚಳ್ಳು ನೀಳವಾದ ಸಲಿಕೆ.
ಚಂ ಕೆಂ, ಚೆನ್, ಚೆಮ್—ಇತ್ಯಾದಿ ಕೆಂಪು ಎಂಬ ತಾತ್ಪರ್ಯದ ಆದೇಶಗಳು.
ಚಂಕಸತ್ ಬಹಳ ಪ್ರಕಾಶಿಸುತ್ತಿರುವುದು.
ಚಂಕ್ರಮಣ ಹೋಗುವಿಕೆ; ಅತ್ತಿತ್ತ ಚಲಿಸುವಿಕೆ, ಮೇಲಿಂದ ಮೇಲೆ ಹೋಗುವಿಕೆ.
ಚಂಗನೆ ಚುರುಕಿನಿಂದ, ಚಟಕ್ಕನೆ.
ಚಂಗು ಹಾರು, ಜಿಗಿ, ನೆಗೆ; ಚಟುವಟಿಕೆಯಿಂದ ಹಸುವಿನ ಕರುಗಳು ನೆಗೆವ ರೀತಿ; ವಕ್ರ, ಡೊಂಕು.
—ಆಟ ವಕ್ರವಕ್ರವಾಗಿ ಒಡಾಡುವುದು.
ಚಂಗೂಲಿ ದಿನಕೂಲಿ.
ಚಂಚ ಬೇಡ, ಶಬರ.
ಚಂಚತ್ ಅಲುಗುವ, ನಡುಗುವ; ಪ್ರಕಾಶಿಸುವ.
—ರೂಪ ಅಸ್ಥಿರವಾದ ಬಿಂಬ.
ಚಂಚರೀ (ಚಂಚರೀಕ) ನಡುಗುವ ಮೈಯುಳ್ಳುದು, ತುಂಬಿ.
ಚಂಚಲ ಚಲಿಸುವ, ಸ್ಥಿರವಲ್ಲದ; ಮಿಂಚು; ಪುರುಲೆ ಹಕ್ಕಿ, ಕಾಡು ಮೈನಾ.
—ಅಪಾಂಗ ಚಪಲವಾದ ಕಣ್ಣತುದಿ.
—ತನ ಅಸ್ಥಿರಬುದ್ಧಿ; ಅಲುಗುವಿಕೆ.
—ನೇತ್ರೆ ಹೊಳೆವ ಕಣ್ಣುಳ್ಳವಳು, ಚಂಚಲವಾದ ಕಣ್ಣಿನವಳು.
ಚಂಚಲೆ ಮಿಂಚು; ಸಂಪತ್ತು; ಲಕ್ಷ್ಮಿ; ಚಂಚಲವಾದವಳು.
ಚಂಚಿ (ಸಂಚಿ) ಎಲೆಅಡಿಕೆ ಚೀಲ.
ಚಂಚಿತಿ ಶಬರಿ, ಬೇಡಿತಿ.
ಚಂಚು (ಚುಂಚು) ಕೊಕ್ಕು.
—ಘಾತ ಕೊಕ್ಕಿನ ಹೊಡೆತ.
—ಪುಟ ಜೋಡಿಸಿದ ಕೊಕ್ಕು.
ಚಂಚುರ ನಿಪುಣ; ಚೆಲುವ.
ಚಂಡ ತೀಕ್ಷ್ಣ, ಕ್ರೂರ; ಯಮನ ದೂತನೊಬ್ಬ; ಒಬ್ಬ ದೈತ್ಯನ ಹೆಸರು; ಹುಣಿಸೆ ಮರ.
ಚಂಡಕರ ಕ್ರೂರ ಕಿರಣವುಳ್ಳವ; ಸುಂಕ.
ಚಂಡಕೀರ್ತಿ ಕ್ರೂರವಾದ ಕೀರ್ತಿಯುಳ್ಳವ; ಶಿವನ ಗಣದಲ್ಲಿ ಒಬ್ಬ.
ಚಂಡವಾಳ ಅಗಾವು, ಮುಂಗಡ.
ಚಂಡಾಲ ಒಂದು ಜಾತಿ; ಹೊಲೆಯ; ಶೂದ್ರಳಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಸಂಕೀರ್ಣ ಜಾತಿ.
ಚಂಡಾಂಶು ತೀಕ್ಷ್ಣ ಕಿರಣವುಳ್ಳವ, ಸೂರ್ಯ.
ಚಂಡಿ ಒದ್ದೆ; ಕಾಳಿ, ದುರ್ಗಿ; ಹಟಗಾತಿ.
—ಕಾ ಚಂಡಿ, ದುರ್ಗಿ.
—ಕಾರಮಣ ಶಿವ.
—ಕೊಳು ಹಟಮಾಡು.
—ತನ ಹಟಮಾರಿತ್ವ.
—ಸು ಸಿಟ್ಟುಗೊಳ್ಳು, ಹಟಮಾಡು.
—ಹಿಡಿ ಹಟಮಾಡು.
ಚಂಡಿಕೆ ಜುಟ್ಟು, ಕೂದಲಗಂಟು, ಶಿಖಿ.
ಚಂಡಿಲ ರುದ್ರ; ಕ್ಷೌರಕ.
ಚಂಡೀ ಸಿಟ್ಟುಳ್ಳವಳು; ದುರ್ಗಾದೇವಿ.
ಚಂಡು (ಚೆಂಡು) ಆಟದ ಉರುಟು ಗೋಲಿ; ಉರುಟಾದುದು; ಹೂವಿನ ದಂಡೆ.
ಚಂಡೆ ಒಂದು ಜಾತಿಯ ಮದ್ದಲೆ; ದುರ್ಗಿ; ಒಂದು ಸುಗಂಧ ದ್ರವ್ಯ.
ಚಂಡೇಶ ಚಂಡಿಯ ಒಡೆಯ, ಶಿವ.
ಚಂಡೋಲ ಒಂದು ಪಕ್ಷಿ.
ಚಂದ ಛಂದ (ಸಂ); ಮನಸ್ಸು; ಇಷ್ಟ; ಸೊಗಸು, ಮನೋಹರ; ಆಕಾರ, ರೀತಿ; ಓಣ; ಚಂದ್ರ.

**ಚಂದನ** (ಚಂದಣ) ಶ್ರೀಗಂಧದ ಮರ.
—**ಅಕ್ಷತೆ** ಗಂಧ ತೇದು ಮಾಡಿದ ತಿಲಕ.
**ಚಂದನಾಚಲ** ಸಹ್ಯಾದ್ರಿಯ ಒಂದು ಸೆರಗಿನ ಹೆಸರು.
**ಚಂದನಾವತಿ** ಕುಳಿಂದನೆಂಬ ದೊರೆಯ ರಾಜಧಾನಿ.
**ಚಂದನೋಪಲ** ಗಂಧ ತೇಯುವ ಕಲ್ಲು.
**ಚಂದವುರ** ಚಂದ್ರಪುರ.
**ಚಂದಿ** ಅರ್ಧ ಗೋಡೆ, ಪೌಳಿ ಗೋಡೆ.
**ಚಂದಿರ** (ದ್ಭ) ಚಂದ್ರ (ಸಂ), ಶಶಿ.
**ಚಂದು** ಚಂದ್ರ, ತೇದಿ.
**ಚಂದುಟಿ** (ಚೆಂದುಟ) ಕೆಂಪಾದ ತುಟ.
**ಚಂದ್ರ** ಶಶಿ, ತಿಂಗಳು; ಸಿಂಧೂರವೆಂಬ ಕೆಂಪು ಬಣ್ಣದ ಹುಡಿ; ಹೊಳೆವ; ಸುಂದರವಾದ ನೋಟ, ಮನೋಹರವಾದುದು; ಚಿನ್ನ; ಕರ್ಪೂರ; ಸಿಂಹಾಸನ; ಮನೆ; ಕಾಡು; ನೀರು.
—**ಕಾಂತಿ** ಚಂದ್ರನ ಹೊಳೆವು.
—**ಜ** ಬುಧ.
—**ತಿಲಕ** ಉರುಟಾದ ಬೊಟ್ಟು.
—**ಮ** (ಚಂದ್ರ).
**ಚಂದ್ರಕ** ನವಿಲಿನ ಬಾಲದ ಗರಿಗಳ ಚಂದ್ರನಾಕಾರದ ಬೊಟ್ಟುಗಳು.
**ಚಂದ್ರಕಾವಿ** ಕೆಂಪು ಸೀರೆ; ಒಂದು ಬಗೆಯ ಕೆಂಬಣ್ಣ.
**ಚಂದ್ರಕಾಂತ** ಒಂದು ಜಾತಿಯ ಕಲ್ಲು, ಅಮೃತಶಿಲೆ, ಹಾಲುಗಲ್ಲು; ಚಂದ್ರ.
**ಚಂದ್ರಕಿ** ನವಿಲು.
**ಚಂದ್ರಗುಪ್ತ** ಪಾಟಲಿಪುತ್ರದಲ್ಲಾಳಿದ ಒಬ್ಬ ಪ್ರಸಿದ್ಧ ಅರಸು.
**ಚಂದ್ರದಾರ** ಚಂದ್ರನ ಹೆಂಡತಿ.
**ಚಂದ್ರನಖಿ** ರಾವಣನ ಸೋದರಿಯೊಬ್ಬಳು.
**ಚಂದ್ರಪ್ರಭ** ಜಿನ ತೀರ್ಥಂಕರರಲ್ಲಿ ಒಬ್ಬ.

**ಚಂದ್ರಭಾಗೆ** ಪಂಜಾಬು ಕಾಶ್ಮೀರಗಳಲ್ಲಿ ಹರಿಯುವ ಒಂದು ನದಿ.
**ಚಂದ್ರಮೌಳಿ** ಚಂದ್ರನು ತಲೆಯಲ್ಲಿ ಉಳ್ಳವ, ಶಿವ.
**ಚಂದ್ರವಂಶ** ಚಂದ್ರನಿಂದ ಪ್ರಾರಂಭಿಸಿತೆಂದು ಹೇಳುವ ಅರಸರ ಕುಲ. ಇವುಗಳಲ್ಲಿ ಯಾದವನಿಂದ ಹುಟ್ಟಿದ ಅಂಶ ಒಂದು; ಪುರುವಿನಿಂದ ಹುಟ್ಟಿದುದು ಇನ್ನೊಂದು. ಕೃಷ್ಣನು ಯಾದವನು; ಪಾಂಡವರು ಪುರುವಿನ ಸಂತತಿಯ ಕುರು ಎಂಬವನ ಕುಲದವರು.
**ಚಂದ್ರಶಾಲೆ** ಉಪ್ಪರಿಗೆಯ ಮೇಲುಗಡೆ.
**ಚಂದ್ರಶೇಖರ** ಶಿವ.
**ಚಂದ್ರಹಾರ** ಚಂದ್ರನಂಥ ಉರುಟು ಬಿಲ್ಲೆಗಳ ಒಂದು ಸರ; ಚಕ್ರಸರ.
**ಚಂದ್ರಹಾಸ** ಚಂದ್ರನಂತೆ ಚೆಲುವಿನ ನಗೆಯುಳ್ಳವ; ಕುಂತಳ ದೇಶದ ಅರಸು.
**ಚಂದ್ರಾಚೂಡ** ಶಿವ.
**ಚಂದ್ರಾತಪ** ಬೆಳುದಿಂಗಳು.
**ಚಂದ್ರಾಪೀಡ** ಶಿವ; ತಾರಾಪೀಡನ ಮಗ.
**ಚಂದ್ರಾವಳಿ** ರಾಧೆಯ ಸೋದರಿಯೊಬ್ಬಳು.
**ಚಂದ್ರಾಂಗದ** ಇಂದ್ರಸೇನ ಅರಸನ ಮಗ.
**ಚಂದ್ರಿಕೆ** ಬೆಳದಿಂಗಳು; ಹಣ್ಣು ಮಾಗಿದೆಯೇ ಎಂದು ನೋಡಲು ಚೂರಿಯಿಂದ ಮಾಡುವ ಕಡಿತ.
**ಚಂದ್ರೆ** ಮೇಲೆ ಮಾತ್ರ ಮುಚ್ಚಿದ ಚಪ್ಪರ; ಮೇಲುಗಟ್ಟು.
**ಚಂಪಕ** (ಸಂ) ಸಂಪಗೆ (ದ್ಭ).
**ಚಂಪಕಮಾಲೆ** ಒಂದು ವೃತ್ತ ರೀತಿ; ಚಂದ್ರಹಾಸನ ಹೆಂಡತಿ.
**ಚಂಪು** ಗದ್ಯಪದ್ಯ ಸೇರಿದ ಕಾವ್ಯ.
**ಚಂಪೆ** (ಚಂಪೆಯ) ಪರಿಮಳ.
**ಚಂಬಕ** ಒಂದು ತರದ ಡೋಲು.

ಚಂಬಾರ ಸಮಗಾರ.
ಚಂಬು (ಚೆಂಬು) ತಂಬಿಗೆ, ತಾಮ್ರದ ಬಿಂದಿಗೆ; ತಾಮ್ರ.
—ಕುಟಿಗ ತಾಮ್ರದ ಕೆಲಸ ಮಾಡುವವ; ಒಂದು ಹಸುರು ಹಕ್ಕಿ.
ಚಂಬೊನ್ (ಚೆಂಬೊನ್) ಕೆಂಪಾದ ಹೊನ್ನು, ತಾಮ್ರ.
ಚಾ (ಚಹ) ಒಂದು ಪಾನೀಯ; ಒಂದು ಬಗೆಯ ಎಲೆ; ಅದರ ಕಷಾಯ.
ಚಾಕ ಚುರುಕು; ವೇಗ; ಚೊಕ್ಕ.
ಚಾಕರ ಸೇವಕ, ಆಳು, ನೌಕರ.
ಚಾಕರಿ ಕೆಲಸ, ನೌಕರಿ, ಹುದ್ದೆ.
ಚಾಕು ಚೂರಿ.
ಚಾಕ್ರಿಕ ಭಟ್ಟಂಗಿ, ಸ್ತುತಿಪಾಠಕ.
ಚಾಗ (ದ್ಭ) ತ್ಯಾಗ (ಸಂ), ದಾನ, ಕೊಡುವುದು; ಹಸುರುಬಣ್ಣ.
ಚಾಗಿಸು ನಾಶವಾಗು, ಅಡಗು; ತ್ಯಾಗಿ.
ಚಾಚು ವಿಸ್ತರಿಸು; ನೀಡು, ಮುಂದೊಡ್ಡು.
ಚಾಟಕ ಮಂತ್ರವಾದ; ಜಾದು.
ಚಾಟಿ ಬಾರುಕೋಲು, ಚಮ್ಮಟಿಕೆ.
ಚಾಟು ಆಶ್ರಯೆ; ಮರೆ; ಚಮತ್ಕಾರ; ಠಕ್ಕು; ಮರುಳುಗೊಳಿಸುವ ಮಾತು; ಕುಶಲೋಕ್ತಿ, ಪ್ರಿಯವಚನ.
—ಉಕ್ತಿ ಮರುಳುಗೊಳಿಸುವ ಮಾತು.
—ತನ ಮೋಸಗಾರಿಕೆ; ಚತುರತನ.
—ನುಡಿ ಚತುರ ನುಡಿ; ಮೋಸಗೊಳಿಸುವ ಮಾತು.
ಚಾಡಿ ದೂರು, ನಿಂದೆ.
—ಗ ದೂರುಹೇಳುವವ.
—ಗಾರ (ಚಾಡಿಗ).
—ತನ ದೂರು ಹೇಳುವಿಕೆ, ಸುಳ್ಳು ತಿಳಿಸುವಿಕೆ.
ಚಾಣ (ಚೇಣು) ಸಣ್ಣ ಉಳಿ.
ಚಾಣಕ್ಯ (ಚಾಣಿಕ್ಯ) ಚಂದ್ರಗುಪ್ತನ ಮಂತ್ರಿಯಾಗಿದ್ದ ವಿಷ್ಣುಗುಪ್ತ, ಕೌಟಿಲ್ಯ.
ಚಾಣುಕ್ಯ (ಚಾಲುಕ್ಯ) ಕನ್ನಡ ನಾಡನ್ನು ಆಳಿದ ಒಂದು ಅರಸು ಮನೆತನ. ಈಗಣ ಬಾದಾಮಿ ಇವರ ರಾಜಧಾನಿಯಾಗಿತ್ತು.
ಚಾಣೂರ ಕೃಷ್ಣ ಬಲರಾಮರೊಡನೆ ಮಲ್ಲಯುದ್ಧಕ್ಕೆ ನಿಂತ ಜಟ್ಟಿಗಳಲ್ಲಿ ಒಬ್ಬ.
ಚಾತ ಒಬ್ಬ ರಾಕ್ಷಸ.
ಚಾತಕ ಚಾದಗೆ ಹಕ್ಕಿ.
ಚಾತುರ (ನೋಡು: ಚತುರ).
ಚಾತುರಿಯ (ದ್ಭ) ಚಾತುರ್ಯ (ಸಂ).
ಚಾತುರ್ಮಾಸ ನಾಲ್ಕು ಮಾಸಗಳಲ್ಲಿ ಮುಗಿಯುವ ಒಂದು ವ್ರತ.
ಚಾತುರ್ವರ್ಣ ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರವೆಂಬ ನಾಲ್ಕು ಜಾತಿಗಳು.
ಚಾತುಃಶ್ರುತಿ ನಾಲ್ಕು ವೇದಗಳು.
ಚಾದಗೆ (ದ್ಭ) ಚಾತಕ (ಸಂ) ಒಂದು ಪಕ್ಷಿ, ಮಳೆಗಾಗಿ ಕಾದಿರುವ ಒಂದು ಹಕ್ಕಿ.
ಚಾನ (ಚಾಣ) ಕಬ್ಬಿಣ ಇಲ್ಲವೆ ಕಲ್ಲು ಕಡಿಯುವ ಉಳಿ.
ಚಾಪ ಬಿಲ್ಲು; ಮೇಷದಿಂದ ಎಣಿಸಿದಲ್ಲಿ ಒಂಭತ್ತನೆಯ ರಾಶಿ; ಧನೂರಾಶಿ; ಕಮಾನು; ಕಾಮನ ಬಿಲ್ಲು; ಮುದ್ರೆ.
ಚಾಪಖಾನೆ (ಛಾಪಖಾನೆ) ಮುದ್ರಣಾಲಯ, ಅಚ್ಚುಕೂಟ.
ಚಾಪಟೆಯ ಮೋಸಗಾರ; ಜಾರ; ಪೋಕರಿ.
ಚಾಪಲ ಚಂಚಲ ಸ್ವಭಾವದ.
ಚಾಪಲತೆ ಬಿಲ್ಲಿನ ಹಗ್ಗ.
ಚಾಪಲ್ಯ ಚಪಲತನ, ಅಸ್ಥಿರತೆ; ಚಟುವಟಿಕೆ; ನಡುಕ.
ಚಾಪು ವಿಸ್ತಾರ; ಮೃದಂಗದ ಒಂದು ಬಗೆಯ ಬಡಿತ; ಒಂದು ತಾಲ ನಿಯಮ.
ಚಾಪೆ ಹಾಸಿಗೆ; ಛಾಪೆ, ಮುದ್ರಣ.

ಚಾಮು (ದ್ಭ) ಶ್ಯಾಮು (ಸಂ).
ಚಾಮರ ಚವರಿ, ಕುಂಚ, ಬೀಸಣಿಕೆ, ಕೂದಲಿನ ಬೀಸಣಿಗೆ.
—ಗಿತ್ತಿ ಚಾಮರ ಬೀಸುವವಳು.
ಚಾಮೀರಕ ಚಮೀರವೆಂಬ ಗನಿಯಲ್ಲಿ ಹುಟ್ಟಿದುದು, ಚಿನ್ನ, ಸ್ವರ್ಣ, ಕನಕ.
ಚಾಮುಂಡಿ ದುರ್ಗಿ, ಚಂಡ ಮತ್ತು ಮುಂಡನನ್ನು ಕೊಂದವಳು.
ಚಾಯು (ಛಾಯೆ) ನೆರಳು; ಚಾ—ಪಾನೀಯ.
ಚಾರ ದೂತ, ಗೂಢವಾಗಿ ತಿರುಗುವ ಆಳು; ಹೋಗುವಿಕೆ; ಸೆರೆಮನೆ; ಕೃತ್ರಿಮವಾದ ವಿಷ; ಬಂಧನ; ಕಂಬಳಿ.
ಚಾರಕ ದೂತ; ನಡೆಯುವ; ಮುಂಬರಿವ.
ಚಾರಚಕ್ಷು ಗುಪ್ತಚರ.
ಚಾರಣ ನಟ; ಸಂಚರಿಸುವವ; ಕೀರ್ತಿಯನ್ನು ಪಸರಿಸುವ; ಗಂಧರ್ವ; ಹೊಗಳುವವ, ಭಟ್ಟಂಗಿ; ಯೋಗಿ.
ಚಾರಿ ಉಪಾಯ, ಹಂಚಿಕೆ; ಮನಸ್ಸಿನ ಗುರಿ; ಅಗ್ಗ; ಮುಂದುವರಿ; ಚಲನೆಯ ವರಸೆ.
—ಪರಿ ಯುಕ್ತಿ ಸಾಧಿಸು; ಉಪಾಯದಿಂದ ಮುಂದುವರಿ.
ಚಾರಿತ್ರ ನಡವಳಿ, ಆಚಾರ.
ಚಾರಿಸು ಅರೆ, ತೇದು; ಕಡೆ, ಮಥಿಸು.
ಚಾರು ಮನೋಹರ, ಸುಂದರ; ಬೃಹಸ್ಪತಿ; ಸಾರು; ರಸ.
—ಕರಣ ಪುಟಕೊಡುವಿಕೆ.
—ತರ ಜಗ್ಗುವುದು; ಬಹಳ ಮನೋಹರವಾದ್ದು.
ಚಾರುದತ್ತ ಮೃಚ್ಛಕಟಿಕಾ ನಾಟಕದ ಕಥಾನಾಯಕ.
ಚಾರುವಟೆಯ ನೀಚ, ಕಪಟ; ಅಲ್ಪ; ಜಾರ.
ಚಾರ್ವಾಕ ನಾಸ್ತಿಕವಾದವನ್ನು ಸಾರಿದ ಒಬ್ಬ ಪ್ರಾಚೀನಕಾಲದ ಮೇಧಾವಿ.
ಚಾಲತಿ (ಚಾಲು) ನಡವಳಿಕೆಯಲ್ಲಿರುವ, ಚಲಾವಣೆಯಲ್ಲಿರುವ, ಬಳಕೆಯಲ್ಲಿರುವ.
ಚಾಲನ ನಡಸುವಿಕೆ.
ಚಾಲನಿ ಸಾರಣಿಗೆ, ಜರಡಿ.
ಚಾಲುಕ್ಯ ಒಂದು ಅರಸು ವಂಶ.
ಚಾವಟಿ (ಚಾಟ).
ಚಾವಡಿ ಚತುಷ್ಕಿ; ಮಂಟಪ, ಸಭಾಮಂಟಪ; ಪಡಸಾಲೆ; ವಿಚಾರ ನಡೆಯುವ ಸ್ಥಳ.
ಚಾವಣಿ ಮಾಡಿನ ಹೊದ್ದಿಕೆ; ದಂಡಿನ ಮನೆಗಳು.
ಚಾವಳ (ದ್ಭ) ಚಾಪಲ (ಸಂ).
—ಇಸು ಅಲ್ಲಗಳೆ.
ಚಾವಿ ಬೀಗದ ಕೈ, ಕೀಲಿ.
ಚಾವುಂಡ (ಚಾಮುಂಡ) ಚಾವುಂಡರಾಯನೆಂಬ ಅರಸು.
ಚಾಷ ಒಂದು ನೀಲ ಹಕ್ಕಿ.
ಚಾಳಿ ನಡತೆ, ಅಭ್ಯಾಸ; ಕೆಟ್ಟ ನಡತೆ.
—ಸು ಚೇಷ್ಟೆಮಾಡು; ಸೋಲಿಸು; ಚಪಲವಾಗು.
ಚಾಳೀಸು ನಲ್ವತ್ತನೆ ವಯಸ್ಸಿಗೆ ಬರುವ ದೃಷ್ಟಿದೋಷ; ಭಸ್ಮ, ಕನ್ನಡಕ.
ಚಾಳೆಯ ಗತಿಲಂಘನ; ಚಮತ್ಕಾರದ ಗತಿಯಿಂದ ಪ್ರತಿಭಟಿಸುವಿಕೆ.
ಚಾಂದಣಿ (ಚಾಂದ್ರ) ಚಂದ್ರನೇ ದೇವತೆಯಾಗಿ ಉಳ್ಳ, ಬೆಳುದಿಂಗಳು.
ಚಾಂದ್ರ ಚಂದ್ರನೇ ಮುಖ್ಯವಾಗಿ ಉಳ್ಳದು; ಚಂದ್ರಕಾಂತಮಣಿ; ಒಂದು ತಿಂಗಳು.
ಚಾಂದ್ರಮಾನ ಚಂದ್ರನನ್ನು ಹೊಂದಿ ಕಾಲಗಣನೆ; ಚಂದ್ರನಿಗೆ ಸಂಬಂಧಿಸಿದ.
ಚಾಂದ್ರಾಯಣ ಚಂದ್ರನ ಶುಕ್ಲ ಕೃಷ್ಣ ಪಕ್ಷಗಳನ್ನು ಪರಿಶೀಲಿಸಿ ಮಾಡುವ ವ್ರತ.
ಚಾಂಪೆಯಕ ಸಂಪಗೆ; ನಾಗಕೇಸರ; ಬಂಗಾರ.

ಚಿಕಣಿ ಗಟ್ಟಿ; ತಿರುಳುಳ್ಳ, ಸಾರಭರಿತ; ಚಿಕ್ಕ; ಚಿಕ್ಕಣಿ ಅಡಕೆ.
ಚಿಕಿಚ್ಚೆ (ದ್ಭ) ಚಿಕಿತ್ಸೆ (ಸಂ).
ಚಿಕುರ ಉದ್ಧತ, ಉಡಾಳ; ಕುರುಳು.
ಚಿಕ್ಕ ಚಿಣ್ಣ, ಸಣ್ಣ, ಪುಟ್ಟ; ಸಿಕ್ಕ, ಕಲ್ಲಿಚೀಲ.
ಚಿಕ್ಕಟ ಚಿಕ್ಕಾಡು.
ಚಿಕ್ಕಾಡು ಒಂದು ಚಿಕ್ಕ ಕ್ರಿಮಿ, ಹೇನಿನಂತೆ ಪ್ರಾಣಿಗಳ ಮೈಯಲ್ಲಿ ವಾಸವಾಗಿರುವ ಕ್ರಿಮಿ.
ಚಿಕ್ಕಣ ಅಂಟಾದ, ನಯವಾದ; ದಟ್ಟವಾದ, ಸಾಂದ್ರ.
ಚಿಕ್ಕಾಸು ಪೈ, ಅರ್ಧಪೈ (ಮೊಬಲಗಿನ ನಾಣ್ಯ).
ಚಿಕ್ಕಿ (ಚಿಕ್ಕೆ) ಚುಕ್ಕೆ, ತಿಲಕ; ಪುಟ್ಟ ಗುರುತು.
ಚಿಗರಿ (ಚಿಗರೆ) ಎರಳೆಯ ಮರಿ, ಹರಿಣ.
ಚಿಗರು (ನೋಡು: ಚಿಗುರು).
ಚಿಗಳಿ ಎಳ್ಳು ಮತ್ತು ಬೆಲ್ಲ ಹಾಕಿ ಮಾಡುವ ಒಂದು ತಿಂಡಿ.
ಚಿಗಿ ಮೊಳೆ, ಚಿಗುರು; ಹಾರು, ನೆಗೆ.
— ಇಸು ಹಾರುವಂತೆ ಮಾಡು, ಮೊಳೆಯಿಸು.
ಚಿಗಿರ್ ಚುರುಕುತನ.
ಚಿಗಿಲ್ ಅಂಟಾಗಿರುವಿಕೆ.
ಚಿಗುರ್ (ಚಿಗುರು) ಮೊಳೆ, ಎಲೆಯೊಡೆ, ಸುಳಿಯೊಡೆ.
— ಒಡೆ ಮೊಳಕೆಬರು, ಸುಳಿಬಿಡು, ಎಲೆಬಿಡು.
ಚಿಚ್ಚುಕ್ಕು ಮನಸ್ಸೆಂಬ ಕಣ್ಣು.
ಚಿಚ್ಛಕ್ತಿ (ಚಿತ್ + ಶಕ್ತಿ) ಜ್ಞಾನಶಕ್ತಿ.
ಚಿಟಿಕಿ (ಚಿಟಕೆ) ಬೆರಳುಗಳನ್ನು ಸಿಡಿದು ಮಾಡುವ ಸದ್ದು; ಹಾಸಿಗೆಯ ನಡುವೆ ಹಾಕುವ ಪುಟ್ಟ ಹೊಲಿಗೆ.
— ಇಸು ನೂಕು, ಮುಂದೆ ತಳ್ಳು.
ಚಿಟಿಕೆ ಬೆರಳು ಸಿಡಿತ; ಎರಡು ಬೆರಳು ತುದಿಯಲ್ಲಿ ಹಿಡಿಯುವಷ್ಟು; ತಾಳಹಾಕುವ ಸಾಧನ; ಕಾಯಿಲೆ ಓಡಿಸಲು ಬರೆಯಿಡುವ ಒಂದು ಚಿಕಿತ್ಸೆ.
ಚಿಟಿಗ ಲಾಲ್ ಹಕ್ಕಿ, ಕೆಂಗುಬ್ಬಿ.
ಚಿಟಿಲ್ (ಚಿಟಲು) ಬೆಂಕಿ ಉರಿಯುವ ಸದ್ದು.
ಚಿಟ್ಟನೆ (ಚೀರುತ್ತ) ಕೀರಾಗಿ ಕೂಗುವಿಕೆ.
ಚಿಟ್ಟೆ ಒಂದು ಹುಲ್ಲು; ಮಣ್ಣಿನ ಬಟ್ಟಲು.
ಚಿಟ್ಟೆ ಚಿಕ್ಕ; ಕುಳ್ಳ; ಜಿಗುಪ್ಸೆ ತರುವ, ಬೇಸರ ಉಂಟುಮಾಡುವ.
ಚಿಟ್ಟೆ ಒಂದು ಹುಳು, ಪತಂಗ, ಪಾತರಗಿತ್ತಿ.
ಚಿಣಿ (ಚಿಕ್ಕ) ಸಣ್ಣ ಕೋಲು; ಒಂದು ಆಟ.
ಚಿಣಿಕೋಲು ಒಂದು ಬಗೆಯ ಆಟ, ಚಿಣಿಯಾಟ.
ಚಿಣ್ಣ ಸಣ್ಣ ಹುಡುಗ.
ಚಿತ್ ಜ್ಞಾನ; ಚೈತನ್ಯರೂಪವಾದ ಸಾಮರ್ಥ್ಯ.
ಚಿತ ಪರಿಶೀಲಿಸಿದ, ನೋಡಿದ.
ಚಿತಾನಲ ಚಿತಿಯ ಬೆಂಕಿ.
ಚಿತಿ (ಚಿತಾ) ಚಿತೆ, ಹೆಣ ಸುಡಲು ಮಾಡಿದ ಬೆಂಕಿ; ಗುಂಪು, ರಾಶಿಮಾಡುವಿಕೆ.
ಚಿತೆ (ಚಿತಿ).
ಚಿತ್ತ ಮನಸ್ಸು; ಬಗೆ; ಯೋಚನೆ; ಉದ್ದೇಶ, ಗುರಿ; ನೋಡಿದ, ಪರಿಶೀಲಿಸಿದ.
— ಉದ್ರೇಕ ಮನಸ್ಸು ಕೆರಳುವಿಕೆ.
— ಕೊಡು ಲಾಲಿಸು, ಮನಸ್ಸಿಟ್ಟು ಕೇಳು.
ಚಿತ್ತಜ ಮನ್ಮಥ, ಕಾಮ.
ಚಿತ್ತಜನ್ಮ ಮನ್ಮಥ, ಕಾಮ.
ಚಿತ್ತಭೇದ ಉದ್ದೇಶವಿರುದ್ಧ; ಸಮದೃಷ್ಟಿಯಿಲ್ಲದ.
ಚಿತ್ತಭ್ರಮೆ ಮನಸ್ಸಿನ ಭ್ರಾಂತಿ; ಮರುಳು; ಮನಸ್ಸು ಒಂದರಿಂದ ಒಂದಕ್ಕೆ ಅಲೆಯುವುದು.
ಚಿತ್ತಯಿಸು ಮನಸ್ಸುಕೊಡು, ಕೇಳು; ಬರು.
ಚಿತ್ತುರ (ದ್ಭ) ಚಿತ್ರ (ಸಂ), ತಸವೀರು.

ಚಿತ್ತವಿಭ್ರಮ ಮನಸ್ಸು ಮಂಕಾಗುವುದು.
ಚಿತ್ತವೃತ್ತಿ ಮನೋಧರ್ಮ; ಆಂತರಿಕ ದೃಷ್ಟಿ; ಯೋಚಿಸುವಿಕೆ; ರಾಗ.
ಚಿತ್ತಾರ (ದ್ಭ) ಚಿತ್ರ (ಸಂ).
— ಇಗ ಚಿತ್ರ ಬರೆಯುವವ.
ಚಿತ್ತಿನಿ ಸ್ತ್ರೀಯರಲ್ಲಿ ಒಂದು ವರ್ಗ. (ಪದ್ಮಿನಿ–ಚಿತ್ತಿನಿ–ಹಸ್ತಿನಿ–ಶಂಕಿನಿ ಎಂಬ ನಾಲ್ಕು ಶೀಲ ರೂಪಕ್ಕನುಗುಣ ವಿಭಾಗಗಳು.)
ಚಿತ್ತು ಡಜೆ, ಶಾಯಿ ಬಿದ್ದುದರ ಕಲೆ; ತಿದ್ದು ಪಡಿ.
ಚಿತ್ಪ್ರಕಾಶ ಚುರುಕಿನ ಬುದ್ಧಿಯುಳ್ಳವ; ಪ್ರತಿಭಾಶಾಲಿ.
ಚಿತ್ರ ಪಠ, ನಕ್ಷೆ; ತಿಲಕ; ತಸವೀರು; ಶುಭ; ರಮಣೀಯ, ವಿಚಿತ್ರ; ಆಶ್ಚರ್ಯಕರ.
— ಕ ಚಿತ್ರಕಾರ; ಚಿರತೆ, ಚಿರ್ಜು; ತಿಲಕ.
— ಕಾರ ತಸವೀರು ಬರೆಯುವವ.
ಚಿತ್ರಕಾಯ ಹುಲಿ; ಚಿರತೆ.
ಚಿತ್ರಕುಟಿ ಡೇರೆ, ಗೂಡಾರ.
ಚಿತ್ರಕೂಟ ಪ್ರಯಾಗದ ಬಳಿಯ ಒಂದು ಪರ್ವತ. ಇದು ಬುಂದೇಲಖಂಡದಲ್ಲಿದೆ; ಈಗಿನ ಚಿತ್ರಕೋಟ್.
ಚಿತ್ರಗುಪ್ತ ಯಮಲೋಕದಲ್ಲಿ ಜನರ ಪಾಪ ಪುಣ್ಯ ಬರೆದಿಡುವವ.
ಚಿತ್ರತರ ಸುಂದರ; ಅಲೌಕಿಕವಾದ.
ಚಿತ್ರಪಟ ಬಣ್ಣಬಣ್ಣದ ಬಟ್ಟೆ; ಚಿತ್ರ ಬರೆದ ವಸ್ತ್ರ; ನಕ್ಷೆ, ತಸವೀರು.
ಚಿತ್ರಪುಂಖ ಬಾಣ.
ಚಿತ್ರಭಾನು ಅಗ್ನಿ, ಬೆಂಕಿ; ಸೂರ್ಯ.
ಚಿತ್ರಮೂಲ ಒಂದು ಗಿಡ; ಒಂದು ಪರ್ವತ.
ಚಿತ್ರರಥ ಸೂರ್ಯ; ಗಂಧರ್ವರಲ್ಲೊಬ್ಬ; ಕಶ್ಯಪನ ಮಕ್ಕಳಲ್ಲಿ ಒಬ್ಬ.
ಚಿತ್ರಲೇಖೆ ಒಬ್ಬ ಅಪ್ಸರೆ, ಬಾಣಾಸುರನ ಮಗಳಾದ ಉಷೆಯ ಗೆಳತಿ.
ಚಿತ್ರವಧೆ ಶರೀರವನ್ನು ಚೂರುಚೂರಾಗಿ ಮಾಡಿಕೊಲ್ಲುವಿಕೆ.
ಚಿತ್ರವಿಚಿತ್ರ ವಿವಿಧ ರೂಪದ; ಚಮತ್ಕಾರಿಕ.
ಚಿತ್ರಶಿಖಂಡಿ ಏಳು ಮಂದಿ ಋಷಿಗಳು, ಸಪ್ತಋಷಿಗಳು; ಬಣ್ಣದ ಜುಟ್ಟರುವ.
ಚಿತ್ರಸೇನ ಒಬ್ಬ ಗಂಧರ್ವ.
ಚಿತ್ರಹಿಂಸೆ ಸ್ವಲ್ಪ ಸ್ವಲ್ಪವಾಗಿ ಮಾಡುವ ನೋವು.
ಚಿತ್ರಾನ್ನ ಪುಳಿಯೋಗರೆ, ಹುಳಿಯನ್ನ.
ಚಿತ್ರಾಯುಧ ಪಾಂಚಾಲದ ಒಬ್ಬ ವೀರ.
ಚಿತ್ರಾವಹ ವಿಸ್ಮಯಕರ.
ಚಿತ್ರಾಶ್ವ ಸಾವಿತ್ರಿಯ ಗಂಡ ಸತ್ಯವಾನ.
ಚಿತ್ರಾಂಗ ಜಿಂಕೆ.
ಚಿತ್ರಾಂಗದ ಶಂತನು ದೊರೆಗೆ ಸತ್ಯವತಿಯಲ್ಲಿ ಹುಟ್ಟದ ಮಗನು; ಒಬ್ಬ ಗಂಧರ್ವ.
ಚಿತ್ರಾಂಗದೆ ಮಣಿಪುರದ ಅರಸು ಮಲಯಧ್ವಜನ ಮಗಳು, ಅರ್ಜುನನ ಹೆಂಡತಿ.
ಚಿತ್ರಾಂಗಿ ಸ್ತ್ರೀ.
ಚಿತ್ರಿಕ (ಚಿತ್ರಕ).
ಚಿತ್ರೆ (ಚಿತ್ತೆ) ಒಂದು ನಕ್ಷತ್ರ ರಾಶಿ; ಒಂದು ಜಾತಿ ಸೌತೆಕಾಯಿ.
ಚಿದಕು ನೀರಲ್ಲಿ ನೆನೆಯಿಸಿದ ಕಾಳುಗಳನ್ನು ತಿಕ್ಕಿ ಅವುಗಳ ಸಿಪ್ಪೆ ಕಳಚು, ಕರ್ಚು.
ಚಿದಕ್ಷಿ (ನೋಡು: ಚಿಚ್ಚಕ್ಷು).
ಚಿದಂಬರ ಲೇಪರಹಿತವಾಗಿರುವ ಜ್ಞಾನ ಸ್ವರೂಪ, ಪರಮಾತ್ಮ; ಒಂದು ನಗರ.
ಚಿದಾನಂದ ಮನಸ್ಸಿನ ಆನಂದ.
— ಮೂರ್ತಿ ಶಿವ, ಪರಮಾತ್ಮ
ಚಿದ್ರೂಪ ಜ್ಞಾನವೆಂಬ ರೂಪುಳ್ಳುದು; ಆತ್ಮ; ಪರಮಾತ್ಮ, ಪರಮೇಶ್ವರ.
ಚಿನಗಡಿ ಸಣ್ಣದಾಗಿ ಕತ್ತರಿಸು.
ಚಿನಾಯಿ (ಚೀನಾಯಿ) ಚೀನಿ.
ಚಿನಿ ಒಂದು ಬಣ್ಣ.

ಚಿನಿವಾರ ಸೊನೆಗಾರ, ಚಿನ್ನದ ಕೆಲಸ ಮಾಡುವವ; ಚಿನ್ನಾಭರಣ ಮಾರುವವ.

ಚಿನುಕು ನೀರು ಚಿಮುಕಿಸು; ಕಾಳನ್ನು ಮೊಳಕೆ ಬರಿಸಿ ಅದಕ್ಕೆ ಉಪ್ಪುಕಾರ ಹಾಕಿ ಒಣಗಿಸುವುದು.

ಚಿನುಮಯ (ಚಿನ್ಮಯ) ಜ್ಞಾನಸ್ವರೂಪ.

ಚಿನ್ನ ಬಂಗಾರ, ಸುವರ್ಣ, ಕನಕ; ಸಣ್ಣ; ಗುರುತು, ಚಿಹ್ನ.

ಚಿನ್ನಿ ತೊಗರಿ ದೂಳು; ತೊಗರಿ ಕಡಿ.

ಚಿನ್ನಿಧಾನ ಮೇಧಾವಿತನ.

ಚಿನ್ನೆ(ಚಿನ್ಹೆ) ಗುರುತು, ಸಂಕೇತ; ಹೋಲುವೆ.

ಚಿನ್ಮಯ ಜ್ಞಾನ ಸ್ವರೂಪ.

ಚಿಪ್ಪ (ಧ್ಭ) ಶಿಲ್ಪ (ಸಂ) ವಿಗ್ರಹ ನಿರ್ಮಾಣ ವಿದ್ಯೆ.

ಚಿಪ್ಪಿಗ ಹೊಲಿಗೆಯವ; ದರ್ಜಿ.

ಚಿಪ್ಪು ಕರಟ, ಓಡು; ತೊಗಟೆ; ಪುಟ್ಟ.

ಚಿಬ್ಬಲ (ಸಿಬ್ಬಲು) ಬೀಳಲಿನ ಬುಟ್ಟ.

ಚಿಬ್ಬು (ಸಿಬ್ಬ) ಚರ್ಮದ ಮೇಲೆ ಕಾಣಿಸುವ ಒಂದು ಜಾತಿ ಕಲೆಗಳು, ಚರ್ಮ ರೋಗ.

ಚಿಮುಟಿ ಚಿವುಟ ಹಿಡಿಯ ಸಾಧನ, ಇಕ್ಕುಳ.

ಚಿಮಣಿ ಹೊಗೆ ಹೋಗುವ ನಳಿಗೆ; ದೀಪದ ಬರುಡೆ.

—ಎಣ್ಣೆ ಸೀಮೆ ಎಣ್ಣೆ, ಕಲ್ಲೆಣ್ಣೆ.

ಚಿಮುಕು ನೀರನ್ನು ಸಿಂಪಡಿಸು, ಹನಿಯಾಗಿ ಚೆಲ್ಲು.

ಚಿಮುಟು (ಚಿವುಟು) ಮಣ್ಣುಹಾರಿಸು; ಗಿಲ್ಲು; ಉಗುರಿಂದ ಚಿವುಟು.

ಚಿಮ್ಮು ಹಾರು, ಜಿಗಿ, ನೆಗೆ; ಸಿಡಿ; ಓಡು; ಬೀಸು, ಅಲ್ಲಾಡಿಸು.

ಚಿಮ್ಮುರಿ ಹೆಡಮುರಿ, ಕೈ ಹಿಂದಕ್ಕೆ ಬಿಗಿದುದು

ಚಿರ ಸ್ಥಿರ, ಬಹುಕಾಲ ಬಾಳುವ; ಲಾವಣ್ಯ ಶೀಲ; ಒಳ್ಳೆಯ.

ಚಿರಕ್ರಿಯ ಮೆಲ್ಲಗೆ ಮಾಡುವ, ವಿಲಂಬಿತ.

ಚಿರಜೀವಿ (ಚಿರಂಜೀವಿ) ಮರಣವಿಲ್ಲದ, ದೀರ್ಘಾಯು.

ಚಿರತೆ ಚಿರ್ಚು, ಚಿಟ್ಟೆಹುಲಿ.

ಚಿರಂತನ ಪುರಾತನವಾದ.

ಚಿರಂತೀ ತಂದೆಯ ಮನೆಯಲ್ಲೇ ವಾಸ ವಾಗಿರುವ ಯುವತಿ.

ಚಿರಾತ್ ದೀರ್ಘಕಾಲ.

ಚಿರಾತೀತ ಬಹಳ ಬಹಳ ಹಿಂದೆ, ಪುರಾತನ.

ಚಿರಾಯು ಬಹುಕಾಲ ಬದುಕುವವ, ಚಿರಂ ಜೀವಿ; ಕಾಗೆ; ಮಾರ್ಕಂಡೇಯ — ಅಶ್ವ ತ್ಥಾಮ — ಬಲಿ — ಹನುಮ — ವಿಭೀಷಣ — ಕೃಪ—ಪರಶುರಾಮ ಈ ಏಳು ಮಂದಿ.

ಚಿರಿಚು ನಗು.

ಚಿರೇಣ ಬಹುಕಾಲದ ತನಕ.

ಚಿರ್ಚು ಚಿರತೆ, ಚಿಟ್ಟೆಹುಲಿ.

ಚಿಲಕ ಅಗಳಿ, ಸರಪಣಿಯ ಅಗಳಿ; ಒಂದು ಮೂತ್ರರೋಗ.

ಚಿಲುಮೆ ನೀರಬುಗ್ಗೆ; ಹುಕ್ಕಾ; ಗುಡುಗುಡಿ.

ಚಿಲ್ಲ ಒಂದು ಜಾತಿಯ ಗಿಡುಗ; ಒಂದು ಜಾ ತಿಯ ಗಿಡ. ಅದರ ಬಿತ್ತದಿಂದ ನೀರು ಶುದ್ಧಿ ಮಾಡುತ್ತಾರೆ.

ಚಿಲ್ಲರೆ ಅಂಶ; ಚುಂಗಡಿ; ಕ್ಷುಲ್ಲ.

ಚಿಲ್ಲಾಣ ಕಠಾರಿ.

ಚಿಲ್ಲು ಚಿಕ್ಕದು; ಕದಿರು ಹಿಡಿಯುವ ಮರ ಇಲ್ಲವೆ ಚರ್ಮದ ಕಿವಿ; ಚರೆಮುದ್ದು.

ಚಿಲ್ಲೆ ವ್ಯರ್ಥ, ಪೊಳ್ಳು; ತುಂಟ; ನೀಚ ಸ್ತ್ರೀ.

ಚಿವುಟು (ಚಿವುಂಟು) ಉಗುರಿಂದ ಮುರಿ; ಕಣ್ಣು ಹಾರಿಸು.

ಚಿವುರು (ಚೀರು) ಉಗುರಿಂದ ಪರಚು.

ಚಿಹ್ನ ಗುರುತು, ಸಂಕೇತ.

ಚಿಳ್ಳು ಮರಿ.

ಚಿಂತನ ಯೋಚನೆ; ಮೃದುಗಮನ; ಕಡು ನೆನ ವರಿಕೆ, ಜ್ಞಾನಿಕೆ.

ಚಿಂತಾ(ಚಿಂತೆ) ಆತುರ; ದುಃಖದ ಯೋಚನೆ; ಜ್ಞಾನಿಕೆ, ಎಣಿಕೆ.
—ಅಗ್ನಿ ಚಿಂತೆ ಎಂಬ ಬೆಂಕಿ.
—ಆಕುಲ ಯೋಚನಾಗ್ರಸ್ತ; ದುಃಖಿತ.
—ಆಕ್ರಾಂತ ದುಃಖಪೀಡಿತ.
—ಇಸು ಯೋಚಿಸು, ಆತುರಿಸು, ಎಣ್ಣು.
ಚಿಂತಾಮಣಿ ಬಯಸಿದ್ದನ್ನು ಕೊಡುವ ರತ್ನ. ಸಮುದ್ರಮಥನ ಕಾಲದಲ್ಲಿ ಇದು ಸಿಕ್ಕಿತು; ಬ್ರಹ್ಮ; ಬುದ್ಧ.
ಚಿಂತಾಲು ತ್ರಾಸು, ತಕ್ಕಡಿ.
ಚಿಂತ್ಯ ಯೋಚಿಸಲು ಯೋಗ್ಯ, ಗಮನವಿಡಲು ತಕ್ಕುದಾದ.
ಚಿಂದಿ ಹರಕು ವಸ್ತ್ರ.
ಚಿಂಪಿ (ಸಿಂಪಿ) ಚಿಪ್ಪು.
ಚಿಂಪಿಗ (ಸಿಂಪಿಗ) ಹೊಲಿಗೆಯುವ.
ಚಿಂಪಾಂಜಿ ಒಂದು ಜಾತಿ ಬಾಲವಿಲ್ಲದ ಕಪಿ.
ಚೀಕು ಪುಟ್ಟ, ಚಿಕ್ಕ, ಮರದ ಚಿಕ್ಕ ಚೂರು.
ಚೀಕುರುವಾಯಿ ಹೆದ್ದುಂಬಿ, ಗುಗ್ಗುರು; ಎಕ್ಕಳೆ; ಬಾವಲಿ.
ಚೀಟಿ ಚಿಂಟ್ಸ್ ಬಟ್ಟೆ, ಮುದ್ರಿತ ವಸ್ತ್ರ; ಚಿಕ್ಕ ತಿಕೇಟು; ಸ್ಟಾಂಪು, ಠಸೆ.
ಚೀಟು ಚೀಟ; ಮುದ್ರಿತ ವಸ್ತ್ರ; ತಿಕೀಟು, ಸ್ಟಾಂಪು; ಚಿಕ್ಕ ಪತ್ರ; ಪಿಂಡಾರಿ ನಾಯಕ.
ಚೀಡೆ ಕಿಡು, ಸುರುಬು, ಮರದ ಕಿಡು.
ಚೀಣ (ಚೀನ).
ಚೀತಾ ರಾಜಪುತಾನದ ಒಂದು ಜಾತಿಯ ಚಿರತೆ, ಚೀಟಾ ಮೃಗ.
ಚೀತ್ಕಾರ ಕಿರಿಚಾಟ.
ಚೀನ ಒಂದು ದೇಶ; ಒಂದು ಜಾತಿಯ ಜಿಂಕೆ; ಒಂದು ಜಾತಿಯ ಬಟ್ಟೆ.
ಚೀನಾ ಚೀನಾ ದೇಶ, ಚೀನಿ ಸಕ್ಕರೆ.
ಚೀಪು ಹೀರು, ಊಜು; ಮೊಲೆಯುಣ್ಣು.
ಚೀರ್ (ಚೀರು) ಕಿರಿಚು, ಕೂಗು.
ಚೀರ ಸೀರೆ.
ಚೀರಘಟ್ಟ ಶಿಲ್ಪಿಶ್ರೇಷ್ಠ, ದೇವಶಿಲ್ಪಿ, ವಿಶ್ವಕರ್ಮ.
ಚೀರಣ (ಜೀರ್ಣ), ಚಿಕ್ಕ ಚಾಣ.
ಚೀರು ಕೂಗು, ಕಿರಿಚು; ಬೆವರು; ಚಳಿಗೆ ನಡುಗು; ಹೇನಿನ ಮೊಟ್ಟೆ.
ಚೀರ್ಣಿಕೆ ಕೆತ್ತನೆ ಕೆಲಸ, ಸೂಕ್ಷ್ಮ ಕೆತ್ತನೆ.
ಚೀಲ ಕಂತೆ, ಸಂಚಿ.
ಚೀಲಮುಂಡೆ ಕಣಕಾಲು.
ಚೀಲಾಯ ಕತ್ತಿ ಚೂರಿಗಳ ಸಣ್ಣ ಅಲಗು.
ಚೀಳ್ ಗೀಳ್, ಕಿರಿಚು, ಅರಚು.
ಚುಕ್ಕಾಣಿ (ಚುಕಾಣಿ), ದೋಣಿಯ ದಿಕ್ಕು ತಿರುಗಿಸುವ ಸಾಧನ.
ಚುಕ್ಕಿ (ದ್ಭ) ಚುಕ್ಕೆ; ನಕ್ಷತ್ರ; ತಾರೆ; ಚಿಕ್ಕೆ; ಶುಕ್ರ (ಸಂ); ಅಲ್ಪ, ನೀಚ; ಹುಳಿ.
ಚುಚ್ಚು (ಚುರ್ಚು) ಬೋಧಿಸು; ನಾಟಿಸು, ತಿವಿ; ತುರುಕು; ಮನಸ್ಸಿಗೆ ನೋವು ಹುಟ್ಟಿಸು.
ಚುಟುಕು ಕುಳ್ಳು; ಅಲ್ಪ ಸಮಯದಲ್ಲಾಗುವ, ಸಂಗ್ರಹವಾದ.
ಚುಟ್ಟೆ ಒಂದು ಜಾತಿಯ ಹೊಗೆಸೊಪ್ಪಿನ ದೊಡ್ಡ ಬೀಡಿ.
ಚುನಾವಣೆ ಆಯ್ಕೆ, ಆರಿಸುವಿಕೆ; ಮತದಾರರು ಪ್ರತಿನಿಧಿಯನ್ನು ಆರಿಸುವುದು.
ಚುನಾಯಿಸು ಆರಿಸು, ಆಯು.
ಚುನ್ನ ನಿಂದೆ, ಬೈಗಳು; ಖಂಡನೆ.
—ಆಡು (ಚುನ್ನವಾಡು) ನಿಂದಿಸು.
ಚುಬಕ ಗಡ್ಡ, ಗಲ್ಲ.
ಚುರಿ ಬಾವಿ.
ಚುರುಕು ಚಟುವಟಿಕೆ, ಸೂಕ್ಷ್ಮತೆ.
—ತನ ಚಟುವಟಿಕೆತನ.
ಚುರುಚಿ ನಾಯಿಸುಣಿಕೆ; ತುರುಚೆ ಗಿಡ, ತುರಿಸುವ ಗಿಡ.

ಚುರ್ಚುರ (ಚುಚ್ಚು) ತಿವಿ, ನಾಟಿಸು.
ಚುಲಕ ಸ್ಥಿರತೆ ಇಲ್ಲದ ಬುದ್ಧಿ; ಹಟವಿಲ್ಲದ ನಡೆ; ಉದ್ದೇಶವಿಲ್ಲದ ಕ್ರಿಯೆ; ಕೈಕುಡಿಕೆ.
ಚುಲ್ಲಿ ಒಲೆ.
ಚುಳಿಕೆ (ಚುಲಕೆ) ಕೈಕುಡಿಕೆ; ಅಂಗೈಯನ್ನು ಕುಣಿಮಾಡಿದುದು; ಎಲೆಯನ್ನು ಸೌಟನಂತೆ ಮಡಿಸಿದ್ದು; ಹತ್ತಿ ಬಡಿಯುವ ಗುದಿಗೆ.
ಚುಳ್ಳಿ ಚುಂಚು; ಕಿರಿದಾದ ಕೊಕ್ಕು; ತುಟಿಗಳನ್ನು ಚುಂಚಿನಂತೆ ನೀಡುವುದು.
ಚುಂಗಡಿ ಚಿಲ್ಲರೆ; ಕ್ಷುಲ್ಲಕ; ಬಡ್ಡಿ.
ಚುಂಗು ಬಟ್ಟೆಯ ಸೆರಗಿನ ತುದಿ; ಕುಸುಮ ಇಲ್ಲವೆ ನಾರಿನ ಕುಡಿ.
ಚುಂಚ (ಚುಂಚು) ಕೊಕ್ಕು.
ಚುಂದಿ ಸೊಂದೆ, ಕುಂಟಣಿ, ಹಾದರಕ್ಕೆ ನೆರವಾಗುವವಳು.
ಚುಂಬಕ ಉಕ್ಕನ್ನು ಸೆಳೆಯುವ ಸೂಜಿಕಲ್ಲು; ಅಯಸ್ಕಾಂತ; ನೀಚ, ಠಕ್ಕ; ಆಕರ್ಷಣ; ಮುದ್ದಿಡುವಿಕೆ.
ಚುಂಬನ ಮುದ್ದಿಡುವಿಕೆ, ಮುತ್ತು.
ಚುಂಬಿಸು ಮುತ್ತಿಡು.
ಚುಂಬು ತಾಗು.
ಚೂಚುಕ ಮೊಲೆಯ ಕುಡಿ, ಮೊಲೆ ತುದಿ.
ಚೂಟಿ (ಸೂಟಿ) ಗುರಿ, ಉದ್ದೇಶ; ಉಪಾಯ, ಸಾಧನ; ಚುರುಕು.
ಚೂಟುಗಾರ ಉಪಾಯವಂತ; ತಂತ್ರಗಾರ.
ಚೂಡ ಜುಟ್ಟು, ನವಿಲಿನ ಜುಟ್ಟು; ಮುಡಿ; ತೋಳಿನ ಅಲಂಕಾರ; ಅಲಂಕಾರ.
ಚೂಡಾಕರ್ಮ ಕ್ಷೌರದ ಒಂದು ವಿಧಿ.
ಚೂಡಾಮಣಿ ಜುಟ್ಟಿನಲ್ಲಿ ಧರಿಸುವ ಆಭರಣ.
ಚೂಡಾಲು ಸೂಡಿಗ, ಸುಡಿದುದು.
ಚೂಡೆ ಜುಟ್ಟು, ಶಿಖಿ; ಪಕ್ಷಿಗಳ ಜುಟ್ಟು; ಶಿಖರ.
ಚೂಣಿ (ಜೂಳಿ) ಸೈನ್ಯದ ಮುಂಭಾಗ; ಅಗ್ರ.
— ಕಾಳಗ ಪ್ರಾರಂಭದ ಕಾಳಗ; ಸೇನೆಯ ಮುಂಗಡೆಯಲ್ಲಾಗುವ ಕಾಳಗ.
ಚೂತ ಮಾವು.
ಚೂತಕ ಕಿರಿದಾದ ಬಾವಿ, ಸಣ್ಣ ಬಾವಿ.
ಚೂಪು ಮೊನೆ; ನೋಟ, ದೃಷ್ಟಿ; ಕಣ್ಣು.
ಚೂರಣ (ಚೂರ್ಣ).
ಚೂರಿ ಹರಿತವಾದ ಒಂದು ಆಯುಧ, ಕತ್ತಿ, ಚಾಕು.
ಚೂರು ಪುಡಿ, ಒಡಕು; ಸೂರು; ತುರಿಸು.
ಚೂರ್ಣ (ಚೂರಣ) ಸಣ್ಣ ಪುಡಿ; ಚಂದನದ ಪುಡಿ; ಸುಣ್ಣ.
ಚೂರ್ಣಿ ನೂರು ಕವಡೆಯಷ್ಟು; ವಾದಕ್ಕೆ ಮೀರಿದ.
ಚೂಲ್ (ಚೂಲು) ಗರ್ಭಕಾಲ, ಗರ್ಭಪಿಂಡ.
ಚೂಲ ಶಿಖರ; ತಲೆಯ ಮೇಲಿರುವ.
ಚೂಲಿಕೆ (ಚೂಳಿಕೆ).
ಚೂಳಯು ಬೈತಲೆ, ಮುತ್ತಿನ ಬೈತಲೆ.
ಚೂಳಿ (ನೋಡು: ಚೂಣಿ).
ಚೂಳಿಕೆ ಪರ್ವತ ಶಿಖರ; ಶಿಖಿ, ಕೊಟ್ಟು; ಅಗ್ರಭಾಗ.
ಚೆಕು ಪರಚು, ಉಗುರಿಂದ ಗಾಯಮಾಡು.
ಚೆಕ್ಕನೆ ಚಂಗನೆ, ಛಕ್ಕನೆ.
ಚೆಕ್ಕು ಚರ್ಕ, ಗಾಣ; ಚೀಟು ಬಟ್ಟೆ; ಹಣ ಪಡೆಯಲು ಕೊಡುವ ಅಧಿಕಾರ ಪತ್ರ.
ಚೆಚ್ಚರ ಬೇಗ; ಎಚ್ಚರಿಕೆ, ಜಾಗರೂಕತೆ.
ಚೆನ್ನಿ (ಚೆನ್ನೆ).
ಚೆನ್ನಿಗ ಚೆಲುವ.
ಚೆನ್ನು ಒಳಿತು; ಚೊಕ್ಕ; ಚೆಲುವು, ಲಾವಣ್ಯ.
ಚೆನ್ನೆ ಚೆಲುವೆ, ಸುಂದರಿ; ಹೊಂಗರಕನ ಬೀಜ; ಚನ್ನೆ ಬೀಜದಿಂದಾಡುವ ಮಕ್ಕಳ ಆಟ.
ಚೆನ್ನೊಪ್ಪಿ ಸುಂದರವಾಗಿ.
ಚೆಲುವು (ಚೆಲ್ವು) ಸೌಂದರ್ಯ, ಮನೋಹರ.
ಚೆಲುಂಗು ಕೈಯಿಂದ ಬಿಡು.

ಚೆಲ್ಲ (ಚಲ್ಲ) ವಿನೋದ, ಹಾಸ್ಯ; ವಿಲಾಸ.
ಚೆಲ್ಲಾಟ (ಚಲ್ಲಾಟ) ವಿನೋದದ ಆಟ.
ಚೆಲ್ಲಾಡು ಕೆದರು, ಹರಡು.
ಚೆಲ್ಲಿ ಮರದ ನಾರು.
ಚೆಲ್ಲು ಎರಚು; ರಕ್ತದಂತೆ ಸುರಿಸು; ಹಣದಂತೆ ವೆಚ್ಚಮಾಡು; ಬಿಸಾಡು; ಚೆದರಿಸು.
ಚೆಲ್ಲೆಗ್ಗಣ್ ವಿಲಾಸಯುಕ್ತ ಕಣ್ಣು; ವಿಸ್ತಾರವಾದ ಕಣ್ಣು.
ಚೆಲ್ವು (ಚೆಲುವು) ಚಂದ, ಸೊಗಸು.
—ಪಿಡಿ ಚೆಲುವಿನಿಂದ ಕೂಡು.
ಚೆಂಡಕ ಗುಳ್ಳೆನರಿ.
ಚೆಂಡು (ಚಂಡು) ತಾಮ್ರ; ತಾಮ್ರದ ಪಾತ್ರೆ; ತಂಬಿಗೆ.
ಚೆಂಬು (ನೋಡು: ಚಂಬು).
ಚೆಂಬೊನ್ನು ಕೆಂಪಾದ ಹೊನ್ನು, ತಾಮ್ರ.
ಚೆಂಬೋತ ಕಾಗೆಯ ಜಾತಿಯ ಒಂದು ಪಕ್ಷಿ.
ಚೇಕಿತಾನ ಭಾರತ ಯುದ್ಧದಲ್ಲಿ ಪಾಂಡವರಿಗೆ ನೆರವಾದ ಒಬ್ಬ ಅರಸು.
ಚೇಗು ತಿರುಳು; ನಡು; ಬಲ; ಸಾರ.
ಚೇಟ ಸೇವಕ, ದಾಸ; ಉಪನಾಯಕ.
—ಇ ಸೇವಕಿ, ದಾಸಿ, ಕುಂಟಣಿ.
—ಕ (ಚೇಟ) ಸೇವಕ, ದಾಸ.
ಚೇಡೆ ಇಂದ್ರಜಾಲ, ಮಾಟ, ಮಾಯಾವಿದ್ಯೆ.
ಚೇಣ (ಚಾಣ) ಕಲ್ಲು ಇಲ್ಲವೆ ಲೋಹ ಕಡಿಯುವ ಉಳಿ.
ಚೇತನ (ಚೇತನೆ) ಜೀವ, ಪರಮೇಶ್ವರ; ಪ್ರಾಣಿ; ಶಕ್ತಿ; ಪ್ರಜ್ಞೆ, ಅರಿವು.
ಚೇತನಾ ಬುದ್ಧಿ; ಜ್ಞಾನ.
ಚೇತರ (ಚೇತನ) ಪ್ರಜ್ಞೆ, ಎಚ್ಚರ; ಜ್ಞಾನ.
—ಇಸು ತಿಳಿವರಿ, ಪ್ರಜ್ಞೆಹೊಂದು; ಶಕ್ತಿ ಪಡೆ.
—ಕೊಳು ತಿಳಿವುಪಡೆ, ಎಚ್ಚರಹೊಂದು.
ಚೇತಸ್ಸು ಚೇತನ, ಚೈತನ್ಯ.

ಚೇದಿ ಈಗಿನ ಜಬ್ಬಲಪುರದ ಸುತ್ತಲಿನ ಪ್ರದೇಶ.
—ಪತಿ ಚೇದಿ ದೇಶದ ದೊರೆ, ಶಿಶುಪಾಲ.
ಚೇದು ಕಹಿಪೆ, ಕೈಪು, ಕಹಿ ರುಚಿ.
ಚೇರ ಕೇರಳ ದೇಶ, ಕೊಂಗ ದೇಶ.
ಚೇರಣಿಗ ಕೇರಳದವ, ಮಲೆಯಾಳಿ.
ಚೇರು ಅಂಡಕೋಶದ ಒಂದು ಬೇನೆ.
ಚೇಲ ಬಟ್ಟೆ; ಶಿಷ್ಯ; ನೀಚ, ಕನಿಷ್ಠ.
—ಅಂಚಲ ಬಟ್ಟೆಯ ಅಂಚು, ಸೆರಗು.
ಚೇಲಿ ಕೆಟ್ಟ ಸ್ತ್ರೀ.
ಚೇಲಿಕ ಚಿಪ್ಪಿಗ.
ಚೇಷ್ಟೆ ವಿನೋದ, ಪರಿಹಾಸ್ಯ, ವಿಲಾಸ.
—ಗಾರ ವಿಲಾಸಗಾರ, ವಿನೋದಗಾರ.
ಚೇಳು ಒಂದು ವಿಷ ಕೀಟ.
ಚೈತನ್ಯ ಶಕ್ತಿ; ಅರಿವು, ಪ್ರಜ್ಞೆ, ಜೀವ; ಬ್ರಹ್ಮ; ಮಾಯೆ.
—ಮಯ ಶಕ್ತಿಯುಕ್ತವಾದ; ಪ್ರಜ್ಞೆ, ಜ್ಞಾನ ಮೊದಲಾದುವುಗಳಿಂದ ತುಂಬಿದ.
ಚೈತ್ಯ ಬುದ್ಧ ಪ್ರಾರ್ಥನಾಲಯ; ವಿಹಾರ; ಶ್ಮಶಾನದಲ್ಲಿರುವ ಮರ; ಯಜ್ಞಮಾಡುವ ಸ್ಥಳ; ಬಿಂಬ.
—ಆಗಾರ ಬುದ್ಧ ದೇವಾಲಯ.
—ಆಲಯ ಚೈತ್ಯಾಗಾರ, ಚೈತ್ಯ; ಜಿನಗೃಹ, ಬಸದಿ.
ಚೈತ್ರ ಚಾಂದ್ರಮಾನ ತಿಂಗಳಲ್ಲಿ ಮೊದಲನೆಯದು; ವಸಂತ.
—ದೂತಿ ವಸಂತ ದೂತಿಕೆ.
—ಮಾಸ ಚಾಂದ್ರಮಾನ ತಿಂಗಳ ಮೊದಲ ತಿಂಗಳು.
—ಸಖ ಕಾಮ, ಮನ್ಮಥ.
ಚೈತ್ರಾನಿಲ ಚೈತ್ರಮಾಸದ ಗಾಳಿ.
ಚೈತ್ರಿ ಚೈತ್ರಮಾಸ.
ಚೈದ್ಯ ಚೇದಿ ದೇಶದವ; ಶಿಶುಪಾಲ.

ಚೈನಿ (ಚೀನಿ) ಚೀನಕ್ಕೆ ಸಂಬಂಧಿಸಿದ; ಸಂತೋಷ.
ಚೊಕ್ಕ ಮನೋಹರ; ಲಲಿತ; ಕೊಳಕಿಲ್ಲದ, ಶುಚಿಯಾದ.
ಚೊಕ್ಕಟ (ಚೊಕ್ಕಳ) ಶುಚಿಯಾದ, ಮನೋಹರವಾದ.
—ಇಕೆ ಮನೋಹರತೆ.
—ತನ ಬಿನ್ನಾಣ; ಚಮತ್ಕಾರ; ಚೊಕ್ಕಟವಾಗಿರುವಿಕೆ.
ಚೊಕ್ಕೆಯ ಜಟ್ಟಿಗಳ ಕೌಶಲ; ಉಪಾಯ; ಗಾಯ; ಪೆಟ್ಟು.
ಚೊಗಚಿ ಚಗಟೆ ಗಿಡ.
ಚೊಗರು (ಒಗರು) ಒಂದು ರೀತಿಯ ಸಗಡು ರುಚಿ, ಸವುಳು.
ಚೊಚ್ಚ ಚೊಚ್ಚಿಲು (ದ್ಭ) ಸ್ವಚ್ಛ (ಸಂ).
ಚೊಚ್ಚಲು ಮೊದಲನೆ ಹೆರುವಿಕೆ; ಮೊದಲು.
ಚೊಟ್ಟ ವಕ್ರ, ಕೊಂಕು.
—ಗೆ (ನೆ) ವಕ್ರವಾಗಿ, ಡೊಂಕಾಗಿ.
ಚೊಟ್ಟು (ತೊಟ್ಟು) ಡೊಂಕು.
ಚೊತ್ತಿ ಚೊಟ್ಟ, ಡೊಂಕು ಮೈಯ ಸ್ತ್ರೀ.
ಚೊರ ಮಕರ; ಹುಲಿಮೀನು.
ಚೊಲ್ಲೆಯ ತುರುಬಿನ ಕೊನೆ.
ಚೊಂಗ ಕೊಂಕ, ಡೊಂಕು ಶೀಲದವ.
ಚೊಂದ ಬಾಲವಿರುವ ಕಪ್ಪೆ.
ಚೊಂಚು ಕೊಂಕು.
ಚೋಕ್ಷ ಚೊಕ್ಕ, ಶುದ್ಧ, ಸ್ವಚ್ಛ; ಲಲಿತ, ಮನೋಹರ; ಹರಿತ, ಚುರುಕು.
ಚೋಚ (ತ್ವಚ) ತೊಗಟೆ, ಕೆತ್ತೆ; ತೊಗಲು.
ಚೋಜಿಗ (ಸೋಜಿಗ) ಆಶ್ಚರ್ಯ, ವಿಸ್ಮಯ.
ಚೋಟು ಮುಷ್ಟಿ, ಪಂಜ; ಮುಷ್ಟಿಮಾಡಿ ಹೆಬ್ಬೆಟ್ಟು ನೀಡಿದರೆ ಆಗುವ ಉದ್ದ.
ಚೋದನ ನಡಸುವಿಕೆ.
ಚೋದಿಸು ನಡಸು.
ಚೋದ್ಯ ಆಶ್ಚರ್ಯ, ಸೋಜಿಗ; ಪ್ರಶ್ನೆ ಹೊರಡಿಸುವ, ವಿಚಾರ ಕೆರಳುವ.
—ಕರ ಆಶ್ಚರ್ಯಕರವಾದ.
ಚೋಪದಾರ ಕಟ್ಟಿಗೆ ಕೋಲಿನವ.
ಚೋರ ಕಳ್ಳ, ತುಡುಗ, ಸುಲಿಗೆಯವ.
—ತ್ವ ಕಳ್ಳತನ, ತುಡುಗು; ದರೋಡೆ.
ಚೋರಿ ಕಳವು.
ಚೋಹ (ದ್ಭ) ಯೋಗ (ಸಂ), ವೇಷ, ಜೋಹ, ಸೋಗು; ಮುಖವಾಡ.
ಚೋಳ ದಕ್ಷಿಣದ ಒಂದು ದೇಶ; ಆ ದೇಶದ ಜನರು; ಚೋಳರು ಮಾಡಿದ್ದು.
ಚೋಳಿ ಚೋಳಕ್ಕೆ ಸಂಬಂಧಿಸಿದ.
ಚೌಕಟ್ಟು ನಾಲ್ಕು ಕಡೆಯಿಂದ ಬಿಗಿದ.
ಚೌಕಶುದ್ಧ ಶುದ್ಧವಾದ ಆಯವುಳ್ಳ.
ಚೌಕಸಿ ಕಸವಿಸಿ; ಕೊಸರುವುದು.
ಚೌಕಳಿ ಚೌಕವಾಗಿ ಗೆರೆಗಳು ಬರುವ ಬಟ್ಟೆ.
ಚೌಕಂಡ ಮನೆಯ ತೊಟ್ಟ, ಕೋಣೆ.
ಚೌಕಾದಾಯ ಪಗಡೆಯಾಟದ ಒಂದು ರೀತಿ.
ಚೌಕಿ ಚೌಕವಾದ ಪಡಸಾಲೆ, ನಾಲ್ಕು ಚಾವಡಿಗಳುಳ್ಳ ಪಡಸಾಲೆ; ಮಣೆ.
ಚೌಕಿದಾರ ಕಾವಲಿನವ; ಚೌಕದ ಪಹರಿ.
ಚೌಕುಳ (ಚೌಕುಲ).
ಚೌಡ ಚೌಲ, ಚವುಲ.
ಚೌತಿ (ಚವುತಿ) ಪಕ್ಷದ ನಾಲ್ಕನೆಯ ದಿನ.
ಚೌಥಾಯಿ ನಾಲ್ಕನೆ ಒಂದು ಭಾಗ; ಮರಾಟ ಅರಸರು ಜನರಿಂದ ಎತ್ತುತ್ತಿದ್ದ ಕರ.
ಚೌಪಟ ಚತುಷ್ಪಟ (ಸಂ).
—ಮಲ್ಲ ನಾಲ್ಕು ಕಡೆಗೂ ಕಾದಾಡಬಲ್ಲ ವೀರ.
ಚೌಪದಿ ಒಂದು ಪದ್ಯ ರೀತಿ, ಚತುಷ್ಪದಿ.
ಚೌಪಳಿಗೆ ಹಜಾರ.
ಚೌಪಾಳಿಗೆ ಚೌಕವಾದ ಮಂಟಪ, ದೊಡ್ಡ ಮನೆ.

ಚೌದಂತ ನಾಲ್ಕು ದಾಡೆ ಉಳ್ಳುದು, ಐರಾವತ.
ಚೌರ ಕಳ್ಳ, ಕ್ಷೌರ.
ಚೌರಸ ಚತುರಶ್ರ, ನಾಲ್ಕು ಮೂಲೆಯುಳ್ಳ ಆಕೃತಿ; ನಾಲ್ಕು ದಿಕ್ಕು.
ಚೌರಾಶೀತಿ ಚತುರ ಶೀತಿ, ಎಂಭತ್ತನಾಲ್ಕು.
ಚೌರ್ಯ ಚೋರತನ, ಕಳ್ಳತನ, ಕಳವು.
ಚೌಲ (ಚವಲ) ಎರಡಾಣೆ ನಾಣ್ಯ, ಮಕ್ಕಳ ಕೂದಲು ಬಿಡಿಸುವ ಕರ್ಮ.
ಚೌವೀಸ ಇಪ್ಪತ್ತನಾಲ್ಕು.
ಚೌಳಿ ಒಂದು ತರಕಾರಿ; ಕೆಂಪಿರುವೆ.
ಚ್ಯವನ ಚಲಿಸುವ; ಮುಳುಗುವ, ಬೀಳುವ; ಪ್ರಾಚೀನ ಯುಗದ ಒಬ್ಬ ಋಷಿ. ಇವನ ಪತ್ನಿ ಸುಕನ್ಯೆ. ಈತನು ವೃದ್ಧಾಪ್ಯದಿಂದ ತೀರ ಮುದುಡಿಹೋದನೆಂದೂ ಅಶ್ವಿನಿ ದೇವತೆಗಳ ಚಿಕಿತ್ಸೆಯಿಂದ ಅವನ ಶರೀರವು ತಿರುಗಿ ತಾರುಣ್ಯವನ್ನು ತಾಳಿತೆಂದೂ ಋಗ್ವೇದದಲ್ಲಿ ಕಥೆಯಿದೆ.
ಚ್ಯುತ ನಾಶಗೊಂಡ, ಕಳೆದ; ಪದಭ್ರಷ್ಟತೆ.
—ಅಕ್ಷರ ಬಿಟ್ಟ ಪದ.
ಚ್ಯುತಿ ನಾಶ; ಜಾರುವಿಕೆ, ಪತನ; ಪದಭ್ರಷ್ಟತೆ.

## ಛ

ಛಗ ತ್ಸಗ (ಸಂ) ಹೋತ, ಗಂಡು ಆಡು.
—ಲಕ ಹೋತ.
ಛಟಾ ಪ್ರಕಾಶ.
ಛಟಿಸು ಛಟಛಟ ಶಬ್ದವಾಗು.
ಛಡಾಳಿಸು ಪ್ರಜ್ವಲಿಸು; ರಭಸವಾಗು, ಜೋರಾಗು, ರೇಗು.
ಛತ್ತೀಸು ಮೂವತ್ತಾರು.
ಛತ್ರ ಆಳುಬೆ, ನಾಯಿಕೊಡೆ; ಸತ್ತಿಗೆ, ಕೊಡೆ.
—ಕ ಪತಾಕೆ, ಸತ್ತಿಗೆ, ಕೊಡೆ.
—ಪತಿ ಅರಸು; ಮಹಾರಾಷ್ಟ್ರ ಅರಸರುಗಳ ಬಿರುದು.
ಛತ್ರಭಂಗ ಅರಸನ ಕೊಡೆಯನ್ನು ಮುರಿಯುವುದು, ಅರಸನ ಅಪಮಾನ; ರಾಜನ ನಾಶ; ವೈಧವ್ಯ; ಪರಾಧೀನತೆ.
ಛದ (ಛದನ) ಹೊದ್ದಿಕೆ; ರೆಕ್ಕೆ; ಪತ್ರ, ಎಲೆ.
ಛದಿ ಮಾಡು, ಮನೆಯ ಮಾಡು.
ಛದ್ಮ ಮಾಡು; ಸೋಗು, ಕಪಟ.
ಛರ್ದಿ ಸರದಿ; ವಾಂತಿ; ಅಸ್ವಸ್ಥ.
ಛಲ(ಚಲ) ಕಪಟ, ನೆಪ; ಸೋಗು; ಉಪಾಯ, ಹಂಚಿಕೆ.
ಛಲಗಿಲ ಶೌರ್ಯ, ಪರಾಕ್ರಮ.
ಛಲವಾದಿ ಹಟಗಾರ, ಹಟವಾದಿ.
ಛವಿ ಕಾಂತಿ; ಬಣ್ಣ.
ಛಂದಸ್ಸು ವೇದ; ಮನಬಂದಂತೆ; ಪದ್ಯರಚನೆಯ ಶಾಸ್ತ್ರ; ಪದ್ಯ; ವೃತ್ತ.
ಛಾಗ ಆಡು; ಆಡಿನ ಹಾಲು; ಆಡಿನ ಮಾಂಸ.
ಛಾಗವಾದನ ಆಡೇ ಆಹಾರವಾದವ, ಅಗ್ನಿ.
ಛಾದನ ಹೊದ್ದಿಕೆ; ಮುಚ್ಚಳ.
ಛಾನಸ ಛಾಂದನ (ಸಂ), ವಿಳಂಬ, ಆಲಸ್ಯ.
ಛಾಯಾ (ಛಾಯೆ) ನೆರಳು; ಕಾಂತಿ; ಪ್ರತಿಬಿಂಬ; ಸೂರ್ಯನ ಹೆಂಡತಿ.
—ಗ್ರಹಣ ನೆರಳನ್ನು ಆಕರ್ಷಿಸುವುದು.
—ತನಯ ಶನಿ.
ಛಾಯಾಗ್ರಾಹಿ ನೆರಳನ್ನು ಹಿಡಿಯಬಲ್ಲವಳು, ಒಬ್ಬ ರಾಕ್ಷಸಿ.
ಛಾಯಾಯಂತ್ರ ನೆರಳಿಂದ ಕಾಲವನ್ನು ಅಳೆಯುವ ಒಂದು ಸಾಧನ.
ಛಾಯೆ ನೆರಳು; ಮರೆ; ಬಿಂಬ; ಕಾಂತಿ; ಶನಿಯ ತಾಯಿ; ಸೂರ್ಯನ ಹೆಂಡತಿ.
—ಕಾಣಿಸು ಸೂಚಿಸು; ಮೊದಲಿಗೆ ತಿಳಿ.

ಛಿದ್ರ ರಂಧ್ರ, ತೂತು; (ಜ್ಯೋತಿಷದಲ್ಲಿ) ಲಗ್ನಕ್ಕೆ ಎಂಟನೆಯ ಸ್ಥಾನ; ಶತ್ರುಭೇದನ ವಿದ್ಯೆ.
—ಅನ್ವೇಷಿ ಪರರ ಕೊರತೆಹುಡುಕುವವ.
ಛಿದ್ರಿತ ಚೂರಾದ; ತೂತಾದ.
ಛಿನರುಹ ಕತ್ತರಿಸಿದರೂ ಮೊಳೆಯುವ.
ಛಿನ್ನ ಒಡಕು; ಚೂರು.
ಛೇಕ ಮನೆಯಲ್ಲಿ ಆಸಕ್ತವಾಗಿರುವ ಪಕ್ಷಿ ಮೃಗಗಳು; ಬುದ್ಧಿವಂತ, ಪಂಡಿತ.
—ಅನುಪ್ರಾಸ ಪಂಡಿತರಿಗೆ ಪ್ರಿಯವಾದ ಒಂದು ಅಲಂಕಾರ; ಮೇಲಿಂದ ಮೇಲೆ ಕ್ರಮದಲ್ಲಿ ಬರುವ.
ಛೇಕೋಕ್ತಿ ಚತುರ ಸ್ತ್ರೀಯ ಮಾತು; ಡೊಂಕು ಮಾತು.
ಛೇದ ಭಾಗ; ಸೀಳಲ್ಪಟ್ಟ ಅಂಶ; ಕತ್ತರಿಸುವಿಕೆ, ವಿಭಾಗಿಸುವಿಕೆ.
—ನ ಒಡೆಯುವಿಕೆ, ಸೀಳುವಿಕೆ.
ಛೇದಿಸು ಕತ್ತರಿಸು, ತುಂಡುಮಾಡು.
ಛೇದ್ಯ ಒಡೆಯಬಹುದಾದ್ದು.

## ಜ

ಜಕಣಿ (ದ್ಭ) ಯಕ್ಷಿಣಿ (ಸಂ), ಸ್ತ್ರೀಯರಿಗೆ ಮೈಮೇಲೆ ಬರುವ ದೆವ್ವ.
ಜಕಾತಿ ಸುಂಕ, ಕರ.
—ಕಟ್ಟೆ ಉಕ್ಕಡ, ಸುಂಕದ ಕಟ್ಟೆ.
ಜಕೇರೆ ಉಗ್ರಾಣ; ಹಳೆ ದಾಸ್ತಾನು.
ಜಕ್ಕ (ದ್ಭ) ಯಕ್ಷ (ಸಂ), ದೇವಗಳ ಒಂದು ಪಂಗಡ.
ಜಕ್ಕಣ ಜಕ್ಕಣಾಚಾರಿ; ಪೌರಾಣಿಕ ಶಿಲ್ಪಿ.
ಜಕ್ಕಣಿ (ಜಕಣಿ), ಯಕ್ಷಿಣಿ (ಸಂ).
ಜಕ್ಕವಕ್ಕಿ ಎಣೆವಕ್ಕಿ, ಗೆಡೆವಕ್ಕಿ, ಚಕ್ರವಾಕ; ಒಂದು ವಿಧದ ಹಂಸ, ರಥಾಂಗ.
ಜಕ್ಕಿ (ದ್ಭ) ಯಕ್ಷಿ (ಸಂ).
ಜಕ್ಕಿಸು (ಜಗ್ಗಿಸು) ಬಾಗಿಸು; ಹೇಯ ನಡಿಗೆ.
ಜಕ್ಕುಲಿಸು ವ್ಯಾಪಿಸು; ಸಂತೋಷ ಪಡು; ಆಟವಾಡು; ಹಾಸ್ಯಮಾಡು; ಅಣಕಿಸು; ಕಟ್ಟಾಡಿಸು.
ಜಗ ಜಗತ್ತು, ಲೋಕ; ವಿಶಾಲ; ಹೊಳೆತ.
ಜಗಚ್ಚಕ್ಷುಸ್ (ಚಕ್ಷು=ಕಣ್ಣು) ಲೋಕಕ್ಕೆ ಕಣ್ಣಾದವ, ಸೂರ್ಯ.
ಜಗಜಗಿಸು ಹೊಳೆ, ಪ್ರಕಾಶಿಸು.
ಜಗಜ್ಜನ ಜನತೆ, ಮನುಷ್ಯ ಕುಟುಂಬ.
—ಇತ ಎಲ್ಲರಿಗೂ ತಿಳಿದ.
ಜಗಜ್ಜನನಿ ಲೋಕಮಾತೆ; ಗಂಗೆ.
ಜಗಣ (ಛಂದಸ್ಸಿನಲ್ಲಿ) ಮಧ್ಯ ಗುರುವಿರುವ ಮೂರು ಅಕ್ಷರಗಳ ಗುಂಪು.
ಜಗತಿ ಭೂಮಿ; ಜಗಲಿ.
ಜಗತೀವಲಯ ಭೂಮಂಡಲ.
ಜಗತ್ರಯ ಮೂರುಲೋಕ, ಭೂಮಿ-ಸ್ವರ್ಗ-ಪಾತಾಳ ಎಂಬ ಮೂರು ಲೋಕಗಳು.
ಜಗತ್ಪ್ರಾಣ ಲೋಕಕ್ಕೆ ಪ್ರಾಣವಾದವನು, ವಾಯು.
ಜಗದಂಡ ಭೂಮಿಯೆಂಬ ತತ್ತಿ, ಬ್ರಹ್ಮಾಂಡ.
ಜಗದಂಬೆ ಮಹಾಮಾಯೆ, ಕಾಳಿ; ಗಂಗೆ.
ಜಗದೀಶ ಜಗದೊಡೆಯ, ದೇವರು, ಈಶ್ವರ.
ಜಗದುದರ ಜಗತ್ತನ್ನು ರಕ್ಷಿಸುವವ, ವಿಷ್ಣು.
ಜಗದ್ಧಾತ್ರೀ ತಾಯಿ, ದುರ್ಗಾದೇವಿ.
ಜಗನ್ಮೋಹನ ಅತಿಮೋಹಕ, ಅತಿಸುಂದರ.
ಜಗಪಾರು ವೇಶ್ಯೆ, ಸೂಳೆ; ವ್ಯಭಿಚಾರಿಣಿ.
ಜಗರ (ಜಗಲ), ಮೋಸ; ಲೋಹಕವಚ.
ಜಗಲ ಕಪಟ; ಸಗಣಿ; ಲೋಹಕವಚ.
ಜಗಲಿ ವೇದಿಕೆ, ಕಿರಿಯ ಚಾವಡಿ; ಕಟ್ಟೆ, ಪೀಠ; ಪಡಸಾಲೆ.
ಜಗವರ್ತಿ ದಳ್ಳುರಿ, ದೊಡ್ಡ ಉರಿ; ಜಗತ್ ಸಂಚಾಲಕ.

ಜಗಳ ಕಾಳಗ, ಹೊಡೆದಾಟ; ವಾದವಿವಾದ.
—ಗಂಟ ಕಾಳಗಪ್ರಿಯ; ಜಗಳ ತಂದಿಕ್ಕು ವವ, ನ್ಯಾಯಗಂಟ.
—ಗಾತಿ ಬಡಿದಾಡುವವಳು.
—ಗಾರ ಹೊಡೆದಾಡುವವನು.
ಜಗುನೆ (ದ್ಭ) ಯಮುನಾ(ಸಂ), ಒಂದು ನದಿ.
ಜಗುಲಿ (ಜಗಲಿ).
ಜಗುಳ್ (ಜಗುಳು) ಜಾರು; ಬೀಳು; ಕಳಚು.
ಜಗ್ಗನೆ ಪಕ್ಕನೆ; ಕಾಂತಿಯಿಂದ.
ಜಗ್ಗು ಬಾಗು; ಕುಸಿ; ಎಳೆ.
ಜಗ್ಧಿ ಊಟ, ಸಹಭೋಜನ.
ಜಘನ (ಜಗನ), ಸ್ತ್ರೀಯರ ನಡು; ಹೊಟ್ಟೆಯ ಕೆಳಗು.
ಜಘನ್ಯ ನೀಚ; ಅಹಂಕಾರಿ; ಶೂದ್ರ; ಉಪಸ್ಥ; ಲಿಂಗ; ಹಿಂದಿನ.
—ಜ ನೀಚಕುಲದಲ್ಲಿ ಹುಟ್ಟಿದವ, ಶೂದ್ರ; ಕನಿಷ್ಠ.
ಜಜ ಯೋಧ.
ಜಜ್ಝರಿತ ಶಿಥಿಲ; ಬಲಹೀನ, ಶಿಥಿಲವಾದ; ಒಡೆದ, ಚೂರಾದ.
ಜಜ್ವಾರ ವೀರ, ಧೈರ್ಯಶಾಲಿ; ಪ್ರಬಲ ಯುದ್ಧ
ಜಜ್ಜು ಪುಡಿಮಾಡು, ನಜ್ಜುಗುಜ್ಜು ಮಾಡು.
ಜಟೆ (ಜಡೆ), ಜಠೆ.
ಜಟಕರಿಸು ಕೊಡಹು; ಕಳಚು; ತಿರಸ್ಕರಿಸು.
ಜಟಕಾ ಕುದುರೆ ಬಂಡಿ.
ಜಟಕಾಯಿಸು (ಜಟಕರಿಸು).
ಜಟಾ (ಸಂ) ಜಟೆ, ಜಡೆ, ಸಿಕ್ಕುಬಿದ್ದ ಕೂದಲು, ಕಗ್ಗಂಟಾದ ಕೂದಲು; ಸಿಂಹ ಮೊದಲಾದುವುಗಳ ಕೇಸರ.
—ಜೂಟ ಜಡೆಗಳ ಕಟ್ಟು, ಜಡೆಮುಡಿ.
—ಬಂಧ ಕಟ್ಟಿದ ಜಡೆ.
ಜಟಾಯುಃ ಅರುಣನ ಮಗನಾದ ಪಕ್ಷಿರಾಜ. ಇವನ ತಂದೆ ಸಂಪಾತಿ. ರಾವಣನು ಸೀತೆಯನ್ನು ಒಯ್ಯುವಾಗ ಅವನನ್ನು ಮೊದಲಿಗೆ ಇದಿರಿಸಿದವನು ಇವನು.
ಜಟಾಲ ಆಲದ ಮರ, ಜಡೆಯುಳ್ಳವ; ವ್ರತಿ.
ಜಟಿ ಜೋತಾಡುವ ಬೇರುಳ್ಳ, ಜಡೆಯುಳ್ಳ.
ಜಟಿಲ ವ್ಯಾಪ್ತವಾದ; ಕಷ್ಟತರ; ಜಡೆಯುಳ್ಳುದು; ಬ್ರಹ್ಮಚಾರಿ; ಬಜೆ.
ಜಟ್ಟಿ ಮಲ್ಲಯುದ್ಧ ಮಾಡುವವ; ವೀರ; ಪೈಲವಾನ, ಕುಸ್ತಿ ಆಡುವವ.
—ಗ ಪೈಲವಾನ, ಜಟ್ಟಿಕಾಳಗದವ.
ಜಠರ ಗಟ್ಟಿ, ಕಠಿಣ; ಹಳೆಯ; ಹೊಟ್ಟೆ.
—ಅಗ್ನಿ ಪಚನರಸ; ಹಸಿವಿನ ಶಕ್ತಿ.
ಜಡ (ಜಲ) ಹಿಮ; ನೀರು; ಮಂದ, ಮೂಢ; ಜ್ವರ, ಜೇನೆ; ಯಜ್ಞ.
—ಜ (ಜಲಜ) ಕಮಲ; ಯಜ್ಞ; ವಸ್ತು.
—ತೆ (ಜಡತ್ವ), ಮೊಂಡುತನ, ಬೊಡ್ಡತನ.
ಜಡಜಂತು ಮೂಗ ಪ್ರಾಣಿ, ಮೂಢಪ್ರಾಣಿ.
ಜಡಜಾರಿ ಚಂದ್ರ.
ಜಡತ (ಜಡಿತ) ಬಡಿತ, ಪೆಟ್ಟು; ಗುದ್ದು.
ಜಡತಿ ಶೋಧನೆ, ತಪಾಸಣೆ, ತನಖಿ.
ಜಡಧಾರೆ (ಜಲಧಾರೆ).
ಜಡಪು ಕಾಂತಿ, ಹೊಳಪು; ಗದರಿಕೆ, ಗರ್ಜನೆ.
ಜಡಿ (ಜಡೆ) ಗದರಿಸು, ಗರ್ಜಿಸು; ಮೇಘ, ಮೋಡ; ಬಿಡದೆ ಸುರಿಯುವ ಮಳೆ; ಹೊಡೆ, ಬಡಿ; ತಗ್ಗು; ಕುಗ್ಗು; ಒತ್ತಾಗಿ ತುಂಬು, ತುರುಕು.
—ತ ಹೊಡೆತ; ಬಡಿತ.
ಜಡಿತಿ (ದ್ಭ) ಝಟಿತಿ (ಸಂ), ಅವಸರ, ಬೇಗ, ತ್ವರೆ; ಜಡಿತೆ; ತನಖಿ.
ಜಡಿಪ ಕೋಗಿಲೆ ಕೂಗು; ಹಕ್ಕಿಗಳ ಉಲಿ.
ಜಡುಪು ಗಿಳಿಗಳ ಕೂಗು; ದ್ವಾರಪಾಲಕರ ಗದರಿಸುವಿಕೆ; ಗಾಳಿಪಟದ ಬಾಲ; ಬಾಲ್ಗಾಗಸ.
ಜಡೆ (ನೋಡು: ಜಟಾ).

ಜಡ್ಡ ಸೇರಿಕೆ, ಸಾಮಾನ್ಯ.
ಜಡ್ಡು (ಜಿಡ್ಡು) ಕಲೆ; ಎಣ್ಣೆ ಮಡ್ಡು, ಎಣ್ಣೆ ಜಿಗಟು; ದಡಿಕೆ; ಬಾಸಾಳು; ಚರ್ಮ ಒರಟುಕಟ್ಟುವುದು; ಸಗಡು ರುಚಿ; ಜಡತೆ; ಕಾಯಿಲೆ; ಒತ್ತಾಗಿ ಬೆಳೆದ ಹುಲ್ಲುಳ್ಳ ನೆಲ.
ಜತನ (ದ್ಭ) ಯತ್ನ (ಸಂ), ಪ್ರಯತ್ನ; ಎಚ್ಚರಿಕೆ, ಜಾಗ್ರತೆ.
ಜತಿ (ದ್ಭ) ಯತಿ (ಸಂ).
ಜತು ಅರಗು, ಲಾಕ್ಷೆ.
—ಕ ಅರಗಿನ.
ಜತೆ ಸ್ನೇಹ, ಕೆಳೆ, ಎಣೆ; ಸಂಭೋಗ.
—ಗಾತಿ ಗೆಳತಿ, ಕೆಳದಿ.
—ಗಾರ ಗೆಳೆಯ, ಗೆಣೆಗಾರ.
ಜತ್ನ (ದ್ಭ) ಯತ್ನ (ಸಂ).
ಜತ್ರುಕ ಮೋಸ, ವಂಚನೆ; ಹಿಂಸಕ; ಮೋಸಗಾರ, ಕಪಟ.
ಜತ್ತು ಜೊತೆಗಾರಿಕೆ; ಕೂಡಿಕೆ.
ಜತ್ತುಳ ನೊರೆ, ಬುರುಗು.
ಜತ್ರು ಹೆಗಲಿನ ಎಲುಬು.
ಜನ ಮನುಷ್ಯ; ಮನುಷ್ಯ ಸಮುದಾಯ, ಮಂದಿ; ವ್ಯಕ್ತಿ.
—ಜನಿತ ಜನತೆಗೆಲ್ಲ ತಿಳಿದ, ಎಲ್ಲರಿಗೂ ತಿಳಿದ, ಪ್ರಚಾರಗೊಂಡ.
—ತೆ (ಜನ) ಸಮುದಾಯ; ಮನುಷ್ಯಕುಲ.
—ಪ ಜನರನ್ನು ಪಾಲಿಸುವವ, ಅರಸು.
—ಪದ ಜನರುಳ್ಳುದು, ದೇಶ; ಜನಸಮೂಹದ; ಜಾನಪದ.
ಜನಕ ತಂದೆ; ವಿದೇಹರಾಜ, ಸೀತೆಯ ತಂದೆ.
—ಜೆ ಜನಕನ ಮಗಳು, ಸೀತೆ, ಜಾನಕಿ.
ಜನನ ಹುಟ್ಟು, ಉತ್ಪನ್ನ; ವಂಶ, ಕುಲ; ಹುಟ್ಟುವಿಕೆ.
—ಪತ್ರಿಕೆ ಜಾತಕ, ಹುಟ್ಟಿದ ಗಳಿಗೆ ಬರೆದಿಡುವ ಕಾಗದ.
ಜನನಿ ತಾಯಿ, ಅವ್ವ.
ಜನಮೇಜಯ ಅರ್ಜುನನ ಮೊಮ್ಮಗ; ಪರೀಕ್ಷಿತನ ಮಗ. ತಂದೆಯಾದ ಪರೀಕ್ಷಿತನು ಸರ್ಪದಂಶದಿಂದ ಸತ್ತುದರಿಂದ ಈತನು ಸರ್ಪಕುಲವನ್ನು ನಾಶಮಾಡಲು ಯಾಗ ಮಾಡಿದನು. ಈತನಿಗೇನೆ ಭಾರತದ ಕಥೆಯನ್ನು ವ್ಯಾಸನು ಹೇಳಿದುದು.
ಜನವಾದ ಸುದ್ದಿ, ವರದಿ, ವರ್ತಮಾನ.
ಜನಸ್ಥಾನ ರಾಕ್ಷಸ ಜನರ ನಿವಾಸವಾದ ಕಾಡು; ಈಗಿನ ಔರಂಗಾಬಾದ್ ಪ್ರದೇಶ, ದಂಡಕಾರಣ್ಯದ ಒಂದು ಭಾಗ.
ಜನಾನ ಅಂತಃಪುರ, ರಾಣೀವಾಸ.
ಜನಾನಿ ಅಂತಃಪುರಕ್ಕೆ ಸಂಬಂಧಿಸಿದುದು; ಸ್ತ್ರೀಯರಿಗೆ ಯೋಗ್ಯವಾದ.
ಜನಾರ್ದನ ವಿಷ್ಣು, ಕೃಷ್ಣ.
ಜನಾಂತಿಕ ಜನರಿಗೆ ತಿಳಿಯದಂತೆ ಹೊರಡುವ; ಹೇಳುವ; ಗುಪ್ತ.
ಜನಿ ಹುಟ್ಟು; ಸ್ತ್ರೀ; ತಾಯಿ; ಸೊಸೆ; ಹೆಂಡತಿ.
ಜನುಮ (ಜನ್ಮ), ಹುಟ್ಟು.
ಜನೆ ತೆನೆ; ತತ್ತಿಯ ಲೋಳೆ; ಸೊನೆ; ತತ್ತಿ.
ಜನೇಶ ಅರಸು.
ಜನ್ನ (ದ್ಭ) ಯಜ್ಞ (ಸಂ), ಯಾಗ; ಒಬ್ಬ ಕನ್ನಡ ಕವಿ.
—ದಾರ ಯಜ್ಞಸೂತ್ರ, ಜನಿವಾರ.
ಜನ್ನಾವಿರ (ಜನ್ನಿವಾರ) ಜನಿವಾರ, ಯಜ್ಞೋಪವೀತ.
ಜನ್ನಿಗ ಜನ್ನನೆಂಬ ಕನ್ನಡಕವಿ. ಇವನು ಯಶೋಧರ ಚರಿತೆ, ಅನಂತನಾಥ ಪುರಾಣ ಮೊದಲಾದುವನ್ನು ಬರೆದನು.
ಜನ್ನಿಗೆ ಯಾಜ್ಞಿಕ; ನೈವೇದ್ಯ.
ಜನ್ಮ ಹುಟ್ಟು, ಉತ್ಪನ್ನ.
—ಅಂತ ಹುಟ್ಟಿದಂದಿನಿಂದ; ಜೀವನದ ಕೊನೆ.

—ಅಂತರ ಇನ್ನೊಂದು ಜನ್ಮ; ಪರಲೋಕ.
—ಪತ್ರ ಜಾತಕ, ಹುಟ್ಟುಗಳಿಗೆಯನ್ನು ಬರೆದ ಕಾಗದ.
—ಪಾಪ ಮೂಲ ಪಾಪ.
—ಭೂಮಿ ಹುಟ್ಟಿದ ದೇಶ.
ಜನ್ಮೀ ಜನ್ಮ ಉಳ್ಳುದು, ಪ್ರಾಣಿ, ಜೀವ.
ಜನ್ಯ ಹುಟ್ಟಿದ; ಸುದ್ದಿ; ತಂದೆ; ನಿಂದೆ; ಪ್ರೀತಿ; ಯುದ್ಧ; ಶರೀರ; ಮದುವಣಿಗನ ಗೆಳೆಯ.
ಜಪ ಮಂತ್ರ ಪಠಣ; ಪ್ರಾರ್ಥನೆ.
—ಇಸು ತಪಿಸು, ಪ್ರಾರ್ಥಿಸು; ಮಂತ್ರ ಪಠಣಮಾಡು.
—ಮಾಲೆ ಜಪಸರ.
ಜಪಕುಸುಮ ಕೆಂಪು ದಾಸವಾಳ, ದಾಸಾಳ.
ಜಪ್ತಿ ಜಡತಿ, ತಪಾಸಣೆ, ಹುಡುಕುವುದು.
ಜಪ್ಪಳ ಜಾತ್ರೆ.
ಜಬರದಸ್ತು ಜುಲುಮು, ಬಲವಂತ; ಹಿಂಸೆ.
ಜಬರಿಸು ಬೆದರಿಸು; ಬಯ್ಯು.
ಜಬ್ಬ ಮುದುಕ.
—ಲು ಶಕ್ತಿಹೀನತೆ; ಒಣಗಿರುವಿಕೆ; ಮುಪ್ಪು; ಒಣಗಿದ ಇಲ್ಲವೆ ಮುದ್ದೆಯಾದ ಉರುವಲು.
ಜಬ್ಬು ಮುದಿ; ಮಿದುವಾದ; ಹಾಳಾದ; ಜರ್ಬು, ಹೆಮ್ಮೆ.
ಜಮ (ದ್ಭ) ಯಮ (ಸಂ), ಜವ.
ಜಮಖಾನೆ ಹಾಸುಕಂಬಳಿ.
ಜಮದಗ್ನಿ ಪರಶುರಾಮನ ತಂದೆ. ಜಮದಗ್ನಿಗೆ ರೇಣುಕೆ ಎಂಬವಳಲ್ಲಿ ಐವರು ಮಕ್ಕಳಿದ್ದರು. ರೇಣುಕೆಯು ಒಂದು ದಿನ ಕ್ರೀಡಾಸಕ್ತರಾದ ಇಬ್ಬರು ದಂಪತಿಗಳನ್ನು ಕಂಡು ಕಾಮುಕಳಾದಳು. ಅದರಿಂದ ಗಂಡನು ಕುಪಿತನಾಗಿ, ಅವಳ ವಧೆಗೆ ಆಜ್ಞೆಯಿತ್ತನು. ಮಕ್ಕಳಲ್ಲಿ ಯಾರೂ ಈ ಕೆಲಸಕ್ಕೆ ಮುಂದಾಗದಿರಲು, ಪರಶುರಾಮನು (ಕಿರಿಯ ಮಗ) ಅವಳನ್ನು ಕೊಂದನು. ಕೊನೆಗೆ ಅವನ ಪ್ರಾರ್ಥನೆಯಂತೆ ಅವಳು ತಿರುಗಿ ಬದುಕಿಸಲ್ಪಟ್ಟಳು.
ಜಮಳ(ದ್ಭ) ಯಮಳ (ಸಂ), ಅವಳಿಜವಳಿ, ಜೋಡು.
ಜಮಾ ಜಮೆ, ಕೂಡಿಕೆ, ಸೇರಿಕೆ.
ಜಮಾಬಂದಿ ತೆರಿಗೆ ಕಂದಾಯಗಳ ಒಟ್ಟು ಲೆಕ್ಕ ನಿರ್ಧಾರ.
ಜಮಾವಣೆ ಸೌರಸ್ಯ ತುಂಬಿಬರುವಿಕೆ; ಕಳೆಗೂಡುವಿಕೆ; ಸೇರುವಿಕೆ.
ಜಮಾಯಿಸು ಸೇರಿಸು; ಒಟ್ಟುಗೂಡಿಸು.
ಜಮೀನು ಭೂಮಿ, ಸಾಗು ಭೂಮಿ, ಹೊಲ.
—ದಾರ ಭೂಮಿಯುಳ್ಳವ.
ಜಮೆ (ನೋಡು: ಜಮಾ).
ಜಮೇದಾರ ಒಂದು ಪಡೆಯ ನಾಯಕ.
ಜಮ್ಮನೆ ರೋಮಾಂಚನ ಸುಖ; ಫಕ್ಕನೆ.
ಜಯ ಗೆಲವು; ಮೋಹಕ; ಶುಭ.
—ಇಸು ಗೆಲು, ಸೋಲಿಸು; ಲಾಭ ಹೊಂದು.
—ಶಾಲಿ ಗೆದ್ದವ, ವಿಜಯಿ.
—ಸ್ತಂಭ ಜಯಸೂಚನೆಗಾಗಿ ನಟ್ಟ ಸ್ಮಾರಕ ಕಂಬ.
ಜಯದ್ರಥ ಸಿಂಧುದೇಶದ ಅರಸು. ಕೌರವನ ತಂಗಿ ದುಶ್ಶಳೆಯ ಗಂಡ.
ಜಯನ ಗೆಲುವ; ಲೋಹಕವಚ.
ಜಯಮಾನ ವಿಜಯಗೊಳಿಸುವಿಕೆ.
ಜಯಂತ ಇಂದ್ರನ ಮಗ; ದಶರಥನ ಮಂತ್ರಿ. ಭೀಮನ ಅಜ್ಞಾತವಾಸದ ಒಂದು ಹೆಸರು.
ಜಯಂತಿ ಪಟ, ಬಾವುಟ; ವರ್ಧಂತಿ, ಹುಟ್ಟು ದಿನ.
ಜಯಾ (ಜಯೆ) ದುರ್ಗಾದೇವಿ.

ಜರ ಜರಿಯುವಿಕೆ; ಜರತಾರಿ; ಮುಪ್ಪು; ಜ್ವರ (ಸಂ), ಉರಿ.
ಜರಗು ಚಿನ್ನದ ಧೂಳು ಸೇರಿರುವ ಕೆಸರು; ಸಂಭವಿಸು, ಆಗು.
— ಇಸು ನಡಸು; ಆಗುವಂತೆ ಮಾಡು.
ಜರಠ ಮುದಿಯಾದುದು, ಮುದಿ; ಜೀರ್ಣವಾದುದು; ಕರ್ಕಶ, ಕಠೋರ.
ಜರಡ ಜಳ್ಳು, ಅಲ್ಪ.
ಜರಡು ನಿಷ್ಪ್ರಯೋಜಕ, ಪೊಳ್ಳು; ಹುಸಿ.
ಜರಡೆ (ಜರಡಿ) ಸಾರಣಿಗೆ, ಪುಡಿಗಳನ್ನು ಗಾಳಿಸುವ ಇಲ್ಲವೆ ಸೋಸುವ ಬಲೆ.
ಜರಣ ಮುಪ್ಪು; ಕುಂದುವಿಕೆ; ಜೀರಿಗೆ.
ಜರತಾರಿ ಜರ, ಜರಿ.
ಜರಾಯು ಗರ್ಭಕೋಶ; ಬಸಿರು.
— ಜ ಗರ್ಭಕೋಶದಿಂದ ಹುಟ್ಟುವ ಪ್ರಾಣಿಗಳು.
ಜರಾಸಂಧ ಮಗಧ ರಾಜ ಬ್ರುಹದ್ರಥನ ಮಗ. ಈ ಅರಸನಿಗೆ ಮಕ್ಕಳಿಲ್ಲದಾಗ ಅವನ ಹೆಂಡತಿ ಎರಡು ಮಾಂಸಖಂಡ ಹೆತ್ತಳು. ಅದನ್ನು ಸ್ಮಶಾನದಲ್ಲಿ ಎಸೆದರು. ಆಗ ಜರೆಯೆಂಬ ರಾಕ್ಷಸಿ ಅವನ್ನು ಒಯ್ದು, ಸೇರಿಸಿ, ಜೀವಂತ ಶಿಶುವನ್ನಾಗಿ ಮಾಡಿದಳೆಂದು ಕಥೆ. ಹಾಗೆ ಕೂಡಿಸಿ ಬೆಳೆದ ದೇಹವೇ ಇವನದು.
ಜರಿ ಕುಸಿ; ಹೀನಯಿಸು; ಹೀಟುಗಳೆ; ಕೀಳು; ಕಳಚು; ಕುಗ್ಗು, ತಗ್ಗು; ಸರಿ, ಜಾರು; ಕೊರಕಲು; ಪರ್ವತ ಪ್ರಪಾತ, ಅಬ್ಬಿ, ತಡಸಲು.
ಜರಿತಾರಿ ಮಂದಪಾಲ ಋಷಿಯ ಮಗ ಶಾರ್ಙಕ.
ಜರುಗು (ಜರಗು).
ಜರುಚು ವ್ಯರ್ಥವಾಗಿ ಮಾತಾಡು, ಹರಟೆ ಕೊಚ್ಚು.
ಜರುಹು ಬೀಳಲು ಕಾರಣವಾಗು, ನಾಶವಾಗು; ನಾಶಮಾಡು.
ಜರೂರು ಅಗತ್ಯದ, ಅತ್ಯಾವಶ್ಯಕದ; ಬೇಗನೆ ಆಗಬೇಕಾದ, ತ್ವರೆಯ.
ಜರೆ (ಜರಾ) ವಾರ್ಧಕ್ಯ, ಮುಪ್ಪು, ಮುದಿತನ; ಜರಿ; ತಿರಸ್ಕರಿಸು; ಹೀನಯಿಸು.
ಜರ್ಕು ಸೊಣೆ, ಕುಟುಕು; ಒತ್ತು.
ಜರ್ಜರ ಹಳೆಯ, ಬರಡಾದ; ಒಂದು ವಾದ್ಯ ವಿಶೇಷ; ಇಂದ್ರಧ್ವಜವೆಂಬ ಬಾವುಟ.
— ಇತ ನುಚ್ಚುನೂರಾದ, ಪುಡಿಯಾದ; ಒಡೆದ; ಹಳೆತಾದ.
ಜರ್ಜರಿಸು ಎದೆಗುಂದು, ಹೆದರು.
ಜರ್ಝರ ಉದ್ಧತ; ಹೆಮ್ಮೆಯುವ; ನಾಶಕಾರಿ.
ಜರ್ಬು (ಜರ್ವು) ಗದರಿಸು; ಹುಬ್ಬುಹಾರಿಸು; ನಿಂದಿಸು; ಹೆಮ್ಮೆ.
ಜಲ (ಜಡ) ನೀರು.
— ಜ (ಜಡಜ) ಕಮಲ.
— ಮಯ ನೀರು ತುಂಬಿದ.
ಜಲಕನ್ಯೆ ನಾಗಸ್ತ್ರೀ, ನಾಗಕನ್ಯೆ.
ಜಲಕರನ ಎಳನೀರು; ಶಂಖ; ಮುಗಿಲು; ತಾವರೆ ಹೂ.
ಜಲಕಾಕ ನೀರುಕಾಗೆ, ಒಂದು ಜಾತಿಯ ಕರಿಯ ಜಲಪಕ್ಷಿ.
ಜಲಕ್ಕನೆ ಫಕ್ಕನೆ; ಬೇಗ; ಜಗ್ಗನೆ.
ಜಲಕ್ರೀಡೆ ನೀರಿನಲ್ಲಾಡುವ ವಿನೋದ.
ಜಲಗಾರ ಜಾಡಮಾಲಿ, ಕಸಗುಡಿಸುವವ; ಬೆಸ್ತ; ಧೂಳಿಂದ ಚಿನ್ನ ಸಂಗ್ರಹಿಸುವವ.
ಜಲಗು ಚಿನ್ನ, ಬಂಗಾರ.
ಜಲಗ್ರಹ ಮೊಸಳೆ, ನೆಗಳೆ, ಮಣಕ.
ಜಲತರಂಗ ನೀರಿನ ಅಲೆ; ಒಂದು ವಾದ್ಯ ವಿಶೇಷ.
ಜಲದ (ನೀರು ಕೊಡುವ) ಮೋಡ.
— ಆಗಮ ಮಳೆಗಾಲ.

ಜಲದು (ಜಲದಿ, ಜಲ್ದಿ), ಬೇಗ, ತೀವ್ರ; ಅವಸರ.
ಜಲದುರ್ಗ ಸುತ್ತಲೂ ನೀರಿನ ಕಂದಕವಿರುವ ಕೋಟೆ.
ಜಲದ್ರೋಣಿ ನೀರಿನ ಮರಿಗೆ, ನೀರಬಾಣಿ.
ಜಲಧರ ನೀರುಳ್ಳದು, ಮುಗಿಲು.
ಜಲಧಿ ನೀರಿಗೆ ಆಶ್ರಯವಾದುದು, ಸಮುದ್ರ.
— ಜೆ ಸಾಗರದಲ್ಲಿ ಹುಟ್ಟಿದವಳು, ಲಕ್ಷ್ಮಿ.
ಜಲಪತಿ ವರುಣ; ಸಾಗರ.
ಜಲಪುಷ್ಪ ಕಡಲ ಗುಲಾಬಿ; ಮೀನು.
ಜಲಪ್ರಲಯ ಕಡಲು ಉಕ್ಕುವುದು.
ಜಲಪ್ರಾಯ ಮಡು, ನೀರು ಅಧಿಕವಾಗಿ ರುವ ಸ್ಥಾನ.
ಜಲಮಗ್ನ ನೀರಲ್ಲಿ ಮುಳುಗಿದ, ಅದ್ದಿದ.
ಜಲವ್ಯಾಲ ನೀರೊಳಗಿನಸರ್ಪ, ಕಡಲಹಾವು.
ಜಲಶಯನ (ಜಲಶಾಯಿ) ವಿಷ್ಣು, ನಾರಾ ಯಣ.
ಜಲಶಂಕೆ ಮೂತ್ರ ವಿಸರ್ಜನೆ.
ಜಲಸಂಧಿ (ಜಲಸಂದು) ಎರಡು ವಿಶಾಲ ಜಲ ಭಾಗಗಳನ್ನು ಕೂಡಿಸುವ ಕಿರಿದಾದ ನೀರಿನ ಸೆರಗು.
ಜಲಹಾಸ ನೀರ ನಗೆಯಂತಿರುವುದು, ನೊರೆ.
ಜಲಂಧರ ನೀರು ಹೊರುವವ; ಒಬ್ಬ ರಾಕ್ಷಸ; ವೃಂದೆಯ ಗಂಡ.
ಜಲಾವರ್ತ ನೀರಿನ ಸುಳಿ.
ಜಲಾಶಯ ನೀರಿನ ಆಸರೆ; ಕೆರೆ; ಮೀನು; ಮಂಕುತನ.
ಜಲೂಕ ನೀರೇ ಮನೆಯಾಗಿ ಉಳ್ಳುದು, ಜಿಗಳೆ, ಜವಳೆ.
ಜಲೋದರ ಹೊಟ್ಟೆಯಲ್ಲಿ ನೀರು ತುಂಬುವ ಒಂದು ಬೇನೆ.
ಜಲೌಕ (ಜಲೂಕ) ಜಿಗಳೆ, ಜಿಗಣೆ.
ಜಲ್ಪ ಹೇಳಿಕೆ, ಕಥನ.
— ಇತ ಹೇಳಿದ, ಮಾತಾಡಿದ.
ಜಲ್ಪಕ ನಿಂದಿತ ನುಡಿಗಳನ್ನು ಆಡುವವ, ವಾಚಾಲ.
ಜಲ್ಲಡೆ ಜರಡೆ, ಸಾರಣಿಗೆ.
ಜಲ್ಲನೆ ಪಕ್ಕನೆ, ಒಮ್ಮೆಲೆ.
ಜಲ್ಲಿ ಹೂಸರ ಇಳಿಸುವುದು, ತಲೆಯಿಂದ ಹೂಮಾಲೆಗಳನ್ನು ತೂಗುವುದು; ಜಾಲರಿ; ಹರಳುಕಲ್ಲು, ಕಲ್ಲುಪುಡಿ.
ಜಲ್ಲು ಹರಿದುಹೋಗುವಿಕೆ; ಜಲ್ಲೆ, ಕೋಲು.
ಜಲ್ಲೆ ದೋಣಿ ಒತ್ತುವ ಕೋಲು, ಒತ್ತು ಗೋಲು, ಗಣೆ; ಜೊಲ್ಲೆ, ಜೊಂಕೆ.
ಜವ (ದ್ಭ) ಯಮ (ಸಂ), ಶಕ್ತಿ; ವೇಗ; ಜೋರು.
— ಕೆಡಿಸು ವೇಗ ಕುಂದಿಸು.
— ಹಾರು ಶಕ್ತಿಗುಂದು.
ಜವನ (ಯವನ) ವೇಗವುಳ್ಳ, ಕುದುರೆ; ಒಂದು ದೇಶ.
ಜವನಿಕೆ (ದ್ಭ) ಯವನಿಕಾ (ಸಂ), ತೆರೆ, ಪರದೆ; ದಡ್ಡಿ.
ಜವರಕ್ಕೆ ಕವಚ, ಉಕ್ಕಿನ ಕವಚ.
ಜವಹುರ (ದ್ಭ) ಯಮಪುರ (ಸಂ).
ಜವಳ (ದ್ಭ) ಯಮಲ (ಸಂ), ಜತೆ, ಎಣೆ, ಜೋಡಿ.
ಜವಳಿ ಜೋಳಿ, ಸವಡಿ, ಜತೆ, ಜೋಡಿ.
— ಇಸು ಒಟ್ಟುಸೇರು, ಜತೆಯಾಗು.
— ಕಾಲು ಎರಡು ಕಾಲು.
ಜವಳು (ಜವುಳು) ಸವುಳು, ಜವುಗು, ನೀರು ಸದಾ ಒಸರುವ ನೆಲ.
ಜವಂಜವ ಹುಟ್ಟು, ಸಾವು; ಸಂಸಾರ.
ಜವಾ ಸೇರಿಕೆ, ಕೂಟ.
ಜವಾಜಿ (ಜವಾದಿ) ಪುನುಗು.
ಜವಾನ ಸೇವಕ, ಆಳು.
ಜವಾಬು (ಜಬಾಬು) ಉತ್ತರ, ಪ್ರತ್ಯುತ್ತರ.
— ದಾರ ಉತ್ತರವಾದಿ, ಹೊಣೆಗಾರ.

—ದಾರಿ ಹೊಣೆ, ಹೊಣೆಗಾರಿಕೆ.

ಜವಾರಿ ಒಂದು ಧಾನ್ಯ; ಗಾವಟ, ದೇಶೀ.

ಜವಾಹೀರು ಆಭರಣ, ರತ್ನ.

ಜವಿ ಕುದುರೆ ಬಾಲದ ಕೂದಲು.

ಜವುಗು ಒರತೆ ತುಂಬಿದ ನೆಲ, ತಂಡಿ ಹತ್ತಿದ ನೆಲ, ಕಂಪ, ಜವುಗು.ನೆಲ.

ಜವುಳಿ ಬಟ್ಟೆಬರೆ, ಹೊಸ ವಸ್ತ್ರ.

ಜವುಳು (ಜವುಗು).

ಜವ್ವನ (ದ್ಭ) ಯೌವನ, (ಸಂ) ತಾರುಣ್ಯ, ಹರೆಯ; ಮೊಲೆ, ಸ್ತನ.

—ಇಗ ತರುಣ, ಪ್ರಾಯಕ್ಕೆ ಬಂದವ.

ಜವ್ವನೆ ಯುವತಿ, ಹರೆಯದವಳು.

ಜವ್ವಾಜಿ (ಜವಾದಿ), ಒಂದು ಸುಗಂಧ ದ್ರವ್ಯ.

ಜಸ (ದ್ಭ) ಯಶಸ್ (ಸಂ), ಕೀರ್ತಿ.

—ಯುತ ಕೀರ್ತಿಯುತ.

—ವಂತ ಕೀರ್ತಿಯುತ.

ಜಸ್ರು ದಣಿವು, ಆಯಾಸ, ಬಳಲಿಕೆ.

ಜಹಗೀರು ಉಂಬಳಿ ಭೂಮಿ, ಇನಾಮು.

—ದಾರ ಉಂಬಳಿ ಭೂಮಿಯುಳ್ಳವ.

ಜಹಜು ಹಡಗು; ಉಗಿಹಡಗು.

ಜಹಲ್ಲಕ್ಷಣ ಅಲಂಕಾರಗಳಲ್ಲಿ ಒಂದು.

ಜಹ್ನು ಗಂಗೆಯನ್ನು ಕುಡಿದ ಒಬ್ಬ ಋಷಿಯು.

ಜಳ ಉಷ್ಣ, ಸೆಕೆ, ಬಿಸಿಲಿನ ಹೊಳವು; ಬಿಸಿಗಾಳಿ; ಜಲ.

ಜಳಕ (ಜಲಕ) ಸ್ನಾನ; ಶುಚಿ.

ಜಳಕು ನಡುಗು, ಅಲುಗು.

ಜಳಂಬು ತೆರೆ, ಹೊದ್ದಿಕೆ; ಅಡಗು, ಮರೆಯಾಗು.

ಜಳ್ಳು ಪೊಳ್ಳು, ಶಕ್ತಿಯಿಲ್ಲದ, ಹುರುಳಿಲ್ಲದ.

—ಗ ಅಲ್ಪ, ಬಲಹೀನ.

ಜಂಕಣೆ (ಜಂಕೆ) ಗದ್ದರಿಕೆ.

ಜಂಕಿಸು ಹಂಗಿಸು, ನಿಂದಿಸು; ಗದರಿಸು.

ಜಂಕೆ(ದ್ಭ) ಝುಂಕಾ(ಸಂ) ಕೂಗು, ಆರ್ಭಟೆ.

ಜಂಗಮ ಗತಿಯಿಂದ ಕೂಡಿದ, ಚಲಿಸುವ ಶಕ್ತಿಯುಳ್ಳ; ಶೈವ ಸನ್ಯಾಸಿ.

—ಗಿತ್ತಿ ಶೈವ ಸನ್ಯಾಸಿನಿ, ಶರಣಮ್ಮ.

ಜಂಗಲ್ (ಜಂಗಲ್ಲು) ಎರಡು ದೋಣಿಗಳನ್ನು ಬಿಗಿದು ಮೇಲೆ ಹಲಗೆ ಹಾಕಿ, ದೊಡ್ಡ ಬಂಡಿ ಮೊದಲಾದುವನ್ನು ನದಿ ದಾಟಸಲು ಬಳಸುವ ತೆಪ್ಪ; ಕಾಡು.

ಜಂಗಲ ವನ, ಅಡವಿ, ಕಾಡು; ಏಕಾಂತ, ಗುಟ್ಟು; ಮಾಂಸ.

ಜಂಗಳ ದಣಿದ; ಸಡಿಲಾದ.

ಜಂಗಿಸು ನೆಗೆ, ಜಿಗಿ.

ಜಂಗು ಭುಜ, ಹೆಗಲು; ತುಕ್ಕು.

ಜಂಗುಡಿ (ಜಂಗುಳಿ).

ಜಂಗುಳಿ ಗಡಣ, ಸಮೂಹ; ಮೊತ್ತ.

ಜಂಗೆ ದಾಟು; ಹಜ್ಜೆ ದಾಟು, ನಿಡುಹಜ್ಜೆ.

ಜಂಗ್ಲಿ ವನ್ಯ, ಕಾಡಿಗೆ ಸಂಬಂಧಿಸಿದ.

ಜಂಘಾಲ ವೇಗದಿಂದ ಕೂಡಿದ ಕೆಳ ಕಾಲುಳ್ಳ; ವೇಗವಾಗಿ ಓಡುವ.

ಜಂಘೆ ಕೆಳತೊಡೆ.

ಜಂಜಡ ತೊಂದರೆ; ಜಾಡ್ಯ; ಯೋಚನೆ, ಚಿಂತೆ; ಒಟ್ಟು ಮೊತ್ತ.

ಜಂಜರ ಓಡುವ; ಕ್ರಮ ಮೀರಿದ; ವರ್ಗಿಸದ.

ಜಂಜಾಲು ಜಂಗು; ತುಬಾಕಿ; ಉಪದ್ರವ.

ಜಂಝಾರ (ಜಜ್ಝಾರ) ವೀರ.

ಜಂಝಾವಾತ ಬಿರುಗಾಳಿ; ಮಳೆಗಾಳಿ.

ಜಂಟಿ ಜತೆ; ಸೇರಿಕೆ; ಜೋಡು.

—ಗಾರ ಜತೆಗಾರ; ಗೆಳೆಯ.

—ಸು ಸೇರಿಸು, ಕೂಡಿಸು, ಜೋಡಿಸು.

ಜಂಡೆ ಕುಡಿ, ಬಾವುಟ; ಲಾಂಛನ.

ಜಂತ (ದ್ಭ) ದಂತ (ಸಂ).

ಜಂತು ಪ್ರಾಣ ಉಳ್ಳುದು; ಪ್ರಾಣಿ; ಕ್ರಿಮಿ ಕೀಟ, ಹುಳು.

—ಘ್ನ ಕ್ರಿಮಿಕೀಟ ಕೊಲ್ಲುವ, ಹಿಂಗು.

ಜಂತೆ (ಜಂತಿ) ಪಕ್ಕಾಸು, ಅಡ್ಡ ಹಾಯುವ ಮರದ ನೀಳ ತುಂಡು, ಮಾಡಿನ ಅಡ್ಡೆ.
ಜಂತ್ರು (ದ್ಭ) ಯಂತ್ರ (ಸಂ), ಕೆಲಸಗಳನ್ನು ಸುಲಭ ಮಾಡಲು ಬಳಸುವ ಯಾವುದೇ ಸಾಧನ.
—ಮಂತ್ರು ಖಗೋಲ ಗಣಿತದ ಶೋಧ ನಾಲಯ.
ಜಂಪತಿ (ದಂಪತಿ) ಗಂಡಹೆಂಡಿರು.
ಜಂಬ (ಜಂಭ) ಯೋಗ್ಯತೆಗಿಂತಲೂ ಅಧಿಕ ವಾದ ತೋರಿಕೆ; ಸೊಕ್ಕು.
—ಗಾರ ಒಣ ಹೆಮ್ಮೆ ತೋರಿಸುವವ; ಒಣ ಪ್ರತಿಷ್ಠೆಯುವ.
ಜಂಬರ ಕೆಲಸ, ಉದ್ಯೋಗ.
ಜಂಬಾಲ (ಜಂಬಾಳ) ಕೆಸರು, ಬುರುಡೆ; ಹಾವಸೆ, ಹಾವಚಿ.
ಜಂಬಿ ಶಮಿ, ಜಾಲಿ, ಬನ್ನಿ.
ಜಂಬು ಉದ್ದ; ಒಂದು ಜಾತಿಯ ನೇರಿಳೆ ಮರ; ವಾಸನೆ.
ಜಂಬುಕ ನರಿ.
ಜಂಬುದ್ವೀಪ ಭಾರತವರ್ಷ, ಹಿಂದುಸ್ಥಾನ.
ಜಂಬುಮಾಲಿ ಪ್ರಹಸ್ತನ ಮಗ.
ಜಂಬೂ ನೇರಿಳೆ, ನೀರಲ.
ಜಂಬೂನದಿ ಮೇರುಪರ್ವತದಿಂದ ಹರಿದು ಬರುವ ಒಂದು ನದಿ.
ಜಂಭ ಒಬ್ಬ ರಾಕ್ಷಸ. ಇವನು ಇಂದ್ರನಿಂದ ಸಂಹೃತನಾದನು; ನಿಂಬೆ ಹಣ್ಣು; ದವಡೆ; ಬಾಯಿ; ಬಾಯಿಬಡಿಕತನ.
— ಅರಿ ಜಂಭನೆಂಬವನ ವೈರಿ; ಇಂದ್ರ.
ಜಂಭೀರ (ಜಂಬೀರ) ನಿಂಬೆ.
ಜಾಗ ತಾವು, ಇಂಬು, ಸ್ಥಳ; ಪಚ್ಚೆ, ಹಸುರು.
ಜಾಗಟೆ (ಜಾಗಂಟೆ) ಬಾರಿಸುವ ಒಂದು ಕಂಚಿನ ವಾದ್ಯ.
ಜಾಗರ ಎಚ್ಚರ, ಎಚ್ಚರವಾಗಿರುವುದು.
—ಣ (ಜಾಗರಣೆ) ಎಚ್ಚರಿಕೆ.
ಜಾಗರೂಕ ಎಚ್ಚರವುಳ್ಳ.
– ತೆ ಎಚ್ಚರಿಕೆ.
ಜಾಗು ಶಹಭಾಸ್, ಭಾಪು; ಮೌನ.
ಜಾಗುಡ ಕೇಸರ, ಕುಂಕುಮ ಕೇಸರ.
ಜಾಗೃತ (ಜಾಗ್ರತ) ಎಚ್ಚರವುಳ್ಳ, ಜೋಕೆಯ.
ಜಾಗ್ರುತೆ (ನೋಡು: ಜಾಗರೂಕತೆ), ಬೇಗನೆ.
ಜಾಜಿ ಮಾಲತಿ, ಒಂದು ಜಾತಿಯ ಹೂ.
ಜಾಜು (ಜಾದು) ಐಂದ್ರಜಾಲ ವಿದ್ಯೆ; ಕೆಂಪು; ಒಂದು ಜಾತಿಯ ಕೆಂಪು ಕಲ್ಲು.
ಜಾಜ್ವಲ್ಯ ಪ್ರಕಾಶವುಳ್ಳ, ತೇಜಸ್ವಿ, ಕಾಂತಿ ಯುತ; ಉರಿಯುವ.
ಜಾಠರ ಹೊಟ್ಟೆಗೆ ಸಂಬಂಧಿಸಿದ.
ಜಾಡ ನೇಕಾರ; ಜೇಡರಹುಳು, ಶಲಭ.
—ಗಿತ್ತಿ ನೇಯುವವಳು, ನೇಕಾರಗಿತ್ತಿ.
ಜಾಡಣೆ ಕೊಡಹುವಿಕೆ; ಭೇದಿಯಾಗುವಿಕೆ.
ಜಾಡಮಾಲಿ ಕಸಗುಡಿಸುವವ, ಜಲಗಾರ.
ಜಾಡಿ ಅತಿಶಯ; ಒತ್ತೊತ್ತು; ಸಮೂಹ; ಕಂಬಳಿ; ಒಂದು ಬಗೆಯ ಪಾತ್ರೆ.
—ಕೆ ಒತ್ತೊತ್ತಾಗಿರುವಿಕೆ; ಕೊಡಹುವಿಕೆ
ಜಾಡಿಸು ಅಲುಗಾಡಿಸು, ಕೊಡಹು; ಬಿಸುಡು
ಜಾಡೆ (ಜಾಡು) ಹಜ್ಜೆ ಗುರುತ್ತು, ಏನಾದರೂ ಸರಿದ ಗುರುತು; ಸೂಚನೆ, ಸೂಟು, ಸುಳಿವು
ಜಾಡ್ಯ ರೋಗ, ಬೇನೆ; ಜಡತೆ.
ಜಾಣ್ ಜ್ಞಾನ (ಸಂ), ಜಾಣತನ, ತಿಳಿವಳಿಕೆ.
—ನುಡಿ ಜ್ಞಾನದ ಮಾತು.
—ಪಡೆ ಜ್ಞಾನ ಗಳಿಸು.
—ಬಿಡು ಮರೆಯು.
—ಮೆ ತಿಳಿವಳಿಕೆ.
ಜಾಣ ತಿಳಿದವ, ಬಲ್ಲಿದ, ಕೋವಿದ.
—ತನ ಜಾಣ್ಮೆ.
ಜಾತ ಹುಟ್ಟಿದ, ಉತ್ಪನ್ನಗೊಂಡ; ಹುಟ್ಟು; ಪುಸಷ; ಸಮೂಹ, ರಾಶಿ.

ಜಾತಕ ಹುಟ್ಟಿದ ಗಳಿಗೆ ಬರೆದಿಟ್ಟ ಪತ್ರ; ಬುದ್ಧನ ಪೂರ್ವ ಜನ್ಮವನ್ನು ಹೇಳುವ ಪುರಾಣ ಕಥೆಗಳು.
ಜಾತಕರ್ಮ ನಾಮಕರಣ ವಿಧಿ; ಹುಟ್ಟಿದ ಮಗುವಿಗೆ ಮಾಡುವ ಒಂದು ಸಂಸ್ಕಾರ.
ಜಾತರೂಪ ಒಳ್ಳೆಯ ರೂಪ ಉಳ್ಳುದು, ಚಿನ್ನ.
ಜಾತವೇದ ಅಗ್ನಿ, ಬೆಂಕಿ.
ಜಾತಾಬಾಕಿ ಕೊಡುವುದು ಕೊಳ್ಳುವುದು ಹೋಗುತ್ತ ಉಳಿಯುವ ಮೊತ್ತ.
ಜಾತಿ ಬ್ರಾಹ್ಮಣ ಶೂದ್ರ ಮೊದಲಾದ ವರ್ಣಗಳು; ವರ್ಗ; ಮಾಲತಿ, ಜಾಜಿ ಹೂ; ಬಗೆ; ಸಾಹಿತ್ಯಭೇದ; ಜಾಜಿಕಾಯಿ; ನೆಲ್ಲಿ; ಛಂದಸ್ಸು; ಜನ್ಮ, ಗೋತ್ರ.
—ಕರ್ಮ ಒಂದೊಂದು ಜಾತಿಯ ಜನಗಳು ಮಾಡತಕ್ಕ ಮುಖ್ಯ ವಿಧಿ.
—ವಳ ಜಾತಿವಂತ.
ಜಾತಿಗಾದೆ ಒಂದು ಬಗೆಯ ಛಂದಸ್ಸು.
ಜಾತಿಗಾರ ರಸಿಕ; ಉಂಡಾಡಿ; ಸೋಗು ಹಾಕುವ ಒಂದು ಜಾತಿ.
ಜಾತಿಫಲ ಜಾಯಿಫಲ, ಜಾಯಿಕಾಯಿ.
ಜಾತೀಯ ಒಂದು ಜಾತಿ ಇಲ್ಲವೆ ಗುಂಪಿಗೆ ಸೇರಿದ.
ಜಾತು ಒಮ್ಮೊಮ್ಮೆ, ಎಂದೋ ಒಮ್ಮೆ.
ಜಾತೆ ಹುಟ್ಟಿದವಳು, ಮಗಳು.
ಜಾತ್ಯ ಕುಲೀನ; ಯೋಗ್ಯ; ಹುಟ್ಟುವಲ್ಲಿಂದಲೇ.
ಜಾತ್ಯಂಧ ಹುಟ್ಟುಕುರುಡ.
ಜಾತ್ರೆ (ದ್ಭ) ಯಾತ್ರೆ (ಸಂ), ಉತ್ಸವ, ಹಬ್ಬ.
ಜಾದಿ (ದ್ಭ) ಜಾತಿ (ಸಂ), ಜಾಜಿ, ಮಾಲತಿ.
ಜಾದು ಇಂದ್ರಜಾಲ; ಕಣ್ಣುಕಟ್ಟು ವಿದ್ಯೆ.
—ಗಿರಿ ಇಂದ್ರಜಾಲತನ; ವಂಚನೆ; ಕಣ್ಣುಕಟ್ಟು.
ಜಾನ (ದ್ಭ) ಧ್ಯಾನ (ಸಂ), ಯೋಚನೆ, ಚಿಂತೆ.
—ಇಸು ನೆನವರಿಕೆಮಾಡು, ಚಿಂತಿಸು.

ಜಾನಕಿ ಜನಕನ ಮಗಳು, ಸೀತೆ.
ಜಾನಪದ (ಜನಪದ) ದೇಸಿ; ಜನಸಮುದಾಯದ, ಹಳ್ಳಿಯ; ಹಳ್ಳಿಗ.
ಜಾನಿ (ದ್ಭ) ಜ್ಞಾನಿ (ಸಂ), ಬಲ್ಲಿದ, ತಿಳಿದವ.
ಜಾನು ಮೊಣಕಾಲು.
ಜಾಪಾಳ ಒಂದು ಔಷಧ ಸಸ್ಯ, ಅದರ ಬೀಜ.
ಜಾಪು (ಚಾಪು) ಒಂದು ತಾಲವಿಶೇಷ; ಮೃದಂಗವಾದನದ ಒಂದು ಗತ್ತು.
ಜಾಬಾಲ ಯಜುರ್ವೇದಿಗಳಲ್ಲಿನ ಒಂದು ಪಂಗಡ; ಆಡು ಮೇಯಿಸುವವ.
ಜಾಬಾಲಿ ಹಿಂದಿನಕಾಲದ ಒಬ್ಬ ಋಷಿ, ಈತನು ದಶರಥರಾಯನ ಗುರುವೂ ಹೆಸರಾದ ತರ್ಕಪಂಡಿತನೂ ಆಗಿದ್ದನು.
ಜಾಬು ಜವಾಬು, ಪ್ರತ್ಯುತ್ತರ; ಪತ್ರವ್ಯವಹಾರ.
ಜಾಮು ಯಾಮ, ಏಳು ಗಳಿಗೆ ಕಾಲ.
ಜಾಮದಗ್ನಿ (ನೋಡು: ಜಮದಗ್ನಿ).
ಜಾಮಾತ (ಜಾಮಾತೃ) ಅಳಿಯ, ಮಗಳ ಗಂಡ.
ಜಾಮಿ (ದ್ಭ) ಯಾಮಿ (ಸಂ), ಗರತಿ, ಪತಿವ್ರತೆ; ಕುಲೀನೆ.
ಜಾಮೀನು ಹೊಣೆ, ಒತ್ತೆ.
—ದಾರ ಹೊಣೆಗಾರ.
ಜಾಯಕ ಒಂದು ಸುಗಂಧದ ಮರ.
ಜಾಯಮಾನ ಹುಟ್ಟು, ಬಾಳ್ವೆ; ಹುಟ್ಟುವಳಿ.
ಜಾಯಾ (ಜಾಯೆ) ಹೆಂಡತಿ.
ಜಾಯಿ ಒಂದು ಬಗೆಯ ಚರ್ಮವಾದ್ಯ.
ಜಾಯಿಲ ನಾಯಿ.
ಜಾಯು ರೋಗವನ್ನು ಜಯಿಸುವುದು, ಔಷಧ, ಮದ್ದು.
ಜಾರ ಹಾದರಿಗ; ಉಪಪತಿ, ಮಿಂಡ.
—ಜ ಗೋಳಕ, ಕುಂಡ; ಮದುವೆ ಆಗುವ ಮೊದಲು ಹುಟ್ಟಿದವ.

—ತ್ವ ವ್ಯಭಿಚಾರ, ಹಾದರ.
ಜಾರಿ ಜಾರೆ, ಹಾದರಗಿತ್ತಿ.
ಜಾರಿಕೆ ಸರಿಯುವಿಕೆ, ಸ್ಥಳ ತಪ್ಪುವಿಕೆ.
ಜಾರಿಗೆ ಒಂದು ಹುಳಿಮರ, ಉಂಡೆ ಹುಳಿಮರ.
ಜಾರು ಸ್ಥಳತಪ್ಪು, ನಯವಾಗಿರುವ ಮೈಯಿಂದಾಗಿ ಹಿಡಿತ ತಪ್ಪು; ಸ್ಖಲನವಾಗು; ಅದೃಶ್ಯವಾಗು.
—ಕೆಡಹು ಕೋಟೆಯ ಮೇಲಿಂದ ಕೆಳಕ್ಕೆ ಜಾರಿಸಿ ಕೆಡೆ.
ಜಾಲ ಜಲದಲ್ಲಿ ಎಸೆಯಲ್ಪಡುವುದು, ಬಲೆ; ಸಮೂಹ, ಗುಂಪು; ಕಿಟಕಿ; ಭದ್ರು; ಸುಳ್ಳು; ಜಂಬ; ಇಂದ್ರಜಾಲ; ಬಾಳೆ ಹಣ್ಣು.
—ಕ ಬಲೆಬೀಸಿ ಜೀವಿಸುವವ, ಕೈವರ್ತ, ಧೀವರ, ಬೆಸ್ತ, ಮೀನುಗಾರ.
—ಕರಣ ಮೀನುಗಾರಿಕೆ, ಮೀನು ಹಿಡಿಯುವಿಕೆ; ರಾಶಿಹಾಕುವಿಕೆ.
ಜಾಲಗಾರ ಜಾದುಗಾರ; ಕಪಟ; ಅಂಬಿಗ, ಬೆಸ್ತ, ಮೀನುಗಾರ; ನದಿ ದಂಡೆಯ ಮರಳನ್ನು ಶೋಧಿಸಿ ಚಿನ್ನ ಹುಡುಕುವವ; ಬಿಳಿ ಬೂದು ಬಣ್ಣದ ಮೀನ್ಗುಳ್ಳಿ.
ಜಾಲರಿ ಬಲೆಕೆಲಸ, ತೂಗುವ ಬಲೆ ಅಂಚು, ಝುಲ್ಲರಿ, ಝಾಲರ.
ಜಾಲಾ (ದ್ಭ) ಜ್ವಾಲಾ (ಸಂ), ಉರಿ, ಬೆಂಕಿ; ಬೆಂಕಿ ನಾಲಗೆ.
ಜಾಲಿ ಒಂದು ಬಗೆಯ ಮುಳ್ಳು ಮರ; ಬಬ್ಬುಳಿ ಮರ; ಬೆಸ್ತ.
ಜಾಲಿಕ ಜೇಡ; ಬೆಸ್ತ; ಜಾದುಗಾರ.
ಜಾಲ್ಮ ನೀಚ, ಮೂರ್ಖ; ಕ್ರೂರ.
ಜಾವ (ದ್ಭ) ಯಾಮ (ಸಂ), ಪ್ರಹರ.
ಜಾವಡಿ (ಜಾವಳಿ) ಅಲ್ಪ, ದುರ್ಬಲ; ಒಂದು ಗೀತ ಜಾತಿ; ಸ್ತ್ರೀಯರ ಕಾಲುಕೈಗಳಿಗೆ ಲೇಪಿಸುವ ಕೆಂಪು ಬಣ್ಣ.
ಜಾವಳ ಸಾಮಾನ್ಯ.
—ಇಗ ಸಾಮಾನ್ಯ ಮನುಷ್ಯ.
ಜಾವಿಗೆ ದೊಂದಿ, ಕಕ್ಕಡ.
ಜಾಸ್ತಿ ಅಧಿಕ; ಬಲವಂತ, ಒತ್ತಾಯ.
ಜಾಹೀರಾತು ಪ್ರಕಟಣೆ, ಹುಲುಬು.
ಜಾಹೀರು ಪ್ರಕಟಿಸಿದ, ತಿಳಿಯಪಡಿಸುವ.
ಜಾಹ್ನವಿ ಜಹ್ನು ಎಂಬ ಋಷಿಯಿಂದ ಪಾನಮಾಡಲ್ಪಟ್ಟು ಆ ಬಳಿಕ ಹೊರಕ್ಕೆ ಬಿಡಲ್ಪಟ್ಟವಳು,' ಗಂಗೆ.
ಜಾಳ ಬಲೆಯಂತಹ ಬಟ್ಟೆ, ಜವುಳುವಸ್ತ್ರ, ಪಿಂಜಾಳು ಅರಿವೆ.
ಜಾಳಕ ರಂಧ್ರ; ಸಮೂಹ; ವಂಚನೆ.
ಜಾಳವಣೆ ಕಣ್ಣುಕಟ್ಟು, ಮೋಸ, ವಂಚನೆ; ಮೋಹಿಸುವುದು, ಆಕರ್ಷಿಸುವುದು.
ಜಾಳಂಧರ (ಜಾಳಾಂದ್ರ) ತುಂಬ ಸಣ್ಣ ತೂತುಗಳುಳ್ಳ ಕಿಟಕಿ.
ಜಾಳಿಗೆ ಜಾಲಕ (ಸಂ), ಬಲೆ; ಬಲೆಚೀಲ; ಜಾಲರಿ ಕೆಲಸ; ಹಣದ ಚೀಲ, ಥೈಲಿ; ಹಮ್ಮಿಣಿ.
ಜಾಳಿಸು (ಜಾಡಿಸು) ಗಾಳಿಸು; ಅಲುಗಾಡಿಸು; ದ್ರವ್ಯವನ್ನು ಅಪಹರಿಸು; ಹೀನಯಿಸು, ತಿರಸ್ಕರಿಸು, ಹೀಟುಗಳೆ.
ಜಾಳು ಜಳ್ಳು, ಹೊಳ್ಳು; ಕೆಲಸಕ್ಕೆ ಬಾರದ; ದೂರದೂರ ನೂಲಿರುವ, ಬಲೆಯಂತಿರುವ.
—ನುಡಿ ಪೊಳ್ಳುಮಾತು.
ಜಾಂಗಲ ಕುರುದೇಶದ ಬಳಿಯ ಒಂದು ದೇಶ; ನೀರಿಲ್ಲದ ದೇಶ; ಬೆಂಗಾಡು; ಅಸಾಧು, ಅನಾಗರಿಕ.
ಜಾಂಗುಲ ವಿಷವಿದ್ಯೆ; ಜಾದುವಿದ್ಯೆ.
ಜಾಂಘಿಕ ಕಣಕಾಲಿನ ಬಲದಿಂದ ಬದುಕುವವ; ಓಡುವವ; ಅಂಜುಬುರುಕ.
ಜಾಂಬವ ಕರಡಿಗಳ ದೊರೆ.
ಜಾಂಬವತಿ ಜಾಂಬವನ ಮಗಳು. ಇವಳನ್ನು ಕೃಷ್ಣನು ಮದುವೆಯಾದನು.

—ರಮಣ ಕೃಷ್ಣ.

ಜಾಂಬವಂತ ರಾಮಾಯಣದಲ್ಲಿ ಪ್ರಸಿದ್ಧ ನಾದ ಕರಡಿಗಳ ಅರಸ; ಜಾಂಬವರೆಂಬ ಪ್ರಾಚೀನ ಜನರ ಅರಸ.

ಜಾಂಬೂನದ ಜಂಬೂ ನದಿಯಲ್ಲಿ ದೊರೆಯುವುದು, ಚಿನ್ನ.

ಜಿಗಟು (ಜಿಗುಟು) ಜಿಬಟು, ಅಂಟು; ಜಿಡ್ಡು.

ಜಿಗಣೆ (ಜಿಗಳೆ) ಇಂಬಳು, ಜವಳೆ, ನೀರಲ್ಲೂ ಕಾಡುಗಳಲ್ಲೂ ವಾಸಿಸುವ ರಕ್ತಹೀರುವ ಒಂದು ಜಾತಿ ಹುಳು.

ಜಿಗಳು ಕಾಲುವೆ, ತೋಡು.

ಜಿಗಿ ಹಾರು, ನೆಗೆ, ಕುಪ್ಪಳಿಸು; ಮಂಜು; ಅಂಟು, ಗೋಂದು.

—ತ ನೆಗೆತ, ಹಾರಾಟ.

ಜಿಗಿಲ್ ಅಂಟಿಕೊಳ್ಳು; ಸಿಕ್ಕಿಬೀಳು, ತೊಡಕಿಗೆ ಗುರಿಯಾಗು.

ಜಿಗೀಷಾ ಜಯಿಸಬೇಕೆಂಬ ಅಪೇಕ್ಷೆ.

ಜಿಗೀಷು ಜಯಿಸಲು ಅಪೇಕ್ಷೆ ಉಳ್ಳವ.

ಜಿಗುಳೆ (ನೋಡು: ಜಿಗಣೆ).

ಜಿಜ್ಞಾಸು ತಿಳಿಯಬೇಕೆಂದು ಬಯಸುವವ; ಮೋಕ್ಷವನ್ನು ಬಯಸುವವ.

ಜಿಟ್ಟಿ ದೇವನ ಹಕ್ಕಿ, ಟಿಟ್ಟಿಭ; ಮಿಡಿತೆ.

ಜಿಡ್ಡಿ (ದಿಡ್ಡಿ) ಹೆಬ್ಬಾಗಿಲೊಳಗಿನ ಕಿರಿ ಕಂಡಿ.

ಜಿಡ್ಡು ಮಡ್ಡು, ಎಣ್ಣೆ ಪಸೆಯುಳ್ಳ ಕೊಳೆ, ಜಿಗುಟು.

ಜಿತ ಗೆದ್ದ; ಅಧೀನಪಡಿಸಿಕೊಂಡ; ಜಯ.

ಜಿತಕಾಮ ಕಾಮನನ್ನು ಜಯಿಸಿದವ; ಬುದ್ಧ; ಜಿನ; ವಿರಕ್ತ.

ಜಿತಕಾಶಿ (ಕಾಶಿ=ಪ್ರಕಾಶಿಸುವವ) ಜಯವನ್ನು ಗಳಿಸಿದವ.

ಜಿತಶತ್ರು ವೈರಿಗಳನ್ನು ಗೆದ್ದವ.

ಜಿತಾಕ್ಷ ಇಂದ್ರಿಯಗಳನ್ನು ಗೆದ್ದವ; ಋಷಿ; ಅಕ್ಷಕುಮಾರನನ್ನು ಗೆದ್ದವ; ಹನುಮಂತ.

ಜಿತಾಂಗಜ ಕಾಮನನ್ನು ಜಯಿಸಿದವ, ಶಿವ.

ಜಿತೇಂದ್ರಿಯ ಇಂದ್ರಿಯ ಸಂಯಮಿ.

ಜಿತ್ಯ ಜಯಿಸಲು ಸಾಧ್ಯ; ನೇಗಿಲ ಕುಳ.

ಜಿತ್ವರ ಜಯಶೀಲ.

ಜಿದ್ದು ಹಟ; ಸೇಡು, ಮುಯ್ಯಿ, ಜಿಡ್ಡು.

ಜಿನ ಸಂಸಾರವನ್ನು ಜಯಿಸಿದವ—ಬುದ್ಧ; ವಿಷ್ಣು; ಜೈನ ಸಾಧು, ಅರ್ಹಂತ.

—ಈಶ್ವರ ಜಿನರಲ್ಲಿ ಶ್ರೇಷ್ಠ.

—ಗೃಹ ಬಸದಿ, ಜೈನರ ಗುಡಿ.

—ಪ ಜಿನೇಶ್ವರ.

ಜಿನಗು(ಜಿನುಗು,ಜಿಣಗು) ಒಸರು, ಸುರಿಯು.

ಜಿನಸು (ಜೀನಸು) ಸಾಮಾನು, ಒಡವೆ.

ಜಿನಿಗಿಸು ಕರಗಿಸು, ಜಿನುಗುವಂತೆ ಮಾಡು; ಶಕ್ತಿಕುಂದು.

ಜಿನುಗು (ಜಿನುಂಗು) ಝೇಂಕರಿಸು; ಒಸರು; ಅಲ್ಪವೃಷ್ಟಿ, ಹನಿ ಮಳೆ.

—ಮತಿ ಅಲ್ಪಬುದ್ಧಿ.

ಜಿಪುಣ ಲೋಭಿ, ಜೀನ.

ಜಿಬರು ಕಣ್ಣಿನ ಸಿಕ್ಕು, ಕಣ್ಣಿನ ಕೊಳೆ, ಪಿಚ್ಚು.

ಜಿಬಳ ಬೇಯಿಸಿದ ಎಳೆ ಅಡಿಕೆ, ಬೆಟ್ಟೆ.

ಜಿಬ್ಬ ತುಂಡು ಅಂಗಿ, ಅಂಗಿ, ಷರಾಯಿ, ಕುಡತಿ.

ಜಿಬ್ಬು ಅಂಟುತನ; ಸೊನೆ.

ಜಿರಲೆ (ಜಿರ್ಲೆ) ಶತಪದಿ; ಎಕ್ಕಳೆ.

ಜಿಲೇಬಿ ಒಂದು ಸಿಹಿ ತಿಂಡಿ.

ಜಿಲ್ಲಾ (ಜಿಲ್ಲೆ) ಹಲವೊಂದು ಹಳ್ಳಿ ಊರುಗಳ ಸಮುದಾಯ, ತಾಲೂಕುಗಳ ಗುಂಪು.

—ದಾರ ಜಿಲ್ಲೆಯ ಒಬ್ಬ ಅಧಿಕಾರಿ.

ಜಿಲ್ಲಿ ಮಡಕೆಗಳ ತೂತು.

ಜಿಲ್ಲು ಗದ್ದಲ, ತಂಟೆ; ತಣ್ಣೀರು ಮುಟ್ಟಲು ಬರುವ ಸಂಕೋಚ; ಜುಮ್ಮೆನಿಸುವುದು.

ಜಿಷ್ಣು ಜಯಿಸುವ ಸ್ವಭಾವದವ; ಅರ್ಜುನ; ಇಂದ್ರ; ವಿಷ್ಣು; ಸೂರ್ಯ.

ಜಿಹ್ಮ ಕಪಟ; ಡೊಂಕು; ಮಂದ; ಮೂರ್ಖ.

—ಗ ಡೊಂಕಾಗಿ ಹೋಗುವ, ಸರ್ಪ; ಕುಟಿಲ.
ಜಿಹ್ವಾ (ಜಿಹ್ವೆ) ನಾಲಗೆ.
—ಆಡಂಬರ ಬಾಯಿಮಾತು, ಬಡಾಯಿ.
ಜಿಂಕೆ ಹರಿಣ, ಚಿತ್ರಾಂಗ, ಚಿಗರಿ.
ಜಿಂಗಿ ಮತ್ತತೆ, ಅಮಲೇರಿಕೆ.
ಜಿಂದಗಿ ಸೊತ್ತು, ಚರಸೊತ್ತು.
ಜಿಂದಣಿ (ಜಿಂದಗಿ).
ಜೀಕು ತೂಗಾಡಿಸು; ನಡೆಯುವಾಗ ಮೆಟ್ಟು ಮಾಡುವ ಸದ್ದು.
ಜೀಟು ಊತು, ತಡೆ, ಆಧಾರ.
ಜೀತ ಜೀವಿತ; ದುಡಿತ; ಗೆಯ್ಮೆ; ವರ್ಷದ ಸಂಬಳದ ಮೇಲೆ ದುಡಿವವ.
—ಗಾರ ಕೆಲಸದವ, ಶರೀರ ಶ್ರಮಗಾರ.
ಜೀನ ಮುದುವ, ಹೆಳವ; ಲೋಭಿ; ತಡಿ.
—ಶಾಲೆ ಯುದ್ಧಸಾಮಗ್ರಿ ಇಡುವ ಮನೆ.
ಜೀನಸು (ಜಿನಸು) ಸಾಮಾನು.
ಜೀನು ಕುದುರೆ ಮೇಲೆ ಹಾಕುವ ತಡಿ; ಹತ್ತಿ ಕಾಳು ಬೇರೆ ಮಾಡುವ 'ಜಿನ್'.
—ಗಾರ ಸಮಗಾರ, ಜೀನು ತಯಾರಿಸುವವ; ಬಣ್ಣಗಾರ.
ಜೀಮೂತ ವಿರಾಟನಲ್ಲಿ ಭೀಮನಿಂದ ಹತನಾದ ಒಬ್ಬ ಜಟ್ಟಿ; ಮೋಡ; ಪರ್ವತ; ದೇವತಾಳೆ ಮರ.
—ಲತೆ ಮೋಡವೆಂಬ ಬಳ್ಳಿ.
—ವಾಹನ ಇಂದ್ರ; ನಾಗಾನಂದ ನಾಟಕದ ಕಥಾನಾಯಕ.
ಜೀಯ (ಜೀಯ್ಯ) ಸ್ವಾಮಿ, ಅಯ್ಯಾ.
—ನೆ ಜೀಯ್ಯ ಎಂದು.
ಜೀರ್ ತಪಿಸು, ಮರುಗು; ಉರುಳಿಂದ ಬಿಗಿ.
ಜೀರ ಜೀರಿಗೆ; ಕತ್ತಿ, ತಳವಾರು; ಚಲಾಕು.
ಜೀರಕ (ಜೀರಿಗೆ).
ಜೀರು (ಚೀರು) ಕಿರಿಚು.
ಜೀರ್ಕೊಳವಿ ಜಲಯಂತ್ರ, ಪಿಚಕಾರಿ, ಜೀಕಳಿ.
ಜೀರ್ಣ ಅರಗುವಿಕೆ, ಪಚನ; ಮುದಿಯಾದ, ಶಿಥಿಲವಾದ, ಬಲಹೀನವಾದ.
—ಇಸು ಪಚನಗೊಳಿಸು, ಅರಗಿಸು.
—ಉದ್ಧಾರ ಹಾಳಾದ್ದನ್ನು ಸರಿಮಾಡು, ದುರಸ್ತಿಮಾಡು.
—ಕಾರಿ ಪಚನಕ್ಕೆ ಸಹಾಯಕ.
—ಕೋಶ ಆಹಾರಕೋಶ, ಕರುಳು ಮೊದಲಾದ ಪಚನೇಂದ್ರಿಯಗಳು.
ಜೀರ್ತಿ ಜೀರ್ಣವಾಗುವಿಕೆ, ಪಚನಶಕ್ತಿ.
ಜೀವ್ ಬಾಳು, ಬದುಕು.
ಜೀವ ದೇಹಾಭಿಮಾನಿಯಾದ ಆತ್ಮ, ಪ್ರಾಣ; ಪ್ರಾಣಿ; ಜೀವನೋಪಾಯ, ಉದ್ಯೋಗ; ಮಾತು; ನೀರು; ಕುದುರೆ; ಪ್ರಧಾನ, ಮುಖ್ಯ; ಬಿಲ್ಲಿನ ಹಗ್ಗ; ಸತ್ವ, ತಿರುಳು.
—ಕ (ಜೀವಗ) ಜೀವಿಸುವ; ದಾಸ; ಜಿನಸಾಧು; ಹಾವಾಡಿಗ, ಹಾವುಗಾರ.
—ಕಳೆ ಜೀವಿತದ ಚಿಹ್ನೆ.
—ಚಯ ಜೀವರಾಶಿ.
—ತ್ಯಾಗ ಸಾವು; ನಿರ್ವಾಣಗೊಳ್ಳುವಿಕೆ.
—ದಾನ ಬದುಕಿಸುವಿಕೆ.
—ಧನ ಜಾನುವಾರು ಸಂಪತ್ತು.
ಜೀವತೋಕೆ ಬದುಕಿರುವ ಮಕ್ಕಳುಳ್ಳವಳು.
ಜೀವನ ಬಾಳಿಕೆ; ಉದ್ಯೋಗ, ನೀರು.
—ಅಂಶ ಊಟಕ್ಕಾಗಿ ಕೊಡುವ ದ್ರವ್ಯ, ಪೋಟಗೆ.
—ಉಪಾಯ ಹೊಟ್ಟೆಹೊರೆಯುವುದು.
ಜೀವನ್ಮುಕ್ತಿ ಹುಟ್ಟುವಿಕೆಯಿಂದ ಬಿಡುಗಡೆ, ಮೋಕ್ಷ.
ಜೀವಮಾನ ಬಾಳ್ವೆ, ಬಾಳಿರುವಷ್ಟು ಕಾಲ.
ಜೀವರತ್ನ ಉತ್ಕೃಷ್ಟ ಜೀವಿ.
ಜೀವಲ ಋತುಪರ್ಣನ ಸಾರಥಿ.

ಜೀವಶ್ರುವ ಬದುಕಿದ್ದರೂ ಸತ್ತಂತಿರುವ; ಬರಿಯ ಎಲುಬಷ್ಟೇ ಉಳಿದಿರುವ.
ಜೀವಹಿಂಸೆ ಗಾಸಿಮಾಡುವುದು, ನೋಯಿಸುವಿಕೆ.
ಜೀವಂತ ಜೀವಸಹಿತವಾದ; ಬದುಕಿರುವ.
ಜೀವಾತು ಪ್ರಾಣ ಉಳಿಸುವ ಮದ್ದು; ವಿಟಮಿನ್, ಜೀವಸತ್ವ.
ಜೀವಾತ್ಮ ಶರೀರವನ್ನು ನಡಸುವ ಶಕ್ತಿ.
ಜೀವಾಳ ಸಾರಯುಕ್ತವಾದುಡು, ಮುಖ್ಯವಾದುದು; (ವಾದ್ಯದಲ್ಲಿ) ಸ್ವರ ಹೊರಡಿಸುವ ಭಾಗ.
ಜೀವಾಂತ ಜೀವ ಹೋಗುವ ತನಕ.
ಜೀವಿ ಬದುಕಿರುವ ವಸ್ತು, ಜೀವವಿರುವುದು, ಪ್ರಾಣಿ.
—ಕೆ ಜೀವನೋಪಾಯ.
—ತ ಬಾಳ್ವೆ, ಬದುಕು.
—ಸು ಬದುಕು.
ಜೀವೆ (ಜೀವ) ಹೆದೆ, ಬಿಲ್ಲಿನ ಹಗ್ಗ.
ಜುಗುತಿ (ದ್ಭ) ಯುಕ್ತಿ (ಸಂ), ಉಪಾಯ.
ಜುಗಾರು ದ್ಯೂತ, ಜೂಜು.
ಜುಗುಪ್ಸೆ (ಜಗುಪ್ಸೆ) ನಿಂದೆ; ಅಸಹ್ಯ, ಹೇಸಿಕೆ.
ಜುಗುಮ (ದ್ಭ) ಯುಗ್ಮ (ಸಂ), ಜೋಡಿ, ಜತೆ.
ಜುಗುಲ್ ಹೊರಟುಹೋಗು.
ಜುಟ್ಟು ಶಿಖಿ, ಚಂಡಿಕೆ, ಜಡೆ; ಪ್ರಾಣಿಗಳ ತಲೆಯ ಮೇಲಿರುವ ಕೂದಲಿನ ಕುಚ್ಚು.
ಜುಣುಗು ಕುಗ್ಗು, ಮುದುಡು; ಜಾರು; ಕಳೆದುಹೋಗು.
ಜುದ್ಧ (ದ್ಭ) ಯುದ್ಧ (ಸಂ).
ಜುಮ್ಮ ಕೈಕಾಲು ಹಿಡಿತ, ಮೈ ಹಿಡಿತ.
ಜುಮ್ಮನೆ ಘಕ್ಕನೆ; ರೋಮಾಂಚನವಾಗುವಂತೆ, ಕೂದಲು ನೆಟ್ಟಗಾಗುವಂತೆ.
ಜುಮ್ಮು ಜೂಜು; ದ್ಯೂತ.
ಜುಮ್ಲಾ (ಜುಮಲಾ), ಒಟ್ಟು, ಮೊತ್ತ.
ಜುರಿ ಸುರಿ.
ಜುರುಮಾನೆ (ಜುಲುಮಾನೆ) ದಂಡ.
ಜುಲಾಬು ಭೇದಿ, ಮಲವಿಸರ್ಜನೆ.
ಜುಲುಮೆ ಬಲೋದ್ಬಂಧ; ಹಿಂಸೆ.
ಜುಷ್ಟ ಸೇವಿಸಲ್ಪಟ್ಟ; ಉಚ್ಛಿಷ್ಟ, ಎಂಜಲು.
ಜುಹೂ ಮುತ್ತುಗದ ಕಟ್ಟಿಗೆಯಿಂದ ಮಾಡಿದ ಯಜ್ಞಪಾತ್ರೆ.
ಜುಂಗು ಶರೀರದ ಗುಪ್ತಭಾಗದ ರೋಮ; ಚುಂಗು, ನಾರು, ಕತ್ತ.
ಜುಂಜು ಕೋಳಿಯ ಜುಟ್ಟು, ಕೆಂಬಣ್ಣ.
—ತಲೆ ಕೆಂಪಾದ ತಲೆ.
ಜುಂಜುರು ಗುಂಗುರು, ಸುರುಳಿ ಕೂದಲು.
ಜುಂಜುಳ್ಳಿ ಕೆಂಪಾದ.
ಜುಂಜೂರಿ ಗುಡುಗುಡಿ, ಹುಕ್ಕಾ.
ಜೂಗಳಿಸು ತೂಕಡಿಸು; ಮೆಲುನಡೆಯಿಂದ ಸಾಗು, ಒಲೆದಾಡುತ್ತ ನಡೆ.
ಜೂಗು (ದ್ಭ) ದ್ಯೂತ (ಸಂ); ತೂಗಾಡು, ತೂಗು, ಒಲೆಯು.
ಜೂಜು (ದ್ಭ) ದ್ಯೂತ (ಸಂ), ಪಂದ್ಯ, ಜುಗಾರು.
—ಗಾರ ಜೂಜಾಡುವವ.
ಜೂಟ ಜುಟ್ಟು (ದ್ಭ), ಜಡೆ; ಮಕ್ಕಳ ಮೈಬಲ; ತ್ರಾಣವುಳ್ಳ.
ಜೂತಿ ವೇಗ, ಚುರುಕು; ಚೇತನ; ಕೆರಹು.
ಜೂದಾಳಿ ಆಟಗಾರ; ಜೂಜುಗಾರ.
ಜೂಪರು ಜಿನುಗು ಮಳೆ, ಹನಿ ಮಳೆ, ಹನಿತ.
ಜೂಲು ಉದ್ದವಾದ ಕೂದಲು; ಪ್ರಾಣಿಗಳ ಮೈಮೇಲೆ ಹಾಕುವ ಪಾವುಡ.
—ನಾಯಿ ಉದ್ದವಾದ ಕೂದಲಿರುವ ನಾಯಿ.
ಜೂಳಿ ಜೂಲುಕೂದಲು, ರೋಮವೃಂದ; ಗಿಂಡಿಯ ಮೂತಿ, ಪಾತ್ರೆಯ ಸೊಂಡಿಲು.
ಜೂಳೆಯ ಬಣ್ಣದ ಜೇಡಿಮಣ್ಣಿನಿಂದ ಮಾಡಿದ ತಿಲಕ, ಗೋಪಿಚಂದನ.

ಜೃಂಭ ಆಕಳಿಕೆ, ಮುಖವಿಕಾಸ; ವಿಕಸನ; ವೃದ್ಧಿಯಾಗುವಿಕೆ.
—ಣ ಆಕಳಿಕೆ; ವಿಕಾಸ.
ಜೃಂಭಿತ ತೆರೆದ, ಅರಳಿದ.
ಜೆರ್ಕು಼ ಪರಚು, ಕೆರೆ.
ಜೆಂಗಿ ಕಾಳಗಕ್ಕೆ ಸಂಬಂಧಿಸಿದ; ವನ್ಯ, ಕಾಡು ಸ್ವಭಾವ; ಮುತ್ತಿಗೆ; ಬಹಳ, ಅತಿಶಯ.
ಜೇಗೆಯ್ ಬಿಲ್ಲನ್ನು ಠೇಂಕರಿಸು.
ಜೇಡ ನೇಕಾರ; ಜೇಡರ ಹುಳು, ಶಲಭ.
ಜೇಡಿ ಆವೆಮಣ್ಣಿನ ಜಾತಿ, ಬಿಳಿ ಆವೆಮಣ್ಣು, ಗೋಪಿಚಂದನ.
ಜೇತಾರ ಜಯಶಾಲಿ, ಜಯಿಸುವವ.
ಜೇನು ಮಧು, ಹೂಗಳ ಮಕರಂದದಿಂದ ನೊಣಗಳು ಸಂಗ್ರಹಿಸುವ ಒಂದು ಬಗೆಯ ಸಕ್ಕರೆ.
ಜೇನೆಯ್ ಜೇನುತುಪ್ಪ.
ಜೇನ್ನೊಣ ಜೇನು ಗಳಿಸುವ ನೊಣ.
ಜೇಮುನ (ಜೇವಣ) ಊಟ, ಭೋಜನ.
ಜೇಯ ಜಯಿಸಲು ಯೋಗ್ಯವಾದ.
ಜೇರು ದುರ್ಬಲ, ಶಕ್ತಿಹೀನ; ದಣಿದ.
ಜೇರೇಳು ಕಿರಿಚು; ಅಶಕ್ತಿ, ನಿರ್ಬಲತೆ.
ಜೇವಡೆ ಜೇ ಎಂದು ಧ್ವನಿಕರಿಸು; ಬಿಲ್ಲಿನ ಹೆದೆಯನ್ನು ಠೇಂಕರಿಸು.
ಜೇವಣ (ನೋಡು: ಜೇಮುನ).
ಜೇವಣಿಗೆ ಮಾಧುರ್ಯ, ಮನೋಹರತೆ.
ಜೇಷ್ಠ (ಜ್ಯೇಷ್ಠ) ಹಿರಿಯ; ಚಾಂದ್ರಮಾನ ವರ್ಷದ ಮೊದಲನೆ ತಿಂಗಳು.
ಜೇಷ್ಠೆ (ಜ್ಯೇಷ್ಠೆ) ಜ್ಯೇಷ್ಠಾದೇವಿ.
ಜೇಂಕರಿಸು ಝೇಂಕಾರಮಾಡು.
ಜೇಂಗರೆ (ಜೇನ್ಗರೆ) ಜೇನಿನ ಮಳೆ ಸುರಿ; ಸವಿಯೂಟ.
ಜೈತ್ರ ವಿಜಯಶೀಲ; ಗೆಲ್ವ.
—ರಥ ವಿಜಯಶೀಲ ರಥ.

ಜೈನ ಜಿನಸಂಬಂಧವಾದ; ಮಹಾವೀರನ ಅನುಯಾಯಿಗಳ ಮತ.
ಜೈನಾಗಮ ಜೈನರ ತತ್ವಶಾಸ್ತ್ರ.
ಜೈಮಿನಿ ಮೀಮಾಂಸ ಸೂತ್ರಗಳನ್ನು ಬರೆದ ಒಬ್ಬ ಮುನಿ; ಭಾರತವನ್ನು ಬರೆದವರಲ್ಲಿ ಒಬ್ಬ.
—ಭಾರತ ಜೈಮಿನಿ ಬರೆದ ಭಾರತ; ಲಕ್ಷ್ಮೀಶ ಕವಿಯ ಭಾರತ.
ಜೈವಾತೃಕ ಚಂದ್ರ; ಔಷಧ; ದೀರ್ಘಾಯುಷಿ.
ಜೈಸು (ಜಯಿಸು) ಗೆಲ್ಲು.
ಜೊತೆ (ಜತೆ) ಸೇರಿಕೆ; ಎಣೆ, ಸಾಟ; ಓರಗೆ.
—ಗಾರ ಸೇರಿಕೆಯಾದವ, ಸಂಗಾತಿ; ಗೆಳೆಯ.
ಜೊತ್ತು ಜತೆ, ಜೋಡಿ; ಸಾಲು; ಸಮೂಹ.
ಜೊನ್ನ(ದ್ಭ)ಜ್ಯೋತ್ಸ್ನ(ಸಂ),ಬೆಳದಿಂಗಳು.
ಜೊನ್ನವಕ್ಕಿ ಚಕೋರ.
ಜೊನ್ನೆ (ನೋಡು: ದೊನ್ನೆ).
ಜೊಮ್ಮನೆ ಜೇಂಕರಿಸುತ್ತ.
ಜೊಮ್ಮು ಜೊಂಪು; ಆಲಸ್ಯ; ನಿದ್ರೆ.
ಜೊಲ್ಲು ಬಾಯಲ್ಲಿ ಹುಟ್ಟುವ ಲಾಲಾರಸ.
ಜೊಲ್ಲೆಯ ತುರುಬಿನ ಕುಡಿ; ಜೊಲ್ಲೆಹ; ಜೊಂಕೆ.
ಜೊಳ್ಳು ಜಳ್ಳು, ಟೊಳ್ಳು; ಕೆಲಸಕ್ಕೆ ಬಾರದುದು.
ಜೊಂಗುಳಿ ಮೂರ್ಛೆ, ವಿಸ್ಮೃತಿ, ಮೈಮರೆತ.
ಜೊಂಡು ಜೊಂಪ; ಹಾವಸೆ; ಜಳ್ಳಾದ ವಸ್ತು, ಬೆಂಡು.
ಜೊಂಪು ನಡುಗಿಸು; ಮೈಮರೆತ; ನಡುಗುವಿಕೆ; ಆವರಿಸುವಿಕೆ; ಮುಳುಗುವಿಕೆ; ನಿದ್ರೆ.
—ಇಸು ಮುಂದೆ ಬಾಗು; ಚೆಚ್ಚಿಬೀಳು; ಮುಂದೆ ಕೈಹಾಕು; ನಿದ್ರಿಸು.
ಜೊಂಪೆ (ಜೊಂಪ) ಗೊಂಚಲು; ಮಂಟಪ.

ಜೋಕಾಲಿ (ಜೋಕಾಲೆ) ಹಗ್ಗದ ಉಯ್ಯಾಲೆ; ತೂಗುಮಂಚ.
ಜೋಕು ಠೀವಿಯ ರೀತಿ, ಒಯ್ಯಾರ; ಉಡುಗೆ ನಡಿಗೆಯ ಬೆಡಗು; ಹಂಚಿಕೆ.
—ಗಾರ ಠೀವಿಯವ; ಹೊಂತಗಾರ; ಬೆಡಗುಗಾರ.
ಜೋಕೆ ಎಚ್ಚರಿಕೆ, ಜಾಗ್ರತೆ; ಚಮತ್ಕಾರ, ಬುದ್ಧಿವಂತಿಕೆ; ಪ್ರೌಢಿಮೆ; ಕ್ರಮ.
ಜೋಗ (ದ್ಭ) ಯೋಗ (ಸಂ), ಸೇರಿಕೆ; ಉಪಾಯ; ಧ್ಯಾನ; ಚಿತ್ತವೃತ್ತಿನಿರೋಧ; ಆತ್ಮನು ಪರಮಾತ್ಮನಲ್ಲಿ ಸೇರುವುದು; ದೇಹದ ಸ್ಥಿರತೆ.
ಜೋಗರಿಸು ಮರಗಟ್ಟು; ಮೈಮರೆ, ಎಚ್ಚರ ತಪ್ಪು; ಸ್ಮೃತಿ ಕಳೆಯು.
ಜೋಗಿ (ದ್ಭ) ಯೋಗಿ (ಸಂ); ಯೋಗಾಭ್ಯಾಸಿ, ತಪಸ್ವಿ.
—ಣಿ (ದ್ಭ) ಜೋಗಿತಿ, ಯೋಗಿನಿ.
ಜೋಗಿಸು ಯೋಗಿಸು, ಜತೆಸೇರಿಸು, ಸಿದ್ಧಿಗೊಳಿಸು.
ಜೋಗು ಜವುಗು; ಜಲಪಾತ, ಅಬ್ಬಿ; ಜೋಮು, ಮರಗಟ್ಟುವಿಕೆ.
ಜೋಗುಳ ಲಾಲಿ; ಚಿಕ್ಕ ಮಕ್ಕಳ ಸಲುವಾಗಿ ಹಾಡುವ ಪದ.
ಜೋಡ ಸಿತಗ, ಹಾದರಿಗ.
ಜೋಡಣೆ ಸೇರಿಕೆ, ಹೊಂದಿಕೆ.
ಜೋಡಿ ಜತೆ; ಜೋಲಿ; ಪಾದಯುಗ; ಪ್ರಾಣಿಗಳ ಸಂಭೋಗ.
—ಕೆ ಸೇರಿಕೆ, ಹೊಂದಿಕೆ.
—ಸು ಸೇರಿಸು; ಹೊಂದಿಸು.
ಜೋಡು ಕವಚ, ಅಂಗರಕ್ಷೆ; ಎಕ್ಕಡ; ಎಣೆ, ಸಾಮ್ಯ, ಸಾಟಿ; ಎರಡು.
ಜೋಡೆ ಸಿತಗೆ, ಹಾದರಗಿತ್ತಿ, ಸೂಳೆ.
ಜೋತಿ (ದ್ಭ) ಜ್ಯೋತಿ (ಸಂ).
ಜೋತಿಷ ಜೋಯಿಸ; ಗ್ರಹಗಳ ಗತಿಯನ್ನು ಎಣಿಸಿ ಹೇಳುವ ಶಾಸ್ತ್ರ.
ಜೋತಿಷ್ಕ ಗ್ರಹಗತಿಯನ್ನು ಹೇಳುವವ.
ಜೋತು ಜೋತಾಡಿಕೊಂಡು; ಜೋಲುವ ವಸ್ತು.
ಜೋದ (ದ್ಭ) ಯೋದ್ಧ (ಸಂ), ಯುದ್ಧವೀರ; ಮಾವುತ, ಮಾವಟಿಗ.
—ಕಾಳಗ ಮಾವಟಿಗರ ಯುದ್ಧ.
ಜೋನಿ ನೀರಾಗಿರುವಿಕೆ; ನೀರುಬೆಲ್ಲ.
ಜೋನೆಗ ಯವನಕ (ಸಂ), ತುರುಕ, ಯವನ.
ಜೋಬ ಜಡಜೀವ, ಆಲಸಿ.
ಜೋಪಡಿ (ಜೋಂಪಡಿ), ಗುಡಿಸಿಲು.
ಜೋಪಾನ ರಕ್ಷಣೆ, ಸಾಕುವಿಕೆ.
ಜೋಮಾಲೆ ತೂಗುವ ಮಾಲೆ; ಬೈಗಳ ಸರ.
ಜೋಮು ಮಾಂದ್ಯ, ಜಡತೆ, ನಿಶ್ಚೇಷ್ಟೆ; ಮೈಮರೆತ.
ಜೋಯಿಸ (ಜೋತಿಷ್ಕ).
ಜೋರು ಹನಿ, ಒಸರು; ಇಳಿ, ಸೋರು; ಒಸರುವಿಕೆ; ಹನಿತ; ಕೊಳೆ, ಇಳಿದ ಕೊಳೆ; ಬಿಲ; ಭರ, ರಭಸ.
ಜೋಲ್ (ಜೋಲು) ತೂಗು; ಶಕ್ತಿಕುಂದು, ಬಗ್ಗು, ಸಡಿಲಾಗು.
ಜೋಲಿ (ಜೋಳಿ) ಸಾವಕಾಶ; ಆಧಾರ; ಸಂಬಂಧ; ವ್ಯವಹಾರ; ತೂಗಾಟ; ತಳ್ಳುವಿಕೆ; ಕೂಟ, ಭೋಗ.
ಜೋವಳಿಯ ಸಮರ್ಥ, ವೀರ.
ಜೋಷ ಸುಖ; ಹೊಗಳಿಕೆ; ಮೌನ.
ಜೋಷೆ ಸ್ತ್ರೀ, ಹೆಂಗಸು.
ಜೋಹ (ದ್ಭ) ಯೋಗ (ಸಂ), ಸಂಬಂಧ; ವೇಷ, ಸೋಗು.
ಜೋಹರ ಕಡಮೆಯವರು ಮೇಲಿನವರಿಗೆ ವಂದಿಸುವಾಗ ಬಳಸುವ ಮಾತು; ಜೀಯ.
ಜೋಳ ಒಂದು ಧಾನ್ಯ.

—ಪಾಳಿ ಸಲಿಸಬೇಕಾದ ಜೋಳದಪಾಲು, ಧನಿಯ ಋಣ.
ಜೋಳಿ (ನೋಡು: ಜೋಡಿ).
ಜೋಳಿಗೆ ಚೀಲ, ಭಿಕ್ಷೆಯ ಚೀಲ.
ಜ್ಞ ತಿಳಿದವ, ಅರಿತವ.
—ತೆ ತಿಳಿವಳಿಕೆ.
—ಪ್ತಿ ಬುದ್ಧಿ, ತಿಳಿವಳಿಕೆ.
ಜ್ಞಪಿತ ತಿಳಿದ, ಪರಿಶೀಲಿಸಿದ.
ಜ್ಞಾತ ತಿಳಿದ, ಗೊತ್ತಾದ.
ಜ್ಞಾತಿ ತಂದೆಯ ಸಂಬಂಧಿ; ತಂದೆಯ ವಂಶದವ, ದಾಯಾದಿ, ಸಗೋತ್ರಜ.
ಜ್ಞಾನ ತಿಳಿವು; ಪರಮಾತ್ಮನ ವಿಷಯವಾದ ತಿಳಿವು.
—ಇಸು ವಿಚಾರಿಸು, ಪರಿಶೀಲಿಸು; ವಿವೇಚಿಸು.
—ಚಕ್ಷು ಜ್ಞಾನದೃಷ್ಟಿ, ಒಳಗಣ್ಣು, ವಿವೇಕದಿಂದ ತಿಳಿಯುವ ಬಗೆ.
—ಧನ ಜ್ಞಾನವೇ ಸಂಪತ್ತಾಗಿರುವಿಕೆ.
—ಮಾರ್ಗ ಯೋಗಮಾರ್ಗ, ಪರಮಾತ್ಮನನ್ನು ತಿಳಿಯುವ ವಿಧಾನ.
—ವಂತ ಜ್ಞಾನಿ, ಬಲ್ಲಿದ.
ಜ್ಞಾನಮಂಟಪ ಸೆರೆಮನೆ, ಬುದ್ಧಿಕೊಡುವ ಸ್ಥಳ.
ಜ್ಞಾನಿ ತಿಳಿದವ, ಬಲ್ಲವ; ವಿಚಾರವಂತ.
ಜ್ಞಾಪಕ ನೆನಪು, ಸ್ಮರಣೆ.
ಜ್ಞಾಪಿಸು ನೆನಪುಮಾಡು, ಸ್ಮರಿಸು.
ಜ್ಞೇಯ ತಿಳಿವಿಗೆ ಬಂದುದು.
ಜ್ಯಾ ಬಿಲ್ಲಿನ ಹಗ್ಗ; ತಾಯಿ; ಭೂಮಿ.
—ರವ ಬಿಲ್ಲಿನ ಠೇಂಕಾರ.
ಜ್ಯಾಯ ಹಿರಿಯ; ಬಹು ವೃದ್ಧ; ಹಿರಿಮಗ, ಚೊಚ್ಚಲ ಮಗ.
ಜ್ಯೇಷ್ಠ ಹಿರಿಯ, ಅಣ್ಣ; ದಾರಿದ್ರ್ಯದೇವತೆ; ಒಂದು ನಕ್ಷತ್ರ; ಒಂದು ತಿಂಗಳ ಹೆಸರು.
ಜ್ಯೇಷ್ಠೆ ಜ್ಯೇಷ್ಠಾದೇವಿ; ಹಿರಿಯಳು, ಅಕ್ಕ.
ಜ್ಯೋತಿ (ಜ್ಯೋತಿಸ್) ಬೆಳಕು, ಕಾಂತಿ.
—ರ್ಮಯ ಬೆಳಕು ತುಂಬಿದ, ಪ್ರಕಾಶಮಾನವಾದ.
ಜ್ಯೋತಿಷ ನಕ್ಷತ್ರ ಗ್ರಹಗಳನ್ನು ಕುರಿತಾದ ಒಂದು ಶಾಸ್ತ್ರ.
ಜ್ಯೋತ್ಸ್ನ (ಜ್ಯೋತ್ಸ್ನೆ) ಬೆಳುದಿಂಗಳು.
ಜ್ವರ ಮೈ ಬಿಸಿಯಾಗುವಿಕೆ; ಬೇನೆಯ ಒಂದು ಚಿಹ್ನೆ.
ಜ್ವಲ ಉರಿಯುವುದು; ಹೊಳೆಯುವುದು; ಉರಿ, ಬೆಂಕಿನಾಲಗೆ.
—ನ ಅಗ್ನಿ, ಉರಿವಿಕೆ, ದಹನ.
ಜ್ವಲಿಸು ಉರಿ.
ಜ್ವಾಲಾ (ಜ್ವಾಲೆ) ಬೆಂಕಿನಾಲಗೆ, ಉರಿ; ನೀಲಧ್ವಜನ ಹೆಂಡತಿ.
ಜ್ವಾಲಾಮುಖಿ ಅಗ್ನಿಪರ್ವತ; ಭೂಗರ್ಭ; ಬೆಂಕಿ ಕಾರುವ ಬೆಟ್ಟ, ಉರಿ ಬೆಟ್ಟ.

## ಝ

ಝಂಕ್ಕಿಸು ದೊಡ್ಡ ಕೆಲಸಮಾಡು.
ಝಗಝಗ ಹೊಳೆಯುವಿಕೆ, ಪ್ರಕಾಶಿಸುವಿಕೆ, ಥಳಥಳಿಸುವಿಕೆ.
ಝಂಗೆ ನಿಲುವಂಗಿ; ಪ್ರಕಾಶ; ಕಾವು.
ಝಟಿತಿ ಝಡಿತೆ, ಅವಸರ, ವೇಗ.
ಝಣತ್ ಜಣರೆನ್ನುವಿಕೆ, ಗೆಜ್ಜೆ ಜಣರು.
—ಕಾರ ಝಣರು; ಠೇಂಕಾರ.
ಝಣನ ಕಂಕಣ.
ಝಣರು ಝಣಝಣ ಸದ್ದು.
ಝಣು ಶಹಭಾಸ್.
ಝರೀ (ಝರಿ) ಗಿರಿ ನದಿ; ಬೆಟ್ಟದಿಂದಿಳಿವ ಹೊಳೆ, ಅಬ್ಬಿ.

ಝುಲ್ಲರಿ ಜಾಲರಿ; ಮಕರತೋರಣ; ಒಂದು ಬಗೆಯ ವಾದ್ಯ; ಡೋಲು.
ಝುಲ್ಲಿ ಜಾಲರಿ; ಸಾಲು; ಸಮೂಹ.
ಝುಷ ಮೀನು.
—ಕೇತು ಮೀನು ಪತಾಕೆಯಾಗಿರುವವ, ಕಾಮ.
ಝುಳಪು (ಝುಳಕ) ಪ್ರಕಾಶ, ಉರಿ; ಹೊಳಪು.
—ಇಸು ಹೊಳೆಯಿಸು.
ಝುಳವಟಿಗೆ ಪ್ರಕಾಶ.
ಝುಂಕಿಸು ಗದರಿಸು.
ಝುಂಕೆ ಹೀನಾಯ, ನಿಂದಿಸುವಿಕೆ.
ಝುಂಝಾನಿಲ ಬಿರುಗಾಳಿಯೊಡನೆ ಬರುವ ಮಳೆ, ಮಳೆಯೊಡನೆ ಬರುವ ಗಾಳಿ.
ಝುಂಪೆ ಐದು ಮಾತ್ರೆಗಳ ಕಾಲಕ್ಕೆ ಎರಡೆರಡು ಪೆಟ್ಟುಳ್ಳ ತಾಳ.
ಝಾಡನೆ ಕಸಬರಿಗೆ; ಭೇದಿ.
ಝಾಡಿಒತ್ತೊತ್ತಾಗಿರು; ಕೀಳುತರದಕಂಬಳಿ
ಝಾಡಿಸು (ಜಾಡಿಸು) ಗುಡಿಸು; ಕೊಡಹು.
ಝಿಲ್ಲಿಕಾ ಒಂದು ಬಗೆಯ ಕಾಡು ನೊಣ; ಜಿಮ್ಮಂಡೆ, ಮೊರವನ ಹುಳು; ಒಂದು ದೇಶ.
ಝಿಲ್ಲೀ ಒಬ್ಬ ಯಾದವ ವೀರ.
ಝೇಂಕಾರ ಬಿಲ್ಲಿನ ದನಿ; ತುಂಬಿಯ ಕೂಗು.
—ಇಸು ತುಂಬಿ ಕೂಗುವುದು; ಝೇಂಕಾರ ಮಾಡು.
ಝೋಂಪಿಸು (ನೋಡು: ಜೋಂಪಿಸು).
ಝೌಲಿಕ ಜೋಳಿಗೆ, ಚೀಲ, ಸಂಚಿ.

## ಟ

ಟಕ್ಕು (ನೋಡು: ಠಕ್ಕು), ಮೋಸ.
ಟಗರು ಗಂಡು ಕುರಿ.
ಟಣಕ್ಕನೆ (ಟಣ್ಣನೆ) ಟಣ್ ಎಂಬ ಸದ್ದಾಗುವಂತೆ ಜಿಗಿಯುವುದು.
ಟಪ್ಪಾಲು ಅಂಚೆ, ಡಾಕು.
ಟಮುಕಿ (ಟಮಿಕಿ) ತಮಟೆ ವಾದ್ಯ.
ಟವಣೆ ಕೂಡಿಸುವುದು.
ಟವಳಿ (ಟವುಳಿ) ಮೋಸ, ವಂಚನೆ; ಅಸತ್ಯ; ನಗೆ; ಹಾಸ್ಯ; ಯುದ್ಧದ ಕುಲಾವಿ.
—ಗಾರ ಮೋಸಗಾರ, ವಂಚಕ.
ಟವುಳಿ ಮೋಸ.
ಟಂಕ ಜಾಣ, ಕಲ್ಲುಳಿ; ಅಭಿಮಾನ; ಬೆಟ್ಟದ ಇಳಿಜಾರು; ಮುದ್ರಿತ ನಾಣ್ಯ; ನಾಣ್ಯ ಮುದ್ರಿಸುವ ಮನೆ, ಹಿತ್ತಾಳಿ ಇಲ್ಲವೆ ಬೆಳ್ಳಿಯ ಬೆಸುಗೆ.
—ಸಾಲೆ ನಾಣ್ಯ ಮುದ್ರಿಸುವ ಮನೆ.
ಟಂಕಕ ಬೆಳ್ಳಿಮುದ್ರೆ; ಟಂಕಸಾಲೆ.
ಟಂಕಣ ಬೆಳುಗಾರ, ಕಂಕಣಕಾರ.
ಟಂಕಾರ ಬಿಲ್ಲು ಮೊದಲಾದುವುಗಳಿಂದ ಹೊರಡುವ ಸದ್ದು.
ಟಂಕೆ ದೊಣ್ಣೆ, ಬಡತಿಗೆ, ಗುದ್ದಿ.
ಟಾಕಣ ಚಿಕ್ಕ ಕುದುರೆ, ತಟ್ಟು, ಪೈಗು.
ಟಾಕು ಡಜೆ, ಕಾಟು; ಗೋಡೆ, ಆಧಾರ; ಲೇಖನಿ ಮೊನೆ; ಕಂಟದ ತುದಿ.
ಟಾಕುಟೀಕು ಚೊಕ್ಕಟ; ವ್ಯವಸ್ಥೆ; ನಾಜೂಕು
ಟಾತಡಾಢಣ ನಿಶ್ಚಿತವಾದ್ದು, ಖಂಡಿತವಾದ್ದು.
ಟಿಕ್ಕರಿಗಳೆ ನಿಂದಿಸು, ಹೀನಯ್ಸು.
ಟಿಕ್ಕಿ ರತ್ನವುಳ್ಳ ಒಂದು ಉಂಗುರ ಇಲ್ಲವೆ ಕಿವಿ ವಂಟ.
ಟಿಟ್ಟಿಭ ಬಾನಾಡಿ, ದೇವನಹಕ್ಕಿ, ಲಾವುಗೆ.
ಟಿಪ್ಪಣಿ ಟೀಕೆ, ವಿಮರ್ಶೆಯ ಬರಹ; ನೆನಪಿಗಾಗಿ ಬರೆದಿರುವ ಸಂಕುಚಿತ ಬರಹ.
—ಗಾರ ಟೀಕಾಕಾರ.
ಟಿಕಾಣಿ (ಠಿಕಾಣಿ) ಗೊತ್ತುಗುರಿ, ನೆಲೆ.
ಟಿಸಲು ಚಿಗುರು, ಕವೆ, ರೆಂಬೆ; ಟೊಂಗೆ.

ಟೀಕೆ (ಟೀಕಾ), ಟಿಪ್ಪಣಿ, ಅರ್ಥ ವಿವರಣೆ; ಕೊರಳ ಸರ, ತಂತಿ.
—ಕಾರ ಟಿಪ್ಪಣಿ ಬರೆವವ.
ಟುಮುಕಿ (ನೋಡು: ಟಮಕಿ).
ಟೆಕ್ಕೆ ಬಾವುಟ, ಧ್ವಜ; ತೆಕ್ಕೆ, ಅಪ್ಪುಗೆ.
ಟೆಪ್ಪರ (ಟೆಬ್ಬರ), ಹಾರಾಟ, ನೆಗೆತ; ಉಬ್ಬು, ಉತ್ಸಾಹ.
—ಇಸು ನೆಗೆ, ಜಿಗಿ.
ಟೆಬ್ಬರ (ಟೆಪ್ಪರ).
ಟೆಂಕೆ ಒಂದು ಚಿನ್ನದ ನಾಣ್ಯ, ಒಂದು ಕಾಲ್ಪನಿಕ ನಾಣ್ಯ.
ಟೆಂಗು (ನೋಡು: ತೆಂಗು).
ಟೆಂಟಣಿಸು ಅತಿಕ್ರಮಿಸು; ತಪ್ಪು.
ಟೊಕಳಿ ಎಸಡಿ ಇಲ್ಲವೆ ನಳ್ಳಿಯ ಮೈ ಚಿಪ್ಪು; ಪೊಳ್ಳುಮಾತು; ಕೀಟಗಳ ಮೈಚಿಪ್ಪು.
ಟೊಣಪ ಬರಿಯ ದೇಹ ಮಾತ್ರ ಬಲಿತವ.
ಟೊಣಪೆ ಟೊಣಪ, ದಾಂಡಿಗ; ದೊಣ್ಣೆ; ಕಾಡುಮನುಷ್ಯ, ಅಡಮುಟ್ಟ.
ಟೊಣೆ ಅಗೆ; ಮೋಸಮಾಡು, ವಂಚಿಸು; ತಪ್ಪಿಸಿಕೊ; ನುಂಗು; ಉಗುಳು; ಸೀಳು.
ಟೊಣೆಯ (ನೋಡು: ಟೊಣಪ).
ಟೊಪ್ಪರ ಟೊಪ್ಪಿ, ಟೊಪ್ಪಿಗೆ.
ಟೊಪ್ಪಿ(ಟೋಪಿ) ತಲೆಗೆ ತೊಡುವ ತೊಡುಗೆ.
—ಹಾಕು ವಂಚಿಸು, ಠಕಾಯಿಸು.
ಟೊಳ್ಳು ಪೊಳ್ಳು; ಸಾರವಿಲ್ಲದ್ದು.
ಟೊಳ್ಳೆ ಸೊಳ್ಳೆ, ಮೈಯಲ್ಲಿರುವ ತಗ್ಗು.
ಟೊಂಕ ನಡು, ಸೊಂಟ.
ಟೊಂಗೆ ಗೆಲ್ಲು, ರೆಂಬೆ, ಕೊಂಬೆ, ಹರಿ.
ಟೋಪಿ (ನೋಡು: ಟೊಪ್ಪಿ).
ಟೋಳಿ ರಾಶಿ, ಸಂಗಡ, ಗುಂಪು, ತಂಡ.

## ಠ

ಠಕಾರ ಠಕ್ಕು, ಮೋಸ.
ಠಕಾರಿ ವಂಚನೆಯ; ಸಹಜವಲ್ಲದ, ಕೃತ್ರಿಮ.
ಠಕ್ಕು ಮೋಸ, ವಂಚನೆ, ಕಪಟ.
—ಇಸು ವಂಚಿಸು, ಠಕಾಯಿಸು.
ಠಕ್ಕೆ ಧ್ವಜ, ಬಾವುಟ; ಎಲೆ ಆಕಾರದ ಬಾವುಟ, ಪಟ.
ಠವಣೆ ಕೂಡಿಸುವುದು.
ಠಸೆ (ಠಸ್ಸ), ಚೀಟಿ, ದಸ್ತೈವೇಜು ಮೊದಲಾದುವುಗಳಿಗೆ ತಗಲಿಸುವ ತಲೆಚೀಟಿ; ಮುದ್ರೆ.
ಠಾಕೂರ ಗೌರವಸ್ಥನೆಂಬ ಬಿರುದು; ಉಪಾಧಿ; ದೇವತಾಪ್ರತಿಮೆ; ಕೃಷ್ಣ.
ಠಾಣೆ (ಠಾಣೆಯ) ಸ್ಥಾನ, ತಾವು; ದಂಡು; ಸೇನೆ ಇಲ್ಲವೆ ಪೋಲೀಸು ಜನರ ನಿಲುವು.
—ಗಾರ ಠಾಣೆಯ ಕಾವಲುಗಾರ.
ಠಾಯಿ (ದ್ಭ) ಸ್ಥಾಯಿ (ಸಂ), ಸಂಗೀತದ ಒಂದು ಕ್ರಮ.
ಠಾಯೆ ನಿಲುವು, ನಿಲುಗಡೆ.
ಠಾವು ತಾವು; ಜಾಗ.
—ಕಾಣು ಸ್ಥಾನಪಡೆ, ಸ್ಥಳಗಾಣು.
ಠಾವುತಿ ಟೋಳಿ; ರಾಶಿ; ಸಂಘ; ಗುಂಪು; ಪರಾಕ್ರಮ.
ಠಿಕಾಣಿ ಸ್ಥಳ, ಠಾವು; ಗತಿ; ನೆಲೆ.
ಠೀಕು (ಟೀಕು), ಸರಿ; ಚೆನ್ನು.
ಠೀವಿ ಒಯ್ಯಾರ; ಗಾಂಭೀರ್ಯ, ಪ್ರತಿಷ್ಠೆ; ಡಂಬ; ದರ್ಪ.
ಠೇವಣಾತಿ (ಠೇವಣಿ).
ಠೇವಣಿ ಬ್ಯಾಂಕು ಮೊದಲಾದುವುಗಳಲ್ಲಿ ಇರಿಸುವ ಹಣ, ಠೇವಣಾತಿ; ಗುಪ್ತನಿಧಿ; ಇಡುಗಂಟು.
ಠೇವು ನಿಧಿ; ಅಡವು, ಒತ್ತೆ.
ಠೌಳಿ ವಂಚನೆ, ಸುಳ್ಳು; ಉಪದೇಶ.
—ಗ ವಂಚಕ, ಠಕ್ಕ.

# ಡ

ಡಕಾಯಿತಿ ದರೋಡೆ, ಸುಲಿಗೆ, ಕೊಳ್ಳೆ.
ಡಕ್ಕೆ ಡಮರು, ದುಡಿ, ಮೃದಂಗ ವಿಶೇಷ.
ಡಗೆ ಮೋಸ; ಉರಿ, ಜಳ, ಬಿಸಿಲ ಬೇಗೆ; ಭೀತಿ, ಅಳುಕು.
ಡಬಡ್ಡಾಳಿಕೆ ಒಣ ಜಂಬ, ತಿರುಳಿಲ್ಲದ ತೋರಿಕೆ, ಬಡಾಯಿ.
ಡಬ್ಬ (ಡಬ್ಬಿ) ಕರಡಿಗೆ; ರೈಲುಬಂಡಿ ಕೋಣೆ.
ಡಬ್ಬು ಹೊಳ್ಳು ಸದ್ದು; ಜಂಬ; ತಳ್ಳು, ನೂಕು.
— ಗಾರ ಜಂಬದವ.
ಡಬ್ಬುಗಳ್ಳಿ ಪಾಪಾಸು ಕಳ್ಳಿ, ಮಚ್ಚೆಗಳ್ಳಿ.
ಡಮಣಿ ದೋಣಿ; ಎರಡೆತ್ತಿನ ಒಂದು ಗಾಡಿ.
ಡಮರ (ಡಾಮರ), ಕೋಲಾಹಲ, ಗದ್ದಲ; ವಿಪತ್ತು.
ಡಮರು (ಡಮರುಕ) ದೆಕ್ಕೆ, ಡೆಕ್ಕೆ, ದುಡಿ; ಬುಡುಬುಡಿಕೆ; ಶಿವನ ಕರದಲ್ಲಿನ ಒಂದು ವಾದ್ಯ.
ಡಮಾಣ (ಡಮಾರ) ನಗಾರಿ, ತಾಸುಮಾರು ವಾದ್ಯ, ಜೋಡು ಡೋಲು.
ಡಯುನ ಹಕ್ಕಿಗಳ ನೆಗೆತ.
ಡವಕೆ ಪೀಕದಾನಿ, ಕಾಳಂಜಿ, ಉಗುಳು ಬುಡ್ಡಿ.
ಡವಣೆ ಡಮರುವಿನಂಥ ಚರ್ಮವಾದ್ಯ.
ಡವಳ (ಧವಳ), ಕ್ರಮ ತಪ್ಪಿದ ಮನುಷ್ಯ.
ಡವಾಲಿ ಪೇದೆಯ ಬಿರುದುಪಟ್ಟಿ.
ಡವಿಗೆ ಬಿದುರು ತುಂಡು, ತಲೆಯೋಡು, ತಲೆ ಪರಟೆ.
ಡವುಡೆ ತಲೆಬುರುಡೆ; ಡಿಂಡಿಮ, ತಮಟೆ.
ಡವುಲು (ಡೌಲು), ಪೊಳ್ಳು ಜಂಬ.
ಡಂಗುರ ವಾದ್ಯಯುಕ್ತ ಮೆರವಣಿಗೆ; ವಾದ್ಯ ದೊಡನೆ ಏನಾದರೊಂದು ಸುದ್ದಿ ಪ್ರಕಟ ಸುವುದು.

ಡಂಬ (ಡಂಭ) ಜಂಬ, ಸೋಗು; ಒಣಪ್ರತಿಷ್ಠೆ.
ಡಂಬಕ ಒಂದು ವಾದ್ಯ ವಿಶೇಷ.
ಡಂಬಿಕ (ದ್ಭ) ದಂಭಕ (ಸಂ), ಗರ್ವ; ಉದ್ಧತ ಭಾವ; ಮೋಸ; ತೋರಿಕೆ.
ಡಾಕ ಪರಾಕ್ರಮ, ಶೌರ್ಯ.
ಡಾಕಿಣಿ (ಢಾಕಿಣಿ) ಕಾಳಿಯ ದಾಸಿಯಾದ ರಕ್ಕಸಿ; ರಕ್ಕಸಿಯ ಖಡ್ಗ.
ಡಾಕು ದಾಕು, ದೇವಿ ಚುಚ್ಚುವಿಕೆ; ಮೈಲಿ ತೆಗೆಯುವಿಕೆ; ಅಂಚೆ, ಟಪ್ಪಾಲು; ದರೋಡೆಯವ.
ಡಾಣೆ (ಡಾಣೆ), ದಂಡ, ದೊಣ್ಣೆ.
ಡಾಬು ಸ್ತ್ರೀಯ ನಡು; ನಡುಪಟ್ಟಿ, ಮೇಖಲೆ.
ಡಾಮರ ಲಗ್ಗೆ; ದಂಗೆ; ರೋಗಾದಿ ಉಪದ್ರವ, ಪೀಡೆ, ಕ್ಷೋಭೆ.
ಡಾಮರು (ಡಾಂಬರು) ತಾರೆಣ್ಣೆ, ತಾರು.
ಡಾಲು ಗುರಾಣಿ, ಹರಿಗೆ.
ಡಾವಣಿ ಜಾನುವಾರುಗಳನ್ನು ಸಾಲಾಗಿ ಕಟ್ಟುವ ಹಗ್ಗ; ಸಾಲು ತಳಿಕೆ.
ಡಾವರ ಕೋಟಲೆ; ಹೊಡೆದಾಟ; ಬಾಯಾರಿಕೆ, ದಾಹ; ಪೀಡೆ, ಕ್ಷೋಭೆ; ತೊಂದರೆ; ಉಪದ್ರವ; ತಾಪ.
— ಇಸು ತಪಿಸು, ಸುಡು; ಆವರಿಸು, ನೋಯಿಸು; ಉತ್ಸಾಹಗೊಳಿಸು.
ಡಾವರಿ ಉರಿಯುವಿಕೆ; ಕಿಚ್ಚಿಂದ ಆವರಿಸಲ್ಪಡು.
ಡಾವು ಸೇಡು, ಮುಯ್ಯಿ.
ಡಾಳ (ಡಾಳಿ) ಹೊಳಪು, ಕಳೆ; ಮಿಂಚು; ಪ್ರಕಾಶ; ಚೆಲುವು, ಲಾವಣ್ಯ.
— ಅಯ್ಯು ಕಾಂತಿಯುತವಾಗು; ಲಾವಣ್ಯದೋರು.
ಡಾಳಿಮ (ನೋಡು: ದಾಡಿಮ).

ಡಿಕ್ಕಿ ಒಂದಕ್ಕೊಂದು ತಲೆಬಡಿಯುವಿಕೆ; ನೂಕಾಟ; ಡೋಲು; ಡಮರು.
ಡಿಬಿಕ ಹಂಸನ ಸಹೋದರ, ಒಬ್ಬ ರಾಕ್ಷಸ.
ಡಿಳ್ಳ ಬರಡು; ವ್ಯರ್ಥ; ಸಡಿಲು; ಧೈರ್ಯಗೆಡುವಿಕೆ, ದಿಗಿಲು; ಹೀನತೆ.
—ಆಯು ವ್ಯರ್ಥ; ಜಾರಿಕೆ.
—ಇಸು ಬಲಗುಂದಿಸು, ದುರ್ಬಲಗೊಳಿಸು.
ಡಿಳ್ಳಿ (ದಿಲ್ಲಿ), ದೇಹಲಿ.
ಡಿಂಗರ ಸೇವಕ, ದಾಸ; ಭಕ್ತ; ನೀಚ, ಠಕ್ಕ; ಕೊಣಪ.
ಡಿಂಗರಿಗ (ಡಿಂಗರ).
ಡಿಂಗು ಅಬ್ಬರ; ಸಂಭ್ರಮ.
ಡಿಂಡಿಮ ಜಾಗಟೆ; ಭೇರಿ; ಒಂದು ವೃತ್ತವಿಶೇಷ.
ಡಿಂಡೀರ ನೊರೆ, ಕಡಲು ನೊರೆ, ಬುರುಗು.
ಡಿಂಬ ಕೋಲಾಹಲ; ವಿಪತ್ತು, ಸಂಕಟ, ಈತಿಬಾಧೆ; ತತ್ತಿ, ಅಂಡ; ಶಿಶು; ಕಂಬ.
ಡಿಂಬು (ದಿಂಬು), ದೀಪದ ಗುಡ್ಡ.
ಡಿಂಭ ಈಗ ತಾನೆ ಹುಟ್ಟದ ಮಗು, ಶಿಶು; ಮರಿ; ಏನೂ ತಿಳಿವಿಲ್ಲದವ; ಕೊಳ್ಳೆ.
ಡೀ ಹಾರು.
ಡೀನ ಹಾರಾಟ, ಪಕ್ಷಿಗಳ ಗತಿ.
ಡೀಲಿ (ಡಿಳ್ಳ) ಸಡಿಲು, ಶಿಥಿಲ; ವಿಲಂಬ, ಕಾಲವಿಳಂಬ.
ಡುಬರಿ ಡುಬ್ಬ, ಒಂಟೆಯ ಬೆನ್ನಿನ ಉಬ್ಬು; ಉಬ್ಬಿದ ಸ್ಥಳ.
ಡುಬ್ಬ ಒಂಟೆಯ ಬೆನ್ನಿನ ಗೂನು, ಉಬ್ಬು; ಡೂಗು.
ಡುರುಕಿ ಗುಟುರು, ಗೂಳಿ ಗುಟುರು.
ಡುರುಕು ಡೊಂಕು; ಬಾಗು, ಬಗ್ಗು; ಗುಟುರು ಹಾಕು.
ಡುಲಿ ಹೆಣ್ಣು ಆಮೆ.
ಡುಂಡುಬಿ ಬುಡುಬುಡಿಕೆ, ಒಂದು ವಾದ್ಯ.
ಡುಂಡುಭ ಒಂದು ಹಾವು, ಇಮ್ಮಂಡೆ ಹಾವು; ಇರ್ತಲೆ ಹಾವು.
ಡೂಗು ಡುಬ್ಬ.
ಡೆಂಕಣ (ಡೆಂಕಣಿ), ಬಾವುಟೆ ಕಂಬ, ಕೋಟೆಯ ಕೊತ್ತಲ; ಕೋಟೆ ಬುರುಜು, ಬತ್ತೇರಿ.
ಡೆಂಡಣಿಸು ಭೀತಿಗೊಳ್ಳು, ಬೆಚ್ಚು, ಹೆದರು; ನಡುಗು; ದುಃಖದಿಂದ ತಳಮಳಿಸು.
ಡೇಗೆ ಗಿಡುಗನ ಒಂದು ಭೇದ.
ಡೇರೆ ಗೂಡಾರ, ತಂಬು, ಬಟ್ಟೆಮನೆ.
ಡೊಕ್ಕರ (ಡೊಗರ) ತುಳಿತ, ಬಡಿತ, ಹೊಡೆತ.
— ಇಸು ಒತ್ತಿಹಿಡಿ, ಅಮುಕಿ ಹಿಡಿ, ಉಸಿರಾಡದಂತೆ ಮಾಡು; ನಾಶಮಾಡು.
ಡೊಕ್ಕೆ ಒಡಲು, ಹೊಟ್ಟೆ.
ಡೊಗರು ಪೊಳ್ಳು, ಮರದ ಪೊಟರೆ, ಬಿಲ; ಬಗಿದು ಮಾಡಿದ ಹಳ್ಳ.
ಡೊಗೆ ತೂತುಮಾಡು, ಕೆದರಿ ಕುಳಿಮಾಡು; ತಲೆಯೋಡು, ತಲೆಪರಟೆ.
ಡೊಗ್ಗೆ ದಪ್ಪ.
ಡೊಣೆ ಬಂಡೆಯ ಮೇಲಿನ ನೀರ ಕುಳಿ, ಸ್ವಾಭಾವಿಕ ಕೊಳ; ಹೊದೆ; ಬಿಲ, ಕೆರೆ; ಬತ್ತಳಿಕೆ.
ಡೊಣ್ಣೆ ಕೊಂತ, ದಪ್ಪನಾದ ದಂಡ, ಕೋಲು, ಗುದ್ದಿಗೆ.
ಡೊಬ್ಬು (ದೊಬ್ಬು), ದಬ್ಬು, ನೂಕು, ತಳ್ಳು.
ಡೊಳ್ಯಾಸ ಕಪಟ, ವಂಚನೆ; ವಿಚಿತ್ರ ರೂಪು; ವಿಸ್ತಾರ.
ಡೊಳ್ಳು ಉಬ್ಬು, ಒಳಗೆ ಪೊಳ್ಳು; ಹೊರಗೆ ಉಬ್ಬಿರುವ ಹೊಟ್ಟೆ.
ಡೊಂಕಣಿ ಈಟಿ, ಬರಚಿ, ಸಬಳ; ಕೊಂತ.
ಡೊಂಕು ವಕ್ರ; ಕೊಂತ.
— ತನ ಕೊಂಕುತನ, ಬಾಗಿರುವಿಕೆ; ವಕ್ರಬುದ್ಧಿ.

ಡೊಂಗರ ಪ್ರಪಾತ, ಕೊಳ್ಳ, ಇಳಿಜಾರಾದ ಬಂಡೆ;ಸ್ವಲ್ಪನೀರಿರುವಹಳ್ಳ; ಕಲ್ಲೊಳಗಿನ ಕುಳಿ.

ಡೊಂಬ (ಡೊಂಬರ) ಕಸರತ್ತುಗಾರ, ಗಣೆಯ ಮೇಲೆ ವಿನೋದ ತೋರಿಸುವ.

ಡೊಂಬಿ (ದೊಂಬಿ) ಸಮೂಹ; ಕೋಲಾಹಲ; ಅವ್ಯವಸ್ಥಿತವಾದ ಹೊಡೆದಾಟ, ಬಡಿದಾಟ; ಲೂಟ.

—ಜಗಳ ಬಲಾತ್ಕಾರದ ಜಗಳ.

ಡೊಂಬು ಮಡು, ನೀರಗುಂಡಿ; ಡಂಬ, ಜಂಬ; ತೋರಿಕೆ.

ಡೋಕಾ (ಡೋಕು) ಆಪತ್ತು, ವ್ಯಾಪಾರ ಸಾಪಾರದಲ್ಲಿ ಬರುವ ಕೇಡು; ಮೋಸ.

ಡೋಕಾರಿ ಠಕ್ಕ.

ಡೋಣಿ (ದೋಣಿ) ದ್ರೋಣಿ (ಸಂ), ನಾವೆ.

ಡೋರ ತೊಗಲಿಗೆ ಬಣ್ಣ ಹಾಕುವವ.

ಡೋರಿಯ ಹುಲಿ ಬಣ್ಣದಂತೆ ಪಟ್ಟೆಪಟ್ಟೆಯಾಗಿರುವ ಬಟ್ಟೆ.

ಡೋರು ಬಿರಿ, ಸೀಳು; ತೂತು; ಡೊಗರು; ಪೊಟರೆ.

—ಕಳೆ ತೂತು ಕೊರೆ, ಬಿಲಕೊರೆ.

ಡೋಲಾಯಮಾನ ಓಲಾಟ, ಹೊಂಗಾಟ.

ಡೋಲಿ (ದೋಲಿ) ಮುಚ್ಚಿದ ಪಲ್ಲಕ್ಕಿ.

ಡೋಲು (ದೋಲು) ಡೊಳ್ಳು, ದೊಡ್ಡ ಚರ್ಮವಾದ್ಯ, ಭೇರಿ.

ಡೋಹ (ಢೋರ) ಚಾಂಡಾಲ, ಹೊಲೆಯ; ಹೊಲೆಯರಲ್ಲಿ ಒಂದು ಪಂಗಡ.

ಡೋಳು (ಡೋಲು).

ಡೋಂಗಿ ಮೋಸ, ವಂಚನೆ; ಸುಳ್ಳು; ಹರಟೆ.

ಡೌಡೆ ವಾದ್ಯ ವಿಶೇಷ, ನಗಾರಿ.

## ಢ

ಢಕ್ಕಾ (ಢಕ್ಕೆ) ಒಂದು ಬಗೆಯ ಚರ್ಮವಾದ್ಯ, ಡಮರು.

ಢಕ್ಕಾಲಿಕ್ಕುಹಿಂದೆಯೂಮುಂದೆಯೂತಳ್ಳು

ಢಕ್ಕುಳಿ ವಂಚನೆ, ಕಪಟ.

ಢಗೆ (ಡಗೆ) ಶ್ರಮ, ಆಯಾಸ, ಬೇಗೆ; ಬಾಯಾರಿಕೆ, ನೀರಡಿಕೆ.

ಢಂಬರ ಆಡಂಬರ, ಠೀವಿ.

ಢಾಕು ಪ್ರತಿಭಟನೆ, ಇದಿರು ಬೀಳು; ಹಗೆತನ.

ಢಾಳ ಉದ್ದವಾದ ಪತಾಕೆ, ಬಾವುಟ; ಕಾಂತಿ, ಹೊಳಪು, ಕಲೆ.

ಢಾಳಕತನ ಥಳಕು, ಚಮತ್ಕಾರ.

ಢಾಳಿಕೆ (ಢಾಳ).

## ತ

ತಕರಾರು ಆಕ್ಷೇಪ; ನಿರಾಕರಣೆ; ತೊಡಕು.

ತಕಾವಿ ಸರಕಾರವು ಕೊಡುವ ಸಾಲ ಇಲ್ಲವೆ ಮುಂಗಡ.

ತಕ್ಕ ಯೋಗ್ಯ; ಯುಕ್ತ, ಸಮವಾದ; ಹೊಂದುವ; ಒಳ್ಳೆಯ.

—ವ ಯೋಗ್ಯ.

ತಕ್ಕಡಿ ತ್ರಾಸು, ಚಿಂತಾಲು, ಭಾರ ತೂಗುವ ಸಾಧನ.

ತಕ್ಕಡಿಗಾಣು ಯೋಗ್ಯತೆ ಇಂಗಿಹೋಗು.

ತಕ್ಕಳಿಸು ಚಿಮುಕಿಸು, ತಳಿ.

ತಕ್ಕಿ ದಗೆ, ಮೋಸ.

ತಕ್ಕು ಸ್ನೇಹ; ನೇಹ, ನಲ್ಮೆ, ಪ್ರೀತಿ; ಯೋಗ್ಯತೆ; ಸಾಮರ್ಥ್ಯ; ಪೆರ್ಮೆ; ಮಹತ್ವ.

—ದು ಯೋಗ್ಯವಾದ್ದು; ಸರಿಯಾದ್ದು.

—ಮೆ (ತಕ್ಕುರ್ಮೆ) ಸ್ನೇಹ; ಯೋಗ್ಯತೆ; ಹಿರಿಮೆ.

ತಕ್ಕೆ (ತಳ್ಕೆ), ತಳಿಕೆ, ಸ್ನೇಹ, ಎಣೆ; ಸಮೂಹ; ರಾಶಿ; ಸೇರಿಕೆ; ಆಲಿಂಗನ, ಅಪ್ಪುವಿಕೆ.
—ಅಯ್ತು ಅಪ್ಪಿಕೆ, ಸಂತಯಿಸು.
—ಹೊಂದಿಸು ಬಲವಾಗಿ ಆಲಂಗಿಸು.
ತಕ್ಕೋಲ ಒಂದು ಬಗೆಯ ಸುಗಂಧ.
ತಕ್ತೆ (ತಖ್ತೆ), ಕೋಷ್ಟಕ; ಪಟ್ಟಿ.
ತಕ್ರ ಬೆರಸು ಮಜ್ಜಿಗೆ, ಕಾಲುಪಾಲು ನೀರು ಸೇರಿದ ಮಜ್ಜಿಗೆ.
ತಕ್ಷ ಕತ್ತರಿಸುವವ, ಬಡಗಿ.
ತಕ್ಷಕ ಕದ್ರು ಪುತ್ರನಾದ ಒಬ್ಬ ಸರ್ಪ. ಇವನ ತಂದೆ ಕಶ್ಯಪನು. ಈ ಸರ್ಪನು ಪರೀಕ್ಷಿತರಾಯನನ್ನು ಕಡಿದು ಕೊಂದು ದರಿಂದ, ಸರ್ಪಕುಲ ನಾಶಕ್ಕಾಗಿ ಜನ ಮೇಜಯನು ಯಾಗಮಾಡಿದುದು.
ತಕ್ಷಣ (ತ್ಕ್ಷಣ) ಆ ಕೂಡಲೆ.
ತಕ್ಷನ ವಿಶ್ವಕರ್ಮ; ಚಿತ್ರಾ ನಕ್ಷತ್ರ.
ತಕ್ಷಶಿಲಾ ವಾಯವ್ಯ ಪ್ರಾಂತದಲ್ಲಿನ ಪ್ರಾಚೀನ ಪ್ರಸಿದ್ಧಿಯ ನಗರ. ಇದು ಬೌದ್ಧ ಯುಗದಲ್ಲಿ ಹೆಸರಾದ ಒಂದು ವಿದ್ಯಾ ಕೇಂದ್ರವಾಗಿತ್ತು.
ತಕ್ಷೀರು ಖಟ್ಲೆ, ಫಿರ್ಯಾದಿ, ದಾವೆ.
ತಗ ತಡ, ನಿಲ್ಲು; ತಡೆ.
ತಗಚೆ ತೊಗಚೆ ಗಿಡ.
ತಗಡು ಲೋಹದ ಹಾಳೆ.
ತಗಣೆ (ತಗಣಿ), ತಿಗಣೆ, ಒಂದು ಕೀಟ.
ತಗದು ತಕ್ಕುದಲ್ಲ.
ತಗರ್ (ತಗರು) ಅಡ್ಡಗಟ್ಟು; ತಡೆ, ನಿಲ್ಲಿಸು; ಟಗರು, ಗಂಡು ಕುರಿ.
ತಗರ ಒಂದು ಜಾತಿಯ ಮರ; ಒಂದು ಲೋಹ, ತವರ.
ತಗಲು ತಾಟು, ತಾಡು; ಸಂಪರ್ಕವಾಗು; ಅಣೆ, ತಿಕ್ಕು.
—ಗಾರ ವಂಚಕ, ಠಕ್ಕ.
—ಹಾಕು ಜತೆಮಾಡು; ಜಗಳ ಗಂಟಿಕ್ಕು.
ತಗವೆ (ತಗಹು) ತಡ, ತಡೆ; ಸಂಬಂಧ.
ತಗಹು ಸಂಬಂಧ, ಸೇರಿಕೆ; ಬಂಧನ; ಮುಚ್ಚು.
ತಗಳ್ಚು ಸುಡು.
ತಗಾದೆ ಸಾಲ ಕೊಟ್ಟವನು ಮೇಲಿಂದ ಮೇಲೆ ಕೇಳುವಿಕೆ, ಹಣದ ಕೇಳಿಕೆ; ಗರ್ಜು.
ತಗು ತಕ್ಕುದಾಗು; ಸೇರಿಕೆ, ಹೊಂದಿಕೆ.
ತಗುಳ್ (ತಗುಳು), ದೊಬ್ಬು, ದೂಡು; ಆರಂಭಿಸು, ಮೊದಲುಮಾಡು; ಹಿಂದಟ್ಟು; ಹಿಂದೋಡು; ಜಗಳವಾಡು; ತಗಲಿಕೊ, ಸೇರಿಕೊ; ಮೇಲೆ ಬೀಳು.
—ಇಸು ಬೆನ್ನಟ್ಟು; ಹಿಂದೆ ಸರಿಸು.
—ಚು ತಗಲಿಸು.
ತಗುಳುಮುಗುಳು ಹತ್ತಿರ ಬರು; ದೂರಾಗು; ಅಡಿಮೇಲಾಗು; ನಿಲ್ಲಿಸು.
ತಗೆ ಅಡ್ಡಿ; ಅಡ್ಡಿಮಾಡು, ತಡೆಮಾಡು; ತಂಗು, ನಿಲ್ಲು.
—ತಗೆವ ಸ್ತಂಭಿಸುವ; ಪ್ರತಿಭಟಿಸುವ, ತಡೆಯುವ.
ತಗ್ಗಿ ಜಯಂತಿ ಗಿಡ; ಮಕ್ಕಳನ್ನು ಕದಿಯುವುದು; ಕುಗ್ಗಿಕೊಂಡು.
ತಗ್ಗು (ತರ್ಗು), ಇಳಿತರ, ಇಳಿಪ್ರದೇಶ, ಇಳಿಮೆ; ಸೊರಗು; ವಿನಯ; ಕುಣಿ; ಕುಂದಲು.
—ಇಸು ಇಳಿಸು; ಕೆಳಕ್ಕೆ ಬರುವಂತೆ ಮಾಡು; ಕುಗ್ಗಿಸು; ಸೊಕ್ಕು ಅಡಗಿಸು.
ತಚ್ಚಣ (ದ್ಭ) ತಕ್ಕ್ಷಣ (ಸಂ), ಅದೇ ವೇಳೆ, ಅದೇ ಸಮಯ, ಆ ಕೂಡಲೆ.
ತಜವೀಜು ವ್ಯವಸ್ಥೆ, ತಯಾರಿ; ಶೋಧನೆ, ತಪಾಸಣೆ.
ತಜ್ಜ ತಕ್ಷಣ ಆದ, ತಾತ್ಕಾಲಿಕ.
ತಜ್ಞ ಅರಿತವ, ಬಲ್ಲಿದ, ತಿಳಿದವ.
ತಟ (ಸಂ) ದಡ (ದ್ಭ), ತೀರ, ನದಿದಂಡೆ,

ದಂಡೆ; ಶರೀರದ ಇಳಿಭಾಗಗಳು; ಗದ್ದೆ; ಮೀರುವಿಕೆ.
ತಟಕು ತೊಟ್ಟು; ತುಟ್ಟುಕು, ಹನಿ; ಕೊಂಚ.
ತಟಕ್ಕನೆ ಫಕ್ಕನೆ, ಕೂಡಲೆ.
ತಟಗುಟ್ಟು ಅಕ್ಕಸಾಲಿಗನಂತೆ ಕೊಡತಿಯಿಂದ ಬಡಿ; ಸಂಚಾರವಮಾಡು.
ತಟತಟ ಉಲ್ಲಾಸ;ಅಪಾಯದಿಂದ ಕೂಡಿದ.
ತಟಸ್ಥ ತೀರದಲ್ಲಿರುವ; ಎರಡು ಕಡೆಗೂ ಸೇರದೆ ಸುಮ್ಮಗಿರುವ.
—ಇಕೆ ಸುಮ್ಮಗಿರುವಿಕೆ, ಜಗಳದಲ್ಲಿ ಕೈ ಹಚ್ಚದೆ ಇರುವಿಕೆ.
—ನೆ ಪಕ್ಷವಹಿಸದಿರುವುದು; ಮೌನ.
ತಟಾಕ ದಡದಿಂದ ಆವರಿಸಿರುವುದು, ಕೆರೆ, ಕೊಳ, ಕಲ್ಯಾಣಿ.
ತಟಾಯ್ (ತಟಹಾಯು), ಹಾದು ಹೋಗು; ದಾಟು, ಪಾರಾಗು.
—ಇಸು ಮುಟ್ಟ ಮುಂದರಿಸು; ದಾಟಸು.
ತಟಾಲನೆ (ತಟಾರನೆ), ತಟಕ್ಕನೆ, ಫಕ್ಕನೆ, ಒಮ್ಮೆಲೆ.
ತಟಿ ತಡಿ, ತೀರ, ದಂಡೆ.
ತಟಿತ್ (ತಟತ್ತು), ಮಿಂಚು.
ತಟಿನೀ ತೀರ ಉಳ್ಳುದು, ನದಿ, ಹೊಳೆ.
ತಟಿರ್ಲತೆ ಸೀಳ್ಮಿಂಚು, ಕವಲುಮಿಂಚು.
ತಟುಗೆ ತಟ್ಟಚ್ಚು, ಪಾರಾಗು; ದೇಹವನ್ನು ಭೇದಿಸಿ ದಾಟಹೋಗು.
ತಟೆ (ತಡೆ).
ತಟ್ಟೆ ಚಪ್ಪಟೆಯಾದುದು; ತೆಳ್ಳಗಿನವ.
ತಟ್ಟನೆ ಕೂಡಲೆ, ಫಕ್ಕನೆ, ಒಮ್ಮಗೆ.
ತಟ್ಟಿ ತಡಿಕೆ, ಬಿದಿರಿನ ಚಾಪೆ; ಒಂದು ಬಗೆಯ ಬಲೆ.
—ಯ ಚಪ್ಪಟೆಯಾಗಿರುವ; ಉತ್ಸಾಹ; ಪೆಟ್ಟು; ಸೋಂಕು.
ತಟ್ಟು (ಘಟ್ಟು), ಸಮೂಹ, ಗುಂಪು; ಪೆಟ್ಟು; ಸೋಂಕು; ಕುದುರೆ; ಬದಿ, ಪಕ್ಕ; ಬಡಿ; ಕೈಯಿಂದ ಸವರು.
ತಟ್ಟೆ ಚಪ್ಪಟೆಯಾದುದು, ಸಮತಳವಾದುದು; ಲೋಹ ಇಲ್ಲವೆ ಮರದ ಕಿರಿಯ ಜಟ್ಟಿ ಪಾತ್ರೆ; ಬಿದಿರಿನ ಸಲಿಕೆ.
ತಟ್ಲೆ ಸ್ತ್ರೀಯರ ಪಾದರಕ್ಷೆ.
ತಡ ತಡೆ; ಬೆದರಿಕೆ; ಸಾವಧಾನ; ಅನುರೂಪ; ಕಾಲವಿಳಂಬ; ಮೆಲ್ಲಗೆ ಕಾಲಿಡುವುದು.
—ಕಟ್ಟು ಅಡ್ಡಗಟ್ಟು, ನಿರ್ಬಂಧಿಸು.
—ತ (ತಡೆತು) ಪ್ರತಿಭಟೆ; ತಾಳಿಕೆ; ತಾಳ್ಮೆ.
—ಪ ವಿಳಂಬ; ಮೆಲ್ಲಗೆ.
—ಪು ಪ್ರತಿಭಟೆ, ತಡೆ, ನಿರೋಧ; ಒಡ್ಡು; ತಡೆಯುವ.
—ಬಡಿಸು ತೊಡಕು; ನಡೆಯಲು ಬೆದರು; ಹೆಚ್ಚು ಕಡಮೆ ಮಾಡು.
—ಸು ನಿಲ್ಲಿಸು, ಕಾಯಿಸು; ತಡೆಯು; ತಡವೆ, ತಡೆ.
—ಹು ತಡವರಿಸು; ಕೈಯಿಂದ ಸವರು; ನಿಲ್ಲಿಸು; ಹುಡುಕುವಿಕೆ.
ತಡಕು ಹುಡುಕು, ಕೈಚಾಚು; ಕತ್ತಲಲ್ಲಿ ಹುಡುಕು, ಅರಸು.
ತಡವರಿಸು ಕೈಯಿಂದ ಸವರು; ನೇವರಿಸು; ತಪ್ಪು ಹಜ್ಜೆಯಿಡು, ಎಡವು; ತೊದಲು.
ತಡವು (ತಡ) ಸಾವಕಾಶ; ಮುಟ್ಟು; ನಿಲ್ಲಿಸು; ತುಳುಕು; ಚಪ್ಪರಿಸು.
ತಡವೆ ಸಲ, ಸರದಿ.
ತಡಸಲು ಜೋಗು, ಅಬ್ಬಿ, ಪ್ರಪಾತ.
ತಡಂಗಾಲು ತೊಡರುವ ಕಾಲು; ಅಡ್ಡ ಕಾಲು; ತೊಂದರೆ ಕೊಡುವಿಕೆ.
ತಡಂಮೆಟ್ಟು ನಿಧಾನವಾಗಿ ನಡೆ.
ತಡಿ (ದ್ಭ) ತಟ (ಸಂ), ನದಿ ತೀರ, ಕಡಲ ತೀರ; ಕುದುರೆಯ ಮೈಮೇಲೆ ಕುಳಿತಿರಲು ಹಾಕುವ ಹಾಸುಗೆ.

ತಡಿಕೆ ತಟ್ಟಿ; ಎಲೆ ಹುಲ್ಲುಗಳಿಂದ ಮಾಡುವ ಒಂದು ವಿಧದ ತೂಗುಚಾಪೆ.

—ಬಲೆ ತಡಿಕೆಯಿಂದ ಮಾಡಿದ ಒಂದು ವಿಧದ ಬಲೆ.

ತಡೆ ನಿಲ್ಲಿಸು; ತರುಬು; ಅಡ್ಡಬರು, ಸಾವಕಾಶಮಾಡು; ನಿರ್ಬಂಧ, ಅಡ್ಡಿ; ತಾಳಿಕೆ.

—ಕಟ್ಟು ಅಡ್ಡಿಮಾಡು,ತೊಂದರೆ ಕೊಡು

—ಕಡಿ ತಡೆಯನ್ನು ನಿವಾರಿಸು.

—ಕಾಲು ತೊಂದರೆ ಕೊಡುವಿಕೆ.

—ಕೆಡೆ ಮುಗ್ಗರಿಸಿ ಬೀಳು; ತಡೆದು ಕೆಡಹು.

—ಬಿಡು ಸೆರೆಯಿಂದ ತಪ್ಪಿಸು.

ತಣಲು ಉರಿಗೆಂಡ.

ತಣಸು (ತಂಗಸು), ಒದ್ದೆ ಇಲ್ಲವೆ ಶೀತವಾಗಿರುವಿಕೆ; ನೆಲದಲ್ಲಿ ಬರುವ ತೇವ.

ತಣಿ ತಂಪಾಗು, ಕಾವಾರು; ತೃಪ್ತಿಹೊಂದು; ಉತ್ಸಾಹ ಕುಂದು; ತರ್ಪಣ; ನಾಚಿಕೆ, ಲಜ್ಜೆ.

—ಇಸು (ತಣಿಸು) ಕಾವನ್ನು ಇಳಿಸು, ತೃಪ್ತಿ ಉಂಟುಮಾಡು.

—ಎರೆ ತರ್ಪಣ ಕೊಡು; ಉತ್ಸಾಹ ತಗ್ಗಿಸು.

—ಪು ತೃಪ್ತಿ; ಶಾಂತಿಗೊಳ್ಳುವಿಕೆ, ಸಮಾಧಾನ.

—ವು ತರ್ಪಣ, ತೃಪ್ತಿ.

ತಣ್ಗದಿರ ತಂಪಾದ ಕಿರಣ ಉಳ್ಳವ, ಚಂದ್ರ.

ತಣ್ಣಗೆ (ತಣ್ಣನೆ) ತಂಪಾಗಿ.

ತಣ್ಣಸು ತಂಪು, ಶೈತ್ಯ; ತಂಡಿಯಾಗಿರುವಿಕೆ.

ತಣ್ಣಿತ್ತು ತಂಪು, ಶೈತ್ಯ.

ತಣ್ಣೆಲರ್ (ತಂಬೆಲರ್), ತಂಗಾಳಿ.

ತಣ್ಣೆಳಲ್ ತಂಪಾದ ನೆರಳು.

ತಣ್ಪು (ನೋಡು: ತಂಪು).

ತಣ್ಮಲೆ ವ್ಯಾಪಿಸು.

ತತಿ ಸಾಲು, ಗುಂಪು, ಸಮೂಹ; ಸಕಾಲ; ಒಂದು ಯಾಗ ವಿಧಿ.

ತತ್ಕಾಲ ಆ ಸಮಯ.

ತತ್ಕ್ರಿಯೆ ಆ ಕೆಲಸ.

ತತ್ಕ್ಷಣ ಆದೇ ಕ್ಷಣ, ಆಕ್ಷಣ; ಕೂಡಲೆ.

ತತ್ತ ಒದಗಿದ; ಸಂಬಂಧಪಟ್ಟ.

ತತ್ತರ ನಡುಕ; ಬೆದರಿಕೆ.

ತತ್ತರಿಗರಿ ತುಂಡರಿಸು.

ತತ್ತವಸರ ಸಂಬಂಧಪಟ್ಟ ಕೆಲಸ.

ತತ್ತಳ ತಳಮಳ, ಗಾಬರಿ, ಬೆದರಿಕೆ.

—ಕೊಳು ಭಯಪಡು.

ತತ್ತಿ ಅಂಡ, ಮೊಟ್ಟೆ.

ತತ್ತು ಎಡಹುವಿಕೆ; ವಿಪತ್ತು; ಒದಗು, ಉಂಟಾಗು; ಸಂಬಂಧಿಸು.

ತತ್ತುಕ ಆ ಹುಡುಗ.

ತತ್ಪರ ಆದರಲ್ಲಿ ಆಸಕ್ತಿಯುಳ್ಳ, ತದ್ಗತ.

—ತೆ ಅದರಲ್ಲೇ ಮನಸ್ಸು ಉಳ್ಳವನಾಗಿರುವುದು.

ತತ್ಪರಾಯಣ ಅದರಲ್ಲೇ ಆಸಕ್ತ.

ತತ್ಪುರುಷ ಮುಖ್ಯ ಪುರುಷ; ಪರಮಾತ್ಮ; ರಾಜ ಪುರುಷ.

ತತ್ಪೂರ್ವ ಅದಕ್ಕೂ ಮೊದಲು.

ತತ್ರ ಅಲ್ಲಿ.

ತತ್ವ ಅದರ ಭಾವ, ಸ್ವರೂಪ; ನಿಜ ಸ್ಥಿತಿ; ಪರಮಾತ್ಮ; ಚಿತ್ತ; ಸಿದ್ಧಾಂತ.

—ಜ್ಞ ನಿಜವನ್ನು ಅರಿತವ; ದೈವವನ್ನರಿತವ, ತತ್ವದರ್ಶಿ.

—ಜ್ಞಾನ ನಿಜವನ್ನು ಅರಿತವ; ಬ್ರಹ್ಮಜ್ಞಾನ; ವಸ್ತು ಸ್ಥಿತಿಯ ಪರಿಜ್ಞಾನ.

ತತ್ಸಮ (ತತ್=ಅದು) ಅದಕ್ಕೆ ಸಮನಾದುದು; ಕನ್ನಡಲ್ಲಿ ಇದ್ದಂತೆ ರೂಢಿಗೆ ಬಂದ ಕೆಲವು ಸಂಸ್ಕೃತ ಪದಗಳು.

ತಥಾ ಹಾಗೆ; ನಿಶ್ಚಯ.

— ಅಸ್ತು ಹಾಗಾಗಲಿ.
— ಗತ ಬುದ್ಧ; ಆ ಸ್ಥಿತಿಯಲ್ಲಿರುವ.
ತಥ್ಯ ಸತ್ಯ, ನಿಜ, ದಿಟ.
— ಮಿಥ್ಯ ಸತ್ಯ ಸುಳ್ಳು.
ತದಕು ಹೊಡೆ, ಬಡಿ.
ತದನಂತರ ಅನಂತರ, ಆ ಮೇಲೆ.
ತದಾನೀ ಆ ವೇಳೆ, ಆಗ.
ತದಾರಭ್ಯ ಅಲ್ಲಿಂದ, ಅಲ್ಲಿಂದ ತೊಡಗಿ.
ತದಾತ್ಮ್ಯ ಅಲ್ಲಿಯೇ ಲೀನವಾಗುವುದು, ಅದರಲ್ಲೇ ಆಸಕ್ತವಾಗಿರುವುದು.
ತದಿಗಿಣ ತಾಲ ಹೊಡೆಯುವ ಧ್ವನಿ ರೀತಿ.
ತದಿಗಿಣೆ ಅವಡೆ ಎಂಬ ಧಾನ್ಯ; ಒಂದು ಜಾತಿಯ ಕೀಟ.
ತದಿಗೆ (ದ್ಭ) ತೃತೀಯಾ (ಸಂ), ಪಕ್ಷದ ಮೂರನೆ ದಿನ.
ತದುಕು (ತದಿಕು), ಹೊಡೆ, ಬಡಿ.
ತದೆ ಸದೆ, ಹೊಡೆ; ತಾಗು.
ತದ್ಗತ ತತ್ಪರ, ಅದರಲ್ಲಿ ಆಸಕ್ತ.
ತದ್ಗುಣ ಆ ಗುಣ ಉಳ್ಳ; ಆ ಗುಣ ಉಳ್ಳದ್ದು.
ತದ್ದು (ದದ್ದು), ದದ್ರು, ಒಂದು ಹುಳುಕಜ್ಜಿ.
ತದ್ಭವ ಅದರಿಂದ ಹುಟ್ಟಿದುದು; ಸಂಸ್ಕೃತ ಪದದಿಂದ ಮಾರ್ಪಟ್ಟ ನುಡಿ.
ತದ್ಭಾವ ಆ ಗುಣ; ಅದೇ ಭಾವ ತಾಳುವುದು.
ತದ್ಯಮ ವಿನಯ, ದಯ, ಶಾಂತ ಗುಣಗಳು.
ತದ್ವತ್ ಅದರಂತೆ, ಅದಕ್ಕೆ ಸಮಾನವಾಗಿ.
ತನ್ ತಾನ್, ತಾನು.
ತನಕ ವರೆಗೆ, ಅಲ್ಲಿಯ ವರೆಗೆ.
ತನಖಿ ವಿಚಾರಣೆ, ನ್ಯಾಯ ತೀರ್ಮಾನ.
ತನತು ತನ್ನ.
ತನಯ ಮಗ, ಪುತ್ರ.
ತನಯೆ ಮಗಳು.
ತನಿ ಹೆಚ್ಚಾಗಿ; ಸಮೃದ್ಧ; ಸಿಹಿ, ಸವಿ; ಸಂಪೂರ್ಣ; ಒಂಟಿ; ತರ್ಪಣ.
— ಕಂಪು ಸುವಾಸನೆ, ಒಳ್ಳೆ ಪರಿಮಳ.
ತನಿಗರ್ವು ಪಕ್ವವಾದ ಕಬ್ಬು, ಸವಿಯಾದ ಕಬ್ಬು.
ತನಿಗಿಡಿ ಪ್ರಜ್ವಲಿಸುವ ಕಿಡಿ; ಸಣ್ಣ ಕಿಡಿ.
ತನಿಗುದಿ ಚೆನ್ನಾಗಿ ಕುದಿಯುವುದು, ಪೂರ್ಣ ಕುದಿಯುವುದು.
ತನಿಗೆದರು ವಿಸ್ತಾರವಾಗಿ ಚೆದರು.
ತನಿಯೆರೆ ತಂಪಾಗುವಂತೆ ಹೊಯ್; ನಾಗಗಳಿಗೆ ಪೂಜಾ ಕಾಲದಲ್ಲಿ ಎರೆಯುವ ಅಕ್ಕಿ ಹಿಟ್ಟಿನ ನೀರು; ತಂಪಾಗಿ ಎರೆದುದು.
ತನಿವಣ್ ಪಕ್ವವಾದ ಹಣ್ಣು.
ತನಿವಾಲ್ ಸವಿಯಾದ ಹಾಲು.
ತನು ದೇಹ; ಸೂಕ್ಷ್ಮ, ಸಣ್ಣ; ತಂಪು; ಚರ್ಮ.
— ಉದರಿ ಸೂಕ್ಷ್ಮ ದೇಹವುಳ್ಳವಳು.
— ಜ ತನ್ನ ದೇಹದಿಂದ ಹುಟ್ಟಿದ, ಮಗ.
— ಜಾತೆ ಮಗಳು.
— ಭವ ತನ್ನಲ್ಲಿ ಹುಟ್ಟಿದ, ಮಗ.
ತನೂಕರಣ ಸಪುರವಾಗಿ ಮಾಡುವುದು.
ತನೂಜ (ತನುಜ).
ತನೂದರಿ ತೆಳ್ಳಗಿನ ನಡುವಿನವಳು, ಚೆಲುವೆ.
ತನ್ನ ನನಗೆ ಸಂಬಂಧಿಸಿದ.
ತನ್ನಿ ತೆಗೆದುಕೊಂಡು ಬನ್ನಿ.
ತನ್ಮಧ್ಯ ಆ ನಡುವೆ, ಅಷ್ಟರಲ್ಲಿ.
ತನ್ಮಯ ಅದೇ ಸ್ವರೂಪದಲ್ಲಿರುವವ; ಭೇದವಿಲ್ಲದ; ಅದರಲ್ಲಿ ಲೀನವಾದ.
ತನ್ಮಾತ್ರ ಅದೇ; ಆ ಸ್ವರೂಪ; ಚೂರು; ಶಬ್ದ–ಸ್ಪರ್ಶ–ರೂಪ–ರಸ–ಗಂಧ ಎಂಬ ಐದು.
ತನ್ವೀ ಸೂಕ್ಷ್ಮ ಶರೀರದವಳು; ಕ್ಷೀಣವಾದ ನಡುವುಳ್ಳವಳು.
ತಪ ಗ್ರೀಷ್ಮ, ಜ್ಯೇಷ್ಠ, ಆಷಾಢ ಮಾಸಗಳು; ತಪಸ್ಸು; ಸುಡುವಿಕೆ.
— ನ ಸೂರ್ಯ; ತಾಪ, ಗರಮಿ; ಗೇರು

ಮರ; ಒಣಗು; ನರಕ; ಗ್ರೀಷ್ಮಋತು, ಸೂರ್ಯಕಾಂತ ಮಣಿ.
—ನ ಸುತ ಸೂರ್ಯನ ಮಗ, ಕರ್ಣ.
ತಪನೀ ಗೋದಾವರಿ ನದಿ.
ತಪಶೀಲು (ತಪಸೀಲು).
ತಪಶ್ಚರ್ಯ ತಪಸ್ಸು, ಯೋಗ, ಧ್ಯಾನ.
ತಪಸಿ (ತಪಸಿಗ) ತವಸಿ, ಮುನಿ, ಋಷಿ.
ತಪಸ್ವಿನಿ ತಪಸ್ಸುಮಾಡುವವ, ತಾಪಸ; ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸುವವ.
ತಪಸ್ಸು ಧ್ಯಾನ; ಯೋಗ; ಚಿಂತನೆ.
ತಪಿಸು ಸುಡು, ತವಿಸು; ಸುಡಲ್ಪಡು.
ತಪೋಧನ ತಪಸ್ಸು ದ್ರವ್ಯವಾಗಿ ಉಳ್ಳವ, ತಾಪಸಿ, ಋಷಿ.
ತಪೋನಿಧಿ ತಪಸ್ವಿ, ಋಷಿ.
ತಪೋವನ ತಪಸ್ಸು ಮಾಡುವ ಅರಣ್ಯ; ಒಂದು ತೀರ್ಥ.
ತಪ್ತ ಬಿಸಿಯಾದ, ಕಾಯಿಸಿದ.
ತಪ್ಪ (ತಪ್ಪಲು).
ತಪ್ಪಲ್ (ತಪ್ಪಲು) ಪರ್ವತದ ಕಿಬ್ಬು, ಬೆಟ್ಟದ ಮುಗ್ಗುಲು; ಪ್ರಸ್ಥಾವಿಸು.
ತಪ್ಪಲ ತೊಪ್ಪಲ, ತಪ್ಪಲು, ಗುಡ್ಡದ ಪಕ್ಕ; ಸಾನು; ತಪ್ಪುವಿಕೆ, ಎಡರುವಿಕೆ.
ತಪ್ಪು ಅಪರಾಧ; ಸರಿಯಲ್ಲದ್ದು; ಪಾಪ; ಕೊರತೆ ಮಾಡದೆ ಹೋಗು; ದೊರೆಯದೆ ಹೋಗು; ಕಳಚು; ಎಡವು; ಮರೆಯಾಗು.
—ಇಸು ದೊರೆಯದೆ ಹೋಗು; ಮಾಡದಿರು.
ತಫಾವತು ವ್ಯತ್ಯಾಸ; ಕೊರತೆ, ನ್ಯೂನತೆ.
ತಬಕ (ತಬಕು), ಹರಿವಾಣ, ತಾಟು.
ತಬಲೆ (ತಬ್ಬಲೆ) ಒಂದು ಚರ್ಮವಾದ್ಯ.
ತಬ್ದೀಲು ಬದಲಾವಣೆ.
ತಬ್ಬರಿಸು ಬೆರಗಾಗು, [illegible]
ತಬ್ಬಲಿ (ತಬ್ಬಿಲಿ) ಅಪ್ರಯೋಜಕ; ತಾಯಿ ತಂದೆಗಳನ್ನು ಕಳಕೊಂಡವ; ಮಿತ್ರರಿಲ್ಲದವ, ಅನಾಥ.
ತಬ್ಬಿಬ್ಬು ಬೆದರಿಕೆ, ಭೀತಿ; ಭ್ರಮೆ.
—ಆಗು ಬೆದರು, ಭೀತಿಪಡು; ಭ್ರಮಿಸು.
ತಬ್ಬು ತಕ್ಕೈಸು, ಅಪ್ಪಿಕೊ; ಹಿಡಿದುಕೊ; ನೆಚ್ಚು, ನಂಬು.
ತಮ ತಮೋಗುಣ, ಕತ್ತಲು; ರಾಹು; ಹೊಂಗೇಮರ.
ತಮಟೆ ಒಂದು ಚರ್ಮವಾದ್ಯ, ಹಲಗೆ.
ತಮರ್ (ತವರು), ತಮ್ಮವರು.
ತಮರಸ (ತಾಮರಸ), ತಾವರೆ.
ತಮಸಾ ಒಂದು ನದಿ.
ತಮಸ್ಸು (ತಮಸ), ಕತ್ತಲು; ಅಜ್ಞಾನ; ಪಾಪ.
ತಮಂಗ(ತವಗ), ರಂಗಭೂಮಿ, ನಾಟ್ಯರಂಗ.
ತಮಂಧ (ತಮೋಂಧ) ಕಗ್ಗತ್ತಲೆ.
ತಮಾಕು (ತಂಬಾಕು), ಹೊಗೆಸೊಪ್ಪು.
ತಮಾಮು ಪೂರ್ಣ; ಮುಗಿದ; ಈ ಕೂಡಲೆ.
ತಮಾಲ ಹೊಂಗೇಮರ.
—ಪ್ರವಾಳ ಹೊಂಗೆ ಚಿಗುರು.
ತಮಾಷೆ ಹಾಸ್ಯ, ನಕಲಿ; ವಿನೋದ.
—ಗಾರ ಹಾಸ್ಯಗಾರ; ವಿನೋದಪ್ರೀತ.
ತಮಿ ಕತ್ತಲೆಯಾಗಿರುವುದು, ರಾತ್ರಿ.
—ಸ (ತಮಿಸೆ), ಕಗ್ಗತ್ತಲು; ಕೋಪ; ಅಜ್ಞಾನ.
ತಮಿಳ ತಮಿಳು ದೇಶದವ; ತಮಿಳು ಭಾಷೆ, ಅರವ.
ತಮೋಗುಣ (ನೋಡು: ತಮಸ್ಸು).
ತಮೋಪಹ ಕತ್ತಲನ್ನು ದೂರ ಮಾಡುವವ, ಸೂರ್ಯ, ಚಂದ್ರ; ಅಗ್ನಿ; ಜ್ಞಾನ.
ತಮೋಮಣಿ ಒಂದು ರತ್ನ ವಿಶೇಷ; ಮಿಂಚುಹುಳ, ಹೊನ್ನಿ ಹುಳ.

ತಮ್ಮ ಕಿರಿಯ ಸೋದರ; ತಮಗೆ ಸಂಬಂಧಿಸಿದ, ನಿಮ್ಮ.
—ತು ನಿಮ್ಮದು.
ತಮ್ಮಟೆ (ತಮ್ಮಟು), ತಂಬಟೆ, ಹಲಗೆ.
ತಮ್ಮಡಿ ದೇವರ ಅಡಿಗಳನ್ನು ಪೂಜಿಸುವವ, ಅರ್ಚಕ; ಸನ್ಯಾಸಿ; ತಪಸ್ವಿ.
ತಯಾರಿ (ತಯಾರು), ಸಿದ್ಧತೆ, ಏರ್ಪಾಡು.
ತರ್ (ತಾ), ತರು, ತೆಗೆದುಕೊಂಡು ಬಾ.
ತರ ಕ್ರಮ; ಬಗೆ, ರೀತಿ; ಸಂಸ್ತರ, ಪದರು; ದಾಟುವಿಕೆ; ತೂಕ.
—ಆವಳಿ ಬಗೆಬಗೆಯ, ಅನೇಕ ರೀತಿಯ;
—ತರ ಬಗೆಬಗೆಯ; ಕ್ರಮವಾಗಿ; ಪದರಿನ ಮೇಲೆ ಪದರು.
ತರಕಲು (ತರಗೆಲೆ) ದರಗು, ಒಣಗಿದ ಎಲೆಗಳು;ಒರಟು ಮೈ ನೆಲ; ಹಿಟ್ಟಿನ ಅಂಟುತನ.
ತರಕಾರಿ ಕಾಯಿಪಲ್ಯ.
ತರಕು (ತರಕಲು).
ತರಕ್ಷು (ಧ್ಬ) ಚಿರ್ಚು, ಚಿರತೆ; ಹುಲಿ; ಬರೆಯುಳ್ಳ ಕಿರುಬ.
ತರಗಡೆ ಕುಂದಲು; ನಷ್ಟ; ಹಾನಿ.
ತರಗು (ತರಗೆಲೆ) ಒಣಗಿದ ಎಲೆ, ದರಗು, ಕಡಿಮೆಯಾಗು; ಕುಂದುವಿಕೆ; ವಟ್ಟ.
ತರಟು ಬೋಳು.
ತರಡು ಅಂಡಕೋಶ.
ತರಣ ದಾಟುವಿಕೆ; ತ್ರಾಣ (ಸಂ), ಬಲ, ಶಕ್ತಿ;
ತರಣಿ ದಾಟುವುದು; ಸೂರ್ಯ; ತೆಪ್ಪ. ದೋಣಿ.
—ಜ ಯಮ; ಸುಗ್ರೀವ; ಕರ್ಣ; ವೈವಸ್ವತ.
ತರತಮ ನ್ಯೂನಾಧಿಕ, ಹೆಚ್ಚು ಕಡಮೆ.
ತರತರಳ ಚಂಚಲವಾದ.
ತರತರಿಸು ನಡುಗು; ಕಂಪಿಸು, ಭೀತಿಪಡು.
ತರದೂದು ಜರೂರು, ಗರ್ಜು.
ತರಪಣ್ಯ ನದಿ ದಾಟಿಸುವವನಿಗೆ ಕೊಡುವ ಸುಂಕ, ತಾರಿ ಹಣ.
ತರಪು ಕಡಮೆ ತರದ ರತ್ನ.
ತರಬು (ತರುಬು), ತಡೆದು ಹಿಡಿ, ನಿಲ್ಲಿಸು.
ತರಬೇತು ತಯಾರಿ, ಶಿಕ್ಷಣ; ನೈಪುಣ್ಯ.
ತರಲ ಸರದ ನಡುವಿನ ರತ್ನ; ಚಂಚಲ; ಕಾಮುಕ, ಕಾಮ; ವಿಸ್ತಾರ; ಮದ್ಯ, ಸಾರಾಯಿ; ಹುಡುಗ.
—ಅಕ್ಷಿ ಚಂಚಲನೇತ್ರೆ; ಚೆಲುವೆ.
ತರಲೆ ಗಂಜಿ; ಪುಕಾರು, ಚಾಡಿ; ಬಾಲೆ.
ತರವಾರಿ ಶತ್ರುಗಳನ್ನು ತಡೆಯುವುದು; ಕತ್ತಿ, ಖಡ್ಗ; ತರಹವಾರಿ, ವಿಧವಿಧ.
ತರಸ (ಧ್ಬ) ತ್ರಾಸ (ಸಂ), ಕಷ್ಟ.
ತರಸಾ ವೇಗ.
ತರಹ ವಿಧ, ರೀತಿ, ಬಗೆ.
ತರಹರ (ತರಹರಿಕೆ) ಸಾವಕಾಶ; ನಿಲುಗಡೆ; ಸಹನೆ; ಮನಶ್ಶಾಂತಿ, ಸಮಾಧಾನ.
—ಇಸು ತತ್ತರಿಸು; ನಡುಗು; ತಾಳಿಕೊ, ನಿಧಾನಿಸು.
ತರಹೀನ ರೀತಿಗೆಟ್ಟ.
ತರಳ (ತರಲ), ಬಾಲ; ಚಂಚಲವಾದ.
—ತನ ಹುಡುಗ, ತರುವಲಿ, ಬಾಲಭಾವ.
—ತೆ ಚಾಂಚಲ್ಯ.
ತರಳು (ತಳ್ಳು), ಒಣಗುವ ಹಣ್ಣು.
ತರಳೆ (ತರಲೆ), ಹುಡುಗಿ; ಚಾಡಿ; ಪುಕಾರು.
ತರಂ (ತರ) ಸರಿ; ಕ್ರಮ.
ತರಂಗ (ತರಂ—ಕ್ರಮವಾಗಿ, ಗ=ಹೊರಡುವುದು) ತೆರೆ, ಲಹರಿ, ಅಲೆ; ಅಲ್ಲಾಟ.
ತರಂಗವು ಒಂದು ನೃತ್ತ ಜಾತಿ; ಅಲೆ.
ತರಂಗಿಣಿ ತರಂಗ ಉಳ್ಳುದು, ನದಿ.
ತರಂಗಿತ ತೆರೆಯುಳ್ಳ, ಚಂಚಲವಾದ.
ತರಾತುರಿ ಆತುರ, ಅವಸರ.
ತರಿ ಕತ್ತರಿಸು; ಸಲ; ನಿಶ್ಚಯ; ದೋಣಿ,

ಹಡಗು; ಮಡ್ಡು; ಡೊರಗುತನ; ಸೇರಿಕೆ, ಹೊಂದಿಕೆ; ಮುದ್ದಾದ ಹೆಂಗಸು.

ತರಿಗೊಟ್ಟು ಅಗ್ನಿಶಿಖಿ; ಕೋಲುಕುಟಕು.

ತರಿಸಲ್ ನಿಶ್ಚಯಿಸು, ಮನಸ್ಸು ಮಾಡು.

ತರಿಸಲ ನಿರ್ಣಯ, ದೃಢಸಂಕಲ್ಪ.

ತರಿಸು ತರುವಂತೆ ಮಾಡು.

ತರಿಂಚು ಒಣ ಮರಳು, ಹೊಯ್ಗೆ, ಉಸುಬು.

ತರು ಹಾದಿಯನ್ನು ಬಿಸಿಲಿನ ತಾಪದಿಂದ ದಾಟಿಸುವುದು, ಮರ, ವೃಕ್ಷ; ತೆಗೆದು ಕೊಂಡು ಬರು; ಸೇರು.

—ಹು ತರುವಿಕೆ.

—ವಳಿ ತರುವಿಕೆ, ಕರೆದು ತರುವಿಕೆ.

ತರುಣ ಪ್ರಾಯದ, ಎಳೆ ವಯಸ್ಸಿನ; ತಕ್ಕ ಸಮಯ.

—ತೆ ತರುಣತ್ವ, ಕೋಮಲತೆ.

ತರುಣಾತಪ ಎಳೆ ಬಿಸಿಲು.

ತರುಣಿ ಪ್ರಾಯದ ಹುಡುಗಿ.

—ಮ ಯೌವನ, ಎಳೆತನ.

ತರುಬು ತಡೆ; ನಿಲ್ಲಿಸು; ಅಡ್ಡಗಟ್ಟು, ಪ್ರತಿಭಟಿಸು; ದಬ್ಬು.

ತರುವಲಿ ತರಳ, ತರಳೆ; ಹುಡುಗ; ತಾಯಿ ತಂದೆಗಳಾರೆಂದು ತಿಳಿಯದ ಕನ್ನೆ; ತಬ್ಬಲಿ.

ತರುಷಂಡ ಮರಗಳ ಗುಂಪು.

ತರುಸಲ್ (ತರಿಸಲ್), ನಿಶ್ಚಯಿಸು.

ತರುಸಲ (ತರಿಸಲ) ನಿಶ್ಚಯ.

ತರುಸಾರ ಮರದ ಸಾರ, ತಿರುಳು; ಕರ್ಪೂರ.

ತರುಹಿ ಅಲ್ಪ, ದುರ್ಬಲ.

ತರುಂಬು (ನೋಡು: ತರುಬು) ಸನ್ನೆಕೋಲು.

ತರೆಯ ಒಂದು ಜಾತಿ ಗಿಡ.

ತರ್ಕ ವಿಚಾರ; ವಿವಾದ; ನ್ಯಾಯ; ಮಿಮಾಂಸ ಮೊದಲಾದ ಶಾಸ್ತ್ರಗಳು; ಅನುಮಾನ, ಊಹೆ.

—ಅಯ್ಸು ತರ್ಕ ಮಾಡು, ವಾದಿಸು.

—ಕ ತಾರ್ಕಿಕ; ವಿಚಾರಶೀಲ.

—ವಿದ್ಯೆ ಮೀಮಾಂಸಾದಿ ಶಾಸ್ತ್ರಗಳು.

ತರ್ಕಾರಿ ಕಾಯಿಪಲ್ಯ.

ತರ್ಕಿಗ ತರ್ಕಶಾಸ್ತ್ರ ಬಲ್ಲವ; ವಾದದ ರೀತಿ ಅರಿತವ.

ತರ್ಗು (ತಗ್ಗು).

ತರ್ಜ್ (ತರ್ಜಿಸು), ಗದರಿಸು, ಬೆದರಿಕೆ ಹಾಕು.

ತರ್ಜನಿ ಬೆದರಿಸುವ ಬೆರಳು, ತೋರುಬೆರಳು.

ತರ್ಜನೆ ಗದರಿಸುವಿಕೆ, ಬೆದರಿಕೆ.

ತರ್ಜಿಮೆ (ತರ್ಜುಮೆ), ಭಾಷಾಂತರ.

ತರ್ಜಿಸು ಬೆದರಿಸು.

ತರ್ಪಣ ಗತಿಸಿದವರಿಗಾಗಿ ಮಾಡುವ ಒಂದು ವಿಧಿ, ಪಿತೃ ಯಜ್ಞ; ತೃಪ್ತಿ.

ತರ್ಬು (ತಬ್ಬು), ಅಪ್ಪು, ಆಲಿಂಗಿಸು.

ತರ್ಲೆ (ತರಳೆ) ಹರಟೆಮಾಡು; ಕೀಟಲೆ.

ತರ್ಷ ಅಭಿಲಾಷೆ, ಅಪೇಕ್ಷೆ.

ತಲ ಕೆಳಭಾಗ; ಅಂಗೈ; ಕತ್ತಿಯ ಹಿಡಿ; ಆಧಾರ, ಆಶ್ರಯ; ಸ್ವಭಾವ; ವನ; ತಲೆ; ಮಟ್ಟಭೂಮಿ; ಕುಣಿ, ಆಳ; ಹಿಡಿ; ತಾಳೆ ಮರ; ಗೇಣಿ, ಲಾವಣಿ; ಕಾರಣ.

ತಲಪು ಸೇರು; ಬರು; ಗುರಿಮುಟ್ಟು.

ತಲಬು ಸಂಬಳ, ವೇತನ; ಕೂಲಿ.

ತಲವಾರು ಕತ್ತಿ, ಖಡ್ಗ.

ತಲಾತಲ ಪಾತಾಳಲೋಕ.

ತಲಾರಿ ತಳವಾರ.

ತಲಾಸು ಶೋಧನೆ, ತಪಾಸಣೆ, ಹುಡುಕಾಟ.

ತಲುಪು (ತಲಪು).

ತಲೆ ಕುಡಿ, ತುದಿ; ಶಿರಸ್ಸು; ತಿಳಿವಳಿಕೆ; ಜನ, ಜನತೆ.

—ಕರೆ ಮರೆಸಿಕೊ, ಅಡಗಿಕೊ.

—ಕೆಳಗು ಮೇಲೆ ಕೆಳಗಾಗು.

—ಕೊಡು ಮನಸ್ಸುಕೊಡು, ಕೇಳು.

—ಡಮಡು ತಲೆಮಣಿ, ನಾಗಮಣಿ; ರತ್ನಮಯವಾದ ತಲೆ.

—ತೂಗು ಅಹುದೆನ್ನು, ಸೈಗುಟ್ಟು.

—ತೋರು ಕಾಣಿಸಿಕೊಳ್ಳು, ಮೂಡು.

—ಬಾಗು ಒಡಂಬಡು; ವಿನಯತೋರು; ವಿಧೇಯನಾಗು; ವಂದಿಸು.

—ಬೇಸರ ತುಂಬ ಬೇಸರ.

—ಹೋಕ ಉಢಾಳ; ತನ್ನ ತಲೆ ಕಳೆಯುವುದಕ್ಕೂ ಲಕ್ಷಿಸದವ.

ತಲೆತೆರಿಗೆ ತಲೆಯ ಮೇಲೆ ಹೊರಿಸುವ ತೆರಿಗೆ, ಜನಸಂಖ್ಯೆಯಂತೆ ಎತ್ತುವ ಕರ.

ತಲೆಮಾರಿ ತಲೆಗಡಿಕ.

ತಲೆಮಾರು ತಲಾಂತರ, ಪರಂಪರೆಯು.

ತಲೆಮೆರೆ ಎಲ್ಲರಿಗೂ ಮೇಲಾಗಿ ಮೆರೆ.

ತಲೆಯೋೞ್ (ತಲೆಯೋಡು), ತಲೆಪರಟೆ, ತಲೆಬುರುಡೆ.

ತಲೆವಣಿ ತಲೆಮಣಿ, ತಲೆಯಲ್ಲಿರುವ ರತ್ನ; ಹರಿಗೆ, ಡಾಲು.

ತಲೆವರಿ ಅಂಕುಶದೇಟು ತಿಂದು ಪಳಗು.

ತಲೆವಿಲ್ ಬಿಲ್ಲಿನ ತುದಿ, ಧನುಷ್ಕೋಟ.

ತಲೋದರಿ (ತಳೋದರಿ) ಅಂಗೈಯಷ್ಟು ಹೊಟ್ಟೆ ಉಳ್ಳವಳು, ಕಿರಿನಡುವಿನವಳು; ಚೆಲುವೆ.

ತಲ್ಪ ಹಾಸಿಗೆ; ಹೆಂಡತಿ; ಸ್ತ್ರೀ; ಕುಲೀನೆ; ಮಹಡಿ; ಮಾಳಿಗೆ; ಕೊತ್ತಳ.

ತಲ್ಲಿ ಕೆರೆ, ಕೊಳ.

ತಲ್ಲಜ ಸುಖ; ಚೆನ್ನು.

ತಲ್ಲಣ ಭಯ, ಭೀತಿ, ಬೆದರಿಕೆ; ದುಃಖ.

—ಇಸು ಭೀತಿಗೊಳು, ಹೆದರು; ತಳಮಳಿಸು.

—ಕೆಡು ಹೆದರಿಕೆ ಕಳೆಯು.

ತವ ನಿನ್ನ.

—ತವಗೆ ತಮತಮಗೆ.

ತವಕ ಅವಸರ; ಆತುರ; ಕುತೂಹಲ; ಆಶೆ; ವೇಗ.

—ಇಸು ಆತುರಪಡು.

ತವಕಿ ಆತುರಪಡುವವ.

ತವಚು ತೆವಟು; ಅಚ್ಚಡಿಸು; ದೊಡ್ಡ ಕಡಿಗಳನ್ನು ಕಾಳುಗಳಿಂದ ಬೇರೆ ಮಾಡುವ.

ತವಡು (ತೌಡು), ಅಕ್ಕಿಗೆ ಅಂಟಿದ ದೂಳು.

ತವದೊಣೆ ಬರಿದಾಗದ ಬತ್ತಳಿಕೆ.

ತವನಿಧಿ ಭಂಡಾರ; ಎಂದೂ ನಾಶವಾಗದ ಸಂಪತ್ತು.

ತವರ್ (ತವರು) ತವರು, ಹುಟ್ಟಿದ ಮನೆ, ತಂದೆಯ ಮನೆ.

—ಮನೆ ಹುಟ್ಟಿದ ಮನೆ.

ತವರಡವಿ ಹುಟ್ಟಿದ ಅಡವಿ.

ತವಲಾಯ ಕಟ್ಟು, ಗಂಟು; ಕರ್ಪುರದ ಪೊಟ್ಟಣ; ತಾಂಬೂಲ, ವೀಳೆಯ.

ತವಸಿ (ದ್ಭ) ತಪಸ್ವಿ (ಸಂ), ಮುನಿ.

ತವಳಿಸು ನಾಶಮಾಡು; ಉದುರಿಸು; ಬಾಡಿಸು.

ತವಾಯಿ ದಂಡ; ವಿಪತ್ತು; ಸಂಕಟ.

ತವಿಲ್ (ತವಿರ್) ಎಡರು; ದಾರಿದ್ರ್ಯ; ನಾಶ.

ತವಿಸು ಶಾಂತಮಾಡು; ಕುಂದಿಸು; ಅಡಗಿಸು; ತಗ್ಗಿಸು.

ತವು ಕ್ಷೀಣವಾಗು; ಕುಂದು; ನಾಶವಾಗು.

—ಗೆ ಕುಂದಲು; ನಾಶ; ಕೊನೆ.

ತವುಡು (ತೌಡು) ಅಕ್ಕಿ ಇಲ್ಲವೆ ಇತರ ಧಾನ್ಯಗಳ ದೂಳು.

ತವುಳಿತ ಕಾಳೆಗದ ಒಂದು ರೀತಿ.

ತವೆ ಅಧಿಕವಾಗಿ; ಚೆನ್ನಾಗಿ; ಪೂರ್ಣವಾಗಿ; ತಿರುಗಿ; ಮುಂದೆ; ಕಡಿಮೆಯಾಗು; ಕ್ಷೀಣವಾಗು; ಕಾವಲಿ; ಮುಚ್ಚಳ.

ತಸಕು ಠಕ್ಕು, ಮೋಸ, ಕಣ್ಕಟ್ಟು.

ತಸಬೀರು ಚಿತ್ರ, ಭಾವಚಿತ್ರ.

ತಸ್ಕರ ಕಳ್ಳ, ಚೋರ.
ತಸ್ತೀಕು (ತಸದೀಕು), ದೇವಾಲಯ ಮೊದಲಾದುವಕ್ಕೆ ಸರಕಾರವು ಕೊಡುವ ವರ್ಷಾಸನ, ಉಂಬಳಿ.
ತಹ ತರುವ; ತಹಾ, ಕರಾರು, ನಿರ್ಣಯ.
ತಹಸೀಲು ಕಂದಾಯ ವಸೂಲಿಯ ಗ್ರಾಮ.
—ದಾರ ಹಲವು ಗ್ರಾಮಕೂಟಗಳ ಮೇಲಿನ ಒಬ್ಬ ಅಧಿಕಾರಿ.
ತಹಿ ಕೂಟ; ಸಂಗಡ.
—ಕಾರ ಗೆಳೆಯ.
ತಳ್ ಸೇರು, ಸೇರಿಕೆ; ಸಮೀಪಿಸುವಿಕೆ; ತಡೆ; ನೂಕು; ತೊಡರು.
—ಕೆ (ತಳಿಕೆ), ಜೊತೆ, ಸೇರಿಕೆ.
ತಳ ಅಂಗಾಲು; ತಡ; ತಲೆ; ಬುಡ; ಹೊಳಹು, ಕೈ; ಸ್ಥಲ.
—ಆಗು ತಳಕ್ಕೆ ಹೋಗು, ಮುಳುಗು; ಕಡಿಮೆಯಾಗು.
—ಪ ಕಾಂತಿಯುಕ್ತವಾದ.
ತಳಕು ಕಾಂತಿ; ಬಿನ್ನಾಣ, ಒಯ್ಯಾರ; ಬೆಡಗು; ಒಲಪು, ಡಂಬ.
ತಳತಂತ್ರ ಸೇನೆ, ಸೈನ್ಯ.
ತಳಪಟ ಬಯಲು, ಮೈದಾನು; ಜಾಗ.
ತಳಮಳ ಕಳವಳ; ಸಂಕಟ; ಗಾಬರಿ; ಆತುರ; ಸಂತಾಪ.
ತಳರ್ (ತಳರು) ಹೊರಡು, ಚಲಿಸು; ತಪ್ಪು; ಪುಟ್ಟ.
—ಚು ಹೊರಡಿಸು.
—ನಡೆ ಪುಟ್ಟ ಪುಟ್ಟ ಹಜ್ಜೆ.
ತಳಲ್ ಚಿಗರು; ಮೊಗ್ಗೆಬಿಡು; ಹೊಂದು.
ತಳವಾರ (ತಳವರ), ಪಟ್ಟಣದ ಕಾವಲುಗಾರ.
ತಳವೆಳಗು ಬೆರಗು; ತಳಮಳ, ಗಾಬರಿ; ಭಯ, ಭೀತಿ.
ತಳಹದಿ ಪಾಯ, ಬುನಾದಿ.
ತಳಹು (ತಳೆಹು) ತಳೆಯುವಿಕೆ, ಪಡೆಯುವಿಕೆ.
ತಳಿ ಸೇಚಿಸು, ಚಿಮುಕಿಸು; ಸರಿಪಡಿಸು; ಚೆಲ್ಲು; ತಳೆ, ಕಾಣಿಸು; ಬಿತ್ತು; ಕುಲ, ವಂಶ; ಆಶ್ರಯ ಸ್ಥಾನ; ಬೇಲಿ; ಪಾಳೆಯ; ದೊಡ್ಡ ಮರ; ಛತ್ರ; ಚಿಗುರು.
ತಳಿಕೆ ಜತೆ, ಸಾಟ; ಜತೆಕಟ್ಟುವ ಹಗ್ಗ.
ತಳಿಗೆ ಬಟ್ಟಲು, ಹರಿವಾಣ; ತಟ್ಟೆ.
ತಳಿರ್ (ತಳಿರು) ಚಿಗುರು; ಕಿಸಲಯ; ಚಿಗುರುದೋರು.
—ಚು ಚಿಗುರುವಂತೆ ಮಾಡು.
—ಹಸೆ ಚಿಗುರಿನ ಹಾಸಿಗೆ.
ತಳಿರು (ನೋಡು: ತಳಿರ್).
ತಳಿಸು ಕುಟ್ಟು, ಅಕ್ಕಿಯ ಹೊಟ್ಟು ತೆಗೆ; ಚಿಮುಕಿಸು.
ತಳುವು ತಡಮಾಡು; ಸಾವಧಾನಿಸು; ನಿಲ್ಲಿಸು; ಬೆದರು.
ತಳೆ (ತಳ) ಹೊಂದು, ಪಡೆ; ಧರಿಸು; ಛತ್ರ, ಕೊಡೆ; ಭ್ರಾಂತು, ಹುಚ್ಚು.
ತಳ್ಕು ಆಲಿಂಗನ, ಅಪ್ಪುಗೆ; ಲೇಪನ; ಲೇಪಿಸಿಕೊಂಡ ಸ್ಥಿತಿ; ಹೊಳೆ.
—ಇಸು ಆಲಿಂಗಿಸು, ಅಪ್ಪಿಕೊ.
ತಳ್ಗು ತಗ್ಗು, ನೀಚ ಸ್ಥಾನ.
ತಳ್ಪಲ್ ತಪ್ಪಲು, ಬೆಟ್ಟದ ಬದಿ.
ತಳ್ಪೊಯ್ ತಡೆದು ನೂಕು; ಒತ್ತು, ತಗಲು, ತಾಗು; ಹೊಡೆ.
ತಳ್ಬು (ತಬ್ಬು).
ತಳ್ವು ಆಲಿಂಗನ, ಅಪ್ಪುಗೆ; ತಡ, ಸಾವಕಾಶ; ತಡಮಾಡು.
ತಳ್ಳಿ ತಂಟೆ, ಸಂಬಂಧ, ಗೊಡವೆ.
ತಳ್ಳಿಕೆ ಬೆದರಿಕೆ, ತಲ್ಲಣ, ಭೀತಿ; ನೂಕಾಟ.
ತಳ್ಳಿಕ್ಕು ಒಲಪು ಹೊಂದು; ವಿಲಾಸಗೊಳ್ಳು.
ತಳ್ಳು ನೂಕು, ದೂಡು; ಅಪಹರಿಸು; ತ್ಯಜಿಸು.
ತಂಕ ಟಂಕ.

ತಂಗಳು ತಣಿದ ಕೂಳು, ತಣಿದ ಆಹಾರ.
ತಂಗಾಳಿ ತಂಪಾದ ಗಾಳಿ, ಶೀತವಾಗಿ ಬೀಸುವ ಗಾಳಿ.
ತಂಗಿ ತರುವಾಯ ಹುಟ್ಟಿದವಳು, ಸೋದರಿ.
ತಂಗು ಎರಗು, ಪಯಣ ಮುಗಿಸಿ ನಿಲ್ಲು; ಉಳಿಯು.
ತಂಟೆ ಉಪದ್ರವ; ತೊಡಕು; ಗೊಡವೆ, ಸಂಬಂಧ.
ತಂಡ ಸಮೂಹ, ಗುಂಪು; ಪಡೆ, ದಂಡು.
—ಉಪತಂಡ ತಂಡ ತಂಡ, ಗುಂಪು ಗುಂಪು; ಸಣ್ಣ ದೊಡ್ಡ ಗುಂಪುಗಳು ಕೂಡಿ.
—ಕಾರ ಪಡೆಗೆ ಸೇರಿದವ, ದಂಡಿನವ; ಹಣ ಕೂಡಿಸಿದವ, ಧನಿಕ.
ತಂಡಕ ಸಿದ್ಧತೆ; ಸಿಂಗರಿಸುವಿಕೆ; ಜಾದುಗಾರ; ಕಪಟ; ಮರದ ದಿಂಡು.
ತಂಡವಾಳ ಎರಕದ ಕಬ್ಬಿಣ, ಬಿರುಸಾದ ಕಬ್ಬಿಣ, ಬೀಡು.
ತಂಡಸ ಇಕ್ಕಳು, ಚಿಮುಟ.
ತಂಡಿ ತೇವ, ಶೀತ; ಶೀತವಾಗಿರುವಿಕೆ.
ತಂಡು (ದಂಡ) ಮುದ್ಗರ, ಕೊದಂಟ, ಗುದ್ದಿ.
ತಂಡುಲ ಅಕ್ಕಿ.
ತಂಡಸು (ತಣಸು).
ತಂಡೆ ಕಾಲಿನ ಗಗ್ಗರ.
ತಂಡೇಲ (ತಾಂಡೇಲ), ಹಡಗಿನ ಮುಖಂಡ, ಹಡಗು ನಡೆಸುವವ.
ತಂತಿ ಸರಿಗೆ, ಸಪುರವಾದ ನೂಲು; ಟೆಲಿಗ್ರಾಮ್, ತಾರು.
—ವಾದ್ಯ ಕಿನ್ನರಿ, ವೀಣೆಯಂಥ ತಂತಿ ಉಳ್ಳ ವಾದ್ಯ.
ತಂತು ನೀರೊಳಗಿನ ಒಂದು ಪ್ರಾಣಿ, ಮೊಸಳೆ; ಸಂತತಿ, ಸಂತಾನ; ನೂಲು, ಎಳೆ; ಸರಿಗೆ.
—ಕರಣ ನೂಲುವಿಕೆ.
—ಗಾರ ಕಪಟ, ತಂತ್ರಗಾರ.
—ಪಟ ನೂಲನ್ನು ನೇದು ಮಾಡಿದ ಪಟ, ಬಟ್ಟೆ, ವಸ್ತ್ರ.
—ಮಾತ್ರು ಎಳೆಮಾತ್ರ; ಬರಿ ಕಡಮೆ; ನೆವಮಾತ್ರ.
ತಂತುನಾಭ ಜೇಡ.
ತಂತುರ (ದ್ಭ) ತಂತ್ರ (ಸಂ), ಒಳಗೆ ನೂಲುಳ್ಳುದು, ತಾವರೆಯ ನಾಳ; ಉಪಾಯ, ಯುಕ್ತಿ; ಕಪಟ.
ತಂತುವಾಯು ನೂಲನ್ನು ನೇಯುವುದು.
ತಂತ್ರ ಸಿದ್ಧಾಂತ, ಶೀರ್ಮಾನ; ಔಷಧ; ಕುಟುಂಬದ ಕೆಲಸ; ಇತರರಿಗೆ ಅಧೀನವಾಗುವುದು; ಕಾರಣ; ಅರ್ಥ; ರಾಜ್ಯದ ಚಿಂತೆ; ಪರಿವಾರದವ, ನೌಕರ; ನೇಯಿಗೆಯವ; ದ್ರವ್ಯ; ಮನೆ; ಕುಲ; ಶಿವನ ಸಂಬಂಧವಾದ ಒಂದು ಶಾಸ್ತ್ರ; ವೇದದ ಒಂದು ಶಾಖೆ; ತಂತ್ರಬಲ್ಲವ.
ತಂತ್ರೀ ಒಂದು ವೀಣೆ; ಶರೀರದೊಳಗಿನ ನಾಡಿ; ಒಂದು ನದಿ.
ತಂದಲ್ ಜಲಕಣ; ಮಳೆ; ಸೋನೆ; ಚಿಮುಕಿಸುವಿಕೆ.
ತಂದೂರಿಸು ದುಃಖಿಸು, ಚಿಂತಿಸು.
ತಂದೆ (ದ್ಭ) ತಾತ (ಸಂ), ಅಪ್ಪ.
ತಂದ್ರು ದಣಿದ, ಬಳಲಿದ; ಆಲಸ್ಯ.
ತಂದ್ರಾಲು (ತಂದ್ರಾಳು), ನಿದ್ರಾಶೀಲ, ತೂಕಡಿಸುವ ಸ್ವಭಾವದವ.
ತಂದ್ರಿ ಆಲಸ್ಯ.
ತಂಪು ತಣ್ಪು, ಶೀತ; ಶಾಂತಿ; ಹಿತ.
—ಇಸು ತಂಪಾಗಿಸು, ತಣ್ಣಗೆ ಮಾಡು; ಶಾಂತಪಡಿಸು.
—ಪಡೆ ಶೀತಹೊಂದು, ತೃಪ್ತಿಗೊಳು.
—ಪೆರ್ ತಂಪುಹೊಂದು.
ತಂಬಟೆ (ತಮಟೆ), ಒಂದು ಚರ್ಮವಾದ್ಯ.
ತಂಬಲ (ತಂಬುಲ), ಒಂದು ಜಾತಿಯ ಹುಳು.

ತಂಬಳಿ ತಂಪಾದ ಹುಳಿ; ಹಸಿ ಎಲೆಯ ಮೇಲೋಗರ.
ತಂಬಾಕು ಗುಡಾಕು, ಹೊಗೆಸೊಪ್ಪು.
ತಂಬಿಗೆ ತಾಮ್ರದ ಬಿಂದಿಗೆ, ಜಲಪಾತ್ರೆ.
ತಂಬಿಟ್ಟು ತಂಪಾದ ಹಿಟ್ಟು; ಒಂದು ಕಜ್ಜಾಯ.
ತಂಬಿಸು(ದ್ಭ) ಸ್ತಂಭಿಸು(ಸಂ), ನಿಲ್ಲಿಸು, ತಡೆ.
ತಂಬು ಡೇರೆ, ಗೂಡಾರ.
ತಂಬುಲ ಎಂಜಲು, ಬಾಯೆಂಜಲು.
—ಇಗ ತಾಂಬೂಲಿಕ, ವಿಳೆಯದ ಎಲೆ ಮಾರುವವ.
ತಂಬೂರಿ ಶ್ರುತಿಕೊಡುವ ಒಂದು ತಂತಿಯ ವಾದ್ಯ.
ತಂಬೆಳಕು ತಂಪಾದ ಬೆಳಕು.
ತಂಬೆಳಗ ತಂಪಾದ ಬೆಳಕುಳ್ಳವ; ಚಂದ್ರ.
ತಾ ತರ್, ತೆಗೆದುಕೊಂಡು ಬಾ.
ತಾಕತ್ತು ಶಕ್ತಿ, ಬಲ; ಹುಮ್ಮಸ, ಹುರುಪು.
ತಾಕೀತು (ತಾಕೀದಿ), ಹುಕುಂ; ನಿದರ್ಶನ.
ತಾಕು (ತಾಗು), ತಗಲು, ಸ್ಪರ್ಶವಾಗು; ಸೇರು; ಹೊಡೆ; ಬಂದು ಬಡಿ; ಪ್ರತಿಭಟಿಸು; ಮುಟ್ಟು; ಸೇರಿಕೆ; ಮುಟ್ಟುವಿಕೆ.
ತಾಕುಳ (ತಾಗುಳ), ಪ್ರತಿಭಟನೆಗೆ ಅಸಾಧ್ಯ ವಾದುದು.
ತಾಗು (ತಾಂಗು), ಸಂಘಟನೆ, ತಗಲುವಿಕೆ; ಬಾಗು; ದಾಟು, ನೆಗೆ; ಆಧರಿಸು.
ತಾಗುಡಿ ಅಡಗಿರುವಿಕೆ, ಮರೆಯಾಗಿರುವಿಕೆ.
ತಾಗುಳ ರೇಗಾಟ; ಉದ್ರೇಕ, ರೌದ್ರ; ತಡೆಗೆ ಬಾರದ.
ತಾಜಾ ಹೊಸ; ಹಚ್ಚ, ಹಸುರಾದ.
ತಾಜೀಮು ಮರ್ಯಾದೆಯಿಂದ ಕಾಣುವಿಕೆ, ಸಮ್ಮಾನ.
ತಾಟ ತಾಟು; ಒರಟುತನ, ಬಾಗದಿರುವಿಕೆ; ತೋರತನ; ಹೆಮ್ಮೆ.
—ಗಿತ್ತಿ ಹೆಮ್ಮೆ ಹೆಂಗಸು; ದುಷ್ಟೆ.
ತಾಟಕಿ (ತಾಟಕೆ), ಸುಕೇತು ಎಂಬ ಯಕ್ಷನ ಮಗಳು. ಬಲು ಬಲಶಾಲಿಯಾದ ಇವಳು ಸುಂದನನ್ನು ಮದುವೆಯಾದಳು. ಇವಳ ಮಗನು ಮಾರೀಚ. ಋಷಿಶಾಪದಿಂದ ಇವರಿಬ್ಬರೂ ರಾಕ್ಷಸರಾದರು.
—ತನ ಜಗಳಾಡುವ ಶೀಲ, ದುರ್ವೃತ್ತಿ.
ತಾಟಡಕೆ ಅಡಕೆಗಳನ್ನು ಒಂದಕ್ಕೊಂದು ತಾಗಿಸಿ ಆಡುವ ಆಟ.
ತಾಟಂಕ (ತಾಲಕ) ಓಲೆ, ಕಿವಿಯೋಲೆ.
ತಾಟಾಡಿಸು ಒಂದಕ್ಕೊಂದು ತಗಲಿಸು.
ತಾಟಿ ಗಂಟಕ್ಕಿ; ತೊಗಟೆ; ಜಗಳವನ್ನು ಗಂಟು ಹಾಕಿ.
ತಾಟು ತಾಡು, ತಗುಲು; ಹೊಡೆ; ತಗಲಿಕೆ; ಲೋಹದ ಹರಿವಾಣ; ತಟ್ಟು, ಗೋಣಿ ಚೀಲ; ಡಂಬ; ಊಟದ ತಟ್ಟೆ.
—ಇಸು ತಗಲಿಸು, ತಾಗಿಸು.
—ಗಾರ ಜಗಳಗಂಟ; ಡಂಬಗಾರ; ಹೆಮ್ಮೆಯವ.
ತಾಡ (ತಾಳ) ತಾಳೆ, ತಾಳ ಹಾಕುವಿಕೆ; ಸದ್ದು.
—ಇಸು ಹೊಡೆ, ಬಡಿ; ಸಂಪರ್ಕಗೊಳಿಸು
ತಾಡನ (ತಾಡನೆ) ಹೊಡೆಯುವಿಕೆ, ಹೊಡೆತ.
ತಾಡನಿ ಚಬುಕು, ಬಾರುಕೋಲು, ಚಾಟಿ.
ತಾಡಪತ್ರ ತಾಡವಾಲೆ, ಓಲೆ ಗರಿ.
ತಾಡಿಗ್ಯ ಒಂದು ವಿಧದ ಬಾತುಕೋಳಿ.
ತಾಣ (ದ್ಭ) ಸ್ಥಾನ (ಸಂ), ಬೀಡು, ಆಶ್ರಯ.
ತಾಣಂದರ (ದ್ಭ) ಸ್ಥಾನಾಂತರ (ಸಂ), ಸ್ಥಳ ಬದಲಿಸುವಿಕೆ, ತಾವು ಬದಲಾಗುವುದು.
ತಾಣು (ದ್ಭ) ಸ್ಥಾಣು (ಸಂ), ಶಿವ.
ತಾತ ತಂದೆ; ಅಜ್ಜ; ಪೂಜಾರ್ಹನಾದವನು.
ತಾತಿ (ತಾಳಿ) ಮಂತ್ರರಕ್ಷೆಯುಳ್ಳ ಲೋಹದ ನಳಿಗೆ, ತಾಯಿತು.

ತಾತ್ಕಾಲಿಕ ಆಕಾಲದ; ಕೂಡಲೆ ಆ ಗಿಹೋ ಗುವ; ತುರ್ತಿನ.

ತಾತ್ಪರ್ಯ ಅಭಿಪ್ರಾಯ, ಆಶಯ; ತತ್ಪರತೆ.

ತಾತ್ಪೂರ್ತಿ ಹೆಸರಿಗಷ್ಟು, ನಿಮಿತ್ತಮಾತ್ರ.

ತಾತ್ಸಾರ ತಿರಸ್ಕಾರ, ನಿಂದೆ, ಉಪೇಕ್ಷೆ.

ತಾದರ್ಥ್ಯ ಓಸುಗ; ಅದೇ ಉದ್ದಿಶ್ಯವಾಗಿ.

ತಾದೃಶ (ತಾದೃಕ್ಷ) ಅದರಂತೆ, ಅದರ ಹಾಗಿರುವ.

ತಾನ್ (ತಾನು), ಹೇಳುವ ವ್ಯಕ್ತಿ.

ತಾನ ತಾವರೆಯ ತಂತು; ಆಲಾಪ (ಗೀತದಲ್ಲಿ); ಎಳೆದುದು; ವಿಶಾಲತೆ, ವಿಸ್ತಾರ.

ತಾನು ತನುವಿಗೆ ಸಂಬಂಧಿಸಿದ್ದು; ತಾನ, ರಾಗಾಲಾಪ; ಬಟ್ಟೆಯ ಕಟ್ಟು; ಬಲೆ.

ತಾಪ ದುಃಖ; ಬೇಗೆ, ಸೆಕೆ, ಕಾವು; ತಾಗುವ.

ತಾಪಣೆ (ದ್ಭ) ಸ್ಥಾಪನಾ (ಸಂ), ಇರುವಿಕೆ; ಪ್ರತಿಷ್ಠೆ, ನಡುವಿಕೆ; ದೇವಾಲಯ.

ತಾಪತ್ರಯ ಮೂರು ವಿಧದ ಬಾಧೆಗಳು— (1) ತನ್ನ ಶರೀರದಲ್ಲಿ ಹುಟ್ಟುವ ಜ್ವರಾದಿ ಗಳು (2) ದೈವಿಕವಾದ ಅತಿವೃಷ್ಟಿ ಅನಾ ವೃಷ್ಟಿ ಮೊದಲಾದುವು (3) ಅಧಿ ಭೌತಿಕ ವಾದ ಅಂದರೆ ಹುಲಿ ಕರಡಿ ಮೊದಲಾದವು ಇವುಗಳಿಂದ ಬರುವ ಹೊರಗಿನ ಬಾಧೆ.

ತಾಪಸ ತಪಸ್ವಿ, ಋಷಿ.

—ತರು ತಪಸ್ವಿಗಳಿಗೆ ಉಪಯುಕ್ತವಾದ ಮರ; ಇಂಗುವೇಲ ಮರ, ಇಂಗಳ ಮರ.

ತಾಪಾಳ್ (ತಾಪಾಳು), ಅಗಳಿ, ಚಿಲಕ.

ತಾಪಿ ಉರಿಯಿಂದ ದಣಿದ; ಗಾರೆ ಹಾಕುವ ಒಂದು ಸಾಮಗ್ರಿ.

ತಾಪಿಂಜ (ತಾಪಿಂಛ) ತಾಪ ಹರಿಸುವ ಮರ, ಹೊಂಗೆಯ ಮರ, ಹುಲಗಲ ಮರ.

ತಾಪೀ ತಪತೀ ನದಿ.

ತಾಪು ತಾಹೆ; ಕುಣಿಯುವ ಮನೆ; ವೇಶ್ಯೆಯ ಮನೆ, ಸೂಳೆಯ ಮನೆ.

ತಾಪೆ ನೃತ್ಯಗಾರರ ಕೂಟ.

ತಾಬೆ ಆಶ್ರಯ; ಆಶ್ರಯದಲ್ಲಿರುವ.

—ದಾರ ಆಶ್ರಯಿ; ಹೊಂದಿರುವವ.

ತಾಬೇಲು ಕಡಲಾವೆ, ಆವೆ.

ತಾಮ್ ತಾವು; ಹಾಳೆ.

ತಾಮರ ನೀರು; ಅಹಂಕಾರ; ಉದ್ಧಟತನ.

ತಾಮರಸ ನೀರಲ್ಲಿ ಹುಟ್ಟುವುದು, ತಾವರೆ; ಬಂಗಾರ.

ತಾಮರೆ (ತಾವರೆ), ದದ್ರು, ತದ್ದು.

ತಾಮಸ ಅಜ್ಞಾನ, ಮೂರ್ಖತೆ; ಜಡತೆ; ತಡೆಯುವುದು, ಸಾವಕಾಶ; ರಾಹುವಿನ ಸಂತಾನ; ಕೇತು; ರಾತ್ರಿ.

—ಗಾರ ತಡಮಾಡುವವ, ಅಲಸಿ.

—ಗೆಯ್ ತಡಮಾಡು.

ತಾಮಸಿ ಜಡ ಪ್ರಕೃತಿಯವ, ಜಡಶೀಲ.

ತಾಮಿಸ್ರ ಒಂದು ಮಹಾನರಕ; ಅಜ್ಞಾನ; ರಾಕ್ಷಸ.

ತಾಮ್ರ (ತಾಮ್ರಕ) ಒಂದು ಲೋಹ; ಕೆಂಬಣ್ಣ; ಒಂದು ಬಗೆಯ ಕುಷ್ಠರೋಗ.

ತಾಮ್ರಕರ್ಣಿ ಒಂದು ಆನೆಯ ಹೆಸರು.

ತಾಮ್ರಕೇತು ತಾಮ್ರಧ್ವಜ. ಇವನು ರತ್ನ ಪುರದ ಮಯೂರಧ್ವಜನ ಮಗ.

ತಾಮ್ರಚೂಡ ಕೆಂಪಾದ ಜುಟ್ಟುಳ್ಳುದು, ಕೋಳಿ, ಹುಂಜ.

ತಾಮ್ರಧ್ವಜ ಮಯೂರಧ್ವಜನ ಮಗ.

ತಾಮ್ರಪರ್ಣಿ ದಕ್ಷಿಣ ಹಿಂದುಸ್ಥಾನದಲ್ಲಿ ಹರಿಯುವ ಒಂದು ನದಿ.

ತಾಮ್ರಮುಖಿ ಕೆಮ್ಮೋರೆಯವ, ರೆಡ್ ಇಂಡಿಯನ್.

ತಾಮ್ರಾಧರೆ ಕೆಂಪಾದ ತುಟಿಯುಳ್ಳವಳು; ಸುಂದರಿ, ಚೆಲುವೆ.

ತಾಯ್ (ತಾಯಿ) ಪಡೆದವಳು, ಹೆತ್ತವಳು, ಅಮ್ಮ, ಅವ್ವ, ಅಬ್ಬೆ.

ತಾಯಿತ (ತಾಯತ) ತಾತಿ, ಮಂತ್ರರಕ್ಷೆ.
ತಾಯಿಬೇರು ಗಿಡದ ತಾಳಿಂದ ನೇರಾಗಿ ಇಳಿಯುವ ದಪ್ಪದ ಬೇರು.
ತಾಯ್ಮಳಲು ನದಿ ಇಲ್ಲವೆ ಕಡಲಿನ ತಳದ ಮಳಲು, ಹೊಳೆಯ ತಳದ ಉಸುಬು.
ತಾರ್ (ತಾರು), ಬತ್ತು, ಒಣಗು; ತಾ; ಬಾಡು; ಉದುರು.
ತಾರ ಬೆಳ್ಳಿ; ಮುತ್ತು; ಎರಡು ಪೈ, ದುಗ್ಗಾಣಿ; ದಾಟುವಿಕೆ, ಪಾರಾಗುವಿಕೆ; ತಾರಕಸ್ವರ; ಪರ್ವತ; ಶುಭ್ರ; ತಾರೆ, ಚುಕ್ಕಿ; ಬೆಳ್ಳಿ; ತಾ.
ತಾರಕ ದಾಟಸುವುದು; ಸಂಸಾರದಿಂದ ದಾಟಸುವ 'ಓಂ' ಮಂತ್ರ; ಕಣ್ಣುಗುಡ್ಡೆ; ನಕ್ಷತ್ರ; ಒಬ್ಬ ರಾಕ್ಷಸ; ಮೇಲಿನ ಸಪ್ತಕದ ಸ್ವರ; ಕೊನೆಮುಟ್ಟದ.
ತಾರಕಾಸುರ ಕಶ್ಯಪ ಋಷಿಯ ಮೊಮ್ಮಗನಾದ ಒಬ್ಬ ಶಕ್ತಿಶಾಲಿ ಅಸುರ. ಇವನ ನಾಶ ಷಣ್ಮುಖನಿಂದಾಯಿತು.
ತಾರಕೆ (ತಾರಗೆ), ಕಡಲು ದಾಟಲು ನೆರವಾಗುವುದು, ತಾರೆ, ನಕ್ಷತ್ರ.
ತಾರಡಿ ಒಣಗಿದ ಸ್ಥಿತಿ.
ತಾರಣ ದಾಟುವಿಕೆ; ಎದುರಿನ ದಡ ಸೇರುವುದು; 18ನೆಯ ಸಂವತ್ಸರ.
ತಾರತಮ್ಯ ವ್ಯತ್ಯಾಸ, ಹೆಚ್ಚುಕಡಮೆ, ಅಂತರ.
ತಾರಯ್ಸು ತಾರಕದಲ್ಲಿ ಹಾಡು; ಕೀರು ಧ್ವನಿಯಿಂದ ಕೂಗು.
ತಾರಲ್ ಪೊದರು, ಪೊದೆ, ಹಳು; ಕಂಟ.
ತಾರಸಿ ಇಟ್ಟಿಗೆ ಗಾರೆಗಳ ಕೆಲಸ.
ತಾರಹಾರ ಮುತ್ತಿನ ಸರ.
ತಾರಾ (ತಾರೆ) ನಕ್ಷತ್ರ; ವಾಲಿಯ ಹೆಂಡತಿ.
—ಅಧಿಪ ಚಂದ್ರ.
—ಪಥ ಗಗನ, ಆಕಾಶ; ಮುಗಿಲು.
—ಬಲ ಗ್ರಹಬಲ.
ತಾರಾಚಲ ಬೆಳ್ಳಿಯ ಬೆಟ್ಟ, ಕೈಲಾಸಪರ್ವತ.
ತಾರಾಪೀಡ ಚಂದ್ರಾಪೀಡನ ತಂದೆ.
ತಾರಿ ಶಕುನ; ಕಡವು, ಕಳು, ನದಿ ದಾಟುವ ಸ್ಥಳ; ನೋಟ.
ತಾರಿಗ ಒಣಕಲು ರಾಶಿ.
ತಾರಿಣಿ ದುರ್ಗೆ.
ತಾರೀಖು ತೇದಿ, ದಿನ.
ತಾರೀಫು ಹೊಗಳಿಕೆ, ಪ್ರಶಂಸೆ; ಕುಚೇಷ್ಟೆ.
ತಾರು ಡಾಮರು; ಇಬ್ಬಾಗಿಲು; ತಂತಿ, ಟೆಲಿಗ್ರಾಮ್; ಅವ್ಯವಸ್ಥೆ; ಒಣ ಅಡಕೆ; ಅಡಕೆ ಗೊಂಚಲು; ಒಣಗು; ಅತ್ತಿತ್ತ ಓಡು.
ತಾರುಣ್ಯ ಪ್ರಾಯ, ಯೌವನ, ಹರೆಯ.
ತಾರುತಟ್ಟು ಕಂಡಾಬಟ್ಟೆ, ಚೆಲ್ಲಾಪಿಲ್ಲಿ.
ತಾರೆ ಮುತ್ತು; ಕಣ್ಣುಗುಡ್ಡೆ; ನಕ್ಷತ್ರ; ತಾರಲ್, ಬತ್ತಲು, ಕೃಶವಾಗಲು.
ತಾರ್ಕಣೆ ತಾರತಮ್ಯ, ವ್ಯತ್ಯಾಸ, ಭೇದಭಾವ; ತಾನೇ ಪರಿಶೀಲಿಸುವಿಕೆ.
ತಾರ್ಕಿಕ ತರ್ಕಶಾಸ್ತ್ರಬಲ್ಲವ; ತರ್ಕಶಾಸ್ತ್ರ ಬರೆದ ಗೌತಮ, ಕಣಾದ, ಬೃಹಸ್ಪತಿ ಮೊದಲಾದವರು.
ತಾರ್ಕ್ಷ್ಯ ಗರುಡ; ಅರುಣ; ಸರ್ಪ; ಕುದುರೆ; ಬಂಗಾರ.
ತಾರ್ಗೂಡು ಬೇರೆ ಬೇರೆ ಕಡೆಯಿಂದ ಬಂದು ಸೇರು, ಒಟ್ಟು ಸೇರು.
ತಾರ್ಣ ಹುಲ್ಲಿಂದಾದ.
ತಾರ್ಮುಟ್ಟು ಎದುರೇಟು.
ತಾರ್ಯ ದಾಟಬಹುದಾದ; ದಾಟುವಿಕೆ; ದಾಟದ್ದಕ್ಕೆ ಕೊಡುವ ಮಜೂರಿ (ಹಣ).
ತಾಲ (ತಾಳ), ತಾಳೆಯ ಮರ; ಕಿಣಿ ಕಿಣಿ ಸದ್ದು ಮಾಡುವ ಕಂಚಿನ ವಾದ್ಯ; ಕತ್ತಿಯ ಹಿಡಿ; ಕಾಲಬದ್ಧವಾದ ಗತ್ತು; ಬೀಗ; ಅರೆದಾಳ; ಅಗಳಿ.
—ಪತ್ರ ತಾಳೆಯೆಲೆ, ತಾಡವಾಲೆ.
—ಮುದ್ದು ಹೆಂಡ.

ತಾಲಕ ತಾಳೆಗರಿ.
ತಾಲಜಂಘ ತಾಳೆಮರದಂಥ ಕಾಲು; ನೀಳ ಗಾಲು, ಉದ್ದಗಾಲು.
ತಾಲವ್ಯ ಅಂಗಗಳಿಗೆ ಸಂಬಂಧಿಸಿದ, ಬಾಯ ಒಳಮುಳಿಗೆಯಿಂದ ಹೊರಡುವ ಸ್ವರ.
ತಾಲಾಂಕ ತಾಳೆಮರದ ಗುರುತುಳ್ಳ ಧ್ವಜ ಉಳ್ಳವ; ಬಲರಾಮ; ಭೀಷ್ಮ.
ತಾಲಿ (ತಾಳಿ), ಮಂಗಲಸೂತ್ರ ಒಡವೆ; ಸ್ಥಾಲಿ (ಸಂ), ಥಾಲಿ, ಪಾತ್ರೆ, ಲೋಟ.
ತಾಲೀಮು ಅಭ್ಯಾಸ; ವ್ಯಾಯಾಮ.
—ಖಾನೆ ಗರಡಿಮನೆ, ಗೋದು.
ತಾಲು ದವಡೆ; ನಾಲಗೆ; ಅಂಗಳ.
ತಾಲೂಕು (ತಾಲುಕ), ಜಿಲ್ಲೆಯ ಭಾಗ.
ತಾವಕ ತಮ್ಮ.
ತಾವಡ ಮಾಲೆ, ಸರ; ತಾವರೆ ಮಣಿಗಳ ಸರ.
ತಾವತ್ ಅಷ್ಟಕ್ಕೆ, ಆಗ; ಅಷ್ಟು ದೊಡ್ಡ; ಅದರಂಥ; ಅಂಥ.
ತಾವರೆ ಕಮಲ.
ತಾವು ನೀವು; ಕಾಗದದ ಹಾಳೆ, ಹಾಳೆ; ಸ್ಥಳ, ಠಾವು, ಜಾಗ.
ತಾಸು ಗಂಟೆ, 60 ನಿಮಿಷಕಾಲ.
ತಾಸೆ ತಾಸುಮಾರು, ಒಂದು ಬಗೆಯ ಚರ್ಮ ವಾದ್ಯ.
ತಾಹೆ (ನೋಡು: ತಾಪು).
ತಾಳ್ (ತಾಳ) ತಾಳೆಯ ಮರ; ದಂಟು, ಬುಡ; ತಾಳು; ಧರಿಸು; ಸಹಿಸು; ಮುಳುಗು
—ಮೆ ಸಹನೆ, ಸಹನ ಶೀಲತೆ.
ತಾಳ (ತಾಲ), ಬಡಿಯುವ ಕಂಚಿನ ವಾದ್ಯ; ಕಾಲಬದ್ಧವಾದ ಸದ್ದು, ಗತ್ತು; ಅಗಳ; ನಾಲಗೆ, ತಾಳಿ.
—ಗಣನೆ ತಾಳದ ಲೆಕ್ಕ.
—ಗತಿ ತಾಳದ ಪೆಟ್ಟುಗಳ ರೀತಿ.
—ಮಾನ ತಾಳವನ್ನು ಅಳೆಯುವಿಕೆ.

ತಾಳವಟ್ಟ ತಾಳೆ ಓಲೆಯ ಬೀಸಣಿಗೆ; ಆಲ ವಟ್ಟ; ಒಂದು ಬಗೆಯ ಹೊಡೆತ.
ತಾಳಿ (ತಾಲಿ), ಮಾಂಗಲ್ಯ ಸೂಚಕಹಾರ; ಮಂಗಳಸೂತ್ರ; ತಾಳೆಯಮರ; ಕುರುಳಿನರಾತಿ
ತಾಳಿಕೆ ಸಹಿಸುವಿಕೆ, ತಾಳ್ಮೆ; ಬಾಳಿಕೆ.
ತಾಳಿಗೆ ನಾಲಗೆ; ಗಂಟಲು; ಅಂಗಳ.
ತಾಳಿಮೆ (ತಾಳ್ಮೆ).
ತಾಳಿಸು ಉಳಿಯುವಂತೆ ಮಾಡು; ಉದುರಿಸು; ಮಸೆ; ಹುರಿ; ಸುಡು.
ತಾಳು ಕಾಂಡ, ದಿಂಡು; ಬುಡ; ಸಹಿಸು; ಮುಳುಗು; ಉದುರು, ಕಳಚಿಬೀಳು.
ತಾಳುಗೆ (ತಾಳಿಗೆ) ನಾಲಗೆ; ಗಂಟಲು.
ತಾಳೆ (ತಾಳ) ಸೀತಾಳಿ, ತೆಂಗು, ಹನೆ ಮೊದಲಾದ ಓಲೆಗರಿಯ ಮರಗಳು.
ತಾಂಕು (ತಾಂಗು), ತಾಗು, ತಾಗುವಿಕೆ.
ತಾಂಗು ಆಧರಿಸು; ಸಹಿಸು; ತಡೆ.
ತಾಂಟು ದಾಂಟು; ನೆಗೆ, ಜಿಗಿ; ಬಡಿ.
ತಾಂಡವ ಶಿವನ ಒಂದು ನೃತ್ಯ ರೀತಿ; ನೃತ್ಯ.
ತಾಂತ ದಣಿದ; ಬೇಸರಗೊಂಡ; ಬಾಡಿದ.
ತಾಂತ್ರಿಕ ತಂತ್ರಶಾಸ್ತ್ರಕ್ಕೆ ಸಂಬಂಧಿಸಿದ; ಪಂಡಿತ; ತಂತ್ರಶಾಸ್ತ್ರ ಬಲ್ಲ ಪಂಡಿತ.
ತಾಂಬಸಿ ಒಂದು ಗಿಡ ಜಾತಿ.
ತಾಂಬಣ (ತಾಬಾಣ) ತಾಮ್ರದ ಹರಿವಾಣ.
ತಾಂಬೂಲ ವೀಳೆಯ, ವೀಳೆಯದ ಎಲೆಅಡಕೆ
—ಇಕ ವೀಳೆಯ ಮಾರುವವ.
ತಾಂಬೇಲು (ತಾಬೇಲು) ಅಪೂರ್ವವಾಗಿ.
ತಿಕ (ಸಂ) ತಿಗ (ದ್ಭ), ಮೂರು ಎಲುಬುಗಳು ಸೇರುವಲ್ಲಿ, ಮುಕುಳಿ, ಗುದ.
ತಿಕಡಿ (ತಿಗಟ) ಕಲ್ಲುಕುಟಿಗನ ಮಟ್ಟ.
ತಿಕ್ಕ (ದ್ಭ) ತೀಕ್ಷ್ಣ (ಸಂ), ಹರಿತ; ಕಟು.
ತಿಕ್ಕಲು ಕಂಪನ; ಅಲುಗು; ಮಾತಿನ ನಡುಕು.
ತಿಕ್ಕು ಮಸೆ; ತಾಟು; ಉಜ್ಜು; ನೋಯಿಸು.
—ಆಟ ತಾಕಲಾಟ; ಜಗಳ; ಕ್ಲೇಶ.

ತಿಕ್ತ ಕಹಿ; ಕಾರ; ಹರಿತ.

—ಕ ಕಹಿಯಾದ, ಕಾರವಾದ.

ತಿಗಟು ತೊಗಟೆ, ಕೆತ್ತೆ.

ತಿಗಡು (ತಿಗಡೆ), ನಡುಗು; ಸಿಪ್ಪೆ; ಕೆತ್ತೆ.

ತಿಗಣೆ (ತಗಣೆ), ಒಂದು ಉಪದ್ರಕಾರಿ ಕೀಟ.

ತಿಗರಿ (ತಿಗುರಿ).

ತಿಗಳ್ ತೆಗಳು; ನಿಂದೆ.

ತಿಗಳ ತಮಿಳ, ದ್ರವಿಡ, ಒಂದು ಜನವರ್ಗ.

ತಿಗುಣ (ದ್ಭ) ತ್ರಿಗುಣ (ಸಂ), ಸತ್ವ–ರಜ–ತಮೋ ಗುಣಗಳು.

ತಿಗುರಿ ಕುಲಾಲ ಚಕ್ರ, ಕುಂಬಾರನ ಚಕ್ರ; ಸುಳಿ.

ತಿಗುರು ಹಚ್ಚು, ಲೇಪಿಸು; ಮೂಸು, ತೊಡೆ; ತಿಕ್ಕು, ತೀಡು; ಒಂದು ಪರಿಮಳ ದ್ರವ್ಯ.

ತಿಗುಳ ದ್ರವಿಡ; ತಮಿಳ; ಕಾಸ್ತಾರ.

ತಿಗ್ಮ ತೀಕ್ಷ್ಣ; ಪ್ರಕಾಶ; ಮೊನಚಾದ; ಬಿಸಿಯಾದ.

—ಅಂಶ ತೀಕ್ಷ್ಣ ಕಿರಣವುಳ್ಳವ, ಸೂರ್ಯ.

ತಿಟ್ಟ ರಾಶಿ; ಚಾವಡಿ; ಚಿತ್ರ ಬರೆದಿರುವ ಚಾವಡಿ.

—ಇಡು ಸ್ಪಷ್ಟವಾಗಿ ಹೊಳೆ, ಚಿತ್ರದಂತೆ ವ್ಯಕ್ತವಾಗು; ಏರಿನಂತೆ ಕಾಣಿಸು.

ತಿಟ್ಟನೆ ಅವಸರದಲ್ಲಿ; ಸುತ್ತಿಸುತ್ತಿ; ತಪ್ಪು ತಪ್ಪಾಗಿ.

ತಿಟ್ಟು ಬಯ್ಯು; ಬೈಗಳು; ದಿನ್ನೆ, ಗುಡ್ಡ; ಭಂಗಿ.

ತಿಟ್ಟೆ ದಿನ್ನೆ, ದಿಬ್ಬ.

ತಿಣ (ದ್ಭ) ತೃಣ (ಸಂ), ಹುಲ್ಲು.

ತಿಣಿ ಬೆರಸು; ದಟ್ಟವಾಗಿ ಸೇರು; ತುಂಬು.

ತಿಣುಕು ತ್ರಾಣಹಾಕು, ಹೆಂಗೆಯ ಕಾಲದಲ್ಲಿ ಮಾಡುವಂತೆ ಬಲಹಾಕು; ಗಿಂಡು; ಬಿಕ್ಕು.

ತಿಣ್ಣ ತೀಕ್ಷ್ಣ; ಭಾರ; ಕಠಿಣ; ದುರ್ಭರ, ಹೆಚ್ಚು; ದಟ್ಟ.

—ನೆ ಹೆಚ್ಚಾಗಿ.

ತಿತವು ಜರಡೆ, ಸಾರಣಿಗೆ, ಚಾಲನಿ.

ತಿತಿಕ್ಷೆ ಕ್ಷಮೆ, ಸಹನೆ; ಶೀತೋಷ್ಣ ಸಹಿಸುವಿಕೆ.

ತಿತಿಕ್ಷು ಸಹಿಷ್ಣು, ಶೀತೋಷ್ಣ ಸಹಿಸುವವ.

ತಿತ್ತಿರಿ (ತಿತ್ತೀರ), ತಿತ್ತಿರಿ ಎಂದು ಕೂಗುವ ಹಕ್ಕಿ; ಮಿಂಚುಳ್ಳಿ; ತುಂಬಿ; ಕಿಕ್ಕಿರಿಯುವಷ್ಟು.

ತಿಥಿ ಚಾಂದ್ರಮಾನ ತಿಂಗಳಿನ ಒಂದು ದಿನ; ಶ್ರಾದ್ಧ.

—ಕ್ಷಯ ಅಮಾವಾಸ್ಯೆ.

ತಿದಿ ಚರ್ಮ; ಕುಲುಮೆಗೆ ಗಾಳಿಯೊತ್ತುವ ಸಾಧನ.

ತಿದ್ದು (ತಿರ್ದು), ಸರಿಪಡಿಸು; ಸುಧಾರಿಸು; ತರಬೇತಿ ಮಾಡು, ಸಂದಾಯ ಮಾಡು.

—ಇಕೆ ಸರಿಪಡಿಸುವಿಕೆ.

—ಪಡಿ ತಪ್ಪಾದುದನ್ನು ಸರಿಮಾಡುವುದು

ತಿನ್ (ತಿನ್ನು) ಕಚ್ಚು; ಉಣ್ಣು.

ತಿನಸು (ತಿನಿಸು) ಆಹಾರ; ತಿಂಡಿ, ನವೆ, ತುರಿಕೆ.

ತಿನಿಹಿ (ತೀನಾಳಿ), ತಿನ್ನುವ ಸ್ವಭಾವವುಳ್ಳುದು.

ತಿನ್ನ ತಿಂದು ಉಳಿದುದು; ಉಚ್ಚಿಷ್ಟ; ಎಂಜಲು.

ತಿನ್ನು (ತಿನ್) ಊಟಮಾಡು, ಉಣ್ಣು; ಅನುಭವಿಸು.

ತಿಪುರ (ದ್ಭ) ತ್ರಿಪುರ (ಸಂ), ಒಬ್ಬ ರಾಕ್ಷಸ.

ತಿಪ್ಪ ತಿಪ್ಪೆ, ರಾಶಿ; ಕಸದ ರಾಶಿ.

ತಿಪ್ಪು (ತಿರುವು), ಬಾವು, ಮುರಿ.

ತಿಪ್ಪುಳ್ (ತುಪ್ಪುಳು), ಹಕ್ಕಿಯ ಗರಿ.

ತಿಪ್ಪೆ ಕಸದ ರಾಶಿ, ಸಗಣಿ ರಾಶಿ.

ತಿಬ್ಬ (ದ್ಭ) ತೀವ್ರ (ಸಂ).

ತಿಬ್ಬಳಿ (ತಿಳಿವಳಿ), ಅರಿವು, ಜ್ಞಾನ.

ತಿಬ್ಬು ತಿರುವು; ಹೆದೆ, ಬಿಲ್ಲಿನ ಹಗ್ಗ.

ತಿಮಿ ದೊಡ್ಡ ಮೀನು, ತಿಮಿಂಗಿಲ; ತಿವಿ.

ತಿಮಿತ (ದ್ಭ) ಸ್ತಿಮಿತ (ಸಂ), ಅಲುಗದಿರುವುದು; ತಿವಿತ, ಚುಚ್ಚುವಿಕೆ.

ತಿಮಿರ್ ಹಚ್ಚು; ಚರ್ಮವನ್ನು ತಿಕ್ಕು.
ತಿಮಿರ ಕತ್ತಲು, ನಿಶಿ; ಅಜ್ಞಾನ; ದುಃಖ; ರಾಹು; ಮೂಢ ಭಕ್ತಿ; ಕಪಟ; ಒಂದು ಬಗೆಯ ಕಣ್ಣುರೋಗ.
—ರಿಪು ಜ್ಞಾನ; ಸೂರ್ಯ.
ತಿಮಿಂಗಿಲ ಸಾಗರಗಳಲ್ಲಿ ವಾಸಿಸುವ ಮಹಾ ಮೀನು, 'ವೇಲ್' ಮೀನು, ಹೆಮ್ಮೀನು.
ತಿಮ್ಮ ತಿರುಮಲೇಶ್ವರ; ಕಪಿ.
ತಿರ (ದ್ಭ) ಸ್ಥಿರ (ಸಂ).
ತಿರಶ್ಚೀನ ಅಡ್ಡ, ಅಡ್ಡಲಾಗೆ, ಅಡ್ಡಾತಿಡ್ಡಿ.
ತಿರಸ್ ಅಡಗುವಿಕೆ; ತಿರಸ್ಕಾರ; ತೆರೆ, ಜವನಿಕೆ.
ತಿರಸ್ಕಾರ ಅನಾದರ; ನಿರಾಕರಣೆ; ಅಪಮಾನ; ಬೈಗಳು.
—ಇಸು (ತಿರಸ್ಕರಿಸು) ಅನಾದರಿಸು; ನಿಂದಿಸು; ಅಪಮಾನಿಸು.
ತಿರಸ್ಕೃತ ಅಪಮಾನಿಸಲ್ಪಟ್ಟ, ನಿರಾಕರಿಸಲ್ಪಟ್ಟ, ತೊರೆಯಲ್ಪಟ್ಟ.
ತಿರಿ ತಿರುಗಾಡು; ಭಿಕ್ಷೆಗಾಗಿ ಅಲೆ; ಕೊಯ್ಯು, ಹೂಕೊಯ್ಯು; ಎಸೆ; ಬದಲಿಸು; ತಿರುಪು, ಮುರಿ, ಬಾಗು; ಭತ್ತದ ಕಣಜ.
—ಕೂಳ್ ಬೇಡಿತಂದ ಅನ್ನ.
ತಿರಿಕಲ್ಲು ಆಣೆಕಲ್ಲು; ಆಲಿಕಲ್ಲು.
ತಿರಿಗಿಸು (ತಿರುಗಿಸು).
ತಿರಿಚು ತಿರುಪು; ಹಿಂಡು; ಹುರಿಹಾಕು.
ತಿರಿಸುಳಿ (ದ್ಭ) ತ್ರಿಶೂಲಿ (ಸಂ).
ತಿರು ಬಿಲ್ಲನಾರಿ, ಶಬರಿ; ಹೆದೆ; ಮೌರ್ವಿ; ಶ್ರೀ; ಪವಿತ್ರವಾದ; ಹೂಬಿಡಿಸು; ಬದಲಿಸು; ಸುತ್ತುಬರುವಂತೆ ಮಾಡು; ಬೇಡು; ಬಾಗು, ಬಾವು.
—ಪು (ತಿರುವು), ತಿರುಗುವಿಕೆ; ತಿರುಗಿಸುವುದು, ತಿರುಗು.
—ವು ವಕ್ರವಾದುದು; ಬಾಗು; ಬಿಲ್ಲಹಗ್ಗ, ಹೆದೆ.
—ಹು ಸುತ್ತು, ತಿರುಗಿಸು.
ತಿರುಕ ಭಿಕ್ಷುಕ, ಬಿಕ್ಕೆ ಬೇಡುವವ.
ತಿರುಕುಳಿ ತಿರುಪೆಯವ.
ತಿರುಗಣೆ (ತಿರುಪಣೆ), ಸುತ್ತುಳ್ಳದ್ದು; ಮರ ಸುತ್ತು, ಮಲಸುತ್ತು; ಸ್ಕ್ರೂ.
ತಿರುಗು ಸುತ್ತು, ಅಲೆ; ಸುಳಿಸುತ್ತು; ಸಂಚರಿಸು; ಮರಳು.
—ಆಡು ಸುತ್ತಾಡು, ವೃತ್ತಾಕಾರವಾಗಿ ಚಲಿಸು, ಸುತ್ತು.
—ಮುರುಗು ಹಿಂದು ಮುಂದು, ತಲೆ ಕೆಳಗು.
ತಿರುನಾಮ ಶ್ರೀ ವೈಷ್ಣವರು ಹಾಕಿಕೊಳ್ಳುವ ಮೂರು ನಾಮಗಳು.
ತಿರುಪಳಿ ತಿರುಗಣೆಯುಳ್ಳ ಒಂದು ಆಭರಣ.
ತಿರುಪೆ ಭಿಕ್ಷೆ.
ತಿರುವಾಯ್ ಬಿಲ್ಲಿನ ಹಗ್ಗದ ಬಾಯಿ; ಬಿಲ್ಲು.
ತಿರುಳು (ತಿರುಳ್), ಸಾರ; ಮರದೊಳಗಿನ ತಿಳಲು; ಭಾಗ; ವಂಟ, ಕಿವಿಯೋಲೆ.
ತಿರೆ (ದ್ಭ) ಸ್ಥಿರಾ (ಸಂ), ಭೂಮಿ, ಧರೆ, ಪೊಡವಿ.
ತಿರೋತಾನ ಅಡಗುವಿಕೆ.
ತಿರೋಹಿಸು ಅಡಗು, ಮರೆಯಾಗು; ಅಡಗಿಸು.
ತಿರ್ಯಕ್ ಅಡ್ಡವಾಗಿ ಸಂಚರಿಸುವ ಪ್ರಾಣಿ, ಪಶುಪಕ್ಷಿ ಮೊದಲಾದುವು.
ತಿರ್ಯಕ್ಕು ಅಡ್ಡವಾಗಿ ಚಲಿಸುವ ಪ್ರಾಣಿ; ಪಶುಪಕ್ಷಿ ಮೊದಲಾದುವು.
ತಿರ್‍ರನೆ ಚಕ್ರಾಕಾರವಾಗಿ; ದುಂಡಗೆ.
ತಿರ್ದು (ತಿದ್ದು).
ತಿರ್ಯಗ್ಗ್ರೀವ ಪ್ರಾಣಿ, ಪಶುಪಕ್ಷಿ.
ತಿಲ ಎಳ್ಳು.
ತಿಲಕ ಬೊಟ್ಟು; ಅಕ್ಷತೆ; ಶ್ರೇಷ್ಠ; ಅಲಂಕಾರ; ಒಂದು ಜಾತಿಯ ಕುದುರೆ.
ತಿಲೋತ್ತಮೆ ಒಬ್ಬಳು ಅಪ್ಸರೆ. ಈಕೆಯು

ಸುಂದೋಪಸುಂದರೆಂಬ ರಕ್ಕಸರ ವಧೆಯ ನಿಮಿತ್ತ ಜನಿಸಿದಳು.

ತಿಲೋದಕ ಎಳ್ಳು ನೀರನ್ನು ಸೇರಿಸಿ ಮೃತರಿಗಾಗಿ ಕೊಡುವ ತರ್ಪಣ.

ತಿಲೌದನ ಎಳ್ಳಿನ ಬಟ್ಟಲು.

ತಿಲ್ಲಾನ ತರನನ ಎಂದು ಅರ್ಥವಿಲ್ಲದ ಅಕ್ಷರ ಕೂಟದಿಂದ ತಾನ ಹಾಡುವುದು.

ತಿವದಿ (ತ್ರಿಪದಿ), ಮೂರು ಚರಣಗಳುಳ್ಳ ಒಂದು ಪದ್ಯ ಜಾತಿ.

ತಿವಳಿ(ದ್ಭ) ತ್ರಿವಳಿ (ಸಂ), ಹೊಟ್ಟೆಯ ಮೇಲೆ ಆಗುವ ಮೂರು ಮಡಿಕೆ.

ತಿವಾಸಿ ಮೃದುವಾದ ಹಾಸಿಗೆ, ಗಾದಿ.

ತಿವಿ ಮುಷ್ಟಿಯಿಂದ ಹೊಡೆ, ಚುಚ್ಚು; ಹರಿತವಾದ ಆಯುಧದಿಂದ ಚುಚ್ಚು; ನಾಯಿಗಳ ಬಂಧನವನ್ನು ಬೇಟೆಗಾಗಿ ಸಡಲಿಸುವುದು.

—ತ ಇರಿತ; ಚುಚ್ಚುವಿಕೆ.

ತಿವುಡೆ (ತ್ರಿಪುಟ), ಏಳು ಮಾತ್ರೆಗಳ ಕಾಲದಲ್ಲಿ ಮೂರು ಪೆಟ್ಟು ಬೀಳುವ ತಾಳ ಜಾತಿ.

ತಿಷ್ಠೆ ನಿಲ್ಲುವಿಕೆ.

ತಿಷ್ಯ ಕಲಿಯುಗ; ಪೌಷ್ಯಮಾಸ.

ತಿಷ್ಯರಕ್ಷಿತೆ ಅಶೋಕರಾಜನ ಹೆಂಡತಿಯೊಬ್ಬಳು.

ತಿಸರ (ದ್ಭ) ತ್ರಿಸರ (ಸಂ), ಮೂರೆಳೆಯ ಸರ; ತ್ರಿಶರ (ಸಂ), ಒಬ್ಬ ರಕ್ಕಸ.

ತಿಸುಳ (ದ್ಭ) ತ್ರಿಶೂಲ (ಸಂ).

ತಿಳಿ ಸ್ವಚ್ಛ, ನಿರ್ಮಲ; ಗೊತ್ತಾಗು, ಅರಿಯು; ಸ್ಪಷ್ಟವಾಗು; ಬೆಳಗು, ಬೆಳಕಾಗು; ಜ್ಞಾನ; ಸ್ಪಷ್ಟತೆ; ಸ್ವಚ್ಛವಾದ ಗಂಜಿ ನೀರು; ಮದ್ಯಪಾತ್ರೆ.

—ಪು ತಿಳಿವಳಿಕೆ, ಜ್ಞಾನ; ಶಾಂತಿ; ತೃಪ್ತಿಗೊಳ್ಳು; ತೆಳುಪು.

—ವಳಿಕೆ ಗೊತ್ತುವಳಿ; ಜ್ಞಾನ.

—ವು ಸಮಾಧಾನ, ಬೋಧನೆ; ಜ್ಞಾನ

—ಸು ಬೇರೆಯವರಿಗೆ ತಿಳಿಯುವಂತೆ ಹೇಳು; ಪರರಿಗೆ ಗೊತ್ತುಮಾಡಿ ಕೊಡು.

ತಿಳಿಗೊಳ (ತಿಳಿಗುಳ) ನಿರ್ಮಲವಾದ ಕೆರೆ.

ತಿಳುಹು (ತಿಳಿವು), ಜ್ಞಾನ.

ತಿಂಗಳ್ (ತಿಂಗಳು), ಚಂದ್ರ; ಚಂದ್ರಪ್ರಕಾಶ; ಮಾಸ, 30 ದಿನ ಕಾಲ.

ತಿಂಗಳಿಗೆ ತಿಲಕ; ಜೂಳೆಯ, ಗೋಪಿನಾಮ.

ತಿಂಡಿ ಆಹಾರ, ತಿನ್ನೋಡವೆ; ತುರಿಕೆ, ನವೆ; ತಿಂಡೆ, ಕಾಮವಿಕಾರದ ಅನುಭವ.

—ಗಾರ ತಿಂಡಿಬಾಕ.

—ಪೋತ ತಿಂಡಿಬಾಕ, ತೀನಾಳಿ.

ತಿಂತಿಣಿ (ತಿಂಥಿಣಿ) ಗುಂಪು, ತಂಡ, ಸಮೂಹ.

ತಿಂತ್ರಿಣಿ ಹುಣಿಸೆ ಮರ.

ತೀ ಸುಡು; ಮುಗಿ, ಬಿಳಿ.

ತೀಕ್ಷ್ಣ ಹರಿತ; ಕಾರ; ಕಟು; ಆಯುಧ; ವಿಷ; ಕದನ; ಕಬ್ಬಿಣ.

—ಉಪಾಯ ಬಲವಂತದ ರೀತಿ; ಕಡು ಸಾಧನೆ.

—ತರ ಅತಿ ಹರಿತವಾದ.

ತೀಕ್ಷ್ಣೆ ಬಳ್ಳಿ; ಕುಡಿಬಳ್ಳಿ; ತಂತಿ.

ತೀಟ ತೀಡುವಿಕೆ; ಊದಿಕೆ; ಬೀಸುವಿಕೆ.

ತೀಟೆ (ತೀಂಟೆ) ತೀನಿ, ತುರಿಕೆ, ನವೆ; ಆಹಾರದ ಹಂಬಲ; ಅಕಾಲದ ಬಯಕೆ.

—ಗಾರ ಪರರಲ್ಲಿ ಇಲ್ಲದ ಬಯಕೆ ಹುಟ್ಟಸುವವ.

ತೀಡು ಬೀಸು; ವ್ಯಾಪಿಸು; ಘರ್ಷಿಸು, ತಿಕ್ಕು; ಹುರಿ ಹಾಕು; ವಾಯುವಿನ ಸೋಂಕು; ತಿದ್ದು.

ತೀನ ನವೆ, ಕಡಿತ, ತುರಿಕೆ.

ತೀನಾಳಿ ತಿಂಡಿಬಾಕ, ತಿಂಡಿಪೋತ.

ತೀನು ಬೇಲಿಯ ಗೂಟ.

ತೀಬು ಲವಂಗ.

ತೀಬ್ರ (ದ್ಭ) ತೀವ್ರ (ಸಂ), ತ್ವರೆ, ಬೇಗ.

ತೀರ್ (ತೀರು) ಮುಗಿ, ಬಿಳಿ, ಕೊನೆಗಾಣು; ಸಾಯು; ನುಂಗು; ಕಳೆ.
—ಇಸು ಮುಗಿಸು.
—ಚು೯ ಮುಗಿಸು, ತೀರಿಸು.
—ಪು ತೀರ್ಮಾನ, ನಿರ್ಧಾರ.
—ವೆ ಸಾಕಾಧುದು; ಮುಗಿಯುವಿಕೆ.
ತೀರ ದಡ, ತಟ; ಬದಿ.
ತೀರಿಕೊಳು ಮುಗಿಯು; ಸಾಯು.
ತೀರು ಮುಗಿ; ನುಂಗು; ಕೊನೆಗಾಣು; ಚೆಲುವು; ಬಾಣ; ಜಂತೆ; ಸನ್ನೆ.
ತೀರೆ ಹುಳು.
ತೀರ್ಕಣೆ ತೀರುವಿಕೆ, ಮುಗಿತ.
ತೀರ್ಣ ದಾಟದ; ಹರಡಿದ; ತೇಲಿದ.
ತೀರ್ಥ ಶಾಸ್ತ್ರ; ಯಜ್ಞ; ಕ್ಷೇತ್ರ; ಉಪಾಯ; ಕಳು; ಉಪಾಧ್ಯಾಯ; ಮಂತ್ರಿ; ಪವಿತ್ರ ಸ್ಥಾನ, ಯಾತ್ರಾಸ್ಥಳ; ಯೋನಿ; ಪವಿತ್ರ ಜಲಸಂಚಯ.
—ಕ ಜೈನಸಾಧು.
—ಕರ ಗೌತಮ, ಕಣಾದ ಮೊದಲಾದ ಶಾಸ್ತ್ರಕಾರರು; ಜೈನಪರಮಾಚಾರ್ಯರು.
—ಜಲ ಪವಿತ್ರವಾದ ನೀರು.
—ಯಾತ್ರೆ ಪವಿತ್ರ ಕ್ಷೇತ್ರಗಳಿಗೆ ಹೋಗುವುದು.
ತೀರ್ಥರೂಪ ತಂದೆ ಮೊದಲಾದ ಹಿರಿಯರ ಪವಿತ್ರತೆಯನ್ನು ನೆನೆದು ಹೇಳುವ ಮಾತು.
ತೀರ್ಥಸ್ವರೂಪ (ತೀರ್ಥರೂಪ).
ತೀರ್ಪು ತೀರ್ಮಾನ, ನಿರ್ಧಾರ, ಗೊತ್ತುವಳಿ.
ತೀರ್ಮಾನ ತೀರ್ಪು, ನ್ಯಾಯ; ಅಭಿಪ್ರಾಯ.
ತೀರ್ವೆ ತೆರಿಗೆ, ಕಂದಾಯ.
ತೀವು ತುಂಬು; ಹೆಚ್ಚಾಗು; ಮುಗಿಸು.
ತೀವ್ರ ಹರಿತ; ವೇಗ; ತ್ವರೆ; ರೌದ್ರ; ಅತಿ; ಬೇಗ.
—ತೆ ಅವಸರ, ವೇಗ; ಅಂಬಿನ ವೇಗ.
—ತ್ವ ಭರ; ಉಲ್ಬಣ; ಅವಸರ; ದುಡುಕು.

ತುಕಡಿ (ತುಕುಡಿ), ತುಂಡು; ಚೂರು; ಒಂದು ಬಗೆಯ ಕರಿದ ತಿಂಡಿ.
ತುಕ್ಕು ಕಬ್ಬಿಣಕ್ಕೆ ಹತ್ತುವ ಕಿಲುಬು, ಜಂಗು; ಮುತ್ತು; ಕಿಲುಬು ಹತ್ತು.
ತುಕ್ತ ಬಾಲಕ.
ತುಚ್ಛ ಶೂನ್ಯ; ವ್ಯರ್ಥ; ನಿಂದ್ಯ; ಕ್ಷುಲ್ಲಕ; ಕೀಳು
—ಕ ಶೂನ್ಯವಾದ; ಕೀಳಾದ; ವ್ಯರ್ಥವಾದ
ತುಟಾರ ತಿರಸ್ಕಾರ, ನಿಂದೆ.
—ಇಸು ತಿರಸ್ಕರಿಸು; ನಿಂದಿಸು.
ತುಟಿ ಓಷ್ಠ, ಅಧರ, ಹಲ್ಲಿನ ಮರೆ.
ತುಟ್ಟಿ ಬಲಹೀನತೆ, ಶಕ್ತಿಹೀನತೆ; ಬೆಲೆಏರಿಕೆ.
—ಇಸು ಬಲಹೀನವಾಗು; ನಷ್ಟವಾಗು.
ತುಡು (ತೊಡು), ಸೇರು; ಧರಿಸು; ಹಾಕಿಕೊ.
—ಗೆ (ತೊಡುಗೆ), ಒಡವೆ, ಆಭರಣ.
ತುಡುಕು ಹಿಡಿ, ಮುಟ್ಟು; ತ್ವರೆಯಾಗಿ ಹಿಡಿ, ಆತುರದಿಂದ ಹಿಡಿ.
—ಇಸು ಅಪಹರಿಸುವಂತೆ ಮಾಡು.
ತುಡುಕುಗಾಯ ಹಿಡಿದಲ್ಲಿ ಆಗುವ ಗಾಯ.
ತುಡುಗ ಕಳ್ಳ; ವಂಚಕ.
ತುಡುಗು ಕಳವು; ಮೋಸ, ವಂಚನೆ.
ತುಡುಪು ತೊಳೆ, ಹುಟ್ಟು; ಸಟ್ಟುಗ.
ತುಡುಬು ಟುಮುಕಿ.
ತುಣ್ಣೆ ಪುರುಷನ ಜನನೇಂದ್ರಿಯ.
ತುಣುಕು ಚೂರು, ತುಂಡು.
ತುತಿ (ದ್ಭ) ಸ್ತುತಿ (ಸಂ), ಹೊಗಳಿಕೆ.
ತುತ್ತ ಬಲು ತುದಿಯಲ್ಲಿರುವ.
ತುತ್ತು ಗ್ರಾಸ, ಕವಳ; ಒಮ್ಮೆ ನುಂಗುವಷ್ಟು ಆಹಾರ.
—ಕೊಳು ನುಂಗು, ತಿನ್ನು.
ತುತ್ತೂರಿ (ತುತೂರಿ) ಊದುವವಾದ್ಯ, ಪೀಪರಿ.
ತುತ್ಥ ಮೈಲುತುತ್ತು.
ತುದಿ ಅಗ್ರ, ಕೊನೆ, ಕಡೆ.
—ಮೊದಲು ಆದಿ ಅಂತ್ಯ, ಕೊನೆ ಬುಡ.

ತುದಿವಾಲ ಬಾಲದ ತುದಿ.
ತುದಿಬೆರಳು ಬೆರಳ ತುದಿ.
ತುನ್ನಗಾಸಿಯಾದ;ನೋವುಗೊಂಡ,ಪೆಟ್ಟಾದ.
ತುನ್ನತಾಯ ಚಿಪ್ಪಿಗ, ಸಿಂಪಿಗ, ದರ್ಜಿ.
ತುಪಾಕಿ (ತುಬಾಕಿ).
ತುಪಾನು ಬಿರುಗಾಳಿ, ಮತಾಯಿ; ನಿಂದೆ.
ತುಪ್ಪ ಬೆಣ್ಣೆಕರಗಿಸಿ ಮಾಡುವ ಪದಾರ್ಥ.
ತುಪ್ಪಟ (ತುಪ್ಪಳ) ಹಕ್ಕಿಯ ರೋಮ; ಗರಿ; ಮೃದು ರೋಮ; ಉಣ್ಣೆ.
ತುಬಾಕಿ ಬಂದೂಕು, ಕೋವಿ.
ತುಬ್ಬು ಶೋಧನೆ, ತಪಾಸಣೆ; ಕಳ್ಳತನ ಬಹಿರಂಗವಾಗುವಿಕೆ.
ತುಮುರು ತುಂಡು, ಚೂರು; ಬುಡ.
—ಆಗು ಚೂರಾಗು.
ತುಮುಲ ಗದ್ದಲ; ಭಯಂಕರ ಯುದ್ಧ; ಭೀಕರ ಗದ್ದಲವುಳ್ಳ ಕಾಳಗ.
ತುಮುಳ್ ಚೇತರಿಸು; ಎಚ್ಚರವಾಗು.
ತುಯ್ (ತೊಯ್), ನನೆ, ಒದ್ದೆಯಾಗು; ಎಳೆ; ನೀಡಿಸು.
ತುಯ್ಯಲು ಪಾಯಸ.
ತುಯ್ಯು ಎಳೆದಾಡು, ಜಗ್ಗು.
ತುರ ತ್ವರೆ, ವೇಗ.
ತುರಗ ತ್ವರೆಯಾಗಿ ಹೋಗುವುದು, ಕುದುರೆ; ಚಿತ್ತ, ಮನಸ್ಸು.
—ಆರೂಢ ಸವಾರ.
—ಆಳಿ ಕುದುರೆಗಳ ಗುಂಪು.
—ಗತಿ ಕುದುರೆಯಂತೆ ವೇಗವಾದ ನಡೆ.
ತುರತ (ತುರ್ತ), ತಾತ್ಕಾಲಿಕ, ಜರೂರು.
ತುರನಸ್ ನಿರಂಕುಶ ಅಧಿಕಾರಿ.
ತುರಂಗ (ತುರಗ), ಕುದುರೆ; ಸೆರೆಮನೆ.
ತುರಂಜಿ ಗಜನಿಂಬೆ, ದೊಡ್ಡ ಜಾತಿ ನಿಂಬೆ.
ತುರಾಯಿ ರುಮಾಲಿಗೆ ಸಿಕ್ಕಿಸುವ ಒಂದು ಆಭರಣ.
ತುರಾಸಹ (ತುರಾ = ಶತ್ರುಗಳ ವೇಗ, ಸಹ = ಸಹಿಸುವವ) ಇಂದ್ರ.
ತುರಿ ತೀನಿ, ತುರಿಕೆ; ಕೆರೆ, ಹೆರೆ; ತೂರ್ಯ; ಬಿಗಿಲು; ಕಾಯಿ ಹೆರೆದು ದೊರಕಿದ್ದು.
ತುರಿತ (ತುರಿಪ) ಆತುರ, ತ್ವರೆ, ತ್ವರಿತ.
ತುರಿಹ (ದ್ಭ) ತ್ವರಿತ (ಸಂ).
ತುರೀಯ ನಾಲ್ಕನೆಯ; ಅತಿ ಉನ್ನತ.
—ಅತೀತ ನಾಲ್ಕನೆಯ ಸ್ಥಿತಿಯನ್ನು ದಾಟಿದವ, ಶಿವ.
ತುರು ದನ, ಪಶು; ದನಕರು, ಗಂಟಿ.
—ಕಾರ ದನಕಾಯುವವ, ಗೋವಳ.
—ವಳ ದನಕಾಯುವವ, ಗೋವಳ.
ತುರುಕ ತುರ್ಕಿಸ್ಥಾನದವ; ಯವನ, ಮುಸಲ್ಮಾನ.
ತುರುಕಾಣ್ಯ ತುರ್ಕರ ದೇಶ, ಅರೇಬಿಯ.
ತುರುಕಿ ತುರ್ಕಿಸ್ಥಾನದವಳು; ಮುಸಲ್ಮಾನ ಸ್ತ್ರೀ; ತುರ್ಕಿದೇಶ.
ತುರಕು (ತುರುಕು) ತುಂಬು, ಜಡಿ, ಇಡಿಕು, ಬಲವಂತದಿಂದ ಹಾಕು.
ತುರುಗು ದಟ್ಟಣೆ; ತುಂಬು; ಅಡಗು; ಕವಿ.
ತುರುಚೆ ತುರಿಸುವ ಒಂದು ಗಿಡ; ಪಂಚರಂಗಿ ಗಿಡ, ಚುರ್ಚಿ ಗಿಡ.
ತುರುಪು ಇಸ್ಪೀಟು ಆಟದಲ್ಲಿ ಗೆಲುವು ತರುವ ಎಲೆ; ಹುಕುಮು.
ತುರುಬು(ತುರುಂಬು)ಜಡೆಮುಡಿ,ಮುಂದಲೆ.
ತುರುಮಿಂಡಿ ಪ್ರಾಯಕ್ಕೆ ಬಂದ ಹುಡುಗಿ; ಎಳಸೂಳೆ.
ತುರುಮುರಿ (ಚರುಮುರಿ), ಮಂಡಕ್ಕಿ, ಪುರಿ.
ತುರುವಟ್ಟು ಹಟ್ಟಿ, ದನ ಕಟ್ಟುವ ಕೊಟ್ಟಿಗೆ.
ತುರುವು ತುರಿ; ತೂತುಮಾಡು, ಕೊರೆ; ಹೆರೆ.
ತುರುಷ್ಕ (ತುರುಕ), ಒಂದು ವಿಧ ಪರಿಮಳ ದ್ರವ್ಯ; ಮುಸಲ್ಮಾನ; ತುರ್ಕಿದೇಶದವ.
ತುರ್ಕ (ತುರುಷ್ಕ).

ತುರ್ತ ತಾತ್ಕಾಲಿಕ, ಜರೂರು.
ತುಲ (ತುಳ), ಒಂದು ನಕ್ಷತ್ರರಾಶಿ.
ತುಲನ (ತುಲನೆ) ಹೋಲಿಕೆ; ವಿಮರ್ಶೆ; ಎತ್ತುವಿಕೆ; ತೂಕಮಾಡುವಿಕೆ.
ತುಲಸಿ ಒಂದು ಗಿಡ; ವೃಂದೆ.
ತುಲಾ ಒಂದು ನಕ್ಷತ್ರರಾಶಿ; ತೂಕ; ಸಮತೆ; ವ್ಯವಸ್ಥೆ.
ತುಲಾಭಾರ ತನ್ನ ತೂಕದಷ್ಟು ವಸ್ತು ಒಡವೆಗಳನ್ನು ತೂಗಿ ದಾನಮಾಡುವ ವಿಧಿ.
ತುಲಿ (ತುಳಿ), ಸಮಾನ.
ತುಲೆ (ತುಲಾ) ತುಲಾನಕ್ಷತ್ರ, ತೂಕ; ತೊಲೆ; ಸಮತೆ, ಸಾಟಿ.
ತುಲ್ಯ ಸಮಾನ, ಹೋಲುವೆಗೆ ಸಿಕ್ಕಬಲ್ಲ.
ತುಲ್ಲು ಸ್ತ್ರೀ ಯೋನಿ.
ತುವರ ಒಗರು; ಕಷಾಯ.
ತುವರಿ (ತೊವರಿ), ತೊಗರಿ.
ತುವಾಲು (ಟವೆಲು) ಬೈರಾಸು; ಕರವಸ್ತ್ರ.
ತುಷ ಹೊಟ್ಟು, ಉಮಿ; ನೊರಜು.
ತುಷಾಗ್ನಿ ಹೊಟ್ಟಿನ ಬೆಂಕಿ.
ತುಷಾರ ಹಿಮ, ಮಂಜು; ಶೀತ; ಮಳೆ.
ತುಷಿತ ದೇವತೆಗಳ ಒಂದು ಪಂಗಡ.
ತುಷ್ಟ ತೃಪ್ತಿಹೊಂದಿದ; ಸಂತೋಷ.
ತುಷ್ಟಿ ಸಂತೋಷ, ತೃಪ್ತಿ.
ತುಸು (ತುಸ) ಸ್ವಲ್ಪ, ಕೊಂಚ, ವಂಚ.
ತುಹಿನ ಹಿಮ, ಮಂಜು, ಶೀತ; ಬೆಳುದಿಂಗಳು; ಕರ್ಪೂರ.
—ಅಚಲ ಹಿಮವತ್ಪರ್ವತ; ಹಿಮದಬೆಟ್ಟ.
ತುಳ್ ನಮಸ್ಕಾರ; ಸೇವೆ, ಕೆಲಸ; ದಾಸ್ಯ; ಶೌರ್ಯ.
ತುಳ (ತುಲ, ತುಲೆ).
ತುಳವ (ತುಳುವ).
ತುಳಿ ಒದೆ; ಸದೆಬಡಿ; ಕಾಲಿಂದ ಅದುಮು; ಕಾಲಿಂದ ಹತ್ತಿಕ್ಕು; ಹಿಂದಿರುಗು.
—ತ ಒದೆತ; ನಾಶ; ಮರಳುವಿಕೆ.
ತುಳಿಲ್ ವಂದನೆ, ನಮಸ್ಕಾರ; ಶೌರ್ಯ, ಪರಾಕ್ರಮ; ಸೇವೆ, ದಾಸ್ಯ.
—ಗೆಯ್ ನಮಸ್ಕರಿಸು; ವಂದಿಸು.
ತುಳು ಒಂದು ದೇಶ; ಒಂದು ಭಾಷೆ.
ತುಳುಕು ತುಂಬಿ ಚೆಲ್ಲು; ಚೆಲ್ಲು; ಸೇರಿಸು, ಜತೆಮಾಡು.
—ಆಡು ತುಂಬಿ ಹರಿ, ಮೇರೆವಿಾರು.
ತುಳುವ ತುಳು ದೇಶದವ.
ತುಳ್ಕು ಎಸೆ, ಬಾಣಗಳನ್ನೆಸೆ; ಸುರಿ; ಬಿಡು.
ತುಳ್ಳು ನೆಗೆ, ಜಿಗಿ; ಚೊಂಗಾಡು.
ತುಂಗ ಎತ್ತರವಾದ, ಉನ್ನತ; ದೀರ್ಘ; ಮುಖ್ಯ; ಶ್ರೇಷ್ಠ; ಒಂದು ನದಿ.
ತುಂಗಭದ್ರ ಮದವೇರಿದ ಆನೆ.
ತುಂಗಭದ್ರಾ ತುಂಗಾ ಮತ್ತು ಭದ್ರಾ ನದಿಗಳು ಸೇರಿ ಆಗುವ ನದಿ.
ತುಂಗೆ ಒಂದು ವಿಧದ ಗಡ್ಡೆ; ಶ್ರೇಷ್ಠಳು.
ತುಂಟ ನೀಚ; ಉಪದ್ರವಿ; ಮೋಸಗಾರ; ದುಡುಕಿ ಚೇಷ್ಟೆಗಾರ.
—ತನ ನೀಚತನ; ದುಡುಕು; ತಂಟೆ.
ತುಂಡ ಚುಂಚು; ಹಕ್ಕಿಯ ಕೊಕ್ಕು; ಸುಂಡಿಲು; ಬಾಯಿ; ಹೊಕ್ಕುಳು.
ತುಂಡರಸು ಸಾಮಂತರಾಜ; ಪಾಳೆಯಗಾರ.
ತುಂಡಿ (ತುಂಡ), ಕೊಕ್ಕು; ಬಾಯಿ; ಸೊಂಡಿಲು; ಹೊಕ್ಕುಳು.
ತುಂಡಿಕೆ ತೊಂಡೆ; ಬಿಂಬ.
ತುಂಡಿರ ದೊಡ್ಡ ಹೊಟ್ಟೆ.
ತುಂಡಿಲ ದೊಡ್ಡಹೊಕ್ಕಳಿನವ; ಕಟು ಮಾತಿನವ, ನಿಷ್ಠುರಿ.
ತುಂಡು ಚೂರು, ಖಂಡ, ಭಾಗ.
—ಅರಿಸು ತುಂಡುಮಾಡು, ಕತ್ತರಿಸು.
—ಇಸು ತುಂಡುಮಾಡು, ತುಂಡರಿಸು; ಚೂರು ಮಾಡು.

ತುಂತುರು (ತುಂತುರ್) ಸಣ್ಣ ಹನಿ, ನೀರಿನ ಕಣ, ಚಿಬಿಜಿಟ ಮಳೆ.
—ಮಳೆ ಸಣ್ಣ ಹನಿಯಾಗಿ ಸುರಿವ ಮಳೆ.
ತುಂದ ಡೊಳ್ಳು ಹೊಟ್ಟೆ, ಹೊಟ್ಟೆ.
ತುಂದಿ ದೊಡ್ಡ ಹೊಕ್ಕುಳು.
—ಕ ದೊಡ್ಡ ಹೊಕ್ಕುಳುಳ್ಳ.
ತುಂದಿಲ ಡೊಳ್ಳು ಹೊಟ್ಟೆ.
ತುಂಬ ಪೂರ್ಣ, ಬಹಳ.
ತುಂಬರ ಒಂದು ಹಣ್ಣು; ಒಬ್ಬ ಗಂಧರ್ವ.
ತುಂಬಿ (ದುಂಬಿ), ಭ್ರಮರ; ತುಂಬೆ ಗಿಡ.
—ಹಾಡು ತುಂಬಿಯ ಝೇಂಕಾರ.
ತುಂಬಿತುಳುಕು ಮೇರೆ ಮೀರು, ಉಕ್ಕು, ಚೆಲ್ಲು, ಹೊರಸೂಸು.
ತುಂಬು ಪೂರ್ಣವಾಗು; ಬೆಳೆಯು; ಪೂರ್ಣ ಹೊಂದು; ದಡಿ, ನಾಳ; ನಳಿಗೆ; ತೂಬು.
— ಇಕೆ ಭರಿತವಾಗುವಿಕೆ; ಪೂರ್ಣವಾಗುವಿಕೆ; ಬೆಳೆಯುವಿಕೆ.
ತುಂಬುರ ಒಂದು ವಾದ್ಯ; ಒಬ್ಬ ದೇವ ಗಂಧರ್ವ; ಕಾಡು ಮಾವಿನ ಮರ; ಕೊಡೆಯ ತುದಿ.
ತುಂಬೆ (ತುಂಬಿ) ದುಂಬಿ; ಒಂದು ಜಾತಿ ಗಿಡ.
ತೂಕ ಸಮಭಾರ; ಭಾರ, ಘನತೆ.
ತೂಕಡಿಕೆ (ತೂಗಡಿಕೆ), ಆಲಸ್ಯ; ನಿದ್ರೆಯಿಂದ ಕಣ್ಮುಚ್ಚುವಿಕೆ, ಜೋಮು.
ತೂಕಡಿಸು ನಿದ್ರಿಸು, ರೆಪ್ಪೆಬಾಡಿಸು.
ತೂಕಿರಿ ನರ್ತಿಸು; ಕುಣಿ.
ತೂಕು (ತೂಗು), ಓಲಾಟ, ಮಾಲುವಿಕೆ; ಹೊಂಗಾಡು; ಭಾರ ನೋಡು; ನೇತಾಡು, ಜೋತಾಡು; ಗುಣವಿಮರ್ಶೆ ಮಾಡು.
ತೂಗು ತುಲನೆ ಮಾಡು; ತೂಕ ಮಾಡು, ಭಾರ ನೋಡು; ವಿಮರ್ಶಿಸು; ಜೋತಾಡು, ಓಲಾಡು.
— ಆಟ ಜೋಲಾಟ, ಓಲಾಟ, ಆಲೆತ.
ತೂಗುಯ್ಯಾಲೆ ತೂಗುವ ಉಯ್ಯಾಲೆ.
ತೂಗುಂಜೊಡರ್ (ಸೊಡರ್ = ದೀಪ) ತೂಗುದೀಪ; ಸರದೀಪ.
ತೂಣ ಆವೇಶ; ಕಲ್ಲೋಲ; ಬತ್ತಳಿಕೆ.
— ಕೊಳ್ ಆವೇಶಗೊಳ್ಳು.
ತೂಣಿ ಬತ್ತಳಿಕೆ.
ತೂಣೀರ (ತೂಣಿ), ಬತ್ತಳಿಕೆ, ಬಾಣಗಳ ಒರೆ.
ತೂತು ರಂಧ್ರ.
ತೂಪರು (ಚೂಪರು), ತುಂಟರು.
ತೂಪಿರಿ ಉಪ್ಪೆಂದು ಊದು; ದೃಷ್ಟಿದೋಷವನ್ನು ಪರಿಹರಿಸು.
ತೂಪಿಡು (ತೂಪಿರು), ಉಪ್ಪೆಂದು ಊದು.
ತೂಪು (ತುಪ್ಪ), ಉಗಿ.
ತೂಬು ಬಂಡಿಯ ನಾಭಿ; ಗುಮ್ಮ; ಹಾರೆಯ ಕಣ್ಣು; ನೀರು ಹೋಗಲು ಕಂಡಿ.
ತೂರು ಅಟ್ಟು; ಕೇರು; ಓಡಿಸು, ಹಾರಿಸು; ನಡು; ತುರುಕು; ಉದುರು.
— ಕಿಡಿ ಬುಡ; ಹಾರುವ ಕಿಡಿ.
— ವಿಕೆ ಅಟ್ಟುವಿಕೆ, ಹಾರಾಟ; ಗಾಳಿಸುವಿಕೆ.
ತೂರ್ಣ ತ್ವರೆ; ವೇಗ.
ತೂರ್ಯ ತುತ್ತೂರಿ, ಒಂದು ವಾದ್ಯ.
— ಉದ್ಘಾತ ವಾದ್ಯಧ್ವನಿ,
— ತ್ರಯ ನೃತ್ಯ, ಗೀತ, ವಾದ್ಯ ಈ ಮೂರರ ಸೇರಿಕೆ.
ತೂಲ್ ಹಿಮ್ಮೆಟ್ಟು; ಸರಿ; ಓಡಿಸು; ಪ್ರತಿಭಟಿಸು.
ತೂಲ ಹತ್ತಿ; ಆಕಾಶ.
— ಕ ಅರಳೆ, ಹತ್ತಿ.
— ಳ (ದೃ) ಸ್ಥೂಲ (ಸಂ), ತೋರ, ಗಡುತರ, ದಪ್ಪ; ಸೂಕ್ಷ್ಮವಲ್ಲದ.
ತೂಲಿ (ತೂಲಿಕೆ) ಕುಚ್ಚು; ಹಾಸಿಗೆ, ತಿವಾಸಿ.
ತೂಲಿಕೆ (ತೂಲಿಕಾ) ಒಳಗೆ ಹತ್ತಿಯುಳ್ಳುದು, ಹಾಸಿಗೆ.

ತೂಲು ನೂಲು, ನೂಲುಮಾಡು.

ತೂವರ (ತೂಬರ) ಪ್ರಾಯಕ್ಕೆ ಸಮನಾಗಿ ಕೊಂಬು ಬಾರದಎತ್ತು, ಹೋರಿ; ಪ್ರಾಯದಲ್ಲಿ ಮೀಸೆಬಾರದ ಮನುಷ್ಯ.

ತೂಷ್ಣೀಕ ಮೌನಿ, ಮೌನ ಶೀಲ.

ತೂಷ್ಣೀಂ ಮೌನವಾಗಿ, ಮಾತಾಡದೆ.

ತೂಳ್ (ತೂಳು) ಮುಂದುವರಿ; ಬೆನ್ನಟ್ಟು, ಅರೆಯಟ್ಟು; ತಳ್ಳು; ನಾಶಮಾಡು.

ತೂಳ ಆವೇಶ, ಉತ್ಸಾಹ.

ತೂಳಿ ಹಾರಿ; ಉತ್ಸಾಹಗೊಂಡು ಸುರಿ, ಹೊಯ್ಯು; ಎಸೆ, ಚೆಲ್ಲು.

ತೂಳಿಕೆ ಕುಂಚು, ಕುಚ್ಚು, ಗೊಂಚಲು.

ತೂಳು ಓಡು; ಮುಂದುವರಿ; ಅಟ್ಟು, ತಳ್ಳು, ಹೊಡೆ, ಬಡಿ.

— ಇಸು ನಡಸು.

ತೂಳುವರೆ ಹೊಡೆಯುವ ಭೇರಿ.

ತೂಂಕು (ತೂಕು).

ತೂಂತು ತುರುಕು, ಬಲದಿಂದ ತುಂಬಿಸು.

ತೃಣ ಹುಲ್ಲು.

— ಕುಟಿ ಹುಲ್ಲಿನ ಮನೆ, ಗುಡಿಸಲು.

— ರಾಜ ಹುಲ್ಲುಗಳ ಅರಸು, ತಾಳೆ ಮರ.

ತೃಣಗ್ರಾಹಿ ಶಿಲಾರಾಳ; ಹಾಲುಮಡ್ಡಿ; ಅಂಬರು.

ತೃಣದ್ರುಮ ಹುಲ್ಲಿನ ಜಾತಿಗೆ ಸೇರುವ ಗಿಡ–ತೆಂಗು, ತಾಳೆ, ಅಡಕೆ ಮರ.

ತೃಣಧ್ವಜ ಬಿದಿರು, ಬಂಬುಗಳ.

ತೃಣಪ್ರಾಯ ಹುಲ್ಲಿಗೆ ಸಮ; ಕ್ಷುಲ್ಲಕ, ಅಲ್ಪ.

ತೃತೀಯ ಮೂರನೆಯ.

ತೃತೀಯೆ ಪಕ್ಷದ ಮೂರನೆಯ ದಿನ.

ತೃಪ್ತ ಸಂತುಷ್ಟಿಗೊಂಡ, ಅಪೇಕ್ಷೆ ಪೂರೈಸಿದ; ಸಂತೋಷಪಟ್ಟ.

ತೃಪ್ತಿ ತುಷ್ಟಿ; ಸಂತೋಷ.

ತೃಷೆ(ತೃಷಾ)ಬಾಯಾರಿಕೆ,ಆಸರು,ನೀರಡಿಕೆ.

ತೃಷ್ಣಾ ತೃಷೆ, ಬಾಯಾರಿಕೆ; ಆಸೆ.

ತೆಕ್ಕನೆ ಅಧಿಕವಾಗಿ, ಫಕ್ಕನೆ; ಬಿಗಿಯಾಗಿ.

ತೆಕ್ಕು ದಿಕ್ಕುಗೆಡು, ಬೆದರು; ನವೆಗೆ ನೆಕ್ಕು; ಹರಿಯುವಂತೆ ಮಾಡು; ತೇಲಿಸು;ಮೂರ್ಛೆ ಹೋಗು.

ತೆಕ್ಕೆ ಆಲಿಂಗನ, ಅಪ್ಪುಗೆ; ಸುರುಳಿ, ಇರಿಕೆ.

— ಕೆಡಿಸು ಗುಂಪು ಚೆದರಿಸು; ಸೇರಿದ್ದನ್ನು ಬಿಡಿಸು; ಸ್ನೇಹ ಬಿಡಿಸು.

— ಪರಿ ಆಲಿಂಗನದಿಂದ ದೂರಾಗು.

ತೆಗಲ್ ಹೆಗಲು; ಎದೆ.

— ತೆಗಹು ತೆಗೆಯುವಿಕೆ.

— ತೆಗೆಸು ಬರಮಾಡು; ಹಿಂದೆ ಸರಿ.

ತೆಗಲೆ ಸೊಕ್ಕು, ಮದ.

ತೆಗಳ್ (ತೆಗಳು) ನಿಂದೆ, ನಿಂದಿಸು; ಬಯ್.

— ಕೆ ನಿಂದೆ, ಬೈಗಳು.

ತೆಗಳಿಗೆ (ತೇಗಳಿ) ಪ್ರಾಣಿಗಳ ಮೈರೋಮ ಉದುರುವ ರೋಗ, ತೆವಡೆ.

ತೆಗಿ (ತೆಗೆ).

ತೆಗೆ ಸೆಳೆ, ಎಳೆ; ಮರಳಿಸಡೆ; ಓಡು; ಪಲಾಯನ ಮಾಡು; ಹಿಮ್ಮೆಟ್ಟು.

— ಸು ಸಿದ್ಧಪಡಿಸು,ತಯಾರಿಸು; ಬರಮಾಡು, ಕಳುಹಿಸು; ಹಿಂದೆಬರುವಂತೆ ಮಾಡು.

ತೆಗೆನೆರೆ ಪೂರ್ಣ ಎಳೆ.

ತೆಜಿಸು (ದ್ಭ) ತ್ಯಜಿಸು (ಸಂ).

ತೆಟ್ಟು ತೆರೆ, ಅರಳು.

ತೆಣರು ನೋವಿಂದ ನರಳು.

ತೆತ್ತುವಣೆ ಸಂಬಂಧ, ಜೋಡಣೆ.

ತೆತ್ತಿಗ ಸ್ನೇಹಿತ, ಸಂಬಂಧಿಕ; ಸೇವಕ.

ತೆತ್ತಿಸು ಹತ್ತಿರ ಸಂಬಂಧಕ್ಕೆ ತರು; ಮುಚ್ಚು; ನಾಟು, ನಾಟಸು; ಪೋಣಿಸು, ಸುರಿ; ಕೊಡಿಸು.

ತೆತ್ರೀಸ ಮೂವತ್ತಮೂರು.

ತೆನೆ ಕದಿರು, ಹೊಡೆ, ಕಾಳಿನ ಗೊನೆ; ಕೋಟೆ ಗೋಡೆಯ ಉನ್ನತ ಭಾಗ; ಕೊತ್ತಳ.

ತೆಪ್ಪ ನದಿಯನ್ನು ದಾಟಿಸುವ ಸಾಧನ; ಕಟ್ಟಿಗೆಗಳನ್ನು ಹೆಣೆದು ಮಾಡಿದ ತೇಲುವ ಸಾಧನ, ಗಡಿಗೆಗಳ ತೆಪ್ಪ.

ತೆಪ್ಪಗೆ ಸುಮ್ಮನೆ, ಮಾತಿಲ್ಲದೆ; ವಿರಾಮವಾಗಿ, ಸುಖವಾಗಿ.

ತೆಪ್ಪರು ಚೇತರಿಸು.

ತೆಪ್ಪಳಿಸು ಚೇತರಿಸು, ಜಾಗರಗೊಳ್ಳು.

ತೆಪ್ಪಳೆ ತೆಳುವಾಗಿ, ಸಪುರವಾಗಿ.

ತೆಬ್ಬು ಸುತ್ತಿಕೊಳು, ಹಿಡಿ; ನೆಗೆ.

ತೆಮರ್ ತಿಕ್ಕು; ತೀಡು; ನಾಶಮಾಡು.

ತೆಮಳ್ (ತೆಮಳು) ರಾಶಿಯಾಗು; ಪದರು ಪದರಾಗಿ ಬೀಳು, ತೆವಳು; ಕೂಡಿಹಾಕು.

ತೆಯ್ಯು ತೇ, ತೀಡು, ತಿಕ್ಕು.

ತೆರ (ತೆರಪು) ಬಿಡುವು, ಅವಕಾಶ, ವಿರಾಮ; ತೆರುವಿಕೆ, ತೆರಾನೆ; ರೀತಿ; ತೆರೆಯುವಿಕೆ; ಬಾಗಿಲು, ದಾರಿ.

—ತೆರ ಬಗೆಬಗೆ, ವಿಧವಿಧ; ಒಂದು ಹಾಸಿನ ಮೇಲೆ ಮತ್ತೊಂದು ಹಾಸು; ಪದರುಪದರು.

ತೆರಟು ಸೇರಿಸು; ಉರುಟು ಮಾಡು; ಸುರುಳಿಸುತ್ತು.

ತೆರವು ತೆರೆಯುವಿಕೆ, ತೋರಿಕೆ; ಅವಕಾಶ; ತೆರುವಿಕೆ; ರೀತಿ, ಬಗೆ; ಹೆಂಡತಿ ಪಡೆಯಲು ಕೊಟ್ಟ ಹಣ; ತೆರಾನೆ, ತೆತ್ತುದು.

ತೆರಳ್ (ತೆರಳು) ಹೋಗು.

—ಇಕೆ ಹೋಗುವಿಕೆ; ಸಮೂಹ.

—ಇಚು ಓಡಿಸು, ಹಿಂದಿರುಗಿಸು.

—ಕೆ ತೆರಳಿಕೆ; ಗುಂಪು.

ತೆರಳು ಹೋಗು; ಸರಿ; ಚಂಡಾಗು; ಸಮೂಹವಾಗು.

ತೆರಳೆ ಉರುಟು; ಮುದ್ದೆ.

ತೆರಾನೆ ತೆರುವಂಥ ಹಣ, ತೆರಿಗೆ; ಹಸೆ.

ತೆರಿ ಕೊಡು, ಸಲಿಸು.

ತೆರಿಗೆ ಕಂದಾಯ, ಸುಂಕ ಮೊದಲಾದುವು.

ತೆರೆ ಸಲಾಕ; ಕಪ್ಪ; ಅಲೆ, ತರಂಗ; ಪರದೆ; ಚರ್ಮದಲ್ಲಿನ ಸುಕ್ಕು, ನೆರಿಗೆ; ಅರಳು; ಬಿಡಿಸು; ಮರೆಯಿಲ್ಲದಂತೆ ಮಾಡು.

—ಇಸು ಅಲೆ, ಉಕ್ಕು; ಹೆಚ್ಚಾಗು; ಕೆರಳು, ವಿಕಸಿಸು, ತೆರೆಯುವಂತೆ ಮಾಡು.

—ಮುಸಗು ಬೆರೆ (ತೆರೆವೆರೆ), ಒಂದು ತೆರೆಯು ಇನ್ನೊಂದರಲ್ಲಿ ಸೇರುವುದು.

ತೆರೆಯರು ತೆರೆ ಹಿಡಿಯುವವರು.

ತೆರ್ಕೆ ಪರಂಪರೆ.

ತೆರ್ಪು (ತೆರಪು) ಬಿಡು, ಅವಕಾಶ, ವಿರಾಮ.

ತೆಲುಗು ಆಂಧ್ರಭಾಷೆ; ಆಂಧ್ರದೇಶ.

ತೆಲ್ಲಟಿ ಬಳುವಳಿ; ಉಡುಗೊರೆ.

ತೆಲ್ಲಯಿಸು ಮಂದವಾಗು; ಅಧಿಕವಾಗು, ಹೆಚ್ಚು; ಬೆಳೆ.

ತೆಲ್ಲಂಟೆ (ತೆಲ್ಲಟ) ಕಾಣಿಕೆ, ಬಹುಮಾನ.

ತೆವಡೆ ಗದ್ದೆ ಏರಿ, ಹುಣಿ; ತೆಗಳಿಗೆ.

ತೆವರಿ (ತೆವರು).

ತೆವರು ಎತ್ತರವಾದ ನೆಲ, ಸಣ್ಣ ಗುಡ್ಡ; ದ್ವೀಪ, ಕುದುರು; ದೂಡು; ತಿರಸ್ಕರಿಸು, ಸುಲಿ.

ತೆವಳು ತೀಕು, ಹೊಟ್ಟೆ ಎಳೆ; ತೆಳುವಾಗಿರುವುದರಿಂದ ಇಲ್ಲವೆ ಶಕ್ತಿಹೀನತೆಯಿಂದ ಆಚೀಚೆ ಬಳುಕು; ನೆಲದ ಮೇಲೆ ಹರಿದಾಡು; ತಿಕ್ಕು; ತೊಂದರೆಕೊಡು; ಕದಿ.

ತೆಳ್ (ತೆಳು) ದಪ್ಪ ಕಡಮೆಯಾದುದು; ತೆಳು.

ತೆಳು ದಪ್ಪವಲ್ಲದ್ದು, ಸೂಕ್ಷ್ಮವಾದುದು.

—ಪು (ತೆಳುವು), ತಿಳಿಯಾಗಿರುವಿಕೆ.

—ವು ತೆಳ್ಳಗಿರುವಿಕೆ.

ತೆಳುವಾಸೆ (ತೆಳ್ವಾಸ), ಬಡಬಾಸೆ; ಸ್ತ್ರೀಯರ ಹೊಟ್ಟೆಯಿಂದ ಎದೆಯ ತನಕ ಇರುವ ತೆಳ್ಳಗಿನ ಕೂದಲಿನ ಸಾಲು.

ತೆಳ್ಳದಪು ತೆಳ್ಳಗಿನ ಕೆನ್ನೆ.

ತೆಳ್ಪಸುರು ತೆಳ್ಪಗಿನ ಹೊಟ್ಟೆ.
ತೆಳ್ಪಗೆ ತೆಳುಪಾಗಿ; ಸೂಕ್ಷ್ಮವಾಗಿ.
ತೆಂಕ ದಕ್ಷಿಣ ದಿಕ್ಕು.
—ಣ ದಕ್ಷಿಣದ.
ತೆಂಕಲ್ (ತೆಂಕಲು), ತೆಂಕು, ದಕ್ಷಿಣ.
ತೆಂಕು ದಕ್ಷಿಣ; ತೇಲು, ಬಳಿ; ಈಸು; ಮೂರ್ಛೆಹೋಗು.
ತೆಂಗಲೆ ದಕ್ಷಿಣದವ; ವಿಶಿಷ್ಟಾದ್ವೈತಿಗಳ ಒಂದು ಪಂಗಡ.
ತೆಂಗು ಒಂದು ಸಸ್ಯ; ತಂಗು, ಎರಗು; ಪಕ್ಷಿಗಳು ಬಂದಿಳಿಯುವಿಕೆ.
ತೆಂಟು ಗಾಳಿಸು.
ತೆಂಡೆ ಜಿಡುಕು, ಸಿಕ್ಕು; ಜಡೆ, ಪೆಂಡೆ.
ತೆಂಬೆಲರ್ ತೆಂಕು ದಿಕ್ಕಿಂದ ಬೀಸುವ ಗಾಳಿ, ತೆಂಕಣ ಗಾಳಿ; ಮಂದಮಾರುತ.
ತೇ (ತೇಯು) ಹೋಗು, ದೂರ ಸರಿ; ತಿಕ್ಕು, ತೀಡು, ಮಸೆ; ಬಳಕೆಯಿಂದ ಸವೆ; ಚಾ.
—ಯು ತೀಡು, ತಿಕ್ಕು; ಸವೆ.
ತೇಕು (ತೇಗು) ಉಬ್ಬಸಬಿಡು; ಮೇಲುಸಿರು ತೆಗೆ; ಬಿಕ್ಕಳಿಸು, ಬಿಕ್ಕು.
—ಮುಳುಗು ನೀರಲ್ಲಿ ಮುಳುಗೇಳು; ನೀರಲ್ಲಿ ಅಡಿಮೇಲಾಗು.
ತೇಗ ಸಾಗುವಾನಿ ಮರ.
ತೇಗು ಉದಾನ ವಾಯು; ಊಟ ಮಾಡಿದುದರಿಂದ ಬರುವ ಬಿಕ್ಕಳಿಕೆ; ಸಾಗುವಾನಿ ಮರ.
ತೇಜ್ ಹರಿತಮಾಡು; ಕಾಪಾಡು.
ತೇಜ ಕಾಂತಿ, ಪ್ರಕಾಶ; ವೈಭವ; ಕಿರಣ; ಸೂರ್ಯ; ಶರೀರ; ಮನೆ.
—ಕ ಕಾಂತಿ ಹೆಚ್ಚಿಸುವ.
—ವಿಧಿ ವೈಭವಸಂಪನ್ನ.
ತೇಜಸ್ ಪ್ರಕಾಶ; ಉಷ್ಣ; ಪ್ರಭಾವ; ಪರಾಕ್ರಮ; ವೀರ್ಯ; ಜ್ಯೋತಿ; ಸೂರ್ಯ; ದೇಹಕಾಂತಿ; ಬಂಗಾರ; ಪಿತ್ತ; ಕುದುರೆಗಳ ತ್ರಾಣ; ಬ್ರಹ್ಮ; ಸತ್ವಗುಣ.
ತೇಜಸ್ವಿ ಶಕ್ತಿಶಾಲಿ.
ತೇಜಸ್ಸು (ತೇಜಸ್).
ತೇಜಃಪುಂಜ ತೇಜಸ್ಸಿನ ರಾಶಿ.
ತೇಜಿ ಕುದುರೆ, ತುರಗ; ವ್ಯಾಪಾರದ ಚುರುಕು
ತೇಜೋಮಯ ಪ್ರಕಾಶಸ್ವರೂಪ, ಜ್ಯೋತಿರ್ಮಯ, ತೇಜಸ್ಸು ಪ್ರಾಧಾನವಾಗಿ ಉಳ್ಳುದು.
ತೇಜೋಮಾತ್ರುಸತ್ವಗುಣಾಂಶ; ಇಂದ್ರಿಯ.
ತೇಟ (ತೇಟು) ಶುದ್ಧ, ತಾಜಾ; ಪಕ್ಕಾ.
ತೇಟೆ ತಿಳಿ; ಪರಿಶುದ್ಧ.
ತೇದಿ ದಿನ, ತಾರೀಕು.
ತೇನ ಆ ದಿಕ್ಕು; ಆ ರೀತಿ; ಆ ತೆರ.
—ತೇನ ಮೇಲೆಮೇಲೆ, ಎಕ್ಕೆಕ್ಕೆ; ಆಗಾಗ.
ತೇಪೆ ಪತ್ತೆ, ರಪ್ಪು.
ತೇಮು (ತೇವ), ನೀರಪಸೆ, ತಂಡಿ.
ತೇಮನ ಒದ್ದೆಮಾಡುವುದು; ಒಂದು ಮೇಲೋಗರ.
ತೇಮಾನ ಕುಂದಲು, ತೇದಿ ಆಗುವ ನಷ್ಟ; ಸವಕಲುವಾಸಿ; ಕೆಲಸಕ್ಕೆ ಅಂಜುವಿಕೆ.
ತೇರ್ ರಥ; ದಟ್ಟಣಿ.
—ಅಯ್ಸು ದಟ್ಟವಾಗು, ಮಂದವಾಗು; ಗುಂಪುಕಟ್ಟು; ಅಲ್ಲಾಡು; ಹೆದರು; ಹಿಮ್ಮೆಟ್ಟಿಸು; ಹಿಂದಿರುಗಿಸು.
ತೇರಸ (ಧ್ವ)ತ್ರಯೋದಶ(ಸಂ), ಹದಿಮೂರು.
ತೇರು ರಥ; ಸೇರು; ಮುಟ್ಟು.
—ಮರ ರಥದಾಕಾರದ ಮರ, ಕೊನಿಫರ್ ಮರ.
ತೇರ್ಗಡೆ ಗುರಿಮುಟ್ಟು, ಪರೀಕ್ಷೆ ಪಾಸಾಗುವಿಕೆ, ಉತ್ತೀರ್ಣತೆ.
—ಆಗು ಉತ್ತೀರ್ಣನಾಗು.
ತೇಲ್ (ತೇಲು) ನೀರಿನ ಮೇಲೆ ಅಲೆ; ಮುಳು

ಗು; ತೊಲಗು, ದೂರಹೋಗು; ಸಡಿಲಾಗು; ಸಡಿಲು; ಮೈಮರೆ.

—ಇಸು ಪಾರಾಗಿಸು; ಮೇಲಕ್ಕೆ ಉಳಿಯುವಂತೆ ಮಾಡು; ಕಣ್ಣರಳಿಸು; ತಪ್ಪಿಸು.

ತೇವ (ತೇವು), ನೀರಿನ ಪಸೆ ಇರುವಿಕೆ.

ತೇವುಳಿ ಕೂದಲು ಉದುರುವ ಒಂದು ಬೇನೆ.

ತೇಂಕು (ತೇಕು) ತೇಲು; ಉಬ್ಬಸಬಿಡು.

—ಇಸು ಉಕ್ಕಿಸು.

ತೈಜಸ ಹೊಳಪಿನ; ಕಾಂತಿಯುತವಾದ.

ತೈನಾತಿ ಆಶ್ರಯದ; ಅಧೀನಗೊಳಿಸಿದ; ಹತ್ತಿರದ ಸೇವಕ.

ತೈಯ (ದೈತ್ಯ).

ತೈಲ ತಿಲದಿಂದ ದೊರೆಯುವ ಎಣ್ಣೆ; ಎಳ್ನೆಯ್, ಎಳ್ಳೆಣ್ಣೆ.

—ಕಾರ ಎಣ್ಣೆ ತೆಗೆಯುವವ, ಗಾಣಿಗ.

ತೈಲಪ ಚಾಲುಕ್ಯ ವಂಶದ ಒಬ್ಬ ಅರಸು.

ತೈಲವರ್ಣ ರಕ್ತಚಂದನ.

ತೈಲಿ ಹಣದ ಚೀಲ.

ತೊಕ್ಕು ಅಂಶ, ಸಿಪ್ಪೆ, ಹೊಟ್ಟು; ತೊಗಟೆ.

ತೊಗಟು ಕೋಡು; ಸಿಪ್ಪೆ; ತೊಗಟೆ.

ತೊಗರಿ (ದ್ಭ) ತುವರಿ (ಸಂ), ಒಂದು ಧಾನ್ಯ.

ತೊಗರು ಕೆಂಪು ಬಣ್ಣ; ತೊಗರಿಕಾಳು.

ತೊಗಲು ಚರ್ಮ, ಹದಮಾಡದ ಚರ್ಮ.

ತೊಗೆ ತೊವ್ವೆ.

ತೊಟಕು ತುಟುಕಾಗಿ ಬೀಳು, ಹನಿ.

ತೊಟ್ನಗೆ ಬೇಗ.

ತೊಟ್ಟಿ ಚೌಕಿ ಮನೆ; ನೀರಿನ ಬಾಣೆ; ಬುಟ್ಟಿ.

ತೊಟ್ಟಿಲು ಮಗುವನ್ನು ಮಲಗಿಸುವ ಬುಟ್ಟಿ; ಬಾಲಶಯ್ಯೆ.

ತೊಟ್ಟು ಹಣ್ಣುಕಾಯಿಗಳನ್ನು ಗಿಡಕ್ಕೆ ತಗಲಿಸುವ ತಾಳು; ಹನಿ,ಬೊಟ್ಟು, ತುಂತುರು; ಅಪ್ಪಿ; ಧರಿಸಿ; ತೊಡಗಿ; ಆರಂಭದಿಂದ.

—ಇಡು ಹನಿ ಉದುರು, ಹನಿಯು.

ತೊಟ್ಟೆಳಿಕೆ ಗಂಟಲು; ವಿಪತ್ತು.

ತೊಟ್ಟೆ ತೆಂಗಿನ ಗರಿ, ಸೋಗೆ; ಬುಟ್ಟಿ.

ತೊಡ (ತೊಡವು), ಭೂಷಣ, ಆಭರಣ.

ತೊಡಕಲು ಜಗಳ; ತಂಟೆ; ಅಡ್ಡಿ.

ತೊಡಕು (ತುಡುಕು), ಯುದ್ಧಕ್ಕೆ ಕೈಹಾಕು; ತಳ್ಳಿ, ತಂಟೆ, ಗೊಡವೆ; ಇಕ್ಕಟ್ಟು, ಸಂದು; ಗಂಟು; ಅಡ್ಡಗಟ್ಟು; ತಡೆ.

—ಇಸು ತಗಲಿಸು; ಸಿಕ್ಕಿಬೀಳುವಂತೆ ಮಾಡು; ಪ್ರವರ್ತಿಸು.

ತೊಡಗು ಪ್ರಾರಂಭಿಸು, ಸುರುಮಾಡು.

ತೊಡಚು ತೊಡಿಸು; ಜತೆಮಾಡು, ಸೇರಿಸು.

ತೊಡಚೆ (ತೊಡಂಚೆ) ಗೊಂಚಲು; ಹೂಕಾಯಿಗಳ ತಾಳು, ತುಂಬು.

ತೊಡವೆ (ತೊಡಮ್ಮೆ) ತಡೆಯುವ ಬಾಗಿಲು, ತಡೆಬಾಗಿಲು.

ತೊಡರ್ (ತೊಡರು) ಪ್ರತಿಭಟಸು, ಇದಿರಿಸು; ಸುತ್ತಿಕೊಳ್ಳು; ಆಶ್ರಯಿಸಿಕೊಳ್ಳು; ಅಡ್ಡಿ, ತೊಂದರೆ; ಅಲಂಕಾರ; ಹಿಂಸೆ.

—ಚು ಉಂಟುಮಾಡು; ಜತೆ ಸೇರಿಸು.

ತೊಡವು ಅಲಂಕಾರ, ಆಭರಣ; ಬಿರುದಿನ ಸರ; ಬಟ್ಟೆ; ಬುಡ; ಆರಂಭ.

ತೊಡಹು ತೊಟ್ಟದ್ದು, ಅಲಂಕರಿಸಿದುದು; ತೊಡೆದದ್ದು; ಲೇಪಿಸಿದ್ದು.

ತೊಡಂಕು ಸಿಕ್ಕಿಕೊಳ್ಳು; ತೊಡಕು.

ತೊಡಂಗು (ತೊಡಗು).

ತೊಡಂಚೆ ಹೂಕಾಯಿಗಳ ತೊಟ್ಟು, ತುಂಬು.

ತೊಡಿಗೆ (ತೊಡುಗೆ).

ತೊಡು ತುಡು, ಧರಿಸು; ಜೋಡಿಸು; ಬಾಯಿತೀಟೆ, ಹಸಿವು.

—ಕೊರೆ ತೊಡುಗೆಯ ಕಾಣಿಕೆ.

—ಗೆ ಧರಿಸುವಂಥದು; ಕವಚ, ಆಭರಣ.

—ಪು ಆಭರಣ, ಭೂಷಣ; ತೊಡಿಗೆ.

ತೊಡೆ ಉಜ್ಜು; ಅಳಿಸು, ಒರಸು, ಹಚ್ಚು,

ಲೇಪಿಸು; ಊರು, ಸೊಂಟದಿಂದ ಮೊಣ ಕಾಲಿನ ತನಕ ಇರುವ ಭಾಗ; ಬಳಿ.
—ವಿಕೆ ಉಜ್ಜುವಿಕೆ, ಅಳಿಸುವಿಕೆ.
—ಸು ಅಳಿಸು, ನಾಶಮಾಡು; ಹಚ್ಚು.
ತೊಣಚಿ (ತೊಣಚೆ) ನಾಯಿಸೊಳ್ಳೆ, ಒಂದು ನೊಣ ಜಾತಿ.
ತೊಣೆ ಜತೆ, ಸೇರಿಕೆ; ಸಮತೆ, ಎಣೆ.
ತೊತ್ತಳ ಕಾಲು; ಕಾಲಿಂದ ತುಳಿದುದು.
—ತುಳಿ ಕಾಲಿಂದ ಮೆಟ್ಟಿ ಹಾಳುಮಾಡು.
ತೊತ್ತು (ತೊಳ್ತು), ಗವುಡಿ; ದಾಸಿ; ಆಳು.
ತೊದಲ್ (ತೊದಲು) ಅಸ್ಪಷ್ಟ ಮಾತು; ಮಕ್ಕಳ ಮಾತು; ಹುಸಿ, ಸುಳ್ಳು; ಅಸ್ಪಷ್ಟ ಮಾತಾಡು; ಹುಸಿಮಾತಾಡು.
—ಕೆ ಅಸ್ಪಷ್ಟ ನುಡಿ; ಹುಸಿಮಾತು.
ತೊದಳ್ (ತೊದಲ್), ಸುಳ್ಳು; ತಪ್ಪುವಿಕೆ.
ತೊನೆ ತೂಗು; ಅಲ್ಲಾಡು; ನಾಟು.
—ಹು (ತೊನಹು), ತೂಗಾಟ.
ತೊನ್ನು ಕುಷ್ಠ, ಬಿಳಿ ಕುಷ್ಠ, ಬಿಳುಪು.
ತೊಪ್ಪನೆ ಬೇಗನೆ; ಗುಂಪಾಗಿ; ದೊಪ್ಪೆಂದು ಸದ್ದುಮಾಡಿ.
ತೊಪ್ಪಲ (ತಪ್ಪಲ), ಬೆಟ್ಟದ ಬದಿ; ಸೊಪ್ಪು.
ತೊಪ್ಪೆ ಸಗಣಿ ಮುದ್ದೆ.
ತೊಯ್ (ತೊಯ್ಯು), ಒದ್ದೆಯಾಗು.
ತೊರವೆ ಬಿಜಾಪುರದ ಬಳಿ ಗ್ರಾಮ. ತೊರವೆ ರಾಮಾಯಣ ಬರೆದವನು ಇಲ್ಲಿನವನು.
ತೊರಳೆ ಗುಲ್ಮ; ದೇಹದ ಒಂದು ಭಾಗ.
ತೊರೆ ದ್ರವ ತುಂಬಿಕೊಳ್ಳು; ಹಾಲು ತನ್ನಂತೆ ಇಳಿಯುವ ಕೆಚ್ಚಲು; ಹೊಳೆ, ನದೀ ಪ್ರವಾಹ; ಬಿಡು, ತ್ಯಜಿಸು; ಸುರಿ, ದ್ರವಿಸು.
ತೊರೆಯ ಬೆಸ್ತ; ಉಪ್ಪಾರ.
ತೊಲಗು ದೂರಹೋಗು.
—ಇಸು ನಿವಾರಿಸಿಕೊ, ದೂರ ಸರಿಯುವಂತೆ ಮಾಡು.
ತೊಲಿ ಕುಳಿ, ಕುಣಿ; ತೂತು.
ತೊಲೆ (ದ್ಭ) ತುಲಾ (ಸಂ), ತಕ್ಕಡಿ; ತುಲಾ ರಾಶಿ; ಸಮಾನ; ರೂಪಾಯಿ ತೂಕ; ಮರದ ಜಂತೆ.
ತೊವರ್ (ತೊವರು), ಒಗರು, ಚೊಗರು.
ತೊವರಿ (ದ್ಭ) ತುವರಿ (ಸಂ), ತೊಗರಿ.
ತೊವರು ಕಷಾಯ; ಒಗರು.
ತೊವಲು (ತೊಗಲ್), ಚರ್ಮ; ಚಿಗುರೆಲೆ, ಎಳದಳಿರು; ತೊಪ್ಪಲು.
—ಇಡು ಚಿಗುರು.
ತೊವ್ವೆ (ತೊಗೆ) ತೊಗರಿಯಿಂದ ಮಾಡುವ ಒಂದು ಮೇಲೋಗರ.
ತೊಳಕು ದೇಹದ ಒಂದು ಭಾಗ.
ತೊಳಗು ತಿಕ್ಕಿಹೊಳೆವಂತೆ ಮಾಡು; ಹೊಳೆ, ಪ್ರಕಾಶಿಸು; ಕಳೆ; ಕದಿರು, ಕಾಂತಿ.
—ಬೆಳಗು ಅತಿಯಾಗಿ ಪ್ರಕಾಶಿಸು.
ತೊಳಚಿ (ತುಳಸಿ).
ತೊಳಪು ಪ್ರಕಾಶ, ಹೊಳಪು.
ತೊಳಲು ತೊಳತೊಳಗು; ಅಧಿಕವಾಗಿ ಹೊಳೆ; ಸುತ್ತಾಡು; ಅಲೆ; ಹಿಂಸೆಪಡು.
ತೊಳವು (ತೊಳಹು, ತೊಳಪು) ಕಾಂತಿ, ಪ್ರಕಾಶ.
ತೊಳಸು ತೊಳೆಯಿಸು; ಮಗುಚು; ಸುತ್ತು ತಿರುಗು; ತೊಳೆಯಿಂದ ದೋಣಿ ನಡಸು; ಸಿಕ್ಕಿಕೊಳ್ಳು; ಅಕ್ಕಿಯ ತೌಡು ಹೊಟ್ಟುಗಳನ್ನು ಕಳೆ; ಕಾದಾಡು; ಕರ್ಚು; ವಾಂತಿ ಬರುವಂತಾಗುವ ಅನುಭವ.
ತೊಳೆ ತೊಳೆಯುವಿಕೆ; ದೋಣಿ ನಡೆಸುವ ಹುಟ್ಟು; ಕುಣಿ, ಕುಳಿ; ಸೊಳೆ; ಹಣ್ಣಿನ ಯಾವುದೇ ಪ್ರತ್ಯೇಕ ಖಂಡ.
ತೊಳ್ತು (ತೊತ್ತು) ದಾಸಿ; ಸೇವಕ, ದಾಸ.
ತೊಳ್ತುಳಿ ಚೆನ್ನಾಗಿ ತುಳಿ, ಬಾಡು.
ತೊಂಕು (ತೊಂಗು) ಬಾಗು.

ತೊಂಗಲ್ ಗೊಂಚಲು, ಗುಚ್ಛ; ಗುಂಪು, ಸಮೂಹ.
ತೊಂಗಲೆ ಸೇರಿದ್ದು; ಜತೆಯಾದ್ದು; ನೂಲು.
ತೊಂಗು ತೂಗಾಡು, ಜೋಲಾಡು; ತುಂಬಿರು.
ತೊಂಡಲ್ (ತೊಂಡಿಲ್) ತಲೆಯ ಮೇಲೆ ತೂಗುವ ಮುತ್ತಿನ ಮಾಲೆ; ಸರ.
ತೊಂಡಿಗ ಒಂದು ಹಕ್ಕಿ.
ತೊಂಡಿಲ (ನೋಡು: ತೊಂಡಲ್).
ತೊಂಡು ತುಂಟತನ; ಸ್ವೇಚ್ಛಾವೃತ್ತಿ.
—ಕೆಡೆ ಗಿಳಿಯ ಕೂಗು.
—ತನ ತುಂಟತನ; ಸ್ವೈರ.
—ತೊಳಸು ತೊಂದರೆ.
ತೊಂಡೆ ತೊಂಡೆಯ ಹಣ್ಣು; ಓತಿಕೇತ.
ತೊಂತು ಸುತ್ತು; ಸಿಕ್ಕಿಬೀಳು; ಹತ್ತು, ಏರು.
ತೊಂದರೆ ಉಪದ್ರವ; ತೊಡಕು; ಕೊರತೆ.
ತೊಂಬಾರ ರಾಶಿ, ಕಾಳಿನ ಗುಡ್ಡೆ.
ತೊಂಬೆ ಗೊಂಚಲು; ಸಮೂಹ; ಗೊಂದಣಿ; ಬಿದಿರಿನ ಬುಟ್ಟಿ.
ತೋಕ ಸಂತತಿ; ಮಕ್ಕಳು.
ತೋಕು ಎಸೆ, ಹೊಡೆ; ಅದ್ದು.
—ಳಿ ಅದ್ದುವಿಕೆ, ಮುಳುಗಿಸುವಿಕೆ.
ತೋಕೆ ತೂಗುವ ಬಾಲ, ತೂಗುವ ಜಲ್ಲರಿ ಮೊದಲಾದುವು; ಸೋಗೆ ನವಿಲು.
ತೋಚು ತೋರು, ಕಾಣಿಸು; ಮನಸ್ಸಿಗೆ ಹೊಳೆ.
—ಇಕೆ ತೋರುವಿಕೆ; ಮನಸ್ಸಿಗೆ ಬರುವಿಕೆ.
ತೋಜೆ ರೀತಿ, ನಡತೆ.
ತೋಟ ಉದ್ಯಾನ, ಹಿತ್ತಿಲು, ನಟ್ಟು ಬೆಳಸಿದ ಗಿಡಮರಗಳ ಸಮೂಹ.
—ಇಗ ತೋಟ ಮಾಡುವವ.
—ಗಾರ ತೋಟದ ಯಜಮಾನ.
ತೋಟಿ ಜಗಳ, ಕಾದಾಟ; ಹಿಟ್ಟಿನ ಮುದ್ದೆ ನುಂಗುವಿಕೆ; ಜಾಡಮಾಲಿ.
—ಆಟ ಜಗಳಾಟ.
—ಕಾರ ಜಗಳಗಾರ.
ತೋಟೆ ಕೋವಿಯೊಳಗೆ ತುಂಬಿಸುವ ಮದ್ದು ಗುಂಡು; ಶೂನ್ಯ, ಕಾಲಿ, ಟೊಳ್ಳು.
ತೋಡ ನೀಲಗಿರಿಯ ಮೂಲನಿವಾಸಿ.
ತೋಡಾ ಕೈಗೆ ತೊಡುವ ಗೌರವದ ಬಳೆ; ಬಿರುದಿನ ಬಳೆ; ಒಂಕಿ.
ತೋಡಿ ಒಂದು ರಾಗ.
ತೋಡು ಸೇರಿಕೆ, ಜತೆ; ಸಮಾನ; ನೀರಿನ ಕಾಲುವೆ; ಹೊರಟುಹೋಗು; ಮಣ್ಣನ್ನು ಅಗೆ; ಕುಗ್ಗಿ ತೆಗೆ; ದುಃಖವನ್ನು ಹೇಳಿಕೊ.
ತೋಡುವೊಯ್ಲು ಜತೆ ಪೆಟ್ಟು, ಎರಡು ಪೆಟ್ಟು; ಬಲವಾದ ಪೆಟ್ಟು.
ತೋದು ಅವಸರಕ್ಕೆತಕ್ಕಉಪಾಯ; ಹಿಕ್ಮತು.
—ಗಾರ ಉಪಾಯಗಾರ.
ತೋದ್ಯ ಹೊಡೆಯಬಹುದಾದ.
ತೋಪಡೆ ಕೀಸುಳಿ, ಉಜ್ಜುಗೊರಡು, ಗೀಸುಳಿ; ತೋಪಡಾ, ರಪ್ಪು; ಪತ್ರೆ.
ತೋಪು (ತೋಹು) ಮರಗಳ ಗುಂಪು; ಹಾಡಿ, ಚಿಕ್ಕ ಕಾಡು.
ತೋಫು (ತೋಪು) ಫಿರಂಗಿ.
—ಖಾನೆ ಫಿರಂಗಿ ಇಡುವ ಸ್ಥಳ.
ತೋಬರಿ (ತೋಬರ) ಕುದುರೆಯ ಬಾಯಿಗೆ ಕಟ್ಟುವ ಚೀಲ.
ತೋಮ (ದ್ಭ) ಸ್ತೋಮ (ಸಂ), ಸಮೂಹ, ಸಂದಣಿ, ಗುಂಪು.
ತೋಮರ ಬಾಣ; ಮುದ್ಗರ; ಈಟ.
ತೋಯ ನೀರು; ಛಂದಸ್ಸಿನಲ್ಲಿ ಒಂದು ಚರಣ.
—ಜ ನೀರಲ್ಲಿ ಹುಟ್ಟಿದುದು, ಕಮಲ.
ತೋಯಧರ ಮೋಡ, ಮುಗಿಲು.
ತೋಯಜಾರಿ ಚಂದ್ರ.
ತೋಯದ ನೀರು ಕೊಡುವುದು, ಮುಗಿಲು.
ತೋಯಧಿ ಸಮುದ್ರ, ಕಡಲು.

ತೋಯು ಒದ್ದೆಯಾಗು, ನನೆ; ದ್ರವಿಸು.
ತೋರ್ (ತ್ತೋರು) ಕಾಣಿಸು.
—ಇಕೆನೋಟ, ಕಾಣಿಸುವಿಕೆ; ಪ್ರದರ್ಶನ.
—ಕೆ ಕಾಣಿಸುವಿಕೆ; ಖ್ಯಾತಿ.
—ಪು ಕಂಡುಬರುವಿಕೆ, ತೋರುವಿಕೆ.
ತೋರ ದೊಡ್ಡ; ಸ್ಥೂಲ, ದಪ್ಪನಾದ.
—ಇತು ತೋರವಾದುದು; ಹಿಂದಾದುದು
—ಹತ್ತ ಬಲವಾದ ಕೈಯುಳ್ಳವ; ವೀರ, ಪರಾಕ್ರಮಿ.
ತೋರಣ ಬಾಗಿಲ ಹೊರಗಡೆ; ಶುಭ ಸೂಚನೆ ಗಾಗಿ ಮಾಡುವ ಅಲಂಕಾರದ ಬಾಗಿಲು.
ತೋರಾಯರ ಬಲವಾದ, ಜೋರಿನ; ಕಸುವಿನ.
ತೋರೆತ್ತು ಬೇಟೆಯಲ್ಲಿ ವನ್ಯ ಮೃಗಗಳನ್ನಾ ಕರ್ಷಿಸಲು ನಿಲಿಸುವ ಎತ್ತು.
ತೋರ್ಕೆ ತೋರ್ಪು, ತೋರಿಕೆ; ಕಾಣಿಸು ವಿಕೆ, ಪ್ರದರ್ಶನ, ಹೊರಸೋಗು.
ತೋಲ್ ತೋಲು, ತೊಗಲು, ಚರ್ಮ; ದಾರಿ.
ತೋಲ ತೊಲೆ (ದ್ಭ), ರೂಪಾಯಿ ತೂಕ, 96 ರಕ್ತಿಕೆಗಳು; ಸಮಾನ, ತೂಕ.
ತೋಲಿ ಕಣ್ಣಿನ ಹೂ.
ತೋಷ ಸಂತೋಷ; ತೃಪ್ತಿ; ತೂಕ.
—ಇಸು ಸಂತೋಷಪಡು; ತೃಪ್ತಿಪಡು, ಸುಖಪಡು.
—ಣ ತೃಪ್ತಿಗೊಳಿಸುವಿಕೆ.
ತೋಹಡಿಕೆ ಒಗಡಿಕೆ.
ತೋಹು ತೋಪು; ಬೇಲಿ, ಬಲ್ಲೆ; ಬೇಟೆ; ಗುಂಪು, ಸಮೂಹ; ಮೋಸ, ವಂಚನೆ; ಉಪಾಯ; ಮುತ್ತಿಗೆ; ಹೊಂಚಿನ ಸ್ಥಳ.
ತೋಳ್ (ತೋಳು), ಬಾಹು; ರಟ್ಟೆ.
—ತಟ್ಟು ಭುಜತಟ್ಟುಕೋ, ಹೆಮ್ಮೆದೋರು.
—ತೀಟೆ ತೋಳಿನ ತುರಿಕೆ, ಕಾದಾಟದ ಚಪಲ.
—ಚೆರಗು ಆಲಿಂಗನ.
ತೋಳ ಕಾಡುಮೃಗ, ವೃಕ; ಕೋಕ.
ತೋಳು ಬಾಹು, ಭುಜ.
—ಬಲ ಬಾಹುಬಲ.
ತೋಳೆ ಗಬ್ಬಿಲ, ಕಣ್ಣುಕಪ್ಪಡಿ, ಹೆಬ್ಬಾವಲಿ.
ತೌಡು ಅಕ್ಕಿಯ ಹೊರಗೆ ಅಂಟಿರುವ ಭಾಗ.
ತೌರ್ಯ ಮದ್ದಲೆ ಮೊದಲಾದ ವಾದ್ಯಗಳಲ್ಲಿ ಹುಟ್ಟಿದುದು.
—ತ್ರಿಕ ನೃತ್ಯ, ಗೀತ, ವಾದ್ಯಗಳ ಸೇರಿಕೆ.
ತೌಲಿಕ ಚಿತ್ರಕಾರ; ತೂಲಿಕೆಯ ಸಂಬದ್ಧ ವಾದ.
ತೌಳವ ತುಳು ದೇಶಕ್ಕೆ ಸಂಬಂಧಿಸಿದ; ತುಳು ಭಾಷೆಗೆ ಸಂಬಂಧಿಸಿದ.
ತ್ಯಕ್ತ ಬಿಟ್ಟ, ತೊರೆದ, ಬಿಡಲ್ಪಟ್ಟ.
ತ್ಯಜ್ ಬಿಡು.
ತ್ಯಜನ ಬಿಡುವಿಕೆ.
ತ್ಯಜಿಸು ಬಿಡು, ತೊರೆ; ಅಗಲು; ಕೊಡು.
ತ್ಯಾಗ ಚಾಗ (ದ್ಭ) ಕೊಡುವುದು, ದಾನಮಾ ಡುವುದು; ಬಿಡುವುದು, ಅಗಲುವುದು.
ತ್ಯಾಗಿ (ಸಂ) ಚಾಗಿ (ದ್ಭ), ದಾತ; ಉದಾರಿ; ಕೊಡುವವ.
ತ್ಯಾಜ್ಯ ಬಿಟ್ಟದ್ದು; ಬಿಡಬೇಕಾದುದು.
ತ್ರಯ ಮೂರು.
ತ್ರಯೋದಶ ಹದಿಮೂರು.
ತ್ರಸ್ ಹೆದರು, ಭಯಪಡುವ; ಚಲಿಸುವ, ಸರಿಯುವ; ಕಂಪಿಸುವ.
ತ್ರಸರ ನೇಕಾರನ ನೂಲು ತುಂಬಿದ ಲಾಳಿ.
ತ್ರಸರೇಣು ಸೂರ್ಯರಶ್ಮಿಯಲ್ಲಿ ಹಾರಾ ಡುವ ಪರಮಾಣು.
ತ್ರಸ್ತ ಹೆದರಿದ, ಭೀತ; ಕಂಪಿಸುವ.
ತ್ರಸ್ನು ಹೇಡಿ, ಪುಕ್ಕ.
ತ್ರಾಣ ಶಕ್ತಿ, ಕಸುವು, ಬಲ; ರಕ್ಷಣೆ.
ತ್ರಾಣಿ ಬಲಶಾಲಿ, ಶಕ್ತಿಯುತ; ಗಟ್ಟಿಗ.

ತ್ರಾತ ರಕ್ಷಿತ.
ತ್ರಾಸ ಹೆದರಿಕೆ; ಆಯಾಸ; ಕಷ್ಟ; ಕೊಲೆ; ಹಾನಿ; ನೋವು; ಚಲಿಸುವ, ನಡುಗುವ; ಭೀತಿಗೊಳ್ಳುವ; ರತ್ನಗಳಲ್ಲಿನ ಕಿಡುಕು.
ತ್ರಾಸು ತಕ್ಕಡಿ, ಚಿಂತಾಲು.
ತ್ರಾಸುಮಾರ (ತಾಸುಮಾರು) ಒಂದು ಚರ್ಮ ವಾದ್ಯ.
ತ್ರಾಹಿ ಕಾಪಾಡು, ರಕ್ಷಿಸು.
ತ್ರಿ ಮೂರು.
ತ್ರಿಕ (ಸಂ) ತಿಗ, ತಿಕ (ದ್ಭ), ಬೆನ್ನೆಲುಬೂ ಸೊಂಟದ ಎಲುಬುಗಳೂ ಸೇರುವ ಭಾಗ, ಮುಕುಳಿ.
ತ್ರಿಕರಣ ಮನಸ್ಸು, ವಾಕ್ಕು, ಕಾಯಗಳೆಂಬ ಮೂರು.
—ಶುದ್ಧಿ ನಡೆ, ನುಡಿ, ಮನಸ್ಸುಗಳು ಪರಿ ಶುದ್ಧವಾಗಿರುವುದು.
ತ್ರಿಕಾಲ ಭೂತ, ಭವಿಷ್ಯತ್ತು, ವರ್ತಮಾನ ಕಾಲಗಳು.
—ಜ್ಞ ಮೂರು ಕಾಲಗಳಲ್ಲೂ ಏನಾ ಗುವುದೆಂದು ತಿಳಿದವ.
ತ್ರಿಕೂಟ ಒಂದು ಪರ್ವತ. ರಾಮಾಯಣ ದಲ್ಲಿ ಇದರ ಉಲ್ಲೇಖವಿದೆ.
ತ್ರಿಕೋಣ ಮೂರು ಮೂಲೆಯುಳ್ಳುದು; ಲಗ್ನಕ್ಕೆ 5ನೆಯ ಇಲ್ಲವೆ 9ನೆಯ ಸ್ಥಾನ.
ತ್ರಿಗರ್ತ ಮೂರು ಕಡೆ (ಗರ್ತ=ತಗ್ಗು) ತಗ್ಗುಳ್ಳ ದೇಶ. ಪಂಜಾಬಿನ ಒಂದು ಭಾಗ.
ತ್ರಿಗುಣ ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳು.
ತ್ರಿಜಗ ಸ್ವರ್ಗ, ಭೂಮಿ, ಪಾತಾಳಗಳೆಂಬ ಮೂರು ಲೋಕಗಳು.
ತ್ರಿಜಟೆ ವಿಭೀಷಣನ ಮಗಳು. ಒಬ್ಬ ರಾಕ್ಷಸಿ. ಇವಳು ಅಶೋಕ ವನದಲ್ಲಿ ಸೀತೆಯ ಕಾವ ಲಾಗಿದ್ದಳು.
ತ್ರಿದಶ ಬಾಲ್ಯ, ಕೌಮಾರ, ಯೌವನ ಎಂಬ ಮೂರು ಸ್ಥಿತಿಗಳು. ಮುಪ್ಪು ಇಲ್ಲದವರು; ಸದಾ 30 ವಯಸ್ಸಿನವರಾಗಿ ಕಾಣು ವವರು, ದೇವತೆಗಳು.
ತ್ರಿದಂಡ ಒಂದು ಬಗೆಯ ಸನ್ಯಾಸ.
ತ್ರಿದೋಷ ವಾತ, ಪಿತ್ಥ, ಕಫಗಳೆಂಬ ಶರೀರದ ಮೂರು ದೋಷಗಳು. ಇವುಗಳ ಹೆಚ್ಚು ಕಡಮೆಯಿಂದ ಬೇನೆಗಳು ಆಗುವುವು ಎಂದು ನಂಬಿಕೆ.
ತ್ರಿನಯನ ಮುಕ್ಕಣ್ಣ, ಶಿವ.
ತ್ರಿನಾಮ ಶ್ರೀ ವೈಷ್ಣವರು ಹಣೆಯಲ್ಲಿಡುವ ಮೂರು ನಾಮ.
ತ್ರಿನಾಮಿ ಶ್ರೀ ವೈಷ್ಣವ ಪಂಥದವ.
ತ್ರಿನೇತ್ರ ಮುಕ್ಕಣ್ಣ, ಶಿವ.
ತ್ರಿಪತಾಕೆ ಹಣೆಯಲ್ಲಿ ಮೂರು ಗೆರೆ, ಕೋಪ ದಿಂದ ಹಣೆಯಲ್ಲಿ ಮೂರು ನೆರಿಗೆ ಬೀಳು ವುದು; ನಾಟ್ಯದ ಒಂದು ಹಸ್ತ ಮುದ್ರೆ.
ತ್ರಿಪಥ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ದಾರಿಗಳು.
—ಗೆ ಮೂರು ಲೋಕದಲ್ಲಿ ಹರಿಯು ವವಳು, ಗಂಗೆ.
ತ್ರಿಪದ ಮೂರು ಮಾತು; ಮುಕ್ಕಾಲು; ಮೂರು ಚರಣಗಳುಳ್ಳದ್ದು.
ತ್ರಿಪದಿ ಮೂರು ಪಾದಗಳುಳ್ಳ ಪದ್ಯ ಜಾತಿ.
ತ್ರಿಪುಟ ತ್ರಿವುಡೆ, ಮೂರು ಪೆಟ್ಟುಗಳುಳ್ಳ ಒಂದು ತಾಳ ಜಾತಿ.
ತ್ರಿಪುರ ಒಬ್ಬ ರಾಕ್ಷಸ; ಬ್ರಹ್ಮನ ವರದಿಂದ ಆಯಿತೆಂಬ ಚಿನ್ನ, ಬೆಳ್ಳಿ, ಉಕ್ಕಿನ ಮೂರು ಪಟ್ಟಣಗಳು.
—ಅರಿ ತ್ರಿಪುರ ರಾಕ್ಷಸನನ್ನು ಕೊಂದವ, ಶಿವ.
ತ್ರಿಪುಂಡ್ರ ಹಣೆಯ ಮೇಲಿನ ಗೆರೆ ಇಲ್ಲವೆ ಭಸ್ಮದಿಂದ ಹಾಕುವ ಮೂರು ಗೆರೆಗಳು.

ತ್ರಿಭಂಗಿ ಮೈಯನ್ನು ಮೂರು ತಡವೆ ಬಾಗಿಸಿ ನಿಲ್ಲುವ ರೀತಿ.
ತ್ರಿಭುವನ ಮೂರು ಲೋಕ; ಸ್ವರ್ಗ, ಮರ್ತ್ಯ, ಪಾತಾಳಗಳು.
ತ್ರಿಮೂರ್ತಿ ಬ್ರಹ್ಮ, ವಿಷ್ಣು, ಶಿವ ಎಂಬ ಮೂವರು ಮೂರ್ತಿಗಳು.
ತ್ರಿರತ್ನ ಬುದ್ಧ, ಸಂಘ, ದಮ್ಮ ಎಂಬ ಮೂರು ನಿಯಮಗಳು; ಸಮ್ಯಕ್ ಜ್ಞಾನ, ಸಮ್ಯಕ್ ದರ್ಶನ, ಸಮ್ಯಕ್ ಚಾರಿತ್ರವೆಂಬ ಮೂರು ಜೈನ ತತ್ವಗಳು.
ತ್ರಿಲಿಂಗ ಮೂರು ಲಿಂಗ ಭೇದಗಳು; ತ್ರಿಗುಣಗಳು; ಪುಂ; ಸ್ತ್ರೀ; ನಪುಂಸಕ.
ತ್ರಿವಳಿ ತಿವಳಿ (ದ್ಭ), ಹೊಟ್ಟೆಯ ಮೇಲಿನ ಮೂರು ಮಡಿಕೆ (ನೆರಿಗೆ).
ತ್ರಿವಿಕ್ರಮ ಮೂರು ಲೋಕವನ್ನು ಆವರಿಸಿದವ, ಬಲಿ, ವಾಮನ.
ತ್ರಿವೇಣಿ ಗಂಗೆ, ಯಮುನೆ, ಸರಸ್ವತಿ ನದಿಗಳು ಕೂಡುವ ಸ್ಥಾನ, ಪ್ರಯಾಗ.
ತ್ರಿಶಂಕು ಸೂರ್ಯವಂಶದ ಒಬ್ಬ ರಾಜನು. ಈತನು ಹಲವು ಪಾಪಗಳನ್ನು ಮಾಡಿದನು. ಕೊನೆಗೆ ವಿಶ್ವಾಮಿತ್ರನ ದಯೆಯಿಂದ ಸ್ವರ್ಗಕ್ಕೆ ಏರಿಸಲ್ಪಟ್ಟರೂ ದೇವತೆಗಳು ಅವನನ್ನು ಅಲ್ಲಿಗೆ ಬರಗೊಡದ ಕಾರಣ ಅವನು ಅಂತರಿಕ್ಷದಲ್ಲಿಯೆ ನಿಲ್ಲುವಂತಾಯಿತು.
—ಸ್ವರ್ಗ ತ್ರಿಶಂಕುವಿನ ರಾಜ್ಯ; ಪೇಚಿಗೆ ಸಿಲುಕುವುದು; ಉಭಯ ಸಂಕಟ.
ತ್ರಿಶಿರ ಒಬ್ಬ ರಕ್ಕಸ.
ತ್ರಿಶೂಲ ಶಿವನ ಕೈಯ ಮೂರು ಮೊನೆಯುಳ್ಳ ಒಂದು ಆಯುಧ.
ತ್ರಿಶೂಲಿ ತಿಸುಳಿ (ದ್ಭ), ಶಿವ.
ತ್ರುಟಿ ಸ್ವಲ್ಪ; ಸಂಶಯ; ಎರಡು ನಿಮಿಷ ಕಾಲ; ಕೇಡು; ಶುಕನಾಸ.
ತ್ರೇತಾ (ತ್ರೇತೆ), ನಾಲ್ಕು ಯುಗಗಳಲ್ಲಿ ಎರಡನೆಯದು; ಮೂರು, ತ್ರಯ.
ತ್ರೈ ರಕ್ಷಿಸು; ಮೂರಕ್ಕೆ ಸಂಬಂಧಿಸಿದ.
ತ್ರೈಕಾಲಿಕ ಮೂರು ಕಾಲಕ್ಕೂ ಸಮವಾದುದು.
ತ್ರೈಗುಣ ಸತ್ವರಜತಮೋಗುಣಗಳ ಸೇರಿಕೆ.
ತ್ರೈಭುವನ ಮೂಜಗ.
ತ್ರೈಮೂರ್ತಿ ಬ್ರಹ್ಮ, ವಿಷ್ಣು, ಶಿವರು.
ತ್ರ್ಯಂಬಕ (ತ್ರಿಯಂಬಕ) ಮುಕ್ಕಣ್ಣ, ಶಿವ.
ತ್ವಕ್ (ತ್ವಕ್ಕು) ಚರ್ಮ, ತೊಗಲು.
ತ್ವಚ್ ಮುಚ್ಚು; ಸುತ್ತು.
ತ್ವಚೆ ಚರ್ಮ, ತೊಗಲು.
ತ್ವರೆ ತ್ವರ, ಅವಸರ; ವೇಗ.
—ಪಡು ಆತುರಪಡು.
ತ್ವರಿತ ಶೀಘ್ರವಾಗಿ, ವೇಗವಾಗಿ, ತೀವ್ರವಾಗಿ, ಅವಸರವಾಗಿ.
ತ್ವಿಷ್ ಪ್ರಕಾಶ; ಪ್ರಕಾಶಿಸು.

## ಥ

ಥಟ್ಟು ತಟ್ಟು, ರಾಶಿ; ಪಡೆ, ಸೈನ್ಯ; ದೊಡ್ಡ ಸಂಖ್ಯೆ.
—ಕೆಡಹು ರಾಶಿಯಾಗಿ ಬೀಳಿಸು.
—ಆಯ್ತು ಗುಂಪು ಕೂಡಿಸು.
ಥಟ್ಟೂರಿ ರಾಶಿಯಾಗಿ ಊರಿ.
ಥಳಿಸು ಹೊಳೆ, ಪ್ರಕಾಶಿಸು, ಕಾಂತಿದೋರು.

# ದ

ದಕ್ಕಡ ದೃಢ; ಸಮರ್ಥ; ಧೈರ್ಯಶಾಲಿ, ಎದೆಗಾರ.

—ತನ ಧೈರ್ಯಶಾಲಿತ್ವ, ಧೀರತೆ.

ದಕ್ಕಡಿ ತುಳಿತ.

ದಕ್ಕಳ (ದಕ್ಕಡ), ಧೀರತೆ.

ದಕ್ಕಿಣ (ದ್ಭ) ದಕ್ಷಿಣ (ಸಂ), ತೆಂಕು.

ದಕ್ಕು ತಿಂದು ಜೀರ್ಣಕ್ಕೆಬರು, ಪಚನವಾಗು; ಕೈಸೇರು, ಕರಗತವಾಗು, ವಶವಾಗು; ಕೀಲು, ಶಂಕು; ಬೆಣೆ.

—ಇಸು ಸ್ವಾಧೀನಪಡೆ; ಅರಗಿಸು.

ದಕ್ಕೆ (ದ್ಭ) ಢಕ್ಕೆ (ಸಂ), ಡಮರು; ಹಡಗು ಬಂದು ತಗಲುವ ನೆಲದ ಭಾಗ; ಪೆಟ್ಟು.

ದಕ್ಷಣ ದಕ್ಷಿಣ, ಡೆಕ್ಕನ ಪ್ರದೇಶ.

ದಕ್ಷ ಸಮರ್ಥ, ನಿಪುಣ, ಕಾರ್ಯಕುಶಲಿ; ಕೋಳಿ; ಬ್ರಹ್ಮನ ಮಕ್ಕಳಲ್ಲಿ ಒಬ್ಬನಾದ ಪ್ರಜಾಪತಿ. ಇವನ ಮಕ್ಕಳಲ್ಲಿ ಒಬ್ಬಳಾದ ಉಮೆಯನ್ನು ಶಿವನು ಮದುವೆಯಾದನು. ಈ ಹೆಸರಿನ ಇಬ್ಬರು ಪ್ರಜಾಪತಿಗಳೆನಿಸು ವವರು ಇದ್ದಾರೆ.

—ತೆ ನೈಪುಣ್ಯ, ಕೌಶಲ್ಯ, ಕಾರ್ಯ ಪಟುತ್ವ.

ದಕ್ಷಕನ್ಯೆ ದಕ್ಷನ ಮಗಳು, ಉಮೆ.

ದಕ್ಷಬ್ರಹ್ಮ ದಕ್ಷ.

ದಕ್ಷಾರಿ ದಕ್ಷನ ಹಗೆ, ವೀರಭದ್ರ.

ದಕ್ಷಿಣ ಬಲಗಡೆ, ತೆಂಕು; ತನ್ನ ಸ್ತ್ರೀಯನ್ನು ಅತಿಯಾಗಿ ಪ್ರೀತಿಸಿದ ಒಬ್ಬ ನಾಯಕ; ವಿಂಧ್ಯದ ಕೆಳಗಣ ದೇಶ; ಶರೀರದ ಬಲ ಭಾಗ; ನಿಷ್ಕಪಟ; ಉದಾರಿ.

—ಸ್ಥ ದಕ್ಷಿಣ ದೇಶದವ, ದಕ್ಷಣಿ.

ದಕ್ಷಿಣಧ್ರುವ ಎಂಟಾರ್ಕಟಿಕ್ ಧ್ರುವ ವಲಯ, ದಕ್ಷಿಣಧ್ರುವದ ಕೇಂದ್ರ.

'ದಕ್ಷಿಣಪಥ ದಕ್ಷಿಣದ ದಾರಿ; ದಕ್ಷಿಣ ಹಿಂದು ಸ್ಥಾನ.

ದಕ್ಷಿಣಮಾರ್ಗ ಪಿತೃಗಳು ಹೋಗುವ ದಾರಿ; ಕಾವ್ಯಗಳಲ್ಲಿನ ಒಂದು ಮಾರ್ಗಭೇದ.

ದಕ್ಷಿಣಾಮೂರ್ತಿ ಶಿವನ ಒಂದು ಸ್ವರೂಪ.

ದಕ್ಷಿಣಾಯನ ಸೂರ್ಯನು ಕರ್ಕಾಟಕ ರಾಶಿಯಿಂದ ಮಕರ ರಾಶಿಯ ತನಕ ಚಲಿ ಸುವ ಕಾಲ.

ದಕ್ಷಿಣಾಯಾತ್ರೆ ಭಿಕ್ಷಾಟನೆ; ದಕ್ಷಿಣೆಗಾಗಿ ಅಲೆಯುವುದು.

ದಕ್ಷಿಣಾವರ್ತ (ಆವರ್ತ=ಸುಳಿ) ಬಲಗಡೆ ತಿರುಗಿದ ಸುಳಿಯುಳ್ಳ ಬಲಮುರಿ ಶಂಖ ಮೊದಲಾದುವು.

ದಕ್ಷಿಣೆ ಬ್ರಾಹ್ಮಣರಿಗೆ ಕೊಡುವ ಉಚಿತ, ಇನಾಮು; ದಕ್ಷಿಣೆ.

ದಖ್ಖಾದಖ್ಖ (ನೋಡು: ದೆಕ್ಕಾದೆಕ್ಕ).

ದಗ ಮೋಸ, ವಂಚನೆ.

ದಗಡಿ ಸ್ವೈರಿಣಿ, ಮನಸ್ಸಿಗೆ ಬಂದಂತೆ ನಡೆ ವವಳು.

ದಗದ ಕೆಲಸ.

ದಗದಗಿಸು ಬೆಂಕಿ ಹೊತ್ತಿ ಉರಿ.

ದಗಲ್ ಮೋಸ, ಠಕ್ಕು; ಮೋಸಗಾರ, ಠಕ್ಕುಳಿ.

—ಬಾಜಿ ವಂಚಕತನ, ಠಕ್ಕು.

ದಗಲೆ ಸನ್ನಾಹ; ಕವಚ; ಲೋಹಕವಚ, ಡಗಲಿ; ಸಡಿಲು.

ದಗಾ (ದಗೆ), ಆಯಾಸ; ಸಂತಾಪ; ಬೇಗೆ, ಉಷ್ಣ, ಕಾವು; ಉಬ್ಬಸ; ಕೊಲೆ; ಮೋಸ.

—ಖೋರ ವಂಚಕ, ಮೋಸಗಾರ.

ದಗೆ (ದಗಾ), ಡಗೆ, ಬೇಗೆ, ಸೆಕೆ; ಮೋಸ.

ದಗ್ಗನೆ ಫಕ್ಕನೆ; ದಗ್ ಎಂದು ಸದ್ದುಮಾಡಿ.

ದಗ್ಗದುಳಿ (ದಗ್ಗುದುಳಿ), ಮೇಲಿಂದ ಮೇಲೆ ಬಂದು ಹೋಗು.

ದಗ್ಧ ಸುಡಲ್ಪಟ್ಟ, ಸುಟ್ಟ.

ದಘ್ನ ವರೆಗೆ.

ದಚ್ಛಿ ಹುಣಿಸೆ ಬೀಜದ ಬೇಳೆ.

ದಟ್ಟ ಘನ; ನಿಬಿಡ, ಸಾಂದ್ರ, ಒತ್ತೊತ್ತಾಗಿರುವ, ಮಂದ, ದಪ್ಪ, ಗುತ್ತಾಗಿರುವ.

—ಇಸು ದಟ್ಟವಾಗು; ಒಟ್ಟಾಗಿ ಸೇರು; ಒತ್ತಿ ಮಾತಾಡು, ಬಯ್ಯು; ತೊಡಕು ತಂದು ಹಾಕು; ಅಳಿಸು.

—ಗೆ ದೊಡ್ಡ ಸಂಖ್ಯೆಯಲ್ಲಿ; ಒತ್ತೊತ್ತಾಗಿ.

—ಣೆ ದಟ್ಟಣೆ, ಸಾಂದ್ರತೆ, ಒತ್ತೊತ್ತಾಗಿರುವಿಕೆ.

—ನೆ (ದಟ್ಟಣೆ) ಗುಂಪಾಗಿರುವುದು, ಗುತ್ತಾಗಿರುವುದು.

ದಟ್ಟಡಿ ಒತ್ತೊತ್ತಾಗಿ ಇಡುವ ಹಜ್ಜೆ; ತಪ್ಪು ಹಜ್ಜೆ; ದಟ್ಟ ಹಜ್ಜೆ.

ದಟ್ಟಿ ಸೊಂಟದ ಪಟ್ಟಿ, ನಡುಪಟ್ಟಿ; ಕಿರಿಗೆ.

ದಟ್ಟಿತ್ತು (ದಟ್ಟತು), ಸಾಂದ್ರತೆ, ದಟ್ಟಣೆ.

ದಟ್ಟು ರಾಶಿ, ಗುಂಪು; ದಳ; ಎಡವು, ಮುಗ್ಗರಿಸು, ಮುಗ್ಗು.

ದಡ (ದ್ಭ) ತಟ (ಸಂ), ಕೂಲ, ತೀರ, ದಂಡೆ.

ದಡಗ (ದಡಿಗ) ದಾಂಡಿಗ, ಕೋಲು ಹಿಡಿದವ; ಅಡಮುಟ್ಟ, ಹುಂಬ.

ದಡಂಬಡಿಕೆ ಬಡಿತ, ಘಾತ; ಭರ.

ದಡಾಣಿ ದಪ್ಪನಾದ ಹೆಂಗಸು.

ದಡಾರ ದಾಂಡಿಗ; ಒಂದು ಬಗೆ ಸಿಡುಬು.

ದಡಿ ದಂಡ, ಕೋಲು; ದೇಟು, ನಾಳ, ತಾಳು; -ಮೂಲ, ಬುಡ; ಬಟ್ಟೆಯ ಅಂಚು; ದಡಿಕೆ; ಬಡಿಗೆ; ತಡಿ.

—ಗ ದಂಡ ಹಿಡಿದವ; ದುಷ್ಟ; ಸಮರ್ಥ.

ದಡಿವಲೆ ಕೋಲಿಗೆ ಕಟ್ಟಿದ ಒಂದು ಬಲೆ.

ದಡುಂ ದಡ್ಡೆಂದು ಸದ್ದು

ದಡೂತಿ ದಪ್ಪವಾಗಿರುವಿಕೆ; ಬಟ್ಟೆಯ ಭಾರ ಮತ್ತು ಬಾಳಿಕೆ; ಉರುಟಾಗಿರುವಿಕೆ; ಕಗ್ಗ.

ದಡೆ ಕಾಲುಮಣ ತೂಕ; ಮರ ಸಿಗಿಯುವಾಗ ಬೇಕಾಗುವ ಏರಿನ ಆಟ್ಟ.

ದಡೆಯ ದಡಿಗ, ದಾಂಡಿಗ, ಟೊಣಪ.

ದಡ್ಡ ಹೆಡ್ಡ, ಮೂಢ; ಮೊಂಡ.

—ತನ ಮೂಢತನ.

ದಡ್ಡಕ್ಕರ ಒತ್ತಕ್ಷರ.

ದಡ್ಡಿ ತಟ್ಟು, ತಡಿಕೆ; ಪರದೆ, ಜವನಿಕೆ, ತೆರೆ; ಪಂಜರ; ದೊಡ್ಡಿ; ಕುರಿದಡ್ಡಿ.

ದಡ್ಡು ಜಡ್ಡು; ಚರ್ಮ ದಪ್ಪವಾಗಿ ಕಾಯಿಗಟ್ಟುವುದು, ಬಾಸಳು.

ದಡ್ರುಂಚೆ ಹಾದರಗಿತ್ತಿ; ವ್ಯಭಿಚಾರಿಣಿ.

ದಣಿ ಆಯಾಸಪಡು; ಧನಿ, ಯಜಮಾನ.

—ತ ಆಯಾಸ, ಬೇಸರ.

—ವು ಆಯಾಸ; ತೃಪ್ತಿ.

—ಸು ತೊಂದರೆಕೊಡು; ಶ್ರಮಪಡಿಸು.

ದಣಿಬ ವಸ್ತ್ರ, ಬಟ್ಟೆ.

ದಣು ದಣಿವು, ಆಯಾಸ.

ದಣ್ಣಾಯಕ (ನೋಡು: ದಂಡನಾಯಕ).

ದತ್ತ ಕೊಟ್ಟ; ಉಚಿತ, ದಾನ; ತಾಯಿತಂದೆಗಳಿಂದ ಕೊಡಲ್ಪಟ್ಟ ಮಗ; ವೈಶ್ಯರ ಒಂದು ಉಪಾಧಿ, ಬಿರುದು; ದತ್ತಾತ್ರೇಯ ಮುನಿ.

—ಕ ದತ್ತು ಕೊಳ್ಳಲ್ಪಟ್ಟ ಮಗ.

ದತ್ತಿ (ದತ್ತು), ದಾನ.

ದತ್ತೂರ (ದ್ಭ) ಧಾತುರ (ಸಂ), ಉಮ್ಮತ್ತದ ಗಿಡ.

ದದ್ದಾಲ ದಡ್ಡಾಲನ ಗಿಡ, ಅದರ ಕಾಯಿ.

ದದ್ರು ದದ್ರು, ಹುಳುಕಜ್ಜಿ, ತದ್ದು.

ದಧಿ ಮೊಸರು.

ದಧಿಫಲ ಬೇಲದ ಹಣ್ಣು, ಬೆಳವಲು.

ದಧಿಮುಖ ಒಂದು ಕಪಿ; ಒಂದು ಸರ್ಪ.

ದಧಿಸಾರ ಮೊಸರಿಂದಾದುದ್ದು, ಬೆಣ್ಣೆ.

ದಧೀಚಿ ಅಥರ್ವ ಮುನಿಯ ಔರಸ ಪುತ್ರ. ವೃತ್ರಾಸುರನ ವಧೆಗಾಗಿ, ದೇವತೆಗಳಿಗೆ, ತನ್ನ ಎಲುಬುಗಳನ್ನು ವಜ್ರಾಯುಧ ಮಾಡಲು ಇವನು ದಾನ ಕೊಟ್ಟನು.

ದನ (ದ್ಭ) ಧನ (ಸಂ), ಹಸು, ಆಕಳು; ಗಂಟಿ.

ದನಿ (ದ್ಭ) ಧ್ವನಿ (ಸಂ), ಸ್ವರ, ಸ್ವನ, ಸದ್ದು.

—ಕೂಡಿಸು ಶ್ರುತಿ ಸೇರಿಸು; ಸಮ್ಮತಿ ಕೊಡು, ಸೈಗುಟ್ಟು.

—ಕೊಡು ಸದ್ದುಮಾಡು; ಶ್ರುತಿಗೂಡಿಸು

—ಕೊಳ್ ಶಬ್ದಗೊಳ್ಳು.

ದನು ಕಾಶ್ಯಪ ಋಷಿಯ ಹೆಂಡತಿ; ದಕ್ಷನ ಮಗಳು. ಈಕೆಯು ದಾನವ, ದೈತ್ಯ, ದಶಶತ ಎಂಬ ರಾಕ್ಷಸರ ತಾಯಿ.

—ಜ ದನುವಿನಲ್ಲಿ ಹುಟ್ಟಿದವ, ಅಸುರ, ದೈತ್ಯ.

ದನುಜಹರ ದೈತ್ಯರನ್ನು ನಾಶಮಾಡಿದ ಕೃಷ್ಣ, ವಿಷ್ಣು.

ದನುಜಾರಿ ದೈತ್ಯಾರಿ, ರಾಕ್ಷಸರ ಹಗೆ, ಕೃಷ್ಣ.

ದಪ್ಪ (ದ್ಭ) ದರ್ಪ (ಸಂ), ಗರ್ವ, ಹೆಮ್ಮೆ, ಅದಟು; ಮಂದ, ದಟ್ಟ; ತೋರ, ಸ್ಥೂಲ.

—ಕ ಕಾಮ, ಮನ್ಮಥ.

—ನೆ ದಟ್ಟನೆ.

—ನ್ನ ದಟ್ಟವಾದ, ತೋರವಾದ; ಗಡುತರ ವಾದ.

ದಫನ ಶವಸಂಸ್ಕಾರ.

ದಫಾ (ದಫೆ) ಸಾರಿ, ಬಾರಿ, ಸರದಿ, ಸಲ.

ದಫೇದಾರ ಒಬ್ಬ ಸರಕಾರಿ ಸೇವಕ; ಪೋಲೀಸು ನಾಯಕ.

ದಫ್ತರ ಪುಸ್ತಕ, ಕಾಗದಗಳ ಕಟ್ಟು; ದಾಖಲೆಗಳ ಕಟ್ಟು.

ದಬರಿ(ಡಬರಿ)ಅಗಲಬಾಯ ಲೋಹದಪಾತ್ರೆ.

ದಬದಬೆ ತಡಸಲು, ಅಬ್ಬಿ, ಜಲಪಾತ.

ದಬಾಣ ಡೋಲು, ದೋಲು.

ದಬಾದುಬ ಮೋಸದ ವ್ಯಾಪಾರ; ಹೊಂಚು.

ದಬಾಯಿಸು ತಡೆ; ಬಲಾತ್ಕರಿಸು; ಬಲವಂತದಿಂದ ಬಾಗಿಲು ಹಾಕು; ಹತ್ತಿಕ್ಕು.

ದಬ್ಬಣ (ದಬ್ಬಳ), ದೊಡ್ಡ ಸೂಜಿ.

ದಬ್ಬು ನೂಕು.

ದಬ್ಬುಳಿ (ದಾವಳಿ, ದಾಬಳಿ), ತೆಳ್ಳಗಿನ ಉಣ್ಣೆ ವಸ್ತ್ರ.

ದಬ್ಬೆ (ಡಬ್ಬೆ), ಬಿದಿರ ಸಲಿಕೆ, ಸಲಿಕೆ; ಪೆಟ್ಟು; ಡಬ್ಬಿ; ತಗಡು, ಲೋಹದ ಹಾಳೆ.

ದಮ ಮನೋನಿಗ್ರಹ; ಮನಸ್ಸು ಸ್ಥಿರಪಡಿಸುವುದು; ದಮಯಂತಿಯ ಸೋದರ; ಒಬ್ಬ ಋಷಿ.

ದಮಡಿ (ದಮ್ಮಡಿ) ದುಗ್ಗಾಣಿ, ಎರಡು ಕಾಸು; ಪೈ; ವಾದ್ಯವಿಶೇಷ.

ದಮನ ಒಬ್ಬ ಋಷಿ. ಇವನ ಅನುಗ್ರಹದಿಂದ ವಿದರ್ಭದ ಭೀಷ್ಮಕನಿಗೆ ಮಕ್ಕಳಾದರು; ಕೌರವ ಪಕ್ಷದ ಒಬ್ಬ ಅರಸು, ಪೌರವನ ಮಗ; ನಿಗ್ರಹ; ಪಳಗಿಸುವಿಕೆ.

ದಮನಕ ಪಂಚತಂತ್ರದ ಕಥೆಯ ಒಂದು ನರಿ.

ದಮಯಂತಿ ವಿದರ್ಭದ ಭೀಷ್ಮಕನ ಮಗಳು; ನಳನ ಹೆಂಡತಿ. ನಳನು ದ್ಯೂತದಲ್ಲಿ ಸೋತು ಕಾಡುಪಾಲಾದಾಗ ಇವಳನ್ನು ತ್ಯಜಿಸಿದನು. ಅನಂತರ ಇವಳು ತಂದೆಯನ್ನು ಸೇರಿ ಪತಿಯನ್ನು ಸ್ವಯಂವರ ನೆಪದಿಂದ ತಿರುಗಿ ಕರೆಯಿಸಿಕೊಂಡಳು.

ದಮಿತ ನಿಗ್ರಹಿಸಲ್ಪಟ್ಟ.

ದಮೆ ನಿಗ್ರಹ ಗುಣ.

ದಮ್ಮ (ದ್ಭ) ಧರ್ಮ (ಸಂ), ನ್ಯಾಯ, ನೀತಿ; ಕರ್ತವ್ಯ.

ದಮ್ಮಯ್ಯ 'ಧರ್ಮವಯ್ಯ' ಎಂದು ಕಾಲು ಕಟ್ಟುವ ಮಾತು; ಶರಣುಹೋಗುವುದು.

ದಮ್ಮು ಉಸಿರು; ನಿಟ್ಟುಸಿರು; ಉಬ್ಬಸ; ದಣಿವು.

ದಮ್ಯಪ್ರಾಯಕ್ಕೆಬಂದವರು;ಪಳಗಿದ ಪ್ರಾಣಿ.
ದಯ್ ದಯೆದೋರು; ರಕ್ಷಿಸು; ಪ್ರೀತಿಸು; ಕೊಡು.
ದಯ(ದಯೆ),ದುಃಖವನ್ನು ದೂರಮಾಡುವ ಮನಸ್ಸು, ಕರುಣೆ, ಕನಿಕರ.
—ಆಕರ ದಯೆಗೆ ಗನಿಯಂತಿರುವವ.
—ವಂತ ದಯೆಯುಳ್ಳವ, ಕರುಣಿ.
ದಯಾಳು (ದಯಾಲು), ದಯೆಯುಳ್ಳವ, ಕರುಣಿ.
ದಯಿತೆ ಪ್ರಿಯಳು; ಹೆಂಡತಿ.
ದಯೆ (ದಯಾ, ದಯ).
ದರ ಧಾರಣೆ; ಸ್ವಲ್ಪ; ಬೆಲೆ, ಕಿಮ್ಮತ್ತು; ಗವಿ; ಬಿಲ; ತೂರೆ; ಶಂಖ.
ದರಕು ದೊರಗು.
ದರಖಾಸ್ತು ಅರ್ಜಿ; ಬಾಡಿಗೆ ಇಲ್ಲವೆ ಕಂದಾಯಕ್ಕೆ ಭೂಮಿಯ ಬೇಡಿಕೆ.
ದರಗ ಮುಸಲ್ಮಾನರ ಪ್ರಾರ್ಥನಾಸ್ಥಳ.
ದರಗು (ತರಗು), ತರಗೆಲೆ.
ದರದ ಬಾಹ್ಲಿಕ ದೇಶ, ಕಾಶ್ಮೀರಕ್ಕೆ ಉತ್ತರದ ದರದಿಸ್ಥಾನ ದೇಶ.
ದರದು ಗರಜು, ಅಗತ್ಯ; ಅವಸರ; ನೋವು; ಬೇನೆ; ಗೌರವ.
ದರಬಾರು ದಿವಾನಖಾನೆ; ಜಲಸ; ಆಸ್ಥಾನ; ಸರಕಾರ; ಡೌಲು.
ದರಮೀಲಿತ (ಮೀಲಿತ=ಮುಚ್ಚಿದ) ಅರೆ ಮುಚ್ಚಿದ.
ದರಹಸಿತ ಮುಗುಳುನಗೆಯ, ನಸುನಗೆಯ.
ದರಹಾಸ ಮುಗುಳ್ನಗೆ, ಮಂದಹಾಸ.
ದರಿ ಕಂಡಿ; ಬಿಲ; ಗವಿ, ಗುಹೆ; ಕಂದರ, ತಗ್ಗುಪ್ರದೇಶ; ಬೆಟ್ಟದ ಜರಿ, ಕಣಿವೆ, ಕೊರಕಲು; ಕಡಲು.
ದರಿದ್ರ ಬಡವ; ದುಃಖಿ; ಹಣವಿಲ್ಲದವ.
—ತೆ ಬಡತನ, ಕಂಗಾಲತನ, ದೀನತೆ.
ದರಿಯಾ (ದರಿ), ಕಡಲು, ಸಮುದ್ರ.
ದರಿಯಾಪ್ತಿ ತನಖಿ, ವಿಚಾರಣೆ.
ದರಿವು ಗುಹೆ, ಗವಿ, ಕಮರಿಗೆ.
ದರುಸನ (ದ್ಭ) ದರ್ಶನ (ಸಂ), ಭೇಟಿ, ತೋರಿಸಿಕೊಳ್ಳುವಿಕೆ.
ದರೆ (ದ್ಭ) ಧರಾ (ಸಂ), ಭೂಮಿ, ಮೇದಿನಿ; ಎತ್ತರದ ಮಣ್ಣಿನ ಗೋಡೆ; ಪ್ರಾಕಾರ.
ದರೋಗ ಸರಕಾರದ ಒಬ್ಬ ನೌಕರ.
ದರ್ಜಿ ಚಿಪ್ಪಿಗ, ಹೊಲಿಗೆಯವ.
ದರ್ಜೆ ತರಗತಿ, ಈಯತ್ತೆ; ಮಾದರಿ; ಮಟ್ಟ.
ದರ್ದುರ ಕೂಗಿಂದ ಕಿವಿ ಒಡೆಯುವುದು, ಕಪ್ಪೆ; ಪಶ್ಚಿಮ ಘಟ್ಟದ ದಕ್ಷಿಣ ತುದಿ.
ದರ್ಪ ವೇಗ; ಅಬ್ಬರ; ಹೆಮ್ಮೆ.
—ಇಸು ಅಬ್ಬರಿಸು, ಹೆಮ್ಮೆದೋರು.
—ಕ ಹೆಮ್ಮೆಯುಳ್ಳವ, ಕಾಮ, ಮನ್ಮಥ; ಹೆಮ್ಮೆ ಹುಟ್ಟಿಸುವವ.
ದರ್ಪಣ ಕನ್ನಡಿ (ಇದನ್ನು ನೋಡಿ ಹೆಮ್ಮೆ ಪಡುವರು).
ದರ್ಪಣಭೂಷಣ ಕಾಮನ ಸಭಾಸ್ಥಾನ.
ದರ್ಬಾರ (ದರಬಾರ), ಆಸ್ಥಾನ; ವೈಭವದ ಸಭೆ; ಡೌಲು, ಹೆಮ್ಮೆ; ದುಂದುವೆಚ್ಚ.
ದರ್ಭಶಯನ ದರ್ಭೆಹುಲ್ಲಿನ ಹಾಸಿಗೆ; ರಾಮೇಶ್ವರದ ಬಳಿಯ ಒಂದು ಸ್ಥಳ.
ದರ್ಭೆ ಪವಿತ್ರವೆಂದು ಎಣಿಸುವ ಒಂದು ಜಾತಿ ಹುಲ್ಲು, ಕುಶ, ಮೆದೆಹುಲ್ಲು.
ದರ್ವಿ ಸಟ್ಟುಗ, ಸೌಟು; ಹಾವಿನ ಹೆಡೆ.
ದರ್ವೀಕರ ಸರ್ಪ.
ದರ್ಶ ನೋಟ, ತೋರಿಕೆ; ಅಮಾವಾಸ್ಯೆ; ಅಮಾವಾಸ್ಯೆಯ ಚಂದ್ರ.
—ಕ ನೋಡುವಿಕೆ, ನೋಟ; ಪ್ರೇಕ್ಷಕ; ಪ್ರದರ್ಶನ; ದ್ವಾರಪಾಲ; ಬಲ್ಲಿದ, ಪಂಡಿತ.
—ನ ನೋಟ; ಪರೀಕ್ಷೆ; ಪ್ರದರ್ಶನ; ಭೇಟಿ; ಷಡ್ದರ್ಶನಗಳೆಂಬ ತತ್ವಶಾಸ್ತ್ರ.

ದರ್ಶನೀಯ ನೋಡತಕ್ಕ, ಪ್ರೇಕ್ಷಣೀಯ; ನೋಡಬಹುದಾದ.
ದರ್ಶಿ ನೋಟ, ನೋಡುವವ.
ದರ್ಶಿತ ತೋರಿದ; ನೋಡಿದ; ತಿಳಿದ.
ದಲ್ ಸೀಳು, ಒಡೆ; ಸಹಜ, ನಿಶ್ಚಯ.
ದಲ ಒಡೆಯಲ್ಪಟ್ಟುದು; ಎಲೆ; ಎಸಳು; ರಾಶಿ; ಸೈನ್ಯ, ಪಡೆ; ಮಿಶ್ರಲೋಹ.
—ತ್ ಒಡೆದ, ಬಿರಿದ; ಸೀಳಿದ.
—ನ ಒಡೆಯುವಿಕೆ, ಬಿರಿಯುವಿಕೆ.
ದಲಾಲ ವಟ್ಟಕೊಂಡು ವ್ಯಾಪಾರ ನಡೆಯಿಸುವವ; ಪರರಮಾಲಿಗೆಗಿರಾಕಿಒದಗಿಸುವವ.
ದಲಾಲಿ (ದಲ್ಲಾಳಿ).
ದಲಿತ ಒಡೆದ, ಅರಳಿದ; ಪತಿತ.
ದಲ್ಲಾಳಿ ದಲಾಲನ ಕೆಲಸ; ಗಿರಾಕಿ ಸಂಪಾದಿಸುವಿಕೆ; ದಲಾಲನಿಗೆ ಕೊಡುವ ಹಣ, ದಲಾಲಿ, ವಟ್ಟ.
ದವ ಕಾಪು; ಕಾಡ್ಗಿಚ್ಚು; ಬೇಗೆ.
ದವಡ ಕೆಟ್ಟ ಮನಸ್ಸು, ಮೋಸಗಾರ.
ದವಡೆ ಬಾಯ ಕೆಳಗು ಮೇಲುಗಳು, ಅವುಡು, ಒಸಡು.
ದವತಿ (ದೌತಿ) ಶಾಯಿ ಕುಡಿಕೆ, ಮಸಿಕುಡಿಕೆ.
ದ್ವನ ಸುವಾಸನೆ ಒಂದು ಗಿಡ; ಹಬ್ಬದ ಹೂ.
ದವಸ ಧಾನ್ಯ, ಕಾಳುಕಡಿ.
ದವಳ (ದ್ಭ) ಧವಳ (ಸಂ), ಸ್ವಚ್ಛ, ಬಿಳುಪು; ಸುಂದರ; ಜೈನರ ಒಂದು ಧರ್ಮಗ್ರಂಥ.
ದವಾ ಮದ್ದು, ಔಷಧ.
—ಖಾನೆ ಔಷಧಶಾಲೆ, ಆಸ್ಪತ್ರಿ.
ದವಾಗ್ನಿ ಕಾಡ್ಗಿಚ್ಚು; ಬೇಗೆ.
ದವಿಷ್ಠ ಬಹುಮಾನ.
ದವುಡು (ದೌಡು), ಅವಸರ; ದಂಡಿನ ಓಟ.
ದವುತಿ.(ದೌತಿ), ದವತಿ, ಮಸಿಕುಡಿಕೆ.
ದಶ್ ಕಚ್ಚು, ಕಡಿ; ಪ್ರಕಾಶಿಸು.
ದಶ ಹತ್ತು
—ಕ ಹತ್ತುಳ್ಳದು; ಹತ್ತು.
—ಧಾ ಹತ್ತು ವಿಭಾಗವಾಗಿ; ಹತ್ತು ರೀತಿ.
—ಮ ಹತ್ತನೆಯ.
ದಶಕರ್ಮ ಹತ್ತುವಿಧವಾದ ಸಂಸ್ಕಾರಗಳು— ಗರ್ಭಾದಾನ, ಪುಂಸವನ, ಸೀಮಂತೋಧಾನ್ನಯನ, ಜಾತಕರ್ಮ, ನಾಮಕರಣ, ಗೃಹನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ವಿವಾಹ ಇವು.
ದಶಕಂಠ ಹತ್ತು ಕತ್ತಿನವ, ರಾವಣ.
ದಶಗುಣ ಹತ್ತುಮಡಿ, ಹತ್ತುಪಟ್ಟು.
ದಶದಾನ ಗೋ, ಭೂಮಿ, ತಿಲ, ಸುವರ್ಣ, ತುಪ್ಪ, ವಸ್ತ್ರ, ತಾಂಬೂಲ, ಧಾನ್ಯ, ಬೆಲ್ಲ, ಕನ್ಯಾ ಇವು ಹತ್ತರ ದಾನಗಳು.
ದಶದಿಕ್ಕು ಹತ್ತು ದಿಕ್ಕು; ಎಂಟು ಮೂಲೆಗಳು ಮತ್ತು ಮೇಲು ಕೆಳಗು ಸೇರಿ.
ದಶಧ್ರುವ ಕುದುರೆಯಲ್ಲಿರಬೇಕಾದ ಹತ್ತು ಅವಶ್ಯ ಲಕ್ಷಣಗಳು.
ದಶನ ಹಲ್ಲು; ಕಡಿತ.
ದಶಬಲ ಬುದ್ಧ; ದಾನ, ಶೀಲ, ಕ್ಷಮೆ, ವೀರ್ಯ, ಧ್ಯಾನ, ಪ್ರಜ್ಞೆ, ಬಲ, ಉಪಾಯ, ಪ್ರಣಿಧಿ, ಜ್ಞಾನಗಳೆಂಬ ಹತ್ತು ಬಲಗಳು.
ದಶಭುಜೆ ಹತ್ತು ತೋಳುಳ್ಳವಳು, ದುರ್ಗೆ.
ದಶಮಾಂಶ ಪೂರ್ಣ ಸಂಖ್ಯೆಯ ಹತ್ತು ಅಂಶಗಳು.
ದಶಮಿ ಪಕ್ಷದ ಹತ್ತನೆಯ ದಿನ; ಮರಣ.
ದಶರಥ ಹತ್ತು ದಿಕ್ಕುಗಳಲ್ಲಿಯೂ ಚಲಿಸುವ ರಥವುಳ್ಳವ. ಇವನು ಅಯೋಧ್ಯೆಯ ದೊರೆ. ಇವನ ಮೂವರು ಮಡದಿಯರಲ್ಲಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳು ಹುಟ್ಟಿದರು.
ದಶಶತ ಸಾವಿರ; ನೂರಹತ್ತು.
ದಶಶತಪತ್ರ ಸಾವಿರ ಎಲೆಯಿರುವ; ಒಂದು ತಾವರೆ ಜಾತಿ.

ದಶಾಕರ್ಷ (ದಶಾ=ಬತ್ತಿ) ಬತ್ತಿಯಿಂದ ಎಣ್ಣೆ ಸೆಳೆಯುವುದು, ದೀಪ, ದೀವಿಗೆ.
ದಶಾರ್ಣ ದಕ್ಷಿಣ ಕೋಸಲದ ಒಂದು ದೇಶ; ಶಿಖಂಡಿಯ ಮಾವನಾದ ಹಿರಣ್ಯವರ್ಮ.
ದಶಾರ್ಣಾ ಗಾಂಧಾರಿ ದೇವಿಯ ಸೋದರಿ.
ದಶಾರ್ಹ ಯಯಾತಿಯ ಮಗನಾದ ಯದು ರಾಯನ ದೇಶ.
ದಶಾವತಾರ ವಿಷ್ಣುವಿನ ಹತ್ತು ಅವತಾರ ಗಳು—ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕ್ಯ.
ದಶಾಶ್ವ ಇಕ್ಷ್ವಾಕು ದೊರೆಯ ಹತ್ತನೆಯ ಮಗ, ಮಾಹಿಷ್ಮತಿಯ ರಾಜ; ಹತ್ತು ಕುದುರೆ ಕಟ್ಟಿದ ರಥವುಳ್ಳವ; ಚಂದ್ರ.
ದಶಾಂಗ ಒಂದು ವಿಧದ ಧೂಪ.
ದಶೆ (ದಶಾ), ದೆಸೆ, ಅವಸ್ಥೆ; ದೀಪದ ಬತ್ತಿ; ವಸ್ತ್ರದ ಅಂಚು; ಹೊಸ ವಸ್ತ್ರ; ಕರ್ಮ ಪರಿ ಪಾಕ; ಹೆದೆ; ಬಾಣ.
ದಸಕು ಹೊಟ್ಟು, ಉಮಿ, ಸಿಪ್ಪೆ.
ದಸರ (ದಸರೆ), ನವರಾತ್ರಿ ಮತ್ತು ವಿಜಯ ದಶಮಿ ಉತ್ಸವ; ಹತ್ತು ರಾತ್ರಿಗಳು.
ದಸಸಿರ (ತ್ಭ) ದಶಶಿರ (ಸಂ), ರಾವಣ.
ದಸಿ ತುದಿ ಮೊನೆಯಾಗಿರುವ ಗೂಟ, ಶೂಲ.
ದಸೆ (ದೆಸೆ).
ದಸ್ಕತ್ತು(ದಸಕತ್ತು)ಸಹಿ;ಕೈಗುರುತು,ರುಜು
ದಸ್ತಾವೇಜು (ದಸ್ತೈವಜು), ಕರಾರುಪತ್ರ.
ದಸ್ತೂರಿ (ದಸ್ತೂರು) ಹಾಸಲು; ಸುಂಕ; ತೆರಿಗೆ; ರೀತಿ; ಪದ್ಧತಿ.
ದಸ್ಯು ಶತ್ರು; ಕಳ್ಳ; ಮಹಾದುಷ್ಟ.
ದಸ್ರು ಕತ್ತೆ; ಅಶ್ವಿನೀಕುಮಾರ.
ದಹ್ ಸುಡು.
ದಹನ ಸುಡುವಿಕೆ; ಅಗ್ನಿ, ಕಿಚ್ಚು.
—ಕ್ರಿಯೆ ಶವಸಂಸ್ಕಾರ.
ದಹನೋಪಲ ಉರಿಯುವ ಕಲ್ಲು, ಚಂದ್ರ ಕಾಂತ ಶಿಲೆ.
ದಹಿಸು ಉರಿಸು, ಸುಡು, ಬೆಂಕಿ ಹಚ್ಚು.
ದಳ ಸೈನ್ಯ, ಚತುರಂಗಬಲ; ಎಲೆ; ಎಸಳು; ದಪ್ಪ; ದಟ್ಟ.
—ಏರು ಅಭಿವೃದ್ಧಿಯಾಗು, ಅಧಿಕ ವಾಗು; ಉತ್ಸಾಹಗೊಳ್ಳು.
—ವಾಯಿ ಸೇನಾನಾಯಕ.
—ಸು ದಪ್ಪನಾಗಿರುವಿಕೆ, ದಟ್ಟವಾಗಿರು ವಿಕೆ; ದಟ್ಟಣಿ.
ದಳತ್ ಬಿರಿಯುವ; ಚಿಗುರುತ್ತಿರುವ.
ದಳದಳಾಳಿ ಬಹು ಎಲೆಗಳು, ಹಲವು ಎಲೆಗಳ ಸಾಲು.
ದಳವಾಳ ಬಲಾತ್ಕಾರ, ಹಾವಳಿ, ಸೂರೆ.
ದಳದುಳಿ ಬಲವಾದ ಸೂರೆ, ಬಹು ಲೂಟ.
—ಸು ತವಕಪಡು, ಆತುರಪಡು; ಲೂಟ ಮಾಡು.
ದಳನ ಸೀಳುವಿಕೆ.
ದಳವುಳಕಾರ ಹೆಚ್ಚಾಗಿ ಸೂರೆಮಾಡುವವ.
ದಳಸರ ದಪ್ಪ, ದಟ್ಟ; ಒಳ್ಳೆಯ.
ದಳಿ ಎಲೆ; ತಡಿಕೆ; ಮರದ ಸಲಕೆಗಳಿಂದ ಎಡೆ ಬಿಟ್ಟು ಮಾಡಿದ ಗೋಡೆ; ತಟ್ಟಿಗೋಡೆ;ದನ ಕಟ್ಟುವ ಮರದ ಗೂಟ; ದಳ ಉಳ್ಳುದು.
ದಳಿಕೆ ದಡಿ, ಅಂಚು.
ದಳಿಬ (ದಳಿಂಬ).
ದಳಿಂಬ ಮಡಿ ಬಟ್ಟೆ.
ದಳಿ (ತಳಿ), ಹೊಲಿ; ಜತೆಯಾಗಿ ಹೊಲಿ; ವ್ಯಾಪ್ತವಾಗು; ಮಡಚು ಹೊಲಿಗೆ.
—ಇಕ್ಕು ಕೂಡಿ ಕಟ್ಟು.
—ವಳಿದು ವ್ಯಾಪಿಸಿ, ಚೆನ್ನಾಗಿ ವ್ಯಾಪಿಸಿ.
ದಳ್ಳಿಸು ಗರ್ವದಿಂದ ಮೆರೆ; ವಿಶಾಲಿಸು, ವಿಸ್ತರಿಸು.
ದಳ್ಳುರಿ ಪ್ರಜ್ವಲಿಸುವ ಬೆಂಕಿ.

**ದಳ್ಳಿಳಿ** ಬಂಧನ, ಸಂಕೋಲೆ; ಕೋಳ.

**ದಂಗು** ವಿಸ್ಮಯ; ಗಾಬರಿ, ಬೆರಗು.

—ಬಡಿ ವಿಸ್ಮಿತನಾಗು.

**ದಂಗುಳಿ** ತಿರುಗಿ ಬೀಳುವುದು.

**ದಂಗೆ** ಪ್ರತಿಭಟನೆ; ಜನಸಮುದಾಯವು ಸೇರಿ ಕೋಲಾಹಲ ಮಾಡುವುದು; ಸರಕಾರದ ವಿರೋಧವಾದ ಬಂಡಾಯ.

—ಕಾರ ಕೋಲಾಹಲ ಎಬ್ಬಿಸುವವ; ಕ್ರಾಂತಿಕಾರ, ಬಂಡಾಯಗಾರ.

**ದಂಟಿ** ದಗಡಿ, ಹಾದರಗಿತ್ತಿ.

**ದಂಟು** ದಡಿ, ತಾಳು; ಕೋಲು, ದೊಣ್ಣೆ.

**ದಂಡ** ಕೋಲು, ದೊಣ್ಣೆ, ಬಡಿಗೆ; ಸೇನೆ; ಒಂದು ಅಳತೆ; ಸೂರ್ಯನ ಅನುಚರನೊಬ್ಬ; ದಂಡನೀತಿ, ಶಿಕ್ಷೆಗೆ ಗುರಿಪಡಿಸುವುದು; ವ್ಯರ್ಥ; ಜುಲುಮಾನೆ, ತಪ್ಪುಕಾಣಿಕೆ.

—ಕ ಕೋಲು ಹಿಡಿದವ; ಕಟ್ಟಗೆ ಕೋಲಿನವ, ಒಂದು ಛಂದೋ ಜಾತಿ.

**ದಂಡಕಾ** ಪಂಚವಟ ಭಾಗದ ಒಂದು ಅರಣ್ಯ. ಇಲ್ಲಿ ಹಿಂದಿನ ಕಾಲದಲ್ಲಿ ರಾಕ್ಷಸರ ನಿವಾಸವಿತ್ತೆಂದು ಕಥೆ.

**ದಂಡಕಾವನ** ಪ್ರಾಚೀನಕಾಲದ ದಂಡಕನೆಂಬ ಅರಸನ ಉದ್ಯಾನ. ಇದು ಶುಕ್ರನ ಶಾಪದಿಂದ ಮುಂದೆ ಅರಣ್ಯವಾಯಿತು; ಜನಸ್ಥಾನ.

**ದಂಡಧರ** ದಂಡವನ್ನು ಹಿಡಿದವ; ಯಮರಾಜ; ಕುಂಬಾರ.

**ದಂಡಧಾರ** ಮಾಗಧನ ಒಬ್ಬ ವಂಶದವ, ಏಕರಥ; ಪಾಂಚಾಲನೊಬ್ಬ; ಧೃತರಾಷ್ಟ್ರನ ಮಗನೊಬ್ಬ; ಪಾಂಡವ ಪಕ್ಷದವನಾದ ಒಬ್ಬ ಚೈದ್ಯ.

**ದಂಡನಾಯಕ** ಸೇನಾಪತಿ; ಕೊತವಾಲ.

**ದಂಡನೀತಿ** ಯುದ್ಧ, ಶಿಕ್ಷೆಗಳಿಂದ ಹಾದಿಗೆ ತರುವ ಬಗೆ; ಶುಕ್ರಾಚಾರ್ಯನು ಬರೆದ ರಾಜನೀತಿಯ ಒಂದು ಭಾಗ.

**ದಂಡನೆ** ಶಿಕ್ಷೆ; ಜುರುಮಾನೆ, ತಪ್ಪುಕಾಣಿಕೆ.

**ದಂಡಪ್ರಣಾಮ** ಸಾಷ್ಟಾಂಗ ನಮಸ್ಕಾರ.

**ದಂಡಯಾತ್ರೆ** ಮೆರವಣಿಗೆ; ಸೇನೆಯ ವಿಜಯ ಯಾತ್ರೆ.

**ದಂಡಾಸನ** ಒಂದು ಬಗೆಯ ಬಾಣ.

**ದಂಡಾಹತ** (ಆಹತ=ಹೊಡೆಯಲ್ಪಟ್ಟುದು) ಕೋಲಿಂದ ಹೊಡೆಯಲ್ಪಟ್ಟುದು,ಮಜ್ಜಿಗೆ.

**ದಂಡಿ** ಯಮ; ರಾಜ; ದ್ವಾರಪಾಲ; ಸೂರ್ಯನ ಅನುಚರ; ಜಿನಭೇದ; ಸನ್ಯಾಸ, ಸನ್ಯಾಸಿ; ಕಾವ್ಯಾದರ್ಶವನ್ನು ಬರೆದ ಒಬ್ಬ ಸಂಸ್ಕೃತ ಕವಿ; ದೊಣ್ಣೆ ಹಿಡಿದವ, ದಡಿಗ; ಸಮ, ಎಣೆ; ಸಾಮರ್ಥ್ಯ; ಸೆಣಸಾಟ, ಜಗಳ; ವಿಪರೀತ ವರ್ತನೆ.

**ದಂಡಿಗೆ** ವೀಣಾದಂಡ; ವೀಣೆ, ಒಂದು ತಂತಿಯ ವಾದ್ಯ; ಪಲ್ಲಕ್ಕಿ, ಮಂಚಲು; ತಕ್ಕಡಿ ಕೋಲು.

**ದಂಡಿತ** ದಂಡ ವಿಧಿಸಲ್ಪಟ್ಟವ; ಶಿಕ್ಷಿಸಲ್ಪಟ್ಟವ.

**ದಂಡಿಸರ** ದಂಡೆಸರ; ಚಂಚಲ ಸ್ವಭಾವ, ಚಾಪಲ್ಯ.

**ದಂಡಿಸು** ಶಿಕ್ಷಿಸು; ಹೊಡೆ.

**ದಂಡು** ದಂಡ, ದಂಟು, ತಾಳು; ಸೈನ್ಯ.

—ಕಾರ ಸೈನಿಕ.

**ದಂಡೆ** ಹೂವಿನ ಸರ, ಮಾಲೆ; ದಡ, ತೀರ; ಪಾತಿ; ಮಡಿ; ಮೊಣಕಾಲೂರಿಕೆ, ಮಣಿತ.

**ದಂಡೋರ** ಡಂಗುರ.

**ದಂತ** ಹಲ್ಲು; ದಾಡೆ; ಆನೆ; ಬೆಟ್ಟದ ಕೋಡು; ಪರ್ವತಶ್ರೇಣಿ; ಮುಳ್ಳು; 32 ಸಂಖ್ಯೆ.

**ದಂತಕಥೆ** ಬಾಯಿಂದ ಬಾಯಿಗೆ ಪ್ರಚಾರವಾಗುವ ಕಥೆ, ಕಟ್ಟುಕಥೆ.

**ದಂತಚ್ಛದ** (ಛದ=ಮುಚ್ಚು) ಹಲ್ಲುಗಳನ್ನು ಮುಚ್ಚುವುದು, ತುಟಿ.

ದಂತಧಾವನ ಹಲ್ಲು ಉಜ್ಜುವುದು, ಹಲ್ಲು ತಿಕ್ಕುವುದು.

ದಂತಪತ್ರಕ ಹಲ್ಲಿನಂತೆ ಬಿಳುಪಾದ ದಳ ಉಳ್ಳದು, ಮಲ್ಲಿಗೆ.

ದಂತಬೀಜಕ ಹಲ್ಲಿನಂತೆ ಬೀಜವುಳ್ಳದು, ದಾಡಿಂಬ, ದಾಳಿಂಬದ ಹಣ್ಣು.

ದಂತವಕ್ರ(ದಂತವಕ್ತ್ರ) ಕೋರೆ ಹಲ್ಲುಗಳಿದ್ದ ಒಬ್ಬ ರಾಕ್ಷಸ. ಈತನು ಕೃಷ್ಣನಿಂದ ನಾಶ ವಾದನು.

ದಂತಾವಲ ಆನೆ; ಗಜಾಸುರನೆಂಬ ರಕ್ಕಸ.

ದಂತಿ ದಂತವಿರುವುದು, ಆನೆ; ಆನೆ ದಾಡೆ; ಹಲ್ಲು.

ದಂತುರ ಉಬ್ಬುತಗ್ಗಾದ; ಎತ್ತರದ ಹಲ್ಲುಗ ಳಿರುವ.

ದಂತುರಿತ ದಟ್ಟವಾದ.

ದಂತ್ಯ ಹಲ್ಲುಗಳ ಬುಡದಿಂದ ಹುಟ್ಟುವ ತ ಥ ದ ಧ ನ ರ ಲ ಸ ಳ ವರ್ಣಗಳು.

ದಂದಶೂಕ (ದಂದ=ಕಠಿಣ, ಶೂಕ=ಕಚ್ಚು) ಕಠಿಣವಾಗಿ ಕಚ್ಚುವುದು, ಸರ್ಪ; ಹಾವು.

ದಂದುಗ ಕಷ್ಟ, ತೊಂದರೆ; ಕ್ಲೇಶ.

—ಕೊಳ್ ಕಷ್ಟಪಡು.

ದಂಪತಿ (ಜಂಪತಿ) ಜಾಯಾಪತಿ (ಸಂ), ಗಂಡ ಹೆಂಡತಿ, ಕುಟುಂಬ.

ದಂಪತಿವಕ್ಕಿ ಚಕ್ರವಾಕ ಪಕ್ಷಿ, ಎಣೆವಕ್ಕಿ.

ದಂಬ (ಡಂಬ), ಮೋಸ.

ದಂಬೆ ಹರಿಣಿ, ನೀರುಹರಿಯುವ ಮಾಡಿನ ಓಣಿ, ಹರಿಣಾಳಿಗೆ.

ದಂಭ (ಡಂಭ) ಕಪಟ; ಪಾಪ; ಗರ್ವ.

ದಂಭೋಳಿ ಇಂದ್ರನ ವಜ್ರಾಯುಧ; ಒಂದು ಯೋಗಮುದ್ರೆ.

ದಂಶ ಕಚ್ಚುವುದು; ಕಾಡುನೊಣ.

—ನ ಕಚ್ಚುವಿಕೆ, ಕವಚ.

ದಂಶಕ ಕಚ್ಚಿ ತಿನ್ನುವುದು, ಉಪ್ಪಿನಕಾಯಿ.

ದಂಶಿ ಕವಚ; ದಪ್ಪವಾದ ಹೊದಿಕೆ.

ದಂಶಿತ ಕವಚವುಳ್ಳ; ಕಚ್ಚಲ್ಪಟ್ಟ.

ದಂಷ್ಟ್ರ (ಸಂ) ದಾಡೆ (ದೃ), ಹಲ್ಲು; ಕೋರೆ ಹಲ್ಲು.

ದಂಷ್ಟ್ರಿ ದಾಡೆಯುಳ್ಳದು; ಆನೆ; ಸರ್ಪ; ಕಾಡುಹಂದಿ.

ದಾ ಕೊಡು; ಕತ್ತರಿಸು.

ದಾಕು (ಡಾಕು), ಸಿಡುಬಿಗೆ ಮದ್ದು ಚುಚ್ಚು ವುದು, ದೇವಿ.

—ದಾರ ದಾಕು ಹಾಕುವವ; ವೈದ್ಯ, ಇಂಗ್ಲಿಷ್ ಪದ್ಧತಿಯ ವೈದ್ಯ ಬಲ್ಲವ.

ದಾಕ್ಷಾಯಣಿ ದಕ್ಷನ ಮಗಳು, ಸತೀದೇವಿ; ಅಶ್ವಿನಿ ಮೊದಲಾದ ತಾರೆಗಳು.

ದಾಕ್ಷಾಯ್ಯ ಒಂದು ಹದ್ದು, ರಣಹದ್ದು, ಹಪ್ಪುಕಳ.

ದಾಕ್ಷಿಣಾತ್ಯ ದಕ್ಷಿಣ ದೇಶದ; ತೆಂಗಿನಕಾಯಿ.

ದಾಕ್ಷಿಣ್ಯ ಇತರರ ಮನಸ್ಸನ್ನು ಒಡಂಬಡಿ ಸುವ ಗುಣ; ಕೊಳ್ಳಲು ಬಗೆಯದಿರುವ ಮನ, ಸಂಕೋಚ.

—ಕಾರ ಸಂಕೋಚಪಡುವವ.

—ಪರ ಪರರ ಮನಸ್ಸನ್ನು ತೃಪ್ತಿಪಡಿಸು ವವ, ಸಂಕೋಚ ವೃತ್ತಿಯವ.

ದಾಕ್ಷೀ ವ್ಯಾಕರಣಕಾರ ಪಾಣಿನಿಯ ತಾಯಿ.

ದಾಖಲು ದಾಖಲಾತು, ದಾಖಲೆ, ಆಧಾರ ವಾದ ಕಾಗದಪತ್ರ; ಸೇರಿಸಿಕೊಳ್ಳುವಿಕೆ.

—ಮಾಡು ಸೇರಿಸು; ಬರೆ; ಅರ್ಜಿ ಒಪ್ಪಿಸು.

ದಾಗುದೂಜಿ ದುರುಸ್ತಿ, ಸಮಪಡಿಸುವಿಕೆ; ಸರಿಪಡಿಸು.

ದಾಘ ತಪಿಸುವ ಸ್ಥಿತಿ.

ದಾಟಿ ಅವಸರ; ಬರೆಯುವ ಇಲ್ಲವೆ ಓದುವ ವೇಗ; ಬಗೆ, ರೀತಿ; ಹಾಡಿನ ರಚನೆ; ಅವ ಸರ, ತ್ವರೆ.

ದಾಟು ದಾಂಟು; ಪಾರಾಗು; ತಡೆಯನ್ನು ಕಳೆ; ನೀರನ್ನು ಪಾರಾಗು; ಮೀರು, ಮೇರೆ ಮೀರು; ಸಾಯು, ತೀರು; ತೀರುವಿಕೆ; ಪಾರಾಗುವಿಕೆ.

— ಹಾಕು ಅಟ್ಟು; ಪಾರಾಗಿಸು; ಕಳುಹಿಸಿಕೊಡು.

ದಾಡಿ ಗಡ್ಡ.

ದಾಡಿಮ ದಾಳಿಂಬ (ದ್ಭ), ಒಂದು ಹಣ್ಣು.

ದಾಡಿಂಬ (ದಾಡಿಮ)

ದಾಡೆ ಆನೆಯ ದಂತ; ಹಲ್ಲು; ನೀಳ ಹಲ್ಲು.

ದಾಣ ಧಾನ್ಯ; ಕಾಳು.

ದಾಣಿದಡಿ ದಪ್ಪವಾದ ಕೋಲು, ಬಲವಾದ ದೊಣ್ಣೆ.

ದಾತ ಕತ್ತರಿಸಲ್ಪಟ್ಟ; ಕೊಡಲ್ಪಟ್ಟ; ಒಡೆಯ, ಯಜಮಾನ; ಕೊಡತಕ್ಕವ.

ದಾತಾರ (ದ್ಭ) ದಾತೃ (ಸಂ), ಕೊಡುವವ, ದಾನಿ; ಒಡೆಯ.

ದಾತೃ ಕೊಡುವವ, ದಾನಿ.

ದಾತ್ಯೂಹ (ದಾತಿ = ತೇಲುವಿಕೆ), ನೀರಮೇಲೆ ತೇಲುತ್ತಿರುವುದು, ಭರತಪಕ್ಷಿ; ನೀರ್ಕಾಗೆ.

ದಾತ್ರ ಕುಡುಗೋಲು.

ದಾದ (ದ್ಭ) ತಾತ (ಸಂ), ಹಿರಿಯರಿಗೆ ಗೌರವದಿಂದ ಹೇಳುವ ಮಾತು.

ದಾದಿ (ದ್ಭ) ಧಾತ್ರಿ (ಸಂ), ಉಪಮಾತೃ, ಸಾಕುತಾಯಿ; ನರಸಿ.

ದಾನ ಮಂತ್ರಪೂರ್ವಕ ಕೊಡುವುದು, ಕೊಡುವಿಕೆ; ಆನೆಯ ಮದೋದಕ; ಪಾಲನೆ; ಕತ್ತರಿಸುವಿಕೆ; ಲಂಚ.

— ಗುಣ ಔದಾರ್ಯ.

— ಶೀಲ ಕೊಡುವ ಸ್ವಭಾವದವ, ಉದಾರತೆ

ದಾನಪತಿ ಅಕ್ರೂರ.

ದಾನಪತ್ರ ದಾನಕೊಟ್ಟೆನೆಂದು ಸೂಚಿಸುವ ಲೇಖ.

ದಾನಪಾತ್ರ ದಾನಕೊಡುವ ಪಾತ್ರ; ದಾನಕ್ಕೆ ಯೋಗ್ಯನಾದವ.

ದಾನವ ದನುವಿನ ಸಂತತಿಯವ, ಅಸುರ, ದೈತ್ಯ.

ದಾನವರಾಜ ದೈತ್ಯರ ಅರಸು, ರಾವಣ.

ದಾನವರಿಪು ವಿಷ್ಣು, ಕೃಷ್ಣ.

ದಾನವಾಂತಕ ವಿಷ್ಣು, ಕೃಷ್ಣ.

ದಾನವಸೂದನ ದಾನವರನ್ನು ಕೊಲ್ಲುವವ, ಕೃಷ್ಣ.

ದಾನಶಾಲೆ (ದಾನಸಾಲೆ) ಧರ್ಮಶಾಲೆ, ಛತ್ರ.

ದಾನಿ ಕೊಡುವವ, ಉದಾರಿ; ಪನ್ನೀರು ಬುಡ್ಡಿ; ಮೈಯುಬ್ಬಿದ್ದು ಕತ್ತು ಕಿರಿದಾಗಿರುವ ಲೋಹದ ಪಾತ್ರೆ; ಹಲಸಿನ ಬೀಜ.

ದಾಪನ ಕೊಡುವಿಕೆ; ಬಲವಂತದಿಂದ ಕೊಡಿಸುವಿಕೆ.

ದಾಪು (ಚಾಪು), ದಾಟು.

— ಹಾಕು ದಾಟುಹಾಕು, ಕಾಲಿನ ನಡಿಗೆಯಿಂದ ದೂರ ಎಣಿಸು, ಹಜ್ಜೆಯಿಂದ ಅಳೆ.

ದಾಮ ದನ ಕಟ್ಟುವ ಬಳ್ಳಿ; ಹೂಸರ; ದಾಬು; ಕಿರಣ.

ದಾಮನಿ (ದಾವಣಿ), ಡಾವಣಿ, ದನಗಳನ್ನು ಸಾಲಾಗಿ ಕಟ್ಟುವ ಹಗ್ಗ.

ದಾಮಾಷಾ (ದಾಮಾಷೆ), ದಾಮಾಶಯ, ಒಟ್ಟುಮೊತ್ತದ ಮೇಲೆ ಪಾಲು ಹಂಚುವಿಕೆ; ಧಾರಣೆವಾಸಿ, ಸೆಲೆ; ಪಾಲುಗಳ ಬಡ್ಡಿ.

ದಾಮೋದರ (ದಾಮ = ಹೂಸರ), ಹೊಟ್ಟೆಯ ಮೇಲೆ ಹೂಸರ ಉಳ್ಳವ ಕೃಷ್ಣ, ವಿಷ್ಣು.

ದಾಯ್ ಕೊಡು.

ದಾಯ ಪಾಲು; ವಿಭಾಗಕ್ಕೆ ಯೋಗ್ಯನಾದ ದ್ರವ್ಯ; ವಿವಾಹಕಾಲದಲ್ಲಿ ಅಳಿಯನಿಗೆ ಕೊಡುವ ದ್ರವ್ಯ; ದಾನ; ವಿತ್ತ; ದಾಳ ಹಾಕುವಿಕೆ; ಅನುಕೂಲದ ಗಳಿಗೆ; ಅಡವಿ, ಕಾಡು.

—ಕ ಕೊಡುವವ; ಕೊಡುವುದು.

—ಭಾಗ ತಂದೆ ಸಂಪಾದಿಸಿದ ಆಸ್ತಿ, ಸಂಪತ್ತನ್ನು ಹಂಚಿಕೊಳ್ಳುವುದು.

ದಾಯಾದ (ದಾಯ=ವಿಭಾಗಯೋಗ್ಯ ಸಂಪತ್ತು) ಮಗ; ಹಿರಿಯರ ಸಂಪತ್ತಿಗೆ ಹಕ್ಕುಳ್ಳವ; ದಾಯಾದ್ಯ, ಭಾಗಾದಿ.

ದಾಯಾದಿ ದಾಯಾದ, ಪಿತ್ರಾರ್ಜಿತ ಸಂಪತ್ತಿಗೆ ಹಕ್ಕುದಾರ; ರಕ್ತಸಂಬಂಧಿ; ಮಗಳು.

ದಾಯಿ ದಾನ, ಉತ್ತಾರಬಿಡುವಿಕೆ.

ದಾಯಿಗ(ದ್ಭ) ದಾಯಿಕ (ಸಂ),ಪಾಲುಗಾರ; ಬಂಧು, ನೆಂಟ; ಸೋದರ, ಅನುಬಂಧ; ಕರುಳು ಬಳ್ಳಿಯವರು; ಭಕ್ತ, ಧಾರ್ಮಿಕ; ಮೋಕ್ಷಾಪೇಕ್ಷಿ.

ದಾಯಿನಿ ಕೊಡುವವಳು; ದಾತೆ.

ದಾರ (ಸೋದರರ ಸ್ನೇಹವನ್ನು ಒಡೆವವಳು), ಹೆಂಡತಿ; ಹಗ್ಗ, ನೂಲು; ದ್ವಾರ (ಸಂ), ಗದ್ದೆ; ಬಿರುಕು; ರಂಧ್ರ; ಯಾರ.

ದಾರಕ ಬಾಲಕ; ಸಣ್ಣ ಹುಡುಗ; ಮಗ.

ದಾರಕರ್ಮ ಹೆಂಡತಿಯನ್ನು ಗಳಿಸುವ ಕೆಲಸ, ವಿವಾಹ, ಮದುವೆ.

ದಾರಗೊಂಡೆ ನಡುವಿಗೆ ಬಿಗಿಯುವ ಗೊಂಡೆಯುಳ್ಳ ದಾರ, ಉಡಿದಾರ.

ದಾರಣ ಬಿರಿಯುವಿಕೆ, ಒಡೆಯುವಿಕೆ.

ದಾರಣೆ (ಧಾರಣೆ), ಪೇಟೆಯ ಬೆಲೆಗಳು.

ದಾರಬಂಧನ (ದ್ಭ) ದ್ವಾರಬಂಧನ (ಸಂ), ಬಾಗಿಲ ಚೌಕಟ್ಟು; ದಾರಂದ.

ದಾರವ ಮರದ, ಮರದಿಂದಾದ.

ದಾರವಟ್ಟೆ ದ್ವಾರಪಟ್ಟ; ಪುರದ್ವಾರ; ಹೆಬ್ಬಾಗಿಲು, ಅಗಸೆ.

ದಾರಂದ(ದಾರವಂದ)(ದ್ಭ)ದ್ವಾರಬಂಧ(ಸಂ), ಬಾಗಿಲಚೌಕಟ್ಟು.

ದಾರಿ ಮಾರ್ಗ; ಎಡೆ, ಸೀಳು.

—ಕಟ್ಟು ತಡೆ, ನಿರ್ಬಂಧಿಸು.

—ಕಾರ ಪ್ರಯಾಣಿಕ, ಹಾದಿಹೋಕ.

—ಗ ದಾರಿಯಲ್ಲಿ ಹೋಗುವವ, ಪ್ರಯಾಣಿಕ, ಪಯಣಿಗ.

—ಹೋಕ ದಾರಿಹೋಕ, ದಾರಿಗ, ಪ್ರಯಾಣಿಕ.

ದಾರಿದ್ರ್ಯ (ದಾರಿದ್ರ), ಬಡತನ.

ದಾರು (ಒಡೆದಾಗ ಸೀಳುವುದು) ಮರ, ಕಟ್ಟಿಗೆ; ದೇವದಾರು.

ದಾರುಕ ಕೃಷ್ಣನ ಸಾರಥಿ; ರಥ ನಡೆಸುವವ.

ದಾರುಕರ್ಮ ಮರಗೆಲಸ.

ದಾರುಣ ರೌದ್ರ ರಸ; ಸಹಿಸಲಸಾಧ್ಯವಾದುದು; ಭಯಂಕರ; ಕ್ರೌರ್ಯ, ಕಠಿಣ.

ದಾರುಸರ ಮರಗಳಲ್ಲಿ ಶ್ರೇಷ್ಠವಾದುದು, ಚಂದನ; ಗಂಧ.

ದಾರುಹಸ್ತ ಹುಟ್ಟು, ತೊಳೆ.

ದಾರೆ(ದ್ಭ) ಧಾರಾ(ಸಂ),ನೀರಿನ ಎಳೆ; ಅಲಗು; ದಾರೆಹುಳಿ.

ದಾರ್ಢ್ಯ ಬಲವಾಗಿರುವುದು, ಗಟ್ಟಿಮುಟ್ಟಾಗಿರುವುದು.

ದಾರ್ವಟ ಗದ್ದಲವಿಲ್ಲದೆ ತಿರುಗುವ ಜಾಗ; ಚಿಂತಾಗೃಹ; ಆಲೋಚನೆ ಮಾಡುವ ಮನೆ.

ದಾಲ ಒಂದು ಬಗೆಯ ಕಾಡುಜೇನು.

ದಾಲಚೀನಿ (ದಾಲಚಿನ್ನಿ), ಒಂದು ಸುವಾಸನೆಯ ಮರ, ಒಂದು ಸಾಂಬಾರ ದಿನಸು.

ದಾವ ಕಾಡ್ಗಿಚ್ಚು.

ದಾವಣಿ(ದಾಮನಿ),ದನಗಳನ್ನು ಕಟ್ಟುವ ಹಗ್ಗ.

—ಹೊಡೆ ದನಗಳನ್ನು ಸಾಲಾಗಿ ಕಟ್ಟು.

ದಾವತಿ ಶ್ರಮ; ನೋವು; ದಣಿವು.

ದಾವರ (ಡಾವುರ), ಬಾಯಾರಿಕೆ; ಆಶೆ.

ದಾವಳಿ (ದಾಬಳಿ), ತೆಳ್ಳಗಿನ ಉಣ್ಣೆಬಟ್ಟೆ, ಉಣ್ಣೆಯ ಶಾಲು.

ದಾವಾ (ದಾವೆ), ನಂಬು, ಕಕ್ಷಿ.

—ದಾರ ದಾವೆ ಹೂಡಿದವ, ವಾದಿ, ಮುದ್ದೈ.
ದಾವಾಗ್ನಿ ದಾವಾನಲ, ಕಾಡುಕಿಚ್ಚು.
ದಾವು (ದ್ಭ) ಧಾಮ (ಸಂ); ಹಗ್ಗ.
ದಾವೆ ದಾವಾ; ರಣೆ, ರಜ್ಜು, ಹಗ್ಗ.
ದಾಶ್ ಹಿಂಸಿಸು, ಕೊಲ್ಲು.
ದಾಶ ದಾಸ; ಬೆಸ್ತ, ಮೀನುಗಾರ.
ದಾಶರಥಿ ದಶರಥನ ಮಗ; ರಾಮ ಮೊದಲಾದವರು.
ದಾಶರಾಜ ಸತ್ಯವತಿಯ ತಂದೆಯಾದ ಒಬ್ಬ ಬೆಸ್ತ.
ದಾಶಾರ್ಹ ವಿಷ್ಣು, ಕೃಷ್ಣ.
ದಾಶೇರಕ ಮಾಳವ ದೇಶ; ಮಾಳವ ದೇಶಸ್ಥ.
ದಾಸ್ ಕೊಡು.
ದಾಸ ಗುಲಾಮ; ಸೇವಕ; ಶೂದ್ರ; ಭಕ್ತ.
—ತ್ವ ಗುಲಾಮಗಿರಿ, ಸೇವಾವೃತ್ತಿ; ಭಕ್ತಿ.
ದಾಸಣ ದಾಸವಾಳ ಹೂ.
ದಾಸರ ಹೆಬ್ಬಾವು, ಆನೆಕನ್ನಡಿ ಹಾವು.
ದಾಸವಾಳ (ದಾಸಣ), ದಾಸಾಳ.
ದಾಸಿ ಸೇವಕಿ, ದಾದಿ; ಭಕ್ತೆ.
ದಾಸೀಸುತ ದಾಸಿಯ ಮಗ; ವಿಚಿತ್ರವೀರ್ಯನ ದಾಸಿಯ ಮಗನಾದ ವಿದುರ.
ದಾಸೇಯ ದಾಸ; ಬೆಸ್ತನ ಮಗ; ಮತ್ಸ್ಯಗಂಧಿನಿಯೆಂಬ ಬೆಸ್ತರವಳ ಸಂತಾನ.
ದಾಸೋಗ ಅನ್ನಛತ್ರ.
ದಾಸೋಹ (ದಾಸೋಹಂ), ತಾನು ದಾಸನೆಂಬ ಭಾವ; ಸೇವಾವೃತ್ತಿ; ಭಕ್ತಿ.
ದಾಹ ಸುಡುವಿಕೆ; ಶರೀರದ ಬೇಗೆ; ನೋವು; ಪೀಡೆ; ಬಾಯಾರಿಕೆ, ನೀರಡಿಕೆ; ಬಯಕೆ.
—ಕ ಸುಡುವುದು; ಸುಡುವ.
—ಇಸು (ದಹಿಸು) ಸುಡು.
ದಾಹಶಾಂತಿ ನೀರಡಿಕೆ ತಣಿಸುವಿಕೆ; ಆಸರು ಕಳೆವಿಕೆ.
ದಾಳಿ (ದ್ಭ) ಧಾಟ (ಸಂ), ಮುತ್ತಿಗೆ; ಸಮೂಹ; ಯುದ್ಧಕ್ಕೆ ನಡೆ.
—ಇಕ್ಕು ಮುತ್ತಿಗೆ ಹಾಕು; ದಾಳಿಯಿಡು.
ದಾಳಿಗಿಚ್ಚು ಮುತ್ತುವ ಬೆಂಕಿ.
ದಾಳಿಂಬ ದಾಡಿಮ, ಒಂದು ಫಲ.
ದಾಂಗುಡಿ ಹಗ್ಗದಂತಿರುವ ಕುಡಿ; ಮುಂದು ವರಿಯುವ ಕುಡಿಬಳ್ಳಿ.
—ಸು ಮುಂದುವರಿಸು.
ದಾಂಟು (ದಾಟು), ಉತ್ತರಿಸು, ಪಾರಾಗು; ಬರಿಗಾಲಿಂದ ದಾಟಬಹುದಾದ ದೂರ.
ದಾಂಡಿಗ ದಪ್ಪವಾಗಿರುವವ; ಗಟ್ಟಿಮುಟ್ಟಾಗಿರುವವ, ದೃಢಕಾಯ.
—ತನ ದೇಹದಾರ್ಢ್ಯ; ಮೈತುಂಬಿರುವಿಕೆ.
ದಾಂತಿ ಆತ್ಮಸಂಯಮ, ಮನೋನಿಗ್ರಹ.
ದಾಂಧಲೆ (ದಾಂದಲೆ), ಗದ್ದಲ; ಗಲಿಬಿಲಿ, ಕೋಲಾಹಲ, ಗೊಂದಲ.
ದಿಕ್ ದಿಶಾ, ದಿಕ್ಕು.
—ಮೂಢ (ದಿಙ್ಮೂಢ) ಕಂಗಾಲ, ಏನು ಎಂದು ತೋಚದ.
ದಿಕ್ಕನೆ ದಿಗ್ಗನೆ, ಫಕ್ಕನೆ, ಒಮ್ಮೆಗೆ.
ದಿಕ್ಕರಿ ದಿಗ್ಗಜ, ದಿಕ್ಕುಗಳಲ್ಲಿರುವ ಆನೆ.
ದಿಕ್ಕಾಪಾಲು ದೆಸೆತೆಗೆ, ನಾಲ್ಕು ಕಡೆಗೂ ಚೆದರುವಿಕೆ.
ದಿಕ್ಕು (ದಿಕ್) ದೆಸೆ–ಮೂಡು, ಪಡು, ತೆಂಕು, ಬಡಗು ಮೊದಲಾದುವು.
—ಕೆಡು ಗತಿಯಿಲ್ಲದಾಗು, ತಬ್ಬಲಿಯಾಗು
ದಿಕ್ಚಕ್ರ ದಿಗಂತ; ಪ್ರಪಂಚ; ದಿಕ್ಕನ್ನು ತೋರಿಸುವ ಯಂತ್ರ.
ದಿಕ್ತಟ ದಿಕ್ಕಿನ ಅಂತ್ಯ, ದಿಗಂತ.
ದಿಕ್ಪತಿ ದಿಕ್ಕುಗಳ ಒಡೆಯ—ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ್ಯ ಎಂಬ ದೇವತೆಗಳು.
ದಿಕ್ಪಾಲ (ದಿಕ್ಪತಿ)

ದಿಗಧಿಪ (ದಿಕ್ಪತಿ).
ದಿಗಂತ ದಿಕ್ಕಿನ ಕೊನೆ, ನೆಲವೂ ಬಾನೂ ಕೂಡುವುದೆಂದು ತೋರುವಲ್ಲಿ, ಕ್ಷಿತಿಜ.
ದಿಗಂಬರ ಬತ್ತಲೆ, ನಗ್ನ; ದಿಕ್ಕಾಬಟ್ಟೆಯಾಗಿರುವವ; ಜಿನ ಸನ್ಯಾಸಿಗಳಲ್ಲಿ ಒಂದು ಪಂಥದವರು; ಹುಟ್ಟುಗೆಯವ.
ದಿಗಿಲು ಗಾಬರಿ, ಭೀತಿ.
ದಿಗಿಸು ಕೆಳಗಿಳಿಸು, ಇಳಿಸು.
ದಿಗೀಶ ದಿಕ್ಕಿನ ಒಡೆಯ–ಯಮ, ಇಂದ್ರಾದಿ ದಿಕ್ಪಾಲರು.
ದಿಗು (ದಿಕ್ಕು), ದೆಸೆ.
ದಿಗುಬಲಿ (ದ್ಭ) ದಿಗ್ಬಲಿ (ಸಂ), ದಿಕ್ಕುಗಳಿಗೆ ಕೊಡುವ ಬಲಿ.
ದಿಗ್ಗಜ ಅಷ್ಟದಿಕ್ಕಿನ ಆನೆ.
ದಿಗ್ಗನೆ ಫಕ್ಕನೆ.
ದಿಗ್ಧ ವಿಷಹಚ್ಚಿದ ಬಾಣ; ಎಣ್ಣೆ ಸವರಿದುದು.
ದಿಗ್ದಂತಿ ದಿಗ್ಗಜ; ಎಂಟೆಂಬ ಸಂಖ್ಯೆ.
ದಿಗ್ದೇಶ ವಿವಿಧ ದೇಶಗಳು; ಎಲ್ಲೆಲ್ಲೂ.
ದಿಗ್ಬಲಿ ನಾಲ್ಕು ದಿಕ್ಕಿಗೂ ಎಸೆಯುವ ನಿತ್ಯದ ಬಲಿ ವಿಧಿ; ಚರಗ (ಚರು) ಚೆಲ್ಲುವುದು.
ದಿಗ್ಬಂಧನೆ ಮಂತ್ರಶಕ್ತಿಯಿಂದ ಯಾವ ಕಡೆಗೂ ಹೋಗದಂತೆ ಮಾಡುವುದು.
ದಿಗ್ಭಯು ದಿಕ್ಕೇ ತೋಚದ ಸ್ಥಿತಿ.
ದಿಗ್ಭ್ರಮಣೆ ದಿಕ್ಕುತಪ್ಪಿ ಅಲೆದಾಡುವಿಕೆ, ದಿಕ್ಕುದಿಕ್ಕಿಗೆಅಲೆಯುವಿಕೆ; ಗತಿಗೆಡುವಿಕೆ.
ದಿಗ್ವಧು ದಿಕ್ಕೇ ನಾರಿಯೆಂಬ ಮಾತು.
ದಿಗ್ವಿಜಯ ನಾಲ್ಕು ಸುತ್ತಲಿನ ದೇಶಗಳನ್ನು ಜಯಿಸುವಿಕೆ.
ದಿಙ್ಮಂಡಲ ನಾಲ್ಕು ಸುತ್ತು; ಸುತ್ತಲಿನ ಜಗ.
ದಿಟ (ದ್ಭ) ದಿಷ್ಟ (ಸಂ) ಖಚಿತ, ನಿಜ, ಸತ್ಯ.
ದಿಟ್ಟ (ದ್ಭ) ಧೃಷ್ಟ (ಸಂ), ಧೈರ್ಯ, ಧೈರ್ಯಶಾಲಿ, ವೀರ.
—ಗಾರ ಧೈರ್ಯಶಾಲಿ, ವೀರ.
—ತನ ಧೀರತನ, ಶೌರ್ಯ; ಕಣ್ ಸೋಂಕು.
ದಿಟ್ಟಿ (ದ್ಭ) ದೃಷ್ಟಿ (ಸಂ), ನೋಟ; ಕಣ್ಣು; ಕಣ್‌ಸೋಂಕು.
—ಕೆಡು ಕಂಗೆಡು.
—ಕೊನೆ ಕಣ್ಣಿನ ಕೊನೆ.
—ಕೊಳಿಸು ಪ್ರತ್ಯಕ್ಷವಾಗು, ಕಾಣಿಸು.
—ಪರಿಪರಿ ಸುತ್ತಲೂ ನೋಟ ಹರಿ.
—ಬಿಸ (ದ್ಭ) ದೃಷ್ಟಿ ವಿಷ (ಸಂ), ಕಣ್ಣಿನ ಸೋಂಕು.
—ಸು ನೋಡು.
ದಿಟ್ಟಿವಾರಿ (ದೃಷ್ಟಿವಾರಿ) ತನಗೂ ದೇವರಿಗೂ ನಡುವೆ ಬಂದವರನ್ನು ಕತ್ತರಿಸುವುದು.
ದಿಟ್ಟು (ದಿಟ್ಟತನ).
ದಿಟ್ಟೆ ಧೈರ್ಯಶಾಲಿ, ನಾಚಿಕೆಯಿಲ್ಲದ; ಹೆಂಗುಸು.
ದಿಡ್ಡಿ ದಿಡ್ಡಿಬಾಗಿಲು, ಕೋಟೆಗಳಲ್ಲಿರುವ ಗುಪ್ತದ್ವಾರ; ತೂಡವೆ ಬಾಗಿಲು.
ದಿಡ್ಡು (ತಿಟ್ಟು), ದಿಬ್ಬ, ದಿನ್ನೆ.
ದಿತ ವಿಭಜಿತ; ಕತ್ತರಿಸಿದ.
ದಿತಿ ಕಶ್ಯಪ ಋಷಿಯ ಹದಿಮೂರು ಮಂದಿ ಹೆಂಡಿರಲ್ಲಿ ಒಬ್ಬಳು, ದೈತ್ಯರ ತಾಯಿ.
—ಜ ದಿತಿಯ ಮಗ, ದೈತ್ಯ, ರಾಕ್ಷಸ.
—ಸುತ ದಿತಿಯ ಮಗ, ರಾಕ್ಷಸ.
ದಿದೀವಿ ಅನ್ನ, ಕೂಳು.
ದಿಧಿಷು ವಿಧವೆಯನ್ನು ವರಿಸಿದವ, ಒಮ್ಮೆ ಮದುವೆಯಾದವಳನ್ನು ತಿರುಗಿ ಮದುವೆಯಾದವ; ಉಡಿಕೆ ಗಂಡ.
ದಿನ ಹಗಲು, ದಿವಸ; ಸೂರ್ಯ ಕಿರಣ ಪ್ರಕಾಶಿಸುವ ಸಮಯ.
—ಈಶ (ದಿನೇಶ) ಸೂರ್ಯ.
—ಕರ ಹಗಲನ್ನು ಉಂಟುಮಾಡುವವ, ಸೂರ್ಯ.

—ಪ ಹಗಲಿನೊಡೆಯ, ಸೂರ್ಯ.
—ಮಣಿ ಹಗಲಿನ ರತ್ನ, ಸೂರ್ಯ.
—ವಹಿ ನಿತ್ಯವೂ; ದಿನದ ಲೆಕ್ಕ ಇಲ್ಲವೆ ಕೆಲಸ ಬರೆದಿಡುವ ಪುಸ್ತಕ.
—ವಾರು ದಿನನಿತ್ಯ, ಪ್ರತಿದಿನ.
ದಿನಚರಿ ದಿನವೂ ಹಾಡಬೇಕಾದ ಶ್ಲೋಕ; ನಿತ್ಯದ ಕೆಲಸ, ದಿನಗೆಲಸ.
ದಿನಚರ್ಯೆ (ದಿನಚರಿ), ನಿತ್ಯದ ಕೆಲಸ.
ದಿನದೀಪ ದಿನದಲ್ಲಿ ಉರಿಸುವ ದೀಪ.
ದಿನಮಾನ ದಿನದ ಅಳತೆ, ದಿನದ ಉದ್ದ.
ದಿನಸು (ಜೀನಸು), ಸಾಮಾನು, ಕಾಳುಕಡಿ.
ದಿನಾಗಲು (ದಿನಾಲು), ಪ್ರತಿನಿತ್ಯ.
ದಿನಾಂತ ಹಗಲಿನ ಕೊನೆ, ಸಾಯಂಕಾಲ, ಶಾಮ.
ದಿನ್ನೆ ದಿಬ್ಬ, ತಿಟ್ಟ, ಎತ್ತರದ ಗುಡ್ಡ.
ದಿಪ್ಪ ದಪ್ಪ; ಗಡುತರ.
ದಿಬ್ಬ ದಿನ್ನೆ, ದಿಮ್ಮೆ, ಗುಲ್ಯ; ದಿವ್ಯ (ಸಂ).
ದಿಬ್ಬಣ (ನಿಬ್ಬಣ) ಮದುವೆಯ ಮೆರವಣಿಗೆ, ಮೆರವಣಿಗೆ; ಬೆಣೆ, ಬೂಚು.
ದಿಮಾಕು ಡಂಬ; ಹೆಮ್ಮೆ, ದರ್ಪ; ಉದ್ಧಟತೆ.
ದಿಮಿದಿಮಿ ನೃತ್ಯದ ಝುಣರು; ನೃತ್ಯದ ರೀತಿ ತೋರಿಸುವ ಸದ್ದು.
ದಿಮ್ಮನೆ ಬಲವಾಗಿ, ಬಿಮ್ಮನೆ.
ದಿಮ್ಮಿ ದಿನ್ನೆ, ತಿಟ್ಟ, ದಿಬ್ಬ, ಮೊರಡಿ.
—ತು ಹಿರಿದು; ಶ್ರೇಷ್ಠ; ದಪ್ಪವಾದುದು.
—ದ ಶ್ರೇಷ್ಠ; ಬ್ರಾಹ್ಮಣ.
ದಿಮ್ಮು ತಳ್ಳು, ನೂಕು; ದಿಂಬು, ತಲೆಗಿಂಬು.
ದಿಲ್ ಹೃದಯ, ಮನ.
ದಿಲೀಪ ಸೂರ್ಯವಂಶದ ರಘುವಿನ ತಂದೆ.
ದಿವ್ ಕ್ರೀಡಿಸು; ಪ್ರಕಾಶಿಸು; ಮಾರು; ಎಸೆ.
ದಿವ ಸ್ವರ್ಗ; ಆಕಾಶ; ದಿನ, ಹಗಲು; ಕಾಡು.
ದಿವಸ ದಿನ; ಹಗಲು.
—ಕಳೆ ಸಮಯ ಹರಣಮಾಡು.
—ಮುಖ ಹಗಲಿನ ಪ್ರಾರಂಭ; ಪ್ರಭಾತ; ಮುಂಜಾನೆ, ಹೊತ್ತಾರೆ.
ದಿವಸ್ಪತಿ ಸ್ವರ್ಗದ ಒಡೆಯ, ಇಂದ್ರ; ದಿನದ ಒಡೆಯ, ಸೂರ್ಯ.
ದಿವಾ ದಿನ, ಹಗಲು, ದಿವಸ.
—ಕರ ಹಗಲನ್ನು ಮಾಡುವ, ಸೂರ್ಯ.
ದಿವಾಣ (ದಿವಾನ), ಸರಕಾರ.
ದಿವಾನ(ದಿವಾಣ)ಮಂತ್ರಿ; ಆಸ್ಥಾನಮಂಟಪ; ಸರಕಾರ.
—ಖಾನೆ ಮಂತ್ರಿಯ ಮನೆ.
—ಗಿರಿ ಮಂತ್ರಿಪದವಿ, ಮಂತ್ರಿತ್ವ.
ದಿವಾಭೀತ ಹಗಲಲ್ಲಿ ಭಯವುಳ್ಳವ; ಚಂದ್ರ; ಗೂಬೆ; ಹೇಡಿ.
ದಿವಾಳಿ ದೀಪಾವಳಿ; ಶ್ರೀಮಂತನಿದ್ದವನು ದರಿದ್ರನಾಗುವಿಕೆ.
—ಖೋರ ಒಮ್ಮೆಗೇ ಬಡವನಾದವ.
ದಿವಾಂಧ ಹಗಲಲ್ಲಿ ಕುರುಡಾಗಿರುವುದು; ಗೂಬೆ ಮೊದಲಾದ ಪ್ರಾಣಿಗಳು.
ದಿವಿ ಸ್ವರ್ಗ; ಆಕಾಶ; ದೀವಿ ದ್ವೀಪಗಳು.
—ಜ ಸ್ವರ್ಗದಲ್ಲಿ ಹುಟ್ಟಿದವ, ದೇವತೆ.
ದಿವಿಜಪುರ ಇಂದ್ರನ ಊರು, ಅಮರಾವತಿ.
ದಿವಿಜಾಪಗೆ ಸ್ವರ್ಗದ ನದಿ, ದೇವಗಂಗೆ; ಆಕಾಶಗಂಗೆ.
ದಿವಿಜಾಂಗನೆ ಅಪ್ಸರೆ.
ದಿವಿಭಾಗ ದೇವಲೋಕದ ರಾಜಧಾನಿ, ಅಮರಾವತಿ; ಆಕಾಶ.
ದಿವೋದಾಸ ಚಂದ್ರವಂಶದ ಒಬ್ಬ ಕಾಶಿ ನಗರದ ಅರಸು.
ದಿವೌಕಸ ದೇವತೆ.
ದಿವ್ಯ ಬೆಂಕಿ ಮೊದಲಾದುವುಗಳನ್ನು ಮುಟ್ಟಿ ಮಾಡುವ ಪ್ರಮಾಣ; ಸ್ವರ್ಗದಲ್ಲಿ ಹುಟ್ಟಿದುದು; ಚಂದನ, ಗುಗ್ಗುಳ; ಮನೋಹರ, ಸುಂದರ; ಶ್ರೇಷ್ಠ; ಒಂದುವಿಧವಾದನ್ಯಾಯ

—ತರ ಮನೋಹರವಾದ, ಅನುಪಮ ವಾದ; ಅತಿ ಶ್ರೇಷ್ಠ.
ದಿಶ್ ಕೊಡು.
ದಿಶ ದಿಕ್ಕಿನ ಅಂಶ.
ದಿಶಾಗಜ ದಿಗ್ಗಜ; ದಿಕ್ಕಿನ ಆನೆ.
ದಿಶಾಘಾಟ ದಿಕ್ಕಿನ ಗಡಿ.
ದಿಶಾಪಟ ಶತ್ರುಗಳನ್ನು ದಿಕ್ಕುದಿಕ್ಕಿಗೆ ಓಡಿಸುವವ; ದಿಕ್ಪಟ, ದಿಙ್ಮಂಡಲ.
ದಿಶಾಂತ ದಿಗಂತ.
ದಿಶೆ (ದಿಶಾ) ದೆಸೆ (ದ್ಭ), ದಿಕ್ಕು.
ದಿಶ್ಯ ದಿಕ್ಕಿನಲ್ಲಿ ಹುಟ್ಟಿದುದು.
ದಿಷ್ಟ ಭಾಗ್ಯ, ಅದೃಷ್ಟ; ದೈವ, ನಿಜ, ದಿಟ.
ದಿಷ್ಟಿ (ದ್ಭ) ದೃಷ್ಟಿ (ಸಂ); ತೋರಿಸುವಿಕೆ, ನಿದರ್ಶನ; ಒಂದು ತೂಕ.
ದಿಂಕು ಹಾರು, ಕುಪ್ಪಳಿಸು.
—ಕೊಳ್ ಹಾರಿಬರು, ಕುಪ್ಪಳಿಸು.
ದಿಂಡ ಒಂದು ಮರ, ಗಿರಿಕರ್ಣ; ಸ್ಥೂಲದೇಹಿ.
ದಿಂಡಲ ಒಂದು ಮರ.
ದಿಂಡು ರಾಶಿ; ತಾಳು; ದಪ್ಪನಾದ ಮೈ; ದರ್ಪ, ಹೆಮ್ಮೆ.
—ಉರಳು ದಿಂಡಿನಂತೆ ಬೀಳು; ತುಂಡು;
—ಕೆಡೆ ತರಿ, ಕತ್ತರಿಸಿ ಕೆಡೆ, ಉರುಳಿಸು; ಬೀಳಿಸು; ಸವರು.
—ತರಿ ಕತ್ತರಿಸು; ತುಂಡುಮಾಡು.
—ಹಾಯ್ ನೆಟ್ಟಗೆ ಓಡು.
ದಿಂಡೆ ದುಷ್ಟೆ, ಉದ್ಧತೆ; ಉರುಟು ದೊಡ್ಡ ಕಲ್ಲು.
—ಯ ವೀರ, ಧೀರ.
ದಿಂಬು ಗಾದಿ, ತಲೆದಿಂಬು; ಬೀಜಕೋಶ.
ದೀ ನಾಶವಾಗು; ಕ್ಷೀಣಿಸು; ಸತಿ.
ದೀಕೆ (ದ್ಭ) ದೀಕ್ಷೆ (ಸಂ), ವ್ರತ.
ದೀಕ್ಷಿತ ನಿಯಮ ಹೊಂದಿದವ; ಯಾಗ ಮೊದಲಾದುವುಗಳಲ್ಲಿ ನಿಯಮಿತನಾದವ.
ದೀಕ್ಷಾಂತ ಯಜ್ಞದ ಕೊನೆ; ಅವಭೃತಸ್ನಾನ.
ದೀಕ್ಷೆ (ದೀಕ್ಷಾ), ನಿಯಮ; ವ್ರತ; ಸಂಸ್ಕಾರ.
ದೀಟು ಸಮತೆ, ಹೋಲುವೆ; ಅಂದಾಜು.
ದೀತಿ ಪ್ರಕಾಶ; ಕಿರಣ.
ದೀಧಿತಿ ಪ್ರಕಾಶ.
ದೀನ್ ಮುಸಲ್ಮಾನ ಧರ್ಮ.
ದೀನ ದುಃಖಿತ; ಬಡವ, ಭಯಗೊಂಡವ; ವಿನಯಶಾಲಿ.
—ಆನನ ವಿನಯವುಳ್ಳ ಮುಖ.
—ತೆ ದೈನ್ಯಭಾವ.
—ಭಾವ ವಿನಯ, ನಮ್ರತೆ.
ದೀನಾರ ಒಂದು ನಾಣ್ಯ; ಬಂಗಾರದ ಆಭರಣ; 32 ರತಿ ತೂಕ ಬಂಗಾರ.
ದೀನೋದ್ಧಾರ ಬಡವರನ್ನು ಎತ್ತುವುದು.
ದೀಪ್ ಪ್ರಕಾಶಿಸು; ಸುಡು.
ದೀಪ ಉರಿಯುವುದು; ದೀವಿಗೆ.
ದೀಪಕ ಕುಶಲ, ಚಮತ್ಕಾರ; ಒಂದು ಅರ್ಥಾಲಂಕಾರ; ಉತ್ತೇಜಕ; ಪ್ರಕಾಶಕ.
ದೀಪನ ಉತ್ತೇಜಕ; ಜೀರ್ಣಶಕ್ತಿಯನ್ನು ವೃದ್ಧಿಮಾಡುವ; ಹುರುಪು ಕೊಡುವ.
ದೀಪಾರತಿ ದೀಪಗಳ ಆರತಿ.
ದೀಪಾರಾಧನೆ ದೀಪಗಳಿಂದ ದೇವರ ಪೂಜೆ ಮಾಡುವುದು; ದೀಪಗಳನ್ನು ಉರಿಸುವ ಒಂದು ಉತ್ಸವ.
ದೀಪಾವಳಿ ದೀವಳಿಗೆ ಹಬ್ಬ; ಕಾರ್ತಿಕಮಾಸದಲ್ಲಿ ಬಲಿಚಕ್ರವರ್ತಿಯ ನೆನಪಿಗಾಗಿ ಮಾಡುವ ದೀಪೋತ್ಸವ.
ದೀಪಿಕಾಂಕುರ ದೀಪದ ಕುಡಿ.
ದೀಪಿಕೆ (ದೀಪಿಕಾ), ದೀವಿಗೆ (ದ್ಭ), ಬೆಳಕು.
ದೀಪಿಸು ಉರಿ; ಹೊಳೆ, ಬೆಳಗು.
ದೀಪ್ತಾಗ್ನಿ ಅತಿ ಹೆಚ್ಚಿನ ಜೀರ್ಣಶಕ್ತಿಯುಳ್ಳವ, ಅಗಸ್ತ್ಯ.
ದೀಪ್ತಿ ಕಾಂತಿ; ದೀವಿಗೆ; ಕಿರಣ; ಪ್ರಕಾಶ.

ದೀರ್ಘ ಉದ್ದ, ನೀಳ; ಗುರು ಅಕ್ಷರ.
—ತೆ ಉದ್ದವಾಗಿರುವಿಕೆ.
ದೀರ್ಘಕಂಠ ಉದ್ದ ಕತ್ತುಳ್ಳುದು, ಕೊಕ್ಕರೆ.
ದೀರ್ಘಜಿಹ್ವ ಸರ್ಪ.
ದೀರ್ಘದೃಷ್ಟಿ ಬಹುದೂರದ ತನಕ ನೋಡಬಲ್ಲವ, ದೂರದೃಷ್ಟಿ; ಪಂಡಿತ; ಹದ್ದು.
ದೀರ್ಘನಿದ್ರೆ ಸಾವು, ಮರಣ.
ದೀರ್ಘಪಾದಪ ಉದ್ದವಾದ ಕಾಲುಳ್ಳುದು; ತಾಳೆಮರ, ಅಡಕೆಮರ.
ದೀರ್ಘಾಯುಷ ಬಹುಕಾಲದ ತನಕ ಬದುಕುವವ; ಮಾರ್ಕಾಂಡೇಯ.
ದೀವ (ದ್ಭ) ದ್ವೀಪ (ಸಂ), ಕುದುರು; ದ್ವೀಪವಾಸಿ; ಇತರ ಪ್ರಾಣಿಗಳನ್ನು ಸೆಳೆದು ಬಲೆಗೆ ಕೆಡೆಯುವ ಬೇಟೆ ಮೃಗ.
—ಗಾರ ಮೃಗಪಕ್ಷಿಗಳನ್ನು ಸಾಕುವವ; ಒಂದು ಪ್ರಾಣಿಯನ್ನು ಒಡ್ಡಿ ಇನ್ನೊಂದನ್ನು ಬೇಟೆಯಾಡುವವ.
ದೀವಟಿ ದೊಂದಿ; ಉರಿಯುವ ದೊಡ್ಡ ದೀಪ.
—ಗ ದೀಪ ಹಿಡಿಯುವವ.
—ಗೆ ದೊಂದಿ, (ದೊಂದೆ) ಉರಿಯುವ ದೊಡ್ಡ ದೀಪ, ಹಿಲಾಲು.
ದೀವಸ ಧೈರ್ಯ.
ದೀವಳಿಗೆ (ದ್ಭ) ದೀಪಾವಳಿ (ಸಂ), ದೀಪಗಳನ್ನು ಸಾಲಾಗಿ ಉರಿಸುವ ಒಂದು ಹಬ್ಬ.
ದೀವಿ (ದ್ಭ) ದ್ವೀಪ (ಸಂ), ಕುದುರು, ಪಾರು; ಅವಿೂನ ದೀವಿ ದ್ವೀಪಗಳು.
ದೀವಿಗೆ (ದ್ಭ) ದೀಪಿಕಾ (ಸಂ), ದೀಪ; ದೀವಳಿಗೆ ಹಬ್ಬ.
ದೀವು ದ್ವೀಪ, ಕುದುರು.
ದೀಹ ಬೇಟೆಯ ಲಕ್ಷ್ಯವಾಗಿರಿಸಿದ ಮೃಗ.
ದುಕಾನು ಅಂಗಡಿ, ಮಂಡಿ, ಮಳಿಗೆ.
ದುಕೂಲ (ಸಂ) ದುಗುಲ (ದ್ಭ), ಉಡುವ ನಯವಾದ ರೇಷ್ಮೆ ಬಟ್ಟೆ; ನಯವಾದ ಬಟ್ಟೆ.
ದುಕ್ಕುಡಿ ಎರಡು ಕುಡಿಯುಳ್ಳುದು; ಲಗಾಮು; ಮೂಗುದಾರ, ಮೂಗುದಾಣ.
ದುಗ (ದ್ಭ) ದ್ವಿಕ (ಸಂ), ಎರಡು.
ದುಗುಡ ದುಃಖ, ಚಿಂತೆ, ಉಮ್ಮಳ.
ದುಗುಣ (ದ್ಭ) ದ್ವಿಗುಣ (ಸಂ).
ದುಗುಲ (ದ್ಭ) ದುಕೂಲ (ಸಂ), ರೇಶ್ಮೆಬಟ್ಟೆ; ಬಟ್ಟೆ.
ದುಗ್ಗ (ದ್ಭ) ದುರ್ಗ (ಸಂ), ಬೆಟ್ಟ.
ದುಗ್ಗಾಣಿ ಎರಡು ಕಾಸು, ದಮ್ಮಡಿ.
ದುಗ್ಗಿ (ದ್ಭ) ದುರ್ಗಾ (ಸಂ), ಮಹಾಕಾಳಿ.
ದುಗ್ಗು ಕತ್ತರಿಸಿದ ಹುಲ್ಲು.
ದುಗ್ಗೆ (ದುರ್ಗಾ).
ದುಗ್ಧ ಹಾಲು; ರಸ.
—ಅರ್ಣವ ಕ್ಷೀರಸಾಗರ, ಪಾಲ್ಗಡಲು.
ದುಗ್ಧೆ ಸಂಶಯ, ಅನುಮಾನ; ದ್ವೇಷ; ಅಸೂಯೆ, ಹೊಟ್ಟೆಕಿಚ್ಚು.
ದುಟ್ಟ (ದ್ಭ) ದುಷ್ಟ (ಸಂ), ಕೆಟ್ಟ.
ದುಟ್ಟಗೊರವ ಕೆಟ್ಟ ಗುರು; ಕೆಟ್ಟ ತಪಸ್ವಿ; ಶಿವ.
ದುಡಿ ಶ್ರಮಿಸು; ಕೆಲಸಮಾಡು; ದಣಿ; ಸಂಕಟಪಡು; ಡಮರು, ಒಂದು ಚರ್ಮವಾದ್ಯ.
—ತ ಶ್ರಮ, ದುಡಿದು ಗಳಿಸಿದ್ದು.
—ಮೆ ಶ್ರಮ, ಕೆಲಸ; ಗಳಿಮೆ.
—ಸು ಬೇರೆಯವರನ್ನು ಕೆಲಸಕ್ಕೆ ತೊಡಕಿಸು.
ದುಡುಕ (ದುಡುಕಿ) ಉದ್ಧತ, ಉಢಾಳ; ಧೀರ.
ದುಡುಕು ಉದ್ಧತ ವೃತ್ತಿ; ಅತಿ ಧೂರ್ತತೆ; ಹಿಂದುಮುಂದೆ ನೋಡದೆ ಕೆಲಸಮಾಡುವಿಕೆ; ದುಡುಂಪ್ರವೇಶ.
—ಗಾರ ಉದ್ಧಟ, ಉಢಾಳ; ಮುಂದೊತ್ತಿ ಹೋಗುವವ.
—ತನ ಔದ್ಧತ್ಯ; ಉದ್ಧತೆ.

ದುಡುಂಪ್ರವೇಶ ವಿವೇಚನೆಯಿಲ್ಲದೆ ಕಾರ್ಯಕ್ಕೆ ನುಗ್ಗುವುದು.

ದುಡ್ಡಾಸೆ ಲೋಭ; ದುರಾಸೆ.

ದುಡ್ಡು ಹಣ; ನಾಲ್ಕು ಪೈ; ಮೂರು ಪೈ; ದೊಡ್ಡು; ಕಾಡ್ಕೋಣ.

ದುದ್ದು ಕುಂಬಳ ಮೊದಲಾದ ತರಕಾರಿಗಳೊಳಗಿನ ಜವುಳು ವಸ್ತು.

ದುಪ್ಪಟಿ (ದುಪ್ಪಟೆ), ಎರಡೆರಡು ಹೊದೆವ ಬಟ್ಟೆ ಜೋಡಿಸಿದ್ದು; ಹೊದೆವಸ್ತ್ರ.

ದುಪ್ಪಟ್ಟು ಎರಡು ಪಾಲು, ಇಮ್ಮಡಿ.

ದುಪ್ಪಿ ಚಿತ್ರಾಂಗ ಜಿಂಕೆ; ಗಂಡೆರಳೆ.

ದುಬಾರಿ ಇಮ್ಮಡಿ, ಎರಡಷ್ಟು; ಅತಿಶಯ.

ದುಬಾಸಿ ಎರಡು ಭಾಷೆ ಬಲ್ಲವ.

ದುಬ್ಬ ಡೊಳ್ಳು.

ದುಬ್ಬಿ ಡೊಳ್ಳಿ; ಕಿರಿ ನೀಳ ಬಾಯ ಹೂಜಿ.

ದುಮುಗುಟ್ಟು ಸಿಟ್ಟಿಂದ ಉರಿ.

ದುಮುಕು ಹಾರು; ಮೇಲಿಂದ ಕೆಳಕ್ಕೆ ಚಿಮ್ಮು.

ದುಮ್ಮತಿ (ದ್ಭ) ದುರ್ಮತಿ (ಸಂ), ಹುಚ್ಚು ಬುದ್ಧಿಯವ.

ದುಮ್ಮನ ಸಂಕಟ; ವಿಪತ್ತು.

ದುಮ್ಮಾನ (ಸಂ) ದುರ್ಮಾನ (ಸಂ), ಮನಸ್ಸಿನ ಖೇದ, ಸಂಕಟ.

ದುಯ್ಯಂ ಎರಡನೇ ತರ; ಅಷ್ಟೊಂದು ಉತ್ತಮವಲ್ಲದ; ಗೌಣ; ಎಡ.

ದುರ್ ದುಷ್ಟ; ದುಃಖ; ನಿಂದೆ; ನಿಷೇಧ; ದುರಿ.

ದುರಕ್ಷ (ಅಕ್ಷ=ಜೂಜು) ಕೆಟ್ಟ ಜೂಜು.

ದುರತ್ಯಯ ದಾಟಲು ಅಸಾಧ್ಯವಾದುದು.

ದುರದ ಕೆಟ್ಟ ದಾರಿ, ಕಾಪಥ.

ದುರದೃಷ್ಟ ಕೆಟ್ಟ ಅದೃಷ್ಟ, ದುರ್ಭಾಗ್ಯ; ಪಾಪ.

ದುರಬೀನು (ದುರ್ಬೀನು) ದೂರದ ವಸ್ತುಗಳನ್ನು ನೋಡಲು ಅನುಕೂಲವಾದ ಒಂದು ಸಾಧನ.

ದುರಭಿಪ್ರಾಯ ಕೆಟ್ಟ ಅಭಿಪ್ರಾಯ; ದುರುದ್ದೇಶ.

ದುರಭಿಮಾನ ಕೆಟ್ಟ ಅಭಿಮಾನ, ಒಣಪ್ರತಿಷ್ಠೆ.

ದುರಭ್ಯಾಸ ಕೆಟ್ಟ ಚಾಳಿ, ಕೆಟ್ಟ ಚಟ.

ದುರವಸ್ಥೆ ದುಸ್ಥಿತಿ; ಕೆಡುಕು ಪ್ರಸಂಗ.

ದುರಸ್ತು ಸಮವಾಗಿರುವಿಕೆ; ಸರಿಪಡಿಸುವಿಕೆ; ಹಾಳಾಗದಿರುವಿಕೆ.

ದುರಹಂಕಾರ ಉದ್ಧತೆ; ಒಣಹೆಮ್ಮೆ; ಯೋಗ್ಯತೆ ಇಲ್ಲದ ಹೆಮ್ಮೆ.

ದುರಂಗಿ ಎರಡು ಮೈ ಎರಡು ಬಣ್ಣವಾಗಿರುವುದು; ಎದುರೊಂದು ಹಿಂದೊಂದು.

ದುರಂಜಿ ಸೀತಾಫಲ.

ದುರಂತ ಕೆಟ್ಟ ಕೊನೆಯುಳ್ಳದು; ಮದ್ಯಪಾನ, ಜೂಜು ಮೊದಲಾದ ಕೆಟ್ಟ ಚಾಳಿ; ಅಂತ್ಯ ತಿಳಿಯದುದು; ಗಂಭೀರವಾದುದು; ಕೊನೆಯಿಲ್ಲದುದು; ದುಃಖಾಂತ.

ದುರಾಗ್ರಹ ಒತ್ತಾಯ; ಹಟ; ಕೆಟ್ಟ ಬಲವಂತ.

ದುರಾಚಾರ ಕೆಟ್ಟ ನಡತೆ; ವಿರುದ್ಧಾಚರಣೆ.

ದುರಾತ್ಮ ಕೆಟ್ಟ ಮನಸ್ಸಿನವ, ಕೆಡುಕ.

ದುರಾಲೋಚನೆ ಕೆಟ್ಟ ಯೋಚನೆ; ಅಹಿತ ಚಿಂತನೆ.

ದುರಾಶೆ ಕೆಟ್ಟ ಆಸೆ; ಅಯೋಗ್ಯ ಬಯಕೆ; ನಿರಾಧಾರವಾದ ಬಯಕೆ.

ದುರಾಸದ (ಆಸದ=ಹೊಂದಲ್ಪಡತಕ್ಕುದು) ದುರ್ಗಮ, ಹೊಂದಲಾರದುದು.

ದುರಿಚ್ಛೆ (ದುರಾಶೆ).

ದುರಿತ ನರಕಕ್ಕೆ ಕಾರಣವಾದುದು; ಪಾಪ. —ಹರ ಪಾಪ ಹರಿಸುವ, ಪಾಪನಾಶಕ.

ದುರಿಯೋಧನ (ನೋಡು: ದುರ್ಯೋಧನ).

ದುರುಕ್ತ ಕೆಟ್ಟದಾಗಿ ಹೇಳಲ್ಪಟ್ಟುದು, ಶಾಪ.

ದುರುಕ್ತಿ ಕೆಟ್ಟ ನುಡಿ.

ದುರುಳ ದುಷ್ಟ, ಕೆಟ್ಟ; ಕಪಟ, ಕುಯುಕ್ತಿ.

—ತನ ಕಪಟ; ಕುಯುಕ್ತಿ; ಕೆಡುಕುತನ.
ದುರುಳೆ ದುಷ್ಟೆ, ಕೆಟ್ಟವಳು.
ದುರೂಹ ದುಃಖದಿಂದ ತಿಳಿಯಲ್ಪಡುವುದು; ತಿಳಿಯಲಸಾಧ್ಯವಾದುದು.
ದುರ್ಗ ಕಷ್ಟದಿಂದ ಹೋಗಬಹುದಾದುದು; ಒಬ್ಬ ರಾಕ್ಷಸ; ದುರ್ಗಾ; ಕೋಟೆ, ಕಿಲ್ಲೆ; ದುಃಖಕ್ಕೆ ಕಾರಣವಾದ ಸಂಸಾರ; ಕಾಡು.
ದುರ್ಗತಿ ಹೀನಸ್ಥಿತಿ; ನರಕ; ಬಡತನ.
ದುರ್ಗಮ ಹೋಗಲು ಅಸಾಧ್ಯವಾದುದು.
ದುರ್ಗಂಧ ಕೆಟ್ಟವಾಸನೆ, ನಾತ, ನಾರುವಿಕೆ.
ದುರ್ಗಾ (ದುರ್ಗಿ, ದುರ್ಗೆ) ದುರ್ಗನೆಂಬ ರಾಕ್ಷಸನನ್ನು ಕೊಂದವಳು, ಕಾಳಿ.
ದುರ್ಗುಣ ಕೆಟ್ಟ ಗುಣ.
ದುರ್ಘಟ (ಘಟ=ಹೊಂದು) ಹೊಂದಲಸಾಧ್ಯವಾದುದು.
ದುರ್ಜನ ಕೆಟ್ಟವ, ನೀಚ.
ದುರ್ಜಯ ಜಯಿಸಲಸಾಧ್ಯನಾದವ; ಕಡುವೀರ.
ದುರ್ಜಾತ ಕೆಟ್ಟ ಗಳಿಗೆಯಲ್ಲಿ ಹುಟ್ಟಿದವ; ಅಸುಖಿ; ಸುಖವಿಲ್ಲದವ.
ದುರ್ಣಯ ನೀತಿಗೆಟ್ಟುದು; ಕೆಟ್ಟನೀತಿ.
ದುರ್ದಶೆ ಕೆಟ್ಟಸ್ಥಿತಿ; ವಿಪತ್ತು, ಆಪದ.
ದುರ್ದಾಂತ ಅಡಗಿಸಲು ಕಷ್ಟವಾದುದು; ಅಶಾಂತಿ.
ದುರ್ದಿನ ಕೆಟ್ಟದಿನ; ಮುಗಿಲು ಕವಿದ ಹಗಲು, ಸೂರ್ಯಪ್ರಕಾಶವಿಲ್ಲದ ದಿನ.
ದುರ್ದೆಸೆ ಹೀನಾವಸ್ಥೆ.
ದುರ್ದೈವ ಅದೃಷ್ಟಹೀನತೆ, ದೌರ್ಭಾಗ್ಯ; ಪುಣ್ಯಹೀನತೆ.
ದುರ್ಧರ ಒಂದು ನರಕ; ಒಬ್ಬ ರಾಕ್ಷಸ; ವಿಷ್ಣು; ಕಷ್ಟದಿಂದ ಸಹಿಸಬೇಕಾದ.
ದುರ್ನಡೆ ಕೆಟ್ಟ ಶೀಲ; ಕೆಟ್ಟ ಚಾಳಿ.
ದುರ್ನಿಮಿತ್ತ ಕೆಟ್ಟ ಶಕುನ, ಅಪಶಕುನ.
ದುರ್ನಿವಾರ ಅನಿವಾರ್ಯ.
ದುರ್ನೀತಿ ಕೆಟ್ಟ ನಡೆ; ಅಯುಕ್ತ ವರ್ತನೆ.
ದುರ್ಬಲ ಬಲಹೀನ, ಕ್ಷೀಣ; ಸ್ವಲ್ಪ ಮಾಂಸವುಳ್ಳ; ಅಶಕ್ತ.
ದುರ್ಬೀಜ ಕೆಟ್ಟ ಬೀಜ; ಹೀನ ಕುಲದವ.
ದುರ್ಬೀನು (ದುರಬೀನು), ದೂರದರ್ಶಕ ಯಂತ್ರ.
ದುರ್ಭರ ಸಹಿಸಲು ಅಸಾಧ್ಯವಾದುದು; ಬಹು ಬಲ ಉಳ್ಳದು.
ದುರ್ಭವ ವಿಪನ್ನಾವಸ್ಥೆ; ಕಂಗಾಲ ಸ್ಥಿತಿ.
ದುರ್ಭಾವ ಕೆಟ್ಟ ಮನಸ್ಸು; ವಿರುದ್ಧಭಾವನೆ.
ದುರ್ಭಿಕ್ಷ ಭಿಕ್ಷೆ ದೊರೆಯದ ಕಾಲ; ಬರಗಾಲ, ಕ್ಷಾಮ.
ದುರ್ಮತಿ ಕೆಟ್ಟ ಬುದ್ಧಿಯವ.
ದುರ್ಮರಣ ಆಕಸ್ಮಿಕ ಮರಣ; ಸಹಜವಲ್ಲದ ಯಾವದೇ ಬಗೆಯ ಸಾವು.
ದುರ್ಮಾರ್ಗ ಕೆಟ್ಟ ದಾರಿ.
ದುರ್ಮುಖ ಅಪ್ರಿಯ ಮಾತಾಡುವವ ಒಬ್ಬ ರಾಕ್ಷಸ; ಕುದುರೆ; ಒಂದು ವಿಧದ ಆನೆ.
ದುರ್ಮುಖಿ ಒಂದು ಸಂವತ್ಸರದ ಹೆಸರು.
ದುರ್ಯಶ ಅಪಕೀರ್ತಿ.
ದುರ್ಯೋಧನ ಕುರುಕುಲದ ಧೃತರಾಷ್ಟ್ರನ ಹಿರಿ ಮಗ. ಇವನು ಪರಮ ವೀರನು. ಪಾಂಡವರೊಡನೆ ವೈರ ಸಾಧಿಸಿ ಮಹಾಭಾರತ ಯುದ್ಧಕ್ಕೆ ಕಾರಣನಾದನು.
ದುರ್ಲಕ್ಷಣ ಕೆಟ್ಟ ಚೆಹರೆಯುಳ್ಳ; ಕೆಟ್ಟ ಚಾಳಿ; ಕೆಟ್ಟ ಶಕುನ.
ದುರ್ಲಕ್ಷ್ಯ ಲಕ್ಷ್ಯಕ್ಕೆ ಒಗ್ಗದ; ನೋಡಲು ಕಷ್ಟವಾದ; ಅಲಕ್ಷ್ಯ.
ದುರ್ಲಭ ಕಷ್ಟದಿಂದ ಪಡೆಯುವುದು; ಅಪೂರ್ವವಾದ್ದು.
ದುರ್ವಚನ ಕೆಟ್ಟ ಮಾತು.
ದುರ್ವಾರ್ತೆ ಕೆಟ್ಟ ಸುದ್ದಿ.

ದುರ್ವಾಸ ಅತ್ರಿಋಷಿಯ ಮಗನು. ದತ್ತಾತ್ರೇಯನು ಇವನ ಸೋದರ.
ದುರ್ವಾಸನೆ ನಾತ; ಕೆಟ್ಟ ವಾಸನೆ, ನಾರುವಿಕೆ.
ದುರ್ವಿಧ ಕೆಟ್ಟ ರೀತಿ; ದರಿದ್ರ, ಗರೀಬ, ಬಡವ; ನೀಚ.
ದುರ್ವೃತ್ತಿ ಕೆಟ್ಟ ಉದ್ಯೋಗ, ಹೀನ ಕೆಲಸ.
ದುರ್ವ್ಯಯ ದುಂದುವೆಚ್ಚ, ಮಿತಿಗೆಟ್ಟ ಖರ್ಚು.
ದುರ್ವ್ಯಾಪಾರ ಕೆಟ್ಟ ಕೆಲಸ.
ದುರ್ವ್ಯಾಮೋಹ ಕೆಟ್ಟ ಅಭಿಲಾಷೆ; ಕಾಮ.
ದುರ್ವ್ಯಯ ದುಂದುಗಾರಿಕೆ; ಹಾಳುವೆಚ್ಚ.
ದುಲಿ ಹೆಣ್ಣು ಆವೆ.
ದುರ್ಲ್ಲಕ್ಷಣ ಕವಿತೆಯಲ್ಲಿನ ದೋಷ.
ದುವಂಗುಲ ಎರಡಂಗುಲ; ಮಲ್ಲಯುದ್ಧದ ಒಂದು ರೀತಿ.
ದುವ್ವಾಳಿ ಕುದುರೆಯನ್ನು ತ್ವರೆಯಾಗಿ ನಡೆಸುವುದು; ತ್ವರೆಯಾಗಿ ಮುಂದುವರಿಯುವುದು.
ದುಶ್ಚರಿತ ಕೆಟ್ಟ ಚರಿತೆಯುಳ್ಳವ.
ದುಶ್ಶಕುನ ಅಪಶಕುನ, ಅಶುಭ.
ದುಶ್ಶಲೆ ಧೃತರಾಷ್ಟ್ರನ ಮಗಳು, ಜಯದ್ರಥನ ಹೆಂಡತಿ.
ದುಶ್ಶಾಸನ ಈತ ಧೃತರಾಷ್ಟ್ರನ ಮಗ. ದುರ್ಯೋಧನನ ಸೋದರ. ಈತನು ದ್ರೌಪದಿ ಮಾನಾಪಹರಣೆಗೆ ಮುಂದಾದನು. ಕೊನೆಗೆ ಭೀಮನಿಂದ ಇವನ ವಧೆ ಆಯಿತು.
ದುಶ್ಶೀಲ ಕೆಟ್ಟ ನಡತೆಯವ; ಹೀನ ನಡತೆಯವ.
ದುಶ್ಚೇಷ್ಟೆ ಕೆಟ್ಟ ಚೇಷ್ಟೆ, ಕುಚೇಷ್ಟೆ.
ದುಷ್ಕರ ಮಾಡಲಸಾಧ್ಯವಾದುದು; ಅಪಾಯಕರವಾದುದು.
ದುಷ್ಕವಿ ಕೆಟ್ಟ ಕವಿ, ಕುಕವಿ.
ದುಷ್ಕೃತಿ ಕೆಟ್ಟ ಕೆಲಸ.
ದುಷ್ಕಾಲ (ದುಷ್ಕಾಳ) ಬರಗಾಲ, ಕ್ಷಾಮ; ಕೆಡುಗಾಲ.
ದುಷ್ಕೀರ್ತಿ ಅಪಕೀರ್ತಿ.
ದುಸ್ಕೃತ್ಯ ಕೆಟ್ಟ ಕೆಲಸ.
ದುಷ್ಟ ದುರ್ಜನ, ಕೆಟ್ಟವನ; ಕೆಟ್ಟ, ಹಾಳಾದ; ಪಾಪ; ಸರ್ಪ; ಕುದುರೆ; ಆನೆ ಮದೋದಕ.
—ಗುಣ ಕೆಡುಕು ಬುದ್ಧಿ.
—ತನ ದುರ್ಜಡತೆ; ಪಾಪ.
ದುಷ್ಪತ್ರ ಒಂದು ಸುಗಂಧ ದ್ರವ್ಯ.
ದುಷ್ಟಬುದ್ಧಿ ಕೆಡುಬುದ್ಧಿಯವ, ಕುಂತಳ ರಾಜನ ಒಬ್ಬ ಮಂತ್ರಿ.
ದುಷ್ಪರಿಣಾಮ ಕೆಟ್ಟ ಕೊನೆ; ಕೆಟ್ಟ ಫಲ.
ದುಷ್ಯಂತ ಚಂದ್ರವಂಶದ ಒಬ್ಬ ಅರಸು. ಶಕುಂತಲೆಯನ್ನು ವರಿಸಿ ಹೆಸರಾದವನು. ಈತನು ಕಣ್ವಋಷಿ ಆಶ್ರಮಕ್ಕೆ ಹೋದಾಗ ಅಲ್ಲಿಂದ ಶಕುಂತಲೆಯನ್ನು ಮೋಹಿಸಿ ವರಿಸಿದನು. ಮುಂದೆ ಆಕೆ ಗರ್ಭಿಣಿಯಾಗಿ, ಅವನನ್ನು ಸೇರಲು ಹೋದಾಗ ತಿರಸ್ಕರಿಸಿದನು. ಈ ವಿಷಯವಾದ ಒಂದು ಸುಂದರ ನಾಟಕವನ್ನು ಕಾಳಿದಾಸನು ಬರೆದಿದ್ದಾನೆ.
ದುಸರ ಎರಡನೆಯ; ಎರಡೆಳೆಯ ಮಾಲೆ.
ದುಸ್ತ್ರಮ ಕಗ್ಗತ್ತಲೆ.
ದುಸ್ತರ ಕಷ್ಟದಿಂದ ದಾಟಬಹುದಾದುದು; ಅಸಾಧ್ಯವಾದುದು; ಕಠಿಣ.
ದುಸ್ತು ಉಡುಗೆ; ತೊಡವು.
ದುಸ್ಸಹ ಸಹಿಸಲಸಾಧ್ಯವಾದುದು.
ದುಸ್ಸಂಗ ಕೆಟ್ಟ ಒಲವು; ಕೆಟ್ಟವರ ಗೆಳೆತನ.
ದುಸ್ಸಂಭವ ಆಪದ, ವಿಪತ್ತು.
ದುಸ್ವಭಾವ ಕೆಟ್ಟ ಗುಣ, ಕೆಟ್ಟ ಶೀಲ.
ದುಹತ್ತ (ದ್ಭ) ದ್ವಿಹಸ್ತ (ಸಂ).
ದುಹಿತಾರ (ದ್ಭ) ದುಹಿತೃ (ಸಂ), ಮಗಳು.
ದುಹಿತೆ (ದ್ಭ) ದುಹಿತೃ (ಸಂ), ಮಗಳು.

ದುಃಖ ಪೀಡೆ; ಕಷ್ಟ; ವ್ಯಥೆ, ನೋವು; ಕೊರಗು, ಮನಸ್ಸಿನ ಒಂದು ಕರ್ಮ.

—ಆರ್ತ ದುಃಖಪೀಡಿತನಾದವ.

—ಕರ ಪೀಡೆ ಇಲ್ಲವೆ ಕಷ್ಟ ಉಂಟುಮಾಡುವ.

ದುಃಖಿತ ದುಃಖಿ; ಸಂತಾಪದಲ್ಲಿರುವವ; ಕಷ್ಟದಲ್ಲಿರುವವ.

ದುಃಖಿಸು ದುಃಖಮಾಡು; ಶೋಕಿಸು.

ದುಂಟು ಆನೆಯಾಡು; ಏರುಪೇರು; ಹೆಚ್ಚು ಕಡಮೆ.

ದುಂಡಗೆ ಉರುಟಾಗಿರುವಿಕೆ, ನಯವಾಗಿರುವಿಕೆ; ಸಮವಾಗಿರುವಿಕೆ.

ದುಂಡನೆ (ದುಂಡಗೆ).

ದುಂಡು ಉರುಟು; ಗುಂಡು; ನಯವಾಗಿರುವುದು.

ದುಂಡುಭ ಒಂದು ಹಾವಿನ ಜಾತಿ, ಮಣ್ಣುಮುಕ್ಕ.

ದುಂಡುಮಲ್ಲಿಗೆ ಒಂದು ಜಾತಿ ಉರುಟು ಮಲ್ಲಿಗೆ.

ದುಂದು ಅತಿ ವೆಚ್ಚ; ಅತಿ ಗೊಂದಲ.

—ಕಾರ ಮಿತವರಿಯದ ವೆಚ್ಚಗಾರ.

ದುಂದುಭಿ ನಗಾರಿ; ಪಗಡೆ; ಒಂದು ಸಂವತ್ಸರದ ಹೆಸರು.

ದುಂಪ ಬೇರು.

ದುಂಬಾಳ ತೊಡಕು, ತೊಂದರೆ.

ದುಂಬಿ (ದುಂಬೆ), ಆರಡಿ, ಗುಂಗಿ ಹುಳ, ಭ್ರಮರ; ತುಂಬಿ ಗಿಡ.

ದುಂಬು ಮಳೆ ಹನಿ, ಹನಿ; ನೀರ ಹನಿ, ತುಂತುರು; ಸೋನೆ ಮಳೆ.

ದೂಟು (ದೂಡು), ಹಾರು, ಒಂದು ಕಾಲಿನ ಮೇಲೆ ತಿರುಗು; ಕುಪ್ಪಳಿಸು.

ದೂಡು ತಳ್ಳು, ನೂಕು, ಒತ್ತು; ಬಹಿಷ್ಕರಿಸು.

—ಇಸು ಬಹಿಷ್ಕರಿಸು; ಹೊರನೂಕು.

ದೂತ ಹೇಳಿದ ಸಮಾಚಾರವನ್ನು ಒಯ್ಯುವವ, ಆಳು; ಓಲೆಕಾರ.

—ತನ (ದೂತತ್ವ), ಹೋಗಿ ಹೇಳುವಿಕೆ.

ದೂತಿ ಸಮಾಚಾರವನ್ನು ಒಯ್ಯುವವಳು; ಕುಂಟಣಿ; ಕುಂಟಲಗಿತ್ತಿ.

ದೂತಿಕೆ (ದೂತಿ).

ದೂತ್ಯ (ದೌತ್ಯ) ದೂತನ ಕೆಲಸ; ದೂತನ ಸ್ವಭಾವ; ಸಂದೇಶ; ಸಂದೇಶ ಒಯ್ಯುವ ಉದ್ಯೋಗ.

ದೂದ (ದೂತ).

ದೂದವಿ ದೂತಿ; ತಲೆಹಿಡುಕಿ.

ದೂದಿ (ದ್ಭ) ಬೂರುಗದ ಹತ್ತಿ, ತೂಲ (ಸಂ).

ದೂದು ದೂತ್ಯ, ದೂತನ ಕೆಲಸ.

ದೂನ ಬಳಲಿದ; ಬಹಳ ದುಃಖಪಟ್ಟ; ಸುಟ್ಟ.

ದೂರ ಕಷ್ಟದಿಂದ ಮುಟ್ಟಬೇಕಾದ; ಅವಕಾಶ; ಸಮೀಪವಲ್ಲದ.

—ಸ್ಥ ದೂರ ವಾಸಿಸುವವ.

ದೂರದರ್ಶಿ ದೂರ ಕಾಣಬಲ್ಲವ; ಹದ್ದು.

ದೂರದೃಷ್ಟಿ ದೀರ್ಘ ದೃಷ್ಟಿ; ಮುಂದಾಲೋಚನೆ; ವಿವೇಚನೆ.

ದೂರಿ ಅಚ್ಚುಮರ.

ದೂರಿಸು ವ್ಯಥೆಪಡಿಸು; ವ್ಯಥೆಪಡು, ಅನುತಾಪ ಪಡು.

ದೂರು ಬೈಗಳು; ನಿಂದೆ; ಪುಕಾರು, ಸುದ್ದಿ; ಚಾಡಿ, ತರಲೆ; ಬಯ್ಯು, ನಿಂದಿಸು, ಅಪವಾದ ಹೊರಿಸು; ಹೆಸರಿಡು

ದೂರ್ತ (ದ್ಭ) ಧೂರ್ತ (ಸಂ).

ದೂರ್ವಾಸ (ದುರ್ವಾಸ).

ದೂರ್ವೆ ಒಂದು ಜಾತಿಯ ಹುಲ್ಲು, ಗರಿಕೆ.

ದೂಲ ತೊಲೆ, ಜಂತೆ.

ದೂಲೆ ನವೆ, ತುರಿಕೆ; ಕಾಮ ಬಾಧೆ.

ದೂವಾಳಿಸು ಮುಂದುವರಿಸು; ಹೋಗು.

ದೂವೆ (ದ್ಭ) ಧೂಮ (ಸಂ), ಹೊಗೆ.

ದೂಷಕ ಕೆಡಿಸುವಿಕೆ; ನಿಂದಿಸುವಿಕೆ; ಅವ ಮಾನಿಸುವಿಕೆ; ನಿಂದಕ, ದೂಷಿಸುವವ; ಬಯ್ಯುವವ.

ದೂಷಣ ಖರನೆಂಬ ರಾಕ್ಷಸನ ಸೋದರ; ರಾವಣನ ಮಲತಾಯಿಯ ಮಗ; ನಿಂದೆ, ಅಪವಾದ; ಪಾಪ.

ದೂಷಿಕೆ ಕಣ್ಣುದೂಷಣೆ, ಸುರು, ಕಣ್ಣಿನ ಸೋರು (ಜೋರು), ಪಿಚ್ಚು.

ದೂಷಿಸು ನಿಂದಿಸು, ದೂರು, ಹಳಿ.

ದೂಷ್ಯ ನಿಂದ್ಯ; ವಸ್ತ್ರದಿಂದ ಮಾಡಿದ ಮನೆ, ಡೇರೆ; ತಂಬು.

ದೂಸ ವಸ್ತ್ರ, ಬಟ್ಟೆ, ಅರಿವೆ.

—ಇಗ ಅರಿವೆ ವ್ಯಾಪಾರಿ, ಜವುಳಿಕಾರ.

ದೂಸಣೆ (ದ್ಭ) ದೂಷಣ (ಸಂ), ದೋಷ; ನಿಂದೆ.

ದೂಸರ್ (ದೂಸರು), ನಿಮಿತ್ತ, ಕಾರಣ; ಸ್ವಪಕ್ಷ; ಸ್ವಲಾಭ.

ದೂಸರ ಬೂದುಬಣ್ಣ.

ದೂಸಿಗವಸರ ಜವುಳಿ ಮಳಿಗೆ.

ದೂಹತಿ ದುಷ್ಟ ಕೊಲೆ; ಸ್ತ್ರೀಹತ್ಯ ಮೊದ ಲಾದ ಕೊಲೆ.

ದೂಹತ್ತಿ ಎರಡೂ ಕೈಗಳಿಂದ ಹಿಡಿದು ತಿರು ವುವ ಕತ್ತಿ.

ದೂಳ್ (ದೂಳು), ಧೂಳಿ, ಪುಡಿ.

—ಇಡು ಧೂಳನ್ನು ಎರಚು, ಧೂಳೆಬ್ಬಿಸು; ನಾಶಪಡಿಸು.

ದೂಳಿಪ ದೂಳನ್ನು ಹಾರಿಸುವುದು; ಗಾಲಿ ಗಳ ದೂಳನ್ನು ಹಾರಿಸಲು ತಗಲಿಸುವ ಚರ್ಮದ ತುಂಡು.

ದೂಳಿಸು ಲೇಪಿಸು, ಹಚ್ಚಿಕೊಳ್ಳು.

ದೂಳು (ಧೂಳಿ) ಧೂಲಿ, ದೂಳು, ಪುಡಿ.

ದೂಂಟು(ದೂಡು), ತಳ್ಳು, ನೂಕು, ಹೊರಕ್ಕೆ ಹಾಕು.

ದೃ ಕೊಲ್ಲು; ಒಡೆ, ಹರಿ; ವಿಭಾಗಿಸು; ಪೂ ಜಿಸು; ಸಂಬಂಧಿಸು.

ದೃಕ್ (ದೃಕ್ಕು), ಕಣ್ಣು.

ದೃಕ್ಸಿದ್ಧಾಂತ ಕಣ್ಣಿನ ತೋರಿಕೆಗೆ ಸಾಮ್ಯ ತೋರಿಸುವ ಒಂದು ಸಿದ್ಧಾಂತ; ಒಂದು ಜ್ಯೋತಿಷ ಗ್ರಂಥ.

ದೃಗು ದೃಕ್, ಕಣ್ಣು.

—ಜಲ ಕಣ್ಣೀರು, ಕಂಬನಿ.

ದೃಗ್ಗಣಿತ ಖಗೋಲ ಗಣಿತ.

ದೃಢ ಬಲ; ಅತಿಶಯ; ಬಲವುಳ್ಳ; ಸತ್ಯ; ನಿಶ್ಚಯ, ಖಚಿತ.

—ತೆ ನಿಶ್ಚಯ; ಅತಿಶಯ; ಹಟ.

ದೃಢಚಿತ್ತ ಗಟ್ಟಿ ಮನಸ್ಸು.

ದೃಢಮುಷ್ಟಿ ಬಲವಾಗಿ ಹಿಡಿದ ಮುಷ್ಟಿ ಯವ; ಖಡ್ಗ, ಕತ್ತಿ; ಮುಷ್ಟಿ ಬಿಗಿಯು ಳ್ಳವ, ಲೋಭಿ, ಜಿಪುಣ, ಜೀನ.

ದೃಢಾಯತಿಕೆ ಚಮತ್ಕಾರ.

ದೃಢಾಯ್ಲ ಶಕ್ತಿಯುಕ್ತ, ಬಲಶಾಲಿ.

ದೃಢಾಂಗ ದೇಹದಲ್ಲಿ ಗಟ್ಟಿಮುಟ್ಟಾದವ.

ದೃಢಿಮೆ ದಾರ್ಢ್ಯ; ಗಟ್ಟಿಮುಟ್ಟುತನ.

ದೃಢೀಕರಿಸು ನಿಶ್ಚಯಪಡಿಸು; ಸ್ಥಿರಗೊ ಳಿಸು, ಬಲಪಡಿಸು, ಒತ್ತಿ ಹೇಳು.

ದೃತಿ ತಿದಿ; ತೊಗಲ ಚೀಲ.

ದೃಪ್ತ ಗರ್ವಿತ, ಸೊಕ್ಕಿದ.

ದೃಶ್ ನೋಟ; ವಿಚಾರ; ನೋಡುವವ; ತಿಳಿ ದವ; ಕಣ್ಣು.

ದೃಶ್ಯ ನೋಟ; ನೋಟಕ್ಕೆ ತಕ್ಕುದು; ಸುಂದರ, ಮನೋಹರ.

—ಅದೃಶ್ಯ ಕಾಣುವ ಮತ್ತು ಕಾಣದ.

—ಮಾನ ತೋರಿಕೆಯ, ತೋರಿಕೆ.

ದೃಷ್ಟ ನೋಡಿದ; ಕಂಡ, ತಿಳಿದ; ಪರಿಶೀಲಿ ಸಿದ; ಪ್ರಕಟಿತವಾದ; ಅನುಭವಕ್ಕೆ ಬಂದ.

ದೃಷ್ಟಾಂತ ನೋಡಿದುದರ ಇಲ್ಲವೆ ಪರಿಶೀಲಿ

ಸಿದುದರ ಕೊನೆ, ಫಲ; ಉದಾಹರಣೆ; ಮಾದರಿ; ಶಾಸ್ತ್ರ, ವಿಜ್ಞಾನ; ಸಾವು.

ದೃಷ್ಟಿ ದಿಟ್ಟ (ದ್ಭ), ನೋಟ; ಕಣ್ಣು; ಜ್ಞಾನ; ವಿಚಾರ, ವಿವೇಕ.

—ಸು ನೋಡು; ಪರಿಶೀಲಿಸು.

ದೃಷ್ಟಿಕೋನ ನೋಡುವ ಹಾದಿ, ನೋಡುವ ಬಗೆ.

ದೃಷ್ಟಿಗೋಚರ(ದೃಗ್ಗೋಚರ) ನೋಡಬಲ್ಲುದು; ಪರಿಶೀಲನೆಗೆ ಬಂದುದು.

ದೃಷ್ಟಿದೋಷ ಕಣ್ಣಿನ ಸೋಂಕು; ಕಣ್ಣಿನ ಬೇನೆ; ಚಾಳೀಸು, ಕಣ್ಣಿ.

ದೃಷ್ಟಿಪಥ ನೋಟದ ಹಾದಿ.

ದೃಷ್ಟಿವಿಕ್ಷೇಪ ಓರೆಗಣ್ಣ ನೋಟ, ಕಡೆಗಣ್ಣ ನೋಟ.

ದೃಷ್ಟಿವಿಷ (ದಿಟ್ಟಬಿಸ), ನೋಟದಲ್ಲಿ ವಿಷವುಳ್ಳುದು, ಹಾವು; ಕೆಡುಗಣ್ಣು.

ದೆಕ್ಕಾದೆಕ್ಕ ಸ್ಪರ್ಧೆ; ಹೇವ, ಏರಾಟ; ಹಣಾಹಣಿ ಯುದ್ಧ.

ದೆಕ್ಕಾಯ ಶೌರ್ಯ, ಆಡಂಬರ.

ದೆಕ್ಕಾಳ ಅತಿಶಯ; ದೊಡ್ಡ ಗದ್ದಲ.

—ತನ ಆಧಿಕ್ಯ.

ದೆಬ್ಬೆ ಬಡಿತ, ಪೆಟ್ಟು.

ದೆವ್ವ ಭೂತ, ಸೂಕ್ಷ್ಮಶರೀರಿಯಾದ ಒಂದು ಉಪದ್ರವ ಜೀವಿ.

—ಬರು ಆವೇಶಬರು, ದೆವ್ವ ಬಂದು ಒಬ್ಬನ ಮೂಲಕ ಮಾತಾಡುವುದು, ರಾವು ಆಗು.

ದೆಸೆ (ದ್ಭ) ದಿಶಾ (ಸಂ), ದಿಕ್ಕು; ಅನುಕೂಲ ಸ್ಥಿತಿ, ಅದೃಷ್ಟ.

—ಕೆಡಿಸು ದಿಕ್ಕು ತೋರದಂತೆ ಮಾಡು.

—ಗಾರ ಅದೃಷ್ಟಶಾಲಿ.

—ವಾನ ಅದೃಷ್ಟವಂತ, ದೈವುಳ್ಳವ.

ದೆಸೆಗಂಪು ಎಲ್ಲ ಕಡೆಗೂ ಪಸರಿಸಿದ ವಾಸನೆ.

ದೆಸೆಬಲಿ ದಿಶಾಬಲಿ, ದಿಕ್ಕುಗಳಿಗೆ ಕೊಡುವ ಬಲಿ.

ದೆಸೆವಿದ್ದ ದಿಕ್ಕನ್ನು ತಗುಲಿದ.

ದೇಗುಲ (ದ್ಭ) ದೇವಕುಲ (ಸಂ), ದೇವಸ್ಥಾನ.

ದೇಟು ದಂಟು, ತಾಳು; ಕಾವು.

ದೇಣೆ ಸಲುವ ಹಣ; ವರದಕ್ಷಿಣೆ; ಸಾಲ, ಕಡ.

—ದಾರ ಸಾಲಿಗ; ಹಣ ಸಲಿಸಬೇಕಾದವ.

ದೇದೀಪ್ಯ ಪ್ರಜ್ವಲಿಸುವ, ಬೆಳಗುವ, ಕಾಂತಿಯುತ.

ದೇವ ಪ್ರಕಾಶ ರೂಪುಳ್ಳವ; ಪರಮೇಶ್ವರ; ಅರಸ; ಇಂದ್ರ; ಹುಚ್ಚ.

—ತ್ವ ಸದ್ಗುಣಗಳಿರುವಿಕೆ.

ದೇವಕ ದೇವಕಿಯ ತಂದೆ, ಉಗ್ರಸೇನ ದೊರೆಯ ತಮ್ಮ.

ದೇವಕಣಿಶ ಪಚ್ಚೆ ತೆನೆ.

ದೇವಕಿ ಕೃಷ್ಣನ ತಾಯಿ, ವಸುದೇವನ ಹೆಂಡತಿ

—ತನಯ ದೇವಕಿಯ ಮಗ, ಕೃಷ್ಣ.

—ನಂದನ ದೇವಕಿಯ ಮಗ; ಕೃಷ್ಣ.

ದೇವಕುಲ ದೇವಸ್ಥಾನ, ಗುಡಿ.

ದೇವಕುಸುಮ ಲವಂಗ, ಲವಿ.

ದೇವಖಾತ ಕೆರೆ, ಅಕೃತಕ ಕೊಳ.

ದೇವಗಣ ದೇವತೆಗಳ ಒಂದು ಸಮುದಾಯ; ನಕ್ಷತ್ರಕೂಟ.

ದೇವಗಂಗೆ ಆಕಾಶ ಗಂಗೆ, ದುಗ್ಧಪಥ.

ದೇವಡಿಗ ದೇವರ ಬಳಿಯ ಸೇವಕ; ವಾದ್ಯಕಾರರ ಒಂದು ಜಾತಿ.

ದೇವಡಿತಿ ದೇವತಾಸ್ತ್ರೀ; ದೇವಡಿಗ ಸ್ತ್ರೀ.

ದೇವತರು ದೇವಲೋಕದ ಮರ, ಮಂದಾರ; ಪಾರಿಜಾತ; ಸಂತಾನ; ಕಲ್ಪವೃಕ್ಷ; ಹರಿಚಂದನ.

ದೇವತಾ (ದೇವತೆ), ಅಮರ; ದೇವರು.

ದೇವತಾಂಶ ದೇವರ ಒಂದು ಶಕ್ತಿಯನ್ನು ತಳೆದ; ದೈವೀ; ದೇವರಿಗೆ ಸಲುವ ಭಾಗ.

ದೇವದತ್ತ ಮಾಯಾಸುರನು ಅರ್ಜುನನಿಗೆ ಕೊಟ್ಟ ಒಂದು ದಿವ್ಯ ಶಂಖ; ಬುದ್ಧನ ಸಂಬಂಧಿಯೊಬ್ಬ.
ದೇವದಾಯ ಉಂಬಳಿ, ದೇವಾಲಯಗಳಿಗೆ ಬಿಟ್ಟ ಉತ್ತಾರ.
ದೇವದಾರು ದೇವತೆಗಳಿಗೆ ಪ್ರಿಯವಾದ ಮರ; ಶೀತಪ್ರದೇಶದ ಒಂದು ಮರ.
ದೇವದಾಸಿ ದೇವಾಲಯದ ಪರಿಚಾರಿಕೆ; ಸೂಳೆ, ವೇಶ್ಯೆ, ಪಾತರದವಳು; ಬಸವಿ.
ದೇವದುಂದುಭಿ ದೇವತೆಗಳ ಭೇರಿ; ದೇವ ಲೋಕದ ನಗಾರಿ.
ದೇವದೂತ ದೇವರಿಂದ ಕಳುಹಲ್ಪಟ್ಟವ.
ದೇವದೇವ ದೇವತೆಗಳಿಗೂ ಪೂಜ್ಯನಾದವ; ಶಿವ; ವಿಷ್ಣು.
ದೇವನ ಚಲನೆ; ವ್ಯವಸಾಯ; ಉದ್ಯೋಗ; ಆಟ; ವಿನೋದ; ಜೂಜು; ದುಃಖ, ಗೋಳು; ಲಾವುಗೆ ಹಕ್ಕಿ.
ದೇವನಗರಿ ದೇವನೂರು, ಲಕ್ಷ್ಮೀಶ ಕವಿಯ ಜನ್ಮಸ್ಥಳ; ಅಮರಾವತಿ.
ದೇವಪುರೋಹಿತ ದೇವತೆಗಳಗುರು, ಬೃಹಸ್ಪತಿ.
ದೇವಭೂಮಿ ಪವಿತ್ರ ಸ್ಥಳ; ಸ್ವರ್ಗ.
ದೇವಮಾತೃಕ ದೇವತೆಗಳು ಮಳೆ ಹೊಯ್ದು ಬೆಳೆಸುವುದು.
ದೇವಯಜ್ಞ ಹೋಮ; ದೇವತೆಗಳ ಪೂಜೆ.
ದೇವಯಾನ ದೇವತೆಗಳ ರಥ; ದೇವತೆಗಳ ದಾರಿ; ಅಂತರಿಕ್ಷ.
ದೇವಯಾನಿ ಶುಕ್ರಾಚಾರ್ಯನ ಮಗಳು, ಕಚನು ಇವಳ ಪ್ರಣಯವನ್ನು ನಿರಾಕರಿಸಿದನು. ಬಳಿಕ ಈಕೆ ಚಂದ್ರವಂಶದ ಯಯಾತಿ ರಾಜನ ಹೆಂಡತಿ ಆದಳು.
ದೇವಯುಗ ನಮ್ಮ ನಾಲ್ಕು ಯುಗಕಾಲ.
ದೇವಯೋನಿ ದೇವರಿಂದ ಜನಿಸಿದವರು— ಕಿನ್ನರ, ಗಂಧರ್ವ, ಕಿಂಪುರುಷ, ಅಪ್ಸರ, ನಿಶಾಚರ, ವಿದ್ಯಾಧರ, ಯಕ್ಷ ಮೊದಲಾದವರು.
ದೇವರಥ ತೇರು; ವಿಮಾನ.
ದೇವರಾತ ಅಭಿಮನ್ಯುವಿನ ಮಗ ಪರೀಕ್ಷಿತ.
ದೇವರ್ಷಿ ಋಷಿ ಶ್ರೇಷ್ಠ; ನಾರದ.
ದೇವಲ ದೇವಡಿಗ; ಬ್ರಾಹ್ಮಣ; ದೇವರ ಗುಡಿ.
ದೇವಲೋಕ ಸ್ವರ್ಗ.
ದೇವಸ್ತ್ರೀ ದೇವರ ಮಡದಿ; ಸ್ವರ್ಗದ ಅಪ್ಸರೆ.
ದೇವಸ್ವ ದೇವರ ಸಂಪತ್ತು.
ದೇವಸ್ಥಾನ ದೇವರ ಗುಡಿ, ಮಂದಿರ.
ದೇವಾದ್ರಿ ಮೇರು ಪರ್ವತ.
ದೇವಾಧಿದೇವ ದೇವರದೇವ; ಪರಮೇಶ್ವರ; ವಿಷ್ಣು.
ದೇವಾಪಿ ಚಂದ್ರವಂಶದ ಪ್ರತೀಪನ ಮಗ. ಬಾಲ್ಯದಲ್ಲೆ ಈತನು ಯೋಗಿಯಾದನು.
ದೇವಾರಾಧನೆ ದೇವರ ಪೂಜೆ.
ದೇವಾಲಯ ದೇವಸ್ಥಾನ, ದೇವರ ಗುಡಿ.
ದೇವಾಂಗ ವಸ್ತ್ರಭೇದ, ರೇಶ್ಮೆವಸ್ತ್ರ; ಶ್ರೇಷ್ಠ ವಸ್ತ್ರ; ನೇಕಾರರ ಒಂದು ಜಾತಿ.
ದೇವಾಂಗನೆ ದೇವಸ್ತ್ರೀ, ಅಪ್ಸರೆ.
ದೇವಿ ದುರ್ಗೆ; ಸಿಡುಬು; ರಾಣಿ, ಪಟ್ಟಾಭಿಷಿಕ್ತ ರಾಣಿ; ಬ್ರಾಹ್ಮಣಿ.
ದೇವೇಂದ್ರ ದೇವತೆಗಳೊಡೆಯ, ಇಂದ್ರ.
ದೇವೋದ್ಯಾನ ದೇವತೆಗಳ ತೋಟಗಳಾದ ವೈಭ್ರಾಜ, ಮಿಶ್ರಕ, ಸಿದ್ಧಕಾರಣ, ನಂದನ ವನಗಳು.
ದೇಶ ಸ್ಥಳ; ನಾಡು, ಸೀಮೆ.
—ರೂಪ ದೇಶಕ್ಕನುಗುಣವಾಗಿ.
—ಸ್ಥ ದೇಶದಲ್ಲಿರುವವ, ನಾಡಿಗ; ಬ್ರಾಹ್ಮಣರಲ್ಲಿನ ಒಂದು ಗುಂಪು.
ದೇಶಕಾಲ ಯೋಗ್ಯ ಕಾಲ ಮತ್ತು ಸ್ಥಳ.
ದೇಶಕುಲಕರಣಿ ನಾಡಕರಣಿ, ದೇಶಪಾಂಡೆ.
ದೇಶನ ತೋರಿಸುವಿಕೆ.

ದೇಶಪಾಂಡೆ ಮಹಾರಾಷ್ಟ್ರದ ಆಳಿಕೆಯಲ್ಲಿ ಒಂದೊಂದು ಪ್ರಾಂತದ ನಾಯಕನಾಗಿದ್ದವ; ಪಾಳೆಯಗಾರ.
ದೇಶಬಾಂಧವ ತನ್ನ ದೇಶದವ, ನಾಡಬಂಧು.
ದೇಶಭಾಷೆ ನಾಡಿನ ಜನರ ಮಾತು, ನಾಡ ನುಡಿ.
ದೇಶಭೇದ ದೇಶಗಳ ಪ್ರಕಾರ.
ದೇಶಭ್ರಷ್ಟ ಊರಿಂದ ಹೊರತಳ್ಳಲ್ಪಟ್ಟವನ, ಗಡಿಪಾರಾದವನ.
ದೇಶಮುಖ ಒಂದು ಪರಗಣೆಯ ಮುಖ್ಯಸ್ಥ.
ದೇಶಾಟನ ಊರಿಂದೂರು ಅಲೆಯುವಿಕೆ; ದೇಶಗೇಡಿತನ, ದೇಶಸಂಚಾರ.
ದೇಶಾಭಿಮಾನ ತನ್ನ ನಾಡನ್ನು ಕುರಿತಾದ ಹೆಮ್ಮೆ, ನಾಡಿನ ಪ್ರೀತಿ.
ದೇಶಾಂತರ ಅನ್ಯ ದೇಶ, ಬೇರೆ ದೇಶ.
ದೇಶಾವರ ದೇಶದಿಂದ ದೇಶಕ್ಕೆ ಹೋಗಿ ಭಿಕ್ಷೆ ಎತ್ತುವುದು, ತಿರಿವಿರಿ.
ದೇಶಿ (ದೇಸಿ) ಮಾರ್ಗವಲ್ಲದ; ನಾಡಿನ; ಜನಪದದ.
—ಗ ಪರದೇಶಿ, ಮನೆಯಿಲ್ಲದ ಪರದೇಶಿ.
ದೇಶಿಕ ಮಾರ್ಗಸ್ಥ; ಉಪದೇಶಿ, ಗುರು.
ದೇಶೀಯ ದೇಶಕ್ಕೆ ಸಂಬಂಧಿಸಿದ, ನಾಡಿನ.
ದೇಶ್ಯ (ದೇಶೀಯ), ನಾಡಿನ, ಮುಲಕೀ.
ದೇಸ (ದ್ಭ) ದೇಶ (ಸಂ).
ದೇಸಾಯಿ ಜಿಲ್ಲೆಯ ಮುಖ್ಯಾಧಿಕಾರಿ; ಉತ್ತರ ಕರ್ಣಾಟಕ ಕೆಲವು ಮನೆತನಗಳ ಹೆಸರು; ನಾಡಗೌಡ.
ದೇಸಿ ಚೆಲುವು, ಸೌಂದರ್ಯ; ನುಡಿಕಟ್ಟು; ದೇಶದ ಜನಪದ ರೀತಿ.
—ಕಾರ್ತಿ ಚೆಲುವೆ, ಸುಂದರಿ.
—ಗಾರ ಚೆಲುವ; ಕಲಾವಿದ; ಚಮತ್ಕಾರವುಳ್ಳವ; ಕುಶಲಿ, ನುರಿತವ.
—ಪಡೆ ಸೌಂದರ್ಯಹೊಂದು, ಶೋಭಿಸು.
—ಮಾರ್ಗ ಜಾನಪದ ರೀತಿ; ಅಸಂಸ್ಕೃತ ಬಗೆ, ನಾಡ ನಡೆ.
ದೇಸೆ (ದೇಸಿ), ಸೌಂದರ್ಯ, ಚೆಲುವು.
ದೇಹ ಶರೀರ, (ಸ್ಥೂಲ, ಸೂಕ್ಷ್ಮ ಮತ್ತು ಕಾರಣವೆಂಬ ಮೂರು ವಿಧ); ಲಗ್ನಸ್ಥಾನ (ಜ್ಯೋತಿಷದಲ್ಲಿ).
—ತೆ ಶರೀರದ ಮಮಕಾರ; ದೇಹಿಯಾಗಿರುವಿಕೆ.
—ಬಿಡು ಸಾಯು, ತೀರು.
ದೇಹತ್ಯಾಗ ದೇಹಬಿಡುವುದು; ಸಾವು, ಮರಣ
ದೇಹಧಾರಕ ಶರೀರವನ್ನು ಹೊರುವುದು, ಮೂಳೆ, ಎಲುಬು.
ದೇಹಧಾರಿ ಶರೀರಿ, ಶರೀರಿಯಾದವ.
ದೇಹಭೃತ ಜೀವಾತ್ಮ, ಜೀವ.
ದೇಹಲಿ ಢಿಲ್ಲಿಕಾ, ಡಿಲ್ಲಿ ನಗರ; ಹೊಸ್ತಿಲು.
ದೇಹಾವಸಾನ ದೇಹದ ಅಂತ್ಯ, ಮರಣ.
ದೇಹಾಂತ ದೇಹ ಇರುವ ತನಕ; ಸಾವು, ಶರೀರದ ಕೊನೆ.
ದೇಹಿ ದೇಹವುಳ್ಳವ, ದೇಹವುಳ್ಳುದು, ಪ್ರಾಣಿ.
ದೈತೇಯ ದಿತಿಕುಲದ; ಅಸುರ, ರಕ್ಕಸ.
ದೈತ್ಯ ದಿತಿಯ ಮಕ್ಕಳು; ಅಸುರ, ರಾಕ್ಷಸ.
—ವೈರಿ ರಾಕ್ಷಸವೈರಿ, ವಿಷ್ಣು.
ದೈತ್ಯಗುರು ಶುಕ್ರಾಚಾರ್ಯ; ಶುಕ್ರನಕ್ಷತ್ರ.
ದೈನಂದಿನ ದಿನದಿನದ, ದಿನಂಪ್ರತಿಯ, ಪ್ರತಿನಿತ್ಯದ.
ದೈನ್ಯ ವಿನಯ, ದೀನತೆ; ನಯಭಾವ; ಬಡತನ; ಹೀನಾಯ.
—ವೃತ್ತಿ ಕ್ಷುದ್ರ ವೃತ್ತಿ; ಹೀನ ಸ್ವಭಾವ.
ದೈಯ್ಯ ದೆವ್ವ.
ದೈರ್ಘ್ಯ ಉದ್ದ.
ದೈವ ದೇವರಿಂದ ಬಂದುದು; ದೇವರಿಗೆ ಸಂಬಂಧಿಸಿದ್ದು; ಭಾಗ್ಯ, ಅದೃಷ್ಟ; ಒಂದು ವಿವಾಹ ರೀತಿ.

—ಜ್ಞ ಅದೃಷ್ಟಬಲ್ಲವ, ಜೋಯಿಸ; ಅಕ್ಕಸಾಲಿ, ಸೊನೆಗಾರ.
—ತ ದೇವತೆ, ದೇವಸಂಬಂಧವಾದ.
ದೈವತಂತ್ರ ದೇವರಿಗೆ ಅಧೀನವಾದುದು, ದೈವೇಚ್ಛೆ, ವಿಧಿನಿಯಮ.
ದೈವವಾಣಿ ಆಕಾಶವಾಣಿ, ಅಶರೀರವಾಣಿ.
ದೈವಾಧೀನ ದೇವರನ್ನು ಹೊಂದಿದ; ಮರಣ.
ದೈವಿಕ ದೇವರಿಂದ ಉಂಟಾದ; ಮಾನುಷ್ಯವಲ್ಲದ.
ದೈಹಿಕ ದೇಹಕ್ಕೆ ಸಂಬಂಧಿಸಿದ.
ದೊಗೆ ಕೆರೆ, ಕೆದರು.
ದೊತಾರ ಸಮರ್ಥ, ಬಲಿಷ್ಠ.
—ಇಸು ಗರ್ವಿಸು.
—ತನ ಮೂರ್ಖತನ; ಗರ್ವ, ಹೆಮ್ಮೆ.
ದೊಡ್ಡ ವಿಶಾಲ; ಹಿರಿಯ; ಶ್ರೇಷ್ಠ; ಉನ್ನತ; ಮಹಾ; ಮುಖ್ಯ; ಗಟ್ಟಿಯಾದ.
—ತನ ಸಿರಿವಂತಿಕೆ; ಹಿರಿಮೆ; ಔದಾರ್ಯ; ಉನ್ನತಿ; ವೈಶಾಲ್ಯ; ಪ್ರಾಮುಖ್ಯತೆ, ಘನತೆ.
ದೊಡ್ಡಿ ಕೆಡ್ಡ; ಹಟ್ಟಿಕೊಟ್ಟಿಗೆ; ಯಜಮಾನರಿಲ್ಲದಂಥ ದನಕರುಗಳನ್ನು ಕಟ್ಟುವ ಮನೆ; ಮೂಲದ ಮನೆ.
ದೊಡ್ಡಿತು ದೊಡ್ಡದು; ಔನ್ನತ್ಯ; ಎತ್ತರ; ವಿಪುಲತೆ; ವೈಶಾಲ್ಯ.
ದೊಡ್ಲಿ ದುಡ್ಲೆ, ಕಾಡುನಿಂಬೆ, ಕಾಡುಕಂಚಿ.
ದೊಣೆ ಬತ್ತಳಿಕೆ; ನೀರ ಕೊಳ, ಕುಂಟೆ.
ದೊಣ್ಣೆ ಬಡಿಗೆ, ದಂಡ, ಕೋಲು.
ದೊದ್ದೆ ಅಲ್ಪ, ಬಲಹೀನ; ಗುಂಪು; ದುಂಡು; ಗೊಂದಣ; ಗಜಿಬಿಜಿ ಮಾತು.
—ಕೂಳು ರಾಶಿ ಅನ್ನ.
ದೊನ್ನೆ ಎಲೆಯಿಂದ ಮಾಡಿದ ಪಾತ್ರೆ.
ದೊಪ್ಪನೆ ದೊಪ್ಪೆಂದು ಸದ್ದುಮಾಡಿ.
ದೊಬ್ಬು (ದಬ್ಬು), ನೂಕು, ತಳ್ಳು, ದೂಡು.
ದೊಮ್ಮಲು ಎದೆ.
ದೊಮ್ಮಳಿಸು ಗಾಬರಿಪಡು, ಎದೆಗೆಡು; ಕಕ್ಕಾಬಿಕ್ಕಿಯಾಗು.
ದೊರಕು ಸಿಗು.
—ಇಸು ಪಡೆ, ಹೊಂದು, ತನಗೆ ಸಿಗುವಂತೆ ಮಾಡು.
ದೊರಗು ನಯವಲ್ಲದ, ಒರಟು.
ದೊರೆ (ದ್ಭ) ಧುರ್ಯ (ಸಂ), ಅರಸು; ಮುಖಂಡ, ಒಡೆಯ, ಯಜಮಾನ; ಉತ್ಸವ; ದೊರಕು, ಸಿಗು; ಸಮೀಪಿಸು; ಸಮಾನ.
—ಇಸು ಗಳಿಸು, ಸಂಪಾದಿಸು.
—ಕೊಳ್ ಪ್ರಾಪ್ತವಾಗು, ಸಿಕ್ಕು.
—ತನ ಅರಸುತನ; ಆಳಿಕೆ.
—ತು ಸದೃಶವಾದುದು, ಸಮಾನವಾದ್ದು.
—ಯ ಸಮಾನವಾದ, ಸರಿಯಾದ.
—ಸು ಪ್ರಸಿದ್ಧ; ಸಿಗುವಂತೆ ಮಾಡು.
ದೊಳೆ ಹೆಂಡ ಹುಳಿಯಿಸಲು ಹಾಕುವ ಒಂದು ಮದ್ದು.
ದೊಳ್ಳಾಸ ಕಪಟ, ಠಕ್ಕು, ವಂಚನೆ.
ದೊಳ್ಳು (ಡೊಳ್ಳು), ಬೊಜ್ಜು; ಉಬ್ಬಿದ ಹೊಟ್ಟೆ; ಡೋಲು.
—ಕತ್ತರಿಸು ಛೇದಿಸು, ತುಂಡುಮಾಡು.
—ನೂಕು ಹೊಟ್ಟೆ ಮೇಲಕ್ಕೆ ಬರು, ಹೊಟ್ಟೆಯುಬ್ಬು; ಬೊಜ್ಜುಬರು.
ದೊಂಡೆ ಗಟ್ಟಕಟ್ಟುವುದು; ಗಾತ್ರವಾದುದು; ಗಂಟಲು.
ದೊಂಡೆಗರುಳು ಗಟ್ಟಕಟ್ಟದ ಕರುಳು.
ದೊಂದಣ (ದೊಂದಡಿ), ಅಸ್ಪಷ್ಟ ಮಾತು, ತೊದಲಿಕೆ, ತೊದಲ್ಮಾತು.
ದೊಂದಿ (ದೊಂದೆ), ಬಟ್ಟೆ ಸುತ್ತಿ ಎಣ್ಣೆಯಲ್ಲಿ ಮುಳುಗಿಸಿ ಮಾಡುವ ಪಂಜು, ಕಕ್ಕಡ.
ದೊಂದುಳಿ ಸಮೂಹ, ಗೊಂದಣ, ಜಂಗುಳಿ.
ದೊಂಬ (ಡೊಂಬ) ಗಣೆಯ ಮೇಲೆ ಆಟವಾಡುವವ; ವೇಶ್ಯೆ.

—ರು ದೊಂಬನ ಆಟ, ಕಣ್ಣುಕಟ್ಟು.
ದೊಂಬರ (ಡೊಂಬ).
ದೊಂಬಿ ಜನರ ಕೋಲಾಹಲ; ಗದ್ದಲ; ಜಗಳ; ಹೊಡೆದಾಟ ಬಡಿದಾಟ.
—ಗಾರ ದಾಂಧಲೆ ಎಬ್ಬಿಸುವವ.
ದೊಂಬಿತಿ ಡೊಂಬರವಳು.
ದೋಚು ಸುಲಿ, ಸೂರೆಮಾಡು; ಬಗರು, ಬರಗು, ಬಾಚು.
ದೋಟಿ ಕೊಕ್ಕೆ, ಹಣ್ಣುಹಂಪಲಗಳನ್ನು ಕೊಯ್ಯುವ ಕೊಕ್ಕೆ ಕೋಲು.
ದೋಣ (ದ್ರೋಣ).
ದೋಣಿ (ದ್ಭ) ದ್ರೋಣಿ (ಸಂ), ನೀರು ದಾಟಲು ಮರದಿಂದ ಮಾಡಿದ ಸಾಧನ, ಪಾತಿ, ಡೋಣಿ, ಓಡ.
ದೋಣು ನಗ್ನ, ಬೆತ್ತಲೆ; ಡೊಳ್ಳು, ಬೊಜ್ಜು.
ದೋತರ (ಧೋತ್ರ) ಪಂಚೆ, ಉಡುವ ಬಟ್ಟೆ.
ದೋಬಿ (ಡೋಬಿ), ಅಗಸ, ಮಡಿವಾಳ.
ದೋಮೆ ಸೊಳ್ಳೆ, ಗುಂಗಾಡು.
ದೋರ (ದ್ಭ) ದ್ವಾರ (ಸಂ).
ದೋರಕಾಪುರ (ದ್ಭ) ದ್ವಾರಕಾಪಟ್ಟಣ; ಕೃಷ್ಣನ ರಾಜಧಾನಿ.
ದೋರಸಮುದ್ರ (ದ್ಭ) ದ್ವಾರಸಮುದ್ರ (ಸಂ) ಹೊಯ್ಸಳರ ರಾಜಧಾನಿಯಾಗಿದ್ದ ಊರು, ಈಗಿನ ಹಳೇಬೀಡು.
ದೋರಿಯ ಒಂದು ಬಗೆಯ ಬಟ್ಟೆ.
ದೋರು (ಡೋರು), ರಂಧ್ರ, ತೂತು; ಡೊಗರು; ಹೆಗಲು, ಭುಜ; ಒಡೆದು ಸಿಡಿ.
ದೋರೆ ಬೆಳೆದುದು, ಬಲಿತುದು; ಮೈಯಲ್ಲಿ ಧಾರೆಗಳುಳ್ಳದು; ಗಟ್ಟಿಯಾದುದು.
—ಕಾಯಿ ಬೆಳೆದ ಕಾಯಿ, ಹಣ್ಣಾಗಲು ಸಿದ್ಧವಾದ ಕಾಯಿ.
ದೋರ್ದಂಡ ದಂಡದಂತೆ ಬಲವಾದ ಭುಜ.
ದೋರ್ಬಲ ತೋಳ ಶಕ್ತಿ.
ದೋರ್ಮೂಲ ತೋಳಿನ ಬುಡ, ಕಂಕುಳು.
ದೋಲ ಓಲಾಡುವ; ಉಯ್ಯಾಲೆ, ಜೋಕಾಲೆ.
—ಅಂದೋಲ ಓಲಾಟ; ಚಾಂಚಲ್ಯ; ತಳಮಳ, ಕಲ್ಲೋಲ; ಹೊಯ್ದಾಟ.
ದೋಲಾಯಮಾನ ಉಯ್ಯಾಲೆಯನ್ನು ಹೋಲುವುದು; ಚಂಚಲಿಸುವ; ಚಂಚಲ ಮನಸ್ಸು.
ದೋಲಿ ಮುಚ್ಚಿದ ಪಲ್ಲಕ್ಕಿ.
ದೋಲೆ ಉಯ್ಯಾಲೆ; ಪಲ್ಲಕ್ಕಿ; ನೀಲಿಗಿಡ.
ದೋಷ ದೂಷಣ, ಪಾಪ; ವಾತ, ಪಿತ್ತ, ಕಫ ಎಂಬ ಮೂರು ಶಾರೀರಿಕ ಕಶ್ಮಲಗಳು; ರಾಗ; ಮೋಹ; ಕೊರತೆ; ನ್ಯೂನತೆ, ಕೆಳ ಭಾಗ; ಹುರುಪು.
— ಕರ ಹಾನಿಕರ, ಕೆಡುಕುಳ್ಳ.
—ಕಾರಿ ಹಾನಿಮಾಡುವ, ಉಪದ್ರವಿ.
—ಗ್ರಾಹಿ ದುರ್ಜನ; ಕೊರತೆಗಳನ್ನು ಎಣಿಸುವವ.
—ಜ್ಞ ದೋಷ ತಿಳಿದವ, ಪಂಡಿತ, ವೈದ್ಯ.
ದೋಷತ್ರಯ ವಾತ-ಪಿತ್ತ-ಕಫಗಳೆಂಬ ಮೂರು ಶಾರೀರಿಕ ಕೊರತೆಗಳು.
ದೋಷಾ (ದೋಷೆ), ರಾತ್ರಿ; ಇರುಳು; ಸಂಜೆ.
ದೋಷಾಕರ ರಾತ್ರಿಯನ್ನು ಬೆಳಗಿಸುವವ, ಚಂದ್ರ.
ದೋಷಿ ದೋಷವುಳ್ಳವ, ಪಾಪಿ; ಅಪರಾಧಿ.
ದೋಷೆ (ದೋಷಾ).
ದೋಸ (ದ್ಭ) ದೋಷ (ಸಂ).
ದೋಸೆ ಉದ್ದು ಅಕ್ಕಿಗಳನ್ನು ಕಡೆದು ಕಾವಲಿಯ ಮೇಲೆ ಎರೆದು ಮಾಡುವ ಒಂದು ಬಗೆ ತಿಂಡಿ.
ದೋಸ್ತಿ ಗೆಳೆಯ, ಸ್ನೇಹಿತ; ಸ್ನೇಹ.
—ಗಾರ ಸ್ನೇಹಿತ.
ದೋಹ (ದ್ಭ) ದ್ರೋಹ (ಸಂ), ಕೇಡು; ಪ್ರತೀಕಾರ, ಸೇಡು.

ದೋಹದ (ಹದ=ಹೃದಯ) ಎರಡು ಹೃದಯ ಉಳ್ಳವಳು, ಗರ್ಭಿಣಿ; ಗರ್ಭಿಣಿಯ ಬಯಕೆ.

ದೋಹದವತಿ ಬಯಕೆಯುಳ್ಳ ಬಸಿರಿ.

ದೋಹನ ದಾನ; ಹಾಲು ಇಳುಗುವಿಕೆ, ಕರೆ.

ದೋಹಳ ಬಯಕೆ, ಅಭಿಲಾಷೆ; ಬಸಿರಿಯ ಬಯಕೆ.

ದೋಹಿಲ್ ತುಬ್ಬು; ಸಾರಣೆ; ಬಹಿರಂಗವಾಗುವುದು.

ದೋಳ (ದೋಲ).

ದೋಳು ಡೋಲು, ಡೊಳ್ಳು, ಭೇರಿ.

ದೌತಿ ದವುತಿ; ಮಸಿಕುಡಿಕೆ.

ದೌತ್ಯ ದೂತತ್ವ, ದೂತನ ಕೆಲಸ.

ದೌರಾತ್ಮ್ಯ ಕೆಟ್ಟತನ, ಕೆಟ್ಟ ನಡೆ.

ದೌರ್ಜನ್ಯ ಕೆಟ್ಟ ಶೀಲ.

ದೌರ್ಭಾಗ್ಯ ಕೆಟ್ಟ ಭಾಗ್ಯ, ಅದೃಷ್ಟಹೀನತೆ.

ದೌಲತ್ತು ಸಂಭ್ರಮ; ಸಂಪತ್ತು; ವಿಲಾಸ.

ದೌವಾರಿಕ ದ್ವಾರಪಾಲಕ, ಬಾಗಿಲುಕಾಯುವವ, ಪಹರಿ.

ದೌಷ್ಟ್ಯ ನೀಚತನ; ದುಷ್ಟತನ.

ದೌಹಿತ್ರ ಮಗಳ ಮಗ, ಮೊಮ್ಮಗ.

ದ್ಯು ಅಷ್ಟ ವಸುಗಳಲ್ಲಿ ಒಬ್ಬ; ಈತನು ವಸಿಷ್ಠನ ಶಾಪದಿಂದ ಭೀಷ್ಮನಾಗಿ ಜನಿಸಿದನೆಂದು ಕಥೆ.

ದ್ಯುತ್ ಪ್ರಕಾಶಿಸು, ಹೊಳೆ.

ದ್ಯುತಿ ಪ್ರಕಾಶ, ಕಾಂತಿ; ಶೋಭೆ.

ದ್ಯುನದಿ ಸ್ವರ್ಗದ ಹೊಳೆ, ದೇವಗಂಗೆ, ಆಕಾಶಗಂಗೆ.

ದ್ಯುಮಣಿ ಆಕಾಶದ ರತ್ನ, ಸೂರ್ಯ.

ದ್ಯುಮತ್ಸೇನ ಸಾಲ್ವದೇಶದ ಒಬ್ಬ ಪ್ರಾಚೀನ ದೊರೆ. ಈತನ ಮಗ ಸತ್ಯವಾನನು ಸಾವಿತ್ರಿಯನ್ನು ಲಗ್ನವಾದನು.

ದ್ಯುಮ್ನ ಹಗಲು; ದ್ರವ್ಯ; ಅಧಿಕಾರ; ಬಲ.

ದ್ಯೂತ (ಸಂ) ಜೂಜು (ದ್ಭ), ಜುಗಾರು.

—ಕಾರ ಜೂಜುಗಾರ, ಜುಗಾರಾಡುವವ.

ದ್ಯೋ ಸ್ವರ್ಗ; ಆಕಾಶ.

ದ್ಯೋತ ಪ್ರಕಾಶ; ಬಿಸಿಲು.

—ಇಸು ಬೆಳಗು, ಪ್ರಕಾಶಿಸು.

—ನ ಹೊಳಹು; ತಿಳಿವು; ವಿವರಣ, ನೋಟ.

ದ್ರಮಿಡ (ದ್ರವಿಡ), ದ್ರಾವಿಡ ದೇಶ; ತಮಿಳ.

ದ್ರವ ರಸ; ವೇಗ; ಹರಿವ ಪದಾರ್ಥ.

—ಇಸು ನೀರಾಗು, ಕರಗು; ಕನಿಕರಗೊಳ್ಳು, ಮರುಗು.

—ತ್ವ ರಸರೂಪದ, ನೀರಾಗಿರುವುದು.

ದ್ರವಣ ಆಸ್ತಿ; ಸಂಪತ್ತು; ಚಿನ್ನಬೆಳ್ಳಿ; ಬಲ, ಶಕ್ತಿ.

ದ್ರವಿಡ ದ್ರಾವಿಡದೇಶ; ಈ ದೇಶದ ಜನ.

ದ್ರವಿಣ ದ್ರವ್ಯ; ಬಂಗಾರ; ಪರಾಕ್ರಮ; ಬಲ.

ದ್ರವೀಕರಣ ಕರಗಿಸುವಿಕೆ; ಗಟ್ಟ ಪದಾರ್ಥವನ್ನು ಕರಗಿಸಿ ನೀರುಮಾಡುವುದು.

ದ್ರವ್ಯ ಧನ; ಪದಾರ್ಥ; ಗಂಧ ಮೊದಲಾದ ಮೈಗೆ ಹಚ್ಚುವ ವಸ್ತು; ಅರಗು; ಮದ್ಯ; ಸೆರೆ; ಘನ ಅನಿಲಗಳಲ್ಲದ ರೂಪ.

—ಸ್ಥ ಶ್ರೀಮಂತ, ಧನವಂತ.

ದ್ರವ್ಯಾನುಕೂಲ ಹಣದ ಅನುಕೂಲತೆ.

ದ್ರವ್ಯಾರ್ಜನೆ ಹಣ ಸಂಪಾದನೆ, ಗಳಿಮೆ.

ದ್ರಷ್ಟೃ ಸಾಕ್ಷಿ; ಕಂಠಕ.

ದ್ರಾ ಹರಿ; ಓಡು; ನಿದ್ರೆಮಾಡು.

ದ್ರಾಕ್ಷಿ (ದ್ರಾಕ್ಷೆ), ಒಂದು ವಿಧದ ಹಣ್ಣು.

ದ್ರಾಕ್ಷೆ (ದ್ರಾಕ್ಷಾ).

ದ್ರಾಬೆ ಮೊಂಡ; ಕಚರ; ದುರ್ಬಲ.

ದ್ರಾವಕ ಚಂದ್ರಕಾಂತ ಮಣಿ; ಜಾರ; ಮನಸ್ಸನ್ನು ಕರಗಿಸಬಲ್ಲ; ಒಂದು ರಸ; (ಎಸಿಡ್).

ದ್ರಾವಿಕೆ ಲಾಲಾಜಲ, ಜೊಲ್ಲು.

ದ್ರಾವಿಡ ದ್ರವಿಡದೇಶದ; ಹಿಂದುಸ್ಥಾನದ

ದಕ್ಷಿಣ ಭಾಗದ ಜನರು; ತಿಗುಳ; ಒಂದು ಜನಾಂಗ.

ದ್ರುಣ ಚೇಳು.

ದ್ರುಣಿ ಸರಸ್ವತಿ ಚೇಳು, ಶತಪದಿ; ಹೆಣ್ಣು ಆವೆ, ಬೆಟ್ಟಬೆನಕ.

ದ್ರುತ ತ್ವರೆ, ಅವಸರ; ಒಂದು ತಾಲ ರೀತಿ.

ದ್ರುತವಿಲಂಬಿತ ಬೇಗ ಮತ್ತು ತಡ; ಒಂದು ವೃತ್ತ ಜಾತಿ.

ದ್ರುಪದ ಚಂದ್ರವಂಶಕ್ಕೆ ಸೇರಿದ ಪಾಂಚಾಲ ರಾಜ. ಈತನು ದ್ರೋಣನ ಸಹಪಾಠಿ. ಇವನ ಮಗಳು ದ್ರೌಪದಿ. ಇವಳನ್ನು ಪಾಂಡವರು ಮದುವೆಯಾದರು.

— ಜೆ ದ್ರೌಪದಿ, ಕೃಷ್ಣೆ, ಪಾಂಚಾಲೆ.

ದ್ರುಮ ಮರ; ಶಿಶುಪಾಲನ ಕಡೆಯ ಒಬ್ಬ ರಾಜ; ಕಿಂಪುರುಷಾಚಾರ್ಯ.

ದ್ರುಮಸೇನ ಶಲ್ಯನ ಚಕ್ರರಕ್ಷಕನಾಗಿದ್ದ ಒಬ್ಬ ಕ್ಷತ್ರಿಯ.

ದ್ರೋಣ ಭಾರದ್ವಾಜ ಋಷಿಯ ಮಗ. ಈತನು ಯುದ್ಧವಿದ್ಯೆಯಲ್ಲಿ ನಿಪುಣ. ಈತನು ಅಗ್ನಿವೇಶ ಮುನಿಯ ಶಿಷ್ಯನು. ದ್ರೋಣನೂ ದ್ರುಪದನೂ ಸಹಪಾಠಿಗಳಾಗಿದ್ದರು. ಆದರೆ ಮುಂದೆ ಅರಸನಾದ ದ್ರುಪದನು ತನ್ನನ್ನು ಅಲ್ಲಗಳೆದನೆಂದು ದ್ರೋಣನು ಕೌರವರಲ್ಲಿ ಸೇರಿ, ಪಾಂಡವಕೌರವರ ವಿದ್ಯಾಗುರುವಾದನು. ಬಳಿಕ ಅರ್ಜುನನಿಂದ ದ್ರುಪದನ ಮಾನಖಂಡನ ಮಾಡಿಸಿದನು. ಈತನೂ ಇವನ ಮಗನಾದ ಅಶ್ವತ್ಥಾಮನೂ ಕೌರವಪಕ್ಷಿಗಳಾಗಿ ಕುರುಯುದ್ಧದಲ್ಲಿ ಕಾದಾಡಿದರು. ಮಂಡಕಾಗೆ; ಚೇಳು; ಒಂದು ಮರ; ಒಂದು ಬಗೆಯ ಕೆರೆ; ಪರ್ವತ; ದೋಣಿ; ದೊನ್ನೆ.

ದ್ರೋಣಕಾಕ ಕಾಡುಕಾಗೆ, ಮೊಂಡಕಾಗೆ.

ದ್ರೋಣಿ ಒಂದು ದೇಶ, ಒಂದು ನದಿ; ದೋಣಿ.

ದ್ರೋಹ ಹಾನಿ; ಅಸೂಯೆ; ಮೋಸ; ಅಪಕಾರ; ದಂಗೆ, ಬಂಡು.

ದ್ರೋಹಿ ವಂಚಕ; ಅಪಕಾರಿ; ಹಿಂಸಕ; ಎರಡು ಬಗೆಯುವವ.

ದ್ರೌಣಿ ದ್ರೋಣನ ಮಗ, ಅಶ್ವತ್ಥಾಮ.

ದ್ರೌಪದಿ ದ್ರುಪದರಾಯನ ಮಗಳು. ಈಕೆಯು ಪಾಂಡವರೈವರನ್ನು ವರಿಸಿದಳು. ದ್ರುಪದರಾಯನು ನಡೆಸಿದ ಸ್ವಯಂವರಕ್ಕೆ ಕೌರವಾದಿ ಅರಸರು ಬಂದಿದ್ದರು. ಆಗ ವನವಾಸಿಗಳಾಗಿದ್ದ ಪಾಂಡವರೂ ಬಂದರು. ಬ್ರಾಹ್ಮಣ ವೇಷದಲ್ಲಿದ್ದ ಅವರಲ್ಲಿ ಅರ್ಜುನನು ಮತ್ಸ್ಯಲಾಂಛನವನ್ನು ಕತ್ತರಿಸಿ, ಅವಳಿಗೆ ತಕ್ಕ ವರನೆನಿಸುವನು. ಭಾರತದ ಕಥೆಯುದ್ದಕ್ಕೆ ಈ ವೀರನಾರಿಯ ಕೆಚ್ಚು ಕಾಣಿಸುವುದು.

ದ್ವಯ ಎರಡು.

ದ್ವಂದ್ವ ಎರಡೆರಡರ ಜತೆ; ಕಲಹ; ಸಂಭೋಗ; ವಿವಾದ; ಒಂದು ಸಮಾನ ರೀತಿ.

— ಚರ ಜತೆಯಾಗಿರುವುದು, ಚಕ್ರವಾಕ.

— ಯುದ್ಧ ಇಬ್ಬರೇ ಮಾಡುವ ಕಾಳಗ.

ದ್ವಾದಶ ಹನ್ನೆರಡು.

ದ್ವಾದಶಕರ ಹನ್ನೆರಡು ಕೈಯುವ, ಕಾರ್ತಿಕೇಯ, ಷಣ್ಮುಖ; ಸೂರ್ಯ.

ದ್ವಾದಶಿ ಪಕ್ಷದ ಹನ್ನೆರಡನೆಯ ದಿನ.

ದ್ವಾಪರ ಮೂರನೆಯ ಯುಗ; ಸದಭಿಮಾನಿಯಾದ ಅಸುರನು; ಸಂಶಯ; ಕದನ.

ದ್ವಾರ ಬಾಗಿಲು; ಹೆಬ್ಬಾಗಿಲು, ಅಗಸೆ; ರೀತಿ, ಬಗೆ; ಮೂಲಕ, ಮುಖಾಂತರ.

ದ್ವಾರಕಾ ದ್ವಾರಾವತೀ. ಇದು ಗುಜರಾತಿನಲ್ಲಿನ ಪ್ರಾಚೀನ ಪಟ್ಟಣ. ಹಿಂದೆ ಇದು ಶ್ರೀಕೃಷ್ಣನ ರಾಜಧಾನಿಯೆಂದು ಹೆಸರಾಗಿತ್ತು.

ದ್ವಾರಪಾಲ ಬಾಗಿಲು ಕಾಯುವವ.

ದ್ವಾರಾ ಮೂಲಕ, ಮುಖಾಂತರ.
ದ್ವಾರಾವತಿ (ದ್ವಾರಕಾ).
ದ್ವಿಕಕುದ ಎರಡು ಭುಜವುಳ್ಳದು, ಒಂಟೆ.
ದ್ವಿಕರ್ಮಕ ಎರಡೆರಡು ಕರ್ಮವುಳ್ಳದು, ಕ್ರಿಯಾಪದದ ಒಂದು ಜಾತಿ.
ದ್ವಿಗುಣ ದುಗುಣ, ಎರಡಷ್ಟು, ಇಮ್ಮಡಿ.
—ಇಸು ಇಮ್ಮಡಿಯಾಗು, ಇಮ್ಮಡಿಸು.
ದ್ವಿಗುಣಿತ ಎರಡು ಪಾಲಾದ; ಎರಡಷ್ಟು ಹೆಚ್ಚಿದ.
ದ್ವಿಜ ಎರಡು ಸಲ ಹುಟ್ಟಿದವ, ಬ್ರಾಹ್ಮಣ; ಕ್ಷತ್ರಿಯ; ವೈಶ್ಯ; ಹುಲ್ಲು; ಪಕ್ಷಿ; ತುಂಬುರು ಮರ.
—ತ್ವ ಬ್ರಾಹ್ಮಣಿಕೆ.
—ರಾಜ ಚಂದ್ರ; ಅನಂತ, ಶೇಷ; ಗರುಡ.
ದ್ವಿಜಾತ ಎರಡು ಬಾರಿ ಹುಟ್ಟಿದವ-ಬ್ರಾಹ್ಮಣ; ಕ್ಷತ್ರಿಯ; ವೈಶ್ಯ.
ದ್ವಿಜಿಹ್ವ ಎರಡು ನಾಲಗೆಯುಳ್ಳದು, ಸರ್ಪ; ನೀಚ; ಕಳ್ಳ; ಮಾತಿಲ್ಲದವ.
ದ್ವಿಟ್ (ದ್ವಿಟ್ಟು) ಹಗೆ.
ದ್ವಿತೀಯ ಎರಡನೆಯ.
ದ್ವಿತ್ವ ದುಬಾರೆ; ದಂಪತಿ; ದ್ವಂದ್ವ; ಒತ್ತಕ್ಷರ.
ದ್ವಿಧಾ ಎರಡು ರೀತಿ, ಎರಡು ಪ್ರಕಾರ.
ದ್ವಿಪ (ಪ=ಕುಡಿ) ಎರಡು ಸಾರಿ ಕುಡಿಯುವುದು, ಆನೆ.
ದ್ವಿಪದ ಎರಡು ಪಾದವುಳ್ಳವ; ಮನುಷ್ಯ; ದೇವತೆ; ಪಕ್ಷಿ; ರಾಕ್ಷಸ.
ದ್ವಿಪದಿ ಎರಡು ಚರಣಗಳ ಒಂದು ಪದ್ಯ ಜಾತಿ
ದ್ವಿಪ್ರತಿ ನಕಲು, ಎರಡನೆ ಪ್ರತಿ.
ದ್ವಿಭಾಷಿ ಎರಡು ಭಾಷೆ ಬಲ್ಲವ.
ದ್ವಿಮಾತೃಕ ಎರಡು ತಾಯಂದಿರುಳ್ಳವ, ಗಣಪತಿ; ಜರಾಸಂಧ.
ದ್ವಿಮುಖ ಇತ್ತಲೆಗ, ಇಮ್ಮಂಡೆ ಹಾವು.
ದ್ವಿರದ (ರದ=ಹಲ್ಲು) ಆನೆ.
ದ್ವಿರುಕ್ತಿ ಎರಡು ಸಾರಿ ಹೇಳಲ್ಪಟ್ಟ ಮಾತು.
ದ್ವಿರೂಢಾ (ಊಢಾ=ಮದುವೆಯಾದವಳು), ಎರಡು ಮದುವೆಯಾದವಳು; ಉಡಿಕೆಯಾದವಳು.
ದ್ವಿವಚನ ಎರಡು ಸಂಖ್ಯೆಯನ್ನು ಹೇಳುವ ಮಾತು. (ಉದಾ: ಕುಶಲವ, ಮೃಗಪಕ್ಷಿ.)
ದ್ವಿಶಫ ಎರಡು ಗೊರಸುಳ್ಳದು, ಸೀಳು ಗೊರಸುಳ್ಳ ಪ್ರಾಣಿ, ಎತ್ತು ಮೊದಲಾದ್ದು.
ದ್ವಿಸಪ್ತ ಹದಿನಾಲ್ಕು.
ದ್ವಿಹಸ್ತ ಎರಡು ಕೈಗಳು.
ದ್ವಿಹೃದಯೆ ಎರಡು ಹೃದಯವುಳ್ಳವಳು; ಗರ್ಭಿಣಿ, ಬಸುರಿ.
ದ್ವೀಪ ನಡುಗಡ್ಡೆ, ಪಾರು, ಕುದುರು, ಸುತ್ತಲೂ ನೀರಿರುವ ನೆಲ, ಕುರುವ.
ದ್ವೀಪಕಲ್ಪ ದ್ವೀಪಗಳ ಸಮುದಾಯ.
ದ್ವೀಪವತಿ ದ್ವೀಪವುಳ್ಳದು; ನದಿ, ಸಮುದ್ರ.
ದ್ವೀಪಿ ಎರಡು ಬಣ್ಣ ಉಳ್ಳದು, ಹುಲಿ.
ದ್ವೇಷ ವೈರ, ಹಗೆ.
—ಣ ಹಗೆತನ.
ದ್ವೇಷಿ ವೈರಿ, ಹಗೆ.
—ಇಸು ಹಗೆತೋರು, ವೈರ ಸಾಧಿಸು.
ದ್ವೈತ ಎರಡು ಭೇದ ಉಳ್ಳದು; ತಾನು ಬೇರೆ ದೇವರು ಬೇರೆ ಎಂಬ ಭಕ್ತಿಪಂಥದವರ ತತ್ವಜ್ಞಾನ.
ದ್ವೈಧ ಎರಡು ರೀತಿ.
ದ್ವೈಧೀಭಾವ ಎರಡು ಭಾವನೆ; ಒಡಕು.
ದ್ವೈಪಾಯನ ಯಮುನಾ ನದಿಯ ಒಂದು ನಡುಗಡ್ಡೆಯಲ್ಲಿ ಪರಾಶರ ಮುನಿಗೆ ಮತ್ಸ್ಯಗಂಧಿನಿ ಎಂಬ ಬೆಸ್ತರವಳಲ್ಲಿ ಹುಟ್ಟಿದ ಮಗನು. ಈತನು ಹಲವು ಪುರಾಣಗಳನ್ನೂ ಭಾರತವನ್ನೂ ಬರೆದನು. ವ್ಯಾಸ, ಬಾದರಾಯಣ ಎನ್ನುವುದೂ ಇವನನ್ನೆ.
ದ್ವೈಮಾತೃಕ ಗಣೇಶ, ವಿನಾಯಕ.

# ಧ

ಧಕ್ಕಾಮುಕ್ಕಿ (ದಕ್ಕಾಮುಕ್ಕಿ), ಬಡಿದಾಟ; ತಾರ್ಕಲಾಟ.
ಧಕ್ಕು ಅಧ್ಗಣಿ, ಕಮ್ಮಾರನ ಅಡಿಗಲ್ಲು.
ಧಗ ಉರಿ, ಬೆಂಕಿ; ಹೊಳಹು; ಸೆಕೆ; ಬೇಗೆ.
—ಧಗಿಸು ಉರಿ.
ಧಟಿ ನಾರು, ನಾರುಮಡಿ; ಕೌಪೀನ; ಶಿವ.
ಧಟಿನಿ ಕಾಚಾ, ಕಿರು ಪಂಚೆ, ಗುದ್ದಿಕೈಪ.
ಧಣ್ ಶಬ್ದಮಾಡು.
ಧಣಿ ಭಾಪು, ಶಹಬಾಸ್; ಕೊಂಡಾಟದ ನುಡಿ.
ಧಣು ಧಣುವಟ್ಟೆಮಲ್ಲಯುದ್ಧದ ಒಂದುಬಗೆ.
ಧತ್ತೂರ ಉಮ್ಮತ್ತದ ಗಿಡ, ಮದ್ದುಗುಣಿಕೆ.
ಧನ (ಸಂ) ದನ (ದ್ಭ), ದ್ರವ್ಯ, ಸಂಪತ್ತು, ಹಣ.
—ಆಢ್ಯ ಶ್ರೀಮಂತ.
—ವಂತ ಶ್ರೀಮಂತ.
ಧನಗಾವಿ ಹಾವು; ಉರಗ.
ಧನದ ದ್ರವ್ಯರಕ್ಷಕ; ಕುಬೇರ.
—ಅನುಜ ಕುಬೇರನ ತಮ್ಮ, ರಾವಣ.
ಧನಧವ ಕುಬೇರ.
ಧನಂಜಯು ದ್ರವ್ಯವನ್ನು ಜಯಿಸಿದವ, ಅರ್ಜುನ; ಅಗ್ನಿ; ಪ್ರಾಣಾಧಾರವಾದ ಒಂದು ಸತ್ವ.
ಧನಾಯೆ ಧನಾಪೇಕ್ಷೆ, ಸಂಪತ್ತಿನ ಆಸೆ.
ಧನಾಸಿ (ಧನ್ಯಾಸಿ).
ಧನಿಕ ಧನಿಷ್ಠ, ಶ್ರೀಮಂತ, ಐಶ್ವರ್ಯವಂತ.
ಧನಿಷ್ಠಾ ಅತಿ ದೊಡ್ಡ ಶ್ರೀಮಂತೆ; ಒಂದು ನಕ್ಷತ್ರ ರಾಶಿ.
ಧನುರ್ಧರ ಬಿಲ್ಲು ಹಿಡಿದವ, ಬಿಲ್ಲುಗಾರ.
ಧನುರ್ಧಾರಿ ಬಿಲ್ಲು ಹಿಡಿದವ; ಬಿಲ್ಲುಗಾರ.
ಧನುರ್ಬಾಣ ಬಿಲ್ಲುಬಾಣ.
ಧನುರ್ವಾತ ಧನುರ್ವಾಯು, ಮೈಯನ್ನು ಬಿಲ್ಲಿನಂತೆ ಬಾಗಿಸುವ ಒಂದು ವಾತರೋಗ.
ಧನುರ್ವೇದ ಯಜುರ್ವೇದದ ಒಂದು ಉಪವೇದ; ಇದರಲ್ಲಿ ಬಿಲ್ವಿದ್ಯೆಯನ್ನು ವಿವರಿಸಿದೆ.
ಧನುಸ್ ಬಿಲ್ಲು; ಮೇಷದಿಂದ ಒಂಭತ್ತನೆಯ ರಾಶಿ.
ಧನುಃ ಬಿಲ್ಲು (ಧನುಸ್ಸು).
—ಕೋಟಿ (ಧನುಷ್ಕೋಟಿ), ಬಿಲ್ಲಿನ ತುದಿ; ರಾಮೇಶ್ವರದ ಬಳಿಯ ಕಡಲತೀರ.
—ಗುಣ (ದನುರ್ಗುಣ), ಬಿಲ್ಲಿನ ಹೆದೆ.
ಧನ್ಯ ಯೋಗ್ಯ; ಕೃತಾರ್ಥ; ಪುಣ್ಯವಂತ; ಅದೃಷ್ಟಶೀಲ.
—ತೆ ಕೃತಾರ್ಥನಾಗುವುದು; ಪುಣ್ಯ.
ಧನ್ಯಾಸಿ (ಧನಾಸಿ), ಒಂದು ರಾಗದ ಹೆಸರು.
ಧನ್ವ ಬಿಲ್ಲು; ಮರುಳುಗಾಡು.
ಧನ್ವನ್ ಬಿಲ್ಲಾಳು; ಮರುಭೂಮಿ; ವೈದ್ಯ ಶಾಸ್ತ್ರ.
ಧನ್ವಂತರಿ ವೈದ್ಯಶಾಸ್ತ್ರದ ಕೊನೆಮುಟ್ಟಿದವ; ಸ್ವರ್ಗಲೋಕದ ಒಬ್ಬ ವೈದ್ಯ; ದಿವೋದಾಸನೆಂಬ ಕಾಶಿಯ ರಾಜ; ವಿಕ್ರಮಾದಿತ್ಯನ ಸಭಾಪಂಡಿತ.
ಧಬಧಬೆ ಜೋಗು, ಜಲಪಾತ, ತಡಸಲು.
ಧಮನಿ ರಕ್ತನಾಳ; ಸಪುರ ನಳಿಗೆ; ಕೊಳವಿ; ಒಂದು ಪರಿಮಳ ದ್ರವ್ಯ.
ಧಮ್ಮಿಲ್ಲ ಕೂದಲ ಗಂಟು, ಮುಡಿ, ತುರುಬು.
ಧರ ಪರ್ವತ; ವಸುಗಳಲ್ಲಿ ಒಬ್ಬ; ಹತ್ತಿನೂಲು; ಹಿಡಿದವ; ಇರಿಸಿದವ; ಕಾಯುವವ.
ಧರಣ ರೂಪಾಯಿ; ಗುಣ; ಸೂರ್ಯ; ವ್ರತದಂತೆ ಹಟ ತೊಡುವಿಕೆ; ದಂಡೆ; ಒಡ್ಡು, ಒಂಡೆ, ಅಣೆಕಟ್ಟು.
ಧರಣಿ (ಧರಣೀ) ಭೂಮಿ; ಮಣ್ಣು; ಬಿಂದು.
—ಈಶ ಅರಸ.
—ಜೆ ಭೂಮಿಯ ಮಗಳು, ಸೀತೆ.

—ಪ ಭೂಮಿಯ ಒಡೆಯ, ಅರಸ.
—ವರ ಅರಸ.
—ಸುತೆ ಭೂಸುತೆ, ಜಾನಕಿ.
—ಸುರ ಭೂಮಿಯಲ್ಲಿ ದೇವರಂತೆ ವಂದ್ಯನಾದವ, ಬ್ರಾಹ್ಮಣ.
ಧರಣೀತಲ ಭೂತಲ.
ಧರಣೀಧರ ಭೂಮಿಯನ್ನು ಧರಿಸಿದ್ದು; ಪರ್ವತ; ವಿಷ್ಣು; ಕೂರ್ಮಾವತಾರ.
ಧರಣೀಂದ್ರ ಮಹಾಶೇಷ, ಅನಂತ.
ಧರಧುರ ಆಧಿಕ್ಯ, ಅತಿಶಯ, ಹೆಚ್ಚುಗೆ.
ಧರಾ ಭೂಮಿ.
ಧರಾಧರ ಪರ್ವತ; ವಿಷ್ಣು.
ಧರಿತ್ರೀ ಭೂಮಿ, ಧರಣಿ.
—ಜಾತ ಮರ; ಕುಜ; ಮನುಷ್ಯ.
—ಪಾಲ ರಾಜ.
ಧರೆ (ಧರಾ).
ಧರ್ಮ ಶ್ರುತಿ (ವೇದ), ಸ್ಮೃತಿ(ಧರ್ಮಶಾಸ್ತ್ರ) ಗಳಲ್ಲಿ ಹೇಳಲ್ಪಟ್ಟ ಕರ್ಮ; ಆಚಾರ; ಸ್ವಭಾವ; ಯಜ್ಞಾದಿಕರ್ಮಗಳು; ಯಮ; ಜ್ಯೋತಿಷದಲ್ಲಿ ಲಗ್ನಕ್ಕೆ ಒಂಭತ್ತನೆಯ ಸ್ಥಾನ; ದಾನ; ಯುಧಿಷ್ಠಿರ; ಕರ್ತವ್ಯ.
ಧರ್ಮಕಾರ್ಯ ಒಳ್ಳೆಯಕೆಲಸ;ಶಾಸ್ತ್ರೋಕ್ತ ವಿಧಿಗಳನ್ನು ಮಾಡುವುದು.
ಧರ್ಮಕ್ಷೇತ್ರ ಪುಣ್ಯಭೂಮಿ; ಕುರುಕ್ಷೇತ್ರ.
ಧರ್ಮಚಾರಿಣಿ ದಾಂಪತ್ಯ ಧರ್ಮ ನಡೆಸುವವಳು, ಹೆಂಡತಿ, ಪತ್ನಿ.
ಧರ್ಮಜ ಯುಧಿಷ್ಠಿರ, ಧರ್ಮರಾಯ.
ಧರ್ಮದ್ರೋಹ ಧರ್ಮಕಾರ್ಯಗಳಿಗೆ ವಿಘ್ನ ತರುವುದು.
ಧರ್ಮನಿಷ್ಠೆ ಧರ್ಮದಲ್ಲಿ ಆಸಕ್ತಿ.
ಧರ್ಮಪತ್ನಿ ಶಾಸ್ತ್ರವಿಧಿಯಿಂದ ಮದುವೆಯಾದ ಹೆಂಡತಿ.
ಧರ್ಮರಾಜ (ಧರ್ಮರಾಯ), ಯುಧಿಷ್ಠಿರ; ಕುಂತಿಯ ಮಗ. ಈತನು ಪಾಂಡವರಲ್ಲಿ ಹಿರಿಯ.
ಧರ್ಮಶಾಲೆ ಛತ್ರ; ಪಯಣಿಗರಿಗಾಗಿ ಕಟ್ಟಿದ ಉಳಿದುಕೊಳ್ಳುವ ಮನೆ; ಧರ್ಮಾರ್ಥ ಶಿಕ್ಷಣ ಕೊಡುವ ಸ್ಥಳ.
ಧರ್ಮಶಾಸ್ತ್ರ ಹಿಂದೂ ಧರ್ಮದ ಕೆಲವು ಆಚಾರ ಗ್ರಂಥಗಳು; ಮನು ಮೊದಲಾದವರಿಂದ ಬರೆಯಲ್ಪಟ್ಟ ಗ್ರಂಥಗಳು.
ಧರ್ಮಸಂಕಟ ಉಭಯ ಸಂಕಟ; ಧರ್ಮದಂತೆ ಆಚರಿಸಲು ಬಾರದು, ಆಚರಿಸದಿರಲು ಆಗದು—ಇಂತಹ ತೊಡಕು.
ಧರ್ಮಾಧಿಕಾರಿ ಮಠ ದೇವಾಲಯಗಳಲ್ಲಿನ ಒಬ್ಬ ನೌಕರ.
ಧರ್ಮಾಸನ ನ್ಯಾಯಪೀಠ.
ಧರ್ಮಿ (ಧರ್ಮಿಷ್ಠ), ಧರ್ಮಕ್ಕೆ ಸಮನಾಗಿ ನರ್ತಿಸುವವ; ದಾನಿ.
ಧರ್ಷ ಧೈರ್ಯ; ಔದ್ಧತ್ಯ; ಸೊಕ್ಕು; ನಪುಂಸಕ.
ಧರ್ಷಣೆ ತಿರಸ್ಕಾರ; ಉದ್ಧತ ನಡೆ, ಸೊಕ್ಕಿನ ನಡೆ; ಹಾದರಗಿತ್ತಿ.
ಧವ ಪತಿ, ಗಂಡ; ಯಜಮಾನ; ಉಳ್ಳವ.
ಧವಲ ಬಿಳುಪು; ಸುಂದರ; ಉತ್ತಮ ಎತ್ತು; ಕರ್ಪೂರ; ಒಂದು ಜೈನ ಗ್ರಂಥ.
—ತೆ ಬಿಳುಪು; ಧವಳಿಮ.
ಧವಲಗಿರಿ ಹಿಮಾಲಯದ ಒಂದು ಶಿಖರ.
ಧವಲಪಕ್ಷ ಹಂಸ; ಶುಕ್ಲಪಕ್ಷ.
ಧವಲಾಗಾರ ಅರಮನೆ; ಸುಣ್ಣಬಳಿದ ಮನೆ.
ಧವಲಿತ ಬಿಳುಪಾದ.
ಧವಲಿಮೆ ಬಿಳಿ ಬಣ್ಣ, ಬಿಳಿದಾಗಿರುವುದು.
ಧವಲೆ ಬಿಳುಪಾದ ದನ.
ಧವಳ (ಧವಲ).
ಧವಿತ್ರ ಬೀಸಣಿಗೆ; ಪಂಕ.
ಧಳಂಕೃತ ಡೋಲಿನ ಧನಿ.

ಧಾಟಿ (ಸಂ) ಧಾಳಿ (ದ್ಭ); ರೀತಿ, ಹಾಡಿನ ಬಗೆ; ಸರಣಿ, ಶೈಲಿ; ವೇಗ.
ಧಾತ (ದ್ಭ) ಧಾತೃ (ಸಂ), ಬ್ರಹ್ಮ.
ಧಾತಾರ ಚತುರ್ಮುಖ ಬ್ರಹ್ಮ.
ಧಾತು ವಾತ, ಪಿತ್ಥ, ಕಫ; ರಕ್ತ, ಮಾಂಸ; ಮೇದ; ಅಸ್ಥಿ; ಮಜ್ಜ; ವೀರ್ಯ; ಯಾವುದೇ ಮೂಲ ಲೋಹ ಇಲ್ಲವೆ ಲೋಹೇತರ ವಸ್ತು; ಕ್ರಿಯಾಪದದ ಮೂಲರೂಪ.
—ಕುಂದು ಶಕ್ತಿ ಹೀನವಾಗು.
—ಕೆಡು ಶಕ್ತಿ ಹೀನವಾಗು; ಧೈರ್ಯ ಗೆಡು.
ಧಾತ್ರೀ ಭೂಮಿ; ದಾದಿ (ದ್ಭ), ಸಾಕುತಾಯಿ; ಒಂದು ಪದ್ಯರೀತಿ.
ಧಾತ್ರೀಫಲ ನೆಲ್ಲಿಕಾಯಿ, ಆಮಲಕ.
ಧಾನ ಹಿಡಿಯುವಿಕೆ; ಇರಿಸುವಿಕೆ; ಆದರಿಸುವಿಕೆ.
ಧಾನ್ಯ ಧನಕ್ಕೆ ಸಂಬಂಧಿಸಿದುದು; ದೇಹ ಪೋಷಣೆಗೆ ಸಹಾಯವಾದುದು, ಕಾಳುಕಡಿ.
ಧಾನ್ಯಕ ಕೊತ್ತಂಬರಿ.
ಧಾಮ ಮನೆ; ದೇಹ; ಕಿರಣ; ಆಶ್ರಯ ಸ್ಥಾನ; ಜನ್ಮ; ಜ್ಯೋತಿ; ಸ್ವಯಂಪ್ರಕಾಶ.
ಧಾರ ಹಿಡಿಯುವ; ಆಧರಿಸುವ; ಹರಿಯುವ; ಮಳೆ; ಹಿಮ; ಬೇನೆ; ಭೀತಿ.
—ಕ ಕೆರೆ; ನೀರಿನ ತೊಟ್ಟಿ; ಊತು; ಸ್ತಂಭ.
—ಣ ಉಸಿರು ಹಿಡಿಯುವ ಒಂದು ರೀತಿ; ರಕ್ಷಣೆ; ಪಾಚನೆ; ಆಧರಿಸುವಿಕೆ.
ಧಾರಣೆ ದಾರಣಿ, ದರ, ಬೆಲೆ; ಪೇಟೆಯ ಬೆಲೆ.
ಧಾರಾ ಕುದುರೆಯ ನಡಿಗೆ; ಕತ್ತಿಯ ಬಾಯಿ; ನೀರಿನ ಪ್ರವಾಹ; ನೀರೆರೆದು ಕೊಡುವ ದಾನ; ವಿವಾಹ.
—ಪಂಚಕ ಕುದುರೆಯ ಐದು ಬಗೆ ನಡಿಗೆಗಳು.
ಧಾರಾಗ್ರ ಬಾಣದ ಅಲಗು.
ಧಾರಾದತ್ತ ಜಲಧಾರೆಯೊಡನೆ ಕೊಟ್ಟುದು; ಶಾಸ್ತ್ರೋಕ್ತ ದಾನಮಾಡಿದುದು.
ಧಾರಾಳ ತುಂಬ, ಹೇರಳ.
—ತನ ಔದಾರ್ಯ.
ಧಾರಾಳಿ ಉದಾರಿ, ತುಂಬ ಕೊಡುವವ; ಕೈಸಡಿಲಾದವ.
ಧಾರಿಣಿ ಭೂಮಿ.
ಧಾರುಣಿ (ಧಾರಿಣಿ).
ಧಾರೆ (ಧಾರಾ), ನೀರಿನ ಎಳೆ, ನೀರಿನ ಪ್ರವಾಹ; ಕತ್ತಿಯ ಬಾಯಿ; ನೀರೆರೆದು ಕೊಡುವ ದಾನ.
—ಎರೆ ಕನ್ಯೆಯನ್ನು ದಾನಮಾಡು; ದಾನ ಮಾಡು.
ಧಾರ್ತರಾಷ್ಟ್ರ ಧೃತರಾಷ್ಟ್ರನ ಸಂತಾನ; ದುರ್ಯೋಧನ; ಒಂದು ಹಂಸ ವಿಶೇಷ.
ಧಾರ್ಮಿಕ ಧರ್ಮಾತ್ಮ, ಧರ್ಮದಂತೆ ವರ್ತಿಸುವವ.
ಧಾರ್ಷ್ಟ್ಯ ದೌಷ್ಟ್ಯ; ಹಿಂಸೆ; ಧೈರ್ಯ; ಉದ್ಧತೆ; ಮರ್ಯಾದೆ ಮೀರಿದ ನಡತೆ.
ಧಾವಕ ತೊಳೆಯುವವ, ರಜಕ, ಅಗಸ, ಮಡಿವಾಳ; ಓಡುವ; ವೇಗವಾಗಿ ಸರಿಯುವ.
ಧಾವನ ಶೋಧಮಾಡುವುದು; ತೊಳೆಯುವುದು; ಉಜ್ಜುವುದು.
ಧಾವಲ್ಯ ಬಿಳುಪಾಗಿರುವಿಕೆ.
ಧಾಳ (ಢಾಳ), ಉದ್ದವಾದ ಬಾವುಟ; ಕಾಂತಿ.
ಧಾಳಿ ದಂಡೆತ್ತಿಹೋಗುವಿಕೆ; ಸೂರೆ; ಮುತ್ತಿಗೆ, ಲಗ್ಗೆ.
ಧಿಕ್ ತಿರಸ್ಕಾರದ ಮಾತು; ನಿಂದ್ಯ.
—ಕರಿಸು ತಿರಸ್ಕರಿಸು; ಹೀನಯಿಸು.
—ಕಾರ ತಿರಸ್ಕಾರ.
ಧೀ ಬುದ್ಧಿ, ಜ್ಞಾನ.
—ಮಂತ ಜ್ಞಾನಿ, ವಿವೇಕಿ, ಬುದ್ಧಿವಂತ.
ಧೀಕರಣೆ ತಿರಸ್ಕಾರ; ಅಲಕ್ಷ್ಯ; ಬುದ್ಧಿಬಲ.

ಧೀಮಣಿ ಶ್ರೇಷ್ಠ, ವಿವೇಕಿ.
ಧೀಮನ (ಧೀಮಂತ).
ಧೀರ ದಿಟ್ಟ, ಧೈರ್ಯಶಾಲಿ; ಪಂಡಿತ.
—ಉದಾತ್ತ ಧೈರ್ಯ ಮೊದಲಾದ ಸದ್ಗುಣಗಳಿಂದ ಕೂಡಿದ ನಾಯಕ.
—ತನ ಧೈರ್ಯ, ಎದೆಗಾರಿಕೆ.
—ತೆ (ಧೀರತ್ವ), ಧೈರ್ಯ.
ಧೀವರ ಬೆಸ್ತ, ಅಂಬಿಗ, ಮೀನುಗಾರ.
ಧೀವಸಿ ಶತ್ರು.
ಧೀಶ ಬುದ್ಧಿಯ ಒಡೆಯ; ಅತಿ ಬುದ್ಧಿವಂತ.
ಧೀಸಚಿವ ಅರಸನಿಗೆ ಮಂತ್ರಾಲೋಚನೆ ಹೇಳುವವ, ಮಂತ್ರಿ.
ಧುತ ಕಂಪಿಸಿದ, ಅಲುಗಿಸಿದ; ನಡುಗಿದ.
ಧುನೀ ಹೊಳೆ, ನದಿ; ಗರ್ಜಿಸುವ,ಅಬ್ಬರಿಸುವ.
ಧುರ್ (ಧುರ), ಯುದ್ಧ, ಕದನ; ಭಾರ.
ಧುರಂಧರ (ಧುರ=ಭಾರ) ಭಾರ ಹೊತ್ತವ; ತ್ರಾಣಿ; ಹೇರೆತ್ತು ಮೊದಲಾದುವು; ಮುಖಂಡ.
ಧುರೀಣ ಭಾರ ಹೊತ್ತವ; ಶ್ರೇಷ್ಠ,ಉತ್ತಮ; ಮುಂದಾಳು.
—ತೆ ಮುಂದಾಳುತನ.
ಧುರೆ ಧುರಾ, ಹೊರೆ.
ಧುರ್ಯ ಭಾರ ಹೊರಲು ಯೋಗ್ಯವಾದುದು; ಹೊರೆಹೊರುವ ಪ್ರಾಣಿ; ನಾಯಕ, ಮುಖಂಡ.
ಧೂತ ನಡುಗಿಸಲ್ಪಟ್ಟ; ಹೋಗಲಾಡಿಸಲ್ಪಟ್ಟ, ಚೊಕ್ಕಮಾಡಲ್ಪಟ್ಟ; ಒಗೆದ.
ಧೂಪ ಪರಿಮಳಿಸು; ಪ್ರಕಾಶಿಸು; ಸುಡು; ಗುಗ್ಗುಳ, ಅಗರು, ಲೋಬಾನ; ಒಂದು ಮರ.
—ಇಸು ಪರಿಮಳಿಸು; ಪ್ರಕಾಶಿಸು; ಸುಗಂಧದ ಹೊಗೆ ಕೊಡು.
—ವರ್ತಿ ಊದುಬತ್ತಿ, ಅಗರುಬತ್ತಿ.
ಧೂಪಾಯಿತ ಸುಗಂಧಪೂರಿತ; ವ್ಯಥಿತ; ನರಳುವ; ಬಳಲಿದ.
ಧೂಮ (ಸಂ), ದೂವೆ (ದ್ಭ), ಹೊಗೆ.
—ಲ ಹೊಗೆ ಬಣ್ಣ, ಕಂದು ಬಣ್ಣ.
ಧೂಮಕೇತನ (ಧೂಮಕೇತು).
ಧೂಮಕೇತು ಅಗ್ನಿ; ಬೀಳುವ ನಕ್ಷತ್ರ; ಬೆಳಕಿನ ಹೊಗೆಯಂತೆ ಕಾಣುವ ಒಂದು ಗ್ರಹ ಜಾತಿ;ಬಾಲಕೇತು,ಬಾಲಚುಕ್ಕಿ;ಉತ್ಪಾತ.
ಧೂಮಪತಾಕ ಹೊಗೆಯೇ ಬಾವುಟೆಯಾಗಿ ಉಳ್ಳವ, ಅಗ್ನಿ.
ಧೂಮಯೋನಿ ಮುಗಿಲು.
ಧೂಮಶಕಟ ರೈಲುಬಂಡಿ, ಉಗಿಬಂಡಿ.
ಧೂಮ್ರ ಹೊಗೆ; ಕಂದುಬಣ್ಣ; ನೇರಿಳೆ; ಬೂದುಬಣ್ಣ; ಕತ್ತಲು, ಮುಸಕು; ಪಾಪ.
ಧೂಮ್ರಪತ್ರ ತಮಾಕು, ಹೊಗೆಸೊಪ್ಪು.
ಧೂಮ್ರಪಾನ ಹೊಗೆಬತ್ತಿ ಸೇವನೆ.
ಧೂರ್ಜಟಿ ಭಾರವಾದ ಜಡೆಯುಳ್ಳವ, ಜಡೆಯಲ್ಲಿ ಗಂಗೆಯುಳ್ಳವ, ಶಿವ.
ಧೂರ್ತ ವಂಚಕ, ಕಪಟ; ಜೂಜುಗಾರ; ಒಬ್ಬ ನಾಯಕ; ಚತುರ.
—ತ್ವ ಮೋಸ, ಕಪಟ.
ಧೂಲಿ ದೂಳು, ಸೂಕ್ಷ್ಮ ಮಣ್ಣಿನ ಪುಡಿ.
—ಧೂಸರಿತ ನುಚ್ಚುನುರಿದ; ದೂಳಾದ.
—ಧ್ವಜ ಧೂಳು ಧ್ವಜವಾಗಿ ಉಳ್ಳವ; ವಾಯು, ಗಾಳಿ.
ಧೂಸರ ಕತ್ತೆ; ಒಂಟೆ;ತುಸು ಬಿಳುಪಾದುದು, ಬೂದು ಬಣ್ಣ.
ಧೂಳಿ ದೂಳು, ಪುಡಿ.
—ಇತ ಬೂದುಬಣ್ಣ ತಾಳಿದ.
—ಇಸು ಮೈಗೆ ಲೇಪಿಸು; ಧೂಳಾಗಿ ಮಾಡು.
ಧೂಳಿಪಟ ಧೂಳು ಎಲ್ಲೆಲ್ಲೂ ಹಾರುವಂತಾಗು; ಸಂಪೂರ್ಣ ನಾಶವಾಗು.

ಧೃತ ಧರಿಸಿದ; ಹಿಡಿದ; ಆಧರಿಸಿದ; ಇರಿಸಿದ.

ಧೃತರಾಷ್ಟ್ರ ಚಂದ್ರವಂಶದ ಕುರುಕುಲದ ಒಬ್ಬ ಅರಸು. ಇವನಿಗೆ ದುರ್ಯೋಧನ ಮೊದಲಾದ ನೂರು ಮಂದಿ ಮಕ್ಕಳಿದ್ದರು. ಅವರೊಳಗೂ ಪಾಂಡವರೊಳಗೂ ಆದ ಕಲಹವೇ ಭಾರತ ಯುದ್ಧ; ಒಂದು ಸರ್ಪ; ಪಕ್ಷಿ; ಒಬ್ಬ ಗಂಧರ್ವ.

ಧೃತಿ ದಾರ್ಢ್ಯ; ಸ್ಥಿರತೆ; ಧೈರ್ಯ; ತೃಪ್ತಿ; ಪ್ರಸನ್ನತೆ; ಯಜ್ಞ; ಸುಖ; ಹನ್ನೆರಡು ಮಾತ್ರೆಯ ತಾಳ.

—ಕೆಡು ಧೈರ್ಯಗೆಡು.

ಧೃಷ್ಟ ದಿಟ್ಟ (ದ್ಭ); ಅತಿಶಯ; ಸಮರ್ಥ; ಒಬ್ಬ ನಾಯಕ; ಲಜ್ಜೆಗೆಟ್ಟವ.

ಧೃಷ್ಟಕೇತು ಚೇದಿ ರಾಜನಾದ ಶಿಶುಪಾಲನ ಒಬ್ಬ ಮಗ.

ಧೃಷ್ಟದ್ಯುಮ್ನ ಅತಿಶಯ ಬಲವುಳ್ಳವ. ದ್ರುಪದರಾಜನ ಮಗ. ದ್ರೋಣನ ವೈರಿ. ಅತಿರಥರಲ್ಲಿ ಒಬ್ಬನೆನಿಸಿ ಕುರುಯುದ್ಧದಲ್ಲಿ ಪಾಂಡವರ ಬಗ್ಗೆ ಕಾದಾಡಿದನು.

ಧೇನು ಕರುಹಾಕಿದ ದನ, ಮಣಕ.

ಧೇನುಕ ಕತ್ತೆಯ ರೂಪದ ಒಬ್ಬ ರಾಕ್ಷಸ. ಇವನನ್ನು ಬಲರಾಮನು ಕೊಂದನು.

ಧೇಯ ಇರಿಸುವ; ಸೃಷ್ಟಿಸುವ; ಧರಿಸುವ.

ಧೈರ್ಯ ನಿರ್ಭಯ; ಭೀತಿಯಿಲ್ಲದಿರುವಿಕೆ; ಷೆಚ್ಚ, ಖರ್ಚು; ತಾಳ್ಮೆ, ಸಹನೆ, ತಡೆದುಕೊಳ್ಳುವ ಶಕ್ತಿ.

— ವಂತ ನಿರ್ಭೀತ.

—ಸ್ಥ ಧೈರ್ಯವಂತ.

ಧೈವತ ಸಪ್ತಸ್ವರಗಳಲ್ಲಿ ಆರನೆಯ ಸ್ಥಾನ.

ಧೊಪ್ಪನೆ ಧೊಪ್ಪೆಂದು ಸದ್ದುಮಾಡಿ.

ಧೋರ ನಗಾರಿ.

ಧೋರಣಿ ಆನೆ, ಕುದುರೆ, ಗಾಡಿ ಮೊದಲಾದವುಗಳ ಮೇಲೆ ಮಾಡುವ ಪಯಣ.

ಧೋರಣೆ ನಡವಳಿಕೆಯ ರೀತಿ.

ಧೌತ ಒಗೆದು ಚೊಕ್ಕಮಾಡಿದ; ಬೆಳ್ಳಗಿರುವ; ಬೆಳ್ಳಿ.

ಧೌಮ್ಯ ಪಾಂಡವರ ಪುರೋಹಿತನಾದ ಒಬ್ಬ ಮುನಿ; ವ್ಯಾಘ್ರಪಾದನೆಂಬ ಋಷಿಯ ಮಗ. ಇವನ ಸೋದರನು ಉಪಮನ್ಯು.

ಧ್ಮಾತ ಊದಿದ.

ಧ್ಯಾನ (ಸಂ) ಜಾನ (ದ್ಭ), ಚಿಂತನೆ; ಯೋಚನೆ, ಒಂದೇ ವಿಚಾರದಲ್ಲಿ ಮನಸ್ಸಿಡುವಿಕೆ; ತಪಸ್ಸು.

—ಇಸು ಜಾನಿಸು (ದ್ಭ), ಚಿಂತಿಸು, ಎಣ್ಣು.

—ಪರ ಚಿಂತಾಪರ; ತಪೋಮಗ್ನ.

ಧ್ಯಾನಿ ಯೋಚನೆಗೀಡಾದವ; ತಪಸ್ವಿ.

ಧ್ರುವ ಉತ್ತಾನಪಾದರಾಯನ ಹಿರಿ ಹೆಂಡತಿ ಸುನೀತಿಯ ಮಗ. ಅವನ ಕಿರಿಯಾಕೆ ಸುರುಚಿಯಿಂದ ತಿರಸ್ಕರಿಸಲ್ಪಟ್ಟ ಧ್ರುವನು ಚಿಕ್ಕವನಾಗಿರುವಾಗಲೇ ಕಾಡಿಗೆ ಹೋಗಿ ತಪಸ್ಸುಮಾಡಿ ನಕ್ಷತ್ರ ಪದವಿಯನ್ನು ಗಳಿಸಿದನು. ಒಂದು ಯೋಗ; ಭೂಗೋಲದ ತೀರ ಉತ್ತರ ಮತ್ತು ದಕ್ಷಿಣ ಭಾಗಗಳು; ವಿದ್ಯುತ್ತಿನ ಸಲಕರಣೆಗಳಲ್ಲಿ ಸಮುಖ (ಧನ) ವಿಮುಖ (ಋಣ) ಶಕ್ತಿ ಕೊಡುವ ತುದಿಗಳು; ಉತ್ತರ ಧ್ರುವಕ್ಕೆ ನೇರಾಗಿ ಮೇಲುಗಡೆ ಇರುವ ತಾರೆ; ಆಕಾಶ; ಒಂದು ವಿಧದ ತಾಳ; ಕೀಲು, ಗೂಟ; ವಿಷ್ಣು; ಮಹಾದೇವ.

ಧ್ರುವನಕ್ಷತ್ರ ಉತ್ತರ ಧ್ರುವಕ್ಕೆ ಸಮನಾಗಿ ಮೇಲುಗಡೆ ಇರುವ ತಾರೆ; ಧ್ರುವಲೋಕ. ಇದಕ್ಕೆಧ್ರುವನು ಅಧಿಪತಿಯೆಂದು ನಂಬಿಕೆ.

ಧ್ರುವಪಾಶ ಧ್ರುವ ನಕ್ಷತ್ರಕ್ಕೆ ಭೂಮಿ ತೂಗಿದೆ ಎಂಬುವ ಹಗ್ಗ.

ಧ್ರುವಲೋಕ ಧ್ರುವನು ಅಧಿದೇವತೆಯಾದ ಲೋಕ; ಧ್ರುವ ತಾರೆ.

ಧ್ರುವವೃತ್ತ ಉತ್ತರ ದಕ್ಷಿಣ ಕೇಂದ್ರಗಳ 23½° ಸುತ್ತು ಇರುವ ವಲಯ. ಇಲ್ಲಿ ವರ್ಷದ ಆರು ತಿಂಗಳು ರಾತ್ರಿ, ಆರು ತಿಂಗಳು ಹಗಲು.

ಧ್ರುವೆ ಒಂದು ಯಜ್ಞಕುಂಡ; ಕೂವೆ.

ಧ್ವಂಸ ನಾಶ; ನಷ್ಟ.

ಧ್ವಂಸಿ ನಾಶಕಾರಿ.

ಧ್ವಜ ಬಾವುಟ, ನಿಶಾನಿ, ಪಟ, ಪತಾಕೆ; ಒಬ್ಬ ಪ್ರಸಿದ್ಧ ಪುರುಷ; ಪುರುಷನ ಜನನೇಂದ್ರಿಯ; ಸೇನೆ.

ಧ್ವಜಪಟ ಬಾವುಟ; ಪತಾಕೆ.

ಧ್ವಜಸ್ತಂಭ ನಿಶಾನೆ ಹಾರಿಸುವ ಕಂಬ.

ಧ್ವನಿ (ಸಂ) ದನಿ (ದ್ಭ), ಶಬ್ದ, ನಾದ, ಉಲಿ.

—ತ ಹೊರಟ ಸದ್ದು; ಆಡಿದ ಸದ್ದು; ನುಡಿದುದು; ನಾದದ ಬಲದಿಂದ ಅರ್ಥ ಸೂಚನೆ ಮಾಡುವ ಶಕ್ತಿ (ಛಂದಸ್ಸಿನಲ್ಲಿ).

ಧ್ವನಿವಿಕಾರ ಸ್ವರದ ಬದಲಾಬದಲಿ; ಸ್ವರ ವಿಕಾರ.

ಧ್ವಾನ ಧ್ವನಿ, ಶಬ್ದ, ಉಲಿ, ನಾದ.

ಧ್ವಾಂತ ಕತ್ತಲೆ; ಆವರಿಸಿದ, ಮುಚ್ಚಿದ.

# ನ

ನಕ (ದ್ಭ) ನಖ (ಸಂ), ಉಗುರು.

ನಕಲಿ ವಿನೋದ; ಅಪಹಾಸ, ಕುಚೇಷ್ಟೆ; ಅಣಕ; ಮಂಗತನ.

—ಕಾರ ಹಾಸ್ಯಗಾರ, ಅಣಕವಾಡುವವ.

ನಕಲು ಅನುಕರಣೆ; ಬರಹದ ಒಂದು ಪ್ರತಿ.

ನಕಾರ ತಿರಸ್ಕಾರ, ನಿರಾಕರಣೆ.

ನಕಾಸೆ (ನಕ್ಷೆ), ಪಠ, ಭೂಪಟ; ಕೆತ್ತನೆ.

ನಕುಲ ಮುಂಗುಲಿ; ಶಿವ; ಪಾಂಡುರಾಯನ ಎರಡನೆ ಹೆಂಡತಿ ಮಾದ್ರಿಯ ಮಗ.

ನಕುಲಾರಿ ಮುಂಗುಲಿ ವೈರಿ, ಹಾವು.

ನಕ್ಕಿ ತಂತಿ ವಾದ್ಯವನ್ನು ಬಾರಿಸಲು ಬೆರಳಿಗೆ ತೊಡುವ ಒಂದು ಒತ್ತು.

ನಕ್ಕು (ನೆಕ್ಕು), ನಾಲಗೆಯಿಂದ ಸವರು.

ನಕ್ಕೆ ನರಿ.

ನಕ್ತ ರಾತ್ರಿ; ಗಾಢೆ.

—ಮುಖೆ ಶ್ಯಾಮ, ಮುಸ್ಸಂಜೆ; ರಾತ್ರಿ.

ನಕ್ತಭೋಜನ ಹಗಲು ಉಣ್ಣದೆ ರಾತ್ರಿ ನಾಲ್ಕು ಗಳಿಗೆಯ ಬಳಿಕ ಉಣ್ಣುವ ಒಂದು ವ್ರತ.

ನಕ್ತಂಚರ ನಿಶಾಚರ, ರಾಕ್ಷಸ.

ನಕ್ರ ಮೊಸಳೆ, ನೆಗಳು, ನೆಗಳೆ.

ನಕ್ರಧ್ವಜ ಪ್ರದ್ಯುಮ್ನ.

ನಕ್ಷತ್ರ ಚಿಕ್ಕೆ, ತಾರೆ; ಅಶ್ವಿನಿ ಮೊದಲಾದ ಹಲವು ಸ್ವತಂತ್ರ ಸೂರ್ಯರು.

—ಮಂಡಲ ನಕ್ಷತ್ರಲೋಕ.

—ಮಾಲೆ 27 ನಕ್ಷತ್ರಗಳಂತೆ 27 ಮಣಿಗಳುಳ್ಳ ಸರ.

ನಕ್ಷತ್ರನೇಮಿ ಧ್ರುವನಕ್ಷತ್ರ; ಚಂದ್ರ; ಸೂರ್ಯ.

ನಖ ಉಗುರು; ಶಂಖವೆಂಬ ಒಂದು ಗ್ರಂಥಿ ದ್ರವ್ಯ.

ನಖಖನನ ಉಗುರಿಂದ ಕೆರೆಯುವಿಕೆ, ಕೆದರುವಿಕೆ, ತುರಿಸುವಿಕೆ.

ನಖಪಂಜರ ಉಗುರಿನ ಬಾಚು, ಉಗುರಿನ ಹಿಡಿತ.

ನಖರ ಉಗುರು; ಇಪ್ಪತ್ತರ ಸಂಖ್ಯೆ.

ನಖರಾಯುಧ ಪುಲಿ; ಸಿಂಹ; ಕೋಳಿ.

ನಗ ಪರ್ವತ; ಮರ; ಆಭರಣ; ಒಂದು ಜಾತಿ ಹಡಗು.

—ಜ ಪರ್ವತದಲ್ಲಿ ಹುಟ್ಟಿದವ, ಮಲೆಕುಡಿಯ; ಆನೆ.

ನಗಕುಲಿಶ ಇಂದ್ರ.

ನಗಚಾಟ ಲಘು ನಗೆಗೇಡಿತನ, ನಗೆಗೆ ಕಾರಣವಾದ ನಡೆವಳಿಕೆ, ಚೇಷ್ಟೆ.
—ಇಕೆ ನಗೆಗೀಡಾದುದು.
ನಗಣ ಮೂರು ಲಘುಮಾತ್ರೆಗಳ ಶಬ್ದ.
ನಗದಿ(ನಗದು) ಕೈಯಲ್ಲಿರುವ ಹಣ; ರೋಖು.
ನಗಧರ ಕೃಷ್ಣ.
ನಗರ (ನಗರಿ), ಸಮೀಪದಲ್ಲಿ ಪರ್ವತ ಇಲ್ಲವೇ ಕಾಡು ಇರುವ ಪಟ್ಟಣ; ಶಹರ.
ನಗರ್ತ ವೈಶ್ಯ ಜನರ ಒಂದು ಪಂಗಡ.
ನಗಾಧಿಪ ಪರ್ವತಗಳ ಒಡೆಯ, ಹಿಮಾಲಯ
ನಗಾರಖಾನೆ (ನಗಾರಕಾನೆ), ನಗಾರಿ ಇಡುವ ಮನೆ.
ನಗಾರಿ ಒಂದು ಚರ್ಮವಾದ್ಯ.
ನಗು (ನಗೆ), ಮುಖದಲ್ಲಿ ಸಂತೋಷ ತೋರಿಸು; ತುಟಿಬಿರಿದು ನಗುವಿನ ಸೂಚನೆ ಮಾಡು; ಹರ್ಷ ಸೂಚನೆ; ಅರಳು.
—ಇಸು ನಗುವಂತೆ ಮಾಡು.
ನಗೆ ನಗಾಟ, ನಗುವಿಕೆ; ಚೇಷ್ಟೆ.
—ಕೇಡು ನಗೆಗೆ ಕಾರಣ.
—ಗಾರ ಹಾಸ್ಯಗಾರ; ನಗುವನ್ನು ಉಂಟು ಮಾಡುವವ, ವಿನೋದಿ, ರಸಿಕ.
—ಗೇಡಿ ನಾಚಿಕೆಯಿಲ್ಲದವ.
—ವಳಿ ನಗು ಹುಟ್ಟಿಸುವ ರೀತಿ.
ನಗೌಕಸ ಬೆಟ್ಟವೇ ಸ್ಥಾನವಾಗಿ ಉಳ್ಳುದು, ಹುಲಿ, ಶರಭ; ಮರವೇ ನಿವಾಸವಾದುದು, ಕಾಗೆ.
ನಗ್ಗು ಪೆಟ್ಟು ತಗಲುವಿಕೆ, ಜಜ್ಜಿಹೋಗುವಿಕೆ.
ನಗ್ನ ವಸ್ತ್ರವಿಲ್ಲದ, ಹುಟ್ಟಗೆಯ, ಬತ್ತಲೆಯಾದ; ಬತ್ತಲೆ ಸನ್ಯಾಸಿ; ಶಿವ.
—ಅಂಗ ಬತ್ತಲೆಯಾದವ, ಹುಟ್ಟಗೆಯವ.
ನಗ್ನಿಕೆ (ನಗ್ನಿಕಾ), ಬತ್ತಲೆಯಾಗಿರುವವಳು, ಪ್ರಾಯಬಾರದ ಹುಡುಗಿ.
ನಚಿಕೇತ (ನಾಚಿಕೇತ), ವೇದದ ಕಾಲದ ಒಬ್ಬ ಋಷಿ; ವಾಜಶ್ರವನ ಮಗ; ಅಗ್ನಿ.
ನಚ್ಚಣ (ದ್ಭ) ನರ್ತನ (ಸಂ), ಕುಣಿತ.
ನಚ್ಚಣಿ (ದ್ಭ) ನರ್ತಕಿ (ಸಂ).
ನಚ್ಚಿಮುಚ್ಚು ಅತ್ಯಂತ ಪ್ರಿಯವಾದ.
ನಚ್ಚು (ನೆಚ್ಚು) ನಂಬು, ವಿಶ್ವಾಸಪಡು; ಅಪೇಕ್ಷಿಸು; ನಂಬಿಕೆ, ಪ್ರೀತಿ; ಆಸೆ; ಭರವಸೆ.
—ಇಕೆ ಭರವಸೆ, ವಿಶ್ವಾಸ, ನಂಬಿಕೆ.
—ಇಸು ನಂಬಿಸು.
ನಚ್ ಲಜ್ಜೆಗೊಳ್ಳು, ನಾಚು.
ನಜರಾಣೆ ಒಂದು ಬಗೆಯ ತೆರಿಗೆ; ಕಾಣಿಕೆ.
ನಜರಾತಶತ್ರು ವೈರ ತಾಳದವ; ರಾಮ; ಯುಧಿಷ್ಠಿರ.
ನಜರು ಕಾಣಿಕೆ; ಕಪ್ಪ; ಗೌರವದಿಂದ ಕೊಡುವ ಕಾಣಿಕೆ; ಉಡುಗೊರೆ.
ನಜುಗು ನಗ್ಗು, ಜಜ್ಜು, ಪುಡಿಮಾಡು.
ನಜ್ಜು ಜಜ್ಜಿಹೋದ ಸ್ಥಿತಿ, ನಳ್ಳು.
—ಗುಜ್ಜು ಸಂಪೂರ್ಣ ಜಜ್ಜಿಹೋದುದು; ನುಗ್ಗಾದುದು.
ನಟ ಶಿವ, ನಟರಾಜ; ನಟಿಸುವವ, ಸೋಗು ಹಾಕುವವ; ಅಭಿನಯಗಾರ; ಕ್ಷತ್ರಿಯನಿಗೆ ಕೀಳು ಜಾತಿಯವಳಲ್ಲಿ ಹುಟ್ಟಿದವ.
—ಕ (ನಟ).
—ನೆ (ನಟನ) ಅಭಿನಯ; ತೋರಿಕೆಯ ವರ್ತನೆ; ಠಕ್ಕು; ಸೋಗು.
ನಟಿ (ನಟೀ) ವೇಶ್ಯೆ, ಸೂಳೆ, ಪಾತ್ರದವಳು; ಕುಣಿವಾಕೆ; ನಾಟಕದಲ್ಲಿ ಸೂತ್ರಧಾರನ ಹೆಂಡತಿ.
ನಟಿಕೆ (ನಟ್ಟಿಗೆ) ಬೆರಳು ಸಂದಿನಿಂದ ಸದ್ದು ಹೊರಡಿಸುವಿಕೆ; ಗಂಟು ಮುರಿಯುವಿಕೆ.
—ಮುರಿ ನಟ್ಟಿಕೆ ಹೊರಡಿಸು; ಸೇಡು ಹೊರು; ಅಟಕುಮುರಿ.
ನಟಿಸು ಸೋಗುಹಾಕು, ತೋರಿಸು; ಅಭಿನಯಿಸು; ನರ್ತಿಸು.

ನಟ್ಟ ನಡು, ಮಧ್ಯ.
—ನಡು ತೀರ ನಡುವೆ.
ನಟ್ಟಡವಿ ಕಾಡಿನ ನಡುವೆ; ಭಯಂಕರಕಾಡು
ನಟ್ಟೆ ನಾಟ, ಗಿಡ ನಡುವ ಕೆಲಸ.
ನಟ್ಟಿರುಳು ನಡುರಾತ್ರಿ.
ನಟ್ಟ್ಟ ತಡೆ, ತೊಡಕು; ವಿಸ್ತರಿಸಿ ಹರಡುವ ಹುಲ್ಲಿನ ಬೇರು.
ನಟ್ಟುವ ನಟ, ಅಭಿನಯಗಾರ; ನೃತ್ಯಗಾರ.
—ಗಾರ (ನಟ).
—ಗಿತ್ತಿ (ನಟ).
ನಟ್ಟುವಿತಿ ಅಭಿನಯಗಾರ್ತಿ; ನರ್ತಕಿ.
ನಢ (ನಡು).
ನಡತೆ ಶೀಲ;ಸ್ವಭಾವ;ಹಾದಿ;ಚಲನೆ;ಆಚಾರ.
ನಡಪಾಡು ತಿರುಗಾಡು.
ನಡಪು ಸಾಕು, ಸಲಹು; ನಡೆಯುವಿಕೆ.
ನಡವಳಿ (ನಡೆವಳಿಕೆ), ನಡತೆ; ಚಾರಿತ್ರ; ರೂಢಿಯಿಂದ ನಡೆದು ಬಂದುದು; ನಡೆಯುವ ರೀತಿ, ಪದ್ಧತಿ.
ನಡವೆ (ನಡೆ), ನಡೆದು ಹೋಗುವ ದಾರಿ.
ನಡಸು (ನಡೆಸು) ನಡೆಯುವಂತೆ ಮಾಡು.
ನಡಾವಳಿ (ನಡೆವಳಿ), ನಡತೆ; ಪರಂಪರೆ; ಕ್ಲಪ್ತ ಕಾಲದಲ್ಲಿ ಆಗುವ ಒಂದು ಉತ್ಸವ.
ನಡಿಗೆ ನಡೆ; ಸಂಚಾರ; ಗತಿ.
ನಡು (ನಡ), ನಾಟಿಸು; ದೇಹದ ಮಧ್ಯ; ಮಧ್ಯಭಾಗ, ಟೊಂಕ, ಸೊಂಟ.
—ಕಟ್ಟು ಸೊಂಟದ ಪಟ್ಟಿ; ದಟ್ಟಿ; ಡಾಬು.
—ವೆ ಮಧ್ಯ.
ನಡುಕ (ನಡುಕು), ಕಂಪನ, ಅಲುಗಾಟ; ಭಯ, ಭೀತಿ, ಥರಥರಿಸುವುದು.
—ಲು ಭೀತಿ; ಕಂಪನ.
ನಡುಗು ಕಂಪಿಸು, ಅಲುಗಾಡು; ಭೀತಿವಡೆ.
ನಡುವಗಲ್ ನಡು ಹಗಲು, ಮಧ್ಯಾಹ್ನ.
ನಡುವಿರುಳ್ ನಟ್ಟಿರುಳು, ಮಧ್ಯರಾತ್ರಿ.
ನಡೆ ಹೋಗು; ಚಲಿಸು; ತೊಲಗು; ಆಗು, ಜರಗು; ನಡೆಯುವ ಸ್ಥಳ, ದಾರಿ.
—ಕೆಡು ಗತಿಭಂಗವಾಗು; ನಿಲ್ಲು; ತಡೆ.
—ಕೊಳಿಸು ಚಲಿಸುವಂತೆ ಮಾಡು.
—ಕೋಟೆ ಸುತ್ತಿಹೋದಂತೆ ಬರುವ ಕೋಟೆ; ಜನರ ಮುತ್ತಿಗೆ.
—ತರು ಬರು, ಅಯ್ತರು.
—ನುಡಿ ನಡತೆ ಮತ್ತು ಮಾತು; ರೀತಿ.
—ಪೆಣ (ನಡೆವೆಣ), ನಡೆಯುವ ಹೆಣ; ಕೀಳಾದ ಶೀಲವುಳ್ಳವ, ನಾಚಿಕೆಗೇಡಿ.
ನಡೆಮಾಡ ತಾನಾಗಿ ಸಂಚರಿಸುವ ಮನೆ, ವಿಮಾನ.
ನಡ್ಡಿ ಮೂಗು; ಚಪ್ಪಟೆಯಾದ ಮೂಗು; ತೊಡೆಸಂದು;ಕುಣಿ;ನಡುವಿನ ಹಿಮ್ಮಗ್ಗಲು.
ನಡ್ವಲ 'ನಡ'ವೆಂಬ ಹುಲ್ಲುಳ್ಳ ಪ್ರದೇಶ.
ನಣ್ಪು ನಂಟು, ಸಂಬಂಧ; ಪ್ರೀತಿ, ಅನುರಾಗ; ಮನೋಹರ, ಶೋಭೆ.
ನತ ಬಾಗಿದ; ವಕ್ರವಾದ, ಸೊಟ್ಟ; ಕುಂದಿದ.
ನತಿ ಬಾಗುವಿಕೆ.
ನತ್ತಿಂಗ ಊಳಿಗನ ಹಕ್ಕಿ, ಹಾಲುವಕ್ಕಿ, ಕಿರಿಗೂಬೆ.
ನತ್ತು ತೊದಲು, ಅಸ್ಪಷ್ಟ ಮಾತಾಡು; ಮೂಗುತಿ, ಮುಖರೆ.
ನತ್ವ ಇಲ್ಲದಿರುವಿಕೆ, ಅಭಾವ; ಅನುಮಾನ; ಅನಿಶ್ಚಯ; ನಕಾರ.
ನದ್ ಸಂತೋಷಪಡು.
ನದ ಪಡು ಕಡಲುಗಳಿಗೆ ಹರಿಯುವ ನಮ್ಮ ದೇಶದ ಹೊಳೆಗಳು; ಸದ್ದುಮಾಡುವ.
ನದರು (ನಜರು), ಗ್ರಹಿಕೆ, ಗಣನೆ; ಕಾಣಿಕೆ.
ನದಿ (ನದೀ) ಪೂರ್ವ ದಿಕ್ಕಿಗೆ ನಮ್ಮ ದೇಶದಲ್ಲಿ ಹರಿಯುವ ಹೊಳೆಗಳು, ಹೊಳೆ.
—ಸುತ ಗಂಗಾನದಿಯ ಮಗ, ಭೀಷ್ಮ.
ನದಿಪು ಆದಿಸು, ನಂದಿಸು.

ನದೀಪ ನದಿಗಳ ಒಡೆಯ, ಸಮುದ್ರ; ವರುಣ.
ನದೀಮಾತೃಕ ನದಿಯೇ ತಾಯಾಗಿ ಉಳ್ಳ ಭೂಮಿ, ನದಿ ನೀರಿಂದ ಬೆಳೆಯುವ ಭೂಮಿ.
ನದುಳು ತಿರಸ್ಕಾರ, ವಿಸ್ಮಯ, ಆಶ್ಚರ್ಯ.
—ನಗೆ ನಂಜಿನ ನಗೆ; ತಿರಸ್ಕಾರದ ನಗು; ಸಂತೋಷದ ನಗು; ಕೆಟ್ಟ ನಗೆ.
ನದ್ಧ ಕಟ್ಟದ, ಬಾಗಿದ.
ನನ್ ನಾನು; ನಾಲ್ಕು.
ನನಂದೃ ಗಂಡನ ಅಕ್ಕ, ಅತ್ತಿಗೆ.
ನನೆ (ನೆನೆ), ತೊಯ್, ಒದ್ದೆಯಾಗು; ಚಿಗುರು; ಹೂಬಿಡು; ಮೊಗ್ಗೆ, ಮಿಟ್ಟೆ.
—ಕೊನೆಯೇರು ಚಿಗುರು ಹೂಗಳನ್ನು ಬಿಡು; ಹೂಬಿಡು; ಆನಂದಿಸು.
—ನನೆದು ತೀರ ಒದ್ದೆಯಾಗಿ.
—ಸು ಒದ್ದೆಮಾಡು, ತೊಯಿಸು.
—ಹ ಒದ್ದೆಯಾಗುವಿಕೆ.
ನನೆವಿಲ್ಲ ಹೂಬಿಲ್ಲ, ಕಾಮ.
ನನ್ನ ನನಗೆ ಸಂಬಂಧಿಸಿದ.
ನನ್ನಿ ಸತ್ಯ; ನಿಜ; ಪ್ರೀತಿ, ಅನುಬಂಧ.
—ಕಾರ ಸತ್ಯವಂತ.
ನಪುಂಸಕ ಹೆಣ್ಣು ಗಂಡು ಎರಡೂ ಅಲ್ಲದ; ಶಿಖಂಡಿ, ಖೊಜ್ಜ, ಸೂಗ.
—ಲಿಂಗ ಗಂಡು ಹೆಣ್ಣು ಎರಡೂ ಅಲ್ಲದ ವಸ್ತುಜಾತಿ.
ನಪ್ತೃ (ನಪ್ತಾರ), ಮೊಮ್ಮಗ; ಮೊಮ್ಮಗಳು.
ನಪ್ಪು ನಪುಂಸಕ ಲಿಂಗ.
ನಪ್ಪೆ ಮರ ಇಲ್ಲವೆ ಹಣ್ಣಿನಲ್ಲಾದ ಗಾಯ, ಕಡಿತ, ಕಚ್ಚು.
ನಫೆ (ನಫಾ), ಲಾಭ, ಮುನಾಫೆ, ಉಳಿತಾಯ.
ನಬೀ ಮಹಮ್ಮದ; ಭವಿಷ್ಯವಾದಿ, ಪ್ರವಾದಿ.
ನಭ (ನಭಸ್) ಆಕಾಶ, ಗಗನ; ಶ್ರಾವಣ ಮಾಸ.
—ಚರ ಆಕಾಶದಲ್ಲಿ ಚಲಿಸುವವ, ದೇವತೆ.
ನಭಸ್ಯ ಭಾದ್ರಪದ ಮಾಸ.
ನಭೋಜನ ಊಟವಿಲ್ಲದವರು, ದೇವತೆಗಳು.
ನಭೋಮಣಿ ಸೂರ್ಯ.
ನಭೋಮಂಡಲ ಆಕಾಶಮಂಡಲ.
ನಮ್ ನಮ್ಮ.
ನಮನ ಬಾಗುವಿಕೆ; ವಂದನೆ; ನುಗ್ಗಾಗುವಿಕೆ.
ನಮಲು (ನೆಮರು), ಮೆಲುಕು, ತಿಂದುದನ್ನು ತಿರುಗಿ ಬಾಯಿಗೆ ತಂದು ಕಡೆ.
ನಮಸಿತ ಪೂಜಿತ, ವಂದಿತ.
ನಮಸ್ಕಾರ ತಲೆಬಾಗಿಸಿ ಕೈಜೋಡಿಸುವುದು; ವಂದನೆ, ಶರಣು.
—ಇಸು (ನಮಸ್ಕರಿಸು) ವಂದಿಸು; ಕೈಮುಗಿ.
ನಮಾಜು ಮುಸಲ್ಮಾನರ ಒಂದು ಪ್ರಾರ್ಥನಾ ವಿಧಿ.
ನಮಿಸು ವಂದಿಸು; ಬಾಗು; ಪೂಜಿಸು.
ನಮುಚಿ ದನುಪುತ್ರನಾದ ಒಬ್ಬ ರಾಕ್ಷಸ. ಇವನನ್ನು ಇಂದ್ರನು ಕೊಂದನು.
ನಮೂದು ಹೇಳಿದ್ದು, ವಿವರಿಸಿದುದು, ದಾಖಲೆ ಮಾಡಿದುದು.
—ಇಸು ಹೇಳು; ವಿವರಿಸು; ಬರೆ.
ನಮೂನೆ ರೀತಿ, ಬಗೆ; ತರಹ, ಮಾದರಿ.
ನಮೆ (ನವೆ), ಕೃಶವಾಗು, ಬಡವಾಗು; ಸವೆ; ಸಂಕಟಪಡು.
ನಮೇರು ಸುರಪುನ್ನಾಗ ವೃಕ್ಷ; ರುದ್ರಾಕ್ಷ; ಸುರಗಿ ಗಿಡ.
ನಮ್ನು (ನಮ್ರು).
ನಮ್ಮ ನಮಗೆ ಸಂಬಂಧಿಸಿದ.
ನಮ್ಮಾವು (ಅಮ್ಮಾವು), ಕಾಡು ಹಂದಿ.
ನಮ್ರ ಬಾಗಿದ, ಬಗ್ಗಿದ; ವಿನಯದಿಂದ ಕೂಡಿದ; ನಯಭಯವುಳ್ಳ.
ನಯ ನೀತಿ; ಶುಕ್ರಾಚಾರ್ಯ ಮೊದಲಾದವರು ಬರೆದ ಒಂದು ಶಾಸ್ತ್ರ; ರಾಜನೀತಿ; ನುಣುಪು, ಒರಟು ಕಳೆದು ಹದವಾದ.

—ಗಾರ ನಡತೆ ಬಲ್ಲವ, ಮರ್ಯಾದೆ ಅರಿತವ, ಮಾನವಂತ.

—ಗುಣ ಯೋಗ್ಯ ಗುಣ.

—ಜ್ಞ ಮರ್ಯಾದೆ ತಿಳಿದವ.

ನಯನ ಕಣ್ಣು; ದಾರಿ ತೋರಿಸುವ.

ನಯನಕರ್ಣ ಒಂದು ಜಾತಿ ಹಾವು; ಸರ್ಪ.

ನಯನಚ್ಛದ ಕಣ್ಣಿನ ರೆಪ್ಪೆ, ರೆಪ್ಪೆ.

ನಯನಜಲ (ನಯನಾಶ್ರು), ಕಣ್ಣೀರು.

ನಯನಸರ (ದ್ಭ) ನಯನ ಸ್ವರ (ಸಂ), ಮೃದುವಾದ ಧ್ವನಿ, ಇಂಪಾದ ದನಿ.

ನರ ವಿಷ್ಣು; ಒಬ್ಬ ಋಷಿ; ಮನುಷ್ಯ; ನಾರಾಯಣನ ಸೋದರ; ಗೂಟ; ಸ್ನಾಯು; ಶರೀರದಲ್ಲಿ ನಾರಿನಂಥ ಒಂದು ಭಾಗ; ನಾರು.

ನರಕ ನರಕಾಸುರ; ಪಾಪ ಮಾಡಿದವರನ್ನು ದಂಡಿಸುವ ಸ್ಥಳ; ಕೊಳಚೆ ರಾಶಿ.

—ಕೂಪ ಪಾಪಿಗಳನ್ನು ತಳ್ಳುವ ಬಾವಿ.

ನರಕಚತುರ್ದಶಿ ಕೃಷ್ಣನು ನರಕಾಸುರನನ್ನು ಕೊಂದ ಸ್ಮರಣೆಗಾಗಿ ಅಶ್ವಿನಿ ಮಾಸದಲ್ಲಿ ನಡಸುವ ಒಂದು ಉತ್ಸವ.

ನರಕವಿ ಸಾಮಾನ್ಯ ಕವಿ; ಕೀಳು ಕವಿ.

ನರಕಾರಿ (ನರಕಾಂತಕ), ಕೃಷ್ಣ.

ನರಕಾಸುರ ಭೂಮಿಯ ಮಗನಾದ ಒಬ್ಬ ರಾಜ. ಈತನನ್ನು ಕೃಷ್ಣನು ಕೊಂದನು; ಪ್ರಾಗ್ಜ್ಯೋತಿಷವು ಈತನ ರಾಜಧಾನಿ.

ನರಕು (ನರುಕು), ನಗ್ಗು, ಜಜ್ಜು; ನರಳು.

ನರಗುರಿ (ನರಕುರಿ), ಹೇಡಿ, ಪುಕ್ಕ, ಅಂಜುಬುರುಕ; ತೀರ ಸಾಧುವಾದವ.

ನರಟು ನರಳು; ಗೊಣಗು, ಒಟಗುಟ್ಟು.

ನರಡು ಒರಟು; ಅವಿನಯ; ಹುಂಬತನ.

ನರನಾಥ ನರಪತಿ, ಅರಸ.

ನರನಾರಾಯಣ ಕೃಷ್ಣಾರ್ಜುನ ಸ್ವರೂಪಿಯಾಗಿದ್ದ ಒಬ್ಬ ಋಷಿ; ವಿಷ್ಣುವಿನ ಒಂದು ಅವತಾರ; ಋಷಿ ಭೇದ.

ನರಬಲಿ ಮನುಷ್ಯನನ್ನು ಬಲಿಕೊಡುವ ಯಜ್ಞ ಇಲ್ಲವೆ ಪೂಜೆ.

ನರಭಕ್ಷಕ ಮನುಷ್ಯರನ್ನು ತಿನ್ನುವ ಜನರು; ರಾಕ್ಷಸರು; ಮನುಷ್ಯನನ್ನು ತಿನ್ನುವ ಹುಲಿ.

ನರಮೇಧ ಮನುಷ್ಯನನ್ನು ಯಾಗಮಾಡುವ ಒಂದು ಯಜ್ಞವಿಧಿ.

ನರಯಣ (ನಾರಾಯಣ).

ನರಲ್ (ನರಲು, ನೆರಳು) ವೇದನೆಯಿಂದ ಕೂಗು, ನವೆ.

ನರಲೋಕ ಭೂಲೋಕ.

ನರವಾಹನ ಮನುಷ್ಯನೇ ವಾಹನವಾಗಿ ಉಳ್ಳವ; ನಿಋತಿ ಎಂಬ ದಿಕ್ಪಾಲ.

ನರಸಿಂಹ (ನರಹರಿ), ಪ್ರಹ್ಲಾದನ ರಕ್ಷಣೆಗಾಗಿ ಹಿರಣ್ಯಕಶಿಪುವೆಂಬ ರಾಕ್ಷಸನ ವಧೆಗೆ ವಿಷ್ಣು ತಾಳಿದ ರೂಪ. ಅರ್ಧ ಮನುಷ್ಯ, ಅರ್ಧ ಸಿಂಹದ ಆಕಾರ.

ನರಳು (ನರಲು, ನರಕು) ಕಷ್ಟಪಡು, ನೋವಿಂದ ಅಳು; ರೋದಿಸುವ ಧ್ವನಿ.

ನರಿ ಶೃಗಾಲ, ಜಂಬುಕ.

ನರು (ನಾರು), ವಾಸನೆ, ಕಂಪು.

—ಕಂಪು ಪರಿಮಳ; ಒಂದು ಹುಲ್ಲು.

—ತಂಬುಲ ಪರಿಮಳವುಳ್ಳ ವೀಳೆಯ.

—ಸುಯ್ ಪರಿಮಳದ ಉಸಿರು.

ನರುಗು ಬೂದುಬಣ್ಣ.

ನರುಜು ಕಲ್ಲುಹರಳು, ಜಲ್ಲಿಕಲ್ಲು.

ನರೆ ಬೂದುಬಣ್ಣ; ಬೂದುಬಣ್ಣವಾಗು; ಕೂದಲು ಬಿಳಿಯಾಗು; ಮುಪ್ಪು.

ನರೇಂದ್ರ ರಾಜ.

ನರ್ಚು (ನಚ್ಚು).

ನರ್ತಕ ನರ್ತಿಸುವವ, ಕುಣಿವವ.

ನರ್ತಕಿ ಕುಣಿವವಳು.

ನರ್ತನ ಕುಣಿತ.

ನರ್ತಿಸು ಕುಣಿ; ಹಾರಾಡು.

**ನರ್ಮ** ಪರಿಹಾಸ್ಯ, ವಿನೋದ; ಆಟ; ಪರಿಹಾಸ್ಯಮಾಡು.

—**ಕರಣ** ವಿನೋದಮಾಡು,ಆಟವಾಡು.

**ನರ್ಮದಾ** (ನರ್ಮದೆ), ಮಧ್ಯಹಿಂದುಸ್ಥಾನದಿಂದ ಹರಿದು ಪಡುಕಡಲಿಗೆ ಕೂಡುವ ಒಂದು ನದಿ. ಈ ನದಿಗೆ ಸ್ತ್ರೀರೂಪವನ್ನು ಆರೋಪಿಸಿದ ಕತೆಗಳಿವೆ. ಆಕೆ ಮೇಕಲನೆಂಬ ಋಷಿಯ ಕುವರಿಯೆಂದು ಹೇಳಿದೆ. ರೇವಾ, ಪೂರ್ವಗಂಗೆ, ಇಂದುಜೆ ಮೊದಲಾದ ಹೆಸರುಗಳು ಇದಕ್ಕೆ ಇವೆ.

**ನರ್ಮಸಖ** (ನರ್ಮಸಚಿವ).

**ನರ್ಮಸಚಿವ** ಅರಸನ ಮೆಚ್ಚಿನ ಮಂತ್ರಿ; ಅರಸನ ವಿನೋದಗಳಲ್ಲಿಯೂ ಬೆರೆಯುವ ಮಂತ್ರಿ.

**ನಲ್** ಒಳ್ಳೆಯ.

**ನಲ**(ನಳ),ನಳರಾಯ. ವೀರಸೇನನೆಂಬ ದೊರೆ ಮಗ. ಇವನು ವಿದರ್ಭದೇಶದ ದಮಯಂತಿಯನ್ನು ಮದುವೆಯಾದನು. ಜೂಜಾಡಿ ಸೋತು, ರಾಜ್ಯಭ್ರಷ್ಟನಾಗಿ, ಹೆಂಡತಿಯನ್ನು ಅಗಲಿ, ಬಹು ಕಷ್ಟದಿಂದ ತಿರುಗಿ ಅವಳನ್ನು ಸೇರಿ ಸುಖಿಸಿದನೆಂದು ಕಥೆ; ರಾಮನ ಸೇನೆಯ ಕಪಿನಾಯಕ. ಈತನು ಲಂಕೆಗೆ ಹೋಗಲು ಸೇತು ರಚಿಸಿದನು.

**ನಲಕೂಬರ**(ನಳಕೂಬರ), ಕುಬೇರನ ಮಗ.

**ನಲಗು** (ನಲುಗು), ಹಿಚಿಕಿ ಮುದ್ದೆಯಾಗು; ಬಾಡು, ಸೊರಗು, ಕುಂದು; ಪೀಡೆ.

—**ಇಸು** ಪೀಡಿಸು, ತೊಂದರೆಗೊಳಿಸು.

**ನಲವು** (ನಲುವು) ನಿತ್ರಾಣ, ಅಶಕ್ತತೆ.

—**ಆನು** ಸಂತೋಷಪಡು.

—**ಏರು** ಸಂತೋಷಗೊಳ್ಳು; ಸಂತೋಷ ಹೆಚ್ಚು, ಮುದವೇರು.

**ನಲಿ** ಸಂತೋಷಪಡು; ಕುಣಿ; ಸಂತೋಷ; ನಟ.

—**ವು** (ನಲವು) ಅಶಕ್ತಿ, ತೆಳ್ಳಗಾಗುವಿಕೆ; ಸಂತೋಷ.

**ನಲಿಕಾ** (ಸಂ) ನಳಿಗೆ(ವೃ), ಲಳಿಗೆ, ನಲ್ಲಿ, ಒಳಗೆ ತೂತಿರುವ ನಾಳ, ಕೊಳವೆ.

**ನಲಿದಾಡು** ಹರ್ಷದಿಂದ ಕುಣಿದಾಡು; ಉಲ್ಲಾಸದಿಂದ ಚಲಿಸು.

**ನಲಿನ** (ನಳಿನ), ಚಂದ್ರಕಿರಣದಿಂದ ಮುಚ್ಚುವುದು; ತಾವರೆ.

**ನಲಿನಿ** (ನಳಿನಿ), ತಾವರೆ; ತಾವರೆ ಇರುವ ಕೆರೆ, ಕೊಳ.

**ನಲುಗು** ಬಲಹೀನವಾಗು, ಪೀಡೆಹೊಂದು.

**ನಲ್ಗುಟುಕು** ಹಕ್ಕಿಗಳು ಮರಿಗಳಿಗೆ ಉಣಿಸುವ ತುತ್ತು.

**ನಲ್ಮೆ** ಸ್ನೇಹ; ಕೂರ್ಮೆ; ಶುಭ, ಒಳ್ಳೆಯದು; ಅಭಿವೃದ್ಧಿ.

—**ಗಾರ್ತಿ** ಪ್ರೇಯಸಿ, ಪ್ರಿಯತಮೆ.

**ನಲ್ಲ** ಪತಿ, ಗಂಡ, ಇನಿಯ; ಚೆಲುವ; ಪ್ರಿಯ.

**ನಲ್ಲದು** ಒಳ್ಳೆಯದು.

**ನಲ್ಲಿ** ನೀರು ಹರಿಯುವ ನಳಿಗೆ; ನಾಳ, ನಳ.

**ನಲ್ಲೆ** (ನಲ್ಲಳ್), ಪ್ರಿಯಳು; ಇನಿಯೆ; ಚೆಲುವೆ.

**ನಲ್ವ** ನಾನ್ನೂರು ಗೇಣು ವಿಸ್ತಾರ.

**ನಲ್ವರಕೆ** ಒಳ್ಳೆ ಹರಕೆ, ಶುಭಾಶೀರ್ವಾದ.

**ನವ** ಹೊಸ; ಸ್ತೋತ್ರ; ಒಂಬತ್ತು; ಈಚೆಗಿನ, ಇತ್ತೀಚಿನ; ಎಳಯ.

—**ಕ** ನವೀನ, ಹೊಸ; ಎಳಯ; ನೂತನ.

—**ಮ** ಒಂಬತ್ತನೆಯ.

—**ಮಿ** ಪಕ್ಷದ ಒಂಬತ್ತನೇ ದಿನ.

**ನವಖಂಡ** ಭೂಮಿಯ ಮೇಲಿನ ಒಂಬತ್ತು ಖಂಡಗಳೆಂದು ನಮ್ಮ ಪ್ರಾಚೀನರು ತಿಳಿದ ಭೂಭಾಗಗಳು—ಭಾರತ, ನರಭೂ, ಕಿಂಪುರುಷ, ಹರಿವರ್ಷ, ಭದ್ರಾಶ್ವ, ಉತ್ತರಕುರು, ಹಿರಣ್ಮಯ, ಇಳಾವೃತ, ಕೇತುಮಾಲ.

**ನವಗ್ರುಹ** ಒಂಬತ್ತು ಗ್ರಹಗಳು—ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು.

— **ಹೋಮ** ಅರಿಷ್ಟ ನಿವಾರಣೆಗಾಗಿ ಮಾಡುವ ಒಂದು ಹೋಮ.

**ನವಟಾಕು** (ನೌಟಾಕು) ಮೂರು ತೊಲೆ ತೂಕ; ಒಂದು ಔನ್ಸು.

**ನವಣೆ** ಕಂಗು, ಒಂದು ಧಾನ್ಯ.

**ನವತಿ** ತೊಂಬತ್ತು.

**ನವದಲ** ಕಮಲದ ಕರ್ಣಿಕೆಯ ಸುತ್ತಲೂ ಇರುವ ದಳ; ನಯವಾದ ದಳ.

**ನವದ್ವಾರ** ಒಂಬತ್ತು ಬಾಗಿಲುಗಳು, ಶರೀರದ ಒಂಬತ್ತು ರಂಧ್ರಗಳು.

**ನವಧಾನ್ಯ** ಗೋಧಿ, ಬತ್ತ, ಉದ್ದು, ಹೆಸರು, ಕಡಲೆ, ತೊಗರಿ, ಹುರುಳಿ, ಅವರೆ, ಎಳ್ಳು ಈ ಒಂಬತ್ತು ಕಾಳುಗಳು.

**ನವನಿಧಿ** ಕುಬೇರನ ಒಂಬತ್ತು ಸಂಪತ್ತುಗಳು—ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ನಂದ, ನೀಲ, ಖರ್ವ.

**ನವನೀತ** ಹೊಸತಾಗಿ ತೆಗೆದ ಬೆಣ್ಣೆ, ಬೆಣ್ಣೆ.

— **ಕ** ಬೆಣ್ಣೆಯ ವಿಕಾರ, ತುಪ್ಪ.

— **ಚೋರ** ಬೆಣ್ಣೆಕಳ್ಳ, ಕೃಷ್ಣ.

**ನವರತ್ನ** ಒಂಬತ್ತು ರತ್ನಗಳು—ವಜ್ರ, ಮಾಣಿಕ್ಯ, ಮರಕತ, ಪುಷ್ಯರಾಗ, ನೀಲ, ಗೋಮೇಧಿಕ, ವೈಡೂರ್ಯ, ಮುತ್ತು, ಹವಳ; ವಿಕ್ರಮಾದಿತ್ಯ ರಾಯನ ಸಭೆಯಲ್ಲಿದ್ದ ಒಂಭತ್ತು ಮಂದಿ ಪಂಡಿತರು (ಕಾಳಿದಾಸ ಮೊದಲಾದವರು).

**ನವರಸ** ಒಂಬತ್ತು ಭಾವವಿಕಾರಗಳು—ಶೃಂಗಾರ, ಹಾಸ್ಯ, ವೀರ, ಕರುಣ, ಅದ್ಭುತ, ಭಯಾನಕ, ಬೀಭತ್ಸ, ರೌದ್ರ, ಶಾಂತ—ಇವೇ ರಸಗಳು; ಹೊಸ ರಸ; ಅಮೃತ; ಜೇನು, ಜೇನುತುಪ್ಪ.

**ನವರಂಗ** ದೇವಾಲಯದಲ್ಲಿ ಗರ್ಭಗುಡಿಯ ಮುಂದಿನ ಮಂಟಪ.

**ನವರಂಧ್ರ** ಶರೀರದ ಒಂಬತ್ತು ರಂಧ್ರಗಳು.

**ನವರಾತ್ರಿ** ದುರ್ಗಾಪೂಜೆ ನಡೆಯುವ ಒಂಬತ್ತು ರಾತ್ರಿಗಳು; ದಸರೆ.

**ನವಸಾಗರ** ಒಂದು ಲವಣ. ಕಲಾಯಿ ಕೆಲಸಕ್ಕೆ ಇದರ ಉಪಯೋಗವಿದೆ.

**ನವಸಿಗ** ಪರರನ್ನು ಕಾಡುವವ, ಊರುಡುಕ.

**ನವಾನ್ನ** ಹೊಸ ಹಕ್ಕಿಯ ಅನ್ನ; ಹೊಸತೂಟ.

**ನವಾಬ** ಮುಸಲ್ಮಾನ ನಾಯಕ, ಮುಸಲ್ಮಾನ ಪಾಳೆಯಗಾರ; ಮುಸಲ್ಮಾನ ಅರಸ.

**ನವಾಯಿ** ಹೊಸತು, ಹೊಸ ರೀತಿ; ಸೌಂದರ್ಯ; ವೈಭವ.

— **ಕಾರ** ಉಲ್ಲಾಸಿ, ಉತ್ಸಾಹಿ; ಜವ್ವನಿಗ.

**ನವಿರ್** (ನವಿರು), ಕೂದಲು, ತಲೆಗೂದಲು.

— **ಏಳ್** ಕೂದಲು ನಿಗುರು; ರೋಮಾಂಚವಾಗು; ಜುಮ್ಮೆನ್ನು.

**ನವಿಲು** ಮಯೂರ, ಕೇಕಿ.

**ನವಿಲುಡೇಗೆ** ಡೇಗೆಯಲ್ಲಿ ಒಂದು ಜಾತಿ.

**ನವೀನ** ಹೊಸತು, ನೂತನ.

**ನವುಕರಿ** (ನೌಕರಿ), ಸೇವೆ; ಉದ್ಯೋಗ.

**ನವುಬತ್** (ನೌಬತ್), ನಗಾರಿ.

**ನವುರು** ತೆಳ್ಳಗಿನ; ಕೋಮಲ; ಸಪುರ; ಮಿದು; ಲಲಿತ.

**ನವೆ** (ನಮೆ), ಕೃಶವಾಗು, ಸೊರಗು, ಕ್ಷೀಣವಾಗು; ಕಷ್ಟಪಡು; ನರಳು; ತುರಿಕೆ, ತೀಟೆ.

**ನವ್ಯ** ಹೊಸ; ನವೀನ; ನೂತನ.

**ನಶನ** ನಾಶ, ಮಾಯ, ಕಾಣೆಯಾಗುವಿಕೆ.

**ನಶಿಸು** ನಾಶವಾಗು; ಹಾಳಾಗು, ಕೆಡು.

**ನಶೀಬು** (ನಸೀಬ), ಅದೃಷ್ಟ, ದೈವ.

**ನಶ್ವರ** ನಾಶವಾಗುವ, ಚಂಚಲವಾದ.

**ನಷ್ಟ** ಅಡಗಿದ; ಹಾನಿ, ನಾಶ; ದ್ರವ್ಯಹಾನಿ; ಒಂದು ಬಗೆ ಗಣಿತ (ಜ್ಯೋತಿಷದಲ್ಲಿ).

**ನಷ್ಟಕಾಲ** ಹಾನಿ ಸಂಭವಿಸುವ ಕಾಲ; ಕಳೆದು ಹೋದ ಸಮಯ, ಅಳಿಗಾಲ.

**ನಷ್ಟಜಾತಕ** ಹೋದ ಜಾತಕ; ನಷ್ಟವಾದ ಜಾತಕವನ್ನು ಗಣಿತದ ಮೇಲಿಂದ ತಿರುಗಿ ಎಣಿಸಿ ಬರೆದುದು.

**ನಷ್ಟಪದ** ತಪ್ಪಿದ ಪದವಿ, ಹೋದ ಪದವಿ.

**ನಷ್ಟಾಗ್ನಿ** ಜಾತಿಗೆಟ್ಟ ಬ್ರಾಹ್ಮಣ; ಚ್ಯುತಿಗೊಂಡ ಬ್ರಾಹ್ಮಣ.

**ನಷ್ಟಿ** ನಾಶ, ಹಾನಿ; ಇಳಿತಾಯ.

**ನಷ್ಟೇಂದುಕಲಾ** ಕುಗ್ಗಿದ ಕಲೆಯುಳ್ಳವ, ಅಮಾವಾಸ್ಯೆಯ ಚಂದ್ರ.

**ನಷ್ಟೇಂದ್ರಿಯ** ಅವಯವ ಶೂನ್ಯ; ಸಂತತಿ ಶಕ್ತಿ ಕಳೆದುಕೊಂಡವ, ಸೂಗ.

**ನಸರಿ** ಜೇನು; ಜೇನ್ಮೊಣ.

**ನಸಿ** ಕ್ಷೀಣವಾಗು, ಒಡವಾಗು; ಸವೆ; ಜಡ ವಾಗು; ಚಲನೆ ಇಲ್ಲದಾಗು.

**ನಸಿಕು** (ನಸಕು), ಜೀರ್ಣವಾಗು, ಸವೆ; ಬೆಳಗಿನ ನಸುಗತ್ತಲು, ಹೊತ್ತಾರೆ, ಹರಿ.

**ನಸು** ಸ್ವಲ್ಪ, ತುಸು; ಕುಂದಿದ ಸ್ಥಿತಿ.

**—ಆಗು** ಬೆಳಕು ಹರಿ.

**—ಕು** ತುಸುವೇ ಬೆಳಕುಳ್ಳ ವೇಳೆ, ಹೊತ್ತಾರೆ, ಮುಂಜಾನೆ.

**—ತೋರು** ಸ್ವಲ್ಪ ಕಾಣಿಸು.

**ನಸುಗುನ್ನಿ** ನಾಯಿಸೊಣಗನ ಬಳ್ಳಿ.

**ನಸುನಗು** ಸ್ವಲ್ಪ ನಗು.

**ನಸುವಾಗು** ಸ್ವಲ್ಪ ಬಾಗು.

**ನಸುವಾತು** ಸ್ವಲ್ಪ ಮಾತು, ಕಡಮೆ ಮಾತು.

**ನಸೆ** ಕಾಮಾತುರತೆ, ವಿಷಯಾಸಕ್ತಿ; ಸಲಿಗೆ; ನವೆ, ತೀಟೆ, ತಿಂಡಿ.

**—ಗಾರ** ತೊಂದರೆಕೊಡುವವ; ಕಾಮ.

**ನಸ್ತ** ಮೂಗು.

**ನಸ್ಯ** ಮೂಗಿಗೆ ಹಿತವಾದುದು; ಹೊಗೆಸೊಪ್ಪಿಂದ ಮಾಡುವ ನಶ್ಯ, ಪುಡಿ.

**ನಹನ** ತೊಡುವಿಕೆ; ಕಟ್ಟುವಿಕೆ.

**ನಹುಷ** ಚಂದ್ರವಂಶದ ದೊರೆ. ಈತನಿಗೆ ಯಯಾತಿ ಮೊದಲಾದ ಮಕ್ಕಳಿದ್ದರು. ಒಮ್ಮೆ ಇವನಿಗೆ ಇಂದ್ರಪದವಿ ಪ್ರಾಪ್ತಿಸಿತು. ಆಗ ಅವನು ಸಪ್ತರ್ಷಿಗಳಿಂದ ತನ್ನ ಪಲ್ಲಕ್ಕಿಯನ್ನು ಹೊರಿಸಿದ್ದಲ್ಲದೆ ಅವರಲ್ಲಿ ಒಬ್ಬನಾದ ಅಗಸ್ತ್ಯನನ್ನು ತುಳಿದು ಶಾಪಕ್ಕೀಡಾದನು. ಧರ್ಮರಾಯನಿಂದ ಆ ಶಾಪ ವಿಮೋಚನೆಯಾಯಿತು.

**ನಳಪಾಕ** ನಳನ ಅಡಿಗೆ; ಅತಿ ಸವಿಯಾದ ರಸಪಾಕ.

**ನಳನಳಿಸು** ಸುಂದರವಾಗಿ ಕಾಣಿಸು; ಶೋಭಿಸು; ಮಿದುವಾಗಿರು; ಕೋಮಲವಾಗು.

**ನಳಿ** ನಮಿಸು, ಬಾಗು; ಕೋಮಲ.

**ನಳಿಗೆ** ನಲ್ಲಿ; ಓಟೆ; ಒಳಗೆ ತೂತಾಗಿರುವ ದಂಡ.

**ನಳಿನ** (ನಲಿನ), ತಾವರೆ.

**ನಳಿನಾಕ್ಷ** ತಾವರೆಯಂತೆ ಕಣ್ಣಿರುವವ, ಕೃಷ್ಣ.

**ನಳಿನಿ** (ನಲಿನಿ), ಕಮಲವುಳ್ಳದು, ಕೆರೆ, ಕೊಳ.

**ನಳಿತೋಳ್** (ನಳಿದೋಳು), ಕೋಮಲವಾದ ತೋಳು, ಎಳೆದೋಳು.

**ನಳ್ಳಿ** ಎಸಡಿ, ಏಡಿ; ನಳಿಗೆ, ನೀರಿನ ನಳ.

**ನಳ್ಳು** ನೆಲ ಇಲ್ಲವೆ ಪಾತ್ರೆಯಲ್ಲಿ ಆಗುವ ತಗ್ಗು; ನಗ್ಗು, ನಳಕು.

**ನಂಜಿಡಿ** ವಿಷ ಬೆರೆ.

**ನಂಜು** ವಿಷ; ಕಚ್ಚಿ ತಿನ್ನು, ಕಡಿದು ತಿನ್ನು.

**ನಂಜುಗೊರಲ** ಕೊರಳಲ್ಲಿ ವಿಷವುಳ್ಳವ, ಶಿವ.

**ನಂಜುಂಡ** ವಿಷಪಾನ ಮಾಡಿದವ, ಶಿವ.

**ನಂಟ** ಸಂಬಂಧಿ, ಬಂಧು; ಆತ್ಮೀಯ, ಆಪ್ತ.

**—ತನ** ಸಂಬಂಧತೆ.

**—ಸ್ತಿಕೆ** ನಂಟುತನ.

**ನಂಟಿತಿ** ಸ್ತ್ರೀ ಸಂಬಂಧಿ.

**ನಂಟು** ಸ್ನೇಹ, ಸಂಬಂಧ.

**ನಂದ** ಸಂತೋಷ; ಗೋಕುಲದಲ್ಲಿ ಕೃಷ್ಣ

ನನ್ನು ಸಾಕಿದ ಗೊಲ್ಲ. ಒಬ್ಬ ಗೋಪ. ಮಹಾನಂದನ ಮಗ; ಪಾಟಲಿಪುತ್ರದಲ್ಲಿ ಮಗಧ ದೇಶವನ್ನಾಳಿದ ಅರಸುಕುಲದವರು. ಇವರನ್ನು ಚಾಣಕ್ಯನ ಬಲದಿಂದ ಚಂದ್ರಗುಪ್ತನು ಪದಚ್ಯುತರನ್ನಾಗಿ ಮಾಡಿದನು.

—**ನಂದನ** ನಂದನ ಸಾಕುಮಗ, ಕೃಷ್ಣ.

**ನಂದಕ** ವಿಷ್ಣುವಿನ ಒಂದು ಖಡ್ಗ; ಕುಲರಕ್ಷಕ.

**ನಂದನ** ಸಂತೋಷಪಡಿಸುವ; ಮಗ; 26ನೆಯ ಸಂವತ್ಸರ; ಇಂದ್ರನ ಒಂದು ಉದ್ಯಾನ.

**ನಂದನೆ** ಮಗಳು.

**ನಂದವರ್ತಿ** ನಂದಿಬಟ್ಟಲು, ಅದರ ಹೂ.

**ನಂದಾ** (ನಂದೆ), ಗೌರಿ, ಪಾರ್ವತಿ; ಒಂದು ತಿಥಿ; ಏಕಾದಶಿ ಮತ್ತು ಷಷ್ಠಿ.

**ನಂದಾದೀಪ** ನಂದದೆ ಉರಿಯುವ ದೀಪ.

**ನಂದಿ** ಶಿವನ ವಾಹನವಾದ ವೃಷಭ, ಬಸವ; ಶಿವನ ಗಣಗಳಲ್ಲಿ ಒಬ್ಬ; ಒಂದು ಜಾತಿಯ ಮರ; ಹರ್ಷ, ತೋಷ; ಶುಭ.

**ನಂದಿಕೇಶ** ನಂದಿಕೇಶ್ವರ. ಶಿವನ ಒಬ್ಬ ಗಣಪಮುಖ.

**ನಂದಿಕೇಶ್ವರ** ನಾಟ್ಯಶಾಸ್ತ್ರವನ್ನು ಬರೆದ ಪಂಡಿತ.

**ನಂದಿಗ್ರಾಮ** ಅಯೋಧ್ಯೆ ಸಮೀಪದ ಒಂದು ಸ್ಥಳ. ಇಲ್ಲಿ ಭರತನು ಅರಣ್ಯಕ್ಕೆ ಹೋದ ರಾಮನನ್ನು ಇದಿರುಕಾಯುತ್ತ ಹದಿನಾಲ್ಕು ವರ್ಷಕಾಲ ಕಳೆದನು.

**ನಂದಿತ** ತೃಪ್ತ; ಹರ್ಷಗೊಂಡ.

**ನಂದಿಧ್ವಜ** ವೀರಶೈವರ ಒಂದು ಪತಾಕೆ.

**ನಂದಿನಾಗರ** ದೇವನಾಗರಿ ಬರಹದಂತಹ ಒಂದು ಲಿಪಿ; ಒಂದು ದ್ವೀಪ.

**ನಂದಿನಿ** ವಸಿಷ್ಠನಿಗೆ ಸೇರಿದ್ದ ಒಂದು ಹಸು; ಮಗಳು; ಪಾರ್ವತಿ; ಗಂಗೆ; ಸಂತೋಷ ಉಂಟುಮಾಡುವ ಸ್ತ್ರೀ.

**ನಂದಿನೀಸುತ** ನಂದಿನಿ ಎಂಬವಳ ಮಗ. ವ್ಯಾಕರಣಕಾರನಾದ ವಾಡಿ ಎಂಬ ಮುನಿ.

**ನಂದಿಮಂಟಪ** ಶಿವಾಲಯಗಳ ಮುಂಗಡೆ ಬಸವನಿಗಿರುವ ಮಂಟಪ.

**ನಂದಿವಾಹನ** ನಂದಿ ವಾಹನವಾಗಿರುವ ಶಿವ.

**ನಂದು** (ನೊಂದು) ತಣಿ; ಶಾಂತವಾಗು; ಆರು; ನಾಶವಾಗು.

—**ಇಸು** ದೀಪವನ್ನೊ ಬೆಂಕಿಯನ್ನೊ ತಣಿಸು, ಆರಿಸು; ಶಾಂತಪಡಿಸು.

**ನಂಬಿಕಸ್ಥ** ವಿಶ್ವಾಸಾರ್ಹ, ನಚ್ಚಿಗೆ ತಕ್ಕವ; ನಂಬಿಕೆ ಉಳ್ಳವ.

**ನಂಬಿಕೆ** (ನಂಬಿಗೆ) ವಿಶ್ವಾಸ, ನಚ್ಚು, ಭರವಸೆ.

**ನಂಬು** ವಿಶ್ವಾಸವಿರಿಸು, ಭರವಸೆ ಇರಿಸು; ಊಹಿಸು.

—**ಇಸು** ನಂಬುವಂತೆ ಮಾಡು.

—**ಗೆ**(ನಂಬಿಕೆ) ಭರವಸೆ, ವಿಶ್ವಾಸ; ಭರವಸೆ ಹೊಂದು, ಪ್ರಮಾಣವನ್ನು ಪಡೆ.

**ನಂಬೂದಿರಿ** ಕೇರಳದ ಅದ್ವೈತ ಸಂಪ್ರದಾಯದ ಬ್ರಾಹ್ಮಣ.

**ನಾ** ಮನುಷ್ಯ; ನಿಷೇಧ; ಇಲ್ಲ.

**ನಾಕ** ದುಃಖವಿಲ್ಲದ ಸ್ಥಾನ, ಸ್ವರ್ಗ; ಆಕಾಶ; ಭೂಮಿ.

**ನಾಕಿ** ಸ್ವರ್ಗದಲ್ಲಿರುವವ, ದೇವತೆ; ಅಜಿತಸೇನ ಪಂಡಿತ.

**ನಾಕು** ನಾಲ್ಕು; ನಾಕ; ಇರುವೆ ಹುತ್ತ.

**ನಾಗ** ಅಸ್ಸಾಮಿನ ಬೆಟ್ಟಗಳ ಒಂದು ಜನವರ್ಗ; ಬೆಟ್ಟದಲ್ಲಿರುವುದು—ಆನೆ; ವಾಸುಕಿ; ಸರ್ಪ; ಆಕಾಶ; ನಾಗಕೇಸರ; ಮುತ್ತು.

**ನಾಗಕನ್ಯೆ** ಸರ್ಪಕನ್ಯೆ, ಮುಖ ಮನುಷ್ಯನದೂ ಶರೀರ ಹಾವಿನದೂ ಆದ ಒಂದು ಅರೆಮಾನುಷ ಜಾತಿ.

**ನಾಗಕಂಕಣ** ಸರ್ಪವೇ ಬಳೆಯಾಗಿ ಉಳ್ಳವ, ಶಿವ.

ನಾಗಕೇಸರ ಒಂದು ಜಾತಿ ಮರ, ಅದರ ಹೂವಿನ ಕೇಸರ.
ನಾಗದಂತ ಆನೆಯ ದಾಡೆ.
ನಾಗನಗರಿ ಹಸ್ತಿನಾಪುರ.
ನಾಗಪಂಚಮಿ ಶ್ರಾವಣ ಶು। ಪಂಚಮಿ. ಈ ದಿನ ಸರ್ಪಾರಾಧನೆ ಮಾಡುವರು.
ನಾಗಪಾಶ ಹೊಸ ಹಗ್ಗ; ವರುಣನ ಒಂದು ಅಸ್ತ್ರ.
ನಾಗಭೂಷಣ ಶಿವ; ಆನೆಗಳಿಂದ ಅಲಂಕರಿ ಸಲ್ಪಟ್ಟದು.
ನಾಗರ ಪಟ್ಟಣದವ; ವಿದ್ವಾಂಸ; ಒಂದು ಜಾತಿ ಹಾವು, ಸರ್ಪ; ತಡೆ, ಪ್ರತಿಬಂಧ; ಕೆಟ್ಟ; ಶುಂಠಿ.
ನಾಗರತ್ನ ಸರ್ಪನ ತಲೆಯ ಮಾಣಿಕ್ಯ.
ನಾಗರಾಜ ಮಹಾಶೇಷ; ಐರಾವತ.
ನಾಗರಿ ಚತುರ ಸ್ತ್ರೀ; ದೇವನಾಗರಿ ಬರಹ.
ನಾಗರಿಕ (ನಾಗರಕ), ಸಂಸ್ಕೃತನಾದವ; ಪಟ್ಟಣಿಗ; ಕಳ್ಳ; ಶಿಲ್ಪಿ; ಚಿಪ್ಪಿಗ.
ನಾಗರೀಕತೆ ಪಟ್ಟಣದ ಸಂಸ್ಕೃತಿ; ನಗರದ ಸಭ್ಯತೆ.
ನಾಗಲೆ ವಿಜಯನಗರದ ಕೃಷ್ಣದೇವರಾಯನ ಪ್ರೇಯಸಿ ನಾಗಲಾಂಬಿಕೆ.
ನಾಗಲೋಕ ಸರ್ಪಗಳ ವಾಸಸ್ಥಾನವಾದ ಲೋಕ, ಪಾತಾಳ.
ನಾಗವರ್ಮ ಅಜಿತಸೇನ ಪಂಡಿತ; ಛಂದಸ್ಸು ಶಾಸ್ತ್ರವನ್ನು ಬರೆದ ಒಬ್ಬ ಕನ್ನಡ ವಿದ್ವಾಂಸ. ಕಾವ್ಯಾವಲೋಕನ ಎಂಬ ಗ್ರಂಥ ಬರೆದ ಕನ್ನಡ ಕವಿ.
ನಾಗವಲ್ಲಿ ವೀಳೆಯದೆಲೆ; ವಿವಾಹಕಾಲದ ಒಂದು ಕ್ರಮ, ಮದುಮಕ್ಕಳಿಗೆ ತಾಂಬೂಲ ಕೊಡುವಿಕೆ, ನಾಗೋಲಿ.
ನಾಗವಾಸ ನಟರ ಮನೆ; ನಾಟ್ಯಗಾತಿಯರ ಗುಂಪು.
ನಾಗವೇಣಿ ಸರ್ಪನಂತೆ ಜಡೆಯುಳ್ಳವಳು, ಚೆಲುವೆ.
ನಾಗಸರ (ದ್ಭ) ನಾಗಸ್ವರ (ಸಂ), ಸರ್ಪಗಳಿಗೆ ಪ್ರಿಯವಾದ ಒಂದು ವಾದ್ಯ.
ನಾಗಾರ್ಜುನ ಪ್ರಾಚೀನ ಕಾಲದ ಒಬ್ಬ ಬೌದ್ಧ ಪಂಡಿತ ಮತ್ತು ವಿಜ್ಞಾನಿ.
ನಾಗಾಶನ ಸರ್ಪವು ಆಹಾರವಾಗಿ ಉಳ್ಳದು, ಗರುಡ, ಹದ್ದು.
ನಾಗಿನಿ (ನಾಗಿಣಿ), ಸರ್ಪಸ್ತ್ರೀ.
ನಾಗೇಂದ್ರ ಸರ್ಪರಾಜ, ಮಹಾಶೇಷ; ಆನೆಗಳಲ್ಲಿ ಶ್ರೇಷ್ಠ, ಐರಾವತ.
ನಾಚಿಕೆ (ನಾಚಿಗೆ), ಲಜ್ಜೆ; ಸ್ತ್ರೀಯರ ಬಿನ್ನಾಣ.
ನಾಚು ಲಜ್ಜೆಗೊಳ್ಳು; ತಬ್ಬಿಬ್ಬಾಗು; ಸಂಕೋಚಹೊಂದು; ನರ್ತನ.
— ಇಸು ಲಜ್ಜೆತೋರುವಂತೆ ಮಾಡು.
ನಾಟ ನಾಡು, ಮೋಪು, ದೊಡ್ಡ ಮರದ ತುಂಡು; ಮುಂಡಿಗೆ, ತೊಲೆ.
ನಾಟಕ ನಟಿಸಿ ತೋರಿಸಿತಕ್ಕ ಕಾವ್ಯ; ನೃತ್ಯ.
— ಶಾಲೆ ನಾಟಕಗಳನ್ನು ತೋರಿಸುವ ಮನೆ; ರಂಗಭೂಮಿ.
ನಾಟೂರ ನಟನ ಮಗ.
ನಾಟಿ ನಟ್ಟ, ಬತ್ತದ ಸಸಿಗಳನ್ನು ಕಿತ್ತು ನಡುವಿಕೆ; ಒಂದು ರಾಗ ಜಾತಿ; ನಾಡಿನದು.
ನಾಟಿಕೆ (ನಾಟಕಾ), ಸ್ತ್ರೀಯೇ ಮುಖ್ಯ ಪಾತ್ರವಾಗಿ ಉಳ್ಳ ನಾಲ್ಕು ಅಂಕದ ನಾಟಕ; ನಡುವಿಕೆ.
ನಾಟು ನಾಟಿಸು, ನಡು; ಚುಚ್ಚು; ಒಳಗೆ ಸೇರಿಕೊಳ್ಳು; ಪರಿಣಾಮಕಾರಿಯಾಗು.
ನಾಟ್ಯ ನಟರ ಕೆಲಸ; ನೃತ್ಯ, ಗೀತ, ವಾದ್ಯಗಳು ಸೇರಿದುದು.
— ಉಕ್ತಿ ನಾಟಕದ ಮಾತು.
— ಗಾತಿ ನಟ; ಸೂಳೆ.
— ಗಾರ ನಟ, ನರ್ತನಕಾರ.

ನಾಡದು (ನಾಡಿದ್ದು), ನಾಳಿದ್ದು.
ನಾಡಾಡಿ ನಾಡಲ್ಲಿ ಸಂಚರಿಸುವವ; ಸಾಮಾನ್ಯ ಮನುಷ್ಯ; ಹಳ್ಳಿಯವ; ಅಲ್ಪ.
ನಾಡಿ ನಳಿಗೆ; ಮೈಯ ರಕ್ತನಾಳ; ನರ; ಮರದ ಗೆಲ್ಲು.
ನಾಡಿಕೆ ನಾಳ; ಹುಣ್ಣು, ವ್ರಣ; ಜಾಗಟೆ.
ನಾಡಿಗ ಮಠದ ಕೆಳಗಿನ ಒಬ್ಬ ಧರ್ಮಾಧಿಕಾರಿ; ನಾಡಿನವ.
ನಾಡಿದು ನಾಡಿದ್ದು, ನಾಳೆಯ ಮರುದಿನ.
ನಾಡಿಂದಮ ಸ್ವರ್ಣಕಾರ, ಸೊನೆಗಾರ, ಅಕ್ಕಸಾಲಿ, ಅಗಸಾಲಿ.
ನಾಡೀಜಂಘ (ನಾಳೀಜಂಘ), ನೀಳ ಕಾಲುಳ್ಳುದು, ಕೊಕ್ಕರೆ; ಕಾಗೆ.
ನಾಡು ಊರು; ಪ್ರಾಂತ, ದೇಶ.
ನಾಡೆ ಚೆನ್ನಾಗಿ; ಅತಿಶಯ, ಬಹಳ.
ನಾಣ್ ಲಜ್ಜೆ, ನಾಚಿಕೆ.
—ಗೈಸು ನಾಚಿಕೆಪಡಿಸು, ಅವಮಾನಿಸು.
—ಚು ನಾಚು, ಲಜ್ಜೆಗೊಳ್ಳು.
ನಾಣ ನಾಚಿಕೆ, ಲಜ್ಜೆ.
ನಾಣಕ ನಾಣ್ಯ.
ನಾಣಿಯ (ನಾಣೆಯ), ನಾಣ್ಯ (ಸಂ).
ನಾಣಿಲಿ ನಾಚಿಕೆ ಇಲ್ಲದ.
ನಾಣ್ದಾಣ ಲಜ್ಜಾಸ್ಥಾನ; ಸ್ತ್ರೀಪುರುಷರ ಗುಪ್ತ ಭಾಗಗಳು, ಸಂಸಾರ.
ನಾಣ್ನುಡಿ ಲೋಕದ ಮಾತು, ಗಾದೆ.
ನಾಣ್ಮೇಸಲ್ ಶುದ್ಧನಾಚಿಕೆ, ಅಖಂಡನಾಚಿಕೆ.
ನಾಣ್ಯ (ನಾಣಿಯ), ಚಲಾವಣೆಯ ಒಂದು ಲೋಹದ ಮುದ್ರಿಕೆ, ದುಡ್ಡು, ಹಣ.
—ಗಾರ ಯೋಗ್ಯ ಮನುಷ್ಯ, ವ್ಯವಹಾರಕ್ಕೆ ತಕ್ಕವ.
—ಶಾಲೆ ಟಂಕಸಾಲೆ.
ನಾತ ವಾಸನೆ; ಕೆಟ್ಟ ವಾಸನೆ.
ನಾತಿ ನಾಯುಕಿ.
ನಾಥ ಒಡೆಯ, ಯಜಮಾನ; ಶಿವ; ಪ್ರಾರ್ಥನೆಗೆ ಯೋಗ್ಯವಾದ; ಒಂದು ಮತಸಂಪ್ರದಾಯ.
ನಾದ ಶಬ್ದ; ಯೋಗಿಗಳಿಗೆ ಕಾಣಿಸುವ ಚಂದ್ರಬಿಂದು; ಉತ್ತಮ ವಾದ್ಯವಿಶೇಷ; ಗಾನದ ಉಲಿ; ಚಟ, ಚಾಳಿ.
ನಾದಮೂರ್ತಿ ಸ್ವರವೇ ತಾನಾಗಿ ಇರುವವ, ಶಿವ; ಸಂಗೀತದ ದೇವತೆ.
ನಾದಾರಿ ದರಿದ್ರ; ಏನೂ ಇಲ್ಲದವ; ದಿವಾಳಿಯಾದವ, ಬಗಲೆತ್ತಿದವ.
ನಾದಾರು ದಿವಾಳಿತನ, ಬರಿದಾಗುವಿಕೆ, ಕಂಗಾಲತನ.
ನಾದಿನಿ (ನಾದನಿ, ನಾದುನಿ) ಗಂಡನ ಸೋದರಿಯರಲ್ಲಿ ತನಗಿಂತ ಕಡಮೆ ವಯಸ್ಸಿನವಳು.
ನಾದು ನನೆಸು, ಒದ್ದೆಮಾಡು; ಕಲಸು.
ನಾದೇಯ ನದಿಯಿಂದ ದೊರೆತುದು, ನದಿನೀರು; ಸೈಂಧಲವಣ; ನದಿತೀರದ ಹೊಲ.
ನಾನ್ ಒದ್ದೆಯಾಗು, ನನೆ; ಕರಗು.
ನಾನಲ್ ಒಂದು ಜಾತಿ ಹುಲ್ಲು, ಗಲಗು.
ನಾನಾ ಅನೇಕ, ಬಗೆಬಗೆಯ, ವಿಧವಿಧ.
ನಾನಾರ್ಥ ಹಲವು ಅರ್ಥವುಳ್ಳುದು; ಬಹುಪ್ರಯೋಜನ ಉಳ್ಳುದು.
ನಾನು ತನಗೆ ತಾನು ಅನ್ನುವ ರೀತಿ.
ನಾಪಿತ ನಾಯಿಂದ, ಕ್ಷೌರಕ, ಕೆಲಸಿಗ.
ನಾಭ ಸ್ವರ್ಗೀಯ; ಗಗನದಲ್ಲಿ ಆಗುವ.
ನಾಭಿ ಗಾಡಿ ಚಕ್ರದ ಗುಮ್ಮ, ಗಾಡಿ ಚಕ್ರದ ತುಮುರು; ಕ್ಷತ್ರಿಯ; ಹೊಕ್ಕುಳು; ಕಸ್ತೂರಿ; ಕರೆಯುವ ದನ; ಮುಖ್ಯ.
—ಜ ವಿಷ್ಣುವಿನ ಹೊಕ್ಕುಳಲ್ಲಿ ಹುಟ್ಟಿದವ, ಬ್ರಹ್ಮ.
ನಾಮ ಹೆಸರು; ಸ್ವೀಕಾರ; ಆಶ್ಚರ್ಯ; ನೆನಪು; ಸಂಭಾವನೆ; ನಿಂದೆ; ಪ್ರಕಾಶಕ್ಕೆ

ಬಂದುದು; ಸಿಟ್ಟು; ಹಣೆಗೆ ಹಚ್ಚುವ ನೀಳ ತಿಲಕ; ಮೋಸ.

—ಅಂಕಿತ ಹೆಸರುಳ್ಳ, ಹೆಸರಾದ.

—ಹಾಕು ಮೋಸಮಾಡು.

ನಾಮಕರಣ ಮಕ್ಕಳಿಗೆ ಹೆಸರಿಡುವ ಸಂಸ್ಕಾರ, ಹೆಸರಿಡುವಿಕೆ.

ನಾಮದಾರ ಪ್ರಖ್ಯಾತ, ವಿಖ್ಯಾತ.

ನಾಮಧಾರಿ ಹೆಸರಾದವ; ವಿಖ್ಯಾತ; ಬರಿಯ ಹೆಸರಿಗೆ ತಕ್ಕ; ವೈಷ್ಣವ; ರಾಮಾನುಜ ಪಂಥದವ.

ನಾಮರ್ದ ಹೇಡಿ.

ನಾಮಶೇಷ ಹೆಸರಡಗಿಹೋದ; ಹುಟ್ಟಡಗಿದ.

ನಾಮಸ್ಮರಣೆ ದೇವರ ಹೆಸರಿನ ಜಪ.

ನಾಮಿ (ದ್ಭ) ನವಮಿ (ಸಂ), ಪಕ್ಷದ ಒಂಬತ್ತನೆಯ ದಿನ, (ನೋಮಿ).

ನಾಮೆ ದಾಖಲೆ; ಬರಹ, ದಸ್ತೈವೇಜು.

ನಾಯ ತೋರಿಸುವ; ಸಾಗಿಸುವ.

ನಾಯಕ ನಡಸುವವ; ಸ್ವಾಮಿ, ಒಡೆಯ; ಹಾರದ ಉತ್ತಮ ರತ್ನ; ಸೇನಾನಿ; ಪಾಳೆಯಗಾರ; ಶೃಂಗಾರ ರಸಕ್ಕೆ ಆಶ್ರಯ ಕೊಡುವ ಮುಖ್ಯ ವ್ಯಕ್ತಿ; ಕಥೆಯ ಮುಖ್ಯ ವ್ಯಕ್ತಿ, ಮುಂದಾಳು.

—ವಾಡಿ ಪ್ರಮುಖ, ಮುಖಂಡ.

ನಾಯಕಸಾನಿ ವೇಶ್ಯೆ, ಸೂಳೆ, ಪಾತ್ರದವಳು.

ನಾಯಕಿ (ದ್ಭ) ನಾಯಿಕಾ (ಸಂ), ಶೃಂಗಾರ ರಸಕ್ಕೆ ಅವಲಂಬನಕರಳಾದವಳು; ಅಭಿಸಾರಿಕೆ; ದುರ್ಗೆ; ಒಡತಿ.

ನಾಯಕಿತ್ತಿ (ನಾಯಕಿ).

ನಾಯನಕರ ವಾಜ್ಯಸಾಜ್ಯ, ಜಗಳಾಟ.

ನಾಯಬ ನವಾಬ, ಪಾಳೆಯಗಾರ.

ನಾಯಿ ಒಂದು ಪ್ರಾಣಿ, ಶುನಕ, ಕುನ್ನಿ.

ನಾಯಿಕೆಮ್ಮು ಎಪ್ಪತ್ತರ ಕೆಮ್ಮು.

ನಾಯಿಂದ ನಾಪಿತ, ಕ್ಷೌರಕ.

ನಾರ ಬಾಲಕ; ಮನುಷ್ಯರ ಗುಂಪು.

ನಾರಕ ನರಕಕ್ಕೆ ಸಂಬಂಧಿಸಿದುದು, ನರಕದಲ್ಲಿದ್ದುದು.

ನಾರದ ಧರ್ಮವನ್ನು ಕೊಡುವವ; ಅಜ್ಞಾನವನ್ನು ತೊಲಗಿಸುವವ; ಒಬ್ಬ ದೇವರ್ಷಿ; ಒಬ್ಬ ದೇವಗಂಧರ್ವ; ವಿಶ್ವಾಮಿತ್ರನ ಮಗ. ವೈದಿಕ ಯುಗದ ಒಬ್ಬ ಋಷಿ. ಈತನು ಸಪ್ತರ್ಷಿಗಳಲ್ಲಿ ಒಬ್ಬ. ಪುರಾಣಗಳಲ್ಲೂ ಮಹಾಭಾರತದಲ್ಲೂ ಇವನ ವಿಷಯವಾದ ಹಲವು ಕಥೆಗಳಿವೆ. ಈತನು ಬ್ರಹ್ಮನ ಮಗನೆಂದೂ, ಗಾಯಕರಲ್ಲಿ ಶ್ರೇಷ್ಠ ಗಂಧರ್ವನೆಂದೂ ಹೇಳಿಕೆಯಿದೆ. ಈತನು ಮೂರು ಲೋಕ ಸಂಚರಿಸುವವನು, ಚಿರಂಜೀವಿಯು ಎಂದೂ ಹೇಳಿದ್ದಾರೆ.

—ಪುರಾಣ ಸನಕಾದಿ ಮುನಿಗಳು ನಾರದನಿಗೆ ಹೇಳಿದ ಒಂದು ಮಹಾಪುರಾಣ.

ನಾರಸಿಂಹ (ನೋಡು: ನರಸಿಂಹ); ವಿಷ್ಣುವಿನ ಒಂದು ಅವತಾರ.

ನಾರಂಗ ಕಂಚಿ; ಕಿತ್ತಳೆ; ಒಂದು ವಿಧವಾದ ಶಸ್ತ್ರ.

ನಾರಾಚ ಬಾಣ; ಬರೆಯುವ ಕಂಠ, ಚಾಕು.

ನಾರಾಯಣ (ನಾರ=ನೀರು) ನೀರೇ ವಾಸಸ್ಥಾನವಾದವನು, ಮಹಾವಿಷ್ಣು.

—ಅಸ್ತ್ರ ನಾರಾಯಣನನ್ನು ಸ್ಮರಿಸಿ ಮಂತ್ರಿಸಿಬಿಡುವ ಒಂದು ಬಾಣ.

ನಾರಾಯಣಿ ಮೋಹಿನೀ ಸ್ತ್ರೀರೂಪ ತಾಳಿದ ನಾರಾಯಣ; ಲಕ್ಷ್ಮಿ; ದುರ್ಗಾ.

ನಾರಿ ಸ್ತ್ರೀ, ವನಿತೆ, ಹೆಂಗಸು; ಮಡದಿ; ಬಿಲ್ಲಹಗ್ಗ.

ನಾರಿಕೇಲ (ನಾಳಿಕೇರ) ತೆಂಗಿನಕಾಯಿ; ತೆಂಗಿನಮರ.

ನಾರಿಕೇಲಪಾಕ ತೆಂಗಿನಕಾಯಿ ಒಡೆದು ಕಷ್ಟಪಟ್ಟರೆ ತಿರುಳು ಸಿಗುವಂತೆ, 'ಕಷ್ಟಪಟ್ಟರೆ ಇಷ್ಟವಿದೆ' ಎಂದು ಸೂಚಿಸುವ ಮಾತು.

ನಾರಿಂಗ (ನಾರಂಗ) ಕಿತ್ತಿಳೆಹಣ್ಣು.
ನಾರು(ನಾರ್) ವಾಸನೆಬರು; ಕೊಳೆತ ವಾಸನೆ ಕೊಡು; ತೊಗಟೆಯಲ್ಲಿರುವ ನೂಲಿನಂಥ ವಸ್ತು, ಕತ್ತ; ಜಿಗುಟು; ಹುರಿಯಂತೆ ಗಟ್ಟಿಯಾದ.
ನಾರುಮೋಯು ಮೆಲ್ಲಗೆ ಸಾಗು.
ನಾಲ್ ನಾಲ್ಕು.
ನಾಲ (ನಾಳ), ತಾವರೆ ಮೊದಲಾದುವುಗಳ ದಂಟು; ನಾಲೆ, ನೀರು ಹರಿಯುವ ನಲ್ಲಿ, ಕಾಲುವೆ; ಹಿಡಿ; ಲಾಳ, ಗಲಗು.
ನಾಲಗೆ (ನಾಲಿಗೆ), ರಸನೆ, ಜಿಹ್ವೆ; ಸತ್ಯ.
ನಾಲಂದ ಬೌದ್ಧರ ಕಾಲದ ಪ್ರಸಿದ್ಧ ವಿದ್ಯಾಲಯ. ಇದು ಈಗಣ ಪಾಟ್ನಾದ ಸಮೀಪ ಇದೆ. ಈಗಲೂ ನಾಲಂದದ ಅವಶೇಷಗಳು ಕಾಣಸಿಗುತ್ತವೆ.
ನಾಲಿ ನಲ್ಲಿ, ನಾಡಿ; ಒಳಗೆ ತೂತಿರುವ ಗಿಡದ ತಾಳು; ತಾವರೆ; ಗಳಿಗೆ; ಜಾಗಟೆ.
ನಾಲಿಗೆ (ನಾಲಗೆ) ಜಿಹ್ವೆ, ಬಾಯೊಳಗಿನ ಸವಿನೋಡುವ ಮಾಂಸದ ಹಾಳೆ; ಬೆಂಕಿಯ ಜ್ವಾಲೆ.
—ತುರಿ ಬಾಯಿತೀಟೆ, ಮಾತಿನ ಚಪಲ.
ನಾಲೀಕ ನಾರಾಚ, ಉದ್ದ ಕಬ್ಬಿಣದ ಬಾಣ.
ನಾಲೀಜಂಘ ಬಕ; ಕೊಕ್ಕರೆ, ಬೆಳ್ಳಕ್ಕಿ.
ನಾಲೆ ನಳಿಗೆ; ನೀರ ಕಾಲುವೆ, ತೋಡು.
ನಾಲ್ಕು ಒಂದು ಸಂಖ್ಯೆ, ವಡ್ಡಿ.
ನಾಲ್ದೆಸೆ ನಾಲ್ಕು ದಿಕ್ಕು.
ನಾಲ್ಮೊಗ ನಾಲ್ಕು ಮುಖವುಳ್ಳವ, ಬ್ರಹ್ಮ.
ನಾಲ್ವರು ನಾಲ್ಕು ಜನರು.
ನಾವದಿಗೆ ನಾಯಿಂದನ ಕೆಲಸ, ಕ್ಷೌರವೃತ್ತಿ.
ನಾವಾಡಿಗ ದೋಣಿಯವ, ತಂಡೇಲ, ಅಂಬಿಗ.
ನಾವಿಕ ನೌಕೆ ನಡಸುವವ, ತಂಡೇಲ; ಕಲಾಸಿ.
ನಾವಿದ (ನಾಪಿತ).
ನಾವು ನಾನು ಎಂಬುದರ ಬಹುವಚನ.
ನಾವೆ (ನಾವ), ಹಡಗು, ದೋಣಿ; ನೀರನ್ನು ದಾಟುವ ಸಾಧನ.
ನಾವ್ಯ ದೋಣಿ ಇಲ್ಲವೆ ಹಡಗು ಚಲಿಸಲು ಸಾಧ್ಯವಾದ.
ನಾಶ ಪಲಾಯನ, ಓಡುವುದು; ಕಣ್ಣಿಂದ ಮರೆಯಾಗುವುದು; ಮರಣ, ಸಾವು; ಹಾನಿ, ನಷ್ಟ.
—ಕ ಹಾನಿಕಾರಿ.
—ನ ಹಾನಿ; ಮರಣ, ಧ್ವಂಸ.
ನಾಸ (ದ್ಭ) ನಾಶ (ಸಂ), ನಾಸೆ, ಮೂಗು.
ನಾಸತ್ಯ ಸುಳ್ಳಿಲ್ಲದವ; ಮೂಗಿನಲ್ಲಿ ಹುಟ್ಟಿದವರು; ಅಶ್ವಿನೀಕುಮಾರರು.
ನಾಸಾ (ನಾಸೆ), ಮೂಗು; ಸೊಂಡಿಲು.
—ಪುಟ ಮೂಗಿನ ಸೊಳ್ಳೆ, ಹೊಳ್ಳೆ.
ನಾಸಿಕ ಮೂಗು; ಪಂಚವಟ ಬಳಿಯ ನಾಸಿಕ ಕ್ಷೇತ್ರ. ಇಲ್ಲಿ ಶೂರ್ಪನಖಿಯ ಮೂಗನ್ನು ಲಕ್ಷ್ಮಣನು ಕುಯ್ದನೆಂದು ಕಥೆ.
ನಾಸೀರ ಸೇನಾಮುಖ, ಮುಂಗಡೆಯ ಸೇನೆ.
ನಾಸ್ತ ಉಪಾಹಾರ, ಫಲಾಹಾರ.
ನಾಸ್ತಿ ಇಲ್ಲ.
—ಕ ಪರಲೋಕವೂ ಅದಕ್ಕೆ ಸಾಧನವಾದ ಧರ್ಮಾದಿಗಳೂ ಇಲ್ಲವೆನ್ನುವವ.
—ಕತೆ ಪರಲೋಕ, ದೇವರು ಮೊದಲಾದುವುಗಳನ್ನು ನಂಬದಿರುವಿಕೆ.
ನಾಸ್ತಿಕಾಲಯ ಬಸದಿ; ಚೈತ್ಯಾಲಯ.
ನಾಳ್ (ನಾಳು), ನಾಡು, ದೇಶ.
—ಕಡೆ ಊರಿನ ಕೊನೆ, ನಾಡಕಡೆ; ದೇಶದ ಕೊನೆ.
—ನುಡಿ ನಾಣ್ನುಡಿ, ಗಾದೆ, ದೇಸಿ.
ನಾಳ (ನಾಲ).
ನಾಳಲ್ ಲಾಳದ ಕಡ್ಡಿ.
ನಾಳಿ (ನಾಡಿ).
ನಾಳಿಕೇರ (ನಾರಿಕೇಲ, ನಾಡಿಕೇರ).

ನಾಳಿದ್ದು (ನೋಡು: ನಾಡಿದ್ದು).
ನಾಳೆ ಮರುದಿನ; ಇಂದಿನ ತರುವಾಯದ ದಿನ.
ನಾಂತರೀಯಕ ವ್ಯವಧಾನವಿಲ್ಲದ; ಅವಕಾಶವಿಲ್ಲದ.
ನಾಂದಿ (ನಾಂದೀ), ಮಂಗಳ; ಯಾವುದೇ ಕೆಲಸದ ವೊದಲು ದೇವತೆಗಳಿಗೆ ಪ್ರಿಯವಾಗುವಂತೆ ಮಾಡುವ ಸ್ತುತಿ; ನಾಟಕ ಪ್ರಾರಂಭದ ಶುಭ ಪ್ರಾರ್ಥನೆ.
ನಾಂದೀಮುಖ ವಿವಾಹಾದಿ ಕೆಲಸಗಳ ಪ್ರಾರಂಭಕ್ಕೆ ಮಾಡುವ ಮಂಗಲಾಚರಣೆ.
ನಾಂದು (ನಾದು), ಒದ್ದೆಮಾಡು, ನನೆಯಿಸು; ಕರಗಿಸು; ಕರಗು.
ನಾಂಬ ಸೋಮಾರಿ, ಆಲಸ್ಯಗಾರ.
ನಾಂಬು ಸೋಮಾರಿತನ, ಆಲಸ್ಯ; ಔದಾಸೀನ್ಯ.
ನಿ (ಅವ್ಯಯ), ನೀಚ; ಕೆಳಗೆ; ಬಹಳ; ಸದಾ; ಸಂದೇಹ; ಚಮತ್ಕಾರ; ಆದರ.
ನಿಕಟ ಸಮೀಪ, ಹತ್ತಿರ.
ನಿಕರ ಸ್ತೋಮ, ಗುಂಪು; ರಾಶಿ; ಸಾರ, ತಿರುಳು.
ನಿಕರ್ಷ ಅತಿಶಯ, ಆಧಿಕ್ಯ; ನೀಚತನ.
ನಿಕಷ ಒರೆಗಲ್ಲು; ಸಾಣೆಕಲ್ಲು, ಮಸೆಗಲ್ಲು.
—ಆತ್ಮಜ ಒಬ್ಬ ರಾಕ್ಷಸ.
—ಉಪಲ ಸಾಣೆಕಲ್ಲು.
ನಿಕಸೆ (ನಿಕಷೆ), ರಾವಣನ ಮಲತಾಯಿ; ಸಮೀಪ; ಮಧ್ಯ.
ನಿಕಾ (ನಿಕಾವು), ಮುಸಲ್ಮಾನರಲ್ಲಿ ಒಂದು ಲಗ್ನವಿಧಿ.
ನಿಕಾಮ ಅಧಿಕ, ಬಹಳ; ಮನಬಂದಂತೆ; ಮನೆ; ಆಸೆ, ಕಾಮನೆ.
ನಿಕಾಯ ಸಮೂಹ, ಗುಂಪು; ರಾಶಿ; ವರ್ಗ, ಮನೆ.
ನಿಕಾಯ್ಯ ಮನೆ, ನಿವಾಸ.
ನಿಕಾರ ತಿರಸ್ಕಾರ, ಅಪಕಾರ; ದಮನ; ನಿಂದೆ; ಹೀಯಾಳಿಸುವಿಕೆ; ಸಾರಣಿಸುವಿಕೆ.
ನಿಕಾರಣ ಕೊಲೆ, ವಧೆ.
ನಿಕಾಲೆ ಮುಗಿತ, ಕೊನೆಗಾಣುವಿಕೆ.
ನಿಕಾಶ (ನೀಕಾಶ), ತೋರಿಕೆ; ದ್ರವ್ಯ.
ನಿಕುರುಂಬ ಸಮೂಹ, ಗುಂಪು.
ನಿಕುಂಜ ಬಳ್ಳಿಗಳಿಂದ ಹೊದೆಸಲ್ಪಟ್ಟ ಪೊದೆ; ಹೊದರು; ಪೊದೆಮನೆ; ಗವಿ.
ನಿಕುಂಭ ದನುಪುತ್ರನಾದ ಒಬ್ಬ ರಾಕ್ಷಸ; ಕುಂಭಕರ್ಣನ ಮಗ; ಪ್ರಹ್ಲಾದನ ಮಗನೊಬ್ಬ.
ನಿಕುಂಭಿಣಿ ಭದ್ರಕಾಳಿಯ ಒಂದು ರೂಪ.
ನಿಕುಂಭಿಲೆ ಲಂಕೆಯ ಪಡುವಣಕ್ಕಿದ್ದ ಒಂದು ಗುಡಿ, ಅಲ್ಲಿನ ದೇವಿ.
ನಿಕೃತ ವಂಚಿಸಲ್ಪಟ್ಟ; ತಿರಸ್ಕರಿಸಲ್ಪಟ್ಟ; ಠಕ್ಕ; ಠಕ್ಕು, ವಂಚನೆ; ತಿರಸ್ಕಾರ.
ನಿಕೃತಿ ವಂಚಕ.
ನಿಕೃಷ್ಟ ನೀಚ; ಅಧಮ, ಕೀಳಾದ.
ನಿಕೇತನ (ನಿಕೇತ), ಮನೆ, ವಾಸಸ್ಥಾನ.
ನಿಷ್ಕ (ನಿಷ್ಕ), ಒಂದು ಬೆಳ್ಳಿ ನಾಣ್ಯ.
ನಿಕ್ಕಿ ನಿಶ್ಚಯವಾಗಿ, ಕಸವಿಸಿ ಇಲ್ಲದೆ, ಕಂಡಿತ.
ನಿಕ್ಕುವ ನಿಶ್ಚಯ (ಸಂ), ಸತ್ಯ, ದಿಟ.
ನಿಕ್ಕುಳಿಸು (ನಿಕ್ಕೊಳಿಸು), ವಿಲಾಸದಿಂದ ಬಾಗು; ಒಯ್ಯಾರದಿಂದ ಬಾಗು, ಬಾಗು.
ನಿಕ್ತ ಚಿಮುಕಿಸಿದ; ಚೊಕ್ಕಮಾಡಿದ.
ನಿಕ್ವಣ ಧ್ವನಿ, ನಾದ.
ನಿಕ್ಷಿಪ್ತ ಇಡಲ್ಪಟ್ಟ, ಇಟ್ಟ.
ನಿಕ್ಷೂಣ ನಿಶ್ಚಯವಾಗಿ, ಕಂಡಿತ, ಖಂಡಿತ.
ನಿಕ್ಷೇಪ ಇಡಲ್ಪಟ್ಟ ದ್ರವ್ಯ ಮೊದಲಾದುವು, ಗುಪ್ತ ಧನ, ಇಡುಗಂಟು.
—ಇಸು ಇಡು, ಗುಪ್ತವಾಗಿ ಇರಿಸು.
ನಿಖರ್ವ 1,000,000,000,000 ಸಂಖ್ಯೆ; ಕುಳ್ಳಾದ.

ನಿಖಾತ ಅಗೆದ, ಹಡ್ಡಿದ.
ನಿಖಿಲ ಶೇಷವಿಲ್ಲದ; ಎಲ್ಲಾ, ಸಕಲ.
ನಿಗ (ನಿಗಿ), ಮಿನುಗು; ಗಮನ, ಎಚ್ಚರ.
ನಿಗಡ (ನಿಗಳ), ಸರಪಳಿ, ಸಂಕಲೆ; ಆನೆಕಾಲಿನ ಸರಪಳಿ; ಕೋಳ.
ನಿಗಡಿತ ಸರಪಳಿಯಿಂದ ಬಿಗಿದ.
ನಿಗದ ಹೇಳಿದ; ಮಾತು, ಭಾಷಣ.
ನಿಗದಿ ನಿಶ್ಚಯ, ನಿಕ್ಕಿ; ನಿರ್ಣಯ.
ನಿಗಮ ನಿಶ್ಚಯ, ಪ್ರತಿಜ್ಞೆ; ವೇದ; ದಾರಿ, ರಸ್ತೆ; ಪಟ್ಟಣ.
— ಅಗಮ ವೇದ ಮತ್ತು ಶಾಸ್ತ್ರಗಳು.
— ಗೋಚರ ವೇದಗೋಚರನಾದವ, ಶಿವ; ವಿಷ್ಣು.
ನಿಗರ್ (ನಿಗುರ್), ಮೇಲೇಳು, ಎದ್ದುನಿಲ್ಲು.
ನಿಗರ ನಿಕೃಷ್ಟ, ಕೀಳಾದುದು; ಸ್ಥಿತಿ, ಇರುವಿಕೆ; ಅತ್ಯುತ್ತಮ, ಮನೋಹರ.
ನಿಗರ್ಭ ಹೊಟ್ಟೆ; ಬಸಿರು.
ನಿಗರ್ವ ಗರ್ವವಿಲ್ಲದಿರುವಿಕೆ; ಹೆಮ್ಮೆಯಿಲ್ಲ ದಿರುವಿಕೆ.
ನಿಗಳ (ನಿಗಲ), ಕಾಲಂದುಗೆ, ಸಂಕಲೆ; ಕಾಲಿನ ಆಭರಣ, ಪೈಜಣಿ; ಆನೆಯ ಸಂಕಲೆ.
ನಿಗಳೆ ಕಾಲಿಗೆ ಸರಪಣಿಯುಳ್ಳವಳು.
ನಿಗಾ (ನಿಗಾವು), ಗಮನ, ಎಚ್ಚರ; ಗುಮಾನಿ, ಮುಲಾಜು; ಲಕ್ಷ್ಯ, ಗೌರವ.
ನಿಗಾರ ನುಂಗುವಿಕೆ.
ನಿಗಾಲ ಕುದುರೆಯ ಕತ್ತು.
ನಿಗಿ ಜಿಗಿ, ನೆಗೆ.
ನಿಗಿನಿಗಿ ಹೊಳೆ, ಥಳಿಸು.
ನಿಗುರ್ (ನಿಗರು), ಚಾಚು, ನೀಡು; ವಿಸ್ತರಿಸು. ನೆಗೆ; ನಿಮಿರು; ಸೆಟೆ.
— ಇಕೆ ಚಾಚುವಿಕೆ, ನೀಡುವಿಕೆ.
— ಇಸು ಚಾಚು, ನೀಡು; ನಿಲ್ಲಿಸು; ವಿಸ್ತರಿಸು
ನಿಗುವ (ನಿಗುರ್ವ).
ನಿಗುಳ್ (ನಿಗುರ್).
ನಿಗುಂಟು ರಾಶಿಮಾಡು.
— ಇಸು ಕೂಡಿಸು, ರಾಶಿಮಾಡು.
ನಿಗೂಢ ಅಡಗಿದ, ಗುಪ್ತವಾದ; ಗಾಢ; ಅವ್ಯಕ್ತ.
ನಿಗೃಹೀತ ಗದರಿಸಲ್ಪಟ್ಟ; ಜಯಿಸಲ್ಪಟ್ಟ; ತಿರ ಸ್ಕರಿಸಲ್ಪಟ್ಟ.
ನಿಗ್ಗವ ಆನೆಯ ದಂತ.
ನಿಗ್ಗು ಒತ್ತೊತ್ತು; ಇಡುಕು; ನುಗ್ಗು.
ನಿಗ್ಗೆಡಿ ನಾಚಿಕೆಗೇಡಿ, ಹೇವವಿಲ್ಲದ.
ನಿಗ್ರಹ ಪೀಡೆ, ಹಿಂಸೆ; ಬಂಧನ; ತಿರಸ್ಕಾರ; ಕೊಲೆ; ಇಟ್ಟಳ, ತಡೆ.
— ಇಸು ಶಿಕ್ಷಿಸು; ಸೋಲಿಸು; ಕಟ್ಟಹಾಕು
— ಗ್ರುಹಣ ಬಲದಿಂದ ಹಿಡಿಯುವಿಕೆ.
ನಿರ್ಗ್ರಂಥನ ಕೊಲೆ, ವಧೆ.
ನಿಗ್ರಾಹ ಶಾಪ ವಚನ, ಶಾಪಕೊಡುವುದು.
ನಿಘ ವಿಶೇಷವಾಗಿ ಕೊಡಲ್ಪಡುವುದು; ದೀರ್ಘ ವಾದುದು; ಮರ; ಚೆಂಡು; ಪಾಪ.
ನಿಘಂಟು ನಿಶ್ಚಿತವಾದ ಅರ್ಥಕೊಡುವ ಪದ ಸಮೂಹ, ಶಬ್ದಕೋಶ, ಅರ್ಥಕೋಶ.
ನಿಘಾತ ಪೆಟ್ಟು; ಕೊಲೆ; ಕೊಲ್ಲುವುದು.
ನಿಘ್ನ ಅಧೀನ; ಗುಣಿಸಲ್ಪಟ್ಟ; ನಾಟದ.
ನಿಚಯ ಗುಂಪು, ಸಮೂಹ; ರಾಶಿ; ನಿಶ್ಚಯ.
ನಿಚಿತ ವ್ಯಾಪ್ತವಾದ; ತುಂಬಿದ; ಸೇರಿದ; ರಚಿತವಾದ; ನಿಶ್ಚಿತ.
ನಿಚುಲ (ನಿಚೋಲ).
ನಿಚೋಲ ಮುಚ್ಚುವ ಬಟ್ಟೆ; ಬುರುಕೆ.
ನಿಚೋಳಕ ಕವಚ.
ನಿಚ್ಚ (ದ್ಭ) ನಿತ್ಯ (ಸಂ), ಯಾವಾಗಲೂ; ಸ್ಥಿರ.
ನಿಚ್ಚಟ (ದ್ಭ) ನಿಃಶಠ (ಸಂ), ದೃಢಮನಸ್ಸು; ಮೋಸವಿಲ್ಲದ, ಕಪಟವಿಲ್ಲದ; ಸರಳ ಮನ ಸ್ಸಿನ; ನೈಸರ್ಗಿಕ; ಬತ್ತಲೆಯಾಗಿ, ಬಟ್ಟೆ ಯಿಲ್ಲದೆ; ದೃಢಮನಸ್ಸು, ಗಟ್ಟಿ ಮನಸ್ಸಿನ.

ನಿಚ್ಚಣಿಕೆ (ನಿಚ್ಚಣಿಗೆ), ಏಣಿ; ಪಾವಟಿಗೆ.
ನಿಚ್ಚಯ (ದ್ಭ) ನಿಶ್ಚಯ (ಸಂ).
ನಿಚ್ಚಲ (ದ್ಭ) ನಿಶ್ಚಲ (ಸಂ), ಅಲುಗಾಡದ, ಚಂಚಲವಲ್ಲದ; ನಿರ್ಮಲ, ತಿಳಿ, ಸ್ವಚ್ಛ.
ನಿಚ್ಚಿಂತ (ದ್ಭ) ನಿಶ್ಚಿಂತ (ಸಂ), ಯೋಚನೆಯಿಲ್ಲದ, ವ್ಯಥೆಯಿಲ್ಲದ.
ನಿಜ ಸತ್ಯ; ಸ್ವಾಭಾವಿಕ; ತನ್ನ, ಸ್ವಂತ.
—ಗುಣ ಸತ್ಯಶೀಲ; ತನ್ನ(ಸಹಜ) ಗುಣ.
ನಿಜಮಾರ್ಗ ಯೋಗ್ಯರೀತಿ, ಋಜುಮಾರ್ಗ.
ನಿಜರೂಪ ತನ್ನದೇ ರೂಪು.
ನಿಜಾಮ ಅರಸ, ದೊರೆ; ಹೈದರಾಬಾದಿನ ದೊರೆಗಳ ಬಿರುದು.
ನಿಟಿಲ ಹಣೆ.
ನಿಟಿಲನಯನ ನಿಟಲಾಕ್ಷ, ಶಿವ.
ನಿಟಿಲಾಕ್ಷ ಹಣೆಗಣ್ಣ, ಶಿವ.
ನಿಟ್ಟನೆ ತಿರ್ರನೆ, ಗರ್ರನೆ; ಸುತ್ತಿ.
ನಿಟ್ಟಾಲಿ ನಿಡಿದ ಆಲಿ; ಕಣ್ಣಿನ ನೇರ.
ನಿಟ್ಟಿಸು ನೋಡು; ಎವೆಮುಚ್ಚದೆ ನೋಡು; ದಿಟ್ಟಿಸು; ಪರಿಶೀಲಿಸು.
ನಿಟ್ಟು ನಿಡಿದು; ಉದ್ದವಾದುದು; ಧೋರಣೆ, ಬಗೆ; ಇಳಕಲು.
ನಿಟ್ಟುರ (ದ್ಭ) ನಿಷ್ಠುರ (ಸಂ), ಕ್ರೂರನುಡಿ, ಬಿರುನುಡಿ; ಅಯೋಗ್ಯಮಾತು; ಅಯೋಗ್ಯ ಸ್ವಭಾವ.
ನಿಟ್ಟುಸಿರು ಉದ್ದವಾದ ಉಸಿರು, ನಿಡುಸುಯ್ಲು.
ನಿಟ್ಟೆ (ದ್ಭ) ನಿಷ್ಠಾ (ಸಂ), ನಿಯಮ.
ನಿಟ್ಟೈದೆ ದೀರ್ಘ ಸುಮಂಗಲಿ, ಬಹುಕಾಲ ಮುತ್ತೈದೆತನ ಇರುವವಳು.
ನಿಟ್ಟೊಡಲು ಉದ್ದವಾದ ದೇಹ.
ನಿಟ್ಟೋಟ ಬಲವಾದ ಓಟ.
ನಿಡಿ (ನಿಡು), ಉದ್ದವಾದುದು; ಉದ್ದ; ನೊರೆ; ಬುರುಗು; ಮುಸ್ಸರೆ; ಕಟುವಾಸನೆ, ಗಾಟು.
—ದು ನೀಡಿದುದು; ಚಾಚಿದುದು; ಮುಂದೊತ್ತಿ ಬಂದುದು.
ನಿಡು (ನಿಡಿ), ಉದ್ದ, ಚಾಚು.
—ಕ ಉದ್ದನಾದುದು, ಉದ್ದ ಮನುಷ್ಯ.
—ನಿಡು ಉದ್ದುದ್ದವಾದುದು.
—ಪರಿ ಉದ್ದವಾಗಿ ಹಜ್ಜೆ ಇರಿಸಿಹೋಗು.
ನಿಡುಗಣೆ ಉದ್ದವಾದ ಕಣೆ, ಉದ್ದ ಬಾಣ.
ನಿಡುನಾಲಗೆ ಉದ್ದ ನಾಲಗೆ; ಜಂಬದಬಾಯಿ
ನಿಡುವಾಯಿದೆ ದೀರ್ಘ ಅವಧಿ.
ನಿಡುಸುಯ್ ನಿಟ್ಟುಸಿರು ಬಿಡು.
ನಿತರಾಂ ಬಹಳ, ಅಧಿಕ; ಸದಾ.
ನಿತಳ ಒಂದು ಪಾತಾಳ ವಿಶೇಷ.
ನಿತಂಬ ಅಂಡು, ಸ್ತ್ರೀಯರ ನಡುವಿನ ಹಿಂಭಾಗ; ಬೆಟ್ಟದ ತಪ್ಪಲು; ಇಳಿಜಾರು; ಸಾನು.
ನಿತಂಬಿನಿ ಉತ್ತಮ ನಡುವುಳ್ಳವಳು; ಸುಂದರಿ; ಸ್ತ್ರೀ.
ನಿತಾಂತ ಅಧಿಕ, ಹೆಚ್ಚು, ಬಹಳ; ಏಕಾಂತ, ಗುಟ್ಟು.
ನಿತ್ತರಿಸು (ನಿಸ್ತರಿಸು), ತಾಳು, ಸಹಿಸು; ದಾಟು; ಕಡೆಹಾಯ್.
ನಿತ್ರಾಣ ತ್ರಾಣವಿಲ್ಲದಿರುವಿಕೆ, ಶಕ್ತಿಯಿಲ್ಲದಿರುವಿಕೆ.
ನಿತ್ರಾಣಿ ನಿರ್ಬಲ, ದುರ್ಬಲ, ಬಲಹೀನ.
ನಿತ್ಯ ಸದಾ, ನಿರಂತರ; ಸ್ಥಿರ; ಮೂರು ಕಾಲಗಳಲ್ಲೂ ಇರುವ; ಸಮುದ್ರ; ಪ್ರತಿದಿನ; ಹುಟ್ಟು ಸಾವುಗಳು ಇರದ; ಅನಂತ.
—ತೆ ಆದಿ ಅಂತ್ಯವಿಲ್ಲದಿರುವಿಕೆ; ಸಾವಿಲ್ಲದಿರುವಿಕೆ, ಯಾವಾಗಲೂ ಇರುವಿಕೆ.
—ತ್ವ (ನಿತ್ಯತೆ).
ನಿತ್ಯಕರ್ಮ ದಿನ ದಿನ ಆಚರಿಸುವ ಕೆಲಸ; ಸಂಧ್ಯಾವಂದನೆ ಮೊದಲಾದ ವಿಧಿಗಳು.
ನಿತ್ಯತೃಪ್ತ ಸದಾ ತೃಪ್ತಿಯುಳ್ಳವ.
ನಿತ್ಯಾತ್ಮ ಪರಮಾತ್ಮ; ಪರಿಶುದ್ಧ ಆತ್ಮ; ವಿಷ್ಣು

ನಿದರ್ಶನ ದೃಷ್ಟಾಂತ, ಉದಾಹರಣೆ; ತೋರಿಸುವಿಕೆ; ಒಂದು ಅಲಂಕಾರ ಭೇದ; ಶಕುನ.
ನಿದಾಘ (ದಾಘ = ಸುಡು) ಉಷ್ಣ; ಬೇಸಗೆ ಕಾಲ, ಬಿಸಿಲುಗಾಲ.
ನಿದಾನ ಶುದ್ಧಿ, ನಿರ್ಮಲ ಮಾಡುವುದು; ಅವಸಾನ; ರೋಗ ನಿರ್ಣಯದ ಒಂದು ವೈದ್ಯಗ್ರಂಥ; ಮೂಲಕಾರಣ.
ನಿದಾನಿ ಸಾವಕಾಶವಾಗಿ ಕೆಲಸಮಾಡುವವ.
ನಿದಿಗ್ಧ ವೃದ್ಧಿಗೊಂಡ.
ನಿದಿಧ್ಯಾಸನ ಗುರುಮುಖದಿಂದ ಅರ್ಥಮಾಡುವುದು; ಒಂದು ಬಗೆಯ ಧ್ಯಾನ.
ನಿದೇಶ ಆಜ್ಞೆ, ಶಾಸನ; ಸಮೀಪ; ಪಾತ್ರ; ನಡತೆ.
ನಿದ್ದೆ (ನಿದ್ರಾ).
ನಿದ್ರಿತ ನಿದ್ದೆ ಮಾಡಿದ.
ನಿದ್ರಿಸು (ನಿದ್ದಿಸು), ನಿದ್ದೆಹೋಗು.
ನಿದ್ರಾ ಬ್ರಹ್ಮನ ಸ್ತ್ರೀರೂಪು. ಈಕೆ ಸಮುದ್ರ ಮಥನಕಾಲದಲ್ಲಿ ಜನಿಸಿದಳೆಂದೂ ಹೇಳಿದೆ; ನಿದ್ರೆ, ನಿದ್ದೆ.
— ಲು ಜಡ, ನಿದ್ರಾಶೀಲ; ತೂಕಡಿಸುವವ; ಮೈಗಳ್ಳ.
ನಿದ್ರೆ (ನಿದ್ರಾ), ಶರೀರಕ್ಕೆ ವಿಶ್ರಾಂತಿ ಕೊಡುವ ರೀತಿ; ಮೈಮರೆತ.
ನಿಧನ ಮರಣ, ಸಾವು; ಕೊನೆ; ಕುಲ; ಲಗ್ನಕ್ಕೆ ಎರಡನೆಯ ಸ್ಥಾನ; ನಿವಾಸ.
ನಿಧಾನ ಶಂಖಪದ್ಮಾದಿ ನವನಿಧಿಗಳು; ಆಶ್ರಯ; ಕೆಲಸದ ಕೊನೆ; ನಿವಾಸ; ಶ್ರಮ; ತಾಳ್ಮೆ; ಸಾವಕಾಶ.
ನಿಧಾನಿಸು ಆಲೋಚಿಸು; ಯೋಚಿಸು; ಸೈರಿಸು; ಸಾವಕಾಶವಾಗಿ ಮಾಡು.
ನಿಧಿ ಶಂಖಪದ್ಮಾದಿ ದ್ರವ್ಯಗಳು; ಆಶ್ರಯ ಸ್ಥಾನ; ಒಡೆಯರಿಲ್ಲದ ದ್ರವ್ಯ; ಕೂಡಿಟ್ಟ ಹಣ.

ನಿಧೀಶ ದ್ರವ್ಯದ ಒಡೆಯ, ಕುಬೇರ.
ನಿಧುವನ ಸುರತ, ಕಾಮವಿಲಾಸ, ಸಂಭೋಗ; ಒಲೆತ.
ನಿನದ ಸ್ವರ, ದನಿ; ಕೂಗು.
ನಿನಾದ (ನಿನದ) ಸದ್ದು; ಧ್ವನಿ, ಕೂಗಾಟ, ಒದರಾಟ.
ನಿನ್ನ ನಿನಗೆ ಸಂಬಂಧಿಸಿದ.
ನಿನ್ನೆ ಕಳೆದ ದಿನ, ಹಿಂದಿನ ದಿನ.
ನಿಪ ಕುಂಭ, ಕೊಡಪಾನ, ಕೊಡ.
ನಿಪಠ ಓದು, ವಾಚನ, ಪಠನ.
ನಿಪತನ ಕೆಳಕ್ಕೆ ಬೀಳುವಿಕೆ.
— ಗೆಯ್ ಕೆಳಗೆ ಬೀಳಿಸು, ಕೆಳಗೆ ಕೆಡೆ.
ನಿಪತ್ತಿ ಬೀಳುವಿಕೆ; ಕೆಳಗೆ ದುಮುಕುವಿಕೆ.
ನಿಪತ್ಯ ಕೆಳಗೆ ಬೀಳುವಲ್ಲಿ; ಸಮರಾಂಗಣ; ಯುದ್ಧಭೂಮಿ.
ನಿಪಾತ ಕೊನೆಯ ಬೀಳುವಿಕೆ, ಮರಣ; ಹಾಳು ಸ್ಥಿತಿ.
ನಿಪುಣ ಹೆಚ್ಚಾದ ಚಟುವಟಿಕೆಯುಳ್ಳವ; ಚತುರ, ಪ್ರವೀಣ, ದಕ್ಷ, ಸಮರ್ಥ, ಹದಗಾರ.
— ತೆ ಚಾತುರ್ಯ, ವಿಚಕ್ಷಣೆ.
— ತ್ವ (ನಿಪುಣತೆ), ಹದಗಾರಿಕೆ.
ನಿಪ್ಪಸರ ವಿಸ್ತಾರ; ಕ್ರೂರ; ಉರವಣೆ; ನಿಷ್ಠುರ
ನಿಪ್ಪಾಳಿಯ (ನಿಷ್ಪಾಳೆಯ), ಪ್ರಾಯಶ್ಚಿತ್ತ; ಪರಿಹಾರ; ಊರು ಬರಿದಾಗಿರುವಿಕೆ.
ನಿಪ್ಪೊಸತು ಬಹಳ ಹೊಸತು.
ನಿಬಡ್ಡಿ ಬಡ್ಡಿ ಇಲ್ಲದೆ.
ನಿಬದ್ಧ ಕಟ್ಟಲ್ಪಟ್ಟ; ಮಿತಿಮೀರದ; ನಾಶವಾದ.
ನಿಬರ್ಹಣ (ನಿವರ್ಹಣ), ಕೊಲೆ; ಕೊಲುವಿಕೆ.
ನಿಬಂಧ ನಿರ್ಣಯ, ಕಟ್ಟು; ಪ್ರತಿಜ್ಞೆ; ಗ್ರಂಥ ರಚನೆ; ಸೆರೆ.
— ನ ಕಟ್ಟಲ್ಪಡುವುದು; ಹೇತು, ಕಾರಣ.

ನಿಬಾಯಿಸು ನಿರ್ವಹಿಸು, ಪೂರಯಿಸು; ತಾಳಿಕೊ.
ನಿಬಿಡ (ನಿವಿಡ), ದಟ್ಟ, ಸಾಂದ್ರ.
—ತೆ ದಟ್ಟಣೆ, ಸಾಂದ್ರತೆ, ಒತ್ತಾಗಿರುವಿಕೆ.
ನಿಬ್ಬಣ ದಿಬ್ಬಣ; ಉತ್ಸಾಹದ ಮೆರವಣಿಗೆ; ಮದುವೆ ಮೆರವಣಿಗೆ.
—ಇಗ ಮದುಮಗನ ಸಂಗಡಿಗ, ತೋಳ; ವರನ ಕಡೆಯವ; ಬಳಗ.
ನಿಬ್ಬರ (ದ್ಭ) ನಿರ್ಭರ (ಸಂ), ಪೂರ್ಣ ಭಾರ ವಿಟ್ಟಿರುವುದು; ಹೆಚ್ಚಿನ ಭಾರ; ಬಹಳ, ಅತಿಶಯ; ವೇಗ, ರಭಸ.
—ಇಸು ಮುಚ್ಚು; ಆವರಿಸು.
ನಿಬ್ಬಂದಿಗ ನಿರ್ಬಂಧಿತ, ತಡೆ ಇಲ್ಲದ; ಸ್ವೇಚ್ಛೆ.
ನಿಬ್ಬಾರ(ದ್ಭ) ನೀಹಾರ(ಸಂ), ಮಂಜು, ಇಬ್ಬನಿ.
ನಿಬ್ಬೆರಗು ಅತಿ ಆಶ್ಚರ್ಯ; ನಿಡಿದು ನೋಟ.
ನಿಭ ಸಮಾನ, ಎಣೆ; ಹೋಲುವೆ; ನೆವ; ಕಪಟ, ವಂಚನೆ; ಸೋಗು; ತೋರಿಕೆ; ಬೆಳಕು.
ನಿಭೃತ ತುಪ್ಪ; ವಿನೀತ, ಬಾಗಿ ನಡೆಯುವ; ನಿಶ್ಚಲ, ಚಲನೆಯಿಲ್ಲದ; ಏಕಾಗ್ರ; ಗುಪ್ತ ಮಾಡಲ್ಪಟ್ಟ; ನಿರ್ಜನ, ಏಕಾಂತ; ಶಿಕ್ಷಿತ, ಅಭ್ಯಾಸಮಾಡಿದ.
ನಿಮಗ್ನ ಮುಳುಗಿದ; ತಲ್ಲೀನವಾದ.
ನಿಮಜ್ಜನ ಮುಳುಗಿದ; ಸ್ನಾನಮಾಡಿದ; ನೀರನ್ನು ಹಾಕಿದ.
ನಿಮಯ ವಿನಿಮಯ, ಅದಲು ಬದಲು; ವ್ಯಾಪಾರ.
ನಿಮಂತ್ರಣ ಶ್ರಾದ್ಧದ ಊಟಕ್ಕೆ ಹೇಳುವುದು; ಹೇಳಿಕೆ, ಕರೆ.
ನಿಮಾಜು (ನಮಾಜು), ಮುಸಲ್ಮಾನರ ಪ್ರಾರ್ಥನೆ.
ನಿಮಾನ ಕ್ರಯ, ಬೆಲೆ, ಕಿಮ್ಮತ್ತು.
ನಿಮಾನಿಮಿ ಹಾಳಿತ; ತೀರ ಸಮ.
ನಿಮಿ ದತ್ತಾತ್ರೇಯನ ಮಗ; ಜನಕರಾಯನ ಪೂರ್ವಜನಾದ ಒಬ್ಬ ಸೂರ್ಯವಂಶದ ದೊರೆ; ರೆಪ್ಪೆ ಮುಚ್ಚಿ ತೆರೆಯುವಿಕೆ.
ನಿಮಿತ್ತ ಶಕುನ; ಕಾರಣ; ನೆವ, ನೆಪ; ಲಕ್ಷ್ಯ; ಸಂಕೇತ.
—ಗಾರ ಶಕುನಗಾರ.
—ಸ್ಥಲ ಶ್ರಾದ್ಧಕಾಲದಲ್ಲಿ ಮೃತರ ವಂಶದವನು ಪಿಂಡ ಸಲ್ಲಿಸಬೇಕಾದ ಸ್ಥಲ.
ನಿಮಿತ್ಯ ಕಣಿ ಹೇಳುವಿಕೆ, ಕಣಿ.
ನಿಮಿರ್ (ನಿಮಿರು), ನೆಟ್ಟಗಾಗು; ಸೆಟೆ; ನೀಡು, ಚಾಚು; ಉದ್ದವಾಗು; ವಿಸ್ತರಿಸು, ಹಿಗ್ಗು.
—ಕೆ ನೀಡಿಕೆ; ನೀಳವಾಗುವಿಕೆ; ವಿಸ್ತರಿಸುವಿಕೆ; ಹಿಗ್ಗು.
—ಚು ವಿಸ್ತರಿಸು, ಪಸರಿಸು; ಪ್ರಸಾರ ಮಾಡು; ನಿಗುರಿಸು.
ನಿಮಿಷ (ಸಂ) ನಿಮಿಸ (ದ್ಭ), ರೆಪ್ಪೆ ಹೊಡೆಯುವುದು; ಕಣ್ಮುಚ್ಚಿ ತೆರೆವಷ್ಟು ಕಾಲ; ಅಮೃತರಕ್ಷಕನಾದ ಒಬ್ಬ.
ನಿಮಿಸ (ದ್ಭ) ನಿಮಿಷ (ಸಂ), ನಿಮೇಷ.
ನಿಮೀಲನ ಮುಚ್ಚುವುದು; ಸಾವು, ಮರಣ.
ನಿಮ್ನ ತಗ್ಗು; ಆಳ.
—ಗೆ ಆಳವಾಗಿ ಹರಿಯುವುದು, ನದಿ, ಹೊಳೆ.
ನಿಮ್ನೋನ್ನತ ತಗ್ಗು ಏರು; ತಗ್ಗು ತೆಂಬ; ಏರಿಳಿತ.
ನಿಮ್ಮ ನಿಮಗೆ ಸಂಬಂಧಿಸಿದ.
ನಿಮ್ಮಳ (ನಿರ್ಮಲ).
ನಿಯತ ಸ್ವಾಧೀನದಲ್ಲಿಟ್ಟುಕೊಂಡ, ಅಧೀನವಾದ; ನಿಶ್ಚಿತ; ಆಚಾರವುಳ್ಳ; ನಿಯಮವುಳ್ಳ, ಗೊತ್ತಾದ; ಹತ್ತುಲಕ್ಷ.
—ಹಾರ್ಸಿ ನಿಯಮವಿಲ್ಲದವ, ಸ್ವೇಚ್ಛೆ.
ನಿಯತಿ ನಿಯಮ; ವಿಧಿ; ಭಾಗ್ಯ, ಅದೃಷ್ಟ; ಪೂರ್ವಕರ್ಮ, ನಿಶ್ಚಯ; ಪ್ರೇರಣೆ, ಸಂಯಮ; ದೈವ.
ನಿಯಮ (ನೇಮ) ಪ್ರತಿಜ್ಞೆ; ನಿಶ್ಚಯ; ಅಂಗೀ

ಕಾರ, ಒಪ್ಪಿಗೆ; ಒಂದು ವ್ರತ; ಕಟ್ಟು; ಶೌಚ; ಸಂತೋಷ.

—ಇಸು (ನೇಮಿಸು), ಕಟ್ಟುಮಾಡು; ಉದ್ಯೋಗಿಸು.

—ನಿಷ್ಠೆ ಶಾಸ್ತ್ರವಿಧಿಗಳನ್ನು ಕಟ್ಟುನಿಟ್ಟಾಗಿ ಮಾಡುವುದು.

—ವಂತ ಪದ್ಧತಿ ಶೀಲ, ರೀತಿಯರಿತವ.

ನಿಯಂತೃ ಸಾರಥಿ; ಪ್ರಭು.

ನಿಯಾಮಕ ಹಡಗು ನಡಸುವವ, ತಂಡೇಲ, ಆಜ್ಞೆಮಾಡುವವ; ಒಡೆಯ; ಸಂಚಾಲಕ.

ನಿಯುಕ್ತ ಜೋಡಿಸಿದ; ಕೂಡಿದ, ಸೇರಿದ; ತೊಡಗಿದ, ತೊಡಕಿಸಿದ; ನಿಯಮಿತ.

ನಿಯುತ ಸೇರಿದ; ದೊಡ್ಡ ಸಂಖ್ಯೆ.

ನಿಯುದ್ಧ ಬಾಹು ಯುದ್ಧ, ಮಲ್ಲಕಾಳಗ; ಮುಷ್ಟಿಯುದ್ಧ, ಜಟ್ಟಿಕಾಳಗ.

ನಿಯೋಗ ಕೆಲಸ; ಕರ್ತವ್ಯ; ಆಜ್ಞೆ.

—ಇಸು ನಿಯೋಜಿಸು; ಉಪಯೋಗಿಸು; ಜವಾಬುದಾರಿ ಹೊಂದು; ಹೊಣೆ ಹೊರು; ನಿಯಮಿಸು.

ನಿಯೋಗಿ ನಿಯಮಿಸಲ್ಪಟ್ಟವ; ಮಂತ್ರಜ್ಞ; ರಾಯಭಾರಿ; ಮಂತ್ರಿ.

ನಿಯೋಜನ ಸೇರಿಕೆ, ಹೊಂದಿಕೆ; ಅಪ್ಪಣೆ; ಒತ್ತಾಯ; ನೇಮಕ.

ನಿರ್ ಇಲ್ಲ; ನಿಷೇಧ; ನಿಶ್ಚಯ; ಬಾಹಿರ; ಹೊರಗೆ.

ನಿರಕ್ಷರ ಬರಹಹೀನ; ಅಶಿಕ್ಷಿತ.

ನಿರಖು (ನಿರಕು), ನಿರ್ತು, ನಿಶ್ಚಿತ ಧಾರಣೆ.

ನಿರಖುಶೇವಣಿ ಕಾಯಂ ಠೇವಣಿ; ನಿಶ್ಚಿತ ಸಮಯ ಇಟ್ಟ ಹಣ.

ನಿರಗ್ನಿ ಅಗ್ನಿಯಿಲ್ಲದ; ಬ್ರಾಹ್ಮಣರಲ್ಲದ ಉಳಿದ ಯಾವುದೇ ವರ್ಣದವ.

ನಿರಜೆ (ನೀರಜೆ), ದೋಷವಿಲ್ಲದವಳು, ಪರಿಶುದ್ಧೆ.

ನಿರಜ್ಞ ಜಾಣ, ವಿವೇಕಿ.

ನಿರತ ತುಷ್ಟ; ಅನುರಕ್ತ, ಆಸಕ್ತ.

ನಿರತಿಶಯ ಇದಕ್ಕಿಂತ ಹೆಚ್ಚಿಲ್ಲದುದು; ಅತಿ ಉತ್ತಮವಾದುದು, ಹಿಂದಿನದು.

ನಿರತೆ ಚೆಲುವು; ಸೊಗಸು; ಯೋಗ್ಯತೆ; ನೀಟು.

ನಿರತ್ಯಯ ನಾಶರಹಿತವಾದುದು; ಮಾಯೆ ಇಲ್ಲದುದು.

ನಿರಪರಾಧಿ ತಪ್ಪಿಲ್ಲದವ.

ನಿರಭಿಮಾನ ಅಭಿಮಾನವಿಲ್ಲದ; ಅಲ್ಪ; ವಿನೀತ

ನಿರರ್ಗಳ ತಡೆಯಿಲ್ಲದ; ಬಾಧೆಯಿಲ್ಲದ.

ನಿರರ್ಥಕ ಪ್ರಯೋಜನವಿಲ್ಲದುದು, ವ್ಯರ್ಥ.

ನಿರವಯವ ನಿರಂಗ; ಶರೀರವಿಲ್ಲದ; ಪರಮಾಣು.

ನಿರವಿಸು (ದ್ಭ) ನಿರೂಪಿಸು (ಸಂ), ಹೇಳು, ಬಿನ್ನವಿಸು, ವಿನಂತಿಮಾಡು.

ನಿರಶನ ಉಪವಾಸ; ಹಸಿದಿರುವ; ಕೂಳುಬಿಟ್ಟ

ನಿರಸ (ನೀರಸ).

ನಿರಸನ ಪರಿತ್ಯಾಗ; ಬಿಟ್ಟುದು, ತಿರಸ್ಕಾರ ಮಾಡಿದುದು.

ನಿರಸ್ತ ತ್ವರೆಯಿಂದ ಹೇಳುವುದು; ತಿರಸ್ಕರಿಸಲ್ಪಟ್ಟುದು.

ನಿರಹಂಕಾರ ಹೆಮ್ಮೆ ಇಲ್ಲದಿರುವಿಕೆ.

ನಿರಂಕುಶ ಅಂಕುಶದ ಪೀಡೆಯಿಲ್ಲದ; ಯಾವ ಆತಂಕವೂ ಇಲ್ಲದ; ಕೇವಲ ಸ್ವತಂತ್ರ.

ನಿರಂಗ ಅಂಗವಿಲ್ಲದ, ಶರೀರವಿಲ್ಲದ; ನಿಸ್ಸಹಾಯ.

ನಿರಂಜನ ಮಲವಿಲ್ಲದುದು, ಚೊಕ್ಕವಾದುದು; ತಮೋಗುಣವಿಲ್ಲದುದು; ಪರಮಾತ್ಮ; ಪರಬ್ರಹ್ಮ.

ನಿರಂತರ ಸರಾಗವಾದ; ಬಿಡುವಿಲ್ಲದ; ಯಾವಾಗಲೂ, ಸದಾ, ಒಂದೇ ಸಮ.

ನಿರಂಶ ಅಂಶವಿಲ್ಲದ; ಪಾಪವಿಲ್ಲದ; ಸಂಕ್ರಾಂತಿ ದಿನ.

ನಿರಾಕರಣ ದೂರಮಾಡುವುದು, ತಿರಸ್ಕಾರ, ಸ್ವೀಕರಿಸದೆ ಬಿಡುವುದು.

ನಿರಾಕಾರ ಆಕಾರವಿಲ್ಲದುದು.

ನಿರಾಕುಲ (ನಿರಾಕುಳ), ತೊಂದರೆಯಿಲ್ಲದ, ಗಲಿಬಿಲಿ ಇಲ್ಲದ; ಕ್ಲೇಶವಿಲ್ಲದ.

ನಿರಾಕೃತ ತಳ್ಳಲ್ಪಟ್ಟ; ತಿರಸ್ಕರಿಸಲ್ಪಟ್ಟ.

ನಿರಾಕೃತಿ ತಿರಸ್ಕಾರ.

ನಿರಾಗ ಕಾಮಹೀನ; ಸಂಯಮಿ; ಅನಾಸಕ್ತ.

ನಿರಾಜ ಕಲಾಬತ್ತಿನ ಬಟ್ಟೆ, ಜರತಾರಿ ವಸ್ತ್ರ.

ನಿರಾತಂಕ ನೋವಿಲ್ಲದ; ತಡೆಯಿಲ್ಲದ; ಪ್ರತಿಭಟಿಯಿಲ್ಲದ, ಸುಗಮ; ಹಗುರವಾದ.

ನಿರಾಧಾರ ಪಾಯವಿಲ್ಲದ; ಆಶ್ರಯಹೀನ; ನಿಸ್ಸಹಾಯ.

ನಿರಾಧಾರಿ ತಬ್ಬಲಿ, ಕಂಗಾಲ, ದರಿದ್ರ, ಪರದೇಶಿ.

ನಿರಾಯಾಸ ಸಲೀಸು, ಸುಲಭಸಾಧ್ಯ; ಕಷ್ಟವಿಲ್ಲದ; ತೊಡಕಿಲ್ಲದ.

ನಿರಾಲಂಬ ಆಶ್ರಯವಿಲ್ಲದ; ಆಧಾರವಿಲ್ಲದ.

ನಿರಾವರಣ ಮಾಯೆ ಇಲ್ಲದ, ಅಜ್ಞಾನವಿಲ್ಲದ.

ನಿರಾಳ (ದ್ಭ) ನಿರಾವಿಲ (ಸಂ), ಮನಸ್ಸಿನ ಶಾಂತಿ; ಶಾಂತವಾದ; ಚಿಂತೆ ಇಲ್ಲದ; ಅವ್ಯಕ್ತ; ಗಗನ; ಅಂತರಾಳ.

ನಿರಿ (ನಿರಿಗೆ, ನೀರಿಗೆ), ಯಾವುದರ ಮೇಲಾದರೂ ಆಗುವ ಮಡಿತೆ; ಕ್ರಮ, ಪದ್ಧತಿ; ಲಾವಣ್ಯ, ಸೌಂದರ್ಯ.

— ಗೆ ನಿರಿ, ಸುಕ್ಕು, ಮಡಿತೆ; ಸಿಹಿಮಾವು; ನಿರುಗೆ, ರೀತಿ, ಕ್ರಮ; ಪ್ರದರ್ಶನ.

— ಸು ಇರಿಸು; ಕ್ರಮವಾಗಿಡು; ನಿಲ್ಲಿಸು, ಸ್ಥಾಪಿಸು; ಅಣಿಗೊಳಿಸು; ಹೊಂದಿಸು; ತೋರುವಿಕೆ; ಪ್ರದರ್ಶನ.

ನಿರಿಗ ಸಿಹಿಮಾವು.

ನಿರಿಗಂಪು ಒಂದು ಬಗೆಯ ಆಟ.

ನಿರಿನಿಟಿಲು ಮುರಿವಾಗ ಆಗುವ ಸದ್ದು.

ನಿರೀಕ್ಷಣೆ ನೋಡುವುದು, ನಿಟ್ಟಿಸುವುದು; ಇದಿರು ಕಾಯುವುದು; ಬಯಕೆಯಿಂದ ಕೂಡಿದ ನೋಟ.

ನಿರೀಕ್ಷಾ (ನಿರೀಕ್ಷೆ), ನೋಡುವಿಕೆ, ಇದಿರು ಕಾಯುವಿಕೆ; ಎಣಿಕೆ, ಮುನ್ನೋಟ.

ನಿರೀಶ್ವರ ಯಜಮಾನನಿಲ್ಲದ; ನಾಸ್ತಿಕ.

ನಿರು ಕ್ರಮ; ಕ್ರಮವಾಗಿ ಇರುವಿಕೆ; ನ್ಯಾಯ.

— ಸು ಸ್ಥಾಪಿಸು.

ನಿರುಕಿಸು ನಿರೀಕ್ಷಿಸು, ಇದಿರುಕಾಯು, ನೋಡು.

ನಿರುಕ್ತ ಹೇಳಲ್ಪಟ್ಟುದು; ವೇದಾಂಗವಾದ ಒಂದು ಗ್ರಂಥ. ಇದರಲ್ಲಿ ವೇದದ ಪದಗಳ ರೂಪಸಿದ್ಧಿಯಾಗುತ್ತದೆ. ಯಾಸ್ಕನೆಂಬ ಪಂಡಿತನು ಇದಕ್ಕೆ ಟೀಕೆ ಬರೆದಿರುತ್ತಾನೆ.

ನಿರುಗೆ (ನಿರಿಗೆ), ಕೆಳಗೆ ಹಾಕುವುದು; ವ್ಯವಸ್ಥೆ.

ನಿರುತ ಸತ್ಯ; ಯಾವಾಗಲೂ, ನಿತ್ಯ; ನಿಜ.

ನಿರುತಿ (ನಿಋತಿ), ಒಬ್ಬ ದಿಕ್ಪಾಲಕ.

ನಿರುತ್ತರ ಉತ್ತರವಿಲ್ಲದಿರುವಿಕೆ; ತಬ್ಬಿಬ್ಬು, ಮೌನ; ಎದುರಾಳಿ ಇಲ್ಲದ, ಇದಿರಿಲ್ಲದ.

ನಿರುದ್ಧ ತಡೆ; ಸಂದರ್ಭ; ತಡೆದ, ನಿಲ್ಲಿಸಿದ.

ನಿರುದ್ಯೋಗ ಉದ್ಯೋಗವಿಲ್ಲದಿರುವುದು; ಕೆಲಸವಿಲ್ಲದಿರುವುದು; ಪ್ರಯತ್ನವಿಲ್ಲದಿರುವುದು.

ನಿರುಪದ್ರುವ ತೊಂದರೆ ಇಲ್ಲದ; ಕೆಡುಕಿಲ್ಲದ.

ನಿರುಪಮ ಹೋಲುವೆಯಿಲ್ಲದ, ಎಣೆಯಿಲ್ಲದ.

ನಿರುಪಾಧಿ ತೊಂದರೆಯಿಂದ ಬಿಡುಗಡೆ ಹೊಂದುವಿಕೆ, ಬಂಧನದಿಂದ ಬಿಡುಗಡೆ.

ನಿರುಹಣ (ದ್ಭ) ನಿರ್ವಾಹಣ (ಸಂ), ನಿರ್ವಾಹ, ಪೂರಯಿಸುವಿಕೆ.

ನಿರೂಢ ಮದುವೆಯಾಗದ; ಶಕ್ತಿಗೆ ಸರಿಯಾದ

ನಿರೂಢಿ ಪ್ರಸಿದ್ಧಿ.

ನಿರೂಪ ಅಪ್ಪಣೆ, ಆಜ್ಞೆ.

— ಇಸು ಹೇಳು; ಅಪ್ಪಣೆಮಾಡು.

—ಣ ತತ್ವಜ್ಞಾನಕ್ಕೆ ಸಂಬಂಧಿಸಿದ ಶಬ್ದ ಪ್ರಯೋಗ ವಿಚಾರ; ವಿಚಾರ; ದೃಷ್ಟಾಂತ; ಪ್ರಕಾರ.
ನಿರೆ ಕೊಲ್ಲು.
ನಿರೋಗ ಆರೋಗ್ಯ; ಬೇನೆಯಿಲ್ಲದಿರುವುದು.
ನಿರೋಧ ಅಡ್ಡಿ, ತಡೆ; ನಾಶ; ಪ್ರಳಯ; ವ್ಯಥೆ.
—ಇಸು ತಡೆ.
—ನ ಸೆರೆಮನೆ, ಸೆರೆ; ತಡೆಯುವಿಕೆ.
ನಿರ್ಗಡಿ ವಿಚಾರಶೂನ್ಯ.
ನಿರ್ಗತ ಹೊರಟ, ಹೋದ.
ನಿರ್ಗತಿಕ ದರಿದ್ರ, ಕಂಗಾಲ, ದಿಕ್ಕಿಲ್ಲದಿರುವಿಕೆ.
ನಿರ್ಗಮ (ನಿರ್ಗಮನ), ಹೊರಡುವಿಕೆ, ಹೋಗುವಿಕೆ.
ನಿರ್ಗರುಳ ಕೋಮಲ ಸ್ವಭಾವಿ, ಹೆಂಗರುಳ.
ನಿರ್ಗಾದಿಗೆ ನೀರಿನ ಕಂದಕ, ಅಗಳ್ತಿ.
ನಿರ್ಗುಣ ಗುಣಹೀನ; ಮೂರ್ಖ.
ನಿರ್ಗ್ರಂಥ ಬೌದ್ಧಸನ್ಯಾಸಿ; ದಿಗಂಬರ ಜೈನ ಸನ್ಯಾಸಿ; ಸಹಾಯವಿಲ್ಲದ; ಧನವಿಲ್ಲದ; ಮೂರ್ಖ; ವಿರಕ್ತ, ಬೈರಾಗಿ.
ನಿರ್ಘಾತ ಹೊಡೆತ; ನಾಶ; ಗಾಳಿಯ ಪೆಟ್ಟಿಂದ ಆದ ಶಬ್ದ.
ನಿರ್ಘೃಣ ದಯಾಶೂನ್ಯ; ನಿರ್ದಯ.
ನಿರ್ಜನ ಜನರಿಲ್ಲದ, ವಿಜನ; ಏಕಾಂತ.
ನಿರ್ಜರ (ಜರಾ=ಮುಪ್ಪು), ಮುಪ್ಪಿಲ್ಲದ; ದೇವತೆ; ಅಮೃತ.
ನಿರ್ಜರೇಂದ್ರು ದೇವತೆಗಳ ಒಡೆಯ, ಇಂದ್ರ.
ನಿರ್ಜಲ ನೀರಿಲ್ಲದ, ಗಾರಾದ.
ನಿರ್ಜೀವ ಜೀವವಿಲ್ಲದ, ಚೇತನವಿಲ್ಲದ.
ನಿರ್ಝರ ಬೆಟ್ಟದಿಂದ ಇಳಿಯುವ ನೀರಿನ ಪ್ರವಾಹ, ಅಬ್ಬಿ, ತಡಸಲು.
ನಿರ್ಣಯ ನಿಶ್ಚಯ, ತೀರ್ಮಾನ.
—ಇಸು ತೀರ್ಮಾನಿಸು, ಗೊತ್ತುಪಡಿಸು; ಖುಜುಪಡಿಸು.
ನಿರ್ಣೀತಿ ಹೇಳಿಕೆ, ವಿವರಣೆ; ಸಮ್ಮತಿ, ಅನುಮತಿ, ಒಪ್ಪಿಗೆ.
ನಿರ್ದಯೆ ನಿಷ್ಕರುಣೆ, ಕನಿಕರವಿಲ್ಲದಿರುವಿಕೆ.
ನಿರ್ದಾಯ ವಿಭಾಗವಿಲ್ಲದ, ಸಂಪೂರ್ಣ; ಸುಲಭ.
ನಿರ್ದಿಷ್ಟ ತೋರಿಸಲ್ಪಟ್ಟ; ಆಜ್ಞಾಪಿಸಲ್ಪಟ್ಟ; ವಿವರಿಸಲ್ಪಟ್ಟ; ಗೊತ್ತಿರುವ.
ನಿರ್ದುಷ್ಟ ಊನವಿಲ್ಲದ, ಕೆಡುಕಿಲ್ಲದ.
ನಿರ್ದೇಶ ಅಪ್ಪಣೆ, ಹುಕುಂ; ಉಪದೇಶ; ತೋರಿಸುವಿಕೆ; ಸಂಬಳ.
—ಇಸು ತೋರಿಸು; ಆಜ್ಞಾಪಿಸು; ನಮೂದಿಸು, ಹೇಳು.
ನಿರ್ದೇಹ ದೇಹವಿಲ್ಲದ.
ನಿರ್ದೋಷ ತಪ್ಪಿಲ್ಲದ, ಕೊರತೆಯಿಲ್ಲದ.
ನಿರ್ದೋಷಿ ತಪ್ಪಿಲ್ಲದವ.
ನಿರ್ದ್ರುವ ನೀರಾರುವಿಕೆ; ಒಣಗಿದ, ಗಾರಾದ.
ನಿರ್ಧನ ದ್ರವ್ಯ(ಧನ)ವಿಲ್ಲದ, ಬಡವ.
ನಿರ್ಧಾರ ನಿರ್ಣಯ, ತೀರ್ಮಾನ; ನಿಶ್ಚಯ.
ನಿರ್ಧೂತ ಜಾಡಿಸಿದ; ತಿರಸ್ಕರಿಸಿದ; ನಾಶಪಡಿಸಿದ.
ನಿರ್ನಾಮ ಹೆಸರಿಲ್ಲದ; ನಾಶವಾದ, ಹುಟ್ಟಡಗಿದ.
ನಿರ್ನಿರ (ನಿರ್ನಿರ), ನಿಷ್ಕಾರಣವಾಗಿ, ಕಾರಣವಿಲ್ಲದೆ, ಸುಮ್ಮಸುಮ್ಮನೆ.
ನಿರ್ಬಲ ಬಲಹೀನ, ನಿತ್ರಾಣಿ.
ನಿರ್ಬಂಧ ಬಲಾತ್ಕಾರ; ಹಟ; ಕಟ್ಟು, ತಡೆ; ಪ್ರಾರ್ಥನೆ.
—ಇಸು ತಡೆ, ಬಲಾತ್ಕರಿಸು.
ನಿರ್ಭಯ ಭಯವಿಲ್ಲದ; ಉತ್ತಮ ಕುದುರೆ.
ನಿರ್ಭರ (ನಿಬ್ಬರ) ಸಂಪೂರ್ಣ ಭಾರ; ಬಹಳ; ತುಂಬಿದ; ಅತಿಶಯ; ದುಡುಕು.
ನಿರ್ಭವ (ಭವ=ಹುಟ್ಟು) ಹುಟ್ಟಿಲ್ಲದ.
ನಿರ್ಭವ್ಯ ಭೈವವಲ್ಲದವ.

ನಿರ್ಭಾಗ್ಯ ಭಾಗ್ಯಹೀನ, ಅದೃಷ್ಟಹೀನ, ದುರ್ದೈವಿ.

ನಿರ್ಭೀತಿ ಧೈರ್ಯ, ಹೆದರಿಕೆ ಇಲ್ಲದಿರುವಿಕೆ.

ನಿರ್ಮಲ ಮಲವಿಲ್ಲದ, ಶುದ್ಧವಾದ, ತಿಳಿ, ಹೊಳೆಯುವ; ಲಲಿತವಾದ.

ನಿರ್ಮಲೆ (ನಿರ್ಮಳೆ), ಕಲಂಕವಿಲ್ಲದವಳು; ಸೋನಾ ನದಿ.

ನಿರ್ಮಾಣ ರಚನೆ; ಉಂಟುಮಾಡುವುದು; ಅಳತೆಮಾಡುವುದು.

ನಿರ್ಮಾಯ ಮಾಯೆಯಿಲ್ಲದ; ಪರಮಾತ್ಮನ ರೂಪ.

ನಿರ್ಮಾಲ್ಯ (ನಿರ್ಮಲತೆ), ಪೂಜೆ ಮಾಡಿದ ಹಳೆಯ ಹೂ ಮೊದಲಾದುದು.

ನಿರ್ಮಿಸು ರಚಿಸು, ಸೃಷ್ಟಿಸು, ಹುಟ್ಟಿಸು.

ನಿರ್ಮುಕ್ತ ಪರೆ ಕಳಚಿದ ಹಾವು; ಬಂಧ ವಿಲ್ಲದ; ಸಂಘರಹಿತವಾದ.

ನಿರ್ಮೂಲ ಬುಡಸಹಿತ ನಾಶವಾಗುವುದು; ಬೇರುಸಹಿತ ಕೀಳುವುದು; ಪ್ರಲಯ.

ನಿರ್ಮೋಕ ಹಾವಿನ ಹೆರೆ, ಪರೆ.

ನಿರ್ಯಾಣ ಆನೆಯ ಕಡೆಗಣ್ಣು; ದನ ಕಟ್ಟುವ ಬಳ್ಳಿ; ಮೋಕ್ಷ; ಸಾವು; ಮಾಯಕ.

ನಿರ್ಯಾತ ದೂರ ಸರಿಯುವ, ಹೋಗುವ. —ನ ವೈರಬುದ್ಧಿ; ಕೊಡುವುದು; ಸಮ ರ್ಪಣೆ.

ನಿರ್ಯಾಮ ನಾವಿಕ; ತಂಡೇಲ.

ನಿರ್ಲಕ್ಷ್ಯ ತಿರಸ್ಕಾರ, ಅಲಕ್ಷ್ಯ.

ನಿರ್ಲಜ್ಜೆ ನಾಚಿಕೆ ಇಲ್ಲದಿರುವಿಕೆ; ಮರ್ಯಾ ದೆ ಹೀನತೆ, ಲಜ್ಜೆಗೇಡಿತನ.

ನಿರ್ಲೇಪ ಸಂಬಂಧವಿಲ್ಲದ; ಸಂಸಾರದ ಬಂಧ ನವಿಲ್ಲದ; ಅಂಟದ.

ನಿರ್ವಪಣ ದಾನ, ಕೊಡುವುದು; ಶ್ರಾದ್ಧ; ಬಿತ್ತನೆ, ಬಿತ್ತಿಗೆ.

ನಿರ್ವಯಲು ಬಯಲಾಗುವಿಕೆ; ಲಿಂಗೈಕ್ಯ.

ನಿರ್ವರ್ತಿಸು ಮಾಡು, ನೆರವೇರಿಸು.

ನಿರ್ವಹಣ ತೊಡಗಿದ ಕತೆಯ ಅಂತ್ಯ; ನಾಶ; ನಾಟಕದ ಒಂದು ಸಂಧಿ; ಪೂರೈಕೆ.

ನಿರ್ವಹಿಸು ಮಾಡು, ಪೂರ್ತಿಗೆಯ್ಯು.

ನಿರ್ವಂಚನೆ ಕಪಟವಿಲ್ಲದಿರುವುದು; ಪ್ರಾ ಮಾಣಿಕತೆ.

ನಿರ್ವಾಣ (ನಿವಾ೯) ಮೋಕ್ಷ; ಕೈವಲ್ಯ; ನಿವೃತ್ತಿ; ವಿನಾಶ; ಶಾಂತ, ನಿಶ್ಚಲ; ಶೂನ್ಯ; ಬತ್ತಲೆ; ಆನೆಯ ಸ್ನಾನ; ಜಿನ; ಆತ್ಮ; ಸಾಯಂಕಾಲ.

ನಿರ್ವಾಹ ಪೂರಯ್ಕೆ; ಇರುವುದು; ಜೀವ ನೋಪಾಯ; ರಕ್ಷಣೆಯ ದಾರಿ; ಸಾಧನೆ; ಆಧಾರ.

ನಿರ್ವಿಕಾರ ಸ್ವಭಾವಬದಲಾಯಿಸದ; ಹುಟ್ಟು ಸಾವಿಲ್ಲದಿರುವಿಕೆ; ಪರಮಾತ್ಮನ ಗುಣ.

ನಿರ್ವಿಘ್ನ ಒಡ್ಡು ಇಲ್ಲದ, ತೊಂದರೆಯಿಲ್ಲದ, ತೊಡಕಿಲ್ಲದ.

ನಿರ್ವಿಣ್ಣ ದುಃಖ, ಬೇಸರ.

ನಿರ್ವಿವಾದ ಚರ್ಚೆಗೆ ಅವಕಾಶವಿಲ್ಲದ.

ನಿರ್ವೃತಿ ಸಂತೋಷ; ಸುಖ; ಮೋಕ್ಷ; ಬಿಸು ಗಡೆ, ತೆರವು.

ನಿರ್ವೇಗ ವೇಗವಿಲ್ಲದ; ಶಾಂತ.

ನಿರ್ವೇದ ಅಪಮಾನ; ವ್ಯಸನ; ಪಶ್ಚಾತ್ತಾಪ; ಉದಾಸೀನಭಾವ; ವೈರಾಗ್ಯ.

ನಿರ್ವ್ಯಸನ ಉದಾಸೀನ; ಚಿಂತೆಯಿಲ್ಲದ.

ನಿರ್ವ್ಯಾಜ ಕಪಟವಿಲ್ಲದ, ಸರಳ; ಪ್ರಾಮಾ ಣಿಕ; ನಿಷ್ಕಾರಣವಾದ; ನಿವಾರಣೆ.

ನಿರ್ಹರಣ ಸಂಪೂರ್ಣ ತೆಗೆಯುವುದು.

ನಿಲ್ (ನಿಲ್ಲು), ನಿಂತಲ್ಲಿರುವಿಕೆ; ಗತಿ ತಡೆಯು ವುದು; ಕೊನೆಗಾಣು; ತಡೆ; ಸಹಿಸು; ಹಾದಿ ನೋಡು.

—ಇಸು ನಿಲ್ಲುವಂತೆ ಮಾಡು; ಕೆಲಸ ವನ್ನು ತಡೆ; ಗತಿಯನ್ನು ತಡೆ.

ನಿಲಯ ಮನೆ, ವಾಸಸ್ಥಾನ; ಮಲಗಿರುವಿಕೆ; ಅಡಗಿರುವಿಕೆ.

ನಿಲಿಂಪ ದೇವತೆ.

ನಿಲುಕು (ನಿಲ್ಕು), ಎಟುಕು; ಎಟುಕಿನ ದೂರ ಇರಿಸಿದ ನಾಗಂದಿಗೆ; ಸಿಕ್ಕ; ನೆಗೆ; ನೀಡು.

ನಿಲುವಂಗಿ ಉದ್ದವಾದ ಅಂಗಿ.

ನಿಲುವು (ನಿಲವು), ನಿಲುಗಡೆ; ಎತ್ತರ; ಸ್ಥಿತಿ; ರೀತಿ; ಇರುವಿಕೆ; ವಿಶ್ರಾಂತಿ; ಉಳಿದುದು; ನಿಲುಕು; ವಿರಾಮ; ನಿಲಯ; ಮನೆ, ನೆಲೆ; ಉಗ್ಗ, ಸಿಕ್ಕ.

ನಿಲುಂಬು (ನಿಗುಂಬು), ರಾಶಿಮಾಡು; ಒಟ್ಟು ಗೂಡಿಸು; ಕೂಡಿಹಾಕು; ಇರಿಕೆಹಾಕು, ಸುರುಳಿಸುತ್ತು; ನೆಗೆ, ಜಿಗಿ.

ನಿಲ್ಕಡೆ (ನಿಲುಗಡೆ), ನಿಲ್ಲುವಿಕೆ; ಸ್ಥಿತಿ; ಬಾಗಿಲ ಚೌಕಟ್ಟು; ಕೊನೆಯ ನಿರ್ಣಯ.

ನಿಲ್ಲು (ನಿಲ್).

ನಿವಚನ ಮಾತಿನ ನಿಯಮ.

ನಿವಡ ಆವರಿಸುವುದು; ಹುಡುಕುವುದು.

ನಿವರು ಕೈಯಿಂದ ಸವರು.

ನಿವರ್ತಕ ನಿಲ್ಲುವ, ಮುಗಿಸುವ; ತಿರುಗುವ, ಮರಳುವ.

ನಿವರ್ತಿಸು ಹಿಂದಿರುಗು, ಹಿಂದೆ ಅಟ್ಟು; ಮಾಯವಾಗು; ಇಲ್ಲದಾಗು.

ನಿವರ್ಹಣ ಕೊಲೆ, ಕೊಲ್ಲುವಿಕೆ; ನಾಶ.

ನಿವಸಥ (ನಿವಸನ), ಮನೆ, ನಿವಾಸ.

ನಿವಹ ಗುಂಪು, ಸಮೂಹ; ಸಪ್ತ ಮಾರುತಗಳಲ್ಲಿ ಒಂದು.

ನಿವಾಡ ಕೊನೆ, ನಾಶ; ಕೆಡಿಸುವುದು.

ನಿವಾತ ಗಾಳಿಯನ್ನು ತಡೆದುದು; ಬಲವಾದ ಕವಚ; ಗಾಳಿಯಿಲ್ಲದ ಪ್ರದೇಶ.

ನಿವಾತಕವಚ ಪ್ರಹ್ಲಾದನ ಸಂತತಿಯ ರಾಕ್ಷಸರು. ಬಲಶಾಲಿಗಳಾದ ಇವರನ್ನು ಇಂದ್ರನಿಗಾಗಿ ಅರ್ಜುನನು ಕೊಂದನು.

ನಿವಾಪ ಪಿತೃ ತರ್ಪಣ; ಪಿತೃಗಳಿಗಾಗಿ ಕೊಡುವ ದಾನ.

ನಿವಾರಕ ನಿವಾರಿಸುವ, ಹೋಗಲಾಡಿಸುವ.

ನಿವಾರಣ (ನಿವಾರಣೆ), ಹೋಗಲಾಡಿಸುವಿಕೆ; ಇಲ್ಲದಂತೆ ಮಾಡುವಿಕೆ; ತಡೆಯುವಿಕೆ.

ನಿವಾರಿಸು ಹೋಗಲಾಡಿಸು, ತೊಲಗಿಸು; ತಡೆ, ನಿರೋಧಿಸು.

ನಿವಾಸ ಮನೆ, ನೆಲೆ; ದೇಶ, ನಾಡು.

—ಸ್ಥಾನ ಮನೆ; ನೆಲೆ.

ನಿವಾಸಿ ವಾಸಮಾಡುವವ, ಇರುವವ.

ನಿವಾಳಿ ಬಲಿ ತೆಗೆಯುವುದು; ದೃಷ್ಟಿಪರಿಹಾರಕ್ಕಾಗಿ ಸುಳಿದುಹಾಕು, ಇಳಿದೊಗೆ.

—ಇಸು (ನಿವಳಿಸು), ಆರತಿಮಾಡು; ಅವಲಕ್ಷಣದ ಚಿಹ್ನೆ ಹೊರಟು ಹೋಗುವಂತೆ ಮಾಡು, ಇಳಿದೊಗೆ.

ನಿವಿಡ (ನಿಬಿಡ) ಸಾಂದ್ರ; ದಟ್ಟವಾದ.

ನಿವಿಷ್ಟ ಸೇರಿದ, ಹೊಂದಿದ.

ನಿವೀತ ಕೊರಳಲ್ಲಿ ಹಾರದಂತೆ ತೂಗುವ ಜನಿವಾರ, ಮಾಲಾಕಾರ.

ನಿವೃತ ಮುಗಿದ; ಪರಿವೃತ, ಆವರಿಸಲ್ಪಟ್ಟ.

ನಿವೃತ್ತ ಬಿಡುಗಡೆಹೊಂದಿದ; ತಿರುಗಿ ಕೊಡಲ್ಪಟ್ಟ; ಕೆಲಸ ಮುಗಿದ; ಮಾಯವಾದ; ವಿಶ್ರಾಂತ; ಮುಗಿದ.

ನಿವೃತ್ತಿ ವಿಶ್ರಾಂತಿ, ವಿರತಿ; ಮಾಯುವಿಕೆ; ಬಿಡುಗಡೆ, ಮೋಕ್ಷ.

—ಮಾರ್ಗ ಮೋಕ್ಷದ ಹಾದಿ.

ನಿವೇದಕ ಹೇಳುವ; ಸಂಬಂಧಿಸುವ.

ನಿವೇದನ ಮರ್ಯಾದೆಯಿಂದ ತಿಳಿಸುವುದು, ವಿಜ್ಞಾಪನೆ; ಸಮರ್ಪಣೆ.

ನಿವೇದ್ಯ (ನೈವೇದ್ಯ), ನಿವೇದಿಸುವುದು, ಅರ್ಪಣೆ; ದೇವರಿಗೆ ಅರ್ಪಿಸುವ ಕಾಣಿಕೆ.

ನಿವೇಶ ಶಿಬಿರ, ಸೇನೆಯ ಠಾಣ್ಯ; ಮದುವೆ; ಸ್ಥಾನ; ವಾಸಿಸುವಿಕೆ.

ನಿಶ್ ತೆಳ್ಳಗೆಮಾಡು; ಆಲೋಚಿಸು.
ನಿಶಟ ಕ್ಷತ್ರಿಯ; ಒಬ್ಬ ಯಾದವ.
ನಿಶಠ ಪ್ರಾಮಾಣಿಕ; ಋಜುವಾದ; ಕಪಟವಿಲ್ಲದ; ಸರಳ.
ನಿಶಾ (ನಿಶಿ), ಎಲ್ಲ ಕೆಲಸಗಳನ್ನು ಕಡಮೆಮಾಡುವುದು, ರಾತ್ರಿ, ಇರುಳು.
—ಕರ ಚಂದ್ರ.
—ಚರ ರಾಕ್ಷಸ; ಗೂಗೆ, ಗೂಬೆ; ಸರ್ಪ; ಪಿಶಾಚ; ಕಳ್ಳ.
ನಿಶಾಟ ರಾತ್ರಿ ತಿರುಗುವವ, ಖೇಚರ, ರಾಕ್ಷಸ; ಗೂಬೆ.
ನಿಶಾತ ಹರಿತವಾದ, ಹದನವಾದ.
ನಿಶಾನ ಹರಿತವಾಗಿ ಮಾಡುವುದು.
ನಿಶಾನಿ ಬಾವುಟ, ಪತಾಕೆ, ಪಟ.
ನಿಶಾಂತ ರಾತ್ರಿ ಉಳಿದುಕೊಳ್ಳುವ ಮನೆ; ಬಹು ಶಾಂತವಾದುದು.
ನಿಶಾಂಧ ರಾತ್ರಿ ಕಣ್ಣುಕಾಣದ.
ನಿಶಿತ ಹರಿತವಾದ, ಮೊನೆಯಾದ.
ನಿಶೀಥ (ನಿಶೀಥಿನೀ) ಅರ್ಧರಾತ್ರಿ; ನಿದ್ರಾಕಾಲ.
ನಿಶುಂಭ ಶುಂಭನೆಂಬ ರಾಕ್ಷಸನ ತಮ್ಮ; ಮರ್ದಿಸುವುದು, ಪುಡಿಮಾಡುವುದು.
ನಿಶ್ಚಯ ಸಂಶಯಕ್ಕೆ ವಿರೋಧವಾದ ಸ್ಥಾನ; ನಿರ್ಣಯ, ಸಿದ್ಧಾಂತ; ಗೊತ್ತುವಳಿ; ಪಕ್ವ.
—ಇಸು ಗೊತ್ತುಮಾಡು, ನಿರ್ಣಯಿಸು; ತೀರ್ಮಾನಿಸು.
ನಿಶ್ಚಲ ಚಲನೆಯಿಲ್ಲದ, ಸ್ಥಿರ; ಅಸಂಭವ ಮತ್ತು ವಿಪರೀತಭಾವನೆ ಇಲ್ಲದ; ಭೂಮಿ; ಪರ್ವತ.
—ತೆ ಅಲುಗಾಡದಿರುವಿಕೆ; ದೃಢಮನಸ್ಸು.
ನಿಶ್ಚಂಚಲ ಕದಲದ, ಸ್ಥಿರ, ದೃಢ.
ನಿಶ್ಚಿತ ಗೊತ್ತಾದ, ನಿರ್ಧಾರವಾದ; ನಿಯತ.
—ಅರ್ಥ ವಿವಾಹ ನಿಶ್ಚಯ, ನಿಶ್ಚಯ ತಾಂಬೂಲ ವಿಧಿ; ಗೊತ್ತಾದ ಮಾತು.
ನಿಶ್ಚಿಂತೆ ಚಿಂತೆ ಅಥವಾ ಆತುರವಿಲ್ಲದಿರುವಿಕೆ.
ನಿಶ್ಚೇಷ್ಟ ಚಲನೆಯಿಲ್ಲದ; ಯಾವ ಬಗೆಯ ಕೆಲಸಕ್ಕೂ ಆಗದ; ಅಚೇತನ.
ನಿಶ್ವಾಸ ಉಸಿರನ್ನು ಹೊರಗೆ ಬಿಡುವುದು.
ನಿಶ್ವಾಸಿತ ಹೊರಕ್ಕೆ ಉಸಿರಾಡಿದ.
ನಿಶ್ಶಬ್ದ ಮೌನ, ನೀರವ, ಸದ್ದಿಲ್ಲದಿರುವಿಕೆ.
ನಿಶ್ಶಲ್ಯ ನೋವಿಲ್ಲದ.
ನಿಶ್ಶಂಕೆ ಅನುಮಾನವಿಲ್ಲದಿರುವಿಕೆ.
ನಿಷತ್ ಕುಳಿತಿರುವಿಕೆ.
ನಿಷದ ಪ್ರಾಚೀನ ಪ್ರಸಿದ್ಧಿಯ ದೇಶ. ನಳನು ಈ ದೇಶದ ಅರಸನಾಗಿದ್ದನು; ಒಂದು ಪರ್ವತ.
ನಿಷದ್ಯಾ ವಿಕ್ರಯಶಾಲೆ, ಮಾರುವ ಮನೆ, ಅಂಗಡಿ; ಪೇಟೆ.
ನಿಷಂಗ ಬತ್ತಳಿಕೆ.
ನಿಷಾದ ಬೇಡ; ಚಾಂಡಾಲ, ಹೊಲೆಯ; ಪಾಪಿ; ಒಂದು ದೇಶ; ಸಪ್ತಸ್ವರಗಳಲ್ಲಿ ಏಳನೆಯದು.
ನಿಷಾದಿ ಮಾವುತ, ಆನೆ ಸಾಕುವವ.
ನಿಷಿಕ್ತ ಚಿಮುಕಿಸಿದ.
ನಿಷಿದ್ಧ ತಿರಸ್ಕರಿಸಲ್ಪಟ್ಟ; ತಿರಸ್ಕಾರಯೋಗ್ಯ; ಕೂಡದೆಂದು ವಿಧಿಸಿದ.
ನಿಷೇಕ ಗರ್ಭಾಧಾನ, ಶೋಭನಪ್ರಸ್ಥ; ಆಯುಸ್ಸು; ಸುರಿಯುವಿಕೆ.
ನಿಷೇಧ ಬಹಿಷ್ಕಾರ; ಪ್ರತಿಭಟನೆ; ನಿರಾಕರಣೆ; ಬಿಡುಗಡೆ.
—ಇಸು ಬಹಿಷ್ಕರಿಸು; ಪ್ರತಿಭಟಿಸು; ಕೂಡದೆನ್ನು.
ನಿಷ್ಕ ನಿಕ್ಕ; ಒಂದು ಚಿನ್ನದ ನಾಣ್ಯ, ಎಂಟು ರತಿ ತೂಕ ಭಂಗಾರ; ಎದೆಯ ಅಲಂಕಾರ; ಸರ.
ನಿಷ್ಕಪಟ ಸರಳ, ಪ್ರಾಮಾಣಿಕ, ಮುಚ್ಚುಮರೆಯಿಲ್ಲದ.
ನಿಷ್ಕಪಟಿ ಸರಳ ಸ್ವಭಾವಿ, ಮೋಸವಿಲ್ಲದವ.

ನಿಷ್ಕರುಣೆ ದಯಾಹೀನ; ಕ್ರೂರ, ಕಲ್ಲೆದೆಯ.

ನಿಷ್ಕರ್ಮ ಜಡ; ಪಾಪರಹಿತ.

ನಿಷ್ಕರ್ಷ ನಿಶ್ಚಯ; ನಿರ್ಣಯ.

ನಿಷ್ಕಲಂಕ ಕಲಂಕವಿಲ್ಲದ, ಕಲೆಯಿಲ್ಲದ; ತಪ್ಪಿಲ್ಲದ.

ನಿಷ್ಕುಹ ಗಿಡದ ಪೊಟರೆ, ಡೊಗರು.

ನಿಷ್ಕಂಟಕ ಮುಳ್ಳಿಲ್ಲದ; ತೊಡಕಿಲ್ಲದ, ಸುಗಮ.

ನಿಷ್ಕಾಪಟ್ಯ ನಿಷ್ಕಪಟತನ.

ನಿಷ್ಕಾಮ ಅನಾಸಕ್ತಿ; ನಿಸ್ವಾರ್ಥ; ಕಾಮ ಹೀನ; ಯಾವ ಆಸೆಯೂ ಇಲ್ಲದ.

ನಿಷ್ಕೃತಿ ಪ್ರಾಯಶ್ಚಿತ್ತ, ಪಾಪ ಪರಿಹಾರ ಮಾಡುವ ಕರ್ಮ; ಪರಿಹಾರ; ಬಿಡುಗಡೆ.

ನಿಷ್ಕ್ರಮಣ ಹೊರಗೆ ಹೋಗುವುದು; ಚಿಕ್ಕ ಕೂಸನ್ನು ಮನೆಯಿಂದ ಹೊರಗೆ ಒಯ್ಯುವ ಒಂದು ಸಂಸ್ಕಾರ.

ನಿಷ್ಠುರ (ನಿಷ್ಠೂರ), ಕ್ರೂರವಾದ ಮಾತು, ಬಿರುನುಡಿ; ಕೆಟ್ಟ ಸ್ವಭಾವ.

— ತನ ಕಠೋರತೆ; ಬಿರುಸು, ಒರಟುತನ.

ನಿಷ್ಠೆ (ನಿಷ್ಠಾ), ನಾಟಕದಲ್ಲಿ ಕಥಾಸಮಾಪ್ತಿ; ನಾಶ, ಅಂತ್ಯ; ದುಃಖ; ವ್ರತನಿಯಮ; ಗುರುಸೇವೆ, ಧರ್ಮ ಮೊದಲಾದವುಗಳ ಲ್ಲಿರುವ ವಿಶ್ವಾಸ; ಆಧಾರ; ನಿಶ್ಚಯ ತಿಳಿವು.

ನಿಷ್ಣಾತ ನಿಪುಣ, ಪಾರಂಗತ; ಬುದ್ಧಿವಂತ, ಹಳಬ.

ನಿಷ್ಪಕ್ಷಪಾತ ಭೇದಭಾವವಿಲ್ಲದ; ಭೇದ ಹೀನತೆ.

ನಿಷ್ಪತ್ತಿ ಮುಗಿಸುವಿಕೆ; ಸಿದ್ಧಿ, ಫಲ.

ನಿಷ್ಪನ್ನ ಸಿದ್ಧ; ಮುಗಿದ; ಪೂರ್ಣವಾದ.

ನಿಷ್ಪಂದ ಅಲುಗದ.

ನಿಷ್ಪ್ರಯೋಜನ ವ್ಯರ್ಥ; ಯಾರೂ ಬೇಡದ.

ನಿಷ್ಫಲ ಫಲವಿಲ್ಲದ, ಗೊಡ್ಡು; ವ್ಯರ್ಥ; ಜೊಳ್ಳು.

ನಿಸದ (ದ್ಭ) ನಿಶ್ಚಯ (ಸಂ), ನನ್ನಿ; ನಿಕ್ಕುವ

ನಿಸರ್ಗ ಸ್ವಾಭಾವಿಕ; ನೈಜ; ಸ್ವಭಾವ; ಪ್ರಕೃತಿ.

ನಿಸಿ ಬೆಟ್ಟುಗಳಿಂದ ನುರಿ; ಹಿಂಡು.

ನಿಸಿದಿ (ನಿಸಿದಿಗೆ), ಸಮಾಧಿ, ಗೋರಿ.

ನಿಸೂದನ ಕೊಲೆ, ವಧೆ; ನಾಶ; ನಾಶಮಾಡಿದವನು.

ನಿಸ್ತರಣ ಹೋಗುವಿಕೆ; ಹೊರಡುವಿಕೆ; ದಾಟುವಿಕೆ; ಕಾಲಹರಣ.

ನಿಸ್ತಾರ ದಾಟುವಿಕೆ, ಪಾರುಗಾಣ್ಕೆ.

ನಿಸ್ತುಲ ಎಣೆಯಿಲ್ಲದ.

ನಿಸ್ತೇಜ ಕಳೆಯಿಲ್ಲದ; ಕಳೆಗುಂದಿದ.

ನಿಸ್ತ್ರಿಂಶ ಉದ್ದವಾದ ಕತ್ತಿ; ಕ್ರೂರ.

ನಿಸ್ಪೃಹ ಆಶೆಯಿಲ್ಲದ; ವಿಷಯಾಭಿಲಾಷೆ ಬಿಟ್ಟ, ಪ್ರಾಮಾಣಿಕ; ಭಿಡೆಯಿಲ್ಲದ.

— ತೆ ನಿಃಸ್ವಾರ್ಥ ಬುದ್ಧಿ.

ನಿಸ್ವನ ಧ್ವನಿ, ಸ್ವರ.

ನಿಸ್ಸಹಾಯ ಸಹಾಯಹೀನ; ತಬ್ಬಲಿ.

ನಿಸ್ಸಂಶಯ ಅನುಮಾನವಿಲ್ಲದ.

ನಿಸ್ಸಾರ ಸಾರಹೀನ, ವ್ಯರ್ಥ; ಹುರುಳಿಲ್ಲದ.

ನಿಸ್ಸಾಳ ಭೇರಿ, ಡೋಲು.

ನಿಸ್ಸೀಮ ಮೇರೆಯಿಲ್ಲದ; ಸಾಟಿಯಿಲ್ಲದ.

ನಿಹಿತ ಇಡಲ್ಪಟ್ಟ.

ನಿಳಯ (ನಿಲಯ), ಆವಾಸ, ಮನೆ.

ನಿಳಿಂಪ (ನಿಲಿಂಪ), ದೇವತೆ; ಶ್ರೇಷ್ಠ.

ನಿಳ್ಕು (ನಿಲುಕು) ಎಟಕು; ಚಾಚು; ಶರೀರವನ್ನು ವಿಸ್ತರಿಸು.

ನಿಂದಕ ಬಯ್ಯುವ, ದೂರುವ; ದೂರುವವ, ಹೀಟುಗಳೆವವ.

ನಿಂದಾ (ನಿಂದೆ), ಅಪವಾದ, ದೂಷಣೆ; ಪಳಿ, ತೆಗಳಿಕೆ.

ನಿಂದಿರಿಸು ನಿಲ್ಲುವಂತೆ ಮಾಡು, ತರುಬು; ಇಡು.

ನಿಂದಿಸು ಹೀಯಾಳಿಸು, ದೂಷಿಸು, ತೆಗಳು.

ನಿಂದ್ಯ ದೂರಲು ಯೋಗ್ಯವಾದ, ಕೀಳ; ದೂಷ್ಯ; ಬಹಿಷ್ಕೃತ.
ನಿಂಬ ಬೇವಿನ ಗಿಡ.
ನಿಂಬೆ (ಲಿಂಬೆ), ಒಂದು ಬಗೆ ಹುಳಿ ಹಣ್ಣು.
ನೀ (ನೀಂ), ನೀನು.
ನೀಕರಿಸು ಧಿಕ್ಕರಿಸು; ತಿರಸ್ಕರಿಸು.
ನೀಕಾಶ ಹೋಲುವ, ಹೋಲಿಕೆ; ಸಮಾನ.
ನೀಗು ತ್ಯಜಿಸು, ಬಿಡು; ಕಳೆದುಕೊಳ್ಳು; ತೊಲಗಿಸು; ಕೊಡು; ಅದೃಶ್ಯವಾಗು; ಮುಗಿಸು.
—ಇಸು ತೊಲಗಿಸು; ಅದೃಶ್ಯವಾಗು.
ನೀಚ ಕೀಳ; ಕುಳ್ಳಾದವ; ತಗ್ಗು; ಕ್ಷುದ್ರ.
—ತನ ಕೀಳ್ತನ; ಕ್ಷುಲ್ಲಕವೃತ್ತಿ; ಕೆಳಗಿರುವಿಕೆ.
ನೀಚಕ ಏರು; ತಲೆ; ನೆತ್ತಿ; ಎತ್ತಿನ ತಲೆ.
ನೀಟ (ನೀಳ), ಉದ್ದ, ನೆಟ್ಟಗೆ.
ನೀಟು ಸರಳತೆ; ನೆಟ್ಟಗಿರುವಿಕೆ; ಕೊಂಕಿಲ್ಲದಿರುವಿಕೆ.
—ಗಾತಿ ಸರಳೆ.
—ಗಾರ ಚೊಕ್ಕ ಮನುಷ್ಯ; ಸರಳ ಶೀಲ.
ನೀಡ ವಾಸಸ್ಥಾನ; ಹಕ್ಕಿಗಳ ಗೂಡು.
—ಜ ಹಕ್ಕಿ, ಪಕ್ಷಿ.
ನೀಡರ್ ಮೂರ್ಖ, ಮೈಮರೆತ; ತಲೆತಿರುಕ.
ನೀಡು ವಿಸ್ತರಿಸು; ಚಾಚು; ಅನುಕೂಲ.
—ಕಾರ ದಾನಿ, ಕೊಡುವವ.
ನೀಡುಂ ವಿಶೇಷವಾಗಿ, ಅತಿಶಯ.
ನೀತಿ ನ್ಯಾಯ; ಧರ್ಮ; ಶುಕ್ರಾಚಾರ್ಯನು ಬರೆದ ಶಾಸ್ತ್ರಗ್ರಂಥ; ನ್ಯಾಯ; ರಾಜನೀತಿ; ಜಾಣ್ಮೆ.
—ಗ ಸಚ್ಚರಿತ.
—ಮಾರ್ಗ ಒಳ್ಳೆಯ ಶೀಲದಲ್ಲಿರುವುದು.
—ವಂತ ನೀತಿವಿದ, ನೀತಿಯಲ್ಲಿರುವವ.
ನೀತಿಶಾಸ್ತ್ರ ಶುಕ್ರನೀತಿ ಎಂಬ ಗ್ರಂಥ; ಕೌಟಲ್ಯನ ಅರ್ಥಶಾಸ್ತ್ರ; ಹಿತೋಪದೇಶ; ದಂಡನೀತಿ ಮೊದಲಾದ ನೀತಿಬೋಧಕ ಗ್ರಂಥಗಳು.
ನೀನ್ ನೀನು.
ನೀಪ ಕದಂಬವೃಕ್ಷ; ನೀಲ ಅಶೋಕವೃಕ್ಷ; ತಗ್ಗಾದ; ಆಳವಾದ.
ನೀಮ್ (ನೀವು).
ನೀರ್ (ನೀರು), ಜಲ; ರತ್ನ ಮೊದಲಾದುವುಗಳ ಕಾಂತಿ; ಲಾವಣ್ಯ.
—ಅಡಸು ಬಾಯಾರಿಕೆ ತಣಿಸು.
—ಅಡಿಕೆ ಬಾಯಾರಿಕೆ, ತೃಷೆ.
—ಏರು ಲಾವಣ್ಯಹೊಂದು.
—ಬಟ್ಟೆ ನೀರಿನ ಪ್ರವಾಹ, ನೀರಿನ ದಾರಿ.
ನೀರ ಚೆಲುವ, ಪ್ರಿಯತಮ; ಬೆಂಕಿಯಿಂದ ಹುಟ್ಟಿದುದು; ನೀರು, ಜಲ; ಸತ್ವ; ಯೋಗ್ಯತೆ
—ತೆ ಸೊಬಗು, ಚೆಲುವು.
ನೀರಜ ನೀರಲ್ಲಿ ಹುಟ್ಟತಕ್ಕ ಪ್ರಾಣಿ; ತಾವರೆ.
—ಸಖ ತಾವರೆ ಗೆಳೆಯ; ಸೂರ್ಯ.
ನೀರದ ಮೋಡ, ಮೇಘ, ಮುಗಿಲು.
—ರವ ಮುಗುಲಿನ ಸದ್ದು, ಗುಡುಗು.
ನೀರಸ ರಸವಿಲ್ಲದ, ಸಾರಹೀನ; ಸಪ್ಪೆ; ದಾಡಿಂಬ.
ನೀರಳ್ಕೆ ನೀರಡಿಕೆ, ಬಾಯಾರಿಕೆ.
ನೀರಂಧ್ರ ರಂಧ್ರವಿಲ್ಲದ; ಎಡೆಯಿಲ್ಲದ; ದಟ್ಟ.
ನೀರಾಜನ ನೀಲಾಂಜನ; ಆರತಿ; ಅಶ್ವಿನಿ ಮಾಸದಲ್ಲಿ ಮಾಡುವ ಕೆಲವು ಪೂಜೆಗಳು.
ನೀರಾನೆ ಹಿಪ್ಪೋಪೊಟಮಸ್ ಎಂಬ ಆಫ್ರಿಕದ ಒಂದು ದೊಡ್ಡ ಮೃಗ.
ನೀರು (ನೀರ್), ಜಲ; ಪುಡಿ; ಬೂದಿ.
—ಕಾಗೆ ಒಂದು ಕರಿಯ ಹಾರುವ ಮತ್ತು ಈಜುವ ಪಕ್ಷಿ.
—ನಾಯಿ ನೀರಲ್ಲಿ ವಾಸಿಸುವ ಮುಂಗುಲಿ ಜಾತಿಯ ಒಂದು ಪ್ರಾಣಿ.
—ಬೆಕ್ಕು ನೀರುನಾಯಿ.

—ಮುಳುಕ ಮೀನುಹುಳ್ಳಿ.
ನೀರುಳ್ಳಿ (ಈರುಳ್ಳಿ), ಒಂದು ಜಾತಿ ಗಡ್ಡೆ, ಉಳ್ಳಿಗಡ್ಡೆ.
ನೀರೆ ಪ್ರಿಯೆ; ಚೆಲುವೆ; ಲಾವಣ್ಯವತಿ; ವೇಶ್ಯೆ.
ನೀರೇಜ ನೀರಲ್ಲಿ ಹುಟ್ಟದುದು, ಕಮಲ.
ನೀರ್ದಾಣ ನೀರು ಇರುವ ಠಾವು; ಕೆರೆ.
ನೀರ್ದಿಗುರಿ ನೀರಿನ ಸುಳಿ.
ನೀಲ ಆಕಾಶದ ಬಣ್ಣ; ಒಂದು ಬೆಟ್ಟ; ರಾಮನ ಕಪಿ ಪಾಳೆಯದ ಒಬ್ಬ ನಾಯಕ; ಒಂದು ರತ್ನ; ಗುರುತು; ಏಕರಥನೆಂಬ ವೀರ.
—ಗಾರ ನೀಲಿಬಣ್ಣ ಹಾಕುವವ, ಬಣ್ಣ ಹಾಕುವವ.
ನೀಲಕೇತು (ನೀಲಧ್ವಜ).
ನೀಲಕಂಠ ಕತ್ತಿನಲ್ಲಿ ನೀಲವಾಗಿರುವವ; ಶಿವ; ನವಿಲು.
ನೀಲಗಾಯಿ ನೀಲಗಿರಿ ಪ್ರದೇಶದ ಒಂದು ದೊಡ್ಡ ಜಾತಿ ಎರಳೆ (ಜಿಂಕೆ).
ನೀಲಗಿರಿ ಉದಕಮಂಡಲ ಪರ್ವತಪ್ರಾಂತ.
ನೀಲಗ್ರೀವ ನೀಲಕಂಠ, ಶಿವ.
ನೀಲಧ್ವಜ ಮಾಹಿಷ್ಮತಿಯ ಒಬ್ಬ ಅರಸು.
ನೀಲಮಣಿ ನೀಲಬಣ್ಣದ ಒಂದು ರತ್ನ.
ನೀಲಮೇಘಶ್ಯಾಮ ಕರಿಮುಗಿಲಿನ ಬಣ್ಣದವ; ಕೃಷ್ಣ, ವಿಷ್ಣು.
ನೀಲಂಗು ಹುಳ, ಕೋರಿಹುಳ; ಕ್ರಿಮಿಕೀಟ.
ನೀಲಾಚಲ ಒಂದು ಪರ್ವತ.
ನೀಲಾಲಕಿ (ನೀಲಾಳಕಿ), ಕರಿ ಕೂದಲುಳ್ಳವಳು; ಸ್ತ್ರೀ.
ನೀಲಾಂಗ ಕೃಷ್ಣ; ದಶರಥನ ಮಗ ರಾಮ.
ನೀಲಾಂಜನ (ನೀರಾಜನ), ಕಾಲುದೀಪ; ಆರತಿ; ಉದ್ದವಾದ ನೆರಳು.
ನೀಲಾಂಬರ ಬಲರಾಮ; ಶನೀಶ್ವರ; ನೀಲ ಬಣ್ಣದ ಬಟ್ಟೆ.
ನೀಲಾಂಬರಿ ಒಂದು ರಾಗ.

ನೀಲಿ (ನೀಲ) ನೀಲಿಬಣ್ಣ ಕೊಡುವ ಒಂದು ಸಸ್ಯ; ಆಕಾಶದ ಬಣ್ಣ; ಒಂದು ಕಾಯಿಲೆ.
—ಗಾರ ನೀಲಿಬಣ್ಣ ಹಾಕುವವ.
—ಮತೆ ನೀಲಿಬಣ್ಣವಾಗಿರುವಿಕೆ.
—ಮೆ (ನೀಲಿಮತೆ).
ನೀಲಿಕ ನೀಲಿ ಹೂಬಿಡುವ ಗೋರಟೆ, ಕರಿ ಲಕ್ಕಿ ಗಿಡ.
ನೀಲಿಮಾತು ಸುಳ್ಳು ನುಡಿ.
ನೀಲಿರಾಗ ನೀಲಿಬಣ್ಣ; ಸ್ಥಿರ ಪ್ರೀತಿ; ಅನುರಾಗ; ದೃಢಸ್ನೇಹ.
ನೀಲೋತ್ಪಲ ನೀಲಬಣ್ಣದ ನೈದಿಲೆ, ನೀಲ ಕೋಳೆ, ಕನ್ನೈದಿಲೆ.
ನೀವಾಕ ಕಾಳುಕಡಿಗಳ ದೌರ್ಲಭ್ಯ; ಬರಗಾಲದಲ್ಲಿ ಧಾನ್ಯ ಕೂಡಿಡುವಿಕೆ.
ನೀವಾರ ಕಾಡುಬತ್ತ, ಕಾಡಲ್ಲಿ ತಾನಾಗಿ ಬೆಳೆಯುವ ಬತ್ತ.
ನೀವಿ ವ್ಯಾಪಾರದ ಮೂಲಧನ; ಸೀರೆ ನೆರಿಗೆ; ಪಣ,ಒಡ್ಡಿದ್ದು; ಸೆರೆಮನೆ; ಕರುಣೆ; ಸುರತ.
ನೀವು 'ನೀನು' ಎಂಬುದರ ಬಹುವಚನ; ಸವರು, ತಿಕ್ಕು, ಗಡ್ಡಮೀಸೆಗಳನ್ನು ಸವರು.
ನೀವ್ರು ಸೂರು, ಸೂರಲು, ಮಾಡು.
ನೀವೃತ್ ಜನಪದ; ದೇಶ, ನಾಡು.
ನೀಶಾರ ಹಚ್ಚಡ, ಜದ್ದರು; ತೆರೆ; ಗೂಡಾರ.
ನೀಸು ವ್ಯವಸ್ಥೆಮಾಡು; ಪೂರಯಿಸು; ನಡಸು.
ನೀಹಾರ ಮಂಜುಗಡ್ಡೆ; ಹಿಮ, ಇಬ್ಬನಿ, ಮಂಜು; ಪಾಳೆಯ ಹೊರಡುವುದು, ತಳರೇಳುವುದು
ನೀಳ್ (ನೀಳು) ಉದ್ದವಾಗು; ನೀಡು; ವಿಸ್ತರಿಸು.
—ಕೊಳು ಅಲೆದಾಡು, ಗಮನ ತಪ್ಪು.
—ತ ಉದ್ದವಾದ.
—ಪು ಉದ್ದ.
ನೀಳ ಉದ್ದ; ಎತ್ತರ; ವಿಸ್ತಾರ.
ನೀಳಗಳ ನೀಲಕಂಠ, ಶಿವ; ನವಿಲು.

ನೀಳ್ಕರಿಸು ನೀಡುಕರಿಸು, ತಿರಸ್ಕರಿಸು.
ನೀಳ್ಕುಳಿಗೊಳ್ ಸೆಳೆ, ಎಳೆ.
ನೀಂಟು ಎಸೆ, ಬಿಸುಡು, ಬೀಸಿ ಒಗೆ.
ನುಗಿ ನುರಿ, ಬೆರಳುಗಳಲ್ಲಿ ತಿಕ್ಕಿ ಪುಡಿಮಾಡು.
ನುಗಿಚು ನುಸುಳು; ಮೈತಿರುವಿ ಕಳಚಿ ಕೊಳ್ಳು; ಜಾರು.
ನುಗುಳ್ಚು ನುಸುಳು, ಹೊಗು.
ನುಗ್ಗು ಒಳಕ್ಕೆ ಬಲವಂತದಿಂದ ಸೇರು; ಒತ್ತಿ ಮುಂದೆಹೋಗು, ನುಸುಳು; ನುರಿ, ತೀಡಿ ಪುಡಿಮಾಡು; ಪುಡಿಯಾಗು; ಪುಡಿ.
—ನುರಿ ಪುಡಿಪುಡಿ.
ನುಗ್ಗೆ (ನುಗ್ಗಿ), ಒಂದು ಮರ.
ನುಚ್ಚು ಸಣ್ಣ ಕಡಿ, ಕಣ.
—ನೂರು ಸಣ್ಣ ಚೂರು, ಚೂರುಚೂರು.
ನುಡಿ ಹೇಳು, ಮಾತಾಡು; ಮಾತು; ಪದ್ಯ; ವಾಕ್ಯ.
—ಆಟ ಮಾತಿನ ಹೊರಳು, ಶಬ್ದಚಮತ್ಕಾರ; ವಾಗ್ವಿಲಾಸ.
—ಉಡುಗು ಮಾತು ಕುಗ್ಗು.
—ಕಟ್ಟು ಹೇಳಿಕೆ; ಗಾದೆ; ದೇಸಿ.
—ಕಾರ ಮಾತುಗಾರ.
—ತ (ನುಡಿಹ) ಮಾತು.
—ಸು ಮಾತಾಡಿಸು; ಬಾಜಿಸು, ಬಾರಿಸು.
ನುಡಿವೆಣ್ ಮಾತಿನ ಅಧಿಕಾರಿಣಿಯಾದ ದೇವತೆ, ಸರಸ್ವತಿ.
ನುಣ್ (ನುಣ್ಣು) ನಯ; ಪುಡಿ; ಮಿದು, ಮೆತ್ತನ್ನು, ಲಲಿತ.
—ಇಸು ನುಣ್ಣಗೆಮಾಡು, ಹದಮಾಡು.
—ಚು(ನುಣುಚು)ಜಾರು,ತಪ್ಪು,ಕಳಚು.
—ಪು ನಯಗಾರಿಕೆ, ಮೃದು.
ನುಣ್ಗದಿರು ಮಿದುವಾದ ಕಾಂತಿ, ತಂಪಾದ ಬೆಳಕು, ತಂಬೆಳಕು.
ನುಣ್ಣಗೆ(ನುಣ್ಣನೆ)ನುಣುಪಾಗಿ,ನಯವಾಗಿ.
ನುಣ್ದನಿ ಸವಿಯಾದ ಧ್ವನಿ, ನುಣುಪಿನ ಸ್ವರ.
ನುಣ್ಪು (ನುಣುಪು), ನಯ, ಸೌಂದರ್ಯ.
ನುತ ಹೊಗಳಲ್ಪಟ್ಟ.
ನುತಿ ಹೊಗಳಿಕೆ, ಸ್ತೋತ್ರ; ನಮಸ್ಕಾರ; ಪೂಜೆ.
—ಸು ಹೊಗಳು; ಪೂಜಿಸು.
ನುರಿ (ನುರುಗು), ಸವೆ, ಪುಡಿಯಾಗು; ತಿದ್ದು; ಪುಡಿಮಾಡು; ಕೈಯಿಂದ ತಿಕ್ಕಿ ಪುಡಿಮಾಡು; ಚೆನ್ನಾಗಿ ಅನುಭವ ಪಡೆ.
—ತ ನುರಿತಿರುವಿಕೆ, ಕಷ್ಟಾನುಭವ; ತಿದ್ದಿರುವಿಕೆ.
—ಸು ತಿದ್ದಿಸು.
ನುರು ಕಾಡಲ್ಪಡು, ಪೀಡೆಗೊಳಗಾಗು.
ನುರುಕು ಕುಂದು, ಕ್ಷೀಣಿಸು; ನುಗ್ಗು.
ನುರ್ಗು (ನುಗ್ಗು), ಒತ್ತಿ ಮುಂದೆಹೋಗು; ಎಡೆಗೆ ಸಿಕ್ಕಿ ಆಗುವ ಪುಡಿ.
ನುಲಿ ಹಗ್ಗ; ತಿರುಪು; ಹಿಂಡು; ಮಡಿಸು; ತಿರುಪಿದ್ದುದು, ಹುರಿ; ಕೆಳಹೊಟ್ಟೆ; ಶೂಲೆ.
—ಕೆ ತಿರುಪುವಿಕೆ, ಹಿಂಡುವಿಕೆ.
—ಸು ತಿರುಪು, ಹುರಿಹಾಕು, ಹೊಸೆ; ಹಿಂಡು.
ನುಸಿ ಸೊಳ್ಳೆ; ನೊರಜು; ಕೀಟ ಜಾತಿ.
ನುಸುಳ್ (ನುಸುಳು) ತೂರಿಕೊಂಡು ಹೋಗು; ಜಾರಿಹೋಗು; ತಪ್ಪಿಹೋಗು; ಆಡಿ ತಪ್ಪುವುದು; ಸುಳ್ಳು.
ನುಳು ಪುಡಿಮಾಡು;ಪುಡಿಯಾಗು,ನುಗ್ಗಾಗು.
ನುಂಗು ಹಲ್ಲಿಂದ ಅಗಿಯದೆ ತಿನ್ನು.
ನುಂಪಿಡು(ನುಣ್ಪಿಡು),ನಯಮಾಡು;ಹಚ್ಚು, ಲೇಪಿಸು.
ನುಂಪು (ನುಣ್ಪು), ನಯ.
ನೂಕು (ನೂಂಕು), ತಳ್ಳು, ದೂಡು, ದಬ್ಬು; ತಳ್ಳುವಿಕೆ; ಮುಂದೆ ತಳ್ಳು, ದೂಕು.
ನೂಗು ಪುಡಿ, ಕಣ, ಚೂರು.

ನೂತ ನೂಲುಮಾಡಿದ, ನುತ.
ನೂತನ (ನೂತ್ನ), ಹೊಸ, ನವೀನ; ವಿಚಿತ್ರ.
—ಗಾರ ಉಪಾಯಗಾರ.
—ಮಾರ್ಗ ವಿಚಿತ್ರ ರೀತಿ; ಹೊಸ ಬಗೆ.
ನೂದ ಪಾಪವನ್ನು ಹೋಗಲಾಡಿಸುವುದು; ವೃಕ್ಷವಿಶೇಷ, ತೋರಿಗಿಡ.
ನೂನ (ನ್ಯೂನ) ನಿಶ್ಚಯ; ನೆನಪು; ವಾಕ್ಯಪೂರಣ; ಕುಂದಿರುವ, ಅಪೂರ್ಣ.
ನೂಪುರ ಪಾದಭೂಷಣ, ಪೈಜಣಿ, ಕಾಲ್ಕಡಗ.
ನೂರು ಒಂದು ಸಂಖ್ಯೆ, ಶತ.
ನೂರೆಲೆ ಒಂದು ಬಗೆ ತಾವರೆ.
ನೂಲ್ (ನೂಲು) ದಾರ; ಒಡ್ಯಾಣ; ನೂಲು ಹೊರಡಿಸು.
ನೂಲಿಗ ನೂಲಿನಂತಿರುವ; ಎಲೆಹಾವು, ಹಸುರುಹಾವು, ಚಿಣಿಗಿಹಾವು.
ನೂಲೇಣಿ ಗಂಟುಹಾಕಿದ ಹಗ್ಗ. ಇದನ್ನೇರಿ ಮೇಲಕ್ಕೆ ಹೋಗಬಹುದು.
ನೂಳ್ (ನೂಳು), ನುಸುಳ್; ಸುಳ್ಳು.
ನೂಳದು ಅತಿಶಯ; ಪಿರಿದು.
ನೂಂಕು ತಳ್ಳು, ಒತ್ತು, ಅಮುಕು, ಹಿಚುಕು.
ನೃ (ನರ), ಮನುಷ್ಯ.
ನೃತ್ತ ಕುಣಿತ; ತಾಲಪ್ರಧಾನವಾದ ಕುಣಿತ.
ನೃತ್ಯ ಕುಣಿತ; ಕುಣಿತದ ಒಂದು ರೀತಿ.
ನೃಪ ನೃಪತಿ, ಜನರನ್ನು ಆಳುವವ, ಅರಸ.
ನೃಪಾಲ (ನೃಪತಿ).
ನೃಯಜ್ಞ ಅತಿಥಿಪೂಜೆ; ನರಯಜ್ಞ.
ನೃಶಂಸ (ಶಂಸ=ಪೀಡೆ) ಜನರನ್ನು ಪೀಡಿಸುವವ, ಕ್ರೂರ; ಘಾತುಕ; ದ್ರೋಹಿ.
ನೃಹರಿ (ನರಹರಿ), ನರಸಿಂಹ.
ನೆಕ್ಕಿ ಲಕ್ಕಿ ಗಿಡ.
ನೆಕ್ಕು ನಾಲಿಗೆಯಿಂದ ಸವರು; ಖಿನ್ನನಾಗು; ಕುಗ್ಗು, ತಗ್ಗು.
ನೆಕ್ಕುನೆಳಿಲ್ ದಡಬುಡ ಎಂಬ ದನಿ.

ನೆಗಚು ಜಿಗಿ, ನೆಗೆ, ಹಾರು.
ನೆಗಡಿ ಕೆಮ್ಮಲು, ಕಫದ ಬಾಧೆ, ಕೆಮ್ಮು.
ನೆಗಹು ನೆಗಪು, ಎತ್ತು; ಮೇಲಕ್ಕೆತ್ತು.
ನೆಗಳ್ (ನೆಗಳು) ಮಾಡು; ರಚಿಸು; ಪ್ರಾಪ್ತಿಸು; ಉಂಟಾಗು; ಉದ್ಯೋಗಮಾಡು; ಖ್ಯಾತಿಗೊಳ್ಳು; ಹೊಗಳು; ತೀರು, ಮುಗಿ; ವಕ್ರ.
—ಚು ಉಂಟುಮಾಡು, ಮಾಡು; ಹೊಗಳು; ಸಾರು.
—ತೆ ಕೀರ್ತಿ; ಕೃತಿ; ರಚನೆ; ಆಚಾರ.
ನೆಗೆ ಹಾರು, ಜಿಗಿ; ಮಿಳ್ಳಿಸು, ಧಿಂಕಿಡು; ಏರು. ಅಭಿವೃದ್ಧಿಗೊಳ್ಳು, ಹೊಳೆ; ಚೊಕ್ಕವಾಗು.
—ತ (ನೆಗೆಪು) ಹಾರಾಟ; ಏಳಿಗೆ; ಉನ್ನತಿ.
ನೆಗೆಣ್ಣೆ ಅಣ್ಣತಮ್ಮಂದಿರ ಹೆಂಡಿರಲ್ಲಿರುವ ಪರಸ್ಪರ ಸಂಬಂಧ.
ನೆಗ್ಗಿಲು ಒಂದು ಜಾತಿಯ ಮುಳ್ಳುಗಿಡ, ಅದರ ಮುಳ್ಳು, ನೆಗ್ಗಲಿ.
ನೆಗ್ಗು ನಾಶವಾಗು, ಒಡೆದುಹೋಗು; ಒಳಗೆ ಬಗ್ಗಿರು; ಮುಳುಗು; ಪುಡಿಯಾಗು, ಜಜ್ಜಿಹೋಗು; ಪಾತ್ರೆಗಳು ಬಿದ್ದಾದ ನಳುಕು, ನಳ್ಳು; ತಗ್ಗು.
ನೆಚ್ಚು (ನಚ್ಚು), ನಂಬು, ವಿಶ್ವಾಸವಿರಿಸು.
—ಇಕೆ ನಂಬಿಕೆ.
—ಇಸು ನಂಬಿಸು, ವಿಶ್ವಾಸ ಹುಟ್ಟಿಸು.
ನೆಟ್ಟಗೆ (ನೆಟ್ಟನೆ) ನಿಡಿದ್ದಿರುವಿಕೆ, ನೀಳವಾಗಿರುವಿಕೆ; ಸ್ಪಷ್ಟ; ಸರಳ; ಚೆನ್ನ.
ನೆಟ್ಟನೆ (ನೆಟ್ಟಗೆ), ಸರುತ, ನೀಟ, ನೀಳ.
ನೆಟ್ಟೆ ನಡುವಿಕೆ, ನಾಟ; ಚೆಲುವು; ಶೋಭೆ.
ನೆಡಿಗೆ ನೆಲಕ್ಕೆ ಊರಿದ ಸ್ತಂಭ, ಗುತ್ತಿ.
ನೆಡು (ನಡು), ನಾಟಕೊಳ್ಳು; ನಾಟಸು.
ನೆಡೆ (ನಡೆ), ನಡೆಯುವ ದಾರಿ; ನಾಟಿರುವಿಕೆ; ನಡೆಯುವ ಪ್ರಾಣಿ, ಜಾನುವಾರು.
ನೆಣ ಕೊಬ್ಬು; ಮಿದುಳು; ಹೆಪ್ಪುಗಟ್ಟಿದ ರಕ್ತ.
ನೆಣಕಸೆ ಕೊಬ್ಬಿನ ಪಿಣ್ಣೆ.

ನೆತ್ತ (ಲೆತ್ತ), ಪಗಡೆಯಾಟ; ದಾಳ, ಪಗಡೆ; ನೇತ್ರ; ಕಣ್ಣು.
— ಇಗ ಜೂಜುಗಾರ.
ನೆತ್ತವಲಗೆ ಜೂಜಾಡುವ ಮಣೆ, ಪಗಡೆಮಣೆ.
ನೆತ್ತರು (ನೆತ್ತರ್), ಶೋಣಿತ, ರಕ್ತ.
ನೆತ್ತಿ ತಲೆಯ ಮೇಲ್ಭಾಗ; ಶಿಖರ.
— ಕೋಡು ಹಣೆಯ ಮೇಲಿನ ಕೊಂಬು.
ನೆನವು ಒದ್ದೆಯಾಗಿರುವಿಕೆ; ನೆನೆಹು.
ನೆನಸು ನೆನಪುಮಾಡು; ಸ್ಮರಣೆ, ಸ್ಮೃತಿ; ಧ್ಯಾನ.
ನೆನಹು ನೆನಪು, ಸ್ಮರಣೆ.
ನೆನೆ (ನನೆ) ಒದ್ದೆಯಾಗು, ತೊಯ್; ಯೋಚಿಸು, ಆಲೋಚಿಸು; ಹಂಬಲಿಸು, ಸ್ಮರಿಸು.
ನೆಪ (ದ್ಭ) ನಿಭ (ಸಂ), ನೆವ, ನೆವನ; ಕಾರಣ.
ನೆಪ್ಪು ಮುಯ್ಯಿ; ನೆನಪು.
ನೆಮರು ಜಗಿ; ಮೆಲುಕುಹಾಕು, ಮೆಲುಕಾಟ.
ನೆಮ್ಮುಗೆ ನಂಬಿಗೆ; ಸಂಬಂಧ; ಅಡರ್ಪು.
ನೆಮ್ಮದಿ ಮನಃಶಾಂತಿ, ಕ್ಷೇಮ; ಸುಖ.
ನೆಮ್ಮು (ನೆರ್ಮು), ಆಧರಿಸು, ಒರಗು, ಆತುಕೊಳ್ಳು, ಆನಿಕೋ; ಆಧಾರ, ಒರಗು.
— ಇಸು ಹೊರಿಸು, ತಪ್ಪುಹೊರಿಸು.
ನೆಯ್ ತುಪ್ಪ; ನೇಯು, ಬಟ್ಟೆಮಾಡು; ಹೊಸೆ.
—ಗೆ ನೇಯುವಿಕೆ, ಬಟ್ಟೆಕೆಲಸ.
ನೆಯ್ದಿಲಮೆಯ್ದುನ ನೈದಿಲೆಯ ಬಂಧು; ಚಂದ್ರ.
ನೆಯ್ದಿಲೆ ನೈದಿಲೆ, ಕುವಲಯ, ಕೋಳೆ.
ನೆಯ್ಯು (ನೆಯ್).
ನೆರ ಸಹಾಯ; ಮರ್ಮಸ್ಥಾನ; ಮರ್ಮ, ಗುಟ್ಟು; ಬಳಿಯಿರುವಿಕೆ, ಸಮೀಪ; ಹತ್ತಿರ ಬರುವಿಕೆ; ಸಹಾಯ.
ನೆರಕೆ ತಡಿಕೆಯ ಚಪ್ಪರ; ತಟ್ಟಿ.
ನೆರತೆ ಪರಿಪೂರ್ಣತೆ; ಭೋಗ; ಫಲ.
ನೆರಪು ಸೇರಿಸು, ಕೂಡಿಸು; ಪೂರ್ಣಮಾಡು;
ನೆರಮನೆ (ನೆರೆಮನೆ), ಸಮೀಪದ ಮನೆ.
ನೆರಲ್ ಜೋಲು ಬೀಳು, ಇಳಿಬೀಳು, ಜೋತಾಡು.
ನೆರವಿ ಗುಂಪು, ಸಮೂಹ; ಜನಸಂದಣಿ.
ನೆರವು (ನೆರಂ), ಸಹಾಯ.
ನೆರಹು ಹೇಳು; ನೆರೆಸು, ಜತೆಗೂಡಿಸು.
ನೆರಳು (ನೆರಳ್), ಛಾಯೆ, ನೆಳಲು; ಗುಂಪು ಸೇರು; ಆಧರಿಸು.
ನೆರಿಗೆ (ನೆರಿ), ನೀರಿಗೆ, ವಸ್ತ್ರದ ಮಡಿಕೆ; ಸುಕ್ಕು.
ನೆರೆ ಒಟ್ಟುಕೂಡು, ಗುಂಪುಸೇರು; ಸ್ತ್ರೀ ಸಂಭೋಗಮಾಡು; ಸಮರ್ಥನಾಗು; ಋತುವಾಗು; ಪ್ರಾಯಕ್ಕೆ ಬರು; ತೃಪ್ತಿಪಡು, ಸಾಕಾಗು; ಸಂಭ್ರಮ, ಸಮೂಹ; ಚೆನ್ನಾಗಿ; ಸಮೀಪ; ಅಧಿಕ; ಬಹಳ; ಬೂದಿಬಣ್ಣ; ಪೂರ, ನದಿಯ ಉಕ್ಕು.
— ಇಸು (ನೆರೆಸು), ಸೇರಿಸು, ಜತೆಗೂಡಿಸು; ಕಲೆಹಾಕು.
—ಪು (ನೆರ್ಪು), ಸಂಗ್ರಹಿಸು; ಪೂರ್ಣತೆ.
— ವಣಿಗೆ ನೆರೆಯುವಿಕೆ; ಪೂರ್ಣತೆ; ಒಳ್ತನ
— ಹೊರೆ (ನೆರೆಕರೆ) ಸಮೀಪ, ಹತ್ತಿರ; ಎಡಬಲದ, ಅಕ್ಕಪಕ್ಕದ.
ನೆರೆತೆರೆ (ನರೆದೆರೆ), ಮುಪ್ಪು, ಮುಪ್ಪಿಂದ ಚರ್ಮ ನೆರಿಗಟ್ಟುವುದು.
ನೆರೆವಿಡಿ (ನಿರಿವಿಡಿ), ನೆರಿಗೆಹಾಕು.
ನೆರ್ಮು (ನೆಮ್ಮು).
ನೆಲ್ (ನೆಲ್ಲು), ಬತ್ತ.
ನೆಲ ಭೂಮಿ; ಮಣ್ಣು; ತಳ; ನಾಡು, ದೇಶ.
ನೆಲಕಲ ಲೋಭಿ.
ನೆಲಗಡಲೆ ಕಡಲೆಕಾಯಿ, ಶೇಂಗಾ.
ನೆಲದೆರೆ ಭೂಕಂದಾಯ, ತೆರಿಗೆ, ಶೀರ್ವೆ.
ನೆಲದೆರೆಯ ಅರಸು.
ನೆಲಮನೆ ನೆಲದ ಕೆಳಗಿರುವ ಮನೆ.
ನೆಲಮಾಡ ಉಪ್ಪರಿಗೆ, ಅಟ್ಟ, ಮೇಲಟ್ಟ.
ನೆಲಮುಕ್ಕು ಪಿಶಾಚ.

ನೆಲಸು (ನೆಲಿಸು), ಇರು, ವಾಸವಾಗಿರು, ನೆಲೆಗೊಳು.

ನೆಲವು (ನೆಲಪು), ನಿಲುವು.

ನೆಲೆ ಸ್ಥಾನ, ಉಪ್ಪರಿಗೆ; ಸ್ಥೈರ್ಯ; ನಿವಾಸ, ಮನೆ; ಗೋಪ್ಯ; ತಳ.

—ಕಟ್ಟು (ನೆಲಗಟ್ಟು), ಅಸ್ತಿವಾರ, ಪಾಯ, ಕುಟ್ಟಿಮ, ತಳಹದಿ.

—ಕೆಡು ಸ್ಥಾನ ತಪ್ಪು, ಇರಲಾರದೆ ಹೋಗು; ಮಿತಿಮೀರು.

—ಕೊಳು ವಾಸವಾಗು, ಇರು; ದೃಢ ಪಡು, ಬಲವಾಗು.

—ಸು (ನೆಲಸು), ವಾಸವಾಗು, ಇರು.

ನೆಲೆಮನೆ ಸ್ಥಿರವಾದ ಮನೆ; ವಾಸಸ್ಥಾನ; ಕರುಮಾಡ, ಉಪ್ಪರಿಗೆ.

ನೆಲೆಮಾಡ (ನೆಲೆವಾಡ), ಉಪ್ಪರಿಗೆ.

ನೆಲೆವೀಡು (ನೆಲೆಬೀಡು), ವಾಸದ ಮನೆ.

ನೆಲ್ಲಿ ಒಂದು ಮರ, ಅದರ ಕಾಯಿ, ಆಮಲಕ.

ನೆಲ್ಲು ಬತ್ತದ ಹುಲ್ಲು.

ನೆವ (ನೆವನ), ನೆಪ, ತೋರಿಕೆಯ ಕಾರಣ.

ನೆವರು (ನುಸುಳು).

ನೆಸೆ ಶುದ್ಧವಾಗು; ಸಲಿಗೆ; ಮೇಲೇರು; ಹಾರಾಡು.

ನೆಳಲ್ (ನೆರಳ್), ನೆರಳು, ಛಾಯೆ.

—ಕವಿ ನೆರಳಿಂದ ಆವರಿಸಲ್ಪಡು.

ನೆಳ್ಳು ಅಡಗು.

ನೆಂಟ (ನೋಡು: ನಂಟ).

ನೆಂಟು ಸಂಬಂಧ, ಆಪ್ತತ್ವ, ಗಂಟು; ಹೊಂದಿಕೆ.

ನೇಕಾರ ನೇಯ್ಗೆಯವ, ಜೇಡ.

ನೇಗಿಲು ಲಾಂಗಲ, ಉಳುವ ಸಾಧನ.

ನೇಜಕ ರಜಕ, ಅಗಸ, ಮಡಿವಾಳ.

ನೇಜಯು ಕುದುರೆಗಳನ್ನು ಚುಚ್ಚುವ ಒಂದು ಸಾಧನ, ಕೈಬರ್ಚಿ.

ನೇಟು (ನೀಟು), ನೆಟ್ಟಗಿರುವಿಕೆ, ಸರಳತೆ; ಸತ್ಯ.

ನೇಣು (ನೇಣ್), ಹಗ್ಗ; ಉರುಲು.

ನೇಣ್ಗೈಯ್ಯ ಕೈಯಲ್ಲಿ ನೇಣಿರುವವ, ವರುಣ.

ನೇತಿ ಹೀಗಲ್ಲ; ನಿಯತಿ (ಸಂ); ಭಾಗ್ಯ, ವಿಧಿ.

ನೇತಿಗಳೆ ತಿರಸ್ಕರಿಸು; ಕಟ್ಟು ಕಳಚು.

ನೇತೃ (ನೇತಾರ), ನಾಯಕ; ಪ್ರಭು, ಸ್ವಾಮಿ, ಒಡೆಯ.

—ತ್ವ ಒಡೆತನ; ನಾಯಕತನ, ಮುಂದಾಳುತನ.

ನೇತ್ರ ಕಡೆಯುವ ಹಗ್ಗ; ಮರದ ಬೇರು; ಜಡೆ; ಕಣ್ಣು; ಎರಡು ಸಂಖ್ಯೆ; ಸದ್ಗುಣ; ವಸ್ತ್ರ; ಅಡಕೆ ಮರ.

ನೇತ್ರಚ್ಛದ ಕಣ್ಣು ರೆಪ್ಪೆ.

ನೇತ್ರತ್ರಯ ಮುಕ್ಕಣ್ಣ, ಶಿವ.

ನೇದಿಷ್ಠ ಸಮೀಪ; ಬಳಿಯ, ಒತ್ತಿನ, ನೆರೆಯ.

ನೇಪಥ್ಯ ವೇಷ; ನಾಟಕದಲ್ಲಿ ವೇಷಹಾಕುವ ಕೋಣೆ.

ನೇಪಾಲ (ನೇಪಾಳ), ಹಿಂದೂದೇಶದ ಉತ್ತರಕ್ಕಿರುವ ದೇಶ; ಹಿಮಾಲಯದ ಮಗ್ಗುಲಲ್ಲಿರುವ ಒಂದು ನಾಡು.

ನೇಮ (ದ್ಭ) ನಿಯಮ (ಸಂ), ಪದ್ಧತಿ, ವಾಡಿಕೆ; ಅರ್ಧ; ಅಂಶ; ಮೋಸ; ಭೂತದ ಕೋಲ.

—ಇಸು ಗೊತ್ತುಮಾಡು, ಇಂಥವನೆಂದು ಹೇಳು, ಕೆಲಸಕ್ಕೆ ಹಚ್ಚು.

—ಕ ಮೊಕರೂರು; ಒಂದು ಕೆಲಸಕ್ಕೆ ಇಲ್ಲವೆ ಹುದ್ದೆಗೆ ಒಬ್ಬನನ್ನು ಗೊತ್ತುಮಾಡುವುದು, ನಿಯಾಮಕ.

—ವಂತ ರೀತಿವಂತ, ಬಗೆಗಾರ.

ನೇಮಣೂಕ ಮೊಕರೂರು, ನೇಮಕ.

ನೇಮಿ ರಥದ ಚಕ್ರದ ಹಳಿ; ಚಕ್ರದ ಹೊರಗಿನ ಕಬ್ಬಿಣದ ಪಟ್ಟಿ, ಹಳಿ.

ನೇಯ (ದ್ಭ) ನ್ಯಾಯ (ಸಂ); ನಡಸಲ್ಪಡುವುದು.

ನೇಯಿಗೆ (ನೇಯ್ಗೆ).

ನೇಯು(ನೇಯ್)ಬಟ್ಟೆಮಾಡು;ಹೊಸೆ;ಹೆಣೆ.
ನೇರ್ ಕತ್ತರಿಸು; ಒಪ್ಪು, ಒಡಂಬಡು; ಸೇರಿಕೆ; ಒಪ್ಪಂದ; ವ್ಯವಸ್ಥೆ.
ನೇರ ನೆಟ್ಟಗೆ; ಸರಳ; ಯೋಗ್ಯ; ಯುಕ್ತ.
—ಇತು ಸರಳವಾದ.
ನೇರಲು ಜಾಂಬಳಿ ಮರ; ಕುಂಟುನೇರಳು, ಬನ್ನೇರಳುಮೊದಲಾದಮರಗಳು,ನೀರಲ.
ನೇರಳೆ (ನೇರಿಳೆ), ನೀರಲ, ಕೆಂಪು ನೀಲಿಗಳ ಮಿಶ್ರಬಣ್ಣ, ಜಾಂಬಳಿ.
ನೇರಿದ ಸರಳ ಸ್ವಭಾವಿ, ಕಪಟರಹಿತ.
ನೇರು ನೇತು ಹಾಕು, ನೇಲು, ತೂಗು.
ನೇರ್ಗಿರಿಯ ಒತ್ತಿನ ತಮ್ಮ, ಬೆನ್ನಮೇಲೆ ಬಂದವ.
ನೇರ್ಗೋಲ ಉದ್ದವಾದ ಕೋಲು, ಬರ್ಚಿ.
ನೇರ್ಪಡು ಸೇರಿಕೊಳ್ಳು; ಹೊಂದಿಕೊಳ್ಳು.
ನೇರ್ಪು ಸರಿ, ಸರಳತೆ; ವ್ಯವಸ್ಥೆ; ಅಚ್ಚುಕಟ್ಟು.
ನೇರ್ಪೆ ಸರಿ, ಸಮ.
ನೇಲ್ (ನೇಲು), ಜೋತಾಡು, ತೂಗು; ಓಲಾಡು.
—ಇಸು ತೂಗಾಡಿಸು, ತೂಗಿಸು.
ನೇವಣ ನೇವಳ, ಉಡಿದಾರ; ಕೊರಳಹಾರ.
ನೇವರಿಸು ಸರಿಪಡಿಸು, ನೆಟ್ಟಗೆ ಮಾಡು; ಕೈಯಿಂದ ಸವರು.
ನೇವಳ(ನೇವಾಳ),ಬೆಳ್ಳಿ ಇಲ್ಲವೆ ಚಿನ್ನದ ಹಾರ; ಉಡಿದಾರ; ಸರ.
ನೇವುರ(ದ್ಭ) ನೂಪುರ (ಸಂ), ಕಾಲಂದುಗೆ, ಕಾಲ್ಕಡಗ, ಪೈಜಣಿ.
ನೇಸರ್ (ನೇಸರು), ಸೂರ್ಯ; ಸೂರ್ಯನ ಜಳ, ಕಿರಣ.
ನೇಸ್ತ ನೇಹ, ಪ್ರೀತಿ, ಅನುರಾಗ.
—ಗಾರ ಗೆಳೆಯ, ಪ್ರಿಯ.
ನೇಹ (ದ್ಭ) ಸ್ನೇಹ (ಸಂ), ಪ್ರೀತಿ; ನಲ್ಮೆ
ನೇಹಗಲಹ ಪ್ರೀತಿಕಲಹ.
ನೈಕ ಒಂದು ಅಲ್ಲದ; ಹಲವು, ಬಹಳ.
ನೈಕಷೇಯ ಒಬ್ಬ ರಾಕ್ಷಸ; ಕಪಟ.
ನೈಚಿಕೆ ಉತ್ತಮ ಹಸು; ಎತ್ತಿನ ಹಣೆ.
ನೈಚ್ಯ ನೀಚತನ, ಕೀಳು ವೃತ್ತಿ.
ನೈಜ ನಿಜ, ಋಜು, ಸತ್ಯ; ತನ್ನ, ಸ್ವಂತ.
ನೈಪಥ್ಯ (ನೇಪಥ್ಯ).
—ತಳೆ ಅಲಂಕರಿಸಿಕೊಳ್ಳು.
ನೈಪದ್ಯ ಆಭರಣ.
ನೈಪುಣ್ಯ ಚಾತುರ್ಯ; ಕೌಶಲ್ಯ, ಜಾಣ್ಮೆ.
ನೈಮಿತ್ತಿಕ ಶಕುನ ಹೇಳುವವ, ನಿಮಿತ್ತ ಹೇಳುವವ; ಕಣಿ ಹೇಳುವವ.
ನೈಮಿಷ ಗೋಮತಿ ನದಿಯ ದಂಡೆಯಲ್ಲಿರುವ ಒಂದು ಪ್ರದೇಶ.
ನೈಯಾಯಿಕ ತರ್ಕಶಾಸ್ತ್ರ ಬಲ್ಲವ; ತರ್ಕ ಪಂಡಿತ.
ನೈರಸ್ಯ ರಸಹೀನತೆ; ಆಸೆಯಿಲ್ಲದಿರುವುದು, ರುಚಿಗೆಡುವಿಕೆ.
ನೈರುತಿ (ನಿಋತಿ), ದಕ್ಷಿಣ ಪಶ್ಚಿಮದ ನಡುವಣ ದಿಕ್ಕು; ಈ ದಿಕ್ಕಿನ ದೇವತೆ; ಈ ದೇವತೆಯ ಮಗ.
ನೈರ್ಮಲ್ಯ ಚೊಕ್ಕತನ, ಶುಚಿತ್ವ.
ನೈವೇದ್ಯ ನಿವೇದನ; ದೇವರಿಗೆ ಆಹಾರ ಪದಾರ್ಥಗಳ ಅರ್ಪಣೆ; ಅನ್ನ; ಎಡೆ.
ನೈಶಾಟ ರಾಕ್ಷಸರಿಗೆ ಸಂಬಂಧಿಸಿದ.
ನೈಷಧ ನಿಷಧ ದೇಶಕ್ಕೆ ಸಂಬಂಧಿಸಿದ; ನಿಷಧ ರಾಜನಾದ ನಳನ ಕಥೆ.
ನೈಷಾದಿ ಏಕಲವ್ಯನೆಂಬ ಬೇಡ.
ನೈಷ್ಕರ್ಮ ಕಾಮರಹಿತ ವ್ಯಾಪಾರ, ಫಲಾಪೇಕ್ಷೆಯಿಲ್ಲದ ಕೆಲಸ.
ನೈಷ್ಠಿಕ ಒಂದು ಬಗೆ ಬ್ರಹ್ಮಚಾರಿ; ನಿಷ್ಠಾವಂತ.
ನೈಸರ್ಗಿಕ ಸ್ವಾಭಾವಿಕವಾದ; ಕೃತ್ರಿಮ ವಲ್ಲದ; ಮೂಲದಲ್ಲೇ ಇದ್ದ, ಪ್ರಕೃತಿಯ.
ನೊಗ (ದ್ಭ) ಯುಗ(ಸಂ), ಗಾಡಿ ಎತ್ತು ಇಲ್ಲವೆ

ಉಳುವ ಎತ್ತುಗಳ ಕತ್ತಿನ ಮೇಲೆ ಬೀಳುವ ಮರದ ದಿಂಡು.

ನೊಚ್ಚಗೆ ಶರೀರ ಸುಖ, ತೃಪ್ತಿ, ತಣಿವು.

ನೊಚ್ಚಿ ಲಘು, ಹಗುರ; ಅಮೋಘ, ಸಫಲ.

ನೊಣ (ನೊಳ), ಒಂದು ಕೀಟ.

ನೊಣಬ ಲಿಂಗಾಯತರಲ್ಲಿ ಒಂದು ಪಂಗಡದವ.

ನೊಣೆ ನುಂಗು; ಬಾಯಿ ಚಪ್ಪರಿಸು.

ನೊರಜು (ನೊರಂಬು), ಸಣ್ಣ ಜಾತಿಯ ನುಸಿ, ಸೊಳ್ಳೆ.

ನೊರೆ ನೀರಿನ ಮೇಲೆ ಕೂಡುವ ನುರುಗು; ನೀರು ಕಡೆದು ನಡುವೆ ಗಾಳಿ ಗುಳ್ಳೆಗಳು ಸೇರಿ ಆಗುವ ವಸ್ತು, ಬುರುಗು.

ನೊಸಲು ಹಣೆ, ಲಲಾಟ.

ನೊಳ (ನೊಣ).

ನೊಳಲೆ ಚಿಪ್ಪು; ನಳಿಗೆ; ಒಳ್ಳೆ ಹಾವು, ನೀರು ಹಾವು.

ನೊಂದಿಸು (ನಂದಿಸು), ಆರಿಸು.

ನೋ (ನೋಯ್), ನೋವುಗೊಳ್ಳು.

—ತ ನೋಯುವಿಕೆ, ನೋವು.

ನೋಟ ದೃಶ್ಯ; ನೋಡುವಿಕೆ; ಗುರಿ.

—ಕ ನೋಡುವ, ಪ್ರೇಕ್ಷಕ.

—ಗಾರ ನೋಡುವವ, ಪ್ರೇಕ್ಷಕ; ಗುರಿಯಿಟ್ಟು ಹೊಡೆಯಬಲ್ಲವ, ಗುರಿಗಾರ.

ನೋಡು ಕಾಣು; ಪರಿಶೀಲಿಸು; ವಿಚಾರಿಸು; ಎಚ್ಚರ ವಹಿಸು.

—ಇಕೆ ಕಾಣುವಿಕೆ; ಎಚ್ಚರವಹಿಸುವಿಕೆ; ಕಾಪಾಡುವಿಕೆ, ಪಾಲನೆ.

—ಇಸು ಪರೀಕ್ಷಿಸು.

ನೋನ್ (ನೋನು), ವ್ರತವನ್ನು ಆಚರಿಸು.

—ಇಸು ವ್ರತಾಚರಣೆಮಾಡು.

ನೋಯ್ (ನೋಯು), ವ್ಯಥೆಗೊಳ್ಳು; ನೋವುಗೊಳ್ಳು.

—ಇಸು ನೋವು ಉಂಟುಮಾಡು; ಹಾನಿ ಮಾಡು; ಖೇದ ಉಂಟುಮಾಡು; ಪೀಡಿಸು.

ನೋರು ಹಡಗಿನ ಬಾಡಿಗೆ; ನೀರಿನ ಮೇಲೆ ಸಾಮಾನು ಸಾಗಿಸಿದುದರ ಮಜೂರಿ.

ನೋವು ವೇದನೆ; ವ್ಯಥೆ.

ನೋಹಿ (ನೋಂಪಿ), ವ್ರತ.

ನೋಳ್ (ನೋಡು), ಮುಂದುವರಿ.

ನೋಂಪಿ ವ್ರತ; ವ್ರತಾಚರಣೆ; ದೀಕ್ಷೆ; ನೋಹಿ.

ನೌ ನಾವೆ, ದೋಣಿ; ನವ.

ನೌಕರ (ನವುಕರ) ಅಧಿಕಾರಿ; ಸೇವಕ; ಆಳು; ತೊತ್ತು.

ನೌಕಾದಂಡ ತೊಳೆ, ದೋಣಿಯ ಹುಟ್ಟು; ಜಲ್ಲೆ, ಜಲ್ಲು.

ನೌಕೆ ನಾವೆ; ದೋಣಿ; ಹಡಗು.

ನೌತಾರ್ಯ ದೋಣಿ ಸಾಗಲು ಅನುಕೂಲವಾದ.

ನೌದಂಡ (ನೌಕಾದಂಡ).

ನ್ಯಕ್ಷ ಕೀಳು; ಹೀನ; ಪೂರ್ಣ.

ನ್ಯಗ್ರೋಧ ಆಲದಮರ, ಪಲಾಶ, ಮುತ್ತುಗ; ದಿಕ್ಕು; ವನ.

ನ್ಯಚ್ ತಗ್ಗು.

ನ್ಯಸನ ಎರಕ; ಇರಿಸುವಿಕೆ; ಕೊಡುವಿಕೆ; ತ್ಯಜಿಸುವಿಕೆ.

ನ್ಯಸ್ತ ಇಡಲ್ಪಟ್ಟ; ಬಿಡಲ್ಪಟ್ಟ.

ನ್ಯಂಕು ಒಂದು ವಿಧದ ಜಿಂಕೆ.

ನ್ಯಂಚಿತ ಕೆಳಗೆ ಹಾಕಿದ.

ನ್ಯಾದ ಆಹಾರ.

ನ್ಯಾಯ ಉಚಿತ; ಸಮಂಜಸ; ಯೋಗ್ಯ; ನೀತಿ; ಯುಕ್ತಿ; ಗೌತುಮನು ರಚಿಸಿದ ಒಂದು ಶಾಸ್ತ್ರ; ವಿವಾದ; ಜಗಳ; ದಾವೆ. ಸಾಮಾನ್ಯ ವಿಧಿ, ನಿಯಮ.

—ಅಧಿಪ (ಅಧೀಶ) ನ್ಯಾಯ ತೀರ್ಮಾನಿಸುವವ, ಜಡ್ಜಿ.

—ವಂತ ನೀತಿವಂತ, ರೀತಿ ಬಲ್ಲವ.

ನ್ಯಾಯವಿಧಾಯಕ ನ್ಯಾಯ ಹೇಳುವವ, ಕಾನೂನು, ಕಾಯಿದೆಗಳನ್ನು ನಿರ್ಮಾಣ ಮಾಡುವ.

ನ್ಯಾಯಿ ನ್ಯಾಯ ಬಿಡದುದು; ನೀತಿ ತಪ್ಪುದುದು.

ನ್ಯಾಸ ಇಟ್ಟ ದ್ರವ್ಯ; ಕೇಳಿದಾಗ ಕೊಡುವ ಶರ್ತದಂತೆ ಇರಿಸಿದ ಹಣ, ಇಡುಗಂಟು; ಮುದ್ರೆ; ಪಣಕಟ್ಟು; ಪ್ರಬಂಧ.

—ಕರಣ ಸ್ಥಾಪನೆ; ಇರಿಸುವಿಕೆ.

ನ್ಯೂನ ಊನ, ಕೊರತೆ; ನೀಚ; ಹೀನ, ಕೀಳ.

—ತೆ ಕೊರತೆ; ಕಡಮೆಯಾಗಿರುವುದು.

# ಪ

ಪಕಪಕ ತ್ವರೆಯಾಗಿ; ಮಿಂಚಿಮಿನುಗಿ.

ಪಕಳಿ ಹೂವಿನ ದಳ, ದಳ, ಎಸಳು.

ಪಕಾಲಿ ಎತ್ತಿನ ಬೆನ್ನಿನ ಮೇಲೆ ಹೊರಿಸುವ ತೊಗಲಿನ ನೀರಿನ ಚೀಲ.

ಪಕಾಸ (ದ್ಭ) ಪ್ರಕಾಶ (ಸಂ).

ಪಕಾಸು(ಪಕ್ಕಾಸು),ಮಾಡುಗಳಲ್ಲಿ ಇಳಿಸುವ ಮರದ ಜಂತೆ, ತೋಳು.

ಪಕ್ಕ (ದ್ಭ) ಪಕ್ಷ (ಸಂ), ರೆಕ್ಕೆ; ಕೆಲ, ಬದಿ, ಮಗ್ಗಲು, ಸಮೀಪ; ಹದಿನೈದು ದಿನ,ಕಾಲ.

—ಡಿ ಮಗ್ಗಲು, ಬದಿಯ ಭಾಗ.

ಪಕ್ಕಣ ಶಬರರ ತಾಣ; ಕೊಪ್ಪ, ಕೀಳು ಜನರ ಕೇರಿ.

ಪಕ್ಕನೆ (ಫಕ್ಕನೆ) ಒಮ್ಮೆಗೇ, ಕೂಡಲೆ; ತ್ವರೆಯಿಂದ.

ಪಕ್ಕರಕ್ಕೆ (ದ್ಭ) ಪಕ್ಷರಕ್ಷೆ (ಸಂ), ಹಕ್ಕರಿಕೆ, ಕುದುರೆಯ ಜೂಲು; ರಂಜೆ; ಆನೆಯ ಮೇಲಿನ ಜೂಲು; ಕುದುರೆ ತಡಿ.

ಪಕ್ಕರೆ ಜೂಲು.

ಪಕ್ಕಾ ಸವಿಯಾದ; ಹಣ್ಣಾದ; ಪೂರ್ಣವಾದ.

ಪಕ್ಕಾಲೆ ಒಂದು ಪಾತ್ರೆ, ಬಗರಿಗೆ; ಬತ್ತಿದ ನದಿಯಲ್ಲಿ ತೆಗೆವ ನೀರಿನ ಕುಳಿ, ವರ್ತಿ.

ಪಕ್ಕಿ (ದ್ಭ) ಪಕ್ಷಿ(ಸಂ), ಹಕ್ಕಿ; ರೀತಿ, ಬಗೆ.

ಪಕ್ಕು ಗುರಿ; ಪಕ್ಷ, ಅನುಕೂಲ, ಆಶ್ರಯ; ಹಕ್ಕು.

—ಆಗು ಪಾತ್ರವಾಗು, ತಕ್ಕುದಾಗು.

—ಕುಡು ಬೆಂಬಲಿಸು, ಸಹಾಯವಾಗು.

ಪಕ್ಕೆ (ಪಳ್ಕೆ) ಹಕ್ಕೆ, ವಿಶ್ರಾಂತಿಸ್ಥಾನ; ಅನುಕೂಲವಾಗಿ ಒರಗುವ ಬಗೆ; ಮಲಗುವ ಸ್ಥಾನ; ಹತ್ತಿರ, ಸಮೀಪ; ಹೊದ್ದಿಕೆ; ಬದಿ, ಮಗ್ಗಲು.

—ಆಗು ಅನುಕೂಲಿಸು.

ಪಕ್ವ ಬೆಂದ; ಪೂರ್ಣಾವಸ್ಥೆಗೆ ಬಂದ, ಮಾಗಿದ; ಹಣ್ಣಾದ,ವಿನಾಶಕ್ಕೆತೊಡಗಿದ.

ಪಕ್ವಾನ್ನ ಬೆಂದ ಅನ್ನ; ಸವಿ ತಿನಿಸುಗಳು; ಮೃಷ್ಟಾನ್ನ.

ಪಕ್ಷ ಹದಿನೈದು ದಿನಗಳ ಕಾಲ; ಸಮಯ; ಹಕ್ಕಿಯ ರೆಕ್ಕೆ; ಸಮೀಪ; ಮನೆ; ಸಹಾಯ; ಪವಿತ್ರ; ಸಮೂಹ; ಕಕ್ಷಿ, ಒಂದು ಮತ.

—ಕ ಪಕ್ಕದಲ್ಲಿರುವ ಬಾಗಿಲು.

—ಜ ಚಂದ್ರ.

—ತಿ ರೆಕ್ಕೆಯ ಬುಡ; ಒಂದು ತಿಥಿ.

ಪಕ್ಷಪಾತ ಅಯೋಗ್ಯ ಬಲ ಅಥವಾ ಸಹಾಯ; ಭೇದಬುದ್ಧಿಯಿಂದ ತೋರುವ ಬಲ; ರೆಕ್ಕೆ ಬಡಿಯುವುದು.

ಪಕ್ಷಭೇದ ಎರಡು ಪಂಗಡಗಳಲ್ಲಿ ವ್ಯತ್ಯಾಸ; ಭೇದಬುದ್ಧಿ; ಒಂದೇ ಕಡೆಗೆ ತೋರಿಸುವ ವಿಶ್ವಾಸ; ಅವರಿಗೊಂದು ಇವರಿಗೊಂದು ಮಾಡುವುದು.

ಪಕ್ಷಾಂತ ಹದಿನೈದು ದಿನಗಳ ಕೊನೆ; ಹುಣ್ಣಿಮೆ; ಅಮಾವಾಸ್ಯೆ.

ಪಕ್ಷಾಂತರ ಬೇರೊಂದು ಪಕ್ಷ.
ಪಕ್ಷಿ ರೆಕ್ಕೆಯುಳ್ಳದು, ಹಕ್ಕಿ; ಭಾಗಿ.
—ಣೀ ಪಕ್ಷಿಗಳ ಗುಂಪು.
—ರಾಜ ಹಕ್ಕಿಗಳಲ್ಲಿ ಶ್ರೇಷ್ಠ, ಗರುಡ.
—ಲ ಸಹಾಯವುಳ್ಳವ; ಸಹಾಯಮಾಡುವವ; ವಾತ್ಸಾಯನನೆಂಬ ಮುನಿ.
ಪಕ್ಷಿವಾಹನ ಗರುಡನನ್ನೇರುವವ, ವಿಷ್ಣು.
ಪಕ್ಷ್ಮ ರೆಪ್ಪೆಕೂದಲು; ಕಮಲದ ಕೇಸರ; ತುಪ್ಪುಳ, ಗರಿ; ರೆಪ್ಪೆ.
ಪಗಡಿ ರುಮಾಲು, ಪಾಗು.
ಪಗಡೆ ಜೂಜಿನ ಕಾಯಿ, ಪಗಡೆ ಆಟದಲ್ಲಿ ಎಸೆಯುವ ದಾಳ; ಒಂದು ಮರ.
ಪಗದಸ್ತು ಕ್ರಮ; ರೀತಿ; ವಿಚಾರಶೀಲತೆ.
ಪಗರಣ (ದ್ಭ) ಪ್ರಕರಣ (ಸಂ), ಹಗರಣ, ನಿಂದೆ; ನಾಟಕ ಭೇದ; ತೊಂದರೆ.
ಪಗರಿ ಕಲ್ಲೆಸೆವ ಬಿಲ್ಲು, ಒಂದು ಬಗೆ ಕವಣೆ.
ಪಗಲ್ (ಪಗಲು), ಹಗಲು, ದಿನ.
ಪಗಂಡಿರಿ ಚೆನ್ನಾಗಿ ತೋರುವಂತೆ ವ್ಯಾಪಿಸು.
ಪಗಂಡು ಚೆನ್ನಾಗಿ ತೋರುವಿಕೆ.
—ಕೊಳ್ ದಟ್ಟವಾಗಿ ಹೆಣೆದುಕೊಳ್ಳು.
ಪಗಾರ ಸಂಬಳ.
ಪಗಿಲ್ ಅಂಟಕೊಳು, ಸೇರಿಕೊಳು; ವ್ಯಾಪಿಸು.
ಪಗೆ ಎದುರಾಳಿ, ಹಗೆ, ಶತ್ರು; ಹಗೆತನ, ದ್ವೇಷ.
—ಕಾರ ಶತ್ರು, ವೈರಿ.
—ಪಾಡಿ ಶತ್ರು ಸೇನೆ.
ಪಚ್ ಮಾಡು; ಬೇಯಿಸು, ಸೃಷ್ಟಿಮಾಡು; ವಿಸ್ತಾರಮಾಡು.
ಪಚಕ್ಕನೆ ಮಿದುವಾದ ವಸ್ತುಗಳನ್ನು ತುಳಿವಾಗ ಇಲ್ಲವೆ ಕಿವುಚುವಾಗ ಆಗುವ ಸದ್ದು.
ಪಚನ ಅರಗಿಸುವಿಕೆ, ಜೀರ್ಣ; ಬೇಯಿಸುವಿಕೆ, ಅಡುವಿಕೆ; ಅಡುಗೆ ಪಾತ್ರೆ; ಬೆಂಕಿ.
ಪಚಾರ ಹಂಗಿಸುವಿಕೆ, ಕೊರಚಾಟ.
—ಇಸು ಹಂಗಿಸು, ನಿಂದಿಸು; ಹಿಂದೆ ಮಾಡಿದ ಅಪಕಾರವನ್ನು ಎಚ್ಚರಿಸಿ ಮಾತಾಡು, ಚುಚ್ಚಿ ಮಾತಾಡು.
ಪಚ್ಚಗಪ್ಪುರ ಪಚ್ಚಕರ್ಪೂರ.
ಪಚ್ಚಗಾರ ಶೃಂಗಾರ ಪುರುಷ; ಹಾಸ್ಯಗಾರ; ಉಡುಪಿನ ಯಜಮಾನ.
ಪಚ್ಚಡ (ಹಚ್ಚಡ), ಪ್ರಚ್ಛದ (ಸಂ), ದುಪ್ಪಟಿ.
ಪಚ್ಚಡಿ ಹಸಿ ತರಕಾರಿಗಳನ್ನು ಕೊಚ್ಚಿ ಮಾಡುವ ತಿಂಡಿ, ಪಚಡಿ.
ಪಚ್ಚಪಸಿ ಬಹಳ ಹಸಿ, ಪಸಿಪಸಿ.
ಪಚ್ಚಬಗೆ ಬಿರಿದ ಮನಸ್ಸು, ಒಡೆದ ಮನಸ್ಸು.
ಪಚ್ಚವಡಿಸು ಹೊದೆಸು, ಹೊಚ್ಚು.
ಪಚ್ಚಳ (ದ್ಭ) ಪ್ರಚಲ (ಸಂ), ಪಕ್ಕ, ಬದಿ, ಮಗ್ಗಲು.
ಪಚ್ಚಾಯ್ಲ ಉಡುಪಿನ ಯಜಮಾನ.
ಪಚ್ಚಿ ಭಾಗ, ಅಂಶ; ಚೂರು; ರತ್ನಗಳನ್ನು ಕಟ್ಟುವ ಬಗೆ, ಹಚ್ಚೆ.
ಪಚ್ಚಿಮ (ದ್ಭ) ಪಶ್ಚಿಮ (ಸಂ); ಪಡು, ಪಡವಣ.
ಪಚ್ಚೀಸು ಇಪ್ಪತ್ತೈದು.
ಪಚ್ಚು ಹಂಚು; ಗೋಪ್ಯ; ಪಿಸುನುಡಿ.
—ಕೊಳು ಹಂಚಿಕೊಳ್ಳು.
—ಗೆ ಹೆಚ್ಚುವಿಕೆ; ಗೋಪ್ಯ; ಏಕಾಕಿತನ.
ಪಚ್ಚೆ ಹಸುರು; ಹಸುರುಬಣ್ಣ; ಹಚ್ಚೆ; ಹಾಸ್ಯ; ಒಂದು ರತ್ನ; ಎಳ ಚಿಗುರು; ಅಲಂಕಾರ; ಎಳಮೆ; ಬಂಜೆ.
—ಗಾರ ಹಚ್ಚೆ (ಹಚ್ಚಿ) ಕೊಚ್ಚುವವ.
ಪಚ್ಚೆಲೆ ಹಸುರಾದ ಎಲೆ.
ಪಚ್ಚೆವರಲ್ ಹಸುರು ಬಣ್ಣದ ರತ್ನ, ಮರಕತ.
ಪಚ್ಚೆವೆಣ್ ಬಂಜೆ ಹೆಂಗುಸು, ಬಂಜೆ; ಬಿನ್ನಾಣಗಿತ್ತಿ, ವಿಲಾಸವತಿ.
ಪಜ್ ಸುತ್ತುಗಟ್ಟು.
ಪಜಕ ಅರಗಿನ ಮರ.
ಪಜ್ಜ ಭಗವಂತನ ಪಾದಗಳಿಂದ ಹುಟ್ಟಿದವ, ಶೂದ್ರ.

ಪಜ್ಜುಳ (ದ್ಭ) ಪ್ರಜ್ವಲ (ಸಂ); ಉರಿ, ಬೆಂಕಿ, ದಳ್ಳುರಿ.
ಪಜ್ಜೆ ಹಜ್ಜೆ, ಹೆಜ್ಜೆ, ಅಡಿ; ಪದ್ಧತಿ (ಸಂ).
—ತೋರು ಕಾಣಿಸಿಕೊಳ್ಳು; ಕುರುಹು ತೋರು.
— ಪಿಡಿ ಹಜ್ಜೆಗುರುತು ಹಿಡಿ; ಅನುಸರಿಸು.
ಪರ್ಜನ್ಯ ವೈದಿಕ ಯುಗದ ದೇವತೆ, ವಾಯು. ಮಳೆಗಳಿಗೆ ಈತನು ಒಡೆಯನೆಂದು ಪ್ರಾಚೀನರು ಆರಾಧಿಸುತಿದ್ದರು.
ಪಟ ವಸ್ತ್ರ, ಗಾಳಿಪಟ; ಚಿತ್ರ; ಚಿತ್ರದ ತಡಿಕೆ; ಬಾವುಟ; ಹಾಯಿ; ಗಿಡಗಳ ಸುತ್ತಲಿರುವ ನೀರಿನ ಪಾತಿ.
ಪಟಿಕ (ದ್ಭ) ಸ್ಫಟಿಕ (ಸಂ), ಪಟಿಕಾರ.
ಪಟಕಾರ ಚಿಮುಟ; ನೇಕಾರ; ಚಿತ್ರಕಾರ.
ಪಟಕಿ ಕಾಲೆರಾ, ವಾಂತಿಭೇದಿ, ಸನ್ನಿ.
ಪಟಕುಟಿ ಡೇರೆ, ಗುಡಾರ.
ಪಟಚ್ಚರ ಚೋರದೇಶ; ಕಳ್ಳರ ದೇಶ; ಕಳ್ಳ; ಚಿಂದಿ.
ಪಟಚ್ಛದ ಬಟ್ಟೆಯ ಮುಸುಕು.
ಪಟಲ ಸಮೂಹ, ರಾಶಿ; ಹೊದಿಕೆ, ಮುಚ್ಚಿಗೆ, ಪರೆ.
ಪಟವಾಸ ವಸ್ತ್ರವನ್ನು ಪರಿಮಳಿಸುವ ದ್ರವ್ಯ.
ಪಟವೆ ಪಟ್ಟೆ.
ಪಟಹ (ಸಂ) ಪಳಹ (ದ್ಭ), ನಗಾರಿ, ದೋಲು, ರಣವಾದ್ಯ.
ಪಟಾಕಿ ಪಟಾಕ್ಷಿ; ಉರಿಸಿದೊಡನೆ ಪಟಪಟ ಸದ್ದಾಗುವ ಮದ್ದು, ಪಟಾಸು.
ಪಟಾಯಿತ ಪಟ್ಟೆಹುಲಿ, ಹೆಬ್ಬುಲಿ.
ಪಟಾಲಂ (ಪಟ್ಲಾಂ) ದಳ, ಸೇನೆಯ ಪಡೆ.
ಪಟಾಸು ಬಡಿದರೆ ಸದ್ದಾಗುವ ಮದ್ದು; ಗರ್ನಾಲು; ನೆಲಗುಮ್ಮ, ಹಾರಿಮದ್ದು.
ಪಟಿ (ಪಡಿ) ಗೋಣಿಪಟ್ಟೆ, ಒರಟು ಬಟ್ಟೆ, ತಟ್ಟು.
ಪಟಿಂಗ ನೀಚ; ಹಡಕ, ಕಾಮುಕ; ಲಫಂಗ.
ಪಟೀರ ಗಂಧ; ಗದ್ದೆ; ಮೋಡ; ಖದಿರ, ಕಾಚು; ಹೊಟ್ಟೆ; ಮನ್ಮಥ.
ಪಟು ಸಮರ್ಥ; ಕುಶಲ, ದೃಢಕಾಯ; ಹರಿತ; ಕ್ರೂರ.
— ಉಕ್ತಿ ಜಾಣ್ಮೆಯ ಮಾತು.
— ತರ ಸಮರ್ಥವಾದ; ತೀಕ್ಷ್ಣವಾದ.
— ತೆ ನಿಪುಣತೆ, ಚಾತುರ್ಯ; ಬುದ್ಧಿವಂತಿಕೆ.
ಪಟೇಲ ಗ್ರಾಮ ಉದ್ಯೋಗಿ, ಗೌಡ, ಪಾಟೀಲ.
ಪಟೋಲ ಪಡವಲ, ಒಂದು ತರಕಾರಿ.
ಪಟ್ಟ ನಗರ; ನಾಲ್ಕು ದಾರಿ ಸೇರುವ ಸ್ಥಾನ; ಹಲಗೆ; ಶಾಸನ ಬರೆವ ಹಾಳೆ; ಸಿಂಹಾಸನ; ರೇಶ್ಮೆ; ಪಾಲು; ಮುಡಿ; ಚೆನ್ನಾಗಿ; ಮಲಗಿದ.
ಪಟ್ಟಣ (ಪತ್ತನ), ಸಣ್ಣ ನಗರ, ಪುರ.
ಪಟ್ಟದರಸು ಪಟ್ಟವೇರಿದ ರಾಜ.
ಪಟ್ಟಮಹಿಷಿ ಪಟ್ಟಾಭಿಷಿಕ್ತಳಾದ ರಾಣಿ.
ಪಟ್ಟವಣೆ ಸಿಂಹಾಸನ.
ಪಟ್ಟವರ್ಧನ ಬಹಳ ಓದಿ ಅನುಭವ ಇಲ್ಲದ ಬ್ರಾಹ್ಮಣ; ಪಟ್ಟದ ಆನೆ.
ಪಟ್ಟಶರ (ಪಟ್ಟಸರ), ದೊಡ್ಡ ಕೊಳ, ಹೆಗ್ಗೆರೆ.
ಪಟ್ಟಶಾಲೆ ಪಡಸಾಲೆ, ಚಾವಡಿ.
ಪಟ್ಟಸ (ದ್ಭ) ಪಟ್ಟಿಶ (ಸಂ), ಒಂದು ಬಗೆಯ ಯುದ್ಧದ ಕೊಡಲಿ; ಚಪ್ಪಕೊಡಲಿ; ಜಟ್ಟಿಕಾಳಗದ ಒಂದು ರೀತಿ.
ಪಟ್ಟಳಿಗೆ ಪಟ್ಟೆ ಸೀರೆ; ಹೂಜಿ, ರಂಜಣಿಗೆ.
ಪಟ್ಟಳೆ ನಡುಪಟ್ಟಿ, ನಡುಕಟ್ಟು.
ಪಟ್ಟಾಭಿಷೇಕ ಸಿಂಹಾಸನದ ಮೇಲೆ ಕೂಡಿಸಿ ಪವಿತ್ರ ಜಲವನ್ನು ಮೇಲೆ ಸುರಿಯುವುದು, ಅರಸು ಗದ್ದುಗೆಯನ್ನೇರುವಾಗ ನಡೆಯುವ ಒಂದು ವಿಧಿ.
ಪಟ್ಟಾವಳಿ (ಪಟಾವಳಿ), ರೇಶ್ಮೆಯ ಬಟ್ಟೆಗಳು.
ಪಟ್ಟಾಂಗ ಹಾಳು ಹರಟೆ, ಮಾತುಕತೆ.
ಪಟ್ಟಿ ಹಟ್ಟಿ; ಮನೆ; ಹಳ್ಳಿ; ಬರೆ, ರೇಖೆ; ದಟ್ಟಿ;

ಕಂಬಿ; ನೀಳಲಾಡಿ; ನೂಲು; ವಂತಿಗೆಪಟ್ಟಿ; ಪಗಾರ, ಸಂಬಳ; ಕಿರಿಪತ್ರ; ಕೋಷ್ಟಕ.

**ಪಟ್ಟಿಕೆ** ಹೆಸರಿನ ಬಿಲ್ಲೆ; ಶಾಸನ; ಬಟ್ಟೆ.

**ಪಟ್ಟು** ಮಲಗಿ; ಹಿಡಿದ; ಸ್ಥಾನ; ಮಡಿ, ಪಾಲು; ಹಿಡಿತ; ಹಟ; ನಿರ್ಧಾರ; ಲೋಪ.

**ಪಟ್ಟೆ** ರೇಶ್ಮೆ; ಭೂಸ್ವಾಮಿತ್ವದ ಬಗ್ಗೆ ಸರ ಕಾರವು ಕೊಡುವ ಪತ್ರ, ಕುಡ್ತಲೆ; ಪಡದೆ; ಬರೆ, ಗೀರು, ನಾಮ; ತೊಗಟೆ.

—**ಗಾರ** ರೇಶ್ಮೆಮಾಡುವವ.

**ಪಟ್ಟೆಹುಲಿ** ಹುಲಿ, ಬರೆಹುಲಿ.

**ಪಠ್** ಓದು.

—**ಇಸು** ಓದು; ಉರುಹಾಕು; ವಿವರಿಸು.

**ಪಠ** (ಪಟ), ನಕ್ಷೆ, ಚಿತ್ರ; ಗಾಳಿಪಟ.

**ಪಠಣ** (ಪಠನ) ಓದುವಿಕೆ, ಓದು; ಉರು ಹಾಕು, ಕಂಠಪಾಠ ಮಾಡು.

**ಪಠ್ಯ** ಓದಬಹುದಾದ; ಅಭ್ಯಾಸಕ್ಕೆ ತಕ್ಕುದು.

**ಪಡ್** ತಿಳಿ; ಹೋಗು; ಹೊಂದು.

**ಪಡಕೆ** ಹಾಸಿಗೆ.

**ಪಡದೆ** (ಫರದೆ), ತೆರೆ; ಬುರುಕೆ, ಜವನಿಕೆ.

**ಪಡಪು** ದೊಡ್ಡಸ್ತಿಕೆ; ಹೆಮ್ಮೆ; ಸಿದ್ಧತೆ; ಪಡೆ ದುದು; ಲಾಭ; ಪಡುಪು, ಹಾದರ.

**ಪಡಪೋಸಿ** ಅಜಾಗ್ರತೆ;ಬಿಟ್ಟೀ ಕೆಲಸ;ಹಾಳು.

**ಪಡಲ್** ಬೀಳುವುದು, ಚೆದರು;ಮಲಗುವುದು.

—**ಇಡು** ಚೆದರಿಹೋಗು, ತೊಂದರೆಗೊ ಳಿಸು; ಕಲ್ಲಾಬಿಲ್ಲಿಯಾಗು.

—**ಪಡು** ಪರಿಹರಿಸು, ಚೆದರಿಹೋಗು.

**ಪಡವಲು** ಪಟೋಲ, ಒಂದು ತರಕಾರಿ; ಪಡು ವಣದಿಕ್ಕು.

**ಪಡಸಾಲೆ** ಹೊರ ಚಾವಡಿ, ದೊಡ್ಡ ಚಾವಡಿ; ಅಂಬಲ.

**ಪಡಾವು** ಮಚ್ಚೇ, ಹಡಗು; ಮಂಡಿ; ಲಾಭ.

**ಪಡಿ** (ದ್ಭ) ಪ್ರತಿ (ಸಂ), ಸಮಾನ; ರೀತಿ, ಬಗೆ; ಒಂದು ಅಳತೆ; ರತ್ನದ ಒಂದು ತೂಕ; ಮಜೂರಿ, ಅಕ್ಕಿರೂಪದಿಂದ ಕೊಡುವ ಕೂಲಿ; ಸವಾರರು ಕಾಲಿಗೆ ಸಿಕ್ಕಿಸುವ ರಿಕಾಬು; ಅಗುಳಿ; ಬಾಗಿಲು; ಸೇರು.

—**ಇಡು** (ಪಡಿಕಟ್ಟು), ಹೋಲಿಸು.

**ಪಡಿಗ** ಬಟ್ಟಲು; ಪೀಕದಾನಿ, ಉಗುಳುಬುಡ್ಡಿ.

**ಪಡಿತಳ** ಸೇರಿಕೆ; ಸಮುಸ್ಥಳ; ಇದಿರು; ಒಟ್ಟು.

**ಪಡಿನೆಳಲು** ಪ್ರತಿನೆಳಲು, ಪ್ರತಿಬಿಂಬ.

**ಪಡಿಬಲ** (ದ್ಭ) ಪ್ರತಿಬಲ (ಸಂ), ಶತ್ರುಸೇನೆ; ಬೇರೊಂದು ಸೇನೆ, ಸಹಾಯಕ ಸೈನ್ಯ.

**ಪಡಿಬಲಿಸು** ಅಡ್ಡಗಟ್ಟು, ತರುಬು.

**ಪಡಿಮೊಗ** (ದ್ಭ) ಪ್ರತಿಮುಖ (ಸಂ), ಇದಿರು ಮುಖ.

**ಪಡಿಯಚ್ಚು** ಮುದ್ರಣದಲ್ಲಿ ಬಳಸುವ ಚಿತ್ರದ ಅಚ್ಚು; ಯಥಾಪ್ರತಿ.

**ಪಡಿಯಟ್ಟಣೆ** ಹೊರ ಸುತ್ತಿನ ಕಿರಿ ಪಾಗಾರ.

**ಪಡಿಯರ** (ದ್ಭ) ಪ್ರತೀಹಾರ (ಸಂ) ಬಾಗಿಲು ಕಾಯುವವ, ಪ್ರಹರಿ.

**ಪಡಿವರಿಜು** ಪ್ರತಿವೇಷ.

**ಪಡಿವಳ** (ಪಡಿಯರ), ಪ್ರತೀಹಾರಿ, ಪಹರಿ.

**ಪಡಿವಾಘೆ** ಎರಡು ಕಡೆಯ ಲಗಾಮು; ಕಡಿ ವಾಣ.

**ಪಡಿಸಣ** (ದ್ಭ) ಪರೀಕ್ಷಣ (ಸಂ), ಪರೀಕ್ಷೆ.

**ಪಡಿಸಣಿ** ಅಡುಗೆಭಟ್ಟ, ಬಾಣಸಿಗ.

**ಪಡಿಹಾರ** ದ್ವಾರಪಾಲಕ; ಸೇವಕ.

**ಪಡು** ಬೀಳು; ಸಾಯು; ಅನುಭವಿಸು; ಮಲ ಗು; ಹಡು; ಗಳಿಸು; ಕಂತು, ಮುಳುಗು; ಪಶ್ಚಿಮ; ಪೊಟರೆ.

—**ಇಸು** ಅನುಭವಿಸುವಂತೆ ಮಾಡು.

—**ವಣ** ಪಶ್ಚಿಮದ.

**ಪಡುಶಿಲೆ** ಮಲಗುವ ಕಲ್ಲು.

**ಪಡೆ** ಹಡೆ; ಬಲ; ಸೈನ್ಯ, ಸೇನೆ; ಹೊಂದು; ಗಳಿಸು; ತಾಳು.

—**ವಳ** ಸೇನಾನಿ.

—ಯಿಲ ಸೈನಿಕ.
—ವಳ ಸೇನಾಧಿಪತಿ.
—ವು ಪಡೆದುದು, ಲಾಭ.
ಪಷ್ಟ ಮುಗಿತ, ಕೊನೆ; ನಿಕಾಲೆ; ಸಾವು.
ಪಷ್ಟಳಿ ಕಣಿಗಿಲೆ ಹೂ, ಕರವೀರ.
ಪಷ್ಟೆಯೌವನ; ಪ್ರಾಯಕ್ಕೆಬರುವಿಕೆ, ಬೆದಿಕೆ, ಬೆದೆ ಬರುವಿಕೆ.
ಪಣ್ ಹಣ್ಣು, ಫಲ; ಸಿದ್ಧಮಾಡು; ವ್ಯವಹಾರ ಮಾಡು; ಕ್ರಯ ವಿಕ್ರಯಮಾಡು; ನುತಿಸು.
—ಇಸು ತಯಾರಿಸುವಂತೆ ಮಾಡು, ಸಿದ್ಧಗೊಳಿಸು, ಸಿದ್ಧಪಡಿಸು.
ಪಣ ಹಣ (ಇದರಿಂದ ವ್ಯವಹಾರ ನಡೆಯುವುದು); ಧಾನ್ಯ, ಬೆಲೆ; ತಾಮ್ರ; ಬಂದುದು; ಜೂಜು; ಒತ್ತೆ; ನಿಯಮ; ಎಂಬತ್ತು ಕವಡೆ; ಕೋಮಲ.
ಪಣಕಾಂತೆ ಹಾದರಗಿತ್ತಿ, ಸೂಳೆ, ಮಿಂಡಿ.
ಪಣತ ಕಣಜ, ಹಲಗೆಗಳಿಂದ ಮಾಡಿದ ತಿರಿ; ತೊಲೆ, ತೂಕ; ಬೆಲೆ; ಗುಂಪು.
ಪಣತೆ (ದ್ಭ) ಪ್ರಣೀತ (ಸಂ), ಹಣತೆ, ದೀಪ ಉರಿಸುವ ಮಣ್ಣಿನ ಬಟ್ಟಲು.
ಪಣನ ಮಾಡುವುದು.
ಪಣವ (ದ್ಭ) ಪ್ರಣವ (ಸಂ), ಒಂದು ಬಗೆ ಡೋಲು.
ಪಣವಧು (ಪಣಕಾಂತೆ).
ಪಣಾಯು ವ್ಯವಹಾರ.
ಪಣಿ ಹಲಗೆ, ದೋಣಿ; ಬಸರೀಮರ; ಫಣಿ(ಸಂ)
ಪಣಿತ ಹೊಗಳಿದ.
ಪಣಿಧರ (ಪಣಿದರ), ಸರ್ಪ ಧರಿಸಿದವ, ಶಿವ.
ಪಣೆ ಹಣೆ, ನೊಸಲು; ಮರದ ದಿಂಡಿನ ಮೇಲು ಭಾಗ; ಕಲ್ಲನ್ನು ಕೊರೆವ ಗನಿ; ಬೆಟ್ಟದ ಬದಿ ಪ್ರಾಣಿಗಳ ನಿಲುಗಡೆ; ಹದ.
—ವಿರಿಸು ಹದಕೊಡು, ಕಾವು ಕೊಡು.
—ಕಣ್ ಹಣೆಯಲ್ಲಿರುವ ಕಣ್ಣು.
—ಕಾಯಿ ಹಣ್ಣು ಮತ್ತು ಕಾಯಿ.
ಪಣ್ಣಿಕ ಸರಿಗೊಳಿಸುವಿಕೆ; ತಿಲಕ.
ಪಣ್ಣು ತಯಾರಿಸು, ಸಿದ್ಧಪಡಿಸು; ಸಜ್ಜುಗೊಳಿಸು; ಹಣ್ಣು.
ಪಣ್ಯ ವಿಕ್ರಯಕ್ಕಿರುವ; ಮಾರುವ; ಗೌರವಯೋಗ್ಯ.
—ಜೀವಿ ವ್ಯಾಪಾರಿ, ಬಣಜಿಗ.
ಪಣ್ಯವೀಥಿ ಅಂಗಡಿಬೀದಿ.
ಪಣ್ಯಾಂಗನೆ (ಪಣ್ಯಜನ), ವೇಶ್ಯೆ, ಸೂಳೆ, ಬೆಲೆವೆಣ್ಣು.
ಪತ್ ಹೋಗು; ಹಾರು, ಬೀಳು.
ಪತಗ ರೆಕ್ಕೆಗಳಿಂದ ಹೋಗುವುದು, ಹಕ್ಕಿ.
ಪತತ್ರ ಬೀಳದಂತೆ ಕಾಪಾಡುವುದು, ರೆಕ್ಕೆ.
ಪತತ್ರಿ ರೆಕ್ಕೆ ಉಳ್ಳುದು; ಬಾಣ; ಹಕ್ಕಿ.
ಪತನ ಬೀಳುವುದು.
ಪತಂಗ ಪಕ್ಷಿ; ಚಿಟ್ಟೆಹುಳು, ಪಾತರಗಿತ್ತಿ; ಶಲಭ, ಮಿಡಿತೆ; ರಕ್ತಚಂದನ; ಹಕ್ಕಿ; ಬಾಣ; ಗಾಳಿಪಟ; ಸೂರ್ಯ.
ಪತಂಜಲಿ ಯೋಗಶಾಸ್ತ್ರಗಳನ್ನು ಬರೆದ ವಿದ್ವಾಂಸನೊಬ್ಬ. ಈತನು ಪಾಣಿನಿಯ ವ್ಯಾಕರಣಕ್ಕೂ ಹೆಸರಾದ ಭಾಷ್ಯವನ್ನು ಬರೆದನು.
ಪತಾಕ (ಪತಾಕೆ), ಬಾವುಟ, ಗುಡಿ, ಧ್ವಜ; ಸೌಭಾಗ್ಯ; ನಾಟಕದ ಉಪಕಥೆ.
ಪತಾಕಿ ಪತಾಕೆಯುಳ್ಳುದು, ಸೈನ್ಯ; ಛಂದಸ್ಸಿನ ಬಂಧ.
ಪತಿ ರಕ್ಷಿಸುವವ; ಸ್ವಾಮಿ, ಒಡೆಯ; ಗಂಡ; ಪ್ರತಿ, ಬದಲು.
—ತ್ವ ಯಜಮಾನಿಕೆ, ಒಡೆತನ; ದಾಂಪತ್ಯ.
ಪತಿಕರಣೆ ಮೆಚ್ಚಿಕೆ; ಸ್ವರೂಪ; ಸ್ವೀಕಾರ; ಸಹಾಯ.
ಪತಿಕರಿಸು ಮೆಚ್ಚು; ಒಲಿ; ದಯೆದೋರು.

ಪತಿತ ಬಿದ್ದ; ಧರ್ಮ ತಪ್ಪಿದ; ಸೋತ; ಚ್ಯುತಿಗೊಂಡ.
—ಪಾವನ ನೀಚರನ್ನು ಉದ್ಧರಿಸುವವ; ದೇವರು.
ಪತಿಪತ್ನಿ (ಪತಿವತ್ನಿ), ಸುಮಂಗಲೆ, ಮುತ್ತೈದೆ, ಅಯ್ದೆ; ಗಂಡಹೆಂಡತಿ.
ಪತಿಮೆ (ದ್ಭ) ಪ್ರತಿಮೆ (ಸಂ).
ಪತಿವ್ರತೆ ಗಂಡನ ಸೇವೆಯೇ ನಿಯಮವಾಗಿ ಉಳ್ಳವಳು, ಸತಿ, ಗರತಿ, ಸಾಧ್ವಿ.
ಪತಿಷ್ಣು ಹಾರುವ.
ಪತಿಂವರೆ ತನ್ನ ಪತಿಯನ್ನು ತಾನೇ ಆರಿಸುವ ನಾರಿ.
ಪತ್ತನ (ಪಟ್ಟಣ), ನಗರ, ಪುರ.
ಪತ್ತಲ ತೆಳ್ಳಗಿನ ಸೀರೆ; ತೆಳ್ಳಗಿನ ಅರಿವೆ.
ಪತ್ತಳೆ (ಪತ್ತಳಿಕೆ), ಪತ್ರಿಕಾ (ಸಂ), ಓಲೆ, ಕಾಗದ; ಎಂಜಲು; ಬತ್ತಲಿಕೆ.
ಪತ್ತಾರ ಅಕ್ಕಸಾಲಿಗ.
ಪತ್ತಾರಿ ಕಂದಾಯ ಎತ್ತುವ ನೌಕರ.
ಪತ್ತಾಸು ಮರ ಕೊರೆದು ಮಾಡಿದ ದೊಡ್ಡ ಪೆಟ್ಟಗೆ.
ಪತ್ತಿ ಕಾಲಾಳು, ಕಾಲಾಳುಗಳ ಸೇನೆ; ಒಂದು ರಥ, ಒಂದು ಆನೆ, ಮೂರು ಕುದುರೆ, ಐದು ಕಾಲಾಳುಗಳ ಗುಂಪು, ಹತ್ತಿ.
ಪತ್ತು ಹತ್ತು, ಅಂಟು; ಅಡರು, ಏರು; ಹತ್ತು ಎಂಬ ಸಂಖ್ಯೆ; ಹಿಡಿತ; ಕಡ, ಉದ್ದರಿ.
—ಇಗ ಪಾಲುಗಾರ; ಸೇರಿದವ.
—ಇಸು ಕೂಡಿಸು, ಸೇರಿಸು, ಅಂಟಿಸು.
—ಗೆ ಹಿಡಿತ, ಸೇರುವೆ, ಸಂಬಂಧ; ನಿಷ್ಠೆ, ಭಕ್ತಿ.
—ಬಿಡು ಸೇರುವೆತಪ್ಪು, ಸಂದುಕಳಚು.
ಪತ್ತುವಳಿ ಮೋಸ, ದ್ರವ್ಯವನ್ನು ವಂಚಿಸುವಿಕೆ.
ಪತ್ತೆ ಕುರುಹು, ಚಹರೆ; ಗೊತ್ತು; ಶೋಧೆ.
—ದಾರ ಗೊತ್ತು ಹಚ್ಚುವವ, ಶೋಧಕ.
ಪತ್ತೇಮಾರಿ ಹಾಯಿಹಡಗು, ಮುಖ್ಯವಾಗಿ ಒಂದೇ ಹಾಯಿಯುಳ್ಳ ಹಡಗು.
ಪತ್ನಿ ಕ್ರಮದಂತೆ ಮದುವೆಯಾದವಳು, ಹೆಂಡತಿ.
ಪತ್ರ ವಾಹನ; ಎಲೆ; ರೆಕ್ಕೆ; ಗರಿ; ಕಾಗದ, ಓಲೆ; ಖಡ್ಗ, ಕತ್ತಿ.
ಪತ್ರನಾಡಿಕೆ ಎಲೆಯ ನರ.
ಪತ್ರಪುಟಿಕೆ ಎಲೆಗಳಿಂದ ಮಾಡಿದ ದೊನ್ನೆ.
ಪತ್ರಭಂಗ ಸ್ತನ ಮೊದಲಾದುವುಗಳ ಮೇಲೆ ಬರೆಯುವ ಚಿತ್ರ, ಪತ್ರವಲ್ಲಿ.
ಪತ್ರರಥ ರೆಕ್ಕೆಯೇ ರಥವಾಗಿ ಉಳ್ಳದು, ಹಕ್ಕಿ.
ಪತ್ರವಲ್ಲಿ ಶೃಂಗರಿಸುವ ಒಂದು ರೀತಿ, ತೋಳು ಮೊಲೆಗಳ ಮೇಲೆ ಹಿಂದಿನ ಕಾಲದ ಸ್ತ್ರೀಯರು ಬರೆಯುತ್ತಿದ್ದ ವರ್ಣಿಕೆ.
ಪತ್ರಾವಳಿ ಎಲೆಗಳ ಸಮೂಹ; ಎಲೆಗಳನ್ನು ಸೆಟ್ಟು ಮಾಡಿದ ಊಟದ ಎಲೆ.
ಪತ್ರಾಶ್ರಯ ಕಿವಿಯ ಹಾಳೆ.
ಪತ್ರಾಂಗ ಪತಂಗ; ಕಾಂಡಲು ಗಿಡ, ಸಪ್ಪಂಗ.
ಪತ್ರಾಂಗುಲಿ ಉಗುರುಗಳ ಮೇಲೆ ಚಿತ್ರ ಬಿಡಿಸುವಿಕೆ; ಬಾಣ; ಹಕ್ಕಿ; ತಾಳೆಮರ; ಕಂಠ; ಪರ್ವತ; ಗರುಡ.
ಪತ್ರಿ (ಪತ್ರೆ), ಜಾಯಿಕಾಯ ಮೇಲೆ ಅಂಟರುವ ನರಗಳು.
ಪತ್ರಿಕ ಓಲೆಗಳನ್ನು ಮಾಡುವವ.
ಪತ್ರಿಕೆ ಕಾಗದ ಪತ್ರ; ವರ್ತಮಾನ ಪತ್ರ; ಓಲೆ, ಬರೆದ ಓಲೆ.
ಪಥ ದಾರಿ, ಹಾದಿ.
—ವರ್ತಿ ಹಾದಿಹೋಕ, ದಾರಿಗ.
ಪಥಕಲ್ಪನೆ ಐಂದ್ರಜಾಲ, ಜಾದೂ ಆಟ.
ಪಥಿ ಹಾದಿ, ದಾರಿ.
—ಕ ದಾರಿಗ.
ಪಥ್ಯ ರೋಗಿಗೆ ಹಿತವಾದವಸ್ತು; ಕಾಯಿಲೆ

ಯಲ್ಲಿನ ಆಹಾರ ಉಪಚಾರ; ಹಿತ; ಅಣಿಲೆ ಕಾಯಿ ಮರ.

—ಕರ ಹಿತಕರ, ಆರೋಗ್ಯಕರ.

ಪದ್ ಹೋಗುವಿಕೆ; ಕಾಲು, ಪಾದ.

ಪದ ಚರಣ, ಪಾದ, ಕಾಲು; ಸಮಯ; ಹದ, ತಕ್ಕುದು; ಹಾಡು; ದಾರಿ; ಎರಡು ಸಂಖ್ಯೆ; ಮನೆ; ಹಜ್ಜೆ ಗುರುತು; ಶಬ್ದ, ಮಾತು; ಆಶ್ರಯ; ಪದವಿ, ಅಧಿಕಾರ.

—ಗ ಕಾಲುಗಳಿಂದ ನಡೆದುಹೋಗುವುದು, ಕಾಲಾಳು.

ಪದಕ ಎದೆಯ ಮೇಲೆ ಜೋಲುವ ಆಭರಣ, ಪುತ್ಥಳಿ; ಗೌರವಕ್ಕಾಗಿ ಕೊಡುವ ಬಿಲ್ಲೆ.

ಪದಕಮಲ ತಾವರೆಯಂತಹ ಕಾಲು.

ಪದಗತಿ ಕಾಲ್ನಡಿಗೆ; ನಡಿಗೆಯ ಬಗೆ, ಓರಣ; ಹಜ್ಜೆಮೆಟ್ಟು.

ಪದಘಾತ ಕಾಲಿನ ತುಳಿತ.

ಪದನ ರೀತಿ.

ಪದಪಾಠ ವೇದವನ್ನು ಪದಪದವಾಗಿ ಬಿಡಿಸಿ ಹೇಳುವುದು.

ಪದಪಾತ ಎಡರುವಿಕೆ; ತುಳಿತ.

ಪದಪು ಸಂಭ್ರಮ, ಪ್ರೀತಿ; ಸೌರಭ; ಸಂತೋಷ; ಸೊಗಸು; ಆತುರ.

—ಗಾತಿ ಸೊಗಸುಗಾರ್ತಿ, ವಿಲಾಸವತಿ, ವಯ್ಯಾರಿ; ಕಾಮ ಪ್ರೇರಿಸುವವಳು.

ಪದಮುಸ್ತ್ರಕ ಗಬ್ಬಿಲ, ಬಾವಲಿ, ತೊಗಲು ಬಾವಲಿ.

ಪದಯುಗ ಎರಡು ಪಾದಗಳು.

ಪದರು ತರ, ಸಂಸ್ತರ; ಮಡಿತೆ; ಹಾಳೆ; ಪರೆ; ತೊಡೆ; ತೊದಲು,ಆತುರದಲ್ಲಿಬಡಬಡಿಸು.

ಪದವಿ ದಾರಿ, ರಸ್ತೆ; ತರಗತಿ, ದರ್ಜೆ; ಉತ್ತಮ ಸ್ಥಿತಿ; ಹುದ್ದೆ, ಅಧಿಕಾರ.

ಪದವಿನ್ಯಾಸ ಮೆಟ್ಟುವಿಕೆ; ಶಬ್ದಗಳ ಸಮನಾದ ಜೋಡಣೆ; ನೃತ್ಯದಲ್ಲಿ ಕುಣಿತದಗತಿ.

ಪದಹತಿ ಕಾಲಿನ ಪೆಟ್ಟು, ತುಳಿತ, ಒದೆ.

ಪದಂಪು(ಪದಪು), ಸೊಗಸು, ಮನೋಹರತೆ.

ಪದಾಜಿ ಕಾಲಿಂದ ನಡೆದು ಹೋಗುವುದು.

ಪದಾತಿ ನಡೆದುಹೋಗುವ ಸೈನಿಕ,ಕಾಲಾಳು.

ಪದಾಬ್ಜ ಪಾದಕಮಲ.

ಪದಾರ್ಥ ಪದದಿಂದ ಗೊತ್ತಾದ ಅರ್ಥ; ವಸ್ತು; ಓಗರ.

ಪದಾಂತರ ಹಜ್ಜೆ ಬಿಟ್ಟು ಹಜ್ಜೆ; ಮಾತು ಬಿಟ್ಟು ಮಾತು.

ಪದಿ (ಪದಿನ್), ಹತ್ತು.

ಪದಿಮೊಗ ಹತ್ತು ಮುಖ, ದಶಕಂಠ.

ಪದಿರ್ (ಹದಿರ್), ಎರಡರ್ಥದ ಮಾತು; ಶ್ಲೇಷೆ.

ಪದಿಂಬರು ಹತ್ತು ಮಂದಿ.

ಪದುಮ (ದ್ಭ) ಪದ್ಮ(ಸಂ), ಕಮಲ.

ಪದುಳ(ಹದುಳ) ಕ್ಷೇಮ, ಸುಖ; ಸಂತೋಷ; ಸಮಾಧಾನ; ನೆಮ್ಮದಿ.

—ಇಗ ಸಂತೋಷ ಉಂಟುಮಾಡುವವ.

—ಇಸು ಸಮಾಧಾನಗೊಳಿಸು, ಸಂತೋಷಗೊಳಿಸು.

ಪದೆ ಆಶಿಪಡು; ಪ್ರಯತ್ನಿಸು; ಪ್ರೀತಿಸು; ಅಪೇಕ್ಷಿಸು; ಆದಿರು; ಸ್ಪಂದನಹೊಂದು; ಸಂತೋಷದಿಂದ ಕೊಳ್ಳು; ಸರದಿ, ಬಾರಿ.

—ಇಸು ಆಶಿಸುವಂತೆ ಮಾಡು.

—ಪು ಪ್ರೀತಿ, ಸಂತೋಷ (ಪದಪು).

ಪದೇಪದೇ ಹಜ್ಜೆಹಜ್ಜೆ, ಅಡಿಗಡಿಗೆ, ಆಗಾಗ.

ಪದ್ದು (ಪರ್ದು), ಹದ್ದು, ಗಿಡುಗ; ಗರುಡ; ಗಡಿ, ಮೇರೆ; ಸೀಮೆ; ಅಂಚು.

ಪದ್ಧತಿ ಕಟ್ಟಲೆ, ನಡೆದು ಬಂದುದು; ಕಮಲದ ಆಕಾರದ ಸೇನಾವ್ಯೂಹ; ನಿಧಿ ಭೇದ; ಒಂದು ಸರ್ಪ; ರೀತಿ; ರೂಢಿ; ಕ್ರಮ.

ಪದ್ಮ ಕಮಲ, ತಾವರೆ; ನೀರು; ಸರಸ್ಸು; ಚಂದ್ರ;ವಕ್ರ;ಒಂದು ಹಾವು;ಒಂದು ಆಸನ.

— ಆಲಯ ತಾವರೆಯ ನಿಲಯ; ಸರಸ್ಸು
— ಗರ್ಭ ಬ್ರಹ್ಮ.
— ಜ ತಾವರೆಯಲ್ಲಿ ಹುಟ್ಟಿದವನ, ಬ್ರಹ್ಮ.
— ನಾಭ ಹೊಕ್ಕುಳಲ್ಲಿ ಪದ್ಮ ಉಳ್ಳವ, ವಿಷ್ಣು.
— ರಾಗ ತಾವರೆಯ ಬಣ್ಣ; ಕೆಂಪು ಬಣ್ಣ.

ಪದ್ಮಾ ಪದ್ಮವುಳ್ಳವಳು, ಲಕ್ಷ್ಮಿ.

ಪದ್ಮಾನನ ಚಂದ್ರಹಾಸನ ಮಗ; ತಾವರೆಯಂಥ ಮುಖ.

ಪದ್ಮಾಸನ ಯೋಗಕ್ಕೆ ಕುಳಿತುಕೊಳ್ಳುವ ಒಂದು ಬಗೆ.

ಪದ್ಮಿ ಆನೆ; ತಾವರೆಯುಳ್ಳವ; ಲಕ್ಷ್ಮಿಯುಳ್ಳವ, ವಿಷ್ಣು.

ಪದ್ಮಿನೀ ಕಮಲಗಳ ಗುಂಪು; ಸ್ತ್ರೀಯರಲ್ಲಿ ಉತ್ತಮವಾದ ಒಂದು ವರ್ಗ.

ಪದ್ಮೆ (ಪದ್ಮಾ), ಲಕ್ಷ್ಮಿ.

ಪದ್ಯ ಕವಿಯಿಂದ ರಚಿಸಲ್ಪಟ್ಟದು; ಚರಣಗಳುಳ್ಳದು; ಕ್ರಮವಾದ ಪದರಚನೆಯುಳ್ಳ ಕವಿತೆ; ಬರಹ; ಹಾಡು; ಶೂದ್ರ.

ಪದ್ದೆ ಹಾದಿ, ದಾರಿ.

ಪನ್ ಹೊಗಳು; ಹಸುರುತನ; ಹತ್ತು; ಹನಿ.

ಪನವು ಸಂಕೇತಸ್ಥಲ; ಗೋತ್ರಾದ ಠಾವು.

ಪನಸ ಹಲಸು (ದ್ಭ), ಹಲಸಿನ ಮರ, ಹಲಸಿನ ಹಣ್ಣು; ಒಂದು ಕಪಿಯ ಹೆಸರು.

ಪನಿ ಹನಿ; ಸಣ್ಣದಾಗಿ ಮಳೆ ಸುರಿ, ಉದುರು.
— ತ ಹನಿತ; ಮಳೆನೀರು ಜಿನುಗುವುದು; ಹೊಗಳಲ್ಪಟ್ಟ.

ಪನಿಯಾಣ ಒಂದು ಸವಿತಿಂಡಿ.

ಪನಿಯಾರ ದೇವರ ಉತ್ಸವಗಳಲ್ಲಿ ವಸಂತಕಾಲಗಳಲ್ಲಿ ಕೊಡುವ ತಿಂಡಿ, ಪ್ರಸಾದ.

ಪನೆ ಹಲ್ಲು, ಮೊನೆಹಲ್ಲು; ಹನೆ, ತಾಳೆಮರ.

ಪನ್ನ ಜಾರಿದ, ಬಿದ್ದ; ಬಟ್ಟೆಯ ಅಗಲ; ಹೆಮ್ಮೆ, ಬಿಂಕ.

ಪನ್ನಗ ಕಾಲಿಲ್ಲದೆ ಚಲಿಸುವುದು, ಹಾವು.

ಪನ್ನಗಾಶನ ಹಾವು ಆಹಾರವಾಗಿ ಉಳ್ಳದು, ಗರುಡ.

ಪನ್ನತಿಕೆ ಶೌರ್ಯ, ಪರಾಕ್ರಮ; ಗರ್ವ.

ಪನ್ನಂಗ ಪಲ್ಲಕ್ಕಿ; ಪಾವುಡ ಇಲ್ಲವೆ ಮೇಲುಗಟ್ಟು.

ಪನ್ನಾಡೆ ತಾಳೆ, ತೆಂಗಿನ ಮರಗಳ ಸೋಗೆಗಳ ಬುಡದಲ್ಲಿ ಆಗುವ ಸಿಬರು, ನಾರಿನ ಬಲೆ, ಚಾಪರಿಕೆ.

ಪನ್ನಿ ಕೊಬ್ಬುವಿಕೆ, ಜಂಬ, ಡಂಬ.

ಪನ್ನೀಚ್ಛಾರ್ಸಿರ ಹನ್ನೆರಡು ಸಾವಿರ.

ಪನ್ನೀರು ಪರಿಮಳಿಸುವ ನೀರು, ಗುಲಾಬಿ ನೀರು.

ಪನ್ನೆ ಕರ್ಪೂರ.

ಪನ್ನೇರಿಳೆ ಒಂದು ಜಾತಿಯ ಹಣ್ಣು ಕೊಡುವ ಮರ, ಬನ್ನೇರಳು, ದೊಡ್ಡ ನೇರಲು.

ಪಪ್ಪ ಬಿಂಕ, ಉದ್ಧತೆ; ಸೊಕ್ಕು, ಹೆಮ್ಮೆ.

ಪಪ್ಪರಿಕೆ ದೊರಗು, ಒರಟುತನ.

ಪಪ್ಪಳ ಹಪ್ಪಳ.

ಪಪ್ಪಾಯಿ ಪರಂಗಿಹಣ್ಣು, ಪಪಾಯಹಣ್ಣು.

ಪಪ್ಪು ಒಡೆದು ಗಳಿಸಿದ ತಿರುಳು, ಒಡೆದ ಕಾಳು.

ಪಪ್ಪುಕ ಬೇಟೆಯಲ್ಲಿ ಪೊದರುಗಳನ್ನು ಬಡಿಯುವುದು, ಹುಲಿ ಎಬ್ಬಿಸುವುದು.

ಪಮ್ ಪಚ್ಚೆ.

ಪಮಾಣ ಪ್ರಮಾಣ, ಅಳತೆ.

ಪಮಾಣಕೋಟಿ ಗಂಗೆಯ ಒಂದು ಮಡು.

ಪಯ್ (ಹತ್ತು), ಪದಿ.

ಪಯ ಪದ; ಪಯಸ್, ಕುಡಿಯಲು ಯೋಗ್ಯವಾದುದು ನೀರು; ಹಾಲು.

ಪಯಣ (ದ್ಭ) ಪ್ರಯಾಣ (ಸಂ), ಸಂಚಾರ.

ಪಯಪಾಡು ಕಾಲಿಡುವ ಒಂದು ರೀತಿ.

ಪಯಶ್ಚರ ಮೀನು.

ಪಯಸ್ ನೀರು

**ಪಯಸ್ವಿನೀ** ಹಾಲು ಕರೆವ ದನ, ಹಿಂಡುವ ಆಕಳು; ನೀರುಳ್ಳ ನದಿ; ಚಂದ್ರಗಿರಿ ನದಿ.
**ಪಯಿರ್** (ಪೈರು), ತೆನೆ ಕೊಡುವ ಬೆಳೆ.
**ಪಯೋಜ** ನೀರಲ್ಲಿ ಹುಟ್ಟಿದುದು, ಕಮಲ; ಮುಗಿಲು.
**ಪಯೋನಿಧಿ** ನೀರಿಗೆಆಶ್ರಯವಾದ್ದು,ಸಾಗರ.
**ಪಯೋರುಹ** ತಾವರೆ.
**ಪಯ್ಕ** (ಪಯಿಕ) ಪೈಕ, ಪೈಕಿ, ವಿಭಾಗ; ವರ್ಗ, ಭಾಗ, ಜಿಲ್ಲೆಯ ಒಂದು ಫಿರ್ಕಾ.
**ಪಯ್ಯ** ಹುಡುಗ, ಹೈದ.
**ಪಯ್ಯೆರ** ಜಾರಿಕೆ; ನಷ್ಟ; ಕ್ಷೀಣ.
—**ಆಗು** ಜಾರು; ತಪ್ಪು; ಅಡಗು.
—**ಇಸು** ಜಾರು; ಒಳಗೆ ಸೇರು, ಅಡಗು.
**ಪರ** ಬೇರೆ; ಭಿನ್ನ; ಮತ್ತೊಂದು; ಉತ್ತರ; ದೂರ; ಮೋಕ್ಷ; ಬ್ರಹ್ಮ; ಶ್ರೇಷ್ಠ; ಶತ್ರು; ವಿರುದ್ಧ.
—**ಗ** ಪರರೊಡನೆ ಇರುವವ.
—**ತರ** ಅಧಿಕವಾದ, ಶ್ರೇಷ್ಠವಾದ.
—**ತೆ** ಪರತ್ವ, 'ಪರ' ಎಂಬ ಹೆಸರಿಗೆ ಕಾರಣವಾದ ಗುಣ.
—**ತ್ರ** ಸ್ವರ್ಗಲೋಕ,ಇನ್ನೊಂದುಲೋಕ.
**ಪರಕಲಿಸು** ಸುತ್ತಲೂ ಹರಡು, ಹರವು.
**ಪರಕಲು** ಪರಕಲು, ಚೂರು, ಚಿಂದಿ.
**ಪರಕಾಯ** ಇನ್ನೊಂದು ದೇಹ.
**ಪರಕಾವಣೆ** ನಾಣ್ಯಗಳ ಖಾತ್ರಿನೋಡುವುದು
**ಪರಕಾಳೆ** ಬಿಳಿಬಟ್ಟೆ; ಉದ್ದದ ಬಿಳಿ ಹೊಸಬಟ್ಟೆ
**ಪರಕೀಯ** ಬೇರೆಯ, ಹೊರಗಿನವ.
**ಪರಕು** (ಫರಕು), ವ್ಯತ್ಯಾಸ, ಹೆಚ್ಚುಕಡಮೆ.
**ಪರಕೆ** (ಹರಕೆ) ಆಶೀರ್ವಾದ; ಪ್ರಾರ್ಥನೆ.
**ಪರಗಣೆ** ಜಿಲ್ಲೆ; ಗ್ರಾಮಸಮುದಾಯ.
**ಪರಚಕ್ರ** ಶತ್ರುಸೇನೆ; ವೈರಿ ಅರಸು.
**ಪರಚು** ಬರಟು, ಉಗುರಿಂದ ಕೆರೆ.
**ಪರಜಾತ** ಅನ್ಯನಿಂದ ಹುಟ್ಟಿದವ; ಪರಪುಟ್ಟ.
**ಪರಜಿತ** ಸೋಲಿಸಲ್ಪಟ್ಟ, ಗೆದ್ದ.
**ಪರಜು** (ಪರಚು), ಉಗುರಿಂದ ಕೆರೆ; ಖಡ್ಗ; ಒಂದು ರಾಗ.
**ಪರಟೆ** ತೂತಾದ ಪಾತ್ರೆ; ಸೌಟು; ಪ್ರಾಕಾರ, ಪೌಳಿ, ದರೆ; ಕರಟ, ತೆಂಗಿನ ಚಿಪ್ಪು.
**ಪರಡಿ** ಗೋಧಿ ಸೇವಿಗೆ, ಬೇಯಿಸಿದ ಗೋಧಿ ಹಿಟ್ಟಿನ ಗುಳಿಗೆ, ಗೌಲಿ; ಹರಟೆ.
**ಪರಡು** ಕಾಲಿನ ಹರಡು; ನೆಲದಿಂದ ಅಗಿದು ತೆಗೆ; ಪ್ರಸಾರವಾಗು, ಹಬ್ಬು; ಹುಡುಕು.
**ಪರಣ** (ಹರಣ), ಪ್ರಾಣ.
**ಪರತಂತ್ರ** ಅನ್ಯನಿಗೆ ಅಧೀನವಾಗಿರುವಿಕೆ, ಪರಾವಲಂಬನ.
**ಪರದ** (ಹರದ), ವರ್ತಕ, ವ್ಯಾಪಾರಿ.
**ಪರದರ್ಶನ** ಇನ್ನೊಂದು ತತ್ವ, ಇನ್ನೊಂದು ಸಿದ್ಧಾಂತ.
**ಪರದಾರ** ಅನ್ಯರ ಹೆಂಡತಿ, ಪರ ಸ್ತ್ರೀ.
**ಪರದು** ವ್ಯಾಪಾರ; ಚಲಾವಣೆ.
**ಪರದೆ** ನಾಟಕದ ತೆರೆ, ಘಡದೆ, ಮರೆ; ಮುಖಕ್ಕೆ ಹಾಕುವ ಬುರುಕೆ; ಮುಸುಕು.
**ಪರದೇಶ** ವಿದೇಶ, ಇನ್ನೊಂದು ನಾಡು.
—**ಸ್ಥ** ವಿದೇಶದವ; ಹೆರವ.
**ಪರದೇಶಿ** ಬೇರೆ ದೇಶದವ; ನಿರ್ಗತಿಕ.
**ಪರದೈವ** ಇನ್ನೊಂದು ದೇವತೆ; ವಿಧಿ.
**ಪರಪಿಂಡಿ** ಪರಾನ್ನದಲ್ಲಿ ಜೀವನ ಕಳೆವವ.
**ಪರಪು** ವಿಸ್ತರಿಸು, ಹರಡು; ಹರವು; ವಿಸ್ತಾರ ಹರಡಿರುವುದು.
**ಪರಪುಟ್ಟ** ಪರರಿಂದ ಪೋಷಿಸಲ್ಪಟ್ಟದ್ದು, ಕಾಗೆಯಿಂದ ಪೋಷಿಸಲ್ಪಟ್ಟ ಕೋಗಿಲೆ.
**ಪರಪುರುಷ** ಅನ್ಯ ವ್ಯಕ್ತಿ; ಪತಿಯಲ್ಲದ ಇನ್ನೊಬ್ಬ; ವಿಷ್ಣು.
**ಪರಪುಷ್ಟ** (ಸಂ) ಪರಪುಟ್ಟ (ದ್ಭ), ಅನ್ಯರಿಂದ ಸಾಕಲ್ಪಟ್ಟುದು; ಕೋಗಿಲೆ.
**ಪರಬಲ** ಶತ್ರು ಸೈನ್ಯ.

ಪರಬೊಮ್ಮ (ದ್ಭ) ಪರಬ್ರಹ್ಮ (ಸಂ).
ಪರಭಾಗ ಉತ್ತಮ ಅಂಶ; ಹೆಚ್ಚಾದ ಕಾಂತಿ.
ಪರಭಾರೆ ಹೊರಗಿಂದ ಹೊರಗೆ; ತಮಗೆ ಬಾಧೆಯಾಗದಂತೆ.
ಪರಮ ಕೋಮಲ; ಪೂರ್ಣ; ಅನಂತರ; ಶ್ರೇಷ್ಠ, ಮುಖ್ಯ, ದೊಡ್ಡ; ಪ್ರಣವ.
—ಗತಿ ಅತಿ ಕೊನೆಯ ಪದವಿ, ಮೋಕ್ಷ.
—ಪದ (ಪರಮಗತಿ).
ಪರಮನ್ ಅನುಜ್ಞೆ; ಹುಕುಂ; ಸ್ವೀಕಾರ.
ಪರಮಶ್ರೀ ಸಂಪತ್ತಿನ ಉಚ್ಚ ಸ್ಥಿತಿ.
ಪರಮರ್ಷಿ ಬ್ರಹ್ಮನನ್ನು ತಿಳಿದ ಋಷಿ.
ಪರಮಹಂಸ ಸನ್ಯಾಸದಲ್ಲಿ ಒಂದು ಸ್ಥಿತಿ.
ಪರಮಾಣು ಚಿಕ್ಕ ದೂಳಿನ ಅಣು; ಮೂಲ ಧಾತುವಿನ ಅತ್ಯಂತ ಚಿಕ್ಕ ಅಂಶ.
ಪರಮಾತ್ಮ ಪರಬ್ರಹ್ಮ.
ಪರಮಾನಂದ ಅತಿ ಆನಂದ; ಪರಮಾತ್ಮ.
ಪರಮಾನ್ನ ಹಾಲು ಪಾಯಸ, ಕೀರು.
ಪರಮಾಯು ದೀರ್ಘಾಯು.
ಪರಮಾರ್ಥ ಪರಲೋಕಕ್ಕೆ ಸಂಬಂಧಿಸಿದ; ಲೌಕಿಕವಲ್ಲದ.
ಪರಮಾವಧಿ ಕೊನೆಯ ಗಡಿ, ಕೊನೆಯ ಮಿತಿ
ಪರಮೆ ಆರಡಿ, ಭೃಂಗ, ತುಂಬಿ; ಹಕ್ಕಿ.
ಪರಮೇಶ್ವರ ಪ್ರಪಂಚದ ಹುಟ್ಟು ಪಾಲನೆ, ಲಯಗಳಿಗೆ ನಾಯಕನಾದವ; ಶಿವ; ಬ್ರಹ್ಮ; ಚಕ್ರವರ್ತಿ.
ಪರಮೇಷ್ಠಿ ಬ್ರಹ್ಮ; ಶಾಲಿಗ್ರಾಮದ ಮೂರ್ತಿ ವಿಶೇಷ.
ಪರಲ್ ಹರಳು.
ಪರಲೋಕ ಈ ಲೋಕವಲ್ಲದುದು; ಮರ ಣದ ಬಳಿಕ ಆತ್ಮನು ಸೇರುವ ಲೋಕ.
—ಯಾನ ಸಾವು.
ಪರವಶ ಪರಾಧೀನ, ಅನ್ಯನಿಗೆ ವಶನಾಗಿರುವ; ಮೈಮರೆತ, ಮೂರ್ಛೆ, ಎಚ್ಚರತಪ್ಪಿದವನು.
ಪರವಾ (ಪರವೆ), ಜಾಗರ, ಎಚ್ಚರ; ಗೊಡವೆ, ಎಣಿಕೆ, ಚಿಂತೆ; ಆತುರ; ಅಡ್ಡಿ, ತಡೆ.
—ಇಲ್ಲ ಚಿಂತೆಯಿಲ್ಲ.
ಪರವಿ ಹರವಿ, ಮಣ್ಣಿನ ಬಾನಿ, ಗಡಿಗೆ.
ಪರಶಕ್ತಿ ಪಾರ್ವತಿ; ಪಾರ್ವತಿಯ ಸ್ವಾಮಿ, ಶಿವ.
ಪರಶು ಕೈಗೊಡಲಿ, ಚಪ್ಪೆಕೊಡಲಿ.
ಪರಶುರಾಮ ಜಮದಗ್ನಿ ಋಷಿಯ ಮಗ. ಈತನ ತಾಯಿ ಅವಿವೇಕವನ್ನು ತೋರಿದಾಗ, ಜಮದಗ್ನಿಯು ಸಿಟ್ಟಾಗಿ ಅವಳನ್ನು ಕಡಿಯಲು ಮಕ್ಕಳಿಗೆ ಹೇಳಿದನು. ಉಳಿದ ಮಕ್ಕಳು ಹಾಗೆ ಮಾಡಲಿಲ್ಲ. ಆದರೆ ಪರಶುರಾಮನು ತಾಯಿ ರೇಣುಕೆಯನ್ನು ಕೊಂದನು. ಜಮದಗ್ನಿ ಆಶ್ರಮದಿಂದ ಕಾರ್ತವೀರ್ಯನು ಕಾಮಧೇನುವನ್ನು ಕದ್ದು ಒಯ್ಯಲು, ಅವನನ್ನು ಪರಶುರಾಮನು ಕೊಂದನು.
ಪರಸಮಯ ಅನ್ಯರ ಧರ್ಮ; ಅನ್ಯ ಜನ ವರ್ಗ.
ಪರಸು (ಹರಸು), ಆಶೀರ್ವಾದ ಮಾಡು.
ಪರಸ್ತ್ರೀ ತನ್ನ ಪತ್ನಿಯಲ್ಲದವಳು.
ಪರಸ್ಥಲ ಬೇರೆ ಊರು; ತನ್ನದಲ್ಲದ ಊರು, ವಿದೇಶ, ಅನ್ಯದೇಶ.
ಪರಸ್ಪರ ತಂತಮ್ಮಲ್ಲಿ; ಒಬ್ಬರೊಬ್ಬರಿಗೆ; ಅನ್ಯೋನ್ಯ.
ಪರಸ್ವ ಅನ್ಯರ (ಸ್ವ = ಸಂಪತ್ತು) ವಸ್ತುಒಡವೆ.
—ಅಧೀನ ಪರಾಧೀನ, ಬೇರೆಯವರ ಅಧೀನದಲ್ಲಿರುವ.
ಪರಹಿತ ಪರೋಪಕಾರ; ಛಂದೋ ರೀತಿ.
ಪರಳಿಗ ಜಾರ, ಪಾಣ್ಬ; ಸ್ತ್ರೀಲೋಲ.
ಪರಂಗಿ ಯುರೋಪಿನ ಜನ, ಬಿಳಿ ಜನ; ಅನನ್ನಾಸು ಹಣ್ಣು; ಪಪ್ಪಾಯಿ; ಒಂದು ಜನನೇಂದ್ರಿಯ ರೋಗ, ಹಣ್ಣು, ಕೆಟ್ಟಕಾವು.

ಪರಂಜ ಕತ್ತಿ; ಖಡ್ಗಧಾರೆ; ಗಾಣ; ನೊರೆ.

ಪರಂಜಯ ವೈರಿಯನ್ನು ಜಯಿಸುವವ; ವರುಣ.

ಪರಂಜ್ಯೋತಿ ಅತಿ ತೇಜಸ್ವಿಯಾದ ರೂಪುಳ್ಳವ, ಪರಮಾತ್ಮ.

ಪರಂತಪ ಶತ್ರುವನ್ನು ಸುಡುವವ, ಅರ್ಜುನ.

ಪರಂಪರೆ ವಂಶ, ಸಂತತಿ; ಕಾಲಾನುಗತವಾಗಿ ಬಂದುದು.

ಪರಾಕ ಪ್ರಾಯಶ್ಚಿತ್ತರೂಪದ ಒಂದು ವ್ರತ; ಕತ್ತಿ; ಒಂದು ಬೇನೆ.

ಪರಾಕಾಷ್ಠೆ ಅತ್ಯುನ್ನತ ಸ್ಥಿತಿ.

ಪರಾಕು ಎಚ್ಚರ; ಕೇಳು; ಲಕ್ಷಿಸು; ಸ್ತುತಿ.
—ಹೇಳು ಹೊಗಳು, ತಿರುತಿರುಗಿ ಹೇಳು.

ಪರಾಕ್ರಮ ಬಲ; ದೇಹಶಕ್ತಿ; ವೀರತನ.

ಪರಾಕ್ರಮಿ ಶೂರ, ವೀರ, ಬಲಶಾಲಿ.

ಪರಾಗ ಹೂದೂಳಿ, ಕೇಸರದ ಪುಡಿ; ಚಂದನ; ಮಧು, ಜೇನು; ಚಿನ್ನ; ಗ್ರಹಣ; ನಸುಕೆಂಪು.

ಪರಾಙ್ಮುಖ ವಿಮುಖ, ತಿರುಗಿಸಿದ ಮುಖ.
—ತೆ ತಿರಸ್ಕಾರ; ವೈರ; ಜುಗುಪ್ಸೆ.

ಪರಾಚೀನ ಮುಖ ತಿರುಗಿಸುವುದು; ಹಿಂದುಮುಂದು.

ಪರಾಜಯ ಸೋಲು.

ಪರಾಜಿತ ಸೋತ; ಸೋತವ.

ಪರಾತ ಹರಿವಾಣ; ತಾಂಬಾಣ, ಕೊಣಮಿಗೆ.

ಪರಾತ್ಪರ ಅತ್ಯಂತ ಪವಿತ್ರ.

ಪರಾಧೀನ ಪರವಶ, ಅನ್ಯರ ಆಧೀನ.
—ತೆ ಪರರಿಗೆ ಸೇರಿರುವಿಕೆ, ಅನ್ಯರ ಆಧೀನವಾಗಿರುವಿಕೆ.

ಪರಾನ್ನ ಬೇರೊಬ್ಬನು ಕೊಡುವ ಅನ್ನ; ಪರರು ನೀಡಿದ್ದನ್ನು ಉಂಡು ಬದುಕುವವ.

ಪರಾಭವ ತಿರಸ್ಕಾರ; ವಿನಾಶ; ಅಪಜಯ; ನಾಲ್ಕನೆಯ ಸಂವತ್ಸರ.

ಪರಾಮರಿಕೆ (ಪರಾಂಬರಿಕೆ); ವಿಚಾರಣೆ ಮಾಡುವಿಕೆ; ನೋಡುವಿಕೆ; ದಯದಿಂದ ಪರಿಶೀಲಿಸುವಿಕೆ; ಜೋಕೆಮಾಡುವಿಕೆ.

ಪರಾಮರಿಸು (ಪರಾಂಬರಿಸು) ಕೇಳು; ವಿಚಾರಿಸು; ಜಾಗ್ರತೆ ಕೊಳ್ಳು.

ಪರಾಮರ್ಶ ಯುಕ್ತಿ; ವಿಚಾರ; ದಾಳಿ ಹೋಗುವುದು; ಸೆಳೆಯುವುದು; ಯೋಗಕ್ಷೇಮವಿಚಾರ.

ಪರಾಮೋಷಿ ಉದ್ದೇಶಿಸದ ತಪ್ಪು, ಗೈರು.

ಪರಾಯಣ ಬಹಳ ಆಸಕ್ತ.

ಪರಾಯತ್ತ ಅನ್ಯನ ಅಧೀನವಾದ.

ಪರಾಯಿ ಪರರಿಗೆ ಸಂಬಂಧಿಸಿದ; ಹೊಸ.

ಪರಾರಿ ಕಳೆದ ವರ್ಷ; ಕಡು ಹಗೆ; ತಪ್ಪಿಸಿ ಓಡುವಿಕೆ, ಪಲಾಯನ.

ಪರಾರ್ಥ ಪರರಿಗೆ ಲಾಭವಾಗುವ.

ಪರಾರ್ಧ ಕೊನೆಯ ಅರ್ಧ ಸಂಖ್ಯೆ, ಬ್ರಹ್ಮನ ಆಯುಃಪ್ರಮಾಣದಲ್ಲಿ ಅರ್ಧ.

ಪರಾವೃತ್ತ ಹಿಂದಿರುಗಿದ, ಹಿಮ್ಮೆಟ್ಟಿದ; ಸೋತ; ತಿರುಗಿದ.

ಪರಾಶರ ಋಗ್ವೇದ ಋಕ್ಕುಗಳಲ್ಲಿ ಹಲವು ಇವನಿಂದಾದುವೆನ್ನುತ್ತಾರೆ. ಈತ ಕಪಿಲ ಮುನಿಯ ಶಿಷ್ಯನು. ಈತನು ಧರ್ಮಶಾಸ್ತ್ರಗಳನ್ನು ಬರೆದನು. ಅವನಿಗೂ ಸತ್ಯವತಿ ಎಂಬವಳಿಗೂ ಉಂಟಾದ ಪ್ರಣಯದ ಫಲವಾಗಿ ಕೃಷ್ಣದ್ವೈಪಾಯನ ವ್ಯಾಸನು ಹುಟ್ಟಿದನು.

ಪರಾಶ್ರಯ ಬೇರೆಯವರ ನೆರೆ, ಅನ್ಯಸಹಾಯ
—ಇತ ಪರರನ್ನು ಹೊಂದಿ ಬೆಳೆವವ.

ಪರಾಸನ ಕೊಲೆ, ವಧೆ.

ಪರಾಸು ದೂರಹೋದ ಪ್ರಾಣವುಳ್ಳ, ಸತ್ತ.

ಪರಾಸ್ತ ತಿರಸ್ಕರಿಸಲ್ಪಟ್ಟ; ಸೇವಿಸಲ್ಪಟ್ಟ.

ಪರಾಹ ಮರುದಿನ, ಮತ್ತೊಂದು ದಿನ.

ಪರಾಹ್ಣ ಮಧ್ಯಾಹ್ನ; ಅಪರಾಹ್ಣ.

ಪರಾಳ (ಫಳಾರ); ತಿಂಡಿ, ಉಪಾಹಾರ.

ಪರಾಂಗನೆ ಪರಸ್ತ್ರೀ, ತನ್ನದಲ್ಲದ ಹೆಣ್ಣು.
ಪರಾಂಬರಿಕೆ (ಪರಾಮರಿಕೆ), ವಿಮರ್ಶೆ.
ಪರಿ ಹರಿ; ತುಂಡುಮಾಡು; ಹಾರು; ಓಡು; ಕಳೆ, ನಾಶವಾಗು; ಪಾಡು, ಸ್ಥಿತಿ; ಸರ್ವತ್ರ; ಎಲ್ಲಾ ದಿಕ್ಕಿಗೆ; ಬಿಡುವಿಕೆ; ರೋಗ; ಶೇಷ, ಬಾಕಿ; ನಿವಾರಣೆ; ಭೂಷಣ; ವಿಶ್ರಾಂತಿ; ದುಃಖ; ಸಂತೋಷ; ಬಹಳ; ತ್ಯಾಗ; ನಿಯಮ; ಚೆಲುವು; ಬಗೆ, ರೀತಿ.
—ಕೊಳ್ಳು ಹರಿ, ಪ್ರವಹಿಸು.
—ಪರಿ ಬಗೆಬಗೆ.
—ವು ಹರಿಯುವಿಕೆ; ಹಾರುವಿಕೆ.
—ಸು ಹರಿಸು, ಚರಿಸುವ ಹಾಗೆ ಮಾಡು.
ಪರಿಕರ ಸುತ್ತುಮುತ್ತಲಿನವರು; ಸೇವಕ; ಪರಿವಾರ; ಮಂಚ; ಸಭೆಯ ಪ್ರಾರಂಭ; ಗುಂಪು; ವಿವೇಕ, ವಿಚಾರ; ಪೂಜಾ ಸಾಮಗ್ರಿ; ಸಾಹಿತ್ಯ, ಸಾಧನ.
—ಣೆ ಸಿದ್ಧತೆ; ಸಾಮಗ್ರಿ, ಸಲಕರಣೆ.
ಪರಿಕರ್ಮ ದೇಹಸಂಸ್ಕಾರ, ದೇಹಶುದ್ಧಿ; ಅಲಂಕಾರ; ಸಹಾಯದ ಕೆಲಸ.
ಪರಿಕಾರ ಹರಿಕಾರ; ಲಂಗ, ಕಿರುಗಣೆ.
ಪರಿಕಿಸು ಪರೀಕ್ಷಿಸು, ಶೋಧಿಸು; ಆಲೋಚಿಸು, ನೋಡು.
ಪರಿಕೆ (ದ್ಭ) ಓಟ; ಪರೀಕ್ಷೆ (ಸಂ); ಕೊಳ.
ಪರಿಕ್ರಮ ಸುತ್ತುವರಿಯುವುದು, ಪ್ರದಕ್ಷಿಣೆ, ಸುತ್ತು ತಿರುಗುವುದು, ಆಟ.
ಪರಿಕ್ರಿಯೆ ಸುತ್ತುವರಿಸುವಿಕೆ.
ಪರಿಕ್ಷಿತ ಅಭಿಮನ್ಯುವಿನ ಮಗ. ಈತನು ಸರ್ಪ ಕಚ್ಚಿ ಮಡಿದನು. ಈತನ ಮಗ ಜನಮೇಜಯ.
ಪರಿಕ್ಷುಬ್ಧ ತಳಮಳಿತ, ಕಳವಳಕ್ಕೀಡಾದ.
ಪರಿಖೆ (ಪರಿಖಾ) ಅಗಳು, ಅಗಳ್ತೆ, ಕಂದಕ; ಕೊಳ.
ಪರಿಗಣನ ವಿಚಾರ, ಸಮನಾಗಿ ಎಣಿಕೆ.
ಪರಿಗಣಿಸು ವಿಚಾರವಹಿಸು, ಸಮನಾಗಿ ಯೋಚಿಸು.
ಪರಿಗತ ತಿಳಿದ; ಮರೆತ; ಆವರಿಸಲ್ಪಟ್ಟ; ಸುತ್ತುಗಟ್ಟಲ್ಪಟ್ಟ, ಹೋದ.
ಪರಿಗೆ ಫಲಕ, ಹರಿಗೆ, ಡಾಲು, ಅಡ್ಡಣ.
ಪರಿಗ್ರಹ ಸ್ವೀಕಾರ; ಪರಿಜನ, ಸೇವಕ; ಸೇನೆಯ ಹಿಂಭಾಗ; ಶಪಥ; ಮದುವೆ.
—ಣ ಸ್ವೀಕಾರ; ವಿವಾಹ; ದಾನ ಕೊಳ್ಳುವಿಕೆ.
ಪರಿಘ ಕಬ್ಬಿಣದ ದೊಣ್ಣೆ; ಶೂಲ; ಮಣ್ಣಿನ ಪಾತ್ರೆ; ಮನೆ; ಬಾಗಿಲ ಪಡಿ, ಬಾಳುಂಡಿಗೆ.
ಪರಿಘಾತ ಹೊಡೆಯುವಿಕೆ; ಕೊಲ್ಲುವಿಕೆ; ತೆಗೆಯುವಿಕೆ.
ಪರಿಚಯ ತಿಳಿದ ವಿಷಯವನ್ನು ತಿರುಗಿ ತಿಳಿಯುವುದು; ತಿಳುವಳಿಕೆ ಕೊಡುವುದು; ಸ್ತೋತ್ರ; ಪ್ರೇಮ; ಹೊಸತಾಗಿ ತಿಳಿಸಿ ಕೊಡುವುದು; ಗುರುತು.
ಪರಿಚರ ಸೇವಕ; ಅಂಗರಕ್ಷಕ; ಅಭ್ಯಾಸ.
—ಇಸು ಸೇವಿಸು; ಅಭ್ಯಾಸಿಸು.
ಪರಿಚರ್ಯೆ ಅಧೀನತೆ; ಸೇವೆ; ಪೂಜೆ; ಶುಶ್ರೂಷೆ.
ಪರಿಚಾರ ಸೇವಕ; ಪರಿಚಯವುಳ್ಳ, ಕೇಳಿ ತಿಳಿದ.
—ಇಕೆ ಸೇವಕಿ, ದಾಸಿ.
—ಕ ಸೇವಕ; ಮುಖ್ಯ ಕೆಲಸಗಾರನಿಗೆ ಸಹಾಯ ಮಾಡುವವ.
ಪರಿಚಿತಿ ಗೊತ್ತು, ತಿಳಿವು, ಪರಿಚಯ, ಗುರುತು
ಪರಿಚ್ಛದ ಹೊದ್ದಿಕೆ; ಉಡುಗೆ; ಪರಿಕರಣೆ; ಪರಿವಾರ.
ಪರಿಚ್ಛಿನ್ನ ತುಂಡಾದ; ವಿಶೇಷವಾಗಿ.
ಪರಿಚ್ಛೇದ ವಿಂಗಡಿಸುವಿಕೆ; ಸರ್ಗ, ಅಧ್ಯಾಯ; ಗಡಿ; ವಿಚಾರ; ತೀರ್ಮಾನ, ನಿರ್ಧಾರ
—ಇಸು ನಿರ್ಣಯಿಸು; ವಿಂಗಡಿಸು.

ಪರಿಜನ ಸುತ್ತಲೂ ಇರುವವರು, ಪರಿವಾರ, ಸೇವಕರು.

ಪರಿಜು ಆಕಾರ, ರೂಪ; ವೇಷ; ರೀತಿ.

ಪರಿಜೆ ದೇಹ, ಮೈ.

ಪರಿಟವ ಗುರಿಯಾಗುವಿಕೆ; ಸಿದ್ಧತೆ, ತಯಾರಿ.

ಪರಿಣತ ಪರಿಪಕ್ವ ಸ್ಥಿತಿಗೆ ಬಂದ; ವೃದ್ಧಿಗೊಂಡ; ಪ್ರೌಢ, ನುರಿತ.

ಪರಿಣತಿ ಪರಿಣಾಮ; ಪಕ್ವಸ್ಥಿತಿ; ಪಾಂಡಿತ್ಯ.

ಪರಿಣಮಿಸು ಕೊನೆಗೊಳ್ಳು; ಪ್ರೌಢವಾಗು; ಪಕ್ವವಾಗು; ಪ್ರಾಪ್ತವಾಗು.

ಪರಿಣಯ ವಿವಾಹ, ಮದುವೆ; ವಧುವಿನೊಂದಿಗೆ ಅಗ್ನಿಗೆ ಸುತ್ತುಬರುವಿಕೆ.

ಪರಿಣಾಮ ವಿಸ್ತಾರ; ಕೊನೆ; ಕೊನೆಗೊಂಡ ಬಗೆ; ಸುಖ, ಸಂತೋಷ.

— ವಾದ ವಿಕಾಸವಾದ, ಪ್ರಾಣಿಗಳ ಶರೀರ ಶೀಲಗಳು ಈಗಿರುವ ಸ್ಥಿತಿಗೆ ಹೇಗೆ ಮುಟ್ಟದುವೆಂದು ತಿಳಿಸುವ ಸಿದ್ಧಾಂತ.

ಪರಿಣಾಯ ಸುತ್ತುವರಿಯುವಿಕೆ; ಚತುರಂಗ ಇಲ್ಲವೆ ಪಗಡೆಯಲ್ಲಿ ದಾಳ ಚಲಿಸುವಿಕೆ.

ಪರಿಣೇತ ಮುಗಿದ; ವಿವಾಹಿತ.

ಪರಿಣೇತೃ ಮದುವೆಮಾಡಿಕೊಂಡವ, ಗಂಡ.

ಪರಿತ ಸುತ್ತಲೂ.

ಪರಿತರು ಬರು, ಆಗಮಿಸು.

ಪರಿತಾಪ ದುಃಖ; ಉಷ್ಣ; ಭಯ; ಕಂಪ, ನಡುಕು; ಒಂದು ನರಕ.

ಪರಿತೋಷ ಸಂತೋಷ; ಅತಿ ತೃಪ್ತಿ, ಹಿಗ್ಗು.

ಪರಿತ್ಯಜಿಸು ತೊರೆ, ಬಿಡು, ಅಗಲು, ಕೈಬಿಡು.

ಪರಿತ್ಯಾಜ್ಯ ಬಿಡಲ್ಪಟ್ಟ, ಅಗಲಿದ, ತೊರೆದ; ಬಿಡಲು ಯೋಗ್ಯವಾದ.

ಪರಿತ್ರಾಣ ರಕ್ಷಣೆ, ಕಾಯುವಿಕೆ; ರಕ್ಷಣೆಯ ಸಾಧನೆ.

ಪರಿದಾನ ಆದಲು ಬದಲು, ವಿನಿಮಯ.

ಪರಿಧಾನ ಉಡಿಗೆ, ವಸ್ತ್ರ, ಸೀರೆ.

ಪರಿಧಾವಿ 46ನೆಯ ಸಂವತ್ಸರ.

ಪರಿಧಿ ಸುತ್ತಲೂ ಇರುವುದು; ಚಂದ್ರನ ಇಲ್ಲವೆ ಸೂರ್ಯನ ಸುತ್ತಲಾಗುವ ಪ್ರಭಾಮಂಡಲ, ಕಣ; ಬಾನ್ಗುಡಿ; ವೃತ್ತ ರೇಖೆ.

ಪರಿನಿಷ್ಕ್ರಮಣ ನಿರ್ಯಾಣ; ಈ ಲೋಕವನ್ನು ಬಿಡುವಿಕೆ; ಬುದ್ಧನ ಶರೀರತ್ಯಾಗ.

ಪರಿಪಕ್ವ ಸಮನಾಗಿ ಹಣ್ಣಾದ; ಪ್ರಬುದ್ಧತೆ; ಜ್ಞಾನ ಬಲಿತಿರುವಿಕೆ.

ಪರಿಪಡು ಕತ್ತರಿಸಿ ಬೀಳು, ಕತ್ತರಿಸಿ ಹೋಗು.

ಪರಿಪಂಥಿ ಶತ್ರು, ಹಗೆ.

ಪರಿಪಾಕ ನಿಪುಣತೆ; ಸರಿಯಾಗಿ ಬೆಂದುದು, ನುರಿತುದು.

ಪರಿಪಾಟ ರೀತಿ, ಕ್ರಮ; ಅಭ್ಯಾಸ.

ಪರಿಪಾಟಿ (ಪರಿಪಾಳಿ), ಸಹ ಅಭ್ಯಾಸಿ.

ಪರಿಪಾಡು ಹೋಲಿಕೆ, ಸಮಾನತೆ.

ಪರಿಪಾಲನ ರಕ್ಷಣೆ.

ಪರಿಪುಷ್ಟ ಪಾಲಿತ; ತುಂಬಿದ; ಬೆಳೆದ.

ಪರಿಭವ (ಪರಿಭಾವ), ತಿರಸ್ಕಾರ, ಅನಾದರ; ಅವಮಾನ, ಮಾನ ಮುಕ್ಕಾಗುವಿಕೆ.

ಪರಿಭಾಷೆ ಮಾತು; ಮಾತುಗಳಿಗೆ ಸಂಕೇತ.

ಪರಿಭ್ರಮಣ ಸುತ್ತಾಟ, ಅಲೆದಾಟ; ಸುಳಿವಿಕೆ.

ಪರಿಮಲ (ಪರಿಮಳ), ಸುವಾಸನೆ, ಕಂಪು.

— ಇಸು ವಾಸನೆ ಬೀರು, ಕಂಪುದೋರು.

ಪರಿಮಾಣ ಅಳತೆ, ತೂಕ; ಅಂದಾಜು.

ಪರಿಮಿತ ಅಳೆದ; ಮಿತಗೋಷ್ಠಿ; ಪ್ರಮುಖರಸ; ಮಿತಿಯುಳ್ಳ.

ಪರಿಮಿತಿ ಅಳತೆ; ಆದರ್ಶ; ಮಾದರಿ.

ಪರಿಯಟಣ (ಪರ್ಯಟಣ), ತಿರುಗಾಟ, ಸಂಚಾರ.

ಪರಿಯಳ ಹರಿವಾಣ.

ಪರಿಯಂಕ (ಪರ್ಯಂಕ), ಮಂಚ, ಪಲ್ಲಂಗ.

ಪರಿಯಂತ (ಪರ್ಯಂತರ), ತನಕ, ವರೆಗೆ.

ಪರಿಯಾಣ ಹರಿವಾಣ, ದೊಡ್ಡ ತಟ್ಟೆ.

ಪರಿವರ್ತ ಯುಗಾಂತ್ಯಕಾಲ; ಬದಲಿಕೆ; ಅಧ್ಯಾಯದ ಪ್ರಾರಂಭ; ಕ್ರಾಂತಿ; ವಿನಿಮಯ.
—ಇಸು ಬದಲಾಗು; ಕ್ರಾಂತಿಯಾಗು; ವಿನಿಮಯಗೊಳಿಸು, ಮಾರ್ಪಡು; ತಿರುಗಿಸು, ಸುತ್ತಿಸು.
—ನ ಬದಲಾವಣೆ; ಕ್ರಾಂತಿ; ವಿನಿಮಯ.
ಪರಿವರ್ಧಕ ಸಾಕುವವ; ಚಾಕರ; ಬೆಳೆಸುವವ.
ಪರಿವರ್ಧಿನಿ ನಾಲ್ಕು ಮಾತ್ರ ಗಣದಲ್ಲಿರುವ ಒಂದು ಷಟ್ಪದಿ; ಬೆಳೆಯುತ್ತಿರುವ.
ಪರಿವಾದ ಕ್ಷೌರ; ಸಲಕರಣೆ; ಬಿತ್ತನೆ; ಜಲಾಶಯ.
ಪರಿವಾದಿನಿ ಏಳು ತಂತಿ ವೀಣೆ; ನಿಂದಿತ ಸ್ತ್ರೀ.
ಪರಿವಾರ ಹಿಂಬಾಲಿಕರು; ಸೇನೆ, ಪಡೆ.
ಪರಿವಿಡಿ ಪರಿಪಾಟ, ಕ್ರಮ.
ಪರಿವಿಸ್ತಾರ ವಿಸ್ತಾರ, ಬಹಳ ವಿಶಾಲ; ಹರಡುವ.
ಪರಿವೀತ ಸುತ್ತಲ್ಪಟ್ಟ.
ಪರಿವೃತ್ತ ಸುತ್ತಲ್ಪಟ್ಟ.
ಪರಿವೇಧಿ ಆವರಣ.
ಪರಿವೇಷ್ಟಣ ಸುತ್ತುವರಿಯುವಿಕೆ.
ಪರಿವೇಷ್ಟಿಸು ಸುತ್ತುವರಿ.
ಪರಿಶಿಷ್ಟ ಉಳಿದ; ಪುಸ್ತಕಗಳಲ್ಲಿ ಉಳಿದ ಅಂಶ ಸೇರಿಸುವಿಕೆ.
ಪರಿಶೀಲನ ನೋಡುವಿಕೆ; ಚೆನ್ನಾಗಿ ಶೋಧಿಸಿ ತಿಳಿಯುವಿಕೆ; ಶ್ರದ್ಧೆಯಿಂದ ನೋಡುವಿಕೆ; ಸಮಗ್ರದೃಷ್ಟಿ.
ಪರಿಶುದ್ಧ ಬಹು ಪವಿತ್ರವಾದ.
ಪರಿಶೋಧನೆ ಶೋಧನೆ; ಹೊಸತಾಗಿ ಕಂಡು ಹಿಡಿಯುವಿಕೆ; ಚೆನ್ನಾಗಿ ಪರಿಶೀಲಿಸುವಿಕೆ.
ಪರಿಶೋಧಿಸು ಸೋಸು; ವಿಚಾರಿಸು; ತಿದ್ದು.
ಪರಿಶೋಭಿಸು ಪ್ರಕಾಶಿಸು; ಬೆಳಗು.
ಪರಿಶ್ರಮ ವ್ಯಾಯಾಮ; ಶ್ರಮ; ಪ್ರಯತ್ನ.
ಪರಿಷತ್ತು (ಪರಿಷದು), ಸುತ್ತು ಕುಳಿತಿರುವುದು; ಮಹಾಸಭೆ; ವಿದ್ವಾಂಸರ ಕೂಟ.
ಪರಿಷ್ಕಾರ ಭೂಷಣ, ಅಲಂಕಾರ; ಸ್ವಚ್ಛ.
ಪರಿಸಮಾಪ್ತಿ ಕೊನೆ, ಮುಗಿತಾಯ.
ಪರಿಸರ ಸಮೀಪ; ಸುತ್ತುವರಿಯುವಿಕೆ.
ಪರಿಹರ (ಪರಿಹಾರ), ತ್ಯಾಗ, ಬಿಡುವಿಕೆ; ನಿವಾರಣೆ; ಕಳೆದುಕೊಳ್ಳುವಿಕೆ.
—ಇಸು ಬಿಡು, ತೊಲಗಿಸು, ನಿವಾರಿಸು.
ಪರಿಹಾರ ತ್ಯಾಗ, ದೋಷವನ್ನು ದೂರ ಮಾಡುವಿಕೆ; ಅನಾದರ, ತಿರಸ್ಕಾರ; ಪ್ರಾಯಶ್ಚಿತ್ತ; ದಂಡದ್ರವ್ಯ.
ಪರಿಹಾಸ ಆಟ, ವಿನೋದ; ಅಣಕ, ನಗಚಾಟ.
ಪರೀಕ್ಷ (ಪರೀಕ್ಷೆ), ಪರಿಶೀಲನೆ; ನ್ಯಾಯ ತೀರ್ಮಾನ; ತಪ್ಪುಸಮಗಳ ತುಲನೆ; ತುಲನೆ.
—ಇಸು ಯೋಗ್ಯತೆಯನ್ನು ವಿಮರ್ಶಿಸು.
ಪರು ಕತ್ತರಿಸು; ಹಾರು.
ಪರುಠವ ಸಿದ್ಧತೆ, ತಯಾರಿಕೆ.
ಪರುವ (ಪರ್ವ), ಹಬ್ಬ; ಸಂಕ್ರಾಂತಿ ಕಾಲ.
ಪರುಷ (ಪರುಸ), ಕ್ರೂರ, ಕಠೋರ; ನಿಷ್ಠುರ ಮಾತು, ಬಿರುಸು ಮಾತು; ಸ್ಪರ್ಶಶಿಲೆ, ಸೋಂಕಿದ್ದನ್ನು ಚಿನ್ನ ಮಾಡುವ ಕಲ್ಲು.
ಪರುಷಿ ಸವಿಯಾದ.
ಪರುಸ್ ಗಂಟು, ಗ್ರಂಥಿ.
ಪರೆ ಹರೆ; ವಾದ್ಯವಿಶೇಷ, ತಮಟೆ; ವಿಸ್ತರಿಸು, ಹರಡು; ತೆಳ್ಳಗಿನ ಹೊದ್ದಿಕೆ; ಹೆರೆ; ಪ್ರಾಯ; ರೆಪ್ಪೆ; ಚೆದರು, ಮಾಯವಾಗು; ಬೆಳಗು; ಹರಿ; ಕತ್ತರಿಸು; ನಿಷೇಧಿಸು.
—ಕಡಿ ಹರಿದು ಚೆಲ್ಲು.
—ವು (ಪರಿವು), ಹರಿಯುವಿಕೆ; ವಿಸ್ತರಣ.
ಪರೇತ ಸತ್ತುದು; ದೂರಹೋದುದು; ಪ್ರೇತ.
—ಪತಿ ಸತ್ತವರೊಡೆಯ, ಯಮ.
ಪರೋಕ್ಷ ದೃಷ್ಟಿಗೆ ದೂರವಾದ; ನೋಟಕ್ಕೆ ಮೀರಿದ, ಗೋಪ್ಯ.

ಪರೋಪಕಾರ ಅನ್ಯರಿಗೆ ಮಾಡುವ ಉಪಕಾರ.

ಪರೋಪಕಾರಿ ಹೆರರಿಗೆ ಸಹಾಯಮಾಡುವವ, ಉದಾರಿ.

ಪರ್ಕುಳ್ (ಪೊರ್ಕುಳ್), ಹೊಕ್ಕುಳು, ನಾಭಿ.

ಪರ್ಚು (ಪಚ್ಚು), ಗೊಣಗು, ಪಿಸುನುಡಿ.

ಪರ್ಜನ್ಯ ಇಂದ್ರ; ಮೋಡ, ಮುಗಿಲು; ಒಬ್ಬ ದೇವಗಂಧರ್ವ.

ಪರ್ಣ ಹಸುರಾದುದು, ಹಸಿ ಎಲೆ; ರೆಕ್ಕೆ; ಮುತ್ತುಗ, ಮುತ್ತಲ; ವೀಳೆಯದ ಎಲೆ.

ಪರ್ಣಕುಟಿ ಎಲೆಮನೆ, ಗುಡಿಸಿಲು.

ಪರ್ಣಶಾಲೆ (ಪರ್ಣಕುಟ).

ಪರ್ಣಾಶನ ಎಲೆಗಳನ್ನು ತಿಂದು ಜೀವಿಸುವವ; ಮುಗಿಲು.

ಪರ್ತು (ಪತ್ತು, ಹತ್ತು).

ಪರ್ದು ಹದ್ದು; ಗರುಡ.

ಪರ್ಪರಿಗಿ ದೊರಗುತನ, ಒರಟುತನ; ಕ್ರೂರತನ.

ಪರ್ಬ (ಪರ್ವ), ಹಬ್ಬ.

ಪರ್ಬು (ಹಬ್ಬು), ವಿಸ್ತಾರವಾಗು, ಹರಡು.
—ಗೆ ಹಬ್ಬುವಿಕೆ, ವಿಸ್ತರಿಸುವಿಕೆ.

ಪರ್ಯಟಣ ತಿರುಗಾಟ, ಸುತ್ತಾಡುವಿಕೆ.

ಪರ್ಯಯ ಪಲ್ಲಟ; ಸುತ್ತುವರಿವ; ಕಾಲ ಸರಿಯುವಿಕೆ; ಅವ್ಯವಸ್ಥೆ; ಶಾಸ್ತ್ರವನ್ನೂ ಲೋಕ ಮರ್ಯಾದೆಯನ್ನೂ ಬಿಟ್ಟುದು, ಬಗೆ ಕೆಟ್ಟುದು.

ಪರ್ಯಪ್ತ ಗಳಿಸಿದ, ದೊರೆತ; ಸಾಕಷ್ಟು, ಬೇಕಷ್ಟು.

ಪರ್ಯವಸಾನ ಅಂತ್ಯ, ಕೊನೆ, ಮುಗಿತಾಯ.

ಪರ್ಯವಸ್ಥಾ ವಿರೋಧ.

ಪರ್ಯಂಕ ಮಂಚ, ಪಲ್ಲಂಗ; ಆಸನ, ಹಾಸಿಗೆ.

ಪರ್ಯಂತರ (ಪರ್ಯಂತ) ತನಕ, ಅಲ್ಲಿಯವರೆಗೆ, ಒಂದು ಕಾಲ ಇಲ್ಲವೆ ಅವಧಿ ತನಕ.

ಪರ್ಯಾಕುಲ ಗಲಿಬಿಲಿ.

ಪರ್ಯಾಣ (ಸಂ) ಹಲ್ಲಣ (ದ್ಭ), ಕುದುರೆ ಜೀನು.

ಪರ್ಯಾಪ್ತ ಇಷ್ಟ ಬಂದಂತೆ; ತೃಪ್ತಿ; ಸಾಮರ್ಥ್ಯ; ನಿವಾರಣೆ; ಯೋಗ್ಯತೆ.

ಪರ್ಯಾಯ ಅನುಕ್ರಮ, ಪ್ರಕಾರ; ರಚನೆ; ಸುತ್ತು; ಬೇರೆ ರೀತಿಯ; ಬಳಸಿನ.

ಪರ್ವ ತುಂಬು; ಗಂಟು; ಗ್ರಂಥದ ದೊಡ್ಡ ಭಾಗ; ಹಬ್ಬ; ಒಂದು ಕಾಲವಿಶೇಷ.

ಪರ್ವತ ಬೆಟ್ಟ; ಒಬ್ಬ ದೇವರ್ಷಿ.
—ಅರಿ ಇಂದ್ರ.
—ನಾಥ ಹಿಮಾಲಯ, ಮೇರು.

ಪರ್ವು ಹಬ್ಬು, ವಿಸ್ತರಿಸು, ಹರಡು; ಕಾಲ.

ಪರ್ಶುಕಾ ಪಕ್ಕೆಲುಬು.

ಪಲ್ ಹೋಗು; ರಕ್ಷಿಸು; ಹಲ್ಲು.

ಪಲ ಮಾಂಸ; ಕಾಲಭೇದ; ಮೂರು ತೊಲೆ ತೂಕ; 12 ನಿಮಿಷ ಕಾಲ; ಒಣಹುಲ್ಲು; ಹಲವು.

ಪಲಗಣ್ಣ ಹಲವು ಕಣ್ಣುಳ್ಳವ, ಇಂದ್ರ.

ಪಲಗಂಡ ಇಟ್ಟಿಗೆ ಕೆಲಸದವ, ಉಪ್ಪಾರ; ರಾಜ; ಸೆರೆಮನೆ.

ಪಲಗೆ ಹಲಗೆ; ಚಪ್ಪಟೆ; ಗುರಾಣಿ, ಡಾಲು.

ಪಲರ್ಮೆ ಹಲವು ಸಲ, ಹಲವು ಸಾರಿ.

ಪಲಲ ಮಾಂಸ; ರಾಕ್ಷಸ; ಕೆಸರು, ರಾಡಿ.

ಪಲಸು (ಹಲಸು, ಪನಸು).

ಪಲಾಯನ ಓಟ, ಹಾರಾಟ.

ಪಲಾಲಿ ಜಳ್ಳು, ಹೊಳ್ಳು; ನೆಲ್ಲು.

ಪಲಾಶ ಮುತ್ತುಗ; ಎಲೆ; ಕಟು, ಕಾರ.

ಪಲಾಂಡು ನೀರುಳ್ಳಿ, ಉರುಳಿಗಡ್ಡೆ.

ಪಲಿತ ಮುಪ್ಪಿನಿಂದ ಕೂದಲು ನರೆಯುವುದು; ಕೂದಲು ಹಣ್ಣಾಗುವುದು; ಮುದುಕ.

ಪಲುಗುಣ (ಫಲ್ಗುನ), ಅರ್ಜುನ.

ಪಲುಂಬಿ ದುಃಖಿ; ಆರ್ತಿ; ನವಿಲು.

ಪಲುಂಬು ಹಲುಬು, ಮರುಗು.

ಪಲ್ಗಡಿ ಹಲ್ಲುಕಡಿ.

ಪಲ್ಯಯನ ಹಲ್ಲಣ, ಕುದುರೆ ಮೇಲಿನ ಜೀನು.

ಪಲ್ಲ ಧಾನ್ಯದ ಒಂದು ಅಳತೆ; ದಾಡೆಯುಳ್ಳು ದು, ಕೋರೆಯುಳ್ಳುದು; ಆನೆ; ಹೆದ್ದುಂಬಿ.

ಪಲ್ಲಕ್ಕಿ ಪಾಲಕಿ, ಲಾಲಕಿ.

ಪಲ್ಲಟ ವ್ಯತ್ಯಾಸ, ಬದಲು; ಅವ್ಯವಸ್ಥೆ; ತಲೆಕಳಗು, ಬುಡಮೇಲು.

-- ಇಸು ಮಾರ್ಪಡು, ಬದಲಾಗು.

ಪಲ್ಲಣ (ಹಲ್ಲಣ), ಕುದುರೆ ಜೀನು, ತಡಿ.

ಪಲ್ಲವ ಚಿಗುರು; ಬಲ; ಅರಗಿನ ರಸ; ಕೊಂಬೆ; ಮೊಳಕೆ. ಮಹಾಬಲಿಪುರದಲ್ಲಿ ಆಳಿದ ಒಂದು ಅರಸು ಮನೆತನ. ಇವರು ಮಲ ಯದ ತನಕವೂ ತಮ್ಮ ಸಂಸ್ಕೃತಿಯನ್ನು ಸಾರಿದರು.

ಪಲ್ಲವಕ ವಿಟ, ಸೂಳೆಗಾರ, ಮಿಂಡ.

ಪಲ್ಲವಪಾಣಿ ಎಲೆಯಂತೆ ಕೋಮಲವಾದ ಕೈ ಉಳ್ಳವಳು.

ಪಲ್ಲವಾಧರೆ ಚಿಗುರಿನಂತೆ ಕೆಂಪೂ ಮೆತ್ತಗೂ ಆದ ತುಟಿ ಉಳ್ಳವಳು.

ಪಲ್ಲವಿ (ಪಲ್ಲ), ಹಾಡಿನ ಸೊಲ್ಲು.

ಪಲ್ಲವಿತ ಚಿಗುರಿದ.

ಪಲ್ಲಿ ಹಳ್ಳಿ (ದ್ಭ); ಮನೆ; ಗೌಳಿ, ಹಲ್ಲಿ.

ಪಲ್ಲಿಲಿ ಬಡಗ;ಜೇಡ; ಹಲ್ಲಿಲ್ಲದವ;ಸೂರ್ಯ.

ಪಲ್ಲೆ (ಪಲ್ಲೆಯ); ತರಕಾರಿ, ಕಾಯಿಪಲ್ಯ.

ಪಲ್ವಲ (ಸಂ) ಹಳ್ಳ (ದ್ಭ); ಸಣ್ಣ ಸರೋವರ; ಕುಂಟೆ, ಕೆರೆ.

ಪವಡಿಸು ಮಲಗಿಸು; ಮಲಗು, ನಿದ್ದೆಮಾಡು.

ಪವಣ್ (ದ್ಭ) ಪ್ರಮಾಣ, (ಸಂ) ಅಳತೆ, ವಿಷ ಯ, ಸಂಗತಿ; ಪವಣಿ, ಶಕ್ತಿ.

— ಇಗೆ ಸೇರಿಕೆ, ಪೋಣಿಕೆ, ಹೊಂದಿಕೆ.

— ಇಸು ಸೇರಿಸು, ಜೋಡಿಸು, ಪೋಣಿಸು.

— ಸರಿ ನಿಶ್ಚಯ, ಪ್ರಮಾಣ.

ಪವನ ಗಾಳಿ, ವಾಯು; ಸಾರಣಿಗೆ, ಚಾಲನಿ, ಜರಡೆ; ನೀರು.

ಪವನಾಶನ ಗಾಳಿ ಆಹಾರವಾಗಿ ಉಳ್ಳುದು, ಸರ್ಪ, ನಾಗರಹಾವು, ಹಾವು.

ಪವನು ಪೌಂಡು ಎಂಬ ಚಿನ್ನದ ನಾಣ್ಯ, (ಸಾವರಿನ್).

ಪವಮಾನ ಶುದ್ಧ ಮಾಡುವವ; ವಾಯು.

ಪವಳ (ದ್ಭ) ಹವಳ, ಪ್ರವಾಳ (ಸಂ).

ಪವಾಡ (ದ್ಭ) ಪ್ರವಾದ (ಸಂ), ಅತಿಮಾನುಷ ಕೃತ್ಯ, ಚೋದ್ಯ.

ಪವಾಡಿ ಅತಿಮಾನುಷ ಕೃತಿಗಳನ್ನು ಮಾಡಿ ತೋರಿಸುವವ.

ಪವಿ ಇಂದ್ರನ ಆಯುಧ, ವಜ್ರ.

ಪವಿತ್ರ ನೀರು; ದರ್ಭೆ ಉಂಗುರ; ಜನಿವಾರ; ತುಲಸಿ; ಹಳದಿಬಣ್ಣ; ಶ್ರೇಷ್ಠ; ಪರಿಶುದ್ಧ.

ಪವುಳಿ (ಪೌಳಿ), ಆವಾರ, ಪಾಗಾರ.

ಪವ್ವನೆ (ಹವ್ವನೆ), ಆಕಸ್ಮಿಕವಾಗಿ, ಪಕ್ಕನೆ.

ಪಶ್ ಕಟ್ಟು; ಕಾಣು.

ಪಶು (ಹಸು), ಎಲ್ಲವನ್ನು ಒಂದೇ ವಿಧವಾಗಿ ಕಾಣುವುದು; ಕಟ್ಟಿ ಸಾಕುವ ಪ್ರಾಣಿ; ಮೃಗ; ದೇವತೆ; ಪ್ರಥಮ ಗಣ.

ಪಶುಕರ್ಮ ಪಶುಗಳ ರೀತಿಯ ವರ್ತನೆ; ಯಾಗ; ಪಶುಭೋಗ.

ಪಶುತುಂಡ ದನದ ಮುಖ.

ಪಶುಪತಿ ದೇವತೆಗಳ ಒಡೆಯ, ಇಂದ್ರ; ಗಣಗಳ ಒಡೆಯ ಶಿವ.

ಪಶುರಾಜ ಪ್ರಾಣಿಗಳ ಒಡೆಯ, ಸಿಂಹ.

ಪಶ್ಚಾತ್ ಕೊನೆಯ; ಬಿದ್ದಮೇಲೆ; ತರುವಾಯದ; ಚರಮ.

— ಕರಿಸು ಹಿಂದಿರುಗು, ಮರಳು.

— ತಾಪ ಕೆಲಸ ಮುಗಿದ ಮೇಲೆ ಪಡುವ ದುಃಖ; ವ್ಯಥೆ, ವಿಷಾದ.

ಪಶ್ಚಿಮ ಪಡು, ಪಡುವಣ ದಿಕ್ಕು.

—ಅಚಲ ಪಡುಬೆಟ್ಟ; ಸೂರ್ಯ ಮುಳು ಗುವ ಕಡೆಗಿರುವ ಪರ್ವತ.

—ಉತ್ತರ ವಾಯವ್ಯ; ಒಂದಕ್ಕೊಂದು ಸಂಬಂಧವಿಲ್ಲದ.

ಪಸ ಬಯಕೆ, ಆಸೆ.

ಪಸವನ (ದ್ಭ) ಪ್ರಸಾಧನ (ಸಂ), ತೊಡಿಗೆ, ಅಲಂಕಾರ, ವಸ್ತ್ರ ಒಡವೆ.

ಪಸರ ಹಸರ, ಪ್ರಸಾರ (ಸಂ), ಸಮೂಹ; ಅಂಗಡಿಗಳ ಸಮೂಹ (ಜಾತ್ರೆಯಲ್ಲಿ).

—ಇಸು ಪ್ರಸರಿಸು, ಹರಡು, ಹಬ್ಬು.

ಪಸರು ಹರಡು; ಹಸುರಾಗು; ಹುಲ್ಲು.

ಪಸಲೆ ಹಸಲೆ, ಹುಲ್ಲುಗಾವಲು, ಮೈದಾನು.

ಪಸಾದ (ಹಸಾದ), ಪ್ರಸಾದ (ಸಂ), ಅನುಗ್ರಹ; ಒಳ್ಳಿತು; ಹಾಗೇ ಆಗಲೆಂಬ ಮಾತು.

ಪಸಾಯ ಉಡುಗೊರೆ; ಬಹುಮಾನ; ಮೇ ಲಕ್ಕೆ ಕರೆಯುವುದು.

—ತ (ಪಸಾಯ್ತ) ಉಡುಗೆತೊಡುಗೆಗಳ ನ್ನು ಇಟ್ಟುಕೊಳ್ಳುವ ಅಧಿಕಾರಿ.

ಪಸಾರೆ ಹರಡಿ ಒಡ್ಡಿರುವ.

ಪಸಿ ಹಚ್ಚಗೆ, ಹಸುರಾಗಿ; ಒದ್ದೆ, ಹಸಿ, ನೀ ರುಳ್ಳದು; ಹಸಿವು.

ಪಸಿಯೊರಟು ಅಸಂಸ್ಕೃತ, ತಿದ್ದದ, ಒರಟ.

ಪಸಿವು ಹಸಿವು.

ಪಸು (ದ್ಭ) ಪಶು (ಸಂ), ಮೃಗ; ಆಕಳು; ಹಸುರು; ಎಳಮೆ; ಕೂಸು; ವಿಭಾಗಿಸು, ಕತ್ತರಿಸು; ಹಂಚು.

—ಗೆ ಹಸುಗೆ, ವಿಭಾಗ, ಪಾಲು; ಹಂಚಿಕೆ; ನ್ಯಾಯ; ಕ್ರಮ.

ಪಸುಬ ಹಸುರುಬಣ್ಣದಹಕ್ಕಿ; ಚಂಬುಕುಟಗ.

ಪಸುಬೆ (ಹಸಿಬೆ), ನಡುವೆ ಬಾಯಿರುವ ಒಂದು ವಿಧದ ಚೀಲ.

—ವಳ ಹಸುಬೆ ಚೀಲ ಹೊತ್ತು ತಿರುಗು ವವ; ಸಂಚಾರಿಯಾದ ವ್ಯಾಪಾರಿ; ವೈದಿಕ.

ಪಸುರ್ (ಹಸುರು), ಪಚ್ಚೆತನ; ಹಸಿತನ; ಎಳೆ ತನ.

—ಪು ಹಸುರುತನ, ಹಸುರುಬಣ್ಣ.

ಪಸುಳೆ (ಹಸುಳೆ), ಮಗು, ಶಿಶು, ಅರ್ಭಕ.

—ತನ ಎಳೆತನ, ಮಕ್ಕಳಾಟಿಕೆ.

ಪಸೆ ಹಸೆ, ಹಾಸುಗೆ, ಚಾಪೆ; ಪದರು; ಹುರು ಳಿಲ್ಲದ ಮಾತು; ನೀರಿನ ಅಂಶ, ತೇವ.

—ಗೆಯ್ ಚಾಪೆಯನ್ನು ಸೇರು; ಚಾಪೆ ತಯಾರಿಸು, ಚಾಪೆ ಹೆಣೆ.

—ನಿಲ್ ಒಂದೇ ಹಸೆಯ ಮೇಲೆ ನಿಲ್ಲು, ವಿವಾಹವಾಗು; ತೇವ ಉಳಿ.

ಪಹರೆ ಕಾವಲು; ಮೂರು ಜಾವದ ಕಾವಲು.

ಪಳ (ಫಲ).

ಪಳಕ ಮಿನುಗು, ಹೊಳೆವು.

—ಇಸು ಹೊಳೆ, ಮಿನುಗು.

—ನೆ ಹೊಳೆಯುತ್ತ, ಬೆಳಗುತ್ತ.

ಪಳಕು ಹಳುಕು; ಸ್ಫಟಿಕ.

ಪಳಗು ಸಾಧುವಾಗು; ಪಳಗಿಸು; ಸಾಧು ಮಾಡು, ಈಲುಮಾಡು.

ಪಳಚು (ಪಳಂಚು), ತಾಗು, ಜಡಿ, ಸಂಘ ಟಿಸು; ಸೇರು; ವಿರೋಧಭಾವ ತಾಳು; ತೊಂದರೆ, ಅಡ್ಡಿ.

ಪಳದಿ ಹಳದಿ, ಅರಸಿನ ಬಣ್ಣ.

ಪಳದ್ಯ (ಪಳದೆ), ಕಾಯಿಹುಳಿ, ಮಜ್ಜಿಗೆಹುಳಿ.

ಪಳವ (ದ್ಭ) ಪ್ರಲಾಪ (ಸಂ), ಅಳು.

ಪಳವಗೆ ಹಳೆಯ ಹಗೆ.

ಪಳವಾತು ಹಳೆಯ ಮಾತು; ವೇದ.

ಪಳವಿಗೆ ಬಾವುಟ, ಪತಾಕೆ.

ಪಳಮಂಜರಿ (ಪಟಮಂಜರಿ), ಒಂದು ರಾಗಿಣಿ.

ಪಳಯಿಗೆ (ಹಳವಿಗೆ), ಪತಾಕೆ, ಕೇತನ, ಪಟ, ಬಾವುಟ.

ಪಳಸು ಹಳಸು, ಹಳತಾಗು; ರುಚಿಗೆಡು.

ಪಳಹ ಪಟಹ; ಒಂದು ಡೋಲು, ತಂಬಟೆ.

ಪಳಹರ ಒಂದು ಬಗೆಯ ಬೇಟೆ.
ಪಳಂಕು ಒತ್ತಿಹಿಡಿ; ತಾಟು, ತಾಡು.
ಪಳಂಚು ತಾಗುವಿಕೆ, ಬಡಿಯುಕೆ; ಬಡಿ.
ಪಳಾರ ಫಲಾಹಾರ; ಅಲ್ಪತಿಂಡಿ, ಉಪಾಹಾರ.
ಪಳಾಳ ಕುಹಕ, ವಂಚನೆ.
ಪಳಿ ನಾಯನ್ನು ಅಟ್ಟುವುದು; ನಿಂದೆ; ವಸ್ತ್ರ; ಪಡಿ, ಪ್ರತಿ.
—ವ ಹಾಸ್ಯಮಾಡುವವ.
— ವು (ಹಳಿವು), ನಿಂದೆ, ದೂರು.
ಪಳಿಕ (ಧ್ಭ) ಸ್ಫಟಿಕ (ಧ್ಭ), ಒಂದು ಜಾತಿಯ ಶುಭ್ರಶಿಲೆ.
ಪಳಿವಾವುಗೆ (ಧ್ಭ) ಪ್ರತಿಪಾದುಕಾ (ಸಂ), ಪಾದರಕ್ಷೆ, ಹಾವುಗೆ, ಕಟ್ಟಿಗೆಯ ಮೆಟ್ಟು.
ಪಳಿಹತ್ತ (ಧ್ಭ) ಪ್ರತಿಹಸ್ತ (ಸಂ), ಪ್ರತಿನಿಧಿ.
ಪಳು ಹಳು, ದಟ್ಟನಾದ ಪೊದೆಗಳ ಗುಂಪು; ಕಾಡು, ಅರಣ್ಯ; ಪಡುವಣ.
—ವಳಿ ಅರಣ್ಯಪ್ರದೇಶ.
ಪಳುವ ಕಾಡ್ಗಿಚ್ಚು.
ಪಳುಂಕು (ಪಳುಕು), ನೂಕು.
ಪಳೆ ಹಳೆಯ.
—ನೆರೆಯ ಬಲು ಹಳೆದಾಗಿ ತಲೆ ನರೆತ; ಬಹು ಪುರಾತನ, ಹಳಲಿ; ದಿನಹೋದ.
ಪಳ್ಕೆ(ಪಕ್ಕೆ),ಶಯನ; ಹಾಸಿಗೆ; ಮಲಗುವಿಕೆ.
ಪಳ್ಗಿ ಹಣ್ಣಿಗೆ ಹಾಕಿದ ಕಾಯಿ; ಮಾಗಲು ಉಬ್ಬಿಗಿಟ್ಟ ಕಾಯಿ.
ಪಳ್ಚನೆ ವಿಶದವಾಗಿ, ಸ್ಪಷ್ಟವಾಗಿ.
ಪಳ್ಳ ಹಳ್ಳ; ಪಲ್ವಲ.
ಪಳ್ಳನೆ ಬೇಗ.
ಪಳ್ಳಿ (ಹಳ್ಳಿ), ಗ್ರಾಮ.
ಪಂಕ ಕೆಸರು; ಪಾಪ; ಪಕ್ಕ.
ಪಂಕಜಗರ್ಭ ತಾವರೆಯಲ್ಲಿ ಜನಿಸಿದವ, ಬ್ರಹ್ಮ.
ಪಂಕಿಲ ಕೆಸರುಳ್ಳ ಪ್ರದೇಶ.
ಪಂಕೇಜ ಪಂಕೇರುಹ, ಕೆಸರಲ್ಲಿ ಹುಟ್ಟಿದುದು, ತಾವರೆ.
ಪಂಕ್ತಿ ಪಂತಿ (ಧ್ಭ) ಪಙ್ತಿ (ಸಂ), ಒಂದೇ ಜಾತಿಯ ಪದಾರ್ಥಗಳ ಸಾಲು; ಸಾಲು; ಚರಣ; ಭೂಮಿ; ಗೌರವ; ಪ್ರಪಂಚ; ಹತ್ತು ಎಂಬ ಸಂಖ್ಯೆ; ಬೆಳದಿಂಗಳೂಟ.
ಪಂಕ್ತಿದೋಷಕ ಬ್ರಾಹ್ಮಣರ ಪಂಕ್ತಿಯಲ್ಲಿ ಕುಳ್ಳಿರಲಿಕ್ಕೆ ಅಯೋಗ್ಯ; ದುಷ್ಟ; ಧೂರ್ತ.
ಪಂಕ್ತಿಭೇದ ಅತಿಥಿಗಳನ್ನು ನೋಡುವುದರಲ್ಲಿ ತೋರುವ ಭೇದಭಾವ, ಪಂಕ್ತಿಯಲ್ಲಿ ಪರಪಂತಿ ಮಾಡುವಿಕೆ.
ಪಂಕ್ತಿರಥ ದಶರಥ.
ಪಂಙ್ತಿ (ಪಂಕ್ತಿ).
ಪಂಗ ಕವಲು, ಕವರು.
ಪಂಗಡ ಗುಂಪು, ವರ್ಗ; ರಾಶಿ.
ಪಂಗು ಗತಿಹೀನ; ನಡೆಯಲಾರದವ, ಕುಂಟ; ಶನೈಶ್ಚರ; ಹಂಗು, ಮೊದಲು ಪಡೆದ ಸಹಾಯಕ್ಕಾಗಿ ಮನಸ್ಸಿನ ಸಂಕೋಚ.
ಪಂಚ ಅಪೂರ್ವ; ಐದು; ಐವರು ಕೂಡಿದ ನ್ಯಾಯತೀರ್ಮಾನದ ಸಭೆ; ಹರಡುವ; ಅಗಲವಾದ.
— ಕ ಐದು ಭಾಗವುಳ್ಳದು; ಧನಿಷ್ಠೆಯಿಂದ ಐದು ನಕ್ಷತ್ರಗಳು; ಯುದ್ಧಭೂಮಿ.
ಪಂಚಕಚ್ಚೆ (ಪಂಚಕಾಸೆ), ಐದು ನೆರಿಗೆಹಾಕಿ ಉಟ್ಟ ಧೋತ್ರ.
ಪಂಚಕಜ್ಜಾಯ ಅವಲಕ್ಕಿ, ಬೆಲ್ಲ, ಕಾಯಿ, ತುಪ್ಪ, ಎಳ್ಳು—ಈ ಐದು ಸೇರಿ ಆದ ಕಜ್ಜಾಯ.
ಪಂಚಕಲ್ಯಾಣ ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ, ನಿರ್ಯಾಣ—ಈ ಐದು ಶುಭಗಳು.
ಪಂಚಕೋಣ ಐದು ಮೂಲೆಯುಳ್ಳ ಆಕೃತಿ.

**ಪಂಚಕ್ಲೇಶ** ಅವಶ್ಯ, ಆಕಸ್ಮಿತ, ರಾಗ,ದ್ವೇಷ, ಅಭಿನಿವೇಶ— ಈ ಐದು ದುಃಖಗಳು.

**ಪಂಚಗವ್ಯ** ಹಸುವಿನಿಂದ ಹುಟ್ಟಿದ ಹಾಲು, ತುಪ್ಪ ಮೊದಲಾದ ಐದು ವಸ್ತುಗಳನ್ನು ಸೇರಿಸಿ ಮಾಡುವ ಒಂದು ಪಾನಕ.

**ಪಂಚಗೌಳ** (ಪಂಚಗೌಡ), ಬಂಗಾಳ, ಸಾರಸ್ವತ, ಕನ್ಯಾಕುಬ್ಜ, ಗೌಡ, ಉತ್ಕಲ, ಮೈಥಿಲ— ಈ ಐದು ದೇಶಗಳು.

**ಪಂಚತಂತ್ರ** ವಿಷ್ಣುಶರ್ಮನೆಂಬ ಬ್ರಾಹ್ಮಣನು ಬರೆದ ಕಥಾವಳಿ. ಈ ಕಥೆಗಳಲ್ಲಿ ಪ್ರಾಣಿಗಳೇ ಮುಖ್ಯ ಪಾತ್ರಗಳಾಗಿದ್ದು, ಅವು ರಾಜನೀತಿಯ—ಸಾಮ, ದಾನ, ಭೇದ, ದಂಡ, ನೀತಿಗಳನ್ನು ಹೇಳುತ್ತವೆ.

**ಪಂಚದಶ** ಪೂರ್ಣಿಮೆ; ಹದಿನೈದು; ಹದಿನೈದನೆಯ.

**ಪಂಚದ್ರಾವಿಡ** ಕರ್ನಾಟ, ಗುರ್ಜರ, ಮಹಾರಾಷ್ಟ್ರ, ತಮಿಳ, ತೈಲಂಗ— ಈ ಐದು ದೇಶದ ಬ್ರಾಹ್ಮಣರು; ತೆಲುಗು, ತಮಿಳು, ಕನ್ನಡ, ಮಲಯಾಳ, ತುಳು— ಐದು ದ್ರಾವಿಡ ಭಾಷೆಗಳು.

**ಪಂಚಧಾರೆ** ಕುದುರೆಯ ಐದು ಬಗೆಯ ನಡಿಗೆಗಳು— ಆಸ್ಕಂದಿತ, ರೇಂಚಿತ, ಧೋರಿತ, ವಲ್ಗಿತ, ಪ್ಲುತ ಎಂದು.

**ಪಂಚಪಾಂಡವ** ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಐದು ಮಂದಿ ಪಾಂಡುವಿನ ಮಕ್ಕಳು.

**ಪಂಚಪಾತ್ರೆ** ಅಗಲಬಾಯಿ ಪಾತ್ರೆ, ಸೌಟು ಮೊದಲಾದುವು; ತೀರ್ಥದ ಬಟ್ಟಲು.

**ಪಂಚಪ್ರಾಣ** ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ—ಎಂಬ ಐದು.

**ಪಂಚಬಾಣ** ಕಾಮ; ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ— ಎಂಬ ಐದು ಹೂಗಳು.

**ಪಂಚಭೂತ** ನೆಲ, ನೀರು, ಬೆಂಕಿ, ವಾಯು, ಆಕಾಶ— ಐದು ತತ್ವಗಳು.

**ಪಂಚಮ** ಐದನೆಯ; ಶೂದ್ರ, ಚಾಂಡಾಲ; ಕೋಗಿಲೆಯ ಸ್ವರ; ಚತುರ.

**ಪಂಚಮಹಾಪಾತಕ** ಬ್ರಹ್ಮಹತ್ಯೆ, ಸುರಾಪಾನ, ಗುರುಪತ್ನೀ ಗಮನ, ಸ್ವರ್ಣಸ್ತೇಯ ಮತ್ತು ಇಂಥ ಪಾಪಿಗಳ ಸಂಪರ್ಕ ಮಾಡುವುದು - ಈ ಐದು ದೋಷಗಳು.

**ಪಂಚಮಿ** ಐದನೆಯ ತಿಥಿ;ಚತುರಂಗದ ಮಣೆ.

**ಪಂಚಮುಖ** ತತ್ಪುರುಷ, ಸದ್ಯೋಜಾತ, ಅಘೋರ, ವಾಮದೇವ, ಈಶಾನವೆಂಬ ಐದು ಮುಖಗಳುಳ್ಳವ, ಶಿವ.

**ಪಂಚಯಜ್ಞ** ದೇವರಿಗೆ, ಬ್ರಾಹ್ಮಣರಿಗೆ, ಭೂತಗಳಿಗೆ, ಮನುಷ್ಯರಿಗೆ, ಪಿತೃಗಳಿಗೆ— ಹೀಗೆ ಐವರಿಗೆ ಮಾಡುವ ಸತ್ಕಾರ.

**ಪಂಚರಾತ್ರ** ವೈಷ್ಣವರ ಒಂದು ಆಗಮಶಾಸ್ತ್ರ; ಭಾಸ ಕವಿ ಬರೆದ ಒಂದು ನಾಟಕ.

**ಪಂಚಲೋಹ** ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ತವರ, ಇಲ್ಲವೆ ಸೀಸ; ಇವುಗಳ ಮಿಶ್ರಲೋಹ

**ಪಂಚವಟಿ** ಐದು ಆಲದ ಮರಗಳಿರುವ ಒಂದು ಕಾಡು; ನಾಸಿಕದ ಪ್ರಾಂತದಲ್ಲಿದ್ದ ಒಂದು ವನಪ್ರದೇಶ. ಇದೇ ಸ್ಥಳದಲ್ಲಿ ಲಕ್ಷ್ಮಣನು ಶೂರ್ಪನಖಿಯ ಮೂಗನ್ನು ಕತ್ತರಿಸಿದನೆಂದು ಕಥೆ.

**ಪಂಚವರ್ಣ** ಬಿಳುಪು, ಕಪ್ಪು, ಕೆಂಪು, ಹಳದಿ, ಹಸುರು—ಈ ಐದು ಬಣ್ಣಗಳು.

**ಪಂಚವಾದ್ಯ** ಭೇರಿ, ಶಂಖ, ಕಹಳೆ, ಘಂಟೆ, ವೀಣೆ—ಈ ಐದು ವಾದ್ಯಗಳು.

**ಪಂಚವಿಷಯ** ರೂಪ, ರಸ, ಗಂಧ, ಸ್ಪರ್ಶ, ಶಬ್ದ.

**ಪಂಚಶರ** (ಪಂಚ ಸರ), ಕಾಮ.

**ಪಂಚಾಕ್ಷರಿ** 'ನಮಃ ಶಿವಾಯ' ಎಂಬ ಐದು ಅಕ್ಷರವುಳ್ಳ ಮಂತ್ರ.

**ಪಂಚಾನನ** ಐಮೊಗ; ಶಿವ; ಸಿಂಹ.

**ಪಂಚಾಮೃತ** ಹಾಲು, ತುಪ್ಪ, ಮೊಸರು, ಜೇನು, ಸಕ್ಕರೆ—ಈ ಐದು ಸಿಹಿ ಪದಾರ್ಥಗಳ ಸೇರಿಕೆಯ ವಸ್ತು.

**ಪಂಚಾಯಿತ**(ಪಂಚರು), ನ್ಯಾಯ ತೀರ್ಮಾನಕ್ಕೆ ಸೇರುವ ಐವರ ಕೂಟ.

**ಪಂಚಾಯಿತಿ** (ಪಂಚಾಯತಿಕೆ) ಐವರು ಕೂಡಿ ಮಾಡುವ ತೀರ್ಮಾನ.

**ಪಂಚಾಲ** ಇಂದ್ರಪ್ರಸ್ಥದ ಪೂರ್ವಕ್ಕಿರುವ ಒಂದು ದೇಶ. ದ್ರುಪದನು ಈ ದೇಶಕ್ಕೆ ಅರಸನಾಗಿದ್ದನು; ಅಕ್ಕಸಾಲಿಗ.

**ಪಂಚಾಂಗ** ತಳಹದಿ, ಪಾಯ; ವಾರ, ತಿಥಿ, ನಕ್ಷತ್ರ, ಕರಣಗಳನ್ನು ಹೇಳುವ ಗಣಿತ.

**ಪಂಚು** ಹಂಚುವಿಕೆ; ಅಸಮವಾದ ಹಂಚಿಕೆ.

**ಪಂಚೆ** ವೇಷ್ಟಿ, ಧೋತ್ರ; ಉಡುವ ಒಲ್ಲಿ.

**ಪಂಚೇರು** (ಪಂಥೇರು) ಐದು ಸೇರು.

**ಪಂಚೇಂದ್ರಿಯ** ಕಣ್ಣು, ಕಿವಿ, ನಾಲಗೆ, ಮೂಗು, ತ್ವಕ್ಕು—ಈ ಐದು ಅಂಗಗಳು.

**ಪಂಚೋಪಚಾರ** ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ–ಇವುಗಳನ್ನು ಸಲಿಸುವಿಕೆ.

**ಪಂಜ** ಮುಸಲ್ಮಾನರ ಐವರು ಖಲೀಫರನ್ನು ತೋರಿಸುವ ಐದು ಬೆರಳಿನ ಒಂದು ಸಂಕೇತ; ಪ್ರಾಣಿಗಳ ಮುಷ್ಟಿ, ಚೋಟು.

**ಪಂಜರ** ಪ್ರಾಣಿಗಳ ಬೋನು; ಮೃಗ, ಪಕ್ಷಿಗಳನ್ನು ಸಾಕುವ ಗೂಡು; ಅಸ್ತಿಯ ಗೂಡು; ಪಂಜ.

**ಪಂಜಾಬು** ಐದು ನದಿಗಳು ಹರಿಯುವ ವಾಯವ್ಯ ಹಿಂದುಸ್ಥಾನದ ಭಾಗ.

**ಪಂಜಾರ** ಪನಿವಾರ, ಪನಿಯಾರ, ಸಿಹಿ ತಿಂಡಿ.

**ಪಂಜಿಕೆ** ಹಂಜಿ; ನೂಲುಂಡೆ; ಪಂಚಾಂಗ.

**ಪಂಜು** ದೀವಟಗೆ,ಹಿಲಾಲು,ದೊಂದಿ,ಸೂಡಿ.

**ಪಂಜುಕಳ್ಳ** ಪಂಜುಗಳನ್ನು ಹೊತ್ತಿಸಿಕೊಂಡುಬರುವ ಕಳ್ಳ.

**ಪಂಜೆ** ಪಂಜ; ಪ್ರಾಣಿಗಳ ಪಂಜರ, ಚೋಟು; ತೆರೆದ ಕೈ; ಲೋಹದ ಹಸ್ತ; ಬೇಡುವವ.

—**ತನ** ಬೇಡಿಕೆ, ತಿರುಪೆ.

**ಪಂಟಿ** ಊಟ; ಲಾಗ.

**ಪಂಟಿಸು** ಉರುಟಸು; ಸಿಡಿ; ತಲೆಕೆಳಗಾಗು; ನೆಲದ ಮೇಲೆ ಹೊರಳು; ಸುತ್ತುವರಿ.

**ಪಂಟುಬಡಿ** ಇಲ್ಲದ ಉಸಾಬರಿ ತೋರು.

**ಪಂಡ** ಕ್ಷೇತ್ರಗಳ ಪುರೋಹಿತ, ತಿಳುವು.

—**ಕ** ನಪುಂಸಕ.

**ಪಂಡಿತ** ಸಿದ್ಧಾಂತರೂಪದ ಬುದ್ಧಿಯುಳ್ಳವ; ವಿದ್ವಾಂಸ, ಚತುರ; ಶಾಸ್ತ್ರಪಾರಂಗತ.

**ಪಂತ** (ದ್ಭ) ಪಣಿತ (ಸಂ), ಸ್ಪರ್ಧೆ, ಜಿದ್ದು, ಪಂದ್ಯಾಟ; ಜೂಜು; ಪಂಡಿತ.

—**ಕಟ್ಟು** ಜೂಜು ಇಡು, ಹಟವಿಡು, ಸ್ಪರ್ಧಿಸು.

—**ಗಾರ** ಸ್ಪರ್ಧಿ; ಜೂಜುಗಾರ.

**ಪಂತಿ** (ಹಂತಿ) ಪಙ್ಕ್ತಿ (ಸಂ), ಸಾಲು, ಶ್ರೇಣಿ.

**ಪಂತುವರಾಳಿ** ಒಂದು ರಾಗ.

**ಪಂಥ** ಹಂತ (ದ್ಭ), ಮಾರ್ಗ, ಬಟ್ಟೆ.

**ಪಂದ** (ದ್ಭ)ಸ್ಪಂದ(ಸಂ),ನಡುಗುವಿಕೆ,ಕಂಪನ

**ಪಂದರ್**(ಪಂದರು),ಹಂದರ,ಚಪ್ಪರ;ಕುಂದ.

**ಪಂದಲ್** ಪಂದರು.

**ಪಂದಲೆ** ಆಗ ತಾನೆ ಕತ್ತರಿಸಿದ ತಲೆ, ಹಸಿತಲೆ.

**ಪಂದಿ** ಹಂದಿ, ಹೆಣ್ಣು ಸೂಕರ.

**ಪಂದಿತಲೆ** ಕೋಟೆ ಲಗ್ಗೆ ಹತ್ತುವವರ ಮೇಲೆ ಉರುಳಿಸುವ ಒಂದು ಆಯುಧ.

**ಪಂದೆ** ಹಂದೆ, ಹೇಡಿ, ಪುಕ್ಕ, ಧೈರ್ಯವಿಲ್ಲದವ; ದಡಿಗ; ಮೈತುಂಬಿದವ.

**ಪಂದ್ಯ** ದ್ಯೂತ, ಜೂಜು; ಸ್ಪರ್ಧೆ.

**ಪಂಪ** 'ಭಾರತ'ವನ್ನು ಬರೆದ ಒಬ್ಬ ಕನ್ನಡಕವಿ.

**ಪಂಪಾ** ಆನೆಗುಂದಿಯ ಬಳಿ ಒಂದು ನದಿ; ಅಲ್ಲಿನ ಒಂದು ಸರೋವರ. ಇಲ್ಲಿಯೇ ರಾಮ ಸುಗ್ರೀವರ ಸಖ್ಯವಾಯಿತು.

ಪಂಪಾಕ್ಷೇತ್ರ ಹಂಪಿಕ್ಷೇತ್ರ, ಪಂಪಾಸರಸ್ಸಿನ ಬಳಿಯ ಕ್ಷೇತ್ರ.
ಪಂಬಲು (ಹಂಬಲ್), ಆಸೆ; ಚಿಂತೆ; ನಿರೀಕ್ಷೆ.
—ಇಸು ಆಸೆಮಾಡು, ಚಿಂತಿಸು; ನಿರೀಕ್ಷಿಸು, ಆತುರದಿಂದ ಬಯಸು.
ಪಂಸೆ (ಹಂಸೆ).
ಪಾಕ ಅಡುಗೆ; ಜೀರ್ಣವಾಗುವುದು; ಬೆಂದಿರುವಿಕೆ; ಬೆಂದುದು; ಪರಿಣಾಮ; ಇಂದ್ರನಿಂದ ಸಂಹೃತನಾದ ಒಬ್ಬ ದೈತ್ಯ; ಎಳೆಗರು.
ಪಾಕಜ ಕಾಚಲವಣ ಎಂಬ ಉಪ್ಪು.
ಪಾಕಿನ ಬೇಯಿಸಿ ಆದುದು.
ಪಾಕೀಟು ಚೀಲ, ಹಣವಿಡುವ ಚೀಲ, ಲಕ್ಕೋಟೆ.
ಪಾಕು ಕೊಂಡಾಟದ ಮಾತು; ಪಾಗು, ಪಗಡಿ.
ಪಾಕ್ಷಿಕ ಪಕ್ಷಕ್ಕೆ ಸಂಬಂಧಿಸಿದುದು; ಪಕ್ಷಕ್ಕೆ ಒಮ್ಮೆ ದೊರೆಯುವುದು.
ಪಾಖಂಡ (ಪಾಷಂಡ), ಬೇರೆ ಮತಧರ್ಮದವ
ಪಾಗ (ನೋಡು: ಹಾಗ).
ಪಾಗಾರ (ದ್ಭ) ಪ್ರಾಕಾರ (ಸಂ), ಸಾಗಲ, ಗೋಡೆ, ಪೌಳಿ.
ಪಾಗು ಒಂದು ಬಗೆಯ ರುಮಾಲೆ, ಪಗಡಿ.
ಪಾಗುಡ (ದ್ಭ) ಪ್ರಾಭೃತ (ಸಂ), ಉಡುಗೊರೆಯಾಗಿ ಕೊಟ್ಟ.
ಪಾಚಕ ಬೇಯಿಸುವವ; ಅಗ್ನಿ; ಅಡುಗೆಯವ; ಜೀರ್ಣಕಾರಿಯಾದುದು; ಪಿತ್ಥ ಧಾತು.
ಪಾಚನ ಪ್ರಾಯಶ್ಚಿತ್ತ; ಅಗ್ನಿ; ಹುಳಿ; ಕೆಂಪು ಹರಳು; ಜೀರ್ಣ, ಅರಗುವಿಕೆ.
ಪಾಚಿ ನೀರಿನಲ್ಲಿ ಬೆಳೆಯುವ ಗಿಡ, ಹಾವಸೆ; ಅಂತರಗಂಗೆ; ಪಗಡೆ.
ಪಾಚಿಸು ಅಡುಗೆಮಾಡು; ಬೇಯಿಸು, ಕೊಚ್ಚು
ಪಾಜಿ ನೀಚ, ಕ್ಷುದ್ರ ವ್ಯಕ್ತಿ.
ಪಾಟ ಗಾಯನ; ಹಾಡು; ವಿಸ್ತಾರ.
ಪಾಟಚ್ಚರ ಚೋರ, ಕಳ್ಳ.
ಪಾಟನ ಸೀಳುವುದು.
ಪಾಟಲ ಗುಲಾಬಿ ಬಣ್ಣ; ಸಾದರಿ ಹೂ; ಗುಲಾಬಿ ಹೂ.
ಪಾಟಲಿ ಸಾದರಿಗಿಡ; ಗುಲಾಲಿ ಬಣ್ಣದ ಗಾಜಿನ ಬಳೆ, ಕಾಜಿನ ಬಳೆ.
ಪಾಟಲಿಪುತ್ರ ಮಗಧ ದೇಶದ ರಾಜಧಾನಿ, ಈಗಿನ ಪಾಟ್ನಾ.
ಪಾಟವ ಪಟುತನ, ಕ್ರಿಯಾಕೌಶಲ, ಚಟುವಟಿಕೆ.
ಪಾಟಿ ಕ್ರಮ; ಆಕಾರ; ಸೊಗಸು; ಸಮರ್ಪಕವಾದ ರೀತಿ; ಅಡ್ಡಿ, ವಿರೋಧ; ಬರೆವ ಹಲಗೆ.
ಪಾಟಿತ ಒಡೆದ; ಹೆಕ್ಕಿದ, ಆಯ್ದ.
ಪಾಟಿಸು ಉಪಚರಿಸು; ಓದಿಸು, ಕಲಿಸು.
ಪಾಟು ಬೀಳುವೆ, ಬೀಳುವಿಕೆ; ಇಳಿತ; ಪಡುವಿಕೆ, ಅನುಭವ; ಇರುವ ರೀತಿ; ಹಿಡಿವಿಕೆ; ನೆರೆ ಇಡುವಿಕೆ; ಗೋಣಿ ತಟ್ಟು.
ಪಾಠ ಅಕ್ಷರಗಳನ್ನು ಉಚ್ಚರಿಸುವುದು; ಗುರುಮುಖದಿಂದ ಕಲಿಯುವುದು; ಅಭ್ಯಾಸ; ಯಜ್ಞ.
—ಕ ಹೇಳುವವ; ಅರಸನನ್ನು ಹೊಗಳುವವ, ಭಟ್ಟಂಗಿ, ಹೊಗಳುಭಟ್ಟ.
—ಶಾಲೆ ವಿದ್ಯೆ ಕಲಿಸುವ ಸ್ಥಾನ.
ಪಾಠಾಂತರ ಬೇರೆ ರೀತಿಯ ಓದು; ಒಂದು ಗ್ರಂಥದ ಭಾಗಗಳಲ್ಲಿ ಇನ್ನೊಂದು ಬಗೆ ಪದಸರಣಿ.
ಪಾಡ್ (ಪಾಡು), ಹಾಡು.
ಪಾಡ (ಹಾಡ), ಸ್ಥಳ; ಸಂದರ್ಭ; ಚೌಕಟ್ಟು.
ಪಾಡಗ (ದ್ಭ) ಪಾದಕಟಕ (ಸಂ), ಕಾಲುಬಳೆ, ಅಂದುಗೆ; ತೇಗದ ಮರ; ಒಂದು ಮರ.
ಪಾಡಿ (ಹಾಡಿ), ಗ್ರಾಮ; ಸೈನ್ಯ; ಚಿಕ್ಕ ಸಸ್ಯಗಳ ಕಾಡು.
ಪಾಡಿವ ಪಾಡ್ಯ (ಸಂ), ಪಕ್ಷದ ಮೊದಲ ದಿನ.
ಪಾಡು (ಪಾಡ್), ಅವಸ್ಥೆ, ಕಷ್ಟ; ರೀತಿ, ಪದ್ಯ;

ಉತ್ಸಾಹ; ಸ್ಥಿತಿ; ಹಾಡು, ಗಾನಮಾಡು; ಹೋಲುವೆ.
ಪಾಡ್ಯ ಪಕ್ಷದ ಮೊದಲನೆ ದಿನ.
—ಮಿ (ಪಾಡ್ಯ), ಪ್ರಥಮಿ.
ಪಾಣಿ ಕರ, ಹಸ್ತ; ಕೈಯಲ್ಲಿ ಹಿಡಿದಿರುವ.
ಪಾಣಿಗ್ರಹಣ ಕೈಹಿಡಿಯುವಿಕೆ, ಮದುವೆ; ವಿವಾಹ; ಮದುವೆಯಲ್ಲಿ ಕೈಹಿಡಿಯುವುದು
ಪಾಣಿನಿ ಸಂಸ್ಕೃತ ಭಾಷೆಗೆ ಹೆಸರಾದ ವ್ಯಾಕರಣವನ್ನು ಈತನು ಬರೆದನು. ಈತನು ದಕ್ಷೆ ಎಂಬವಳ ಮಗನು.
ಪಾಣ್ಬ ಸಿತಗ, ಜಾರ, ವ್ಯಭಿಚಾರಿ, ಘಟಿಂಗ.
ಪಾಣ್ಬೆ ಜಾರೆ, ಹಾದರಗಿತ್ತಿ, ಮಿಂಡಿ.
ಪಾತ ಬೀಳುವುದು; ರಕ್ಷಿಸಲ್ಪಟ್ಟ; ರಾಹುಗ್ರಹ.
—ಕ ಪಾಪ; ಪಾಪ ಹುಟ್ಟಿಸುವ ಕೃತಿ; ಬೀಳುವಿಕೆ.
—ಕಿ ಪಾಪಿ.
ಪಾತರ (ದ್ಭ) ಪಾತ್ರ (ಸಂ).
ಪಾತರಗಿತ್ತಿ ಪತಂಗ; ಹಾದರಗಿತ್ತಿ, ಸೂಳೆ.
ಪಾತಾಲ (ಪಾತಾಳ), ಭೂಮಿಯ ಕೆಳಗಿನ ಲೋಕ, ಲಗ್ನಕ್ಕೆ ನಾಲ್ಕನೆ ರಾಶಿ.
ಪಾತಾಳ (ಪಾತಾಲ).
—ಗರುಡ ಬಾವಿಯ ಆಳಕ್ಕೆ ಬಿದ್ದ ಕೊಡ ಮೊದಲಾದುವನ್ನು ಎತ್ತುವ ಒಂದು ಸಾಧನ; ಒಂದು ದ್ರವ್ಯ.
ಪಾತಾಳಗಂಗೆ ಬಯಲಿನ ಗಂಗಾನದಿ.
ಪಾತಿ ನೀರಿನ ದಂಡೆ; ಗಿಡಮರಗಳ ಸುತ್ತಲಿನ ನೀರದಂಡೆ, ಮಡಿ; ಏಂ; ದೋಣಿ.
ಪಾತಿವ್ರತ್ಯ ಪತಿಗೆ ವಿನಯದಿಂದ, ವಿಧೇಯಳಾಗಿ ವರ್ತಿಸುವುದು.
ಪಾತ್ರ ವಸ್ತುಗಳನ್ನು ಹಿಡಿಯುವ ಸಲಕರಣೆ; ದಾನಯೋಗ್ಯ; ನದಿ ಹರಿಯುವ ಸ್ಥಾನ, ನದಿ ಒಡಲು; ನಾಟಕದಲ್ಲಿ ನಾಯಕ ಮೊದಲಾದ ವೇಷಧಾರಿ.
—ತೆ ಹಿಡಿತ; ಯೋಗ್ಯತೆ.
ಪಾತ್ರೀಯ ಯೋಗ್ಯವಾದುದು, ಯೋಗ್ಯ; ಯಜ್ಞದ್ರವ್ಯ.
ಪಾದ ಚಲನೆಗೆ ಬೇಕಾದುದು, ಕಾಲು, ಕಾಲಡಿ; ನಾಲ್ಕನೆಯ ಒಂದಂಶ; ಬೇರು; ಪದ್ಯಧ ಒಂದು ಸಾಲು.
ಪಾದಕಟಕ ಪಾಡಗ, ಅಂದುಗೆ, ಪೈಜಣಿ.
ಪಾದಚಾರಿ ಕಾಲುಗಳಿಂದ ಚಲಿಸುವವ; ಕಾಲಾಳು, ಪದಾತಿ.
ಪಾದತಲ ಹಿಂಗಾಲು; ಅಂಗಾಲು; ಹಿಮ್ಮಡಿ.
ಪಾದಪ ಮನೆ; ಕಾಲಟ್ಟ, ಗಡಗಂಚಿ, ಕಾಲ್ಮಣೆ; ಬೇರಿಂದ ಕುಡಿಯುವುದು, ಮರ.
ಪಾದಪಟ್ಟೆ ಕಾಲಿಗೆ ಹಾಕುವ ಬಿರುದಿನ ಸರಿಗೆ.
ಪಾದಪದ್ಮ ತಾವರೆಯಂತೆ ಚೆಲುವಾದ ಪಾದ.
ಪಾದಪೂಜೆ ಗುರುಗಳಿಗೆ ಅರ್ಪಿಸುವ ಒಂದು ಪೂಜೆ.
ಪಾದಪೂರಣೆ ಪದ್ಯದಲ್ಲಿ ಚರಣಗಳ ಭರತಿಗಾಗಿ ಸೇರಿಸುವ ಮೇಣ್, ಉರೆ ಇತ್ಯಾದಿ ಪದಗಳು.
ಪಾದಮೂಲ ಹಿಂಗಾಲು.
ಪಾದಯುಗ್ಮ ಎರಡು ಕಾಲುಗಳು.
ಪಾದರ (ಹಾದರ), ವ್ಯಭಿಚಾರ, ಘಟಿಂಗತನ.
ಪಾದರಕ್ಷೆ ಮೆಟ್ಟು, ಕೆರ, ಕಾಲ್ಮುರಿ, ಮಚ್ಚೆ.
ಪಾದರಸ ದ್ರವರೂಪದ ಒಂದು ಲೋಹ.
ಪಾದರಿ ಒಂದು ಗಿಡ, ಹಾದರಿ, ಮಿಂಡಿ, ಜಾರಿಣಿ; ಪಾದ್ರಿ, ಕ್ರೈಸ್ತ ಗುರು.
—ಗ ಹಾದರಿಗ, ಸಿತಗ.
ಪಾದಷಹ (ಪಾಚ್ಛ), ಬಾದಶಹ, ಮುಸಲ್ಮಾನ ಚಕ್ರವರ್ತಿ.
ಪಾದಾಕ ಕಾಲಾಳುಗಳ ಗುಂಪು, ಸೇನೆ.
ಪಾದಾಕ್ರಾಂತ ಕಾಲಿನ ಮೆಟ್ಟಿಗೆ ಸಿಲುಕಿದ; ಅಧೀನವಾದ; ಗೆದ್ದ.
ಪಾದಾತಿ ಕಾಲಾಳು.

ಪಾದಾವರ್ತ ಕಾಲಿಂದ ತಿರುಗಿಸುವ ನೀರಿನ ರಾಟೆ, ಘಟ ಚಕ್ರ.
ಪಾದುಕಾ ಸಾದುಕೆ, ಹಾವುಗೆ(ದ್ಭ); ಮರದ ಎಕ್ಕಡ.
ಪಾದೆ ಒಂದು ಗಿಡ; ಪಾರೆ, ಶಿಲೆ.
ಪಾದೋದಕ ಕಾಲನ್ನು ತೊಳೆದ ನೀರು.
ಪಾದ್ಯ ಕಾಲಿಗೆ ಸಂಬಂಧಿಸಿದ; ಕಾಲು ತೊಳೆಯಲು ನೀರು; ಕಾಲು ತೊಳೆಯುವಿಕೆ.
ಪಾದ್ರಿ ಕ್ರೈಸ್ತ ಗುರು, ಪಾದರಿ.
ಪಾನ್‌ಸುಪಾರಿ ಎಲೆಅಡಿಕೆ, ತಾಂಬೂಲ.
ಪಾನ ಕುಡಿಯುವ ಪದಾರ್ಥ; ಕುಡಿಯುವಿಕೆ; ಮದ್ಯಪಾನ, ಕುಡಿತ.
—ಕ ಬೆಲ್ಲ ಇಲ್ಲವೆ ಸಕ್ಕರೆ ಕರಗಿಸಿದ ನೀರು; ಕುಡಿವ ಪಾನೀಯ; ದ್ರವ್ಯಗಳನ್ನು ಕರಗಿಸಿಕೊಂಡ ನೀರು, ದ್ರಾವ್ಯ.
ಪಾನೀಯ ಕುಡಿಯಲು ತಕ್ಕುದು; ಪಾನಕ; ನೀರು.
ಪಾನು ಎಲೆ, ೨ ಪುಟ, ಹಾಳೆ; ತಾಂಬೂಲ.
ಪಾಪ ನರಕಕ್ಕೆ ಕಾರಣವಾದ ತಪ್ಪು ನಡೆ; ಹಿಂಸೆ ಮೊದಲಾದ ಹೀನ ಕೃತ್ಯ; ಚಿಕ್ಕ ಕೂಸು; ನಿಸ್ಸಹಾಯ.
ಪಾಪಗ್ರುಹ ರಾಹು, ಕೇತು, ಶನಿಗಳಂತಹ ಕೆಟ್ಟ ಪರಿಣಾಮ ಉಂಟುಮಾಡುವ ಗ್ರಹ.
ಪಾಪಘ್ನ ಪಾಪಪರಿಹರಿಸುವುದು, ಎಳ್ಳು.
ಪಾಪಾತ್ಮ ಪಾಪದಿಂದ ತುಂಬಿದ ಮನಸ್ಸುಳ್ಳವ, ಪಾಪಿ, ದುಷ್ಟ.
ಪಾಪಾಸು ಒಂದು ಬಗೆಯ ಪಾದರಕ್ಷೆ; ಕಾಲಚೀಲ; ಡಬ್ಬಗಳ್ಳಿ.
ಪಾಪಿ ಪಾಪಮಾಡುವವ; ಕೆಟ್ಟ ಕೆಲಸದಲ್ಲಿ ನಿರತನಾದವ.
ಪಾಪಿಷ್ಠ ದುರುಳ, ಅತಿ ಕೆಟ್ಟವ.
ಪಾಪೆ ಹಾಪೆ, ಕಣ್ಣಿನ ಕನೀನಿಕೆ, ಕಣ್ಣು ಗೊಂಬೆ; ಲಾಂಛನ.
ಪಾಮನ (ಪಾಮಕಜ್ಜಿ), ಕಜ್ಜಿ ಹಿಡಿದವ.
ಪಾಮರ ನೀಚ; ಮೂರ್ಖ; ದುಷ್ಟ; ಅಶಿಕ್ಷಿತ; ಅಜ್ಞ, ಕಿರಾತ, ಬೇಡ.
ಪಾಮರಿ ಗ್ರಾಮದ ಹೆಂಗುಸು; ಒಕ್ಕಲಗಿತ್ತಿ.
ಪಾಯ್ (ಹಾಯು), ಲಂಘಿಸು, ನೆಗೆ; ತಗಲು; ದಾಟು; ಹರಿ, ಮುಂಬರಿ.
ಪಾಯ ಪಾದ; ನೆಲಗಟ್ಟು, ತಳಹದಿ.
ಪಾಯಕ ವೇಷಧಾರಿ; ಕಾಲಾಳು; ವೀರ.
ಪಾಯದಳ ಕಾಲುಬಲ, ಪದಾತಿ ಸೇನೆ.
ಪಾಯವಟ್ಟ(ದ್ಭ) ಪಾದಪಟ್ಟ (ಸಂ), ಬಿರುದಿನ ಬಳೆ; ಗೌರವಕ್ಕಾಗಿ ತೊಡುವ ತೋಡ.
ಪಾಯವಧಾರು ಕಾಲಿನ ಎಚ್ಚರಿಕೆ, ಓಟ.
ಪಾಯಶುದ್ಧಿ ಸಮನಾದ ಅಸ್ತಿವಾರದ ಮೇಲೆ ನಿಂತುದು; ಭದ್ರವಾದುದು.
ಪಾಯಸ ಹಾಲೊಡನೆ ಬೆಂದ ಪರಮಾನ್ನ.
ಪಾಯಿಜಾಮ ಇಜಾರ, ಚಲ್ಲಣ.
ಪಾಯಿದೆ ಲಾಭ, ಮುನಾಫೆ, ಉಳಿತಾಯ.
ಪಾಯು (ಹಾಯು), ಅಪಾನ ವಾಯು ಸ್ಥಾನ, ಗುದ, ಮಲದ್ವಾರ, ಕುಂಡೆ.
ಪಾಯ್ಯ ಅಳತೆ.
ಪಾರ್( ಪಾರು), ಹಾರು, ನಿರೀಕ್ಷಿಸು, ಎದುರು ನೋಡು; ಬಯಸು, ನೋಡು; ಪಾರಾಗಿ ಸೇರುವ ಸ್ಥಳ, ದ್ವೀಪ.
—ವ (ಪಾರ್ವ), ದಾಟದವ, ಬ್ರಾಹ್ಮಣ.
ಪಾರ (ಪಾರು), ಕೆಲಸ ಮುಗಿಸುವುದು; ಆಚೆ ದಡ; ಭಾಗ; ಕೊನೆ.
—ಕಾಣು ಕೊನೆಗಾಣು; ದಾಟು.
—ಗ ಕೊನೆಮಾಡಿದವ, ದಾಟದವ; ಮುಗಿಸಿದವ.
ಪಾರಣ (ಪಾರಣೆ), ಉಪವಾಸ ಕಳೆದ ಬಳಿಕ ಮಾಡುವ ಊಟ.
ಪಾರತಂತ್ರ್ಯ ಪರಾಧೀನತೆ; ಅನ್ಯರಿಗೆ ಅಧೀನವಾಗಿರುವುದು.

**ಪಾರದರ್ಶಕ** ತನ್ನ ಮೂಲಕ ಬೆಳಕನ್ನು ಸಾಗಗೊಡುವ.
**ಪಾರದಿ** ಬೇಟೆ.
**ಪಾರಮಾರ್ಥ** ಪರಲೋಕಕ್ಕೆ ಹಿತಕರವಾದ ಧರ್ಮ.
**ಪಾರಮಾರ್ಥಿಕ** ಪರಲೋಕಕ್ಕೆ ಅನುಕೂಲವಾದ ಧರ್ಮ.
**ಪಾರಲೌಕಿಕ** ಪರಲೋಕಕ್ಕೆ ಸಂಬಂಧಿಸಿದ.
**ಪಾರಶವ** ಉಕ್ಕು; ಶೂದ್ರಳಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಸಂಕೀರ್ಣ ವರ್ಣ.
**ಪಾರಸಿಕ** (ಪಾರಸೀಕ), ಪರ್ಷಿಯಾ ದೇಶ; ಈ ದೇಶದ ಜನ; ಪರ್ಷಿಯಾ ದೇಶದ ಕುದುರೆ.
**ಪಾರಂಗತ** ನಿಪುಣ, ಕೋವಿದ.
**ಪಾರಂಪರ್ಯ** ಪರಂಪರೆಯಿಂದ ಬಂದ; ಕುಲದಲ್ಲಿ ಹಿಂದಿನಿಂದಲೂ ಬಂದ.
**ಪಾರಾತ್ರಿಕ** ಪರಲೋಕಕ್ಕೆ ಹಿತಕರವಾದ.
**ಪಾರಾಯಣ** ಒಂದು ಕಾರ್ಯವನ್ನು ಮುಗಿಸುವುದು; ಒಂದು ಗ್ರಂಥವನ್ನು ಓದಿ ಮುಗಿಸುವುದು.
**ಪಾರಾವಾರ** ಆಚೆ ಈಚೆ ಎರಡೂ ದಡವುಳ್ಳುದು, ಸಮುದ್ರ.
**ಪಾರಿ** ಥಾಲಿ, ವಾಟ, ವಾಟಗ.
**ಪಾರಿಕಾಂಕ್ಷಿ** (ಪಾರಿ=ಬ್ರಹ್ಮಜ್ಞಾನ), ಬ್ರಹ್ಮಜ್ಞಾನವನ್ನು ಬಯಸುವವ; ಮೌನಿ; ಒಂದು ವಿಧವಾದ ಮುನಿ.
**ಪಾರಿಜಾತ** ಸಮುದ್ರ ಮಥನದ ಕಾಲದಲ್ಲಿ ಈ ವೃಕ್ಷ ಹುಟ್ಟಿತು. ಇದು ಇಂದ್ರನಲ್ಲಿತ್ತು. ಅಲ್ಲಿಗೆ ಒಮ್ಮೆ ಕೃಷ್ಣ ಸತ್ಯಭಾಮೆಯರು ಹೋದಾಗ, ಸತ್ಯಭಾಮೆ ಅದನ್ನು ಬಯಸಿದಳು. ಕೃಷ್ಣ ಆ ಮರವನ್ನು ಅಪಹರಿಸಿದುದರಿಂದ ದೊಡ್ಡ ಕಾಳಗವೇ ಪ್ರಾಪ್ತಿಸಿತು.
**ಪಾರಿತೋಷ** ಉಚಿತ, ಬಹುಮಾನ, ಉಡುಗೊರೆ; ಕಾಣಿಕೆ.
**ಪಾರಿಪಂಥಿಕ** ಹಾದಿಹೋಕರನ್ನು ಸುಲಿವವ.
**ಪಾರಿಪಾರ್ಶ್ವಕ** ನಾಟಕದಲ್ಲಿ ಸೂತ್ರಧಾರನ ಬಳಿ ಇರುವ ನಟನೊಬ್ಬ.
**ಪಾರಿಪ್ಲವ** ಚಂಚಲ.
**ಪಾರಿಭಾಷಿಕ** ಅನ್ಯಭಾಷೆಗೆ ಸಂಬಂಧಿಸಿದ; ವಿಶೇಷ ಶಾಸ್ತ್ರಾರ್ಥವುಳ್ಳ.
**ಪಾರಿಯಾತ್ರ** ಒಂದು ಕುಲಪರ್ವತ; ನರ್ಮದೆಯ ಉಗಮದಿಂದ ಆರಾವಳಿ ತನಕ ವಿಸ್ತರಿಸುವ ನಾಡು; ಒಂದು ಸರ್ಪ.
**ಪಾರಿವ** (ದ್ಭ) ಪಾರಾವತ (ಸಂ), ಪಾರಿವಾಳ.
**ಪಾರಿವಾಳ** (ಪಾರಿವ).
**ಪಾರಿಷದ** ಪರಿಷತ್ತಿನಲ್ಲಿ ಕುಳಿತಿರುವ; ಸಭಿಕ.
**ಪಾರಿಹಾರ್ಯ** ಬಳೆ; ಕಡಗ; ರಟ್ಟೆಬಳೆ.
**ಪಾರೀಣ** ಪಾರವನ್ನು ಹೊಂದಿದವ, ಪಾರಗ, ಕಾರ್ಯ ಮುಗಿಸಿದವ.
**ಪಾರೀಂದ್ರ** ಸಿಂಹ; ಹೆಬ್ಬಾವು, ದಾಸರಹಾವು.
**ಪಾರು** ಹಾರು, ನೆಗೆ; ಓಡು; ಬೆಳೆ; ನೋಡಿಕೊಳ್ಳು; ವ್ಯಭಿಚಾರ; ದೋಣಿ; ವಿಮಾನ; ದ್ವೀಪ.
**ಪಾರುಬೇಟೆ** ಅಟ್ಟಿ ಬೇಟೆಯಾಡುವುದು.
**ಪಾರುಭೋಜಂಗ** ಓಡುವ ವಿಟ; ಚಂಚಲನಾದ ವಿಟ.
**ಪಾರುವ** (ಪಾರ್ವ), ಹಾರುವ, ಬ್ರಾಹ್ಮಣ.
**ಪಾರುಷ್ಯ** ಒರಟುತನ; ಹಿಂಸೆ, ಕಟುಕತನ.
**ಪಾರುಂಬಳೆ** ಹಾರುವ ಬಳೆ, ಸುದರ್ಶನ.
**ಪಾರುಂಬೆಕ್ಕು** ಹಾರುವ ಬೆಕ್ಕು, ಅಳಿಲು.
**ಪಾರೆ** ಪಹರೆ; ಶಿಲೆ; ಪಾರಂಗಿ, ಹಾರುಗೋಲು; ನೆಲ ಕೊಚ್ಚುವ ಹಾರೆ.
**ಪಾರೇಳು** ಓಡಿಹೋಗು; ಅವಮಾನಿತನಾಗು.
**ಪಾರ್ಥ** ಪೃಥೆಯ ಮಗ ಅರ್ಜುನ; ಯುಧಿಷ್ಠಿರ; ಭೀಮ.
**ಪಾರ್ಥಿ** ಮತ್ತೀ ಮರ; ಅರಸು; ಪಾರ್ಥನ ಮಗ.

ಪಾರ್ಥಿವ ಪೃಥ್ವಿಯ ಒಡೆಯ, ರಾಜ; ಸೀತೆ; ಕ್ಷತ್ರಿಯ; ಪೃಥ್ವಿಯಿಂದ ಬಂದ.
ಪಾರ್ಥಿವಾಕ ನ್ಯಾಯಾಧೀಶ.
ಪಾರ್ಬಿಕೆ ಹಾರುವತನ, ಬ್ರಾಹ್ಮಣಿಕೆ.
ಪಾರ್ವ ವೇದವನ್ನರಿತವ, ವಿಪ್ರ, ಬ್ರಾಹ್ಮಣ.
ಪಾರ್ವಣ ಪರ್ವಕಾಲದಲ್ಲಾಗುವ ವಿಧಿ; ಒಂದು ವಿಧ ಶ್ರಾದ್ಧ; ಒಂದು ಮೃಗ.
ಪಾರ್ವತಿ ಪರ್ವತನ ಮಗಳು, ಉಮೆ.
ಪಾರ್ವಿತಿ (ಹಾರುವಿತಿ), ಬ್ರಾಹ್ಮಣ ಸ್ತ್ರೀ.
ಪಾರ್ಶ್ವ ಎದೆಯ ಮಗ್ಗುಲು; ಪಕ್ಕ, ಕೆಲ, ಬದಿ; ಸಮೀಪ, ನೆರೆ.
ಪಾರ್ಶ್ವನಾಥ ಒಬ್ಬ ಪ್ರಸಿದ್ಧ ತೀರ್ಥಂಕರ.
ಪಾರ್ಶ್ವವಾಯು ಒಂದು ಕಡೆ ಬಾಧಿಸುವ ವಾತ, ಪಾರಸಿ ಬೇನೆ, ಅರ್ಧಾಂಗವಾಯು.
ಪಾರ್ಷ್ಣಿ ಕಾಲುಹರಡಿನ ಕೆಳಭಾಗ; ಸೇನೆಯ ಹಿಂಭಾಗ.
ಪಾಲ್ ರಕ್ಷಿಸು; ಹಾಲು; ಭಾಗ, ಹಿಸೆ; ರಸ.
—ಕಡಲು ಕ್ಷೀರ ಸಾಗರ.
ಪಾಲಕ ರಕ್ಷಿಸುವವ; ಕಾಯುವವ; ಪೌಷ್ಟಿಕ ಆಹಾರ.
ಪಾಲಕಿ ಪಲ್ಲಕ್ಕಿ.
ಪಾಲನೆ ರಕ್ಷಣೆ, ಸಾಕುವಿಕೆ.
ಪಾಲಾಶ ಮುತ್ತುಗ; ಪಚ್ಚೆ.
ಪಾಲಿ (ಪಾಳಿ), ಸಾಲು, ರೀತಿ; ಸರದಿ, ಬಾರಿ; ದಂಡೆ; ತಾವು; ದಿಕ್ಕು; ಆದಿ; ಕಿವಿ ಬುಡ; ನಡು; ತೊಡೆ; ಶರ; ಕುಡಿ, ಬಾವುಟ; ಹಸಿಶುಂಠಿ; ಒಂದು ಭಾಷೆ, ಪ್ರಾಕೃತಭಾಷೆ.
ಪಾಲಿಕೆ ರಕ್ಷಿಸುವವಳು; ಯಜ್ಞಕ್ಕೆ ಬಳಸುವ ಮಣ್ಣಿನ ಬಟ್ಟಲುಗಳು; ಪಲ್ಲಕ್ಕಿ, ಪಾಲಕಿ; ಪಾಲಿಸಲಿ.
ಪಾಲಿಸು ರಕ್ಷಿಸು; ಕಾಯು, ಪೋಷಿಸು.
ಪಾಲು ಅಂಶ, ಭಾಗ; ಹಿಂಸೆ; ಹಾಲು.
—ಕಾರ ಹಿಸೆಗಾರ; ದಾಯಾದಿ.
—ವಂತಿಗೆ ತಮ್ಮ ತಮ್ಮ ಪಾಲಿಗೆ ಸಲ್ಲಿಸ ಬೇಕಾದ ಹಣ.
ಪಾಲೆ ಹಾಲೆಮರ; ಕಿವಿಯ ಹೊರಭಾಗ.
ಪಾವಕ ಅಗ್ನಿ; ಚೊಕ್ಕ ಮಾಡುವವ; ಉರಿಯುವ ಕೆಂಡ ತೆಗೆಯುವ ಇಕ್ಕಳ, ತಂಡಾಸ; ಗುಳ; ಮುಕ್ತಾಯ; ಕೇರುಗಿಡ.
ಪಾವಕೀ ಅಗ್ನಿಯ ದೆಸೆಯಿಂದ ಹುಟ್ಟಿದವ, ಕಾರ್ತಿಕೇಯ, ಷಣ್ಮುಖ; ನೀಲ.
ಪಾವಟಿಗೆ ಸೋಪಾನ, ಮೆಟ್ಟಲು, ಮೆಟ್ಟು.
ಪಾವಡ ಉಡುಗೊರೆ; ಪಾವುಡ, ಹಚ್ಚಡ.
ಪಾವಡಿಗ (ನೋಡು: ಹಾವಾಡಿಗ).
ಪಾವನ ಪರಿಶುದ್ಧವಾದ, ಪವಿತ್ರನಾದ; ಅಗ್ನಿ; ವೇದವ್ಯಾಸ; ಸಗಣಿ; ಪ್ರಾಯಶ್ಚಿತ್ತ; ಗಂಗೆ; ತುಳಸಿ; ಒಂದು ವೃತ್ತಜಾತಿ.
ಪಾವಮಾನ ವಾಯುವಿನ ಮಗ, ಹನುಮಂತ; ಭೀಮ.
ಪಾವಲಿ ರೂಪಾಯಿಯ ¼ನೆಯ ಭಾಗ.
ಪಾವಸೆ (ಹಾವಸೆ), ಪಾಚಿ, ಅಂತರಗಂಗೆ.
ಪಾವಾಣೆ ಕಾಲಾಣೆ, ಬಿಲ್ಲಿ, ದುಡ್ಡು.
ಪಾವು ಹಾವು; ಸೇರಿನ ಕಾಲಂಶ, ಕಾಲುಸೇರು.
ಪಾವುಗೆ (ಪಾದುಕೆ), ಹಾವುಗೆ.
ಪಾವುಡ (ದ್ಭ) ಪಾಗುಡ, ಪ್ರಾಭೃತ (ಸಂ), ಹಚ್ಚಡ, ವಸ್ತ್ರ; ರುಮಾಲ; ಕಾಣಿಕೆ.
ಪಾಶ (ಸಂ) ಪಾಸ (ದ್ಭ), ಹಗ್ಗ, ಉರುಳು.
ಪಾಶಕ ಜೂಜಾಟಕ್ಕೆ ಬೇಕಾದ ಸಾಮಗ್ರಿ, ದಾಳ, ಪಗಡೆ; ಕವಡೆ.
ಪಾಶಪಟ್ಟೆ ಬೋನು, ಕರ್ಪು.
ಪಾಶಪಾಣಿ ಕೈಯಲ್ಲಿ ಪಾಶ ಹಿಡಿದವ, ವರುಣ.
ಪಾಶಿ ಪಾಶ ಉಳ್ಳವ, ವರುಣ; ಮೂಗಿನಲ್ಲಿ ರಕ್ತ ಸುರಿಯುವ ಒಂದು ಬೇನೆ; ಉರುಳು ಹಾಕಿ ಕೊಲ್ಲುವಿಕೆ.
—ಘೋರ ವಂಚಕ, ಪರರನ್ನು ಉರುಳಲ್ಲಿ ಕೆಡೆವವ; ಪಾಶಿ ಅಪ್ಪಣೆಯಾದವ.

ಪಾಶುಪತ ಪಶುಪತಿಯೇ ದೇವತೆಯಾದ ಒಂದು ಅಸ್ತ್ರ; ಶಿವನೇ ದೇವತೆಯಾದ ಒಂದು ವ್ರತ; ಶಿವನ ಭಕ್ತ.

ಪಾಶ್ಚಾತ್ಯ ಪಶ್ಚಿಮ ದೇಶದಲ್ಲಿ ಹುಟ್ಟಿದುದು; ಯುರೋಪು ಅಮೇರಿಕಗಳಿಗೆ ಸಂಬಂಧಿಸಿದುದು.

ಪಾಶ್ಯ ಪಶುಗಳ ಗುಂಪು.

ಪಾಷಂಡ ನಾಸ್ತಿಕ, ವೇದಗಳನ್ನು ಸುಳ್ಳೆಂದು ತಿರಸ್ಕರಿಸುವವ.

ಪಾಷಾಣ ಪುಡಿಮಾಡುವ ಪದಾರ್ಥ; ಕಲ್ಲು; ವಿಷ.

ಪಾಸ (ದ್ಭ) ಪಾಶ (ಸಂ).

ಪಾಸಗೆ ಪಗಡೆಯ ದಾಳ, ಕವಡೆ; ಹಾಸುಗೆ; ಮಲ್ಲವಿದ್ಯೆಯ ಒಂದು ರೀತಿ.

ಪಾಸಟಿ ಸಮಾನ, ಎಣೆ; ಸರಿ.

ಪಾಸರೆ ಹಾಸುಗಲ್ಲು, ಚಪ್ಪಟೆಯಾದ ಅರೆ.

ಪಾಸಲೆ ಸನಿಯ; ಆಸುಪಾಸು, ಆಜುಬಾಜು.

ಪಾಸಂಗಿ ಹಾಸಂಗಿ, ಪಗಡೆ ಮಣೆ; ಪಗಡೆ.

ಪಾಸಾಣ(ದ್ಭ) ಪಾಷಾಣ(ಸಂ), ಕಲ್ಲು; ವಿಷ.

ಪಾಸಾದ (ದ್ಭ) ಪ್ರಾಸಾದ (ಸಂ), ಅರಮನೆ; ದೇವಾಲಯ.

ಪಾಸಾಲೆ ಮಣ್ಣಿನ ಮರಿಗೆ, ಕೋರಕೆ; ಬಾನಿ.

ಪಾಸು ಹಾಸು; ಜಮಖಾನೆ, ಚಾಪೆ, ಹಾಸಿಗೆ; ಬಟ್ಟೆ ತಯಾರಿಯಲ್ಲಿ ಮೊದಲಿಗೆ ಉದ್ದಕ್ಕೆ ಹಾಕುವ ನೂಲಿನ ಸಾಲುಗಳು.

—ಗೆ ಹಾಸಿದುದು; ಶಯ್ಯೆ, ತಲ್ಪ.

ಪಾಳ್ (ಹಾಳು), ಶೂನ್ಯಸ್ಥಾನ, ಏನೂ ಇಲ್ಲದ ಸ್ಥಳ, ಬಯಲ್.

—ಮುಸಗು ಹಾಳಾಗದಂತೆ ಕಾಣು.

ಪಾಳ ಕಾದ ಚಿನ್ನ ಇಲ್ಲವೆ ಬೆಳ್ಳಿಯ ಗುಳ.

ಪಾಳತಿ ಹೊಂಚುಹಾಕುವುದು, ಕಾಯುವುದು, ನಿರೀಕ್ಷಿಸುವುದು.

ಪಾಳಯ (ಪಾಳೆಯ).

ಪಾಳಿ ಕ್ರಮ; ಸರದಿ; ಧ್ವಜ, ಬಾವುಟ; ಸೈನ್ಯ.

ಪಾಳಿಸು ಸೇರಿಸು, ಮೇಳೈಸು, ಸಂಯೋಗಿಸು.

ಪಾಳೆ ಹಾಳೆ, ತುಂಡು; ತೆಳ್ಳಗಿನ ಕಾಗದ; ಅಡಕೆ ಹೂವಿನ ಆಚ್ಛಾದನ.

ಪಾಳೆಯ (ಪಾಳಯ), ದಂಡಿಳಿದಿರುವ ಸ್ಥಾನ, ಸೇನಾನಿವೇಶ.

—ಗಾರ ಒಂದು ದಂಡಿನ ನಾಯಕ, ಸಣ್ಣ ಪ್ರಾಂತದ ಮುಖಂಡ.

ಪಾಳ್ನೆಲ ಹಾಳುಬಿದ್ದ ಭೂಮಿ, ಹಡುಬಿದ್ದ ಭೂಮಿ, ಬೀಳುಭೂಮಿ, ಬೀಳ್ನೆಲ.

ಪಾಳ್ಯ (ಪಾಳೆಯ).

ಪಾಂಗು ರೀತಿ, ಬಗೆ; ಆಕಾರ; ಓರಣ; ಹೋಲುವೆ, ಸಾಮ್ಯ.

—ಅರಿ ರೀತಿಯನ್ನು ತಿಳಿ.

ಪಾಂಚಜನ್ಯ ಪಂಚಜನ ಎಂಬ ಒಬ್ಬ ರಕ್ಕಸನ ಎಲುಬಿನಿಂದಾದುದು; ವಿಷ್ಣುವಿನ ಅಥವಾ ಕೃಷ್ಣನ ಕೈಯ ಒಂದು ಶಂಖ.

ಪಾಂಚಾಲ ಇಂದ್ರಪ್ರಸ್ಥದ ಪೂರ್ವಕ್ಕಿದ್ದ ಒಂದು ದೇಶ. ಪಾಂಚಾಲ ದೇಶಕ್ಕೆ ಸಂಬಂಧಿಸಿದುದು; ಪಾಂಚಾಲ ರಾಜನಾದ ದ್ರುಪದ; ಧೃಷ್ಟದ್ಯುಮ್ನ.

ಪಾಂಚಾಲಿ ದ್ರೌಪದಿ, ದ್ರುಪದಸುತೆ.

ಪಾಂಡವ ಚಂದ್ರವಂಶದ ಪಾಂಡುರಾಜನ ಮಕ್ಕಳು. ಯುಧಿಷ್ಠಿರ ಮೊದಲಾದ ಐವರು ಸೋದರರು.

ಪಾಂಡು ಬಿಳಿ ಬಣ್ಣ; ಒಂದು ಸರ್ಪ; ಬಿಳಿ ಆನೆ; ಕಾಮಿಲೆ ರೋಗ, ಕಾಮಣಿ, ಕಾಮಾಲೆ; ಕುಂತಿ ಮಾದ್ರಿಯರ ಗಂಡ.

—ಕ ನಸು ಹಳದಿ, ಬಿಳಿ ಬಣ್ಣ; ಒಂದು ತರಕಾರಿ.

—ರ ಬಿಳಿ ಬಣ್ಣ; ನೆಲ್ಲು ಬಣ್ಣ; ಕಾಮಲೆ.

ಪಾಂಡುರಂಗ ಕೃಷ್ಣ; ಪಂಡರಪುರ ವಿಠೋಬ.

ಪಾಂಡ್ಯ ಒಂದು ದ್ರಾವಿಡ ದೇಶ. ಇಲ್ಲಿ

ಪ್ರಮೀಳೆಯು ಅರ್ಜುನನೊಡನೆ ಕಾದಿ ದಳೆಂದೂ, ಕೊನೆಗೆ ಅವಳನ್ನು ವರಿಸಿದ ನೆಂದೂ ಕಥೆ. ದಕ್ಷಿಣ ದ್ರಾವಿಡ ದೇಶ ಗಳಲ್ಲಿ ಹೆಸರಾದ ಚೇರ, ಚೋಳ, ಪಾಂಡ್ಯ ದೇಶಗಳಲ್ಲಿ ಒಂದು.

**ಪಾಂಥ** ದಾರಿಗ, ಹಾದಿಹೋಕ.

**ಪಾಂಬ** ಹೆಡ್ಡ; ಆಲಸ್ಯಗಾರ; ಪಾಣ್ಬ, ಸಿತಗ.

**ಪಾಂಶು** (ಪಾಂಸು), ಧೂಳು, ಹುಡಿ.

**ಪಾಂಶುಲ** ಪಾಪಿಷ್ಠ; ಹಾದರಿಗ; ವಿಭೂತಿ ಪುರುಷ; ಮಹಾದೇವ.

**ಪಿಕ** ಕೋಗಿಲೆ.

**—ಬಂಧು** ಕೋಗಿಲೆಗೆ ಆಶ್ರಯವಾದು ದು; ಮಾವಿನ ಮರ.

**ಪಿಕಲಕ್ಕಿ** ಕೊಟ್ಟುಗ, ಬುಲ್‌ಬುಲ್.

**ಪಿಕಾಸು** (ಪಿಕ್ಕಾಸು), ನೆಲ ಅಗೆವ ಗುದ್ದಲಿ.

**ಪಿಕ್ಕು** ಬಿಡಿಸು, ಹಿಕ್ಕು, ಕಿತ್ತುತೆಗೆ; ಬಾಚು.

**ಪಿಚಕಾರಿ** ನೀರನ್ನು ಚಿಮ್ಮಿಸುವ ಒಂದು ಸಾಧನ, ನೀರ್ಕೊಳವೆ.

**ಪಿಚಂಡಿ** (ಪಿಚಿಂಡ), ತೊಡೆ, ಊರು.

**ಪಿಚಾಡಿ** ಪ್ರಾಣಿಗಳ ಹಿಂಭಾಗ.

**ಪಿಚುಲ** (ಪಿಚು), ಅರಳೆ, ಹತ್ತಿಗಿಡ.

**ಪಿಚ್ಚಟ** ಚಪ್ಪಟೆಯಾಗಿ ಒತ್ತಿದ; ಕಣ್ಣಿನ ಒಂದು ಬೇನೆ; ತವರ.

**ಪಿಚ್ಚು** ಕಣ್ಣಿನ ಕೊಳೆ, ಸಿಕ್ಕು, ಕಿಸರು.

**ಪಿಚ್ಛಲ** ಜಾರುವ ನೆಲ, ಕೆಸರುಳ್ಳ ತಾವು; ಕೆಸರು ನೀರು.

**ಪಿಟ** ಬುಟ್ಟ; ಪೆಟ್ಟಗೆ; ಮನೆ; ಮಾಡು.

**ಪಿಟಕ** (ಸಂ) ಪೆಟ್ಟಗೆ (ದ್ಭ), ಬಿದಿರು ಸಲಕೆ ಯಿಂದ ಮಾಡಿದ ಪೆಟ್ಟಗೆ, ಮಂಜೂಷ, ಬುಟ್ಟಿ; ಬೊಕ್ಕೆ; ಕುರು.

**ಪಿಟೀಲು** ಒಂದು ತಂತಿವಾದ್ಯ.

**ಪಿಟ್ಟ** (ಪಿಷ್ಟ), ಹಿಟ್ಟು.

**ಪಿಟ್ಟೆ** (ಪಿಷ್ಟೆ), ಹಿಕ್ಕೆ; ಹುಡಿ.

**ಪಿಠಕ** ಕಡೆಗೋಲು; ಒಂದು ಬಗೆಯ ಮನೆ; ಮಡಕೆ; ಪೆಟಾರಿ (ದ್ಭ), ಪೆಟ್ಟಗೆ.

**ಪಿಡಿ** ಹಿಡಿ; ಹಿಡಿಯುವ ಭಾಗ; ಹೆಣ್ಣಾನೆ; ತನ್ನೊಳಗೆ ತುಂಬಿಸಿಕೊಳ್ಳು; ಸೆಳೆದುತರು.

**—ಆಳು** ಸೆರೆಯಾಳು, ಸೆರೆಯಾದವ.

**—ನಡೆ** ಹೆಣ್ಣಾನೆಯ ನಡಿಗೆ.

**ಪಿಡುಗು** ಸಿಡಿ, ಕಂಪಿಸು; ಹಬ್ಬುವಿಕೆ, ವ್ಯಾಪ್ತಿ; ಅಂಟುರೋಗ; ಸಿಡಿಲು; ತೊಂದರೆ.

**ಪಿಣಿಲ್** (ಪಿಣಿಲು), ಜಡೆ, ಹೆರಳು; ಎತ್ತಿನ ಭುಜ, ಇಣಿ, ಡುಬ್ಬ.

**ಪಿಣ್ಯಾಕ** ಹಿಂಡಿ, ಎಳ್ಳುಹಿಂಡಿ; ಹಿಂಗು.

**ಪಿತ** (ಪಿತೃ), ಪಿತರ, ತಂದೆ.

**ಪಿತರ** (ದ್ಭ) ಪಿತೃ (ಸಂ).

**ಪಿತಾಮಹ** ಅಜ್ಜ, ತಂದೆಯ ತಂದೆ; ಬ್ರಹ್ಮ; ಭೀಷ್ಮ.

**ಪಿತೂರಿ** ದಂಗೆ; ಕೀಟಲೆ; ಒಳಸಂಚು.

**ಪಿತೃ** ಕಾಪಾಡಿದವರು, ರಕ್ಷಿಸಿದವರು, ರಕ್ಷ ಕರು; ತಂದೆ; ತಾಯಿತಂದೆ.

**—ಕಾನನ** ಪಿತೃಗಳ ವನ, ಶ್ಮಶಾನ.

**—ದಿನ** ಶ್ರಾದ್ಧದ ದಿವಸ; ಹಿರಿಯರು ಮಡಿದ ದಿನ.

**ಪಿತೃತೀರ್ಥ** ಪಿತೃಗಳಿಗೆ ಪವಿತ್ರವಾದ ಸ್ಥಳ, ಗಯೆ.

**ಪಿತೃಧನ** ತಂದೆ ಗಳಿಸಿಟ್ಟ ಸಂಪತ್ತು.

**ಪಿತೃಪಕ್ಷ** ಭಾದ್ರಪದ ಮಾಸದ ಕೃಷ್ಣಪಕ್ಷ; ಈ ಕಾಲದಲ್ಲಿ ಎಲ್ಲ ಪಿತೃಗಳಿಗೆ ಪಿಂಡ ಅರ್ಪಿಸುವುದು ರೂಢಿ.

**ಪಿತೃಪತಿ** ಯಮ.

**ಪಿತೃಯಜ್ಞ** ಗತಿಸಿದ ತಂದೆತಾಯಿಗಳಿಗೆ ಕೊಡುವ ತಿಲತರ್ಪಣ.

**ಪಿತೃಲೋಕ** ಚಂದ್ರ ಲೋಕಕ್ಕಿಂತ ಉನ್ನತ ವಾದ ಒಂದು ಲೋಕ. ಇಲ್ಲಿ ಮೃತರಾದ ಪಿತೃಗಳು ಇರುವರೆಂಬ ನಂಬಿಕೆ.

ಪಿತೃವನ ಶ್ಮಶಾನ, ಸುಡುಗಾಡು.
ಪಿತೃಶೇಷ ಶ್ರಾದ್ಧದ ಊಟದಲ್ಲಿ ಉಳಿದುದು.
ಪಿತೃಸನ್ನಿಭ ತಂದೆಗೆ ಸಮಾನ.
ಪಿತ್ತ ಶರೀರದ ಒಂದು ಗ್ರಂಥಿ ರಸ; ತಲೆ ತಿರುಗುವುದು.
ಪಿತ್ತಕಾಮಲೆ ಅರಸಿನ ಮುಂಡಿಗೆ ಬೇನೆ, ಪಾಂಡುರೋಗ, ಕಾಮಣಿ.
ಪಿತ್ತಭ್ರಮೆ ಪಿತ್ತದ ಉಪದ್ರದಿಂದ ಬಂದ ಮಂಕು; ಮರುಳು.
ಪಿತ್ತಲ ಹಿತ್ತಾಳೆ; ತಾಮ್ರ ಸತು ಸೇರಿ ಆಗುವ ಮಿಶ್ರಲೋಹ; ಪಿತ್ತಸ್ವಭಾವವುಳ್ಳ.
ಪಿತ್ತಿಲ್ ಹಿತ್ತಿಲು, ತೋಟ.
ಪಿಧಾನ ಹೊದಿಕೆ; ಹಚ್ಚಡ, ಮುಚ್ಚಳ.
ಪಿನಾಕ ಶಿವನ ಕೈಯ ತ್ರಿಶೂಲ.
ಪಿನಾಕಿನಿ ಪಿನಾಕ ಹಿಡಿದವ, ಶಿವ; ದಕ್ಷಿಣ ಹಿಂದುಸ್ಥಾನದ ಒಂದು ನದಿ, ಪೆನ್ನಾರ್.
ಪಿನಿಕೂಟೆ ಒಂದು ಮಾದಕ ಪದಾರ್ಥ.
ಪಿನ್ನೆಣಿಕೆ ಮುಂದಿನ ಯೋಚನೆ.
ಪಿನ್ನೆಲೆ ಹಿಂಭಾಗ, ಹಿಂದುಗಡೆ.
ಪಿನ್ನೋಯು ಪಶ್ಚಾತ್ತಾಪಪಡು.
ಪಿಪಾಸೆ ಬಾಯಾರಿಕೆ, ಆಸರು, ಡಗೆ.
ಪಿಪೀಲಿಕೆ ಇರುವೆ, ಗೆದ್ದಲು, ಗೆದ್ದಲಿ.
ಪಿಪ್ಪಲ ಹಿಪ್ಪಲಿ; ನೀರು; ಕೊಳೆ, ಕೆಸರು.
ಪಿಮ್ಮೈಯ್ (ಹಿಮ್ಮೈಯ್), ಪೂರ್ವ ಜನ್ಮ.
ಪಿಯ (ದ್ಭ) ಪ್ರಿಯ (ಸಂ).
ಪಿರಂಗಿ ತೋಪು; ಪರದೇಶದವರು.
ಪಿರಿ ಮಾಂಸ; ಹೆಣ; ಕೀಳು; ಹಿರಿ; ದೊಡ್ಡ; ಶ್ರೇಷ್ಠ.
—ತಿನಿ ಹೆಣ ತಿನ್ನುವ ಭೂತ.
—ಮೆ ಹಿರಿಮೆ, ಹೆಚ್ಚುಗೆ.
ಪಿರಿಕಿ ಹೆಡ್ಡ; ಅರೆಮರುಳ; ಬೆದರುವವ, ತಿರುಪಣಿ, ತಿರುಗಣೆ, ಮಲಸುತ್ತು; ಸ್ಕ್ರೂ.
ಪಿರಿದುಪಾಲ್ ಹೆಚ್ಚುಹಾಲು, ಪ್ರಾಯಿಕ.
ಪಿರಿದುಮೆಡೆಪಾಲ್ ಪ್ರಾಯಶಃ, ಪ್ರಾಯಿಕವಾಗಿ, ಬಹುಮಟ್ಟಿಗೆ.
ಪಿರಿಯಾದಿ (ಫಿರ್ಯಾದು), ಅರ್ಜಿ; ದೂರು, ಬಿನ್ನಹ.
ಪಿರೆ ಹಿಂಭಾಗ; ಕುಂಡೆ.
ಪಿರ್ಗು ಹಿಗ್ಗು, ಉಬ್ಬು.
ಪಿಲು ಹಲ್ಲು; ಕಲ್ಲು; ಉಗಿನಿ ಮರ.
ಪಿಲ್ಲ ಇರುಳುಗಣ್ಣವ; ಮಂಜುಕಣ್ಣವ; ಮೆಳ್ಳ.
ಪಿಲ್ಲಣಿಗೆ ಗದೆ, ಪರಿಘ, ಕೊಡಂಟಿ.
ಪಿಲ್ಲಿ ಒಂದು ಬಗೆ ಕಾಲುಂಗುರ.
ಪಿಶಂಗ ತಾವರೆಯ ಪರಾಗದ ಬಣ್ಣ, ಹಳದಿ ಬಣ್ಣ.
ಪಿಶಾಚ (ಪಿಶ=ಮಾಂಸ), ಮಾಂಸ ತಿನ್ನುವದು; ಪ್ರೇತ; ಭೂತ; ದೇವತಾ ಭೇದ.
ಪಿಶಿತ ಮಾಂಸ; ಜಟಾಮಾಂಸಿ ಎಂಬ ಗ್ರಂಥಿಕ ದ್ರವ್ಯ.
ಪಿಶುನ (ಸಂ) ಪಿಸುಣ (ದ್ಭ), ದುರ್ಜನ; ಚಾಡಿಕೋರ; ನಾರದ; ಕಾಗೆ; ಕ್ರೂರ.
ಪಿಷ್ಟ (ದ್ಭ) ಹಿಟ್ಟು (ಸಂ), ಧಾನ್ಯದ ಪುಡಿ.
ಪಿಷ್ಟಚರ್ಚೆ ರಂಗವಲ್ಲಿ, ರಂಗೋಲೆ.
ಪಿಸರು ಮೈಕೊಳೆ; ಕಣ್ಣಿಸುರು; ವೀರ್ಯ.
ಪಿಸಿ ಹಿಸಿ, ಹಣ್ಣನ್ನು ಕೈಯಿಂದಲೇ ಒತ್ತಿ ಒಡೆ; ಕುಸಿದುಬೀಳು, ಜರಿ.
ಪಿಸುಕು(ಪಿಸುಂಕು),ಅವಮಾನಿಸು;ಹಿಚುಕು
ಪಿಸುಣ್ ಚಾಡಿ ಹೇಳು; ದೂರು.
ಪಿಸುಣ (ಹಿಸುಣ), ಚಾಡಿಕೋರ; ಕ್ರೂರ.
ಪಿಸ್ತೂಲು ಪುಟ್ಟ ತುಬಾಕಿ.
ಪಿಳ್ ಬಳ್ಳಿ.
ಪಿಳಿ (ಹಿಳಿ), ಹಿಂಡು; ನಿರ್ದ್ರವವಾಗು.
ಪಿಳಿಗು ಹಿಡಿ; ಬಿರುಕುಗೊಳ್ಳು.
ಪಿಳಿಲ್ ಎಸೆ; ಬಿಸುಡು; ಬಿಚ್ಚು.
ಪಿಳುಕು ಬಾಣದ ಗರಿಯಿರುವ ಭಾಗ.
ಪಿಳ್ಳೆ ಕೂಸು, ಮರಿ, ಕರು.

**ಪಿಹಿತ** ಮುಚ್ಚಿದ; ಮರೆಯಾದ.

**ಪಿಂಗ** ಕೆಂಚ; ಬೆಳವಕ್ಕಿ; ಹಾಲವಕ್ಕಿ.

**ಪಿಂಗಲ** ಒಂದು ಜನಾಂಗ; 51ನೆಯ ಸಂವತ್ಸರ; ರುದ್ರ; ವಾನರ; ಒಂದು ನಿಧಿ; ಒಬ್ಬ ಮುನಿ; ಮಂಗಳ ಗ್ರಹ; ಛಂದಸ್ಸೂತ್ರಗಳನ್ನು ಬರೆದ ಒಬ್ಬ ಪಂಡಿತ; ಒಂದು ನಾಡಿ; ರಾಜನೀತಿ; ಕಂತು; ಬಡ್ಡಿ.

**ಪಿಂಗಲಿ** ಹಾಲಕ್ಕಿ, ಶಕುನದಹಕ್ಕಿ, ಕಿರಿಗೂಬೆ.

**ಪಿಂಗಾಕ್ಷ** ಕಂದುಬಣ್ಣದ ಕಣ್ಣುಳ್ಳವ, ಶಿವ; ದುರ್ಯೋಧನ; ಕೌಜು, ಗೌಜುಗ.

**ಪಿಂಗಾಣಿ** ಬಿಳಿ ಜೇಡಿಮಣ್ಣಿನ ಪಾತ್ರೆ, ಗಾಜು.

**ಪಿಂಗು** (ಹಿಂಗು), ತೊಲಗು, ದೂರ ಸರಿ; ನಿಂತುಹೋಗು, ಉಳಿ; ತಪ್ಪು; ಬಿಡು; ಹಿಂದಿರುಗು; ಆರಿಸು; ಇಂಗು, ಬತ್ತು.

**ಪಿಂಗೋಳ** ಹಿಂಭಾಗ, ಹಿಂಗೋಟು.

**ಪಿಂಚು** ಹಿಂದೆ ಬರು, ಹಿಂದಾಗು; ಹಿಂದುಳಿ.

**ಪಿಂಛ** ನವಿಲುಗರಿ.

**ಪಿಂಜ** ಗೊಂದಲ; ಮನಸ್ಸಿನ ತಳಮಳ, ಮಂಕು; ಚಂದ್ರ; ಶಕ್ತಿ; ನೊಂದ.

**ಪಿಂಜರ** ಕೆಂಪು, ಹಳದಿಬಣ್ಣ; ಚಿನ್ನ; ಪಂಜರ; ಒಂದು ಪಕ್ಷಿ; ಅಸ್ಥಿಪಂಜರ; ಒಂದು ವಿಧದ ಕುದುರೆ.

**ಪಿಂಜರಿ** ಹಿಂಜರಿ, ಹಿಮ್ಮೆಟ್ಟು; ಬೆಳ್ಳಿ.

**ಪಿಂಜಲ** ತೀರ ತಬ್ಬಿಬ್ಬಾದ.

**ಪಿಂಜಾರ** (ಪಿಂಜಾರಿ), ಹತ್ತಿಯನ್ನು ಹಿಂಜುವವ, ಹತ್ತಿ ಸಸಿಯುವವ.

**ಪಿಂಜಿ** (ಹಂಜಿ), ಹಿಂಜಿದ ಹತ್ತಿ.

**ಪಿಂಜು** (ಹಿಂಜು), ಬೇರೆಮಾಡು; ಕಸ ಬೀಜ ತೆಗೆದು ಚೊಕ್ಕಮಾಡು; ಜಿಡುಕು ಬಿಡಿಸು; ಹೊಸಗಾಯಿ, ಮಿಡಿ.

**ಪಿಂಜೆ** ನೋವು, ಗಾಯ; ಅರಸಿನ; ಹತ್ತಿ.

**ಪಿಂಡ** ಗುಂಪು, ಹಿಂಡು (ದ್ಭ); ಗಟ್ಟಿ; ಶರೀರ; ಒಂದು ಭಾಗ; ಗೋಳ; ಶ್ರಾದ್ಧಗಳು, ಪಿತೃಗಳಿಗೆ ಇರಿಸುವ ಅನ್ನದ ಉಂಡೆ; ಕಬಳ, ಗ್ರಾಸ, ತುತ್ತು.

—**ಕ** ಆನೆಯ ಕುಂಭಸ್ಥಳ; ಕಬ್ಬಿಣ.

—**ಜ** ಪಿಂಡದಿಂದ ಹುಟ್ಟಿದ; ಪ್ರಾಣಿಗಳು, ಪಶುಗಳು.

**ಪಿಂಡಪ್ರದಾನ** ಪಿತೃಗಳಿಗೆ ಪಿಂಡ ಅರ್ಪಣೆ.

**ಪಿಂಡಶೂರ** ಊಟದಲ್ಲಿ ನಿಪುಣ, ತಿಂಡಿಬಾಕ.

**ಪಿಂಡಾಯುಸ** ಗಟ್ಟಿಯಾದ ಉಕ್ಕು.

**ಪಿಂಡಾರಿ** ಗುಂಪಾಗಿ ಚಲಿಸುತ್ತ ಜನರನ್ನು ಕಾಡುತ್ತಿದ್ದ ದರೋಡೆಖೋರರ ಒಂದು ಗುಂಪು; ಬುದ್ಧ ಸನ್ಯಾಸಿ; ಕ್ಷಪಣಕ.

**ಪಿಂಡಿ** (ಪೆಂಡಿ), ಅಂಡಿಗೆ, ಕಟ್ಟು, ಗಂಟು.

—**ಗೆ** ರಾಶಿ, ಸಮೂಹ; ಅಂಡಿಗೆ, ಗಂಟು.

**ಪಿಂಡಿವಾಳ** ಶತ್ರುಗಳಿಂದ ಕಾಯಬಲ್ಲವ.

**ಪಿಂಡು** (ಹಿಂಡು), ಅಮುಕಿ ರಸವನ್ನು ತೆಗೆ; ಗುಂಪು.

**ಪಿಂತು** (ಪಿಂ), ಹಿಂದೆ; ಹಿಂದಿನ; ಮುಂಚಿರುವ, ಮುಂದಿರುವ.

**ಪಿಂತೆ** ಹಿಂದಿನ; ಹಿಂಭಾಗ.

**ಪಿಂದು** (ಹಿಂದೆ).

**ಪಿಂಬದಿ** ಹಿಂಭಾಗ, ಹಿಂದೆ; ತರುವಾಯ.

**ಪೀ** ಕುಡಿ.

**ಪೀಕ್** (ಪೀಕು), ಉಗುಳಿದ್ದು; ಪೈರು ಕಟಾವಿಗೆ ಬರುವಿಕೆ.

**ಪೀಕದಾನಿ** ಉಗುಳುಪಾತ್ರೆ, ಉಗುಳುಬುಡ್ಡಿ.

**ಪೀಕಲಾಟ** ಉಪಟಳ, ಉಪದ್ರವ, ತೊಂದರೆ.

**ಪೀಕು** ಹೆಕ್ಕು, ಆಯು; ಜಗ್ಗು; ಸೆಳೆ, ಕೀಳು; ಬಿಸುಡು; ಪೈರು ಬಲಿಯುವಿಕೆ.

**ಪೀಚು** ಚಿಮುಕಿಸು, ಸಿಡಿ, ತಳಿ ಹೊಡೆ.

**ಪೀಠ** ಆಸನ, ವ್ರತಿಗಳ ಆಸನ; ವೇದಿ, ಜಗಲಿ; ಗುದ್ದುಗೆ ಕಲ್ಲು.

**ಪೀಠಮರ್ಧನ** ಅರಸನಿಗಿರುವ ನಾಲ್ವರು ವಿಲಾಸಮಂತ್ರಿಗಳಲ್ಲಿ ಒಬ್ಬ.

ಪೀಠಿಕೆ ಪ್ರಾರಂಭ, ಪ್ರಸ್ತಾವನೆ, ಮೊದಲು.
ಪೀಡನ ಒತ್ತಾಟ, ಅಮುಕಾಟ; ತಿಕ್ಕಾಟ; ತೊಂದರೆ; ಹಾನಿ.
ಪೀಡಿ ಪೀಳಿಗೆ, ಪರಂಪರೆ.
ಪೀಡಿಸು ತೊಂದರೆಗೊಳಿಸು; ಒತ್ತು, ಅಮುಕು; ತಿಕ್ಕು.
ಪೀಡೆ ದುಃಖ, ಉಪದ್ರವ; ಬಾಧೆ.
ಪೀತ ಹಳದಿಬಣ್ಣ, ಅರಸಿನಬಣ್ಣ; ಒಂದು ರತ್ನ; ಚಿನ್ನ; ಅರಸಿನ ಬೇರು; ಕುಡಿದ.
ಪೀತರಕ್ತ ಕಿತ್ತಿಳೆ ಬಣ್ಣ, ಕೇಸರವರ್ಣ.
ಪೀತರಾಗ ಅರಸಿನ ಬಣ್ಣ; ಸ್ಪಷ್ಟ ಪ್ರೇಮ
ಪೀತಾಂಬರ ಪೀತವಾಸ, ಅರಸಿನ ವಸ್ತ್ರ; ಅರಸಿನ ರೇಶ್ಮೆ ಧರಿಸಿದವ, ವಿಷ್ಣು, ಕೃಷ್ಣ.
ಪೀತಿ ಕುಡಿಯುವುದು; ಕುಡಿತ; ಕುದುರೆ.
ಪೀನ ದಪ್ಪ, ಗಡುತರ, ಕೊಬ್ಬಿದ, ಪುಷ್ಟಿಯಾದ; ತುಂಬಿದ; ದ್ರವ್ಯ ಮೊದಲಾದುವುಗಳಲ್ಲಿ ಪೂರ್ಣನಾದ.
ಪೀನಸ ಮೂಗಿನಲ್ಲಿ ಹುಟ್ಟುವ ಒಂದು ರೋಗ, ನೆಗಡಿ.
ಪೀಪಾಯಿ (ಪೀಪೆ), ನೀರು ಇಲ್ಲವೆ ಎಣ್ಣೆ ಹಿಡಿಸಲು ಮರದ ಇಲ್ಲವೆ ಲೋಹದ ದೊಡ್ಡ ಪಾತ್ರ.
ಪೀಪಿ ಊದುಕೊಳವೆ, ಮಕ್ಕಳು ಊದುವ ವಾದ್ಯ, ತುತ್ತೂರಿ.
ಪೀಯ್ ತೃಪ್ತಿಪಡಿಸು, ಸಂತೋಷಪಡಿಸು; ಕುಡಿ.
ಪೀಯೂಷ ಅಮೃತ; ಕರುಹಾಕಿದ ಕೆಲವೇ ದಿನದೊಳಗಿನ ಆಕಳ ಹಾಲು, ಎಳಗಂದಿಯ ಹಾಲು.
ಪೀರ್ (ಹೀರು), ಈಂಟು, ಕುಡಿ, ನಾಲಗೆಯಿಂದ ಸೆಳೆದು ಕುಡಿ; ಚೀಪು; ಚೆಲ್ಲು; ಚೆಲ್ಲಿದ ಸ್ಥಿತಿ.
ಪೀರೆ ಹೀರೆ, ಒಂದು ಜಲ್ಲೆ ಯು.
ಪೀಲಕ ದೊಡ್ಡಿರುವೆ, ಕರಿ ಇರುವೆ, ಗೊದ್ದ.
ಪೀಲಿ ಹೀಲಿ, ಬೆಂಡು; ನವಿಲುಗರಿ; ನವಿಲಿನ ಬಾಲ, ಪುಚ್ಛ.
ಪೀಲಿದಳೆ (ಪೀಲಿಯ ತಳೆ), ನವಿಲುಗರಿ ಕೊಡೆ
ಪೀವ (ಪೀವರ), ಸ್ಥೂಲ, ಕೊಬ್ಬಿದ; ಎಳೆವಯಸ್ಸಿನ ದನ; ಅಶ್ವಗಂಧ.
ಪೀಳಿಗೆ (ದ್ಭ) ಪೀಠಿಕಾ (ಸಂ); ವಂಶ; ಸಂತತಿ.
ಪುಕಸಾಟೆ (ಪುಕ್ಕಟೆ).
ಪುಕಳಿ ಮುಕಳಿ, ಅಂಡು; ಸ್ತ್ರೀ ಯೋನಿ.
ಪುಕಾರು ದೂರು, ನಿಂದೆ; ಸುದ್ದಿ, ವಾರ್ತೆ.
ಪುಕ್ಕ ಬಾಲ, ಪಕ್ಷಿಯ ಬಾಲ; ಧೈರ್ಯವಿಲ್ಲದವ, ಅಂಜುಕುಳಿ.
ಪುಕ್ಕಟೆ ಬೆಲೆಯಿಲ್ಲದೆ, ಮುಫತ್ತು; ಬೆಲೆ ಕೊಡದೆ ದೊರೆತ, ಧರ್ಮಾರ್ಥ.
ಪುಕ್ಕಲು ಅಧೈರ್ಯ, ಭೀತಿ.
ಪುಕ್ಕಸ ಚಾಂಡಾಲ; ನೀಚ, ಅಧಮ.
ಪುಕ್ಕು (ಪುಕ್ಕಲು), ಹೆದರಿಕೆ, ಅಧೈರ್ಯ.
ಪುಗಲ್ (ಪುಗಿಲ್), ಕೋಗಿಲೆಯ ಒಂದು ಧ್ವನಿ; ಹೊಗುವಿಕೆ, ಪ್ರವೇಶ; ಪ್ರವೇಶಿಸಬೇಡ ಎಂಬ ಮಾತು.
ಪುಗು ಹೊಗು, ಒಳಸೇರು; ಒಳ ಸೇರುವಿಕೆ.
—ತೆ ಹೊಗುವಿಕೆ, ಪ್ರವೇಶ.
ಪುಗುಳ್ ಗುಳ್ಳೆ; ಬೊಕ್ಕೆ, ಹುಗುಳು.
ಪುಗ್ಗು (ಪುರ್ಗು), ಹೆಮ್ಮೆ, ಉಕ್ಕು, ಉಬ್ಬು; ಉಬ್ಬಿರುವಿಕೆ.
ಪುಚ್ಚ (ದ್ಭ) ಪುಚ್ಛ (ಸಂ); ಬಾಲ.
ಪುಚ್ಚವಣ ಪರೀಕ್ಷೆ; ಗಂಡಸುತನ; ಶೌರ್ಯ.
ಪುಚ್ಚಳಿ ಕೇಡು; ನಾಶ, ಹಾನಿ.
—ಇಸು ಕರಗಿಹೋಗು, ನಾಶವಾಗು.
ಪುಚ್ಚಿ (ಪುಚ್ಚೆ), ಪುಕಳಿ, ತುಲ್ಲು.
ಪುಚ್ಛ (ಪುಚ್ಚ), ಬಾಲ; ನವಿಲಿನ ಬಾಲ; ಹಿಂಭಾಗ; ಉಳಿದ ಸೆರಗು.
ಪುಟ ದೊನ್ನೆ; ಕಳೆ, ಹಾರಾಟ; ಬದಿ.

—ಇಡು ಪ್ರಜ್ವಲಿಸು; ಮೇಲೆ ನೆಗೆ; ಕಳೆಯೇರಿಸು, ಬೆಂಕಿಯಲ್ಲಿಟ್ಟು ಶುದ್ಧವಾಗುವಂತೆ ಮಾಡು.

—ಏಳು ನೆಗೆ, ಪುಟ.

ಪುಟಾಣಿ ಹುರಿಗಡಲೆ; ಬಟಾಣಿ ಕಾಳು.

ಪುಟಿ ಹಾರು, ನೆಗೆ; ಚಿಮ್ಮು, ಥಾಯ.

—ತ ಹಾರಾಟ, ನೆಗೆತ.

—ಸು ಹಾರುವಂತೆ ಮಾಡು; ನೆಗೆಯಿಸು.

ಪುಟಿಕೆ (ಪುಟ್ಟು), ದೊನ್ನೆ; ಎಲೆಗಳ ಬಟ್ಟಲು.

ಪುಟ್ಟ ಸಣ್ಣ, ಚಿಕ್ಕ; ಕುಳ್ಳ, ಕಿರಿಯ.

ಪುಟ್ಟಿ ಸಣ್ಣ; ಬುಟ್ಟಿ; ಹುಟ್ಟು; ಜೇನುತಟ್ಟೆ.

ಪುಟ್ಟಿರುವು ನೈಸರ್ಗಿಕಬುದ್ಧಿ, ಹುಟ್ಟುಬುದ್ಧಿ.

ಪುಟ್ಟು ಹುಟ್ಟು, ಉತ್ಪತ್ತಿಯಾಗು; ದೋಣಿ ನಡಸುವ ತೊಳೆ; ಮರದ ಸಣ್ಣ ಮರಿಗೆ; ಜನ್ಮ, ಉತ್ಪನ್ನ.

—ಹ ಹುಟ್ಟು, ಜನ್ಮ.

ಪುಡಿ ಹುಡಿ; ದೂಳು; ನಸ್ಯ.

—ಪಡೆ ನಾಶವಾಗು; ಹುಡಿಯಾಗು.

ಪುಡುಕು (ಹುಡುಕು).

ಪುಣ್ ಧರ್ಮಕಾರ್ಯವನ್ನು ಮಾಡು; ಹುಣ್ಣು; ಕುರ.

ಪುಣಜಿ ದೂಳಿನಂಥ ಒಣ ಮಣ್ಣು; ಬತ್ತ ಬೆಳೆಯುವ ನೆಲ.

ಪುಣಿಜ ಒಂದು ಹುಳು.

ಪುಣುಗು (ಪುನುಗು), ಒಂದು ಜಾತಿಯ ಬೆಕ್ಕಿನಿಂದ ದೊರೆಯುವ ಸುಗಂಧ ದ್ರವ್ಯ.

ಪುಣುಂಬು ಬಾಣ.

ಪುಣ್ಣಿಮೆ ಹುಣ್ಣಿಮೆ, ಪೂರ್ಣಿಮಾ.

ಪುಣ್ಯ ಒಳ್ಳೆಯ ಅದೃಷ್ಟ; ಧರ್ಮ; ಒಳ್ಳೆಯ ಬಯಕೆ; ಯೋಗ್ಯ ಕೃತಿ; ನೈರ್ಮಲ್ಯ; ಪಾವಿತ್ರ್ಯ; ಚೆಲುವು.

—ವಂತ ಅದೃಷ್ಟಶಾಲಿ; ಸುಕರ್ಮಿ.

ಪುಣ್ಯಕಾಲ ಒಳ್ಳೆ ಗಳಿಗೆ, ಸುಮುಹೂರ್ತ.

ಪುಣ್ಯಕ್ಷೇತ್ರ ಯಾತ್ರಾಸ್ಥಳ; ಕುರುಭೂಮಿ.

ಪುಣ್ಯಚರಣ ಪರಿಶುದ್ಧವಾದ ಪಾದವುಳ್ಳವ, ಕೃಷ್ಣ.

ಪುಣ್ಯಜನ ಯಕ್ಷ; ದುಷ್ಟ; ಪಾಪಿಷ್ಠ.

ಪುಣ್ಯಭೂಮಿ ಒಳ್ಳೆಯ ಕಾರ್ಯಮಾಡತಕ್ಕ ಭೂಮಿ; ಆರ್ಯಾವರ್ತ.

ಪುಣ್ಯಾತ್ಮ ಸತ್ಯಶೀಲ, ಧರ್ಮಿಷ್ಠ; ಸುದೈವಿ.

ಪುಣ್ಯಾದಗಿತ್ತಿ ಅದೃಷ್ಟಶಾಲಿ ಹೆಂಗುಸು.

ಪುಣ್ಯಾಹ ಪುಣ್ಯಕರ ಕೆಲಸಮಾಡುವ ದಿನ.

ಪುಣ್ಯೋದಯ ಹಿಂದಿನ ಸುಕೃತದಿಂದಾಗಿ ಈಗ ಒಳಿತಾಗುವ ಕಾಲ.

ಪುತ ಕುಂಡೆ, ಅಂಡು, ಮುಕುಳಿ.

ಪುತ್ತಳಿ (ದ್ಭ) ಪುತ್ರಿಕಾ (ಸಂ), ಗೊಂಬೆ, ಬೊಂಬೆ; ಪಾಂಚಾಲಿಕೆ; ಒಂದು ವರಹದ ಚಿನ್ನದ ನಾಣ್ಯ.

ಪುತ್ತಿಕೆ ಸಣ್ಣನೊಣ, ಒಂದು ವಿಧವಾದ ಸಣ್ಣ ಕೀಟ; ಕಿರಿಜೇನು; ಗೆದ್ದಲು.

ಪುತ್ತಿಗೆ (ದ್ಭ), ಪುತ್ರಿಕಾ (ಸಂ), ಗೊಂಬೆ; ನಕಲು; ನೊಣ; ಗೆದ್ದಲು, ಗೆದ್ದಲಿ, ಒರಳೆ.

ಪುತ್ತು ಹುತ್ತ, ಇರುವೆ ಗೂಡು.

ಪುತ್ರ ಮಗ; (ಜ್ಯೋತಿಷದಲ್ಲಿ) ಲಗ್ನಕ್ಕೆ ಐದನೆಯ ಸ್ಥಾನ.

—ಉತ್ಸವ ಜಾತಕರ್ಮ; ಮಗನು ಹುಟ್ಟಿದ್ದಕ್ಕೆ ಮಾಡುವ ಒಂದು ಸಂಸ್ಕಾರ.

—ಕ ಮಗ; ದುಷ್ಟ; ಶರಭ; ತಪ್ಪಿಸಿಕೊಂಡ ಮೃಗ.

ಪುತ್ರಕಾಮೇಷ್ಟಿ ಮಕ್ಕಳ ಬಯಕೆಯಿಂದ ಮಾಡುವ ಒಂದು ಯಾಗ.

ಪುತ್ರಕೆ ಪುತ್ರಿ, ಮಗಳು; ಗೊಂಬೆ.

ಪುತ್ರವಧು ಸೊಸೆ, ಸೊಸ್ತಿ, ಮಗನ ಹೆಂಡತಿ.

ಪುತ್ರಾಂತರ ಬೇರೆಯ ಮಗ, ಇನ್ನೊಬ್ಬ ಮಗ.

ಪುತ್ರಿಕಾ ಪುತ್ತಳಿ, ಬೊಂಬೆ.

ಪುದಕಳ ಗದ್ದಲ, ಗೊಂದಲ.

ಪುದಿ ತುಂಬು, ವ್ಯಾಪಿಸು; ಆಚ್ಛಾದಿಸು; ಕೂಡು, ಸೇರು; ದ್ವಾರ, ಪಕ್ಕ, ಮಗ್ಗಲು; ಹೊಸ.

ಪುದು (ಪುದುವು),ಸೇರಿಕೆ,ಸೇರುವೆ; ಅನ್ಯೋನ್ಯ —ಕುರು ಕೂಡಿ ಯೋಚಿಸು.

ಪುದುಗು (ಹುದುಗು), ಸಂಕೋಚಹೊಂದು, ಮುದುರು; ಉಡುಗು, ಅಡಗು; ಮುಚ್ಚು. —ಇಸು ಸೇರಿಸು; ಕಟ್ಟು; ನಾಟಿಸು; ಅಡಗಿಸು.

ಪುದೆ (ಪೊದೆ), ಒರೆ; ಬತ್ತಳಿಕೆ; ಚಪ್ಪರ; ಮಾಡು; ಹೊದ್ದಿಕೆ; ಹೊದರು.

ಪುದ್ಗಲ ಒಳ್ಳೆಯ ಸ್ವರೂಪ, ಮನೋಹರ ವಸ್ತು; ಪರಮಾಣು; ಶರೀರ; ಜೀವ; ಶಿವನ ಒಂದು ಹೆಸರು; ಒಡೆದ.

ಪುನರ್ ಪುನಃ, ತಿರುಗಿ, ಮತ್ತೊಮ್ಮೆ.

ಪುನರಪಿ ತಿರುಗಿ, ಮತ್ತೂ, ಇನ್ನೊಮ್ಮೆ.

ಪುನರಾಗಮನ ಹೊರಟಲ್ಲಿಗೆ ಮರಳುವಿಕೆ.

ಪುನರುಕ್ತಿ ಹೇಳಿದುದನ್ನು ತಿರುಗಿಹೇಳುವುದು.

ಪುನರ್ಜನ್ಮ ಇನ್ನೊಂದು ಹುಟ್ಟು.

ಪುನರ್ನವ ಕತ್ತರಿಸಿದರೂ ತಿರುಗಿ ಹುಟ್ಟುವುದು, ಉಗುರು; ಕೂದಲು; ಒಂದು ಔಷಧ ಸಸ್ಯ.

ಪುನರ್ಭವ ತಿರುಗಿ ಹುಟ್ಟುವ; ಉಗುರು.

ಪುನರ್ಭೂ ತಿರುಗಿ ಮದುವೆಯಾದವಳು; ಎರಡನೆಯ ಬಾರಿಗೆ ಮದುವೆಯಾದವಳು, ಉಡಿಕೆ ಹೆಂಡತಿ.

ಪುನರ್ವಸು ನಕ್ಷತ್ರಗಳಲ್ಲಿ ಏಳನೆಯದು; ವಿಷ್ಣು; ಶಿವ.

ಪುನರ್ವಿವಾಹ ಇನ್ನೊಂದು ಮದುವೆ; ಉಡಿಕೆ

ಪುನಶ್ಚರಣೆ ತಿರುಗಿ ಹೇಳುವಿಕೆ.

ಪುನಃ (ಪುನಹಾ), ತಿರುಗಿ; ಭೇದ; ನಿಶ್ಚಯ. —ಪುನಃ ತಿರುತಿರುಗಿ, ಮತ್ತೆ ಮತ್ತೆ.

ಪುನೀತ ಪವಿತ್ರವಾಗಿ ಮಾಡಿದುದು.

ಪುಸುಗು (ಪುಣುಗು), ಒಂದು ಬೆಕ್ಕಿಂದ ಸಿಗುವ ಸುಗಂಧ.

ಪುನ್ನಾಗ ಶ್ರೇಷ್ಠ ವ್ಯಕ್ತಿ; ಮುಖ್ಯಸ್ಥ; ಬಿಳಿ ತಾವರೆ; ಹಾವು; ಜಾಜೀಕಾಯಿ; ಬಿಳಿ ಬಣ್ಣದ ಆನೆ; ಕೋಣ; ಸುರಹೊನ್ನೆ.

ಪುನ್ನಾಮನರಕ ಜಾರರನ್ನು ದಂಡಿಸುವ ಒಂದು ವಿಶೇಷ ಸ್ಥಳ (ನರಕದಲ್ಲಿ).

ಪುನ್ನಿಕೆ ಸುರಹೊನ್ನೆ, ಹೊನ್ನೆ.

ಪುಬ್ಬು (ಹುಬ್ಬು).

ಪುಮ್ (ಪುಮಾನ್), ಪುರುಷ, ಗಂಡು; ಮರ್ತ್ಯ.

ಪುಯ್ (ಹೊಯ್), ಸುರಿ; ಹೊಡೆ, ಬಡಿ; ಎಸೆ; ಓಡಿಸು; ಕೊಲ್ಲು.

ಪುಯ್ಯಲ್ ಯುದ್ಧ, ಹುಯ್ಲು, ಹೊಯ್ಲು; ಕೂಗುವಿಕೆ; ಶಬ್ದ, ಹೊಡೆತ; ಕೊಲೆ. —ಚು ಕೂಗಿಕೊಳ್ಳು; ಆರ್ಭಟಿಸು; ರೋದಿಸು; ಒದರಾಡು.

ಪುರ್ ಮುಂದುವರಿ.

ಪುರ ಮನೆ; ಶರೀರ; ಪಟ್ಟಣ, ನಗರ; ನದಿ; ಕಾಲುವೆ.

ಪುರತಃ ಮುಂಗಡೆ.

ಪುರದ್ವಾರ ಅಗಸೆ ಬಾಗಿಲು; ಹೆಬ್ಬಾಗಿಲು, ನಗರದ ಮುಖ್ಯ ಬಾಗಿಲು.

ಪುರಭಿತ್ತಿ ಪ್ರಾಕಾರ, ಪೌಳಿ; ಕೋಟೆ.

ಪುರಮರ್ದನ ತ್ರಿಪುರವನ್ನು ಸುಟ್ಟವ, ಶಿವ.

ಪುರಶ್ಚರಣ ದೇವತಾ ಪೂಜೆಯಿಂದ ಮಂತ್ರ ಸಿದ್ಧಿಮಾಡಿಕೊಳ್ಳುವುದು.

ಪುರಸ ಮುಂಗಡೆ.

ಪುರಸತ್ತು ಅವಕಾಶ, ವಿರಾಮ, ತೆರಪು.

ಪುರಸ್ಕಾರ ಮರ್ಯಾದೆ; ಪೂಜೆ.

ಪುರಸ್ಕೃತ ಮರ್ಯಾದಿಸಲ್ಪಟ್ಟ; ಸ್ವೀಕರಿಸಿದ.

ಪುರಂದರ ಮಹಾರಾಷ್ಟ್ರದ ಒಂದು ಕಿಲ್ಲೆ; ಶತ್ರುಗಳ ಪಟ್ಟಣವನ್ನು ನಾಶಮಾಡು

ವನ; ಶತ್ರುಗಳನ್ನು ಸೀಳುವವ, ಇಂದ್ರ; ಕಳ್ಳ.

ಪುರಂದರದಾಸ ವೈಷ್ಣವ ದಾಸರಲ್ಲಿ ಹೆಸರಾದ ಇವನು ಪಂಡರಪುರ ವಿಠೋಬನ ಭಕ್ತ. ಇವನು ರಚಿಸಿದ ನೂರಾರು ಹಾಡುಗಳು ನಮ್ಮ ನಾಡಿನಲ್ಲಿ ತುಂಬ ಜನಪ್ರಿಯ ವಾಗಿವೆ.

ಪುರಂಜನ ದೇಹದ ಹುಟ್ಟುವಿಕೆಗೆ ಕಾರಣ ನಾದವ, ಆತ್ಮ, ಜೀವ.

ಪುರಂಧ್ರಿ ಮನೆಯನ್ನು ಕಾಪಾಡುವವಳು, ಪತಿ ಸುತರಿರುವ ಸ್ತ್ರೀ.

ಪುರಃಸರ (ಪುರಸ್ಸರ), ಮುಂದೆ ಹೋಗುವಿಕೆ.

ಪುರಾ ಸಮೀಪ; ಹಿಂದೆ ನಡೆದ; ಪೂರ್ವ ದಿಕ್ಕು.

ಪುರಾಕೃತ ಹಿಂದೆ ಮಾಡಿದ.

ಪುರಾಣ ಹಿಂದೂ ಮತಕ್ಕೆ ಸಂಬಂಧವಾದ ಪುರಾತನ ಕಥೆಗಳು. ಇಂಥವು 18 ಇವೆ. ಇವು ಬೇರೆ ಬೇರೆ ಕಾಲದಲ್ಲಿ ಉಂಟಾದುವು. ಇವುಗಳು: ವಿಷ್ಣು, ನಾರದೀಯ, ಭಾಗ ವತ, ಗರುಡ, ಪದ್ಮ, ವರಾಹ, ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಂದ, ಅಗ್ನಿ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಾಂಡೇಯ, ಭವಿಷ್ಯ, ವಾಯು; ಹಿಂದೆ ನಡೆದುದು; ಹಳೆಯದು; ಹಿಂದು ಗಳು ನಂಬಿಬಂದಿರುವ ಹಳೆಯ ಕಥೆಗಳು.
— ಪುರುಷ ಪುರಾಣಗಳಲ್ಲಿ ಹೊಗಳಲ್ಪಟ್ಟ ಮಹಾವ್ಯಕ್ತಿ; ವಿಷ್ಣು.

ಪುರಾಣವೈರಾಗ್ಯ ತಾತ್ಕಾಲಿಕ ವಿರಕ್ತಿ; ತೋರಿಕೆಯ ವೈರಾಗ್ಯ, ಪುರಾಣ ಕೇಳಿ ದಾಗ ಆಗುವ ವೈರಾಗ್ಯ.

ಪುರಾಣಿಕ ಪುರಾಣ ಹೇಳುವವ; ಪುರಾಣಕ್ಕೆ ಸಂಬಂಧಿಸಿದ.

ಪುರಾತನ ಹಳೆಯ, ಹಿಂದಿನ; ಪೂರ್ವದವ, ಹಳಬ; ಹಿಂದಿನ ವಿದ್ವಾಂಸ.

ಪುರಾವೃತ ಹಿಂದಿನಕಾಲದ ಸಂಗತಿಯನ್ನು ಅನುಸರಿಸಿ ಬರೆದ ಕಥೆ, ಇತಿಹಾಸ.

ಪುರಿ (ಹುರಿ), ಹಗ್ಗಕ್ಕೆ ಕೊಡುವ ತಿರುಪು, ಕಾವು; ಹಾವಿನ ಹೆರೆ; ಮಂಡಕ್ಕಿ, ಚುರು ಮುರಿ; ಹೆಮ್ಮೆ; ಶೌರ್ಯ.

ಪುರಿನೇಣ್ ಹೊಸೆದ ಹಗ್ಗ.

ಪುರೀಷ ಮಲ, ಹೊಲಸು; ಪಿಷ್ಠೆ; ಜಲ.

ಪುರು ಸ್ವರ್ಗ; ಒಬ್ಬ ದೈತ್ಯ; ಒಂದು ನದಿ; ಬಹಳ; ಚಿನ್ನ, ಬಂಗಾರ.

ಪುರುಕುತ್ಸ ಸೂರ್ಯವಂಶದ ಒಬ್ಬ ಕ್ಷತ್ರಿಯ.

ಪುರುಡು (ಹುರುಡು), ಸ್ಪರ್ಧೆ, ಪೈಪೋಟಿ, ಮೇಲಾಟ; ಹೊಟ್ಟೆಕಿಚ್ಚು.
— ಇಗ ಅಸೂಯೆಪಡುವವ; ಸ್ಪರ್ಧಿ.
— ಇಸು ಸ್ಪರ್ಧಿಸು; ದ್ವೇಷಿಸು, ಹಗೆ ಮಾಡು; ಅಸೂಯೆಪಡು.

ಪುರುಪೃಷ್ಠ ಒಂದು ಹಾವು.

ಪುರುಲೆ ಕಾಡು ಮೈನಾ ಹಕ್ಕಿ.

ಪುರುಷ ಮನುಷ್ಯ; ಗಂಡು; ಬ್ರಹ್ಮ; ಶಿವ; ಆತ್ಮ.
— ಕಾರ ಪೌರುಷ, ಮನುಷ್ಯಪ್ರಯತ್ನ; ಉದ್ಯೋಗ.
— ತ್ವ ಶೌರ್ಯ, ಸಾಹಸ; ಗಂಡಸುತನ.

ಪುರುಷಸೂಕ್ತ ಋಗ್ವೇದದ ಒಂದು ಭಾಗ.

ಪುರುಷಾಮೃಗ ಮನುಷ್ಯನ ಮೋರೆಯುಳ್ಳ ಒಂದು ಕಾಲ್ಪನಿಕ ಮೃಗ.

ಪುರುಷಾರ್ಥ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪ್ರಯೋಜನಗಳು.

ಪುರುಷೋತ್ತಮ ಮನುಷ್ಯರಲ್ಲಿ ಉತ್ತಮ ನಾದವನು, ವಿಷ್ಣು.

ಪುರುಹೂತ ಇಂದ್ರ.

ಪುರುಳ್ (ಪುರುಳು), ಹುರುಳು, ಅರ್ಥ; ದ್ರವ್ಯ; ಯೋಗ್ಯತೆ; ತಿರುಳು, ಜ್ಞಾನ; ಕೆಚ್ಚು.

ಪುರುಳಿ ಹೆಣ್ಣು ಗಿಳಿ.

ಪುರೂರವ ಸೂರ್ಯನಿಗೂ ಮುಂಜಾನೆಗೂ

ಸಂಬಂಧಿಸಿದ ವೇದಕಾಲದ ಕಲ್ಪಿತ ವ್ಯಕ್ತಿ. ಈತನು ಬುಧ ಮತ್ತು ಮನುವಿನ ಮಗಳಾದ ಇಳಾ — ಇವರಲ್ಲಿ ಹುಟ್ಟಿದನು. ಈತನಿಗೆ ಊರ್ವಶಿ ಎಂಬ ಅಪ್ಸರೆಯಲ್ಲಿ ಪ್ರಣಯ ಉಂಟಾಯಿತು. ಆಕೆಯು ಮಾನವನಾದ ಇವನೊಡನೆ ಭೂಲೋಕದಲ್ಲಿ ಕೆಲಕಾಲ ವಾಸಿಸಿದಳು. ಆದರೆ ಪುರೂರವನು ಕೆಲವು ನಿಯಮಗಳನ್ನು ಪಾಲಿಸಿದ ಕಾರಣ— ಊರ್ವಶಿಯು ಅವನನ್ನು ಅಗಲಿ ಸ್ವರ್ಗಕ್ಕೆ ಹೋದಳು. ಪುರೂರವನು ತನ್ನ ತಪಸ್ಸಿನ ಬಲದಿಂದ— ತಿರುಗಿ ಸ್ವರ್ಗವನ್ನು ಸೇರಿದನು.

**ಪುರೆ** ಕುರ, ಹುಣ್ಣು; ಮುಡವು.

**ಪುರೋಗ** ಮುಂದೆ ಹೋಗುವವ, ಮುಂದಾಳು

**ಪುರೋಗತಿ** ಹಿಂಬಾಲಿಸುವಿಕೆ.

**ಪುರೋಚನ** ದುರ್ಯೋಧನನ ಒಬ್ಬ ಸೇವಕ. ಪಾಂಡವರನ್ನು ಅರಗಿನ ಮನೆಯಲ್ಲಿ ಸುಡಲು ಯತ್ನಿಸಿದ ವ್ಯಕ್ತಿ.

**ಪುರೋಡಾಶ** ಒಂದು ಬಗೆಯ ಹವಿಸ್ಸು, ಚರು.

**ಪುರೋಭಾಗ** ಮುಂಭಾಗ.

**ಪುರೋಭಾಗಿ** ಮೊದಲು ದೋಷವನ್ನು ಎಣಿಸತಕ್ಕವ, ನಂಬಲಾರದವ.

**ಪುರೋಹಿತ** ವೇದೋಕ್ತ ಕರ್ಮಗಳನ್ನು ಮಾಡಿಸುವವ; ಒಂದೊಂದು ಪಂಗಡದಲ್ಲೂ ಮತಸಂಬಂಧವಾದ ವಿಧಿಗಳನ್ನು ಮಾಡಿಸುವಾತ.

**ಪುರ್ಕು** ತಿರಸ್ಕಾರದ ಒಂದು ಸದ್ದು; ಪುಕ್ಕು.

**ಪುರ್ಚು** (ಹುಚ್ಚು), ಹಾನಿ; ಕೆಡುಕು.

**ಪುರ್ಬು** (ಹುಬ್ಬು), ಪುರ್ವು, ಭ್ರೂ.

—ಇಕ್ಕು ಹುಬ್ಬು ಅಲ್ಲಾಡಿಸು.

**ಪುಲ್** ಹುಲ್ಲು; ಅಲ್ಪ; ಬೆಳೆ; ಉದ್ದವಾಗು.

—ಕರ್ಚು ಹುಲ್ಲು ಕಡಿ; ಸೋಲಿನ ಒಂದು ಸೂಚನೆ.

**ಪುಲಕ** (ಪುಳಕ), ರೋಮಾಂಚ, ರೋಮವು ಹರ್ಷದಿಂದ ನಿಗುರುವುದು; ಪೊಂಪುಳಿ.

**ಪುಲಸ್ತ್ಯ** ಬ್ರಹ್ಮನ ಮಾನಸಪುತ್ರ. ಸಪ್ತಋಷಿಗಳಲ್ಲಿ ಇವನು ಒಬ್ಬನೆಂದು ಎಣಿಸುವರು. ಈತನ ಮಕ್ಕಳೇ ಅಗಸ್ತ್ಯ, ಕುಬೇರ, ರಾವಣರು.

**ಪುಲಾಕ** ಅನ್ನದ ಅಗಳು, ಬೆಂದ ಅನ್ನದ ಉಂಡೆ; ಕೆಟ್ಟ ಧಾನ್ಯ.

**ಪುಲಿ** ಹುಲಿ; ಹುಲಿಗಿಲ ಗಿಡ.

**ಪುಲಿನ** (ಪುಳಿನ), ಮರಳಿನ ದಡ, ಮರಳು ದಿನ್ನೆ, ಉಸುಬಿನ ದಂಡೆ; ದ್ವೀಪ.

**ಪುಲಿಮೊಗ** ಕೋಟೆಯ ಹೊರಗೆ ಹೋಗುವ ಇಕ್ಕಟ್ಟಾದ ದಾರಿ; ಹುಲಿಯ ಮುಖ.

**ಪುಲಿಂದ** ಬೇಡ; ಕಿರಾತ; ಬುಂದೇಲಖಂಡದ ಪಶ್ಚಿಮದ ಒಂದು ರಾಜ್ಯ.

**ಪುಲಿಂದಿನಿ** ಬೇಡಿತಿ, ಶಬರಿ.

**ಪುಲು** (ಹುಲು), ಹುಲ್ಲು; ಅಲ್ಪ.

**ಪುಲೋಮ** ಒಬ್ಬ ರಕ್ಕಸ; ಇಂದ್ರನ ಹೆಂಡತಿ ಶಚೀ ದೇವಿಯ ತಂದೆ. ಧನುಪುತ್ರನಾದ ಒಬ್ಬ ದೈತ್ಯ. ಈತನು ಭೃಗುಪತ್ನಿಯಾದ ಪುಲೋಮೆಯನ್ನು ಅಪಹರಿಸಿದನು.

**ಪುಲ್ಕನ** ಹೊಲೆಯ.

**ಪುಲ್ಮರುಳ್** ಅಲ್ಪ ಪಿಶಾಚಿ.

**ಪುಲ್ಮೇವು** ಹುಲ್ಲು ಮತ್ತು ಆಹಾರ.

**ಪುಲ್ಲ** (ಫುಲ್ಲ), ಹೂ.

**ಪುಲ್ಲಡಿಗಿತ್ತಿ** ಹೂವಾಡಿಗಿತ್ತಿ.

**ಪುಲ್ಲಶರ** ಕಾಮ.

**ಪುಲ್ಲಿಗೆ** ಒಂದು ಭಕ್ಷ್ಯವಿಶೇಷ, ಹೋಳಿಗೆ.

**ಪುಲ್ಲಿಂಗ** ಗಂಡು ಎಂದು ತಿಳಿಯುವ ಗುರುತು; ಪುರುಷನ ಲಿಂಗ; ವ್ಯಾಕರಣದಲ್ಲಿ ಪುರುಷ ಎಂಬ ಭೇದ ತೋರಿಸಲು ಸೂಚಿಸುವ ಸಂಜ್ಞೆ.

**ಪುಲ್ಲೆ** (ಹುಲ್ಲೆ), ಚಿಗರಿ, ಜಿಂಕೆ.

ಪುಲ್ಲಿಗ ಕೆಡುಬಾಯಿಯವ; ಬಾಯಿಬಡಕ.
ಪುವ್ವು ಹೂ; ಒಂದು ಕಣ್ಣಿನ ಬೇನೆ.
ಪುಷ್ ಬೆಳಸು, ಪಾಲಿಸು; ಸಾಕು.
ಪುಷ್ಕರ ಆನೆಯ ಸೊಂಡಿಲ ತುದಿ; ಒಂದು ಬಗೆಯ ವಾದ್ಯ; ಮುಖ; ನೀರು; ತಾವರೆ; ಆಕಾಶ; ಒಂದು ದ್ವೀಪ; ಒಂದು ಸರ್ಪ; ಕತ್ತಿಯ ಬಾಯಿ; ಒಂದು ಬಾಣ; ಸಾರಸ ಪಕ್ಷಿ; ಅರಸು; ನಳರಾಯನ ದಾಯಾದಿ. ನಳನು ಇವನೊಡನೆ ಜೂಜಾಡಿ ಸೋತನು.
ಪುಷ್ಕರಿ ಒಂದು ಆನೆ.
ಪುಷ್ಕರಿಣಿ ಕಮಲಗಳು ಬೆಳೆದಿರುವ ಸರೋವರ; ಕಮಲಗಳ ಗುಂಪು.
ಪುಷ್ಕಲ (ಪುಷ್ಕಳ), ಧಾರಾಳ.
ಪುಷ್ಕಲಕ ಗಂಧಕೊಡುವ ಒಂದು ಜಿಂಕೆ.
ಪುಷ್ಟ ಸಂಪನ್ನ; ಚೆನ್ನಾಗಿ ಸಾಕಿದ; ಸಮೃದ್ಧ.
ಪುಷ್ಟಿ (ಪುಸ್ತಿ), ಕಾಪಾಡುವಿಕೆ; ಪಾಲನೆ; ಶರೀರ ಸೌಷ್ಠವ; ಬೆಳವಣಿಗೆ; ಪ್ರೋತ್ಸಾಹ.
—ಕೊಳಿಸು ಬೆಳೆಯಿಸು, ಅಭಿವೃದ್ಧಿಗೊಳಿಸು; ಸಮರ್ಥನೆ ಮಾಡು.
ಪುಷ್ಪ ಅರಳುವಿಕೆ, ವಿಕಾಸ; ಹೂ, ಅರಳಿದುದು; ಕಣ್ಣಿಗೆ ಬರುವ ಹೂ; ಯೋನಿಸ್ರಾವ.
—ಇಸು ಅರಳು; ಹೂವಾಗು; ಪ್ರಾಯಕ್ಕೆ ಬರು, ಮೈನೆರೆ.
—ಮಾಲೆ ಹೂಮಾಲೆ.
—ರಸ ಜೇನು, ಮಧು.
—ವತಿ ಮೈನೆರೆದವಳು; ಮುಟ್ಟಾದವಳು.
—ವಂತ ಸೂರ್ಯಚಂದ್ರ.
ಪುಷ್ಪಕ ವಿಮಾನ, ದೇವರಥ; ಕುಬೇರನ ವಿಮಾನ; ಹೂ.
ಪುಷ್ಪಚಾಪ ಹೂ ಬಾಣವುಳ್ಳವ, ಮನ್ಮಥ.
ಪುಷ್ಪದಂತ ವಾಯವ್ಯ ದಿಕ್ಕಿನ ದಿಗ್ಗಜ; ಒಬ್ಬ ವಿದ್ಯಾಧರ.
ಪುಷ್ಪಧನ್ವ ಕಾಮ.
ಪುಷ್ಪಪುರ ಪಾಟಲೀಪುತ್ರ, ಈಗಿನ ಪಾಟ್ನಾ.
ಪುಷ್ಪವಂತರು ಸೂರ್ಯಚಂದ್ರರು.
ಪುಷ್ಪವಾಟಿ ಹೂದೋಟ.
ಪುಷ್ಪಾಂಜಲಿ (ಪುಷ್ಪಾಂಜುಳಿ), ಅರ್ಪಿಸಲು ಬೊಗಸೆಯಲ್ಲಿ ಹಿಡಿದ ಹೂಗಳು.
ಪುಷ್ಪಿಣಿ ಹೂವನ್ನು ಧರಿಸಿದವಳು; ಮುಟ್ಟಾದವಳು.
ಪುಷ್ಯ ಎಂಟನೆಯ ನಕ್ಷತ್ರ.
ಪುಷ್ಯರಾಗ (ಪುಷ್ಪರಾಗ), ನವರತ್ನಗಳಲ್ಲಿ ಒಂದು; ವಜ್ರದಂಥ ಒಂದು ರತ್ನ.
ಪುಸಲಾಯಿಸು ಹುರುಪು ಕೊಡು, ಉಮೇದು ಕೊಡು, ಹಮ್ಮಸ ಹುಟ್ಟಿಸು, ಪ್ರೇರಿಸು.
ಪುಸಿ ಸುಳ್ಳು, ತೊದಲು; ಸುಳ್ಳು ಹೇಳು; ಹರಟೆ; ಠಕ್ಕು; ವ್ಯರ್ಥ.
—ಗ ಹುಸಿಗ, ಸುಳ್ಳಾಡುವವ.
ಪುಸಿಲಜ್ಜೆ ಕಪಟವಾದ ನಾಚಿಕೆ; ನಟನೆಯ ನಾಚಿಕೆ.
ಪುಸಿವಡೆ ಕಪಟದ ಸೇನೆ; ಮಾಯಾಸೇನೆ.
ಪುಸ್ತ ಲೇಪನ, ಸವರುವಿಕೆ.
ಪುಸ್ತಕ ಪುಸ್ತುಕ, ಹೊತ್ತಗೆ; ಗ್ರಂಥ.
ಪುಳಕ (ಪುಲಕ), ರೋಮಾಂಚ, ಕೂದಲು ನಿಮಿರುವಿಕೆ.
—ಅಭಿಷೇಕ ದೇವರ ವಿಗ್ರಹಗಳಿಗೆ ಪರಿಮಳ ಜಲದಿಂದ ಮಾಡಿಸುವ ಸ್ನಾನ.
—ಇಸು ರೋಮಾಂಚವಾಗು.
ಪುಳಿ ಹುಳಿ, ಆಮ್ಲ; ಕೀಟಗಳು ತಿಂದುದು.
—ಪಿಡಿ ಹುಳಿಯಾಗು, ಹಳಿಸು.
ಪುಳಿನ ಮರಳು ದಿನ್ನೆ.
ಪುಳಿಲ್ ಮರಳು ತುಂಬಿದ ಜಾಗ, ಮರಳು ಭೂಮಿ; ಮರದ ತೋಪು.
ಪುಳಿಂದ (ಪುಲಿಂದ).
ಪುಳಿಂದಿ ಪುಳಿಂದಿನಿ, ಬೇಡಿತಿ.
ಪುಳು (ಪುಳ), ಹುಳು, ಕ್ರಿಮಿ.

ಪುಳುಕು ಹುಣ್ಣು; ಕಿಡುಕು; ನೀಚತೆ; ಕೊರತೆ, ಐಬು; ಹುಳು ತಿಂದಾದ ಕೆಟ್ಟೆ.
ಪುಳುವಾನಿಸರ್ ಹುಳುವಿನಂತಿರುವ ಮನುಷ್ಯರು; ಅಲ್ಪ ಬಲರು.
ಪುಳ್ಳು ಉರಿಸು.
ಪುಂಖ ಗರಿಯುಳ್ಳ ಬಾಣದ ಹಿಂಭಾಗ.
ಪುಂಖಾನುಪುಂಖ ಬಾಣದ ಹಿಂದೆ ಬಾಣ, ಒಂದರ ಹಿಂದೆ ಇನ್ನೊಂದು.
ಪುಂಗಣೆ ಒಂದು ಬಗೆಯ ಬಾಣ.
ಪುಂಗವ ಎತ್ತು; ಶ್ರೇಷ್ಠ.
ಪುಂಗಿ ಊದುಗೊಳವೆ, ಪುಗ್ಗಿ, ಶ್ರುತಿಬುರುಡೆ; ಹಾವಾಡಿಗರ ಶ್ರುತಿಬುರುಡೆ.
ಪುಂಜ ರಾಶಿ, ಗುಂಪು, ಸಮೂಹ; ಎತ್ತರದಲ್ಲಿ; ಪುರುಷನನ್ನು ಜಯಿಸುವುದು; ಹುಂಜ.
—ಇಸು ರಾಶಿಯಾಗು; ರಾಶಿಮಾಡು.
ಪುಂಜಿತ ರಾಶಿಗೊಂಡ; ಕಲೆತ; ಸೇರಿದ.
ಪುಂಜೀಕರಣ ರಾಶಿಮಾಡುವಿಕೆ.
ಪುಂಡ ತುಂಟ; ಲೂಟಗಾರ; ಉಢಾಳ, ತಂಟೆಖೋರ.
—ತನ (ತುಂಟುತನ), ನೀಚತನ; ಲೂಟ; ಹಾದರ; ಘಟಿಂಗತನ.
ಪುಂಡರೀಕ ಆಗ್ನೇಯ ದಿಕ್ಕಿನ ದಿಗ್ಗಜ; ಬಿಳಿ ತಾವರೆ; ಬಿಳಿ ಪತಾಕೆ; ಹುಲಿ; ಗಿಳಿ.
—ಆಕ್ಷ ತಾವರೆಯಂತೆ ಕಣ್ಣುಳ್ಳವ; ವಿಷ್ಣು; ಕೃಷ್ಣ.
ಫುಂಡಾಯಿ (ಪುಂಡುತನ).
ಪುಂಡಿ ನಾರುಗಿಡ, ಒಂದು ಬಗೆಯ ಸಣಬು.
ಪುಂಡು (ಪುಂಡ), ತುಂಟಾಟಿಕೆ.
ಪುಂಡ್ರು ಬಿದರಗಬ್ಬು, ಕೆಂಪು ಕಬ್ಬು; ಒಬ್ಬ ರಾಕ್ಷಸ; ಹಣೆ ಮೇಲಿನ ನಾಮ; ಬಂಗಾಲ ಬಿಹಾರದ ಜನರು; ಚಿತ್ರ.
ಪುಂಯೋಗ ಪುರುಷನೊಡನೆ ಭೋಗ.
ಪುಂಶ್ಚಲೀ ಅಸತಿ, ಹಾದರಗಿತ್ತಿ, ಮಿಂಡಿ.
ಪುಂಸವನ ಗಂಡು ಶಿಶು ಹುಟ್ಟುವಂತೆ ಮಾಡುವ ಒಂದು ಸಂಸ್ಕಾರ.
ಪುಂಸ್ತ್ವ ಪುರುಷ ಎಂಬ ಹೆಸರಿಗೆ ಕಾರಣವಾದ ಗುಣ; ಪುರುಷನೆಂದು ತೋರಿಸುವ ಅಂಗ; ವೀರ್ಯ; ಗಂಡಸುತನ.
ಪೂ (ಪೂವು), ಹೂ, ಪುಷ್ಪ.
—ಗುಡಿ ಹೂಗೊಂಚಲು.
—ತಂದಲ್ ಹೂಮಳೆ, ಪುಷ್ಪವೃಷ್ಟಿ.
—ಬಲಿ ರಂಗವಲ್ಲಿ; ಹೂವನ್ನು ಚೆಲ್ಲುವುದು.
—ವಡಿಗ ಹೂಮಾರುವವ.
ಪೂಗ ಅಡಕೆಮರ; ಗುಂಪು; ರಾಶಿ.
ಪೂಗೀಫಲ ಅಡಕೆ.
ಪೂಜಕ ಆರಾಧಿಸುವವ, ಗೌರವಿಸುವವ.
ಪೂಜಾರಿ ಅರ್ಚಕ, ದೇಗುಲದಲ್ಲಿ ದೇವರನ್ನು ಆರಾಧಿಸುವವ.
ಪೂಜೆ ಸತ್ಕಾರ, ಆದರ, ಅರ್ಚನೆ.
ಪೂಜ್ಯ (ಪೂಜಿ), ಗೌರವಕ್ಕೆ ತಕ್ಕವ, ಸತ್ಕಾರ ಯೋಗ್ಯ; ಸೊನ್ನೆ, ಶೂನ್ಯ.
ಪೂಟು ಚೂರು; ಸಣ್ಣದು; ಅಡಿ, 12 ಇಂಚುಗಳು.
ಪೂಡು (ಹೂಡು), ಸೇರಿಸು; ನೊಗಕ್ಕೆ ಪ್ರಾಣಿಗಳನ್ನು ಸೇರಿಸು; ಸಿದ್ಧಮಾಡು; ತೊಡಗು.
ಪೂಣ್ ಶಪಥಮಾಡು; ಆಣೆಮಾಡು; ತೊಡಗು; ಒಪ್ಪು; ಒಪ್ಪುಗೆ.
—ಕೆ ಶಪಥ; ಪ್ರತಿಜ್ಞೆ, ಒಪ್ಪುಗೆ.
ಪೂಣಿಗ ಬಿಲ್ಲುಗಾರ.
ಪೂತ ಚೊಕ್ಕವಾದ, ಶುದ್ಧವಾದ; ಹೂಬಿಟ್ಟ; ಗಾಳಿಸಿದ, ಕೇರಿದ; ಕೊಳೆತ.
ಪೂತನಿ ಕಂಸನಿಂದ ಕೃಷ್ಣನ ವಧೆಗಾಗಿ ಕಳುಹಲ್ಪಟ್ಟ ಒಬ್ಬ ರಕ್ಕಸಿ.
ಪೂತಿ ಶುದ್ಧಿ; ಚೊಕ್ಕತನ; ಕೊಳೆ, ನಾತ.
ಪೂತು ಭಾಪು, ಶಹಭಾಸ್; ಹೂಬಿಡುವ.
ಪೂದೇರ ಕಾಮ, ಮನ್ಮಥ.

ಪೂದೇರು ಹೂವಿನ ತೇರು; ಪುಷ್ಪಕವಿಮಾನ.
ಪೂಪ ಹಿಟ್ಟಿಂದ ಮಾಡಿದುದು, ಒಡೆ.
ಪೂಮ (ಪ್ಯೂಮ), ಸಿಂಹದ ಜಾತಿಯ ದಕ್ಷಿಣ ಅಮೇರಿಕದ ಮೃಗ.
ಪೂಯ ದುರ್ಗಂಧ, ನಾರುವಿಕೆ, ಕೆಟ್ಟ ವಾಸನೆ; ಕೀವಿನ ವಾಸನೆ.
ಪೂರ್ (ಪೂರ), ತುಂಬಿಸು.
ಪೂರ ನೀರಿನ ಸಮೂಹ, ತುಂಬಿರುವಿಕೆ; ನೆರೆ; ಪ್ರವಾಹ.
ಪೂರಕ ತುಂಬಿಕೆ; ತೃಪ್ತಿ; ಪ್ರಾಣಾಯಾಮದಲ್ಲಿ ವಾಯುತುಂಬಿಸಿಕೊಳ್ಳುವ ಒಂದು ಬಗೆ.
ಪೂರಯ್ಸು (ಪೂರೈಸು), ಮುಗಿಸು, ಕಾರ್ಯವನ್ನು ನೆರವೇರಿಸು.
ಪೂರವಿಸು ತುಂಬಿಸು.
ಪೂರಾ ಪೂರ್ತ, ಪೂರ್ಣ, ಎಲ್ಲ.
ಪೂರಾಯ ಬಿಳಿತ,ಮುಗಿತ,ಪೂರಿ; ವಿಶಾಲತೆ.
ಪೂರಿತ ಪೂರ್ಣ.
ಪೂರಿಸು ಊದು; ತುಂಬಿಸು; ಮುಗಿಸು.
ಪೂರು ಕ್ಷತ್ರಿಯ.
ಪೂರ್ಣ ತುಂಬಿದ; ಮುಗಿದ, ಕೊನೆಗೊಂಡ; ಬಾಗಿದ; ಶಕ್ತ; ಹಣ; ಹೋಳಿಗೆಯೊಳಗಿನ ಸಿಹಿ ವಸ್ತು; ಹೂರಣ.
—ಮೆ (ಪೂರ್ಣಿಮಾ), ಹುಣ್ಣಿಮೆ.
ಪೂರ್ಣಪ್ರಜ್ಞ ಸಂಪೂರ್ಣ ಜ್ಞಾನವುಳ್ಳವ; ಮಧ್ವಾಚಾರ್ಯ.
ಪೂರ್ಣಮಾನ ಹುಣ್ಣಿಮೆ ದಿನ ಮಾಡತಕ್ಕ ಒಂದು ಯಾಗ.
ಪೂರ್ಣವಿರಾಮ ವಾಕ್ಯದ ಕೊನೆಯ ಈ . ಗುರುತು.
ಪೂರ್ಣಾಂಕ ಇಡಿ ಸಂಖ್ಯೆ, ಪೂರ್ಣ ಸಂಖ್ಯೆ.
ಪೂರ್ಣಾಹುತಿ ಯಜ್ಞದಲ್ಲಿ ಕೊಡುವ ಕೊನೆಯ ಹವಿಸ್ಸು.
ಪೂರ್ತ (ಪೂರ್ತಿ), ಕೆರೆ ಮೊದಲಾದುವುಗಳ ಅಗತೆ; ಜಲಾಶಯ ರಚನೆ; ಪೂರ್ಣಮಾಡುವಿಕೆ; ಸಂಪೂರ್ಣ; ಕಾಲ.
ಪೂರ್ವ (ಪೂರ್ಬ), ಮೊದಲು; ಸಮಸ್ತ; ಅಣ್ಣ; ಮೂಡು ದಿಕ್ಕು; ಹಿಂದೆ.
—ಜ ಹಿಂದಿನವ, ಪುರಾತನ ಕಾಲದವ; ಹಿರಿಯ; ಅಗ್ರಜ.
ಪೂರ್ವಪಕ್ಷ ನ್ಯಾಯ ವಿರೋಧವಾದ ಮಾತು; ಸಿದ್ಧಾಂತ ವಿರೋಧವಾದ ಮಾತು, ಪ್ರತಿವಾದ.
ಪೂರ್ವಮೀಮಾಂಸೆ ವೇದೋಕ್ತ ತಂತ್ರಗಳ ವಿಚಾರವಾಗಿ ಜೈಮಿನಿ ಎಂಬವನು ಬರೆದ ಗ್ರಂಥ.
ಪೂರ್ವರಂಗ ನಾಟಕ ಮೊದಲಾದುವುದಕ್ಕೆ ಮುಂಚೆ ಹಾಡುವ ಗೀತ ಮೊದಲಾದುವು; ಪೀಠಿಕೆ; ತಯಾರಿ; ಹಿನ್ನೆಲೆ.
ಪೂರ್ವಾಚಲ ಮೂಡುಬೆಟ್ಟ, ಉದಯಾಚಲ.
ಪೂರ್ವಾಪರ ಹಿಂದೆ ಮುಂದೆ.
ಪೂರ್ವಾಭಾದ್ರೆ ಒಂದು ನಕ್ಷತ್ರ ರಾಶಿ.
ಪೂರ್ವಾಷಾಢಾ 20ನೆಯ ನಕ್ಷತ್ರ ರಾಶಿ.
ಪೂರ್ವಾಹ್ನ ಹಗಲಿನ ಪ್ರಾರಂಭ, ಬೆಳಿಗ್ಗೆ.
ಪೂರ್ವಿ ಒಂದು ರಾಗ.
ಪೂರ್ವಿಕ ಹಿರಿಯ; ಹಿಂದಿನವ; ಪುರಾತನ ಕಾಲದವ.
ಪೂರ್ವೋಕ್ತ ಮೊದಲು ಹೇಳಿದ.
ಪೂಲಿ ಹಿಂದಿನ ಒಂದು ಕಾಲದ ನಾಣ್ಯ, ಪೆಗೋಡಾ, 3½ ರೂಪಾಯಿ ಬೆಲೆಯ ಒಂದು ನಾಣ್ಯ.
ಪೂಲು ಸೇತುವೆ, ಸಂಕ.
ಪೂಷ (ಪೂಷಣ), ಬೆಳೆದವ, ಪುಷ್ಟಿಗೊಂಡವ; ಸೂರ್ಯ; ಒಬ್ಬ ದೇವತೆ, ದನಕರುಗಳ ಪಾಲಕನಾದವ.
ಪೂಸು ಹಚ್ಚು, ಲೇಪಿಸು; ತೊಡೆ; ಹೂಸು.
ಪೂಳ್ (ಪೂಳು, ಹೂಳು), ಮುಚ್ಚು, ಹುಗಿ,

ಮಣ್ಣಿನ ಅಡಿಯಲ್ಲಿ ಹಾಕು; ಹೊದೆಸು; ಹೂಳಿಕೊಂಡಿರುವ ಮಾರ್ಗ.

—ಕೆ ಹೂಳುವಿಕೆ, ಬಳೆದುಕೊಳುವಿಕೆ.

ಪೃ ಉದ್ಯೋಗಮಾಡು; ಪ್ರೀತಿಗೊಳ್ಳು; ಕಾಪಾಡು; ಉಪಸರ್ಗ.

ಪೃಚ್ ಸಂಪರ್ಕಮಾಡು, ಸೇರು.

ಪೃಚ್ಛಾ (ಪೃಚ್ಛೆ), ಪ್ರಶ್ನೆ, ಸವಾಲು.

ಪೃತನಾ (ಪೃತನೆ), 243 ರಥ, 243 ಆನೆ, 729 ಕುದುರೆ, 12115 ಜನಗಳ ಒಂದು ಸೇನಾವಿಭಾಗ.

ಪೃಥ್ ಎಸೆ; ಕಳುಹಿಸು.

ಪೃಥಕ್ ಬೇರೆ; ನಾನಾ ರೂಪ; ಹೊರತು, ಉಳಿದು, ಬಿಟ್ಟು.

—ಕರಣ ವಿಂಗಡಿಸುವಿಕೆ, ಬೇರೆ ಮಾಡುವಿಕೆ.

ಪೃಥಗ್ಜನ ಸಜ್ಜನರಿಂದ ಬೇರೆಯಾದವ; ನೀಚ.

ಪೃಥಾ (ಪೃಥೆ), ಕುಂತಿಭೋಜನ ಸಾಕುಮಗಳಾದ ಕುಂತಿ. ಪಾಂಡವರ ತಾಯಿ.

ಪೃಥಿವಿ (ಪೃಥ್ವಿ), ಭೂಮಿ, ಧರೆ; ಜಮೀನು.

ಪೃಥು ಸೂರ್ಯವಂಶದ ಒಬ್ಬ ಅರಸು. ಇವನು ಮೇನ ರಾಜನೆಂಬವನ ತೋಳಿಂದ ಜನಿಸಿದನೆಂದು ಕಥೆ; ದೊಡ್ಡದು, ವಿಸ್ತಾರವಾದುದು.

ಪೃಥುಕ ಅವಲಕ್ಕಿ; ಹುಡುಗ.

ಪೃಥುಲ ಸ್ಥೂಲ, ತೋರವಾದ, ಗಾತ್ರವಾದ.

ಪೃಥೆ ಕುಂತಿ, ಕುಂತಿಭೋಜನ ಸಾಕುಮಗಳು, ಪಾಂಡವರ ತಾಯಿ.

ಪೃಥ್ವಿ ಪೊಡವಿ (ದ್ಭ), ಭೂಮಿ; ಕಾಡು ಜೀರಿಗೆ.

ಪೃದಾಕು ಸರ್ಪ, ಚೇಳು; ಹುಲಿ; ಆನೆ.

ಪೃಶ್ನಿ ಕುಳ್ಳ, ಗಿಡ್ಡ, ಗುಜ್ಜಾರಿ; ಬಲಹೀನ; ಕೃಷ್ಣನ ತಾಯಿ ದೇವಕಿ.

—ಗರ್ಭ ದೇವಕಿಯ ಮಗ, ಕೃಷ್ಣ.

ಪೃಷ್ಟ ಕೇಳಿದ, ಪ್ರಶ್ನಿಸಲ್ಪಟ್ಟ.

ಪೃಷ್ಠ ಹಿಂಭಾಗ; ಪೀಠ; ಠಿಕ, ಅಂಡು; ಸೂತ್ರವಿಶೇಷ.

ಪೃಷ್ಠದೃಷ್ಟಿ ಹಿಂಗಡೆದೃಷ್ಟಿಯುಳ್ಳದು, ಕರಡಿ.

ಪೆಕ್ಖಣ (ದ್ಭ) ಪ್ರೇಕ್ಷಣ (ಸಂ).

ಪೆಕ್ಕಳ ಗರ್ವ, ಹೆಮ್ಮೆ; ಆಧಿಕ್ಯ, ವೆಗ್ಗಳ.

—ಇಸು (ಹೆಕ್ಕಳಿಸು), ಗರ್ವದೋರು; ಹೆಚ್ಚು.

ಪೆಗಲ್ (ಹೆಗಲು), ಭುಜ.

ಪೆಗ್ಗು ಹೆಡ್ಡ, ಪೆಂಗ, ಎಬಡ.

ಪೆಚ್ಚರ (ಎಚ್ಚರ).

ಪೆಚ್ಚು (ಪೆರ್ಚು), ಹೆಚ್ಚು, ಅಧಿಕವಾಗು; ಹುಚ್ಚು; ತಬ್ಬಿಬ್ಬಾಗುವಿಕೆ, ಗಾಬರಿ.

—ಗೆ ಹೆಚ್ಚುಗೆ, ಆಧಿಕ್ಯ; ದೆಕ್ಕಾಳ.

ಪೆಜ್ಜೆ (ಹೆಜ್ಜೆ), ಹಜ್ಜೆ, ಕಾಲು; ಗುರುತು.

—ಪಿಡಿ ಹಜ್ಜೆಯನ್ನು ಅನುಸರಿಸು, ಹಿಂಬಾಲಿಸು.

ಪೆಟಾರಿ ಪೆಟ್ಟಗೆ, ಬೀಳಲಿನ ಪೆಟ್ಟಗೆ.

ಪೆಟ್ಟೆ ಹೆಂಟೆ, ಮುದ್ದೆ.

ಪೆಟ್ಟಗೆ (ದ್ಭ) ಪೇಟಕಾ (ಸಂ), ಸಂದುಕ.

ಪೆಟ್ಟು ಧೈರ್ಯ, ಅದಟು; ಹೊಡೆತ, ಬಡಿತ; ಆಘಾತ; ಬಿದ್ದ ಇಲ್ಲವೆ ಹೊಡೆದು ಆದ ನೋವು.

—ಪೆರ್ಚು ಗರ್ವಪಡು.

ಪೆಟ್ಲುಪ್ಪು ಪೊಟಾಸಿಯಂ ನೈಟ್ರೇಟ್ ಎಂಬ ಲವಣ, ಸೌಳುಪ್ಪು, ಸಿಡಿ, ಮದ್ದಿಗೆ ಬೇಕಾದ ಲವಣ.

ಪೆಡ (ಹೆಡ), ಹಿಂಗಡೆ, ಹಿಂದೆ.

—ಮೆಟ್ಟು ಹಿಂದೆ ಸರಿ, ಹಿಮ್ಮೆಟ್ಟು.

ಪೆಡಗೆ (ಹೆಡಗೆ), ದೊಡ್ಡ ಬುಟ್ಟಿ, ಮಕರಿ.

ಪೆಡತಲೆ ಹಿಂದಲೆ, ತಲೆಯ ಹಿಂಭಾಗ.

ಪೆಡಮುಡಿ ಹೆಡಮುರಿ.

—ಕಟ್ಟು ಎರಡೂ ಕೈಗಳನ್ನು ಬೆನ್ನಹಿಂದೆ ತಂದು ಕಟ್ಟು; ಹೆಡಮುರಿಗೆ ಕಟ್ಟು.

ಪೆಡಸು (ಹೆಡಸು), ಬಿರಸು; ಜಿಗುಟು.
ಪೆಡೆ ಹೆಡೆ; ತೆಂಗಿನ ಸೋಗೆ; ತಾಳೆ ಸೋಗೆ.
—ಮಣಿ ಹಾವಿನ ಹಣೆಯ ಮೇಲಿನ ಮಣಿ.
ಪೆಡೆಯ ಹೆಳವ, ಎಡಗ; ಕೆಲಸಕ್ಕೆ ಬಾರದವ.
ಪೆಣ್ ಹೆಣ್ಣು; ಹೆಂಗಸು.
ಪೆಣ ಹೆಣ.
ಪೆಣಗು (ಹೆಣಗು), ಜಗಳಾಡು; ಒದ್ದಾಡು, ಶ್ರಮಪಡು.
— ಇಸು ಕಾದುವಂತೆ ಮಾಡು.
ಪೆಣಸು ಸೇರಿಕೆ, ಕೂಟ; ಅಪ್ಪುಗೆ.
ಪೆಣೆ (ಹೆಣೆ), ಸೇರಿಸಿ ಹೊಸೆ; ಜತೆಸೇರಿ ಹೊಸೆದುಕೊಂಡಿರುವುದು; ಸೇರಿಕೆ.
ಪೆಣೆವಕ್ಕಿ (ನೋಡು: ಎಣೆವಕ್ಕಿ).
ಪೆಣ್ಣಾನೆ ಹೆಣ್ಣು ಆನೆ, ಕರಿಣಿ.
ಪೆಣ್ಣು ಹೆಣ್ಣು; ಹೆಣ್ಣು ಕೊಕ್ಕರೆ, ಹೆಣ್ಣು ಬಕ.
ಪೆಣ್ದಳ ಹೆಂಗಸರ ಸೇನೆ.
ಪೆಣ್ಮರುಳ ಹೆಣ್ಣಿನಲ್ಲಿ ತೀರ ಆಸಕ್ತನಾದವ; ಕಾಮುಕ.
ಪೆದೆ (ಹೆದೆ), ಬಿಲ್ಲಿನ ಹಗ್ಗ.
ಪೆದ್ದ ದೊಡ್ಡ, ವಿಶಾಲನಾದ; ಹೆಡ್ಡ, ಕಾಣಲು ದೊಡ್ಡದಾಗಿದ್ದರೂ ಬುದ್ಧಿ ಸಾಲದ.
ಪೆನ್ನೆ ಪೆನ್ನಾರ್, ಪಿನಾಕಿನಿ ನದಿ.
ಪೆರ್ ಹೆರು, ಪಡೆಯು; ಗಳಿಸು; ಸೇರು; ಅನುಭವಿಸು; ಹೆರೆಗಟ್ಟು, ಹೆಪ್ಪುಗಟ್ಟು.
ಪೆರ ಹಿಂದಿನ ಭಾಗ; ಪರರ; ಹೊರಗಿನ.
—ಗು (ಪೆರಗೆ), ಹಿಂಭಾಗ; ಹೊರಗಿನ.
—ತು ಬೇರೆ, ಬೇರೆಯದು.
—ತೆಗೆ ಹಿಂದೆಗೆ, ಹಿಂಜರಿ, ಹಿಮ್ಮೆಟ್ಟು.
ಪೆರಗಿಡು ಹಿಮ್ಮೆಟ್ಟು.
ಪೆಱು ಹೆರು; ಪಡೆ, ಹೊಂದು; ಗಳಿಸು; ಸೇರು; ಅನುಭವ ಪಡೆ.
ಪೆರೆ ಹೆರೆ, ಹಾವಿನ ಮೈಮೇಲಿನ ತೆಳ್ಳಗಿನ ಚರ್ಮ, ಪರೆ, ಹಿಣಿಜು; ಚಂದ್ರ.
—ಕಳೆ ಹೆರೆ ಕಳಚು, ಪರೆ ಕಳಚು.
ಪೆರ್ಕಳ (ಪೆಕ್ಕಳ).
ಪೆರ್ಕುಡಿ ದೊಡ್ಡ ವಂಶ.
ಪೆರ್ಗಡೆ (ಹೆಗ್ಗಡೆ), ಯಜಮಾನ.
ಪೆರ್ಗವತೆ ಬೆರಳನ್ನು ಬಿಡಿಸಿ ಹಿಡಿದ ಹಸ್ತ; ದೊಡ್ಡ ಮೋಸ.
ಪೆರ್ಚು (ಪೆಚ್ಚು).
ಪೆರ್ಬಟ್ಟೆ ದೊಡ್ಡ ದಾರಿ, ಹೆದ್ದಾರಿ.
ಪೆರ್ಬಡಿಕೆ ವೈಭವ, ಲಾವಣ್ಯ, ಆಧಿಕ್ಯ.
ಪೆರ್ಬಡೆ ದೊಡ್ಡ ಪಡೆ, ಭಾರಿಸೇನೆ.
ಪೆರ್ಬುಲಿ ಹೆಬ್ಬುಲಿ, ದೊಡ್ಡ ಹುಲಿ.
ಪೆರ್ಬೊರೆ ದೊಡ್ಡ ಹೊರೆ.
ಪೆರ್ಮರವೆ ಹೆಚ್ಚಿನ ಮರವೆ; ಸಾವು, ಮರಣ.
ಪೆರ್ಮಾತು ದೊಡ್ಡ ಮಾತು; ಗಂಭೀರ ಅರ್ಥವುಳ್ಳ ನುಡಿ.
ಪೆರ್ವಿಡಿ (ಪಿಡಿ = ಹೆಣ್ಣಾನೆ), ದೊಡ್ಡ ಹೆಣ್ಣಾನೆ
ಪೆಸರ್ (ಹೆಸರು), ಖ್ಯಾತಿ, ಕೀರ್ತಿ.
— ಕೊಳ್ ಕೀರ್ತಿಪಡು, ಹೆಸರನ್ನು ಸಂಪಾದಿಸು, ಹೆಸರು ಪಡೆ; ಹೆಸರನ್ನು ಹೇಳು.
— ಪೆತ್ತ ಹೆಸರನ್ನು ಹೊಂದಿದ, ಖ್ಯಾತ.
ಪೆಸರಗೆ ಹೆಸರು ಕಾಳಿನ ಮೊಳಕೆ.
ಪೆಳಗಾಲ್ ಕಾಲಿಲ್ಲದಿರುವಿಕೆ, ಹೆಳವತನ.
ಪೆಳಗು (ಪೆಳಕು), ಭೀತಿ, ಭಯ; ಗಡಿಬಿಡಿ.
ಪೆಳರ್ (ಪೆಳರು), ಭಯ, ಅಂಜಿಕೆ; ಹೆದರು, ಭಯಪಡು.
ಪೆಳವ ಹೆಳವ, ಕಾಲಿಲ್ಲದವ.
ಪೆಳವಿ ಕಾಲಿಲ್ಲದವಳು, ಕುಂಟಿ.
ಪೆಳ್ಪಳಿಸು (ಪೆಳ್ಪಳಿಸು), ಪಿಳಿಪಿಳಿ ನೋಡು; ಭಯಗೊಳ್ಳು; ನಡುಗು.
ಪೆಂಗ ಹೆಡ್ಡ, ಅರೆಮರುಳ, ಮಂಕ.
ಪೆಂಚೆ (ಪಿಂಚೆ), ನವಿಲು.
ಪೆಂಟೆ ಹೆಂಟೆ; ಮುದ್ದೆ, ಮಣ್ಣಿನ ಉಂಡೆ; ಗಟ್ಟಿಯಾದುದು.

ಪೆಂಡ ಸ್ತ್ರೀ, ಹೆಣ್ಣು; ಪ್ರಾಣಿಗಳಲ್ಲಿನ ಹೆಣ್ಣು.
—ತಿ ಹೆಂಡತಿ, ಮಡದಿ.
ಪೆಂಡಿ (ಪೆಂಡೆ), ಅಂಡಿಗೆ, ಬಿಗಿದ ಗಂಟು.
ಪೆಂಡೆಯು ಕಡಗ; ಕಾಲಿಗೆ ತೊಡುವ ಬಿರುದಿನ ಬಳೆ.
ಪೆಂಪು ಪಿರಿದು; ಉನ್ನತಿಕೆ; ಆಧಿಕ್ಯ; ಘನತೆ; ಹೆಚ್ಚಳ; ವೈಭವ.
ಪೇಚಕ ಗೂಗೆ, ಗೂಬೆ; ಆನೆಯ ಬಾಲದ ತುದಿಬುಡ; ಮಂಚ; ಹೇನು; ಮುಗಿಲು; ಆಕಾಶ.
ಪೇಚು (ಪೇಚ), ತೊಂದರೆ, ತೊಡಕು, ಎಡರು.
—ಆಟ ತೊಡಕು, ಗಡಿಬಿಡಿ; ಸಂಕಷ್ಟ.
ಪೇಜ ಪಾನಕ.
ಪೇಟ ರುಮಾಲೆ, ಪಾಗು, ಪಕಡಿ.
ಪೇಟಕ ಪೆಟ್ಟಿಗೆ; ಪೆಟಾರಿ, ಬೀಳಲಿಂದ ಮಾಡಿದ ಸಂದುಕ; ಬುಟ್ಟಿ.
ಪೇಟೆ ಅಂಗಡಿಬೀದಿ.
ಪೇಡ ಹಾಲುಕೋವಾ; ಗಟ್ಟಿಕಟ್ಟಿದ ಹಾಲು.
ಪೇಣಿ ಒಂದು ಖಾದ್ಯ.
ಪೇತ (ದ್ಭ) ಪ್ರೇತ (ಸಂ).
ಪೇತು ಮನಸ್ಸಿನ ಗಡಿಬಿಡಿ; ಒಬ್ಬ ರಾಕ್ಷಸ.
ಪೇದೆ ಜವಾನ, ಸೇವಕ, ಉಗ್ರಾಣಿ.
ಪೇನು ಹೇನು; ಲೇಖನಿ, ಲೆಕ್ಕಣಿಕೆ.
ಪೇಯ ಕುಡಿಯತಕ್ಕುದು, ಪಾನ.
ಪೇರಡಿ ನಾಯಿ; ಹೆಮ್ಮಡಿ, ಪೂಜ್ಯ ಪಾದ.
ಪೇರಣಿ ಕುಣಿತ; ನೆಗೆತ; ಓಟ.
—ಗ ನಟ; ನರ್ತನಕಾರ.
ಪೇರಲ ಪೇರಳೆ, ಸೀಬೆ ಹಣ್ಣು.
ಪೇರಿ (ಫೇರಿ), ಸವಾರಿ, ಕುದುರೆ ಓಟ; ಸುತ್ತು.
ಪೇರಿಗ ನಟ; ನರ್ತನಕಾರ.
ಪೇರು (ಪೇರ್), ಹೇರು; ಹೊರೆ, ಹೇರುವವಸ್ತು.
—ಇಸು ಹೇರಿಸು, ಬಂಡಿ ಮೊದಲಾದುವುಗಳ ಮೇಲೆ ತುಂಬಿಸಿ ಹೊರಿಸು.

ಪೇರುರ (ಉರ=ಎದೆ) ಅಗಲವಾದ ಎದೆ.
ಪೇರುಲಿ ದೊಡ್ಡ ಮಾತು; ದೊಡ್ಡ ಘೋಷ.
ಪೇಲ್ (ಪೇಲು), ನಡುಗು; ನಡುಗುವಿಕೆ; ಹೇಲು, ಮಲ; ಮಲವಿಸರ್ಜನೆಮಾಡು.
ಪೇಲ ಅಂಡಕೋಶ; ಪುರುಷನ ಜನನೇಂದ್ರಿಯ.
ಪೇಲವ ಮೃದು, ಕೋಮಲ, ಮೆತ್ತಗೆ.
ಪೇಲೆ ಕೌಳಿಗೆ, ಥಾಲಿ.
ಪೇಶಲ ಮೃದು; ಸುಂದರ; ದಕ್ಷ; ಚತುರ.
ಪೇಶಿ ಮಾಂಸಪಿಂಡ; ಒಂದು ನದಿ; ಪಿಶಾಚಿ; ಒಬ್ಬ ರಾಕ್ಷಸಿ.
ಪೇಷ್ ಸೇವೆಮಾಡು, ನಿರ್ಣಯಿಸು; ಸಣ್ಣದಾಗಿ ವಿಂಗಡಿಸು.
ಪೇಷ್ಕಾರ ಕಂದಾಯ ಎತ್ತುವ ಒಬ್ಬ ಉದ್ಯೋಗಸ್ಥ.
ಪೇಷ್ವೆ ಮಹಾರಾಷ್ಟ್ರ ಅರಸುಗಳ ಮುಖ್ಯ ಮಂತ್ರಿ, ಪ್ರಧಾನಿ.
ಪೇಸ್ ಹೋಗು; ಹೇಸು, ಅಸಹ್ಯಪಡು.
ಪೇಸಿಕೆ ಹೇಸಿಕೆ, ಹೊಲಸು; ಜುಗುಪ್ಸೆ.
ಪೇಸು ಜುಗುಪ್ಸೆಗೊಳ್ಳು; ಹಿಂದಾಗು, ಹಿಂಜರಿ; ಹೇಯ, ನೀಚ.
ಪೇಸೊಳು ಅಸಹ್ಯವಾಗು.
ಪೇಳ್ (ಹೇಳು), ಉಸುರು, ನುಡಿ, ಕಥಿಸು; ಆಜ್ಞೆಮಾಡು, ನಿರೂಪಿಸು.
—ಇಕೆ ಹೇಳಿದ ಮಾತು; ಸಾಕ್ಷಿ.
ಪೇಳಿ ಹಾವಿನ ಬುಟ್ಟಿ.
ಪೇಳಿಗೆ ಪೇಳಿ, ಪೇಟ, ಪೆಟ್ಟಿಗೆ.
ಪೇಂಕುಳಿ ಪಿಶಾಚಿ, ಮರುಳು.
ಪೈ ಮೇಲಿನ; ಹೊರಗಿನ; ಆಣೆಯ $\frac{1}{12}$ನೇ ಅಂಶ; ಕಾಸು.
ಪೈಕ ಭಾಗ.
ಪೈಕಿ ಇಷ್ಟರಲ್ಲಿ, ಅಷ್ಟರಲ್ಲಿ; ಸಂಬಂಧದ.
ಪೈಗಂಬರ ಪ್ರವಾದಿ; ಇಸ್ಲಾಮ್ ಮತ ಸ್ಥಾಪಕನಾದ ಮುಹಮ್ಮದ.

ಪೈಗು ಟಾಕಣ, ತಟ್ಟು.
ಪೈಜಾಮ ಇಜಾರ, ಚಲ್ಲಣ.
ಪೈಜೆ ಪ್ರತಿಜ್ಞೆ, ಶಪಥ.
ಪೈತಣ (ಪೈಟಣ), ಉತ್ತರ ಹಿಂದುಸ್ಥಾನ ಒಂದು ಊರು.
ಪೈಠನನಿ ಒಬ್ಬ ಮುನಿ.
ಪೈತೃ ಪಿತೃಸಂಬಂಧವಾದುದು.
—ಕ ಪಿತೃಗಳಿಂದ ಬಂದುದು, ದಾಯ, ಸಾಲು; ಶ್ರಾದ್ಧ.
ಪೈಪೋಟಿ ಸ್ಪರ್ಧೆ, ಮೇಲಾಟ, ಹುರುಡು.
ಪೈಲವಾನ ಕಸರತ್ತುಗಾರ; ಮಲ್ಲ, ಜಟ್ಟಿ, ಬಲಶಾಲಿ.
ಪೈಶಾಚ ಪಿಶಾಚಿಯಿಂದ ನಿರ್ಮಿತವಾದುದು; ಪಿಶಾಚಿಯ ರೀತಿ.
ಪೈಸಲಾತಿ (ಪೈಸಲು), ಮುಗಿತ, ಬಳಿತ, ಕೊನೆ ಮಾಡುವಿಕೆ.
ಪೈಸಲು ತೀರ್ಮಾನ; ಸಾಲ ಮುಗಿಸುವಿಕೆ.
ಪೈಸೆ ದುಡ್ಡು; ಮೂರು ಪೈ; ದುಡ್ಡು.
ಪೊಕ್ಕುಳ್ (ಹೊಕ್ಕುಳು), ನಾಭಿ; ಜಘನ; ಜತೆ.
ಪೊಕ್ಕಳಿ ಕೋಗಿಲೆ.
ಪೊಗದಿ ತೆರಿಗೆ, ಕರ; ಅರಸರು ಚಕ್ರವರ್ತಿಗೆ ಕೊಡುವ ಕಪ್ಪ.
ಪೊಗರ್ ಕಾಂತಿ, ಹೊಳಪು; ಬಣ್ಣ.
—ಒಗು ಕಾಂತಿ ಹುಟ್ಟು.
—ಕಣೆ ಕಾಂತಿಯುಳ್ಳ ಬಾಣ.
ಪೊಗಸು ಹಗಲು, ಹೊತ್ತಾರೆ; ವಿಸ್ತರಿಸು.
ಪೊಗಳ್ (ಹೊಗಳು), ಕೊಂಡಾಡು, ಸ್ತುತಿಸು, ಬಣ್ಣಿಸು.
—ಕೆ (ಹೊಗಳಿಗೆ), ಸ್ತುತಿ; ಬಣ್ಣನೆ.
—ತೆ ಪ್ರಸಿದ್ಧಿ, ಹೊಗಳಿಕೆ.
ಪೊಗು (ಪುಗು), ಹೊಗು, ಸೇರು, ಪ್ರವೇಶಿಸು, ನುಗ್ಗು; ಒಗು.
—ಇಸು ಹೊಗಿಸ್ಸು, ಹೊಗುವಂತೆ ಮಾಡು.
ಪೊಗೆ ಹೊಗೆ, ಧೂಮು; ಹೊಗೆ ಹೊರಡಿಸು.
ಪೊಚ್ಚ ಕಾಂತಿಯುಕ್ತ; ಸ್ವಚ್ಛ; ಹೊಸ; ಹೊಳೆ, ತೋರೆ.
ಪೊಚ್ಚರ ಪ್ರಸಿದ್ಧವಾದ.
ಪೊಚ್ಚರು ತೋರು, ಗೋಚರವಾಗು; ಹೊಳೆ.
ಪೊಚ್ಚಳಿ ತೋರೆ, ಹೊಳೆ; ಕಾಂತಿ, ಶೋಭೆ.
ಪೊಟ್ಟ ಬಾಯಿಬಾರದವ, ಮೂಕ.
ಪೊಟ್ಟಣ (ಪಟ್ಟ) ಸಣ್ಣ ಕಟ್ಟು; ಎಲೆಗಳಿಂದ ಮಾಡಿದ ದೊನ್ನೆ.
ಪೊಟ್ಟರೆ ಮರದ ಪೊಟರೆ, ಮರದ ಟೊಳ್ಳು, ಡೊಗರು.
ಪೊಟ್ಟಳ ಗರ್ವ.
ಪೊಟ್ಟು ಹೊಟ್ಟು, ಹೊರಗಿನ ಸಿಪ್ಪೆ, ಉಮಿ; ಜಳ್ಳು, ಟೊಳ್ಳು; ತಿರುಳಿಲ್ಲದುದು.
ಪೊಟ್ಟೆ ಹೊಟ್ಟೆ; ಹೊಳ್ಳು; ಡೊಳ್ಳು; ಪೊಟರೆ, ಡೊಗರು, ಹೋಟೆ.
ಪೊಡ (ದ್ಭ) ಪುಟ (ಸಂ), ಬೊಗಸೆ; ಕೈಕುಡಿಕೆ; ಸ್ಫುಟ; ರೂಪ, ತೋರಿಕೆ.
ಪೊಡಕರಿಸು ಸ್ಫುರಿಸು, ಅಲ್ಲಾಡು; ಹೊರ ಹೊಮ್ಮು; ಪ್ರಕಾಶಿಸು; ಕಾಣಿಸು.
ಪೊಡಮಡು (ಪೊಡವಡು), ನಮಸ್ಕರಿಸು; ಹೊರಡು, ದಯಮಾಡು; ಅಡ್ಡಬೀಳು.
ಪೊಡರ್ (ಪೊಡರು), ನಡುಗು, ಅಲ್ಲಾಡು; ಪ್ರಕಾಶಿಸು; ಮೈದೋರು.
—ಕೆ ನಡುಕು, ಸಂಕೋಚ; ಪ್ರಕಾಶ, ಕಾಂತಿ; ಚಲನೆ.
—ಪು ಶೌರ್ಯ; ಹೆಚ್ಚಿಕೆ; ವೇಗ; ವೈಭವ.
—ಮೆ ನಡುಕು, ಸಂಕೋಚ.
ಪೊಡವಿ (ದ್ಭ) ಪೃಥ್ವೀ (ಸಂ), ಧರೆ; ಪಲ್ಲಕ್ಕಿ, ಮಂಚಲು.
ಪೊಡೆ ಬಡಿ; ಕತ್ತರಿಸು; ಜಡಿ; ಸುರಿ; ನಿವಾರಿಸು, ಅಟ್ಟು; ಕೆಡೆ; ನುಂಗು; ಬಾಣ ಬಿಡುವವರು ಕೈಗೆ ಕಟ್ಟಿಕೊಳ್ಳುವ ಚರ್ಮದ

ರಕ್ಷಣೆ; ತೆನೆ; ಹೊಟ್ಟೆ; ಬತ್ತದ ತುಂಬು ತೆನೆ; ಹೊರೆ; ಒಳಗು; ಬದಿ.

—ಕೆಡೆ ಹೊಡೆದು ಕೆಡೆ.

—ಪಡು ಉದ್ದಂಡ ಬೀಳು, ನಮಸ್ಕರಿಸು.

—ಮರಳು ಮಗ್ಗಲು ಮಗುಚು; ಪಕ್ಕಕ್ಕೆ ತಿರುಗು; ಮಡಚು.

ಪೊಡೆಯಲರ ನಾಭಿಯಲ್ಲಿ ಕಮಲ ಉಳ್ಳವ; ವಿಷ್ಣು.

ಪೊಣರ್ (ಪೊಣರು), ಯುಗ್ಮ, ಜತೆ; ಯುದ್ಧ ಮಾಡು.

—ಕೆ ಯುದ್ಧ, ಕಾಳಗ.

—ಚು ಸೇರಿಸು, ಜತೆಮಾಡು; ಬೆರಸು; ಯುದ್ಧಮಾಡು.

ಪೊಣೆ ಹಣೆ,ಹೊಣೆ,ಜವಾಬುದಾರಿ; ಕಾರಣ.

ಪೊಣ್ಮು ಹೊಮ್ಮು; ಹೊರಡು; ಹುಟ್ಟು, ಉಂಟಾಗು; ವ್ಯಾಪ್ತವಾಗು; ಉಬ್ಬು.

ಪೊತ್ತಗೆ (ದ್ಭ) ಪುಸ್ತಕ (ಸಂ), ಹೊತ್ತಗೆ.

ಪೊತ್ತರೆ (ಹೊತ್ತಾರೆ) ನಸುಕು,ಬೆಳಗಿನಮುಂಚೆ

ಪೊತ್ತಿ ಹೊಗೆ, ಹತ್ತಿ.

—ಗೆ ಜ್ವಾಲೆ, ಉರಿ, ಹೊತ್ತುವಿಕೆ, ಉರಿವಿಕೆ; ಪುಸ್ತಕ.

ಪೊತ್ತು (ಹೊತ್ತು), ವೇಳೆ; ಸೂರ್ಯ, ಸಮಯ; ಹತ್ತಿಕೊಳ್ಳು, ಉರಿ; ಕರಟು.

—ಕಳೆ ಸಮಯ ಹಾಳುಮಾಡು.

—ಬೆಳಕು ಸೂರ್ಯಪ್ರಕಾಶ.

ಪೊದಕುಳಿ (ಹೊದಕುಳಿ), ಚಿಂತೆ, ವ್ಯಸನ, ಸಂತಾಪ.

ಪೊದಕೆ ಹೊದಿಕೆ; ಆಚ್ಛಾದನ; ಮರೆ.

ಪೊದರ್ (ಪೊದರು), ಹೊದೆ, ಹೊದರು, ಗಿಡಗಳ ಗುಂಪು, ಬಲ್ಲೆ, ಹಂದರ; ಗಿಡಗಳ ಪೊಳ್ಳು ಜಾಗ, ಡೊಗರು.

ಪೊದಳ್ ಹೊರಡು,ಹೊರಹೊಮ್ಮು;ಪ್ರಸಿದ್ಧವಾಗು; ರೂಢಿಯಾಗು; ವ್ಯಾಪಿಸು.

—ಕೆ ವ್ಯಾಪ್ತಿ; ಗೋಚರ, ಹೆಸರಿಗೆ ಬರುವಿಕೆ, ಖ್ಯಾತಿ.

ಪೊದೆ ಪೊದರು, ಗಿಡಗಳ ಗುಂಪು; ಬತ್ತಳಿಕೆ; ಹೊದೆ,ಹೊದ್ದುಕೊಳ್ಳು;ಸೇರು,ಹೊಂದು.

—ಇಸು ಹೊದ್ದಿಸು, ಹೊಚ್ಚು.

ಪೊದ್ದು (ಪೊರ್ದು), ಹೊಂದು, ಸೇರು.

—ಗೆ ಸೇರಿಕೆ.

ಪೊನ್ ಹೊನ್ನು, ಚಿನ್ನ, ಬಂಗಾರ; ಗೊಬ್ಬರ.

—ಒಡೆಯ ಹೊನ್ನಿನ ಒಡೆಯ, ಕುಬೇರ.

ಪೊನಲ್ (ಹೊನಲು), ಪ್ರವಾಹ, ನೀರಿನ ಹರಿಯುವಿಕೆ; ಹರಿ.

—ಇಡು ಪ್ರವಾಹವಾಗು, ಹರಿ.

ಪೊನ್ನ ಒಬ್ಬ ಪ್ರಸಿದ್ಧ ಕನ್ನಡ ಕವಿ.

ಪೊನ್ನೆ (ಹೊನ್ನೆ), ಒಂದು ಮರ.

ಪೊಮ್ ಪೊನ್, ಚಿನ್ನ.

ಪೊಮ್ಮಗಿಲ್ ಚಿನ್ನದ ಗೋಡೆ.

ಪೊಮ್ಮಿದರ್ ಹೆಚ್ಚಾದವರು,ಮೇಲಾದವರು, ಶ್ರೇಷ್ಠರು.

ಪೊಯ್ (ಪೊಯ್ಯು), ಹೊಯ್ಯು, ಹೊಡೆ; ಸುರಿ, ಎರೆ.

—ಲು ಹೊಯ್ಲು, ಪೆಟ್ಟು; ಗಟ್ಟಕೂಗು.

ಪೊಯ್ದಾಡು ಹೊಡೆದಾಡು, ಜಗಳಾಡು.

ಪೊರ್ (ಹೊರು), ತಲೆಯಲ್ಲಿ ಧರಿಸು; ಹೊಣೆಯಾಗು; ಹೊರೆ.

ಪೊರ ಹೊರಗಿನ.

ಪೊರಕೆ ಕಸಬರಿಕೆ, ಹಿಡಿಸೂಡಿ.

ಪೊರಗೆ ಹೊರಗೆ.

—ಆಗು ಎಣಿಕೆಗೆ ಸೇರದಿರು, ಅಪವಾದವೆನಿಸು, ಋತುಮತಿಯಾಗು,ಮುಟ್ಟಾಗು.

ಪೊರಜೆ ಹೊರಜೆ, ಕುದುರೆಗಳನ್ನು ಕಟ್ಟುವ ಹಗ್ಗ, ಲಗಾಮು.

ಪೊರಮ ಪೌಷ್ಟಿಕ; ಸಾರವತ್ತಾದ; ಪಾಲಕ.

ಪೊರಮಡು ಹೊರಡು.

ಪೊರವಾರ್ ಜಘನ, ಅಂಡು; ತಿಕ; ಸ್ತ್ರೀಯರ ನಿತಂಬ; ನಡು.

ಪೊರವಿಗ ಹೊರಗಿನವ, ಪರದೇಶಿ.

ಪೊರಸು ರಕ್ಷಣೋಪಾಯ; ಗೌರವ; ನುಲಿ.

ಪೊರಳು ಹೊರಳು, ಉರುಳು; ಮರಳು; ದಾರಿ ಸರಿ, ತೇಲು, ತೆಲುಗು.

ಪೊರಿಗೆ ಹೊರಿಗೆ, ಜವಾಬುದಾರಿ;

—ವಾಳ ಹೊಣೆ ಹೊತ್ತವ, ಜವಾಬುದಾರ; ಜಾಮೀನುದಾರ.

ಪೊರಿಜು ಪರಿಜು, ರೂಪ.

ಪೊರು ಹೊರು, ಸಹಿಸು; ಹೇರು; ಆಧರಿಸು; ಹೊಂದು.

ಪೊರೆ ಹೊರೆ; ಪೋಷಿಸು, ಕಾಪಾಡು, ಸಾಕು. ಲೇಪಿಸು, ಹಚ್ಚು; ಸೇರು, ಕೂಡು; ಹೊರೆ, ಹೇರು; ಭಾರ; ಸಮೀಪ,ಮಗ್ಗಲು; ಪದರು; ಪರೆ, ಹೆರೆ; ತಪ್ಪು.

— ಅಳು ಹೊರೆಹೊರುವವ;ಸಮೀಪದವ.

ಪೊರ್ಕುಳಿ ಅಲೆ, ತೆರೆ.

ಪೊರ್ಕುಳ ಹೊಕ್ಕುಳು, ನಾಭಿ.

ಪೊರ್ದು ಹೊದ್ದು, ಸೇರು, ಸಮೀಪಿಸು.

—ಕಾರ ಗೆಳೆಯ, ಹೊಂದಿಕೆಯುವ, ನಂಟ.

— ಗೆ ಹೊಂದಿಕೆ, ಸಾಂಗತ್ಯ, ಸೇರುವೆ.

ಪೊಲ್ ಹೊಲಿ; ಸೇರಿಸು; ಒಗ್ಗು; ಯುಕ್ತವಾಗು; ನೀಚತೆ; ಹೇಯತನ.

ಪೊಲ ಹೊಲ, ಗದ್ದೆ, ಬೆಳೆ ಬೆಳೆವ ಜಾಗ; ಬಯಲು; ದಿಕ್ಕು.

— ಆಗು ದೃಷ್ಟಿ ಗೋಚರವಾಗು, ಬಯಲಾಗು.

ಪೊಲತಿ ನೀಚ ಸ್ತ್ರೀ; ಹೊಲೆಯರ ಸ್ತ್ರೀ.

ಪೊಲದಿ ಸಿತಗೆ, ಜಾರೆ, ಮಿಂಡಿ.

ಪೊಲಬು ಹೊಲಬು, ದಾರಿ; ರೀತಿ; ಠಿಕಾಣಿ; ಇರುವ ಜಾಗ.

— ಕಾಣ್ ಮಾರ್ಗತಿಳಿ; ಸಂಗತಿಯನ್ನರಿ.

— ತಪ್ಪು (ಹೊಲಬುದಪ್ಪು), ದಾರಿ ಕಾಣದಾಗು, ದಿಕ್ಕು ತೋಚದಾಗು.

ಪೊಲಿಗೆ ಹೊಲಿಯುವಿಕೆ.

ಪೊಲೆ ಹೊಲೆ; ದೋಷ; ಕಳಂಕ; ಅಲ್ಪತನ; ಸ್ತ್ರೀಯರ ಮುಟ್ಟು; ಹೊಲಸು, ಮೈಲಿಗೆ.

— ಕಲಸು ವರ್ಣಸಂಕರ; ನೀಚರೊಡನೆ ಸೇರು.

— ಯ ಹೊಲೆಯ, ಚಾಂಡಾಲ.

ಪೊಲ್ಲ ಕೆಡಕು; ಕೆಟ್ಟ.

— ಗೆಯ್ ಕೆಟ್ಟದ್ದನ್ನು ಯೋಚಿಸು.

— ಣ ಕೆಡುಗೆಲಸ; ನಿಷ್ಠುರ.

— ಮೆ ಕೇಡು, ಕೆಟ್ಟದ್ದು, ನೀಚ ಕೆಲಸ.

ಪೊಲ್ಲಿ ದುಷ್ಟೆ.

ಪೊಸ ಹೊಸ, ಹೊಸತು, ನವೀನ; ವಿಚಿತ್ರ.

— ಇಸು ಉಂಟುಮಾಡು; ಹೊಸತು ಮಾಡು.

— ಗೆ (ಒಸಗೆ), ಸಂತೋಷ; ಶುಭವಾರ್ತೆ.

— ಬ ಅಪರಿಚಿತ; ನವೀನವಾಗಿ ಬಂದವ.

ಪೊಸೆ ಹೊಸೆ, ಹೆಣೆ; ಉಜ್ಜು, ಕಡೆ, ತಿಕ್ಕು; ಚುಚ್ಚು, ಕೊರೆ; ಕಡೆಗೋಲು; ಪರರ ಅನುಗ್ರಹ ಸಂಪಾದಿಸುವಂತೆ ನಡೆವುದು.

ಪೊಳಕು (ಪೊಳಂಕು, ಹೊಳಕು),ತೇಲಾಡು; ಜಗಿ; ನೆಮರುಹಾಕು, ಮೆಲುಕಾಡಿಸು.

ಪೊಳಪು (ಪೊಳೆಪು).

ಪೊಳಲ್ (ಹೊಳಲು), ಪುರ, ಪಟ್ಟಣ; ಊರು; ರಾಜ್ಯ; ಹೊಳೆಯುವಿಕೆ; ತೋರಿಕೆ, ಗೋಚರ.

ಪೊಳೆ ಹೊಳೆ,ಪ್ರಕಾಶಿಸು; ಮನಸ್ಸಿಗೆ ತೋರು; ಚಲಿಸು; ಹಾರು; ನದಿ.

— ಪು ಹೊಳಪು, ಪ್ರಕಾಶ; ಮಿನುಗು.

— ಪೊಳೆವ ಬಹಳವಾಗಿ ಪ್ರಕಾಶಿಸುವ.

ಪೊಳ್ಳು ಹೊಳ್ಳು, ಜೊಂಡು, ಜಳ್ಳು; ವ್ಯರ್ಥ, ಪ್ರಯೋಜನಕ್ಕೆ ಬಾರದುದು.

—ಕಳೆ ನಿಸ್ಸಾರವಾಗಿಮಾಡು; ಹಾಳು ಮಾಡು.

ಪೊಳ್ತರ್ (ಪೊಳ್ತರೆ), ಪೊಳ್ತಿಲ್, ಪೊಳ್ತಡೆ, ಪ್ರಾತಃಕಾಲ, ಹೊತ್ತಾರೆ.

ಪೊಳ್ತು ಸಮಯ, ಹೊತ್ತು; ಸೂರ್ಯ.

ಪೊಳ್ಳು ಹೊಳ್ಳು, ಸಾರವಿಲ್ಲದುದು; ಟೊಳ್ಳು.

ಪೊಂ ಪೊನ್, ಚಿನ್ನ.

ಪೊಂಕ ಉಬ್ಬು, ಉತ್ಸಾಹ.

ಪೊಂಗ ಉಢಾಳ, ದುಡುಕಿ; ಅತಿ ಧೈರ್ಯ ಶಾಲಿ, ದಿಟ್ಟ.

ಪೊಂಗಲು ಮಕರ ಸಂಕ್ರಾಂತಿ ಉತ್ಸವ; ಒಂದು ರಸದನ್ನ, ಕಿಚಡಿ, ಹುಗ್ಗಿ.

ಪೊಂಗಳಸ ಚಿನ್ನದ ಕಲಶ.

ಪೊಂಗು ಅಲುಗಾಡು, ಬಳುಕು; ಎಡವು; ಅರಳು; ವಿಸ್ತರಿಸು, ಉಬ್ಬು; ಕುದಿ.

ಪೊಂಗೆ ಹುಲಗುಲ, ಹೊಂಗೆ; ಹೊನ್ನೆ.

ಪೊಂಚು ಹೊಂಚು, ಕಾದಿರು, ಅಡಗಿಕಾಯು.

—ಹಾಕು ಕಾದಿ ಕುಳಿತಿರು.

ಪೊಂಜಲಗೆ (ಸಲಗೆ=ಸಲಾಕಿ), ಚಿನ್ನದ ಸಲಾಕಿ.

ಪೊಂಜುರಿಗೆ ಬಂಗಾರದ ಕತ್ತಿ.

ಪೊಂದಾವರೆ ಹಳದಿ ಬಣ್ಣದ ತಾವರೆ.

ಪೊಂದು ಸಾಯು; ಪಡೆ; ಸೇರಿಕೆಯಾಗು; ಸೇರು; ಗುಂಪು.

ಪೊಂದೇರ್ ಚಿನ್ನದ ರಥ.

ಪೊಂದೊಡಪು ಚಿನ್ನದ ಆಭರಣ.

ಪೊಂಪುಳಿ ಆಧಿಕ್ಯ; ಪುಳಕ, ರೋಮಾಂಚ.

—ಪೋಗುಹಿಗ್ಗು; ರೋಮಾಂಚಗೊಳ್ಳು.

ಪೊಂಬಟ್ಟು ಚಿನ್ನದ ತಗಡು.

ಪೊಂಬಸಿರ ಹಿರಣ್ಯಗರ್ಭ, ಹೊಟ್ಟೆಯಲ್ಲಿ ಚಿನ್ನವುಳ್ಳವ.

ಪೊಂಬಾಳೆ ಹೊಂಬಾಳೆ; ಅಡಕೆ ಮತ್ತು ತೆಂಗಿನ ಹೂ.

ಪೊಂಬಿಸಿಲ್ ಹೊಂಬಿಸಿಲು, ಸಂಜೆ ಮುಂಜಾನೆಗಳ ಎಳೆಬಿಸಿಲು.

ಪೊಂಬೆಸೆ ಚಿನ್ನವನ್ನು ಸೇರಿಸು; ಚಿನ್ನದ ಕೆಲಸ ಮಾಡು.

ಪೋ ಹೋಗು; ತೆರಳು.

ಪೋಕ ಪೋಕರಿ, ದುಷ್ಟ, ನೀಚ; ಠಕ್ಕ; ಉಂಡಾಡಿ.

ಪೋಕಿ ಹೋಕ, ಹೋಗುವವ.

ಪೋಕು ಟೊಳ್ಳು; ಕೆಡುಕು, ಹಾಳು; ತಿರುಳು ಇಲ್ಲದುದು; ಹುರುಳಿಲ್ಲದ ಮನುಷ್ಯ.

ಪೋಕೆ ಹೋಗಲಿ.

ಪೋಗಂಡ ಅಳತೆ ಸಮನಲ್ಲದ ಅವಯವ ಉಳ್ಳವ; ಊನ, ಐದರಿಂದ ಹತ್ತು ವಯಸ್ಸಿನೊಳಗಿನ ಹುಡುಗ.

ಪೋಗು ಹೋಗು; ದಾಟು; ವ್ಯಯವಾಗು; ಸೇರು, ನುಗ್ಗು.

—ಹ ಹೋಗುವಿಕೆ.

ಪೋಗೊಡೆ ಹೋಗುವಂತೆ ಒದೆ.

ಪೋಚಲ್ ನೀರನ್ನು ಸುರಿವಿಕೆ.

ಪೋಟ ಭೀರು, ಅಂಜುಕುಳಿ; ಪೋಕರಿ.

ಪೋಟಾ (ಪೋಟೆ), ಪುರುಷನ ಲಕ್ಷಣವುಳ್ಳ ಸ್ತ್ರೀ, ಗಂಡುರಾಮಿ; ಸ್ತ್ರೀ ಲಕ್ಷಣದ ಪುರುಷ.

ಪೋಟಾಪೋಟಿ ಸ್ಪರ್ಧೆ; ಪೈಪೋಟ, ಮೇಲಾಟ.

ಪೋಟಿ ಸೇರಿಕೆ; ಹೋಲುವೆ; ಸ್ಪರ್ಧೆ, ಪೈಪೋಟ; ಪೊಟರೆ.

ಪೋಟೆ ಪೋಟಾ, ಬಿಲ, ಪೊಟ್ಟರೆ, ಮರದ ಟೊಳ್ಳು, ಡೊಗರು, ಹೊದರು; ಗಡ್ಡಮೀಸೆಯುಳ್ಳ ಹೆಂಗುಸು, ಗಂಡುರಾಮಿ.

ಪೋಡು ವಿಭಾಗ, ಹಂಚಿಕೆ; ಸೇರಿಕೆ.

—ಗಾರ ವಿಭಾಗಿಸುವವ, ಸೀಳುವವ.

ಪೋಣಿಕೆ ಸೇರಿಸುವಿಕೆ, ಮಾಲೆ ಮಾಡುವಿಕೆ, ಸುರಿಯುವಿಕೆ.

ಪೋಣಿಸು ಸೇರಿಸು, ಸುರಿ, ದಾರದಲ್ಲಿ ಕೂಡಿಸು.

ಪೋತ ನಾವೆ, ಹಡಗು; ಕಡಲು; ಬಾಲಕ; ಮರಿ, ಕರು; ಹತ್ತುವರ್ಷದ ಆನೆ; ಸವಾರಿ.

—ಕ ಮರಿ, ಆನೆ ಮರಿ.

—ವಾಹ ನಾವಿಕ; ಹಡಗಿನ ತಂಡೇಲ.

ಪೋತ್ರ ಮುಸುಡು, ರಂಟೆಯ ಕುಳ.

ಪೋಪು ಹೊರಡುವ ಉತ್ಸಾಹ.

ಪೋರ್ ಹೋರು, ಕಾದಾಡು; ಗುಂಪು; ಬಿಲ.

—ಕುಳಿ ಜಟ್ಟಿ; ಜಟ್ಟಿಕಾಳಗ, ಕಾಳಗ; ಪ್ರತಿಭಟೆ; ಹೋರಾಡುವ ಸ್ವಭಾವದವ.

—ಕೆ ಕಾಳಗ, ಹೋರಾಟ, ಜಗಳ.

—ಕೇಶಿ ಹೋರಾಡುವವರು.

ಪೋರ ಎಳೆಯ; ಕೂಸು; ಅನುಭವವಿಲ್ಲದ ತರುಣ.

ಪೋರಿ ಚಿಕ್ಕನಳು, ಹುಡುಗಿ; ಅನುಭವ ಸಾಲದವಳು.

ಪೋಲ್ (ಪೋಲು), ಹೋಲು, ಸದೃಶವಾಗು; ಸಾಮ್ಯ.

—ಇಕೆ ಹೋಲಿಕೆ; ದುಂದುವೆಚ್ಚ; ಹಾನಿ.

ಪೋಲಿ ಹೋಗುವ; ದುಂದು ವೆಚ್ಚವಾಗುವ; ನಾಶವಾಗುವ; ನೀಚ, ಪಟಿಂಗ; ಹಾಳು ಮಾಡುವವ.

ಪೋಲೀಸು ಸರಕಾರದ ಒಂದು ಇಲಾಖೆ; ಆ ಇಲಾಖೆಯವ.

ಪೋಷಕ ರಕ್ಷಕ, ಕಾಯುವ.

ಪೋಷಣ ಸಾಕುವಿಕೆ, ರಕ್ಷಣೆ.

ಪೋಷಾಕು ತೊಡುಗೆ; ಉಡುಗೆ ತೊಡುಗೆ.

ಪೋಷಿತ ಪಾಲಿಸಲ್ಪಟ್ಟ.

ಪೋಷಿಸು ಕಾಪಾಡು, ಪಾಲಿಸು, ಕಾಯು.

ಪೋಷ್ಯ ಪಾಲಿಸಲ್ಪಡುವವ; ಪಾಲಿಸಲ್ಪಡಬೇಕಾದ ಹಿರಿಯರು, ಸಂತಾನ ಮೊದಲಾದವರು.

ಪೋಳ್ (ಪೋಳು), ಹೋಳು, ಸೀಳು; ಒಡೆ; ಏರ್ಪಡಿಸು; ರಚಿಸು.

—ಇಗೆ ಸೀಳಿದುದು; ತುಂಡು, ವಿಭಾಗ.

ಪೋಳಿಲ್ (ಪೋಳಿಲು), ಮರದ ಪೊಟರೆ, ಹೊದರು; ಡೊಗರು.

ಪೌಜು ದಂಡು, ಸೈನ್ಯ; ಪೋಲೀಸು ಪಡೆ.

—ದಾರ ದಂಡಿನ ಒಬ್ಬ ನೌಕರ; ಒಬ್ಬ ಪೋಲೀಸು ನೌಕರ.

ಪೌತ್ತಿಕ ಜೇನು, ಮಧು.

ಪೌತ್ರ ಮಗನ ಮಗ, ಮೊಮ್ಮಗ.

ಪೌನರ್ಭವ ಎರಡನೆ ಮದುವೆಯಾದವಳಲ್ಲಿ ಹುಟ್ಟಿದವ, ಉಡಿಕೆಯವಳ ಮಕ್ಕಳು.

ಪೌರ ನಗರಕ್ಕೆ ಸಂಬಂಧಿಸಿದ; ನಾಗರಿಕ.

ಪೌರವ ಕ್ಷತ್ರಿಯ; ಪುರುವಂಶದವ.

ಪೌರಸ್ತ್ಯ ಪೂರ್ವದಿಕ್ಕಿನಲ್ಲಿದ್ದ; ಮೊದಲಿಗ; ಮುಂದಿರುವ; ಅಣ್ಣ.

ಪೌರಾಣಿಕ ಪುರಾಣವನ್ನರಿತವ; ಪುರಾಣ ಬರೆದವ, ಪುರಾಣ ಹೇಳುವವ; ಕಾಲ್ಪನಿಕ.

ಪೌರುಷ ಪುರುಷನೆಂಬ ಹೆಸರಿಗೆ ಕಾರಣವಾದ ಗುಣ; ಪರಾಕ್ರಮ, ಉದ್ಯೋಗ; ಆಳು ಪ್ರಮಾಣ, ಆಳು.

ಪೌರೋಹಿತ್ಯ ಪುರೋಹಿತನ ಕೆಲಸ; ಒಂದು ಗುಂಪಿನ ಜನರ ಧಾರ್ಮಿಕ, ಮತ ಸಂಬಂಧವಾದ ವಿಧಿಕರ್ಮಗಳನ್ನು ನಡಸುವಾತ.

ಪೌರ್ಣಿಮೆ ಹುಣ್ಣಿಮೆ.

ಪೌಲಸ್ತ್ಯ ಪುಲಸ್ತ್ಯ ಋಷಿಯ ಮಗ—ಕುಬೇರ, ರಾವಣ; ಶೂರ್ಪನಖಿ ಮೊದಲಾದವರು.

ಪೌಲೋಮ ಪುಲೋಮೆಯ ಮಕ್ಕಳು.

ಪೌಲೋಮಿ ಪುಲೋಮೆಯ ಮಗಳು; ಇಂದ್ರನ ಹೆಂಡತಿ ಶಚೀದೇವಿ.

ಪೌಳಿ ಪ್ರಾಕಾರ, ಷಾಗಾರ, ಆವಾರ.

ಪೌಷ್ಯ ಸೂರ್ಯವಂಶದ ಒಬ್ಬ ಕ್ಷತ್ರಿಯ.

**ಪೌಷ್ಟಿಕ** ಪುಷ್ಟಿ ಕೊಡುವ; ಇಷ್ಟಾರ್ಥ ಕೊಡಲು ಇಲ್ಲವೆ ಮಾಡುವ ಕೆಲಸ.

**ಪೌಂಡ್ರ** ಒಂದು ದೇಶ; ಭೀಮಸೇನನ ಶಂಖ; ಒಂದು ಜಾತಿ ಕಬ್ಬು.

**ಪೌಂಡ್ರಕ** ವಸುದೇವನ ಮಗ. ಇವನನ್ನು ಕೃಷ್ಣನು ಕೊಂದನು.

**ಪ್ರ** (ಉಪಸರ್ಗ, ಅವ್ಯಯ), ರಂಭ; ಆಗತಿ, ಚಲನೆ; ಉತ್ಪತ್ತಿ; ಪ್ರಸ್ಥಾ; ವ್ಯವಹಾರ.

**ಪ್ರಕಟ** ಸ್ಪಷ್ಟ; ಪ್ರಕಾರ; ತೋರಿಕೆ.

—ಣೆ ತೋರಿಕೆಗೆ ಬರುವಿಕೆ, ಬೆಳಕಿಗೆ ಬರುವಿಕೆ; ಹರಡುವಿಕೆ.

—ಇಸು ಬೆಳಕಿಗೆ ತರು, ಪ್ರಕಾಶಿಸು.

**ಪ್ರಕರ** ಸಮೂಹ, ಗುಂಪು; ಹೂವು.

**ಪ್ರಕರಣ** ಪ್ರಸ್ತಾನ; ಪ್ರಸಂಗ; ದೃಶ್ಯಕಾವ್ಯ ವಿಶೇಷ; ಅಧ್ಯಾಯ.

**ಪ್ರಕರ್ಷ** ಉತ್ಕರ್ಷ, ಉತ್ತಮತೆ.

**ಪ್ರಕಂಪನ** ವಾಯು; ಒಂದು ನರಕ; ಬಲು ನಡುಕ; ಹೊಯ್ದಾಡುವಿಕೆ.

**ಪ್ರಕಾಮ** ಬಹಳ, ಯಥೇಷ್ಟ.

**ಪ್ರಕಾರ** ಭೇದ; ಹೋಲುವೆ; ರೀತಿ; ಬರಾಬರಿ.

**ಪ್ರಕಾಶ** ಅರಳುವಿಕೆ, ವಿಕಸನ; ಪ್ರಕಟವಾಗಿ ವಿಸ್ತರಿಸುವಿಕೆ; ಬೆಳಕು, ಕಾಂತಿ; ಬಿಸಿಲು; ಧೂಪ.

—ಇಸು ಹೊಳೆ, ಕಾಂತಿದೋರು; ಪ್ರಕಟಿಸು; ವಿಸ್ತರಿಸು.

**ಪ್ರಕಾಂಡ** ಬೇರಿಂದ ಗೆಲ್ಲಿನ ತನಕ ಒಂದು ಸಸ್ಯದ ಉತ್ತಮ ಭಾಗ; ಪ್ರಶಸ್ತ; ಶ್ರೇಷ್ಠ.

**ಪ್ರಕೀರ್ಣ** ಚಾಮರ; ಭಿನ್ನಜಾತಿಗಳ ಸೇರಿಕೆ; ಜಾತಿಗಳ ಕೂಟ; ತುಂಬಿದ.

**ಪ್ರಕೃತ** ಈಗಣ, ಸದ್ಯ; ಆರಂಭಿಸಲ್ಪಟ್ಟ.

**ಪ್ರಕೃತಿ** ನಿಸರ್ಗ; ಪ್ರಪಂಚದ ಆರಂಭಕ್ಕೆ ಕಾರಣವಾದ ಶಕ್ತಿವಿಶೇಷ; ಮೂಲಕಾರಣ; ಸ್ವಭಾವಗುಣ; [illegible]; ರಾಜ್ಯಾಂಗ; ದುರ್ಗ; ಬಲ; ಶಿಲ್ಪ; ಶಕ್ತಿ; ಸ್ತ್ರೀ; ಪರಮಾತ್ಮ, ಜೀವ; ತಾಯಿ; ಪ್ರತ್ಯಯ ಹಚ್ಚಲು ಯೋಗ್ಯವಾದ ಮೂಲ.

**ಪ್ರಕೃಷ್ಟ** ಉತ್ತಮವಾದ; ಪ್ರಧಾನ, ಮುಖ್ಯ; ಒಳ್ಳೆಯ.

**ಪ್ರಕ್ರಮ** ಪ್ರಾರಂಭ; ಅವಸರ.

**ಪ್ರಕ್ರಿಯೆ** ಅಧಿಕಾರ; ಪ್ರಕರಣ.

**ಪ್ರಕ್ಷಾಲನ** ತೊಳೆಯುವಿಕೆ; ನೀರಿಂದ ಚೊಕ್ಕ ಮಾಡುವಿಕೆ.

**ಪ್ರಕ್ಷೇಪ** ಎಸೆಯುವುದು; ಸೇರಿಸುವುದು; ಒಬ್ಬನ ಗ್ರಂಥದಲ್ಲಿ ಅವನದಲ್ಲದ ಭಾಗವನ್ನು ಸೇರಿಸುವುದು; ಕೈಗಂಟಿನ.

—ಣ ಸೇರಿಸುವಿಕೆ; ಎಸೆಯುವಿಕೆ; ಬಿಸುಡುವಿಕೆ.

**ಪ್ರಖರ** ಬಹು ಕ್ರೂರ, ಬಿರುಸು, ಕಠಿಣ; ಕೋಳಿ; ಹೇಸರಗತ್ತೆ.

**ಪ್ರಖ್ಯ** ತೋರುವ, ಸ್ಪಷ್ಟವಾದ.

**ಪ್ರಖ್ಯಾತ** ಹೆಸರಾದ, ಪ್ರಸಿದ್ಧವಾದ, ಕೀರ್ತಿಗೊಂಡ.

**ಪ್ರಖ್ಯಾತಿ** ಖ್ಯಾತಿ, ಹೆಸರುಬರುವಿಕೆ, ಕೀರ್ತಿ.

**ಪ್ರಗಲ್ಭ** ಪ್ರತಿಭಾಸಂಪನ್ನ; ಪ್ರೌಢ; ನಾಟಕಗಳಲ್ಲಿ ಒಂದು ಬಗೆಯ ನಾಯಿಕೆ.

**ಪ್ರಗೀತ** ಹೊಗಳಲ್ಪಟ್ಟ.

**ಪ್ರಗ್ರಹ** ಹಿಡಿಯುವಿಕೆ; ಲಗಾಮು; ಕಿರಣ; ಸೆರೆ; ಹಗ್ಗ (ಧ್ವ).

**ಪ್ರಚಯ** ಸಮೂಹ.

**ಪ್ರಚರ** (ಪ್ರಚುರ), ಬಹಳ.

**ಪ್ರಚಲಿತ** ನಡೆಯುತ್ತಿರುವ.

**ಪ್ರಚಂಡ** ಬಹು ಕ್ರೂರವಾದ; ಬಲು ಹೆಚ್ಚಿನ; ಉರಿಯುವ.

**ಪ್ರಚಾರ** ಸಂಚಾರ; ಪ್ರಕಟಣೆ; ಪ್ರಸಿದ್ಧಪಡಿಸುವಿಕೆ, ಬಳಕೆಗೆ ತರುವುದು; ಹಬ್ಬುವಿಕೆ.

**ಪ್ರಚುರ** (ಪ್ರಚಾರ), ಪ್ರಸಾರ, ಹರಡುವಿಕೆ.

ಪ್ರಚೋದನ ಕುತೂಹಲ ಉಂಟುಮಾಡುವ, ವಿಚಾರ ಕೆರಳಿಸುವ; ನಿರ್ದೇಶಿಸುವ.
ಪ್ರಚ್ಛ ಪ್ರಶ್ನೆ, ಸವಾಲು, ಕೇಳಿಕೆ.
ಪ್ರಚ್ಛದ (ಸಂ) ಪಚ್ಚಡ (ದ್ಭ), ಹೊದಿಕೆ.
ಪ್ರಚ್ಛನ್ನ ಮುಚ್ಚಲ್ಪಟ್ಟ; ವೇಷ ಬದಲಿಸಿದ; ಕೋಟೆಯ ಗುಪ್ತದ್ವಾರ.
ಪ್ರಜನ ಹಸು ಎತ್ತುಗಳ ಕೂಟ; ದನ, ಗಂಟ.
ಪ್ರಜಾ (ಪ್ರಜೆ), ಸಂತತಿ; ಜನ.
—ಪ್ರತಿನಿಧಿ ಜನರ ಪರವಾಗಿ ಆರಿಸಲ್ಪಟ್ಟ ವ್ಯಕ್ತಿ.
—ಮತ ಜನರ ಅಭಿಪ್ರಾಯ.
—ಸತ್ತಾ ಜನರ ಅಭಿಮತದಂತೆ ನಡೆವ ಸರಕಾರ, ಪ್ರಜಾಪ್ರಭುತ್ವ.
ಪ್ರಜಾಪತಿ ಪ್ರಜೆಗಳ ಒಡೆಯ; ಬ್ರಹ್ಮ; ದಕ್ಷ ಮೊದಲಾದವರು; ಅಳಿಯ; ಸೂರ್ಯ, ಅಗ್ನಿ; ಜನರ ಸ್ವಾಮಿ; ಜೀವಿಗಳ ಒಡೆಯ—ಬ್ರಹ್ಮ, ಬ್ರಹ್ಮನಿಂದ ಸೃಷ್ಟಿಗೊಂಡ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಾಹಕೃತು, ಪ್ರಚೇತ, ವಸಿಷ್ಠ, ಭೃಗು, ನಾರದ ಎಂಬಿವರು; ಅರಸು.
ಪ್ರಜ್ಞಾನ ಬುದ್ಧಿ; ಗುರುತ್ವ.
ಪ್ರಜ್ಞಾಪಾರಮಿತಾ ಬೌದ್ಧರ ಸರಸ್ವತಿ.
ಪ್ರಜ್ಞೆ (ಪ್ರಜ್ಞಾ), ಬುದ್ಧಿ; ಸ್ಮರಣೆ; ಸರಸ್ವತಿ; ಪಂಡಿತ; ಎಚ್ಚರಿಕೆ..
ಪ್ರಜ್ವಲ ಉರಿಯುವ, ಬಹಳವಾಗಿ ಜ್ವಲಿಸುವ.
—ಇಸು ಉರಿ, ಹೊತ್ತು; ಕಾಂತಿಗೊಳ್ಳು.
ಪ್ರಣತ ನಮಸ್ಕರಿಸಿದ; ಬಾಗಿದ; ವಿನೀತ; ಚತುರ.
ಪ್ರಣತೆ ಹಣತೆ, ದೀಪ ಉರಿಸುವ ಮಣ್ಣಿನ ತಟ್ಟೆ.
ಪ್ರಣಯ ಪ್ರೀತಿ, ಸ್ನೇಹ; ಒಲುಮೆ; ಪ್ರೀತಿಯ ಪ್ರಾರ್ಥನೆ; ನಿರ್ವಾಣ; ಶಾಂತಿ.
—ಕಲಹ ಪ್ರೀತಿಯ ಗೆಳೆಯರ ಜಗಳ; ಕೇವಲ ತೋರಿಕೆಯ ಜಗಳ.
ಪ್ರಣಯಿ ಪ್ರೇಮವುಳ್ಳವ, ಅನುರಕ್ತ; ಗಂಡ; ನಾಯಕ.
—ನಿ ಪ್ರೇಯಸಿ; ಸ್ತ್ರೀ ಗೆಳತಿ; ಹೆಂಡತಿ.
ಪ್ರಣವ ಓಂಕಾರ.
ಪ್ರಣಾದ ಶಬ್ದ; ಹರ್ಷಸೂಚಕವಾದ ಬೊಬ್ಬೆ.
ಪ್ರಣಾಮ ವಂದನೆ, ನಮಸ್ಕಾರ.
ಪ್ರಣಾಲಿ ಪ್ರಣಾಳ, ಚರಂಡಿ, ಕಾಲುವೆ; ಹರಿಣಿ, ಹರಿಣಾಳಿಗೆ; ಪದ್ಧತಿ.
ಪ್ರಣಿಧಾನ ಧ್ಯಾನ; ಪ್ರಯತ್ನ.
ಪ್ರಣಿಧಿ ದೂತ, ಅನುಚರ, ಚಾರ.
ಪ್ರಣಿಪಾತ ನಮಸ್ಕಾರ, ವಂದನೆ.
ಪ್ರಣೀತ ತ್ವರೆ; ಯಜ್ಞ; ಸಂಸ್ಕಾರಹೊಂದಿದ ಅಗ್ನಿ; ಬರೆದ.
ಪ್ರಣಾತ ಪ್ರಸಿದ್ಧವಾದ; ಹೊಗಳಲ್ಪಟ್ಟ.
ಪ್ರತತಿ ಗುಂಪು, ಸಮೂಹ; ವಿಸ್ತಾರ; ಬಳ್ಳಿ.
ಪ್ರತಲ ಉತ್ತಮಸ್ಥಳ; ಬೆರಳು ನೀಡಿರುವ ಹಸ್ತ.
ಪ್ರತಾಪ ತೇಜಸ್ಸು, ವಿಕ್ರಮ; ತಾಪ; ನಡುಕ; ಎಕ್ಕೆ ಗಿಡ.
ಪ್ರತಾಪಿ ವಿಕ್ರಮಿ, ಶೌರ್ಯ ಮೊದಲಾದ ವೀರ ಗುಣಗಳುಳ್ಳವ.
ಪ್ರತಾರಣ ವಂಚನೆ, ಮೋಸ.
ಪ್ರತಿ ಬದಲು; ವ್ಯಾಪಿಸುವುದು; ಲಕ್ಷಣ; ಭಾಗ; ನಕಲು; ಬೇರೆಯೇ; ಎದುರು.
ಪ್ರತಿಕರಿಸು ಹಿಂದಕ್ಕೆ ಕೊಡು, ಸಂದಾಯ ಮಾಡು; ಮುಯ್ಯಿಗೆ ಮುಯ್ಯಿ ಸಲಿಸು.
ಪ್ರತಿಕರ್ಮ ಅಲಂಕಾರಮಾಡುವುದು.
ಪ್ರತಿಕಾರ (ಪ್ರತೀಕಾರ), ವಿರೋಧ, ಹಗೆ; ಸೇಡಿಗೆ ಸೇಡು ಸಲ್ಲಿಸುವುದು; ಚಿಕಿತ್ಸೆ.
ಪ್ರತಿಕೂಲ ವಿರೋಧ; ಅನನುಕೂಲ; ವಿರುದ್ಧ.
ಪ್ರತಿಕೃತಿ ಬದಲಾಗಿ ಮಾಡಿದುದು, ಮುಯ್, ಸೇಡು; ಹೋಲುವೆ; ತಸಬೀರು.
ಪ್ರತಿಕ್ರಿಯೆ (ಪ್ರತಿಕಾರ).

ಪ್ರತಿಗ್ರಹ ಸ್ವೀಕಾರ; ದಾನಕೊಳ್ಳುವುದು; ಸೂರ್ಯ.

ಪ್ರತಿಜ್ಞೆ ಒಪ್ಪಿಗೆ, ಸ್ವೀಕಾರ; ಶಪಥ; ಭಾಷೆ.

ಪ್ರತಿದಿನ ನಿತ್ಯ, ಅನುದಿನ, ದಿವಸವೂ.

ಪ್ರತಿಧ್ವನಿ ಪಡಿದನಿ (ಧ್ವ) ಮರುದನಿ, ದನಿ ಮರುಕಳಿಸುವಿಕೆ.

ಪ್ರತಿಧ್ವಾನ ಮರುದನಿ; ಪ್ರತಿಶಬ್ದ.

ಪ್ರತಿನಿಧಿ ಸಮಾನ ಪದವಿಯಿಂದ ಸ್ಥಾಪಿಸಲ್ಪಟ್ಟದು; ತನ್ನ ಬದಲಿಗೆ ನೇಮಿಸಲ್ಪಟ್ಟವ; ಪ್ರತಿರೂಪ; ಪ್ರತಿಮೆ.

ಪ್ರತಿಪಕ್ಷ ವಿರೋಧವಾದ ಕಡೆ; ಶತ್ರು; ಪ್ರತಿವಾದಿ.

ಪ್ರತಿಪತ್ತಿ ಗೌರವ; ಕರ್ತವ್ಯಜ್ಞಾನ; ಉದ್ಯೋಗ; ಪ್ರೌಢಿಮೆ; ನಂಬಿಕೆ; ಸತ್ಕಾರ, ಉಪಚಾರ.

ಪ್ರತಿಪದ ಪಾಡ್ಯ, ಪಕ್ಷದ ಪ್ರಾರಂಭದ ತಿಥಿ.

ಪ್ರತಿಪನ್ನ ಹೊಂದಿದ, ಸ್ವೀಕರಿಸಿದ; ಶೂರ, ಬಲವುಳ್ಳ.

ಪ್ರತಿಪಾದನೆ ಕುರಿತು ಮಾತಾಡುವುದು; ವಿಷಯ ಚರ್ಚೆ; ದಾನಕೊಡುವುದು.

ಪ್ರತಿಪಾದಿಸು ವಾದಿಸು, ಪಕ್ಷವಹಿಸು.

ಪ್ರತಿಫಲ ಉಚಿತ, ಕೃತಜ್ಞತೆ; ಸೇಡು; ಪ್ರತಿಬಿಂಬ; ಪ್ರಯೋಜನ, ಗಳಿಕೆ.

ಪ್ರತಿಬಂಧ ವಿರೋಧ, ತಡೆ; ಕಾರ್ಯಹಾನಿ.

ಪ್ರತಿಬಿಂಬ ಸಮಾನವಾದ ಬಿಂಬ; ರೂಪವು ತಿರುಗಿ ತೋರುವಿಕೆ; ಪ್ರತಿರೂಪ; ಹೋಲುವೆ.

—ಇಸು ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ರೂಪ ತಿರುಗಿ ಕಾಣಿಸು.

ಪ್ರತಿಭಟ ವಿರೋಧಿಸುವ ವೀರ.

—ಇಸು ವಿರೋಧಿಸು, ಇದಿರಿಸು.

ಪ್ರತಿಭಟೆ ಇಧಿರಿಸುವಿಕೆ.

ಪ್ರತಿಭೆ (ಪ್ರತಿಭಾ) ಬುದ್ಧಿ; ಪ್ರತ್ಯುತ್ಪನ್ನ ಬುದ್ಧಿ; ಸಂದರ್ಭಕ್ಕೆ ಸಮನಾಗಿ ಹೊಳೆಯುವ ಬುದ್ಧಿ; ವಿಶೇಷಪ್ರಜ್ಞೆ; ಹುಟ್ಟುಬುದ್ಧಿ

ಪ್ರತಿಮೆ (ಪ್ರತಿಮಾ), ಬದಲಾಗಿರುವುದು; ಮೂರ್ತಿ, ಗೊಂಬೆ; ಶಿಲ್ಪ; ಭಾಸ ಕವಿ ಬರೆದ ಒಂದು ನಾಟಕ.

ಪ್ರತಿಯತ್ನ ಪ್ರತಿಬಿಂಬ; ಚಿತ್ರ; ಹೋಲುವೆ.

ಪ್ರತಿರೂಪು ಪ್ರತಿಬಿಂಬ, ತಸಬೀರು; ಸದೃಶ, ಒಂದೇ ರೂಪುರೇಖೆಗಳನ್ನು ತಿರುಗಿ ತಿರುಗಿ ತೋರಿಸಿ ಹೆಣೆಯುವ ಚಿತ್ರ.

ಪ್ರತಿರೋಧ ವಿರೋಧ, ತಡೆ, ಅಡ್ಡಿ; ಮುತ್ತಿಗೆ, ಲಗ್ಗೆ; ಕಳವು.

ಪ್ರತಿಲೋಮ ಅನುಕೂಲಕ್ಕೆ ವಿರುದ್ಧವಾದ; ವಿಪರೀತ; ಬಲವಂತದ ಲಗ್ನ.

ಪ್ರತಿವಾತ ಇದಿರಿನಿಂದ ಬೀಸುವ ಗಾಳಿ.

ಪ್ರತಿವಾದಿ ಇದಿರಿಗೆ ವಾದಿಸುವ ವ್ಯಕ್ತಿ; ವಾದವಿರೋಧಿ.

ಪ್ರತಿಶ್ರಯ ಯಜ್ಞಶಾಲೆ; ಸಭೆ; ಮನೆ; ಆಶ್ರಯಸ್ಥಾನ.

ಪ್ರತಿಶ್ರುತ ಪ್ರತಿಜ್ಞೆ; ಪ್ರತಿ ಶಬ್ದ.

ಪ್ರತಿಷೇಧ ನಿಷೇಧ; ತಿರಸ್ಕಾರ; ಅಲ್ಲಗಳೆವಿಕೆ.

ಪ್ರತಿಷ್ಠಾನ (ಪೈಠಣ), ವರ್ಧಮಾನ ಪುರ, ಹಸ್ತಿನಪುರದ ಬಳಿಯ ಒಂದು ಪಟ್ಟಣ.

ಪ್ರತಿಷ್ಠೆ ಭೂಮಿ, ವ್ರತ; ಒಂದು ಛಂದಸ್ಸು; ವ್ರತಗಳ ಕೊನೆ; ಆಸರೆ; ತನ್ನ ಗೌರವದ ವಿಷಯವಾದ ಹೆಮ್ಮೆ; ಸ್ಥಾಪನೆ.

ಪ್ರತಿಸೃಷ್ಟ ತಿರಸ್ಕಾರ, ಮರಳಿ ಕಳುಹಿದ.

ಪ್ರತಿಹತ ವಿರೋಧ; ವಿರೋಧ ತೋರುವಿಕೆ.

ಪ್ರತಿಹಾರ ಬಾಗಿಲು; ಬಾಗಿಲು ಕಾಯುವವ, ಪ್ರತಿಹಾರಿ.

ಪ್ರತಿಹಿಂಸೆ ಸೇಡು; ಹಿಂಸೆಗೆ ಬದಲು ಹಿಂಸೆ.

ಪ್ರತೀಕ ಅವಯವ; ಪ್ರತಿರೂಪ, ಪ್ರತಿಬಿಂಬ.

ಪ್ರತೀಕಾರ (ಪ್ರತಿಕಾರ).

ಪ್ರತೀಕ್ಷೆ ಆಶೆ, ಅಪೇಕ್ಷೆ.

**ಪ್ರತೀಚೀನ** ಪಶ್ಚಿಮ ದಿಕ್ಕಿನಲ್ಲಿ ಇದ್ದುದು.

**ಪ್ರತೀತಿ** ತಿಳಿವಳಿಕೆ; ಕೀರ್ತಿ; ಆದರ, ಪ್ರೀತಿ; ಸಂತೋಷ; ವಿಶ್ವಾಸ.

**ಪ್ರತೀಪ** ವಿರೋಧ, ವಿರೋಧ ಆಚರಣೆ; ಒಂದು ಕಾವ್ಯದ ಅಲಂಕಾರ.

**ಪ್ರತೀಹಾರ** ಬಾಗಿಲು ಕಾಯುವವ, ಸೇವಕ.

**ಪ್ರತೀಹಾರಿ** ಬಾಗಿಲು ಕಾಯುವವ, ಪಹರಿ.

**ಪ್ರತ್ನ** ಪುರಾತನ, ಹಳೆಯ.

**ಪ್ರತ್ಯಕ್** ಹಿಂದಕ್ಕೆ, ಹಿಂದಿನ ಕಾಲದಲ್ಲಿ; ಪಡುವಣ, ಪಡುವಲಲ್ಲಿ.

**ಪ್ರತ್ಯಕ್ಷ** ಕಣ್ಣಿಗೆ ಕಾಣುವುದು; ಕಣ್ಣೆದುರಾದುದು; ಇಂದ್ರಿಯ ಜ್ಞಾನ; ಪವಾಡ, ಅದ್ಭುತ ಕಾರ್ಯ.

**ಪ್ರತ್ಯಚ್** ಪಶ್ಚಿಮ ಕಾಲ; ಪಶ್ಚಿಮ ದೇಶ; ಪಶ್ಚಿಮ ದಿಕ್ಕು.

**ಪ್ರತ್ಯಯ** ಶಪಥ; ವಿಶ್ವಾಸ, ನಂಬಿಕೆ; ಜ್ಞಾನ; ಶಬ್ದ; ರಂಧ್ರ; ಆಧಾರ; ನಿಶ್ಚಯ; ಕಾರಣ; ಕ್ರಿಯಾಪದ ನಾಮಪದಗಳಿಗೆ ಹಚ್ಚುವ ಬೇರೆ ಬೇರೆ ಅಕ್ಷರಗಳು.

**ಪ್ರತ್ಯಂತ** ಕೊನೆಯಲ್ಲಿರುವ ದೇಶ; ಮ್ಲೇಚ್ಛ ದೇಶ; ಸಮೀಪ ದೇಶ.

**ಪ್ರತ್ಯಾಖ್ಯಾನ** ತಿರಸ್ಕಾರ, ಪ್ರತ್ಯಾದೇಶ.

**ಪ್ರತ್ಯಾದಿಷ್ಟ** ತಿರಸ್ಕರಿಸಲ್ಪಟ್ಟ.

**ಪ್ರತ್ಯಾಲೀಢ** ಎಡದ ಕಾಲು ಮುಂದಿರಿಸಿ, ಬಲದ ಕಾಲನ್ನು ಹಿಂದಿರಿಸಿ ಬಾಣ ಎಸೆಯಲು ಸಿದ್ಧನಾಗುವ ರೀತಿ.

**ಪ್ರತ್ಯಾಸನ್ನ** ಬಹು ಸಮೀಪವಾಗಿರುವುದು.

**ಪ್ರತ್ಯುಕ್ತಿ** ಎದುರು ಮಾತು, ಮಾರುತ್ತರ, ಜವಾಬಿಗೆ ಜವಾಬು, ಮಾತಿಗೆ ಮಾತು.

**ಪ್ರತ್ಯುತ್ತರ** ಎದುರು ಉತ್ತರ; ಜವಾಬು; ಜವಾಬಿಗೆ ಜವಾಬು.

**ಪ್ರತ್ಯುತ್ಥಾನ** ಗುರುಹಿರಿಯರ ಮುಂದೆ ಮರ್ಯಾದೆಮಾಡಲು ಎದ್ದು ನಿಲ್ಲುವುದು.

**ಪ್ರತ್ಯುಪಕಾರ** ಮಾಡಿದ ಉಪಕಾರಕ್ಕೆ ಬದಲು ಉಪಕಾರ.

**ಪ್ರತ್ಯೂಷ** ಪ್ರಾತಃಕಾಲ, ಪ್ರಭಾತ.

**ಪ್ರತ್ಯೇಕ** ಒಂದೊಂದಾಗಿ; ಬೇರೆಯೇ ಆಗಿ.

**ಪ್ರಥನ** ಯುದ್ಧ; ವಿಸ್ತರಣ; ಹೊಗಳಿಕೆ, ಸ್ತುತಿ; ಕೀರ್ತಿ.

**ಪ್ರಥಮ** ಮುಖ್ಯ; ದೊಡ್ಡ; ಮೊದಲನೆಯ.

**ಪ್ರಥಮೆ** ಮೊದಲಿನ ವಿಭಕ್ತಿ.

**ಪ್ರಥಿಮ** ಸ್ಥೂಲತ್ವ, ದೊಡ್ಡತನ.

**ಪ್ರಥೆ** ವಿಸ್ತರಣ, ಹರಡುವಿಕೆ; ಕೀರ್ತಿ, ವಿಖ್ಯಾತಿ.

**ಪ್ರದಕ್ಷಿಣೆ** ಸುತ್ತುವರಿಯುವುದು; ವಿಗ್ರಹ, ಗುಡಿ ಮೊದಲಾದುವುಗಳ ಎಡದಿಂದ ಬಲಕ್ಕೆ ಸುತ್ತುವುದು; ಬಲಗೊಳ್ಳುವುದು.

**ಪ್ರದರ** ಹರಿಯುವುದು; ಮುರಿಯುವುದು; ಒಂದು ಯೋನಿ ರೋಗ.

**ಪ್ರದರ್ಶನ** ವಿವಿಧ ಒಡವೆಗಳನ್ನು ತೋರಿಸುವ ಸಂತೆ; ತೋರಿಸುವಿಕೆ; ಸೂಚಿಸುವಿಕೆ; ವಿವರಿಸುವಿಕೆ; ಉದಾಹರಣೆ.

**ಪ್ರದರ್ಶಿಸು** ತೋರಿಸು, ಪ್ರಕಟಿಸು.

**ಪ್ರದಾರಿತ** ಸೀಳಲ್ಪಟ್ಟ; ಸೀಳಿದ.

**ಪ್ರದೀಪ** ದೀಪ, ದೀವಿಗೆ, ದೊಡ್ಡ ದೀಪ.

**ಪ್ರದೇಶ** ಪ್ರಾಂತ, ನಾಡು; ಒಂದು ಸ್ಥಳ; ಜಾಗ.

**ಪ್ರದೋಷ** ಕೆಟ್ಟ; ನೀಚ, ಪಾಪ; ಮುಸ್ಸಂಜೆ; ಶಿವನನ್ನು ಉಪಾಸಿಸುವ ಸಂಜೆ.

**ಪ್ರದ್ಯುಮ್ನ** ಇವನು ಕೃಷ್ಣ ರುಕ್ಮಿಣಿಯರ ಮಗ. ಈತನು ಆರು ವರ್ಷದವನಿರುವಾಗ ಅವನನ್ನು ಶಂಬರಾಸುರನು ಕಡಲಿಗೆ ಎಸೆದನು. ಅಲ್ಲಿ ಒಂದು ಮೀನು ಅವನನ್ನು ನುಂಗಿತೆಂದೂ, ಮುಂದೆ ಮೀನನ್ನು ಹಿಡಿದ ಬೆಸ್ತರಿಂದಾಗಿ, ಶಂಬರನಲ್ಲಿ ಬೆಳೆದನಂತಾಯಿತೆಂದೂ—ಅಲ್ಲಿ ಅವನು ತನ್ನನ್ನು

ಪಾಲಿಸಿದ ಮಾಯಾವತಿ ಎಂಬವಳ ಪ್ರೇಮ ಪಾತ್ರನಾದನೆಂದು ಹೇಳಿದೆ. ದೊಡ್ಡವ ನಾದ ಬಳಿಕ ಪ್ರದ್ಯುಮ್ನನು ಶಂಬರನನ್ನು ಕೊಂದು ಮಾಯೆಯನ್ನು ಲಗ್ನವಾದನು; ಮಹಾಬಲಶಾಲಿ, ಕಾಮ, ಮನ್ಮಥ.

**ಪ್ರಧನ** ಯುದ್ಧ, ಕಾಳಗ; ಯುದ್ಧದ ಕೊಳ್ಳೆ; ಸೀಳುವಿಕೆ; ನಾಶ.

**ಪ್ರಧಾನ** ಮುಖ್ಯ; ತ್ರಿಗುಣಯುಕ್ತವಾದ ಪ್ರಕೃತಿ; ಪರಮಾತ್ಮ; ಪ್ರಶಸ್ತ, ಶ್ರೇಷ್ಠ; ಒಡೆಯ.

**ಪ್ರಧಾನಿ** ಮಂತ್ರಿ, ಮುಖ್ಯ ಮಂತ್ರಿ.

**ಪ್ರಪಂಚ** ಮುಂದುವರಿಸುತ್ತ ಹೋಗುವುದು; ಸಂಸಾರ; ಜಗತ್ತು, ಲೋಕ; ವಂಚನೆ, ಮೋಸ.

**ಪ್ರಪದ** ಪಾದದ ತುದಿ, ತುದಿಗಾಲು.

**ಪ್ರಪತ್ತಿ** ಆಶ್ರಯ, ನೆರೆ; ಶರಣಾಗತಿ.

**ಪ್ರಪನ್ನ** ಮರೆಹೊಕ್ಕವ, ಶರಣಾಗತ.

**ಪ್ರಪಾ** ಅರವಟ್ಟಿಗೆ.

**ಪ್ರಪಾತ** ಬೆಟ್ಟದ ಕಡಿದಾದ ಮಗ್ಗಲು, ಬೆಟ್ಟದ ಝುರಿ; ತಡಸಲು.

**ಪ್ರಪಿತಾಮಹ** ಅಜ್ಜನ ತಂದೆ, ಮುತ್ತಜ್ಜ.

**ಪ್ರಪೌತ್ರ** ಮೊಮ್ಮಗನ ಮಗ.

**ಪ್ರಫುಲ್ಲ** ಅರಳಿದ, ಸರಿಯಾಗಿ ವಿಕಸನಗೊಂಡ.

**ಪ್ರಬಂಧ** ಗ್ರಂಥರಚನೆ; ಒಂದು ಬಗೆ ಗದ್ಯ; ಸಂದರ್ಭ; ಸಂಬಂಧ; ಸರಣಿ; ತಮಿಳು ವೇದ.

**ಪ್ರಬಲ** ಬಲಿಷ್ಠ; ರೂಢ, ಶಕ್ತ; ತುಂಬಿರುವ.

—ಇಸು ಬಲವಾಗಿ; ವಿಸ್ತರಿಸು; ಅಭಿವೃದ್ಧಿಗೊಳ್ಳು.

**ಪ್ರಬಾಲ** ಪ್ರವಾಳ, ಬಹಳ ಕಂಪಿಸುತ್ತಿರುವುದು; ಚಿಗುರು; ಕೆಂಪು ಬಣ್ಣ; ಹವಳ.

**ಪ್ರಬೋಧ** ಒಳ್ಳೆಯ ಬುದ್ಧಿ, ಉತ್ತಮ ಬುದ್ಧಿ.

**ಪ್ರಭವ** ಮೊದಲನೆಯ ಸಂವತ್ಸರ; ಪರಾಕ್ರಮ; ಬಲ; ಜನ್ಮ.

**ಪ್ರಭಂಜನ**(ಭಂಜನ=ಮುರಿ), ಸುಂಟರಗಾಳಿ.

**ಪ್ರಭಾ** ಪ್ರಕಾಶ, ಹೆಚ್ಚಾಗಿ, ಪ್ರಕಾಶಿಸುವುದು.

—ಆವಳಿ ಪ್ರಭಾಮಂಡಲ; ಬೆಳಕಿನ ಕೊಡೆ; ವಿಗ್ರಹಗಳ ಹಿಂದೆ ಕಮಾನಾಗಿ ಇರಿಸುವ ಅಲಂಕಾರ.

—ಕರ ಪ್ರಕಾಶ ಉಂಟುಮಾಡುವವ; ಸೂರ್ಯ; ಒಬ್ಬ ಮೀಮಾಂಸಕಾರ.

—ಮಂಡಲ ಚಂದ್ರ, ಸೂರ್ಯರ ಸುತ್ತ ಉಂಟಾಗುವ ಬೆಳಕಿನ ಚಕ್ರ, ಸೂರ್ಯನ ಕೊಡೆ, ಕಣ; ಚಿತ್ರಗಳಲ್ಲಿ ದೈವೀ ಪುರುಷರ ಹಿಂದೆ ಬರೆಯುವ ಪ್ರಭಾವಳಿ.

**ಪ್ರಭಾತ** ಪ್ರಾತಃಕಾಲ, ಬೆಳಗಿನ ಸಮಯ.

**ಪ್ರಭಾವ** ತೇಜಸ್ಸು, ವರ್ಚಸ್ಸು; ಮಹಿಮೆ; ಸಾಮರ್ಥ್ಯ.

**ಪ್ರಭಾಸ** ಅಷ್ಟವಸುಗಳಲ್ಲಿ ಒಬ್ಬ; ಗುಜರಾತಿನ ಸೋಮನಾಥ ದೇವಾಲಯದ ಬಳಿಯ ಒಂದು ತೀರ್ಥ.

**ಪ್ರಭು** ವಿಷ್ಣು; ಸ್ವಾಮಿ; ಒಡೆಯ.

—ತ್ವ ಒಡೆತನ; ಯಜಮಾನಿಕೆ.

—ಸತ್ತಾ ಅರಸೇ ಆಳುವ ಸರಕಾರದ ಬಗೆ.

**ಪ್ರಭೃತಿ** ಮೊದಲಾದ, ಅಂದಿನಿಂದ; ದೊಡ್ಡ ವ್ಯಕ್ತಿ.

**ಪ್ರಭೆ** ಬೆಳಕು, ಕಾಂತಿ; ಕಿರಣ; ವೈಭವ.

**ಪ್ರಭೇದ** ವ್ಯತ್ಯಾಸ; ವಿಂಗಡ; ಒಡೆಯುವಿಕೆ.

**ಪ್ರಮತಿ** ಚ್ಯವನ ಋಷಿಯ ಮಗ.

**ಪ್ರಮಥ** ಶಿವನ ಒಬ್ಬ ಅನುಚರ.

—ಗಣ ಶಿವನ ಮತ್ತು ಸ್ಕಂದನ ಅನುಚರರಾದ ಗಣಜನರು.

**ಪ್ರಮಥನ** ಕೊಲೆ; ಕಡೆಯುವುದು; ದುಃಖ.

**ಪ್ರಮದವನ** ರಾಣಿವಾಸದ ಬಳಿಯ ಉದ್ಯಾನ, ವಿನೋದ ವನ.

**ಪ್ರಮದಾ**(ಪ್ರಮದೆ), ಸುಂದರ ಸ್ತ್ರೀ, ಉತ್ತಮ ಸ್ತ್ರೀ.

ಪ್ರಮಾಣ ಅಳತೆ; ನಂಬಿಕೆ; ಋಜುವಾತು, ಸಾಧನ; ನಿಜವಾದ ಜ್ಞಾನಕ್ಕೆ ಕಾರಣವಾದುದು; ಇಂದ್ರಿಯ; ಮರ್ಯಾದೆ; ಶಾಸ್ತ್ರ; ಕಾರಣ; ಕೃತಜ್ಞ.

ಪ್ರಮಾಣಿಕ ಸತ್ಯವಾದಿ, ನಂಬಿಗಸ್ತ.

ಪ್ರಮಾಥಿ ಕಡೆಯುವಿಕೆ; ಕುಲುಕುವಿಕೆ; ಕೊಲ್ಲುವಿಕೆ; ಒಂದು ಸಂವತ್ಸರ.

ಪ್ರಮಾದ ಎಚ್ಚರಗೇಡಿತನ,ಅಜಾಗ್ರತೆ,ತಪ್ಪು.

ಪ್ರಮಾದೀಚ 7ನೆಯ ಸಂವತ್ಸರ.

ಪ್ರಮಿತಿ ನಿಜವಾದ ಜ್ಞಾನ; ಅಳತೆ; ಆದರ್ಶ, ಪ್ರಮಾಣ.

ಪ್ರಮೀಳೆ ಆಲಸ್ಯ; ಕಣ್ಣು ಮುಚ್ಚುವಿಕೆ; ಪಾಂಡ್ಯರಾಜನ ಒಬ್ಬಳು ಮಗಳು; ಅರ್ಜುನನ ಹೆಂಡತಿ.

ಪ್ರಮುಖ ಮುಖ್ಯ; ಸಮೂಹ; ಒಳ್ಳೆಯ ಆರಂಭ.

ಪ್ರಮೆ ಅಳತೆ, ಆದರ್ಶ, ನಿಶ್ಚಿತ ಜ್ಞಾನ.

ಪ್ರಮೇಯ ಅಳೆಯಬಹುದಾದುದು, ಮಿತ; ತರ್ಕಕ್ಕೊದಗಿದ ಪ್ರಸಂಗ; ವಿಷಯ, ಸಂದರ್ಭ.

ಪ್ರಮೇಹ ಒಂದು ಜನನೇಂದ್ರಿಯ ರೋಗ.

ಪ್ರಮೋದ ಸಂತೋಷ.

ಪ್ರಮೋದೂತ ಒಂದು ಸಂವತ್ಸರ.

ಪ್ರಯತ ಪವಿತ್ರ, ಶುದ್ಧ; ನಿಯಮವುಳ್ಳ; ಜಿತೇಂದ್ರಿಯ.

ಪ್ರಯತ್ನ ಬುದ್ಧಿಯ ಒಂದು ಧರ್ಮ; ಆದರ; ಕಷ್ಟಪಡುವಿಕೆ, ಸಾಧನೆ.

—ಇಸು ಯತ್ನಿಸು; ಉದ್ಯೋಗಿಸು; ಶ್ರಮಿಸು.

ಪ್ರಯಾಗ ಇಂದ್ರ;ಕುದುರೆ;ಉತ್ತಮ ಯಜ್ಞ; ಗಂಗಾ ಯಮುನಾ ನದಿಗಳ ಸಂಗಮದ ಬಳಿ ಇರುವ ಊರು; ಅಲಹಾಬಾದು.

ಪ್ರಯಾಣ ಪಯಣ (ದ್ಭ), ಸಂಚಾರ, ಒಂದೂರಿಂದ ಇನ್ನೊಂದೂರಿಗೆ ಹೋಗುವಿಕೆ; ಮರಣ.

—ಇಕ ಪಯಣಿಗ; ಸಂಚರಿಸುವವ.

ಪ್ರಯಾಸ ಆಯಾಸ; ಕಷ್ಟವಾದುದು, ಶ್ರಮಸಾಧ್ಯ.

ಪ್ರಯುಕ್ತ ಸೇರಿದ;ಕೂಡಿದ;ಕಾರಣಗೊಂಡ.

ಪ್ರಯುತ ಹತ್ತು ಲಕ್ಷ, ಸೇರಿದ.

ಪ್ರಯೋಗ ಅನುಷ್ಠಾನ; ವಶಮಾಡಿಕೊಳ್ಳುವುದು; ನಿದರ್ಶನ, ದೃಷ್ಟಾಂತ.

ಪ್ರಯೋಜಕ ಉಪಯುಕ್ತ; ಪ್ರೇರಕ; ಕೆಲಸ ಮಾಡಿಸುವವ.

ಪ್ರಯೋಜನ ಉದ್ದೇಶ, ಕಾರಣ, ಹೇತು; ಉಪಯೋಗ, ಲಾಭ.

ಪ್ರರೂಢ ಬೆಳೆದ, ಹುಟ್ಟಿದ; ಮೊಳಕೆ.

ಪ್ರಲಪನ ಮಾತಾಡುವಿಕೆ; ಅಸಂಬದ್ಧ ಮಾತು;ಅಳುವಿಕೆ, ರೋದನ; ಬಡಬಡಿಸುವಿಕೆ.

ಪ್ರಲಪಿಸು ವಿಲಾಪಿಸು; ಅಳು; ಹಾಳುಹರಟೆ ಮಾತಾಡು.

ಪ್ರಲಯ (ಪ್ರಳಯ), ಪ್ರಪಂಚ ನಾಶವಾಗುವ ಸಮಯ; ಬ್ರಹ್ಮನ ದಿನಾಂತ; ಕಾರ್ಯಕ್ಷಯ.

ಪ್ರಲಂಬ ಬಲರಾಮನು ಕೊಂದ ಒಬ್ಬ ರಾಕ್ಷಸ.

ಪ್ರಲಾಪ (ಪ್ರಳಾಪ), ಅರ್ಥವಿಲ್ಲದ ಮಾತು; ಸಂಭಾಷಣೆ; ದುಃಖ, ಅಳಲು;ಬಳಲುವಿಕೆ.

ಪ್ರವಚನ ಉತ್ತಮ ಮಾತು; ವೇದಾರ್ಥ ಜ್ಞಾನ; ಓದು.

ಪ್ರವನ ನಾಲ್ಕು ದಾರಿಗಳ ಕೂಟ;ನೀಚಸ್ಥಾನ; ಇಳಿ; ನಮ್ರ, ಪಾಂಡಿತ್ಯ.

ಪ್ರವರ ಸಂತಾನ, ಗೋತ್ರ; ಶ್ರೇಷ್ಠ, ಒಳ್ಳೆಯ; ಕುಲಪೂರ್ವಜ; ಮುಖ್ಯ; ಅಗಿಲುಗಂಧ.

ಪ್ರವರ್ಗ ಒಂದು ವಿಧದ ಹೋಮಾಗ್ನಿ.

ಪ್ರವರ್ತಕ ಕಾರ್ಯ ನಡಸುವವ.

ಪ್ರವರ್ತನ ಕಾರ್ಯ ನಡಸುವಿಕೆ.
ಪ್ರವರ್ಧನ ಬೆಳವಣಿಗೆಗೆ ಕಾರಣವಾದ; ಅಭಿವೃದ್ಧಿ.
ಪ್ರವರ್ಧಮಾನ ವಿಶೇಷ ಅಭಿವೃದ್ಧಿಗೊಂಡ; ಬೆಳೆಯುತ್ತಿರುವ.
ಪ್ರವಹಿಸು ಹರಿ; ಮುಂದಕ್ಕೆ ಸೆಳೆ.
ಪ್ರವಾದ ಹೇಳಿಕೆ.
ಪ್ರವಾದಿ ಹೇಳಿಕೆ; ಭವಿಷ್ಯವಾದಿ, ಮುಂದಿನ ವಿಚಾರವನ್ನು ಈಗಲೇ ಹೇಳುವವ.
ಪ್ರವಾಸ ದೂರದೇಶಕ್ಕೆ ಹೋಗುವಿಕೆ, ಪರ ದೇಶ ಸಂಚಾರ; ಪ್ರಯಾಣಮಾಡುವಿಕೆ.
ಪ್ರವಾಹ ನೀರಿನ ಹರಿಯುವಿಕೆ; ಪರಂಪರಾ ಗತವಾದ ಮಾತು; ಬಹಳವಾಗಿ ಹೇಳು ವುದು.
ಪ್ರವಾಳ (ಸಂ) ಹವಳ (ದ್ಭ), ಕೀಟಗಳಿಂದಾ ಗುವ ಒಂದು ವಸ್ತು; ಚಿಗುರು, ಮೊಳಕೆ; ಹಸುರು; ಕೂದಲು, ಬಾಲ.
ಪ್ರವೀಣ ವೀಣೆಯನ್ನು ನುಡಿಸುವಿಕೆ; ವೀಣೆ ಯೊಂದಿಗೆ ಹಾಡುವಿಕೆ; ನಿಪುಣ, ಚತುರ, ಬುದ್ಧಿವಂತ.
ಪ್ರವೀರ ಸುರ, ವೀರ; ಮಾಹಿಷ್ಮತಿಯ ನೀಲ ಧ್ವಜನ ಮಗ.
ಪ್ರವೃತ್ತಿ ವಾರ್ತೆ, ಸಮಾಚಾರ; ಪ್ರವಾಹ, ನೀರಿನ ಹರಿವು; ಅವಂತಿ ದೇಶ.
ಪ್ರವೇಶ ಒಳಹೊಗುವುದು; ಸೇರಿಕೆ.
— ಇಸು ಒಳಹೊಗು.
ಪ್ರವ್ರಜ್ಯ ಸನ್ಯಾಸ;ಅಲೆದಾಟ,ವಿದೇಶಗಮನ.
ಪ್ರಶಸ್ತ ಹೊಗಳಲು ಯೋಗ್ಯವಾದ; ಅತ್ಯು ತ್ತಮ.
ಪ್ರಶಂಸೆ ಹೊಗಳಿಕೆ, ಗುಣಗಳನ್ನು ಪ್ರಕಟಿಸಿ ಹೊಗಳುವುದು.
ಪ್ರಶ್ನ (ಪ್ರಶ್ನೆ), ತಿಳಿಯುವ ಅಪೇಕ್ಷೆಯಿಂದ ಕೇಳುವಿಕೆ, ಸವಾಲು.
— ಅರ್ಥಕ ಸವಾಲು ಕೇಳುವ; ಪ್ರಶ್ನೆಯ ಅರ್ಥವುಳ್ಳ.
— ಉತ್ತರ ಸವಾಲು ಜವಾಬು; ಸಂಭಾ ಷಣೆ; ಮಾತುಕತೆ; ಹೇಳು ಕೇಳಿಕೆ.
ಪ್ರಷ್ಠ ಬಹಳ ಒಳ್ಳೆಯ; ಕಣ್ಣು; ಮುಖಂಡ, ಎದುರಾಳು.
ಪ್ರಸಕ್ತ ಪ್ರಸಂಗ, ಸಂದರ್ಭ; ವಿಷಯ; ಆಸಕ್ತಿ ಗೊಂಡ; ತೊಡಗಿದ.
ಪ್ರಸಕ್ತಿ ಸಂದರ್ಭ, ಪ್ರಸಂಗ; ಆಪತ್ತು; ಅನು ಮತಿ.
ಪ್ರಸನ್ನ ನಿರ್ಮಲ, ಚೊಕ್ಕ; ತೃಪ್ತಿಗೊಂಡ.
— ತೆ ದಯೆ, ಕರುಣೆದೋರುವಿಕೆ; ನಿರ್ಮ ಲತೆ; ತೃಪ್ತಿ; ಸಂತೋಷ.
ಪ್ರಸಭ ಬಲಾತ್ಕಾರ; ಫಕ್ಕನೆ, ಅಕಸ್ಮಾತ್.
ಪ್ರಸರ ಉತ್ಪತ್ತಿ; ವೇಗ; ಸಮೂಹ; ಯುದ್ಧ; ನಿರ್ವಾಣ; ವಿಸ್ತಾರ.
ಪ್ರಸವ ಹಡೆಯುವುದು, ಹೆರಿಗೆ; ಫಲ; ಪುಷ್ಪ.
ಪ್ರಸವಿತ್ರೀ ಹೆತ್ತವಳು, ತಾಯಿ, ಬಾಣಂತಿ.
ಪ್ರಸಂಗ ಸಂಬಂಧವಿಶೇಷ; ಜತೆ; ಸಂಭೋಗ; ಘಟನೆ; ಯುಕ್ತಕಾಲ; ಸಂಭಾಷಣೆ.
— ಇಸು ಮಾತಾಡು, ಮಾತು ತೊಡಗು; ವಿಷಯವನ್ನು ತೊಡಗು.
ಪ್ರಸಾದ ಹಸಾದ(ದ್ಭ) ನೈರ್ಮಲ್ಯ; ಚೊಕ್ಕಟ; ಅನುಗ್ರಹ; ಕಾವ್ಯದ ಒಂದು ಗುಣವಿಶೇಷ.
ಪ್ರಸಾಧನ ಪಸದನ (ದ್ಭ) ಅಲಂಕಾರ; ವೇಷ; ಹಣಿಗೆ, ಬಾಚಣಿಗೆ.
ಪ್ರಸಾಧನೆ ಸೇವೆ; ಪೂಜೆ.
ಪ್ರಸಾಧಿತ ಪೂಜಿತ, ಶುದ್ಧಿಗೊಂಡ.
ಪ್ರಸಾರ ಪ್ರಚುರ; ಹರಡುವಿಕೆ, ಹಬ್ಬುವಿಕೆ.
— ಣೆ ಹರಡುವಿಕೆ, ವಿಸ್ತರಿಸುವಿಕೆ.
ಪ್ರಸಿದ್ಧ ಕೀರ್ತಿಪಡೆದ, ಕೀರ್ತಿಗೊಂಡ; ಅಲಂಕರಿಸಲ್ಪಟ್ಟ.
ಪ್ರಸಿದ್ಧಿ ಕೀರ್ತಿ, ಖ್ಯಾತಿ; ಯಶಸ್ಸು.

ಪ್ರಸೂತಿ ಹೆರಿಗೆ, ಪ್ರಸವ; ಸಂತತಿ; ಹೊಟ್ಟೆ; ತಾಯಿ.

ಪ್ರಸೂತಿಕೆ ಹೆತ್ತ ಹೆಂಗುಸು, ಬಾಣಂತಿ.

ಪ್ರಸ್ತ ಒಂದು ಶುಭ ಕೆಲಸ; ಉಪನಯನ ನಾಮಕರಣಾದಿ ಪ್ರಸಂಗಗಳು.

ಪ್ರಸ್ತರ ಚೆಲ್ಲಲ್ಪಟ್ಟ; ಪಲ್ಲಂಗ; ಎಲೆಗಳ ಹಾಸಿಗೆ; ಬಯಲು; ಕಲ್ಲು; ಸಾನು; ತಪ್ಪಲು.

ಪ್ರಸ್ತರಿಸು ಚೆಲ್ಲು, ಹರಡು.

ಪ್ರಸ್ತಾರ ಹುಲ್ಲಿನ ಕಾಡು; ಪದ್ಯವನ್ನು ಇಲ್ಲವೆ ಒಂದು ರಾಗವನ್ನು ಒಡೆದು ತೋರಿಸುವುದು.

ಪ್ರಸ್ತಾವ ಸಂದರ್ಭ; ಪ್ರಕರಣ, ಪ್ರಸಂಗ; ಅವಸರ; ಮಾತಾಡುವಿಕೆ; ವಿಚಾರ; ಮಾತಾಡು, ಚರ್ಚಿಸು, ಸುದ್ದಿ ತೆಗೆ. —ನೆ ಮುನ್ನುಡಿ, ಮಾತು ಇಲ್ಲವೆ ಚರ್ಚೆಯ ಪ್ರಾರಂಭ.

ಪ್ರಸ್ತುತ ಸಂದರ್ಭ; ಕೈಯಲ್ಲಿರುವ ಕೆಲಸಕ್ಕೆ ಸಂಬಂಧಿಸಿದ, ತತ್ಕಾಲದ, ಸಂದರ್ಭಾನುಸಾರವಾದ; ಬಹಳ ಹೊಗಳಲ್ಪಟ್ಟ.

ಪ್ರಸ್ಥ ಒಂದು ಸೇರಿನ ಅಳತೆ; ಪರ್ವತ; ಪರ್ವತದ ತಪ್ಪಲು; ಪ್ರದೇಶ.

ಪ್ರಸ್ಥಾನ ಯಾತ್ರೆ; ಹೊರಡುವುದು, ಹೋಗುವುದು; ಪದ್ಧತಿ.

ಪ್ರಸ್ರಾವ ಮೂತ್ರ, ಉಚ್ಚೆ.

ಪ್ರಹರ ಜಾವ, 7½ ಗಳಿಗೆ ಸಮಯ; ಪೆಟ್ಟು. —ಣ ಹೊಡೆಯುವುದು; ಅಸ್ತ್ರ; ಯುದ್ಧ; ಹೊಡೆತ; ಆಯುಧ.

ಪ್ರಹರಿ ಪಹರಿ (ದ್ಭ), ಕಾವಲುಗಾರ.

ಪ್ರಹಸನ ಹಾಸ್ಯ; ಹಾಸ್ಯಗರ್ಭಿತವಾದ ಏಕಾಂಕ ನಾಟಕ.

ಪ್ರಹಸ್ತ ರಾವಣನ ಒಬ್ಬ ಸೇನಾನಿ ಮತ್ತು ಮಂತ್ರಿ.

ಪ್ರಹಾರ ಹೊಡೆತ, ಬಡಿತ; ಎಸೆತ; ಪೆಟ್ಟು.

ಪ್ರಹಾರಿ ಹೊಡೆವವನು; ಬಡಿವವನು; ಕೊಲ್ಲುವವ.

ಪ್ರಹ್ಲಾದ ಹಿರಣ್ಯಕಶಿಪುವಿಗೆ ಕಯಾಧು ಎಂಬವಳಲ್ಲಿ ಹುಟ್ಟಿದ ಮಗ. ಇವನು ಹೆಸರಾದ ವಿಷ್ಣುಭಕ್ತನಾಗಿದ್ದು ತಂದೆಯ ಕೋಪಕ್ಕೆ ಬಲಿಯಾದವನು. ಈತನ ರಕ್ಷಣೆಗಾಗಿ ವಿಷ್ಣು ನಾರಸಿಂಹ ರೂಪತಾಳಿದನು.

ಪ್ರಳಯ ಕಲ್ಪಾಂತ್ಯದಲ್ಲಿ ಆಗುವ ಪ್ರಪಂಚದ ನಾಶ; ನಾಶ; ಸಾವು.

ಪ್ರಾಕ್ ಮುಂಚಿನ, ಹಳೆಯ, ಮೊದಲಿನ, ಪೂರ್ವದ; ಮುಂಜಾನೆ.

ಪ್ರಾಕಾಮ್ಯ ಇಚ್ಛಿಸಿದಂತೆ ಕಾರ್ಯಗಳನ್ನು ನೆರವೇರಿಸಬಲ್ಲ ಒಂದು ಸಿದ್ಧಿ.

ಪ್ರಾಕಾರ ಪಾಗಾರ (ದ್ಭ), ಪೌಳಿ; ಕೋಟೆ.

ಪ್ರಾಕೃತ ಮೂಲರೂಪಕ್ಕೆ ಸಂಬಂಧಿಸಿದ; ಸಂಸ್ಕೃತದಿಂದ ಹುಟ್ಟಿದ ಪಾಲಿಯಂಥ ಭಾಷೆ; ಮೂಢ, ಅಸಂಸ್ಕೃತ, ಪಾಗಡ (ದ್ಭ).

ಪ್ರಾಕ್ತನ ಪೂರ್ವಕಾಲದ, ಪೂರ್ವ ದಿಕ್ಕಿನಲ್ಲಿ ಹುಟ್ಟಿದ.

ಪ್ರಾಗಲ್ಭ್ಯ ಧೈರ್ಯ; ದಿಟ್ಟತನ; ಆತ್ಮವಿಶ್ವಾಸ; ಹೆಮ್ಮೆ; ನಿರ್ಧಾರ; ನೈಪುಣ್ಯ.

ಪ್ರಾಗ್ಜ್ಯೋತಿಷ ನರಕಾಸುರನ ರಾಜಧಾನಿಯಾಗಿದ್ದ ಒಂದು ಪಟ್ಟಣ. ಇದು ಅಸ್ಸಾಮಿನಲ್ಲಿತ್ತು.

ಪ್ರಾಗ್ಭಾಗ ಮುಮ್ಮೈ; ಪೂರ್ವಭಾಗ.

ಪ್ರಾಘುಣ ಅತಿಥಿ, ಅಭ್ಯಾಗತ, ಆಕಸ್ಮಾತ್ತಾಗಿ ತಾನೇ ಬಂದವ.

ಪ್ರಾಚ್ ಪೂರ್ವದಿಕ್ಕು; ಪೂರ್ವಕಾಲ; ಪೂರ್ವದೇಶ.

ಪ್ರಾಚೀನ ಹಳೆಯ, ಹಿಂದಿನ, ಪೂರ್ವಕಾಲದ; ಕರ್ಮಫಲ, ಪ್ರಾರಬ್ಧ.

ಪ್ರಾಚೀರ ಬೇಲಿ; ಆವಾರ.

ಪ್ರಾಚ್ಯ ಹಿಂದಣ; ಪೂರ್ವದೇಶದ; ಪೂರ್ವದಿಕ್ಕಿನ.

ಪ್ರಾಜ್ಞ ಬಲ್ಲಿದ, ಜ್ಞಾನಿ, ಪಂಡಿತ, ಬುದ್ಧಿವಂತ.

ಪ್ರಾಣ ಬಲ; ಜೀವ; ಜೀವ ಉಳಿದಿರಲು ಕಾರಣವಾದ ಒಂದು ವಾಯು.
— ಕಂಟಕ ಹಾನಿಕಾರಕ, ಮರಣಕಾರಿ.
— ನಾಥ ಜೀವದೊಡೆಯ, ಪತಿ, ಗಂಡ.
— ಲಿಂಗ ಆತ್ಮ; ಆತ್ಮದ ಸೂಚನೆ ತರುವ ಒಂದು ಲಿಂಗ.
ಪ್ರಾಣಪದ ಅತಿ ಇಚ್ಛಿತ ವಸ್ತು.
ಪ್ರಾಣಸಂಕಟ ಪೇಚು; ತೊಡಕಿನ ಪ್ರಸಂಗ; ಜೀವದ ಸುತ್ತು ಬರುವುದು; ಸಂದಿಗ್ಧ.
ಪ್ರಾಣಹಾನಿ ಜೀವಹಾನಿ; ಮರಣ.
ಪ್ರಾಣಾಪಹರಣ ಕೊಲೆ, ವಧೆ.
ಪ್ರಾಣಾಯಾಮ ಮೂಗಿಂದ ಸೆಳೆದ ವಾಯುವನ್ನು ಹತೋಟಯಲ್ಲಿ ಇರಿಸುವ ಒಂದು ವಿದ್ಯೆ.
ಪ್ರಾಣಿ ಜೀವವುಳ್ಳುದು.
— ಕೋಟಿ ಪ್ರಾಣಿಗಳ ಸಮೂಹ.
ಪ್ರಾಣೇಶ್ವರ ಜೀವದೊಡೆಯ, ಗಂಡ.
ಪ್ರಾಣೇಶ್ವರಿ ನಾಥೆ, ಹೆಂಡತಿ, ಇನಿಯೆ.
ಪ್ರಾತಃ (ಪ್ರಾತರ್), ಹೊತ್ತಾರೆ.
ಪ್ರಾತಃಕಾಲ ಬೆಳಗಿನ ಸಮಯ.
ಪ್ರಾತಃಸ್ನಾನ ಬೆಳಗಿನ ಸ್ನಾನ (ಸ್ನಾನ).
ಪ್ರಾತಿಕೂಲ್ಯ ತಡೆ, ವಿರೋಧ; ಅನನುಕೂಲತೆ.
ಪ್ರಾಥಮಿಕ ಮೊದಲನೆಯ; ಪ್ರಾರಂಭದ.
ಪ್ರಾದುರ್ಭಾವ ಪ್ರಕಾಶ; ಪ್ರಕಟವಾಗುವುದು; ಹುಟ್ಟುವುದು.
ಪ್ರಾದೇಶ ಗೋಣು; ಚೋಟು.
ಪ್ರಾಧಾನ್ಯ ಪ್ರಾಮುಖ್ಯ; ಹಿರಿಮೆ; ಏರಿಕೆ.
ಪ್ರಾಪಣಿಕ ವ್ಯಾಪಾರಿ, ವಣಿಕ್ಕು, ಬಣಜಿಗ.
ಪ್ರಾಪ್ತ ದೊರೆತ, ಹೊಂದಿದ, ಗಳಿಸಿದ; ವಿದ್ವಾಂಸ.
ಪ್ರಾಪ್ತಿ ಲಾಭ; ಬಡ್ಡಿ; ವೃದ್ಧಿ, ಸಿದ್ಧಿಗಳಲ್ಲಿ ಒಂದು; ಸುದೈವ.

ಪ್ರಾಬಲ್ಯ ಶಕ್ತಿ; ಹೆಚ್ಚಳ.
ಪ್ರಾಮಾಣಿಕ ನಂಬಲರ್ಹವಾದ, ವಿಶ್ವಾಸಕ್ಕೆ ಪಾತ್ರನಾದವ; ಸತ್ಯಸಂಧ; ನಾಯಕ.
— ತೆ ಒಂದು ಆದರ್ಶವಾಗಿರುವುದು; ನಂಬಿಕೆಗೂ ಅಳತೆಗೂ ಯೋಗ್ಯವಾದುದು.
ಪ್ರಾಯ ಹರೆಯ (ದ್ಭ), ಮರಣ, ಮೃತ್ಯು; ನಿರಶನವ್ರತ; ವಯಸ್ಸು; ಯೌವನ; ಹರೆ.
— ಸ್ಥ ಪ್ರಾಯಕ್ಕೆ ಬಂದವ, ಯೌವನಸ್ಥ; 18 ವರ್ಷ ಕಳೆದವ.
— ಸ್ಥೆ ಪ್ರಾಯಕ್ಕೆ ಬಂದ ಯುವತಿ; ಜವ್ವನೆ.
ಪ್ರಾಯುತಃ ಯೌವನಸ್ಥ.
ಪ್ರಾಯುತೆ ಯೌವನೆ.
ಪ್ರಾಯುಶಃ ಬಹುಶಃ, ಬಹುಮಟ್ಟಗೆ, ಹೆಚ್ಚಿನ ಪಕ್ಷ; ಬಹಳಮಾಡಿ.
ಪ್ರಾಯಶ್ಚಿತ್ತ ಪರಿಹಾರ, ಪಾಪ ಪರಿಹಾರಕ್ಕಾಗಿ ಮಾಡುವ ಕರ್ಮ.
ಪ್ರಾಯೋಪವೇಶ ಆಹಾರತ್ಯಾಗದಿಂದ ಸಾಯಲು ಕೈಕೊಂಡ ವ್ರತ.
ಪ್ರಾರಬ್ಧ ಉತ್ತಮವಾಗಿ ಪ್ರಾರಂಭಗೊಂಡುದು, ಹಿಂದಿನ ಜನ್ಮದ ಕರ್ಮ; ಅದೃಷ್ಟ.
ಪ್ರಾರಂಭ ತೊಡಗುವಿಕೆ, ಶುರು, ಮೊದಲು.
ಪ್ರಾರ್ಥನೆ ಬೇಡುವಿಕೆ; ಮೊರೆ; ಹಿಂಸೆ; ಕೊಲೆ.
ಪ್ರಾರ್ಥಿಸು ಬೇಡು, ಪ್ರಾರ್ಥನೆಮಾಡು.
ಪ್ರಾಲೇಯ ಹಿಮ, ಮಂಜು.
ಪ್ರಾವೃತ ಸುತ್ತಿಕೊಂಡಿರುವ; ಮುಚ್ಚಿರುವ.
ಪ್ರಾಶನ ಕುಡಿಯುವಿಕೆ; ತಿನ್ನುವಿಕೆ.
ಪ್ರಾಸ ಹೆಚ್ಚಾಗಿ ಎಸೆಯಲ್ಪಡುವ ಒಂದು ಆಯುಧ, ಭಾಲೆ; ಪದ್ಯದಲ್ಲಿ ನಿಯತ ಸ್ಥಳದಲ್ಲಿ ಒಂದೇ ಅಕ್ಷರ ಮರುಕಳಿಸುವಿಕೆ.
ಪ್ರಾಸಂಗಿಕ ಪ್ರಸಂಗಕ್ಕೆ ತಕ್ಕುದಾದ, ಸಂದರ್ಭಕ್ಕೆ ಸಮನಾದ.
ಪ್ರಾಸಾದ ಅರಮನೆ; ದೇವಾಲಯ; ಉಪ್ಪರಿಗೆ ಮನೆ, ಮೇಲಟ್ಟದ ಮನೆ.

ಪ್ರಾಹ್ಣ ಪೂರ್ವಾಹ್ನ, ಹಗಲಿನ ಪೂರ್ವಭಾಗ.
ಪ್ರಾಂಗಣ ಅಂಗಣ, ಅಂಗಳ, ಕಳ.
ಪ್ರಾಂತ ಪ್ರದೇಶ, ನಾಡು; ಅಂಚು; ಗಡಿ, ಮೇರೆ; ಮೊನೆ.
ಪ್ರಾಂತರ ನೆರಳಿಲ್ಲದ ದಾರಿ; ಕಾಡು.
ಪ್ರಾಂತೀಯ ಒಂದು ಪ್ರಾಂತಕ್ಕೆ ಸಂಬಂಧಿಸಿದ, ದೇಶೀಯ.
ಪ್ರಾಂತ್ಯ (ಪ್ರಾಂತ), ದೇಶದ ಒಂದು ಭಾಗ.
ಪ್ರಾಂಶು ಉದ್ದವಾದುದು.
ಪ್ರಿಯ ಸಂತೋಷಪಡಿಸುವ, ಮನೋಹರ, ತೃಪ್ತಿಗೊಳಿಸುವ; ಗಂಡ; ಒಡೆಯ; ಒಂದು ಜಾತಿ ಜಿಂಕೆ; ತುಟ್ಟ, ಬೆಲೆ ಏರಿಕೆ.
—ತಮೆ ಪ್ರೇಯಸಿ, ಪ್ರೀತಿಯವಳು.
ಪ್ರಿಯಂವದೆ ಸವಿಯಾಗಿ ಮಾತಾಡುವವ. ಒಬ್ಬ ಗಂಧರ್ವ; ಶಕುಂತಲೆಯ ಒಬ್ಬ ಗೆಳತಿ.
ಪ್ರಿಯೆ ಪ್ರೇಯಸಿ, ಪ್ರಣಯಿನಿ, ಇನಿಯೆ.
ಪ್ರೀ ತೃಪ್ತಿಪಡು.
—ತ ತೃಪ್ತಿಗೊಂಡ, ಸಂತೋಷಪಟ್ಟ.
ಪ್ರೀತಿ ಪ್ರೇಮ, ಸಂತೋಷ; ಸುಖ, ತೃಪ್ತಿ; ಅನುರಾಗ, ಒಲುಮೆ.
—ಇಸು ಪ್ರೀತಿದೋರು, ಪ್ರೇಮದೋರು.
ಪ್ರೇಕ್ಷಣ ನೋಡುವಿಕೆ; ನೋಟ; ಪ್ರದರ್ಶನ.
ಪ್ರೇಕ್ಷೆ ನೋಟ, ದೃಶ್ಯ; ತಿಳಿವು; ಬುದ್ಧಿ; ಬಹಿರಂಗವಾದ ಯಾವುದೇ ನೋಟ.
ಪ್ರೇತ ನರಕದಲ್ಲಿದ್ದ ಜೀವ; ಒಂದು ವಿಧದ ಪಿಶಾಚ, ಕೀಳು; ಸತ್ತನರಿಗೆ ಸದ್ಗತಿ ಬರುವ ಮೊದಲಿನ ಸ್ಥಿತಿ.
—ಕರ್ಮ ಉತ್ತರಕ್ರಿಯೆ, ಸತ್ತವರ ಕ್ಷೇಮಕ್ಕೆಂದು ಮಾಡುವ ಕೆಲಸ.
—ನದಿ ಸತ್ತವರು ದಾಟಬೇಕಾದ ನದಿ, ವೈತರಣೀ.
—ವನ ಶ್ಮಶಾನ, ಮಸಣ, ಸುಡುಗಾಡು.
—ಸಂಸ್ಕಾರ ಉತ್ತರಕ್ರಿಯೆ.
ಪ್ರೇಷ್ಯ ಪ್ರೇರಿಸಲು ಯೋಗ್ಯರಾದವರು, ದಾಸ, ಸೇವಕ.
ಪ್ರೇಮ ಪ್ರಿಯವೆಂಬ ಹೆಸರಿಗೆ ಕಾರಣವಾದ ಗುಣ, ಸ್ನೇಹ, ಪ್ರೀತಿ, ಒಲ್ಮೆ; ಅನುರಾಗ.
ಪ್ರೇಮಿ ಪ್ರೀತಿಯುಳ್ಳವ.
ಪ್ರೇಯಸಿ ಪ್ರೀತಿಯವಳು, ಇನಿಯೆ.
ಪ್ರೇರಕ ಹುರುಪುಕೊಡುವ, ಒತ್ತಾಸೆಕೊಡುವ; ಮುಂದೆ ತಳ್ಳುವ; ಉದ್ರೇಕಿಸುವ, ಪ್ರೋತ್ಸಾಹಿಸುವ; ಪುಟಕೊಡುವ.
ಪ್ರೇರಣೆ ಕೆಲಸಮಾಡಲು ಇತರರಿಗೆ ಕೊಡುವ ಹುರುಪು; ಉತ್ಸಾಹ.
ಪ್ರೇರಿಸು ಮುಂದೆ ತಳ್ಳು; ಕೆಲಸಕ್ಕೆ ಉದ್ಯೋಗಿಸು; ಹುರುಪುಗೊಳಿಸು.
ಪ್ರೇರೇಪಣೆ (ಪ್ರೇರಣೆ).
ಪ್ರೇರೇಪಿಸು (ಪ್ರೇರಿಸು).
ಪ್ರೋಕ್ತ ಹೇಳಿದ; ತಿಳಿಸಿದ; ನಿರ್ಧರಿಸಿದ.
ಪ್ರೋಕ್ಷಣ ನೀರನ್ನು ಚಿಮುಕಿಸುವುದು; ಯಾಗದಲ್ಲಿ ಪಶುವಧೆ.
ಪ್ರೋಕ್ಷಿಸು ನೀರೆರಚು, ಚಿಮುಕಿಸು.
ಪ್ರೋತ ಹೊಲಿದ; ಬಿಗಿದ; ನೇಯ್ದ.
ಪ್ರೋತ್ಸಾಹ ಹುರುಪು; ಉಲ್ಲಾಸ; ವಿಶೇಷ ಯತ್ನ, ಉಮೇದು.
ಪ್ರೋದ್ದಾಮ ಬಹಳ ಹೆಚ್ಚಿನ; ಅಳತೆಗೆಟ್ಟ.
ಪ್ರೌಢ ನಿಪುಣ; ವೃದ್ಧಿಗೊಂಡ; ಯುವಕ, ಪ್ರಾಯಭರಿತ; ಉದ್ಯೋಗಿ.
—ತನ ಜಾಣ್ಮೆ; ಯೌವನ; ಉನ್ನತ ಸ್ವಭಾವಿಯಾದ ನಾಯಕಿ.
ಪ್ರೌಢಿ ಜಾಣ್ಮೆ, ಬುದ್ಧಿವಂತಿಕೆ; ಅಭಿವೃದ್ಧಿ; ವೈಭವ; ಸೊಂಪು; ಹೆಮ್ಮೆ; ಔದ್ಧತ್ಯ; ಧೈರ್ಯ.
—ಮೆ ನೈಪುಣ್ಯ; ಗಾಂಭೀರ್ಯ.
ಪ್ರೌಢೆ ಯುವತಿ, ಯೌವನೆ; ಜಾಣೆ; ನಿಪುಣೆ.
ಪ್ಲಕ್ಷ ಅತ್ತಿಮರ; ಸಪ್ತದ್ವೀಪಗಳಲ್ಲಿ ಒಂದು.

ಪ್ಲವ ತೇಲುವುದು, ತೆಪ್ಪ; ಕಪ್ಪೆ; ಕಪಿ; ಹೊಲೆಯ; ನೀರ್ಕಾಗೆ; ಶತ್ರು; ಬೆಸ್ತ.

ಪ್ಲವಂಗ (ಪ್ಲವಗ), ಮರದಿಂದ ಮರಕ್ಕೆ ನೆಗೆಯುತ್ತ ಹೋಗುವುದು, ಕಪಿ; ಮರಕಪ್ಪೆ; ಮಿಡಿತೆ; ನೀರ್ಕಾಗೆ; ಕುದುರೆ.

ಪ್ಲೀಹ ಅನ್ನಕೋಶದ ಬಳಿಯ ಒಂದು ಕೋಶ, ಈ ಅವಯವದ ಬೇನೆ, ಜ್ವರಗಡ್ಡೆ.

ಪ್ಲುತ ಕುದುರೆಯ ಒಂದು ಬಗೆ ನಡಿಗೆ; ಮೂರು ಮಾತ್ರೆಯ ಅಕ್ಷರ.

ಪ್ಲುಷ್ಟ ಸುಡಲ್ಪಟ್ಟುದು.

## ಫ

ಫಕೀರ ಮುಸಲ್ಮಾನ ಬೈರಾಗಿ; ಕಂಗಾಲ, ದರಿದ್ರ; ತಿರುಕ.

ಫಜೀತಿ ತೊಂದರೆ, ಪೇಚು, ಪೀಕಲಾಟ.

ಫಟ್ ಯೋಗ; ತಂತ್ರ ಶಾಸ್ತ್ರದ ಒಂದು ಅಸ್ತ್ರ ಮಂತ್ರ.

ಫಡ ಶಹಭಾಸ್; ಎಲಾ; ನೀಚ; ಭಲಾ.
—ಫಡ ಭಲಾ; ಎಲಾಎಲಾ.

ಫಣ ಹೆಡೆ.

ಫಣಿ ಹೆಡೆಯುಳ್ಳುದು, ಸರ್ಪ, ಹಾವು.
—ಈಶ ಹಾವುಗಳ ಒಡೆಯ, ಮಹಾಶೇಷ.

ಫಣಿವೇಣಿ ಹಾವಿನಂತೆ ಜಡೆಯುಳ್ಳವಳು, ಚೆಲುವೆ.

ಫಣೆ ಹಣೆ; ಹೆಡೆ; ಕಲ್ಲುಕೊರೆವ ಗನಿ.

ಫನ ನಾಶ, ವಿನಾಶ.

ಫರಮಾಯಿಶಿ ಅತ್ಯುತ್ಕೃಷ್ಟ, ಪಸಂದ.

ಫಲ್ ಒಡೆ; ಹೋಗು; ಹಣ್ಣಾಗು; ಸಫಲವಾಗು.

ಫಲ ಹಣ್ಣು; ಲಾಭ; ಗುರಾಣಿ; ಕೆಲಸ; ಪ್ರಯೋಜನ; ಜಾಜಿಕಾಯಿ; ನೆಲ್ಲಿ; ಬಾಣದ ಮೊನೆ; ದಾನ; ರಂಟೆಯ ಕುಳ.
—ದಾಯಕ ಫಲವನ್ನು ಕೊಡುವ, ಯಶಸ್ಸು ಕೊಡುವ.
—ಹೀನ ಹಣ್ಣಾಗದ; ನಿಷ್ಫಲ; ವ್ಯರ್ಥ.

ಫಲಕ ಹಲಗೆ (ದ್ಭ); ಡಾಲು, ಗುರಾಣಿ.

ಫಲಾನ (ಪಲಾನೆ), ಇಂಥಲ್ಲಿ; ಗೊತ್ತುಗುರಿ, ವಾಸದ ತಾವು.

ಫಲಾಹಾರ ಉಪಾಹಾರ; ಕಿರಿತಿಂಡಿ; ಹಣ್ಣಿನ ಊಟ; ಫಲಾರ.

ಫಲಿತ ಹಣ್ಣು ಬಿಟ್ಟ; ಯಶಸ್ಸು ಹೊಂದಿದ, ಸಫಲವಾದ.

ಫಲಿಸು ಹಣ್ಣಾಗು; ಯಶಸ್ಸು ಬರು.

ಫಲ್ಗು ರಮ್ಯ, ಮನೋಹರ, ಸುಂದರ; ಪ್ರಯೋಜನವಿಲ್ಲದ; ಗಯೆಯ ಬಳಿ ಹರಿವ ಒಂದು ನದಿ.

ಫಲ್ಗುಣ (ಫಲ್ಗುನ), ಅರ್ಜುನ; ಫಾಲ್ಗುಣ ಮಾಸದ ಹುಣ್ಣಿಮೆ ದಿನ ಹುಟ್ಟಿದವ.

ಫಲ್ಗುನಿ ಫಲ್ಗು ನದಿ; ಇದು ಗಯೆಯ ಬಳಿ ಹರಿಯುವುದು.

ಫಲ್ಯ ಫಲಕ್ಕೆ ಕಾರಣವಾದುದು, ಪುಷ್ಪ.

ಫಸಲಿ ಸರಕಾರಿ ಕಂದಾಯದ ವರ್ಷ. ಇದರ ಕ್ರಮ ಮೊಗಲ ಅರಸರಿಂದ ತೊಡಗಿತು. ಕ್ರಿ. ಶಕದಿಂದ 590ನ್ನು ಕಳೆದರೆ ಫಸಲಿ ವರ್ಷ ಸಿಗುವುದು; ಸುಗ್ಗಿಕಾಲ.

ಫಸಲು ಪೈರು, ಬೆಳೆ, ಬೆಳಸು.

ಫಾಜಿಲು ಹೆಚ್ಚು; ಹೆಚ್ಚಾದುದು; ನೀಚ.

ಫಾಯಿದೆ ಲಾಭ, ಮುನಾಫೆ.

ಫಾಲ ಹಣೆ (ದ್ಭ), ಬಾಳ.

ಫಾಲ್ಗುನಿ ಫಾಲ್ಗುನ ಮಾಸದ ಹುಣ್ಣಿಮೆ.

ಫಿರಕ ಪಿರಕಿ, ಹೋಬಳಿ; ಇಲಾಖೆ.

ಫಿರ್ಯಾದು ದೂರು, ತಗಾದೆ; ಅರ್ಜಿ.

ಫಿರ್ಯಾದಿ (ಫಿರ್ಯಾದು), ಅರ್ಜಿದಾರ.

ಫುಪ್ಫುಸ ಶ್ವಾಸಕೋಶ.

ಫುಲ್ಲ ಅರಳಿದುದು; ಹೂ.
ಫೂತ್ಕಾರ ಚೀರಾಟ; ಫೂ—ಎಂದು ಉಸಿರಾಡುವುದು; 'ಫೂ'—ಎಂದು ತಿರಸ್ಕರಿಸುವುದು.
ಫೇಣಿ ಒಂದು ವಿಧವಾದ ಭಕ್ಷ್ಯ.
ಫೇನ ನೊರೆ.
ಫೇರವ ಫೆಫೇ ಎಂದು ಕೂಗುವ ಪ್ರಾಣಿ, ನರಿ; ವಂಚಕ, ಕಪಟ; ರಾಕ್ಷಸ.

# ಬ

ಬಕ ಕೊಕ್ಕರೆ ಜಾತಿಯಲ್ಲಿ ಹಿರಿದು; ರಾವಣನ ದಾಯಾದಿಯಾದ ಒಬ್ಬ ರಾಕ್ಷಸ; ಏಕಚಕ್ರ ನಗರದಲ್ಲಿದ್ದ ಒಬ್ಬ ದೈತ್ಯ. ಈತನು ಏಕಚಕ್ರ ನಗರದ ಜನರನ್ನು ಹಿಂಸಿಸುತ್ತಿದ್ದಾಗ,ಭೀಮನು ಅವನನ್ನು ವಧಿಸಿದನು.
—ವೈರಿ ಬಕನ ಹಗೆ, ಕೃಷ್ಣ; ಭೀಮ.
—ವೃತಿ ಕೊಕ್ಕರೆ; ದೊಡ್ಡ ಭಕ್ತನೆಂದು ತೋರಿಸಿಕೊಳ್ಳುವ ಕಪಟ ಸನ್ಯಾಸಿ.
ಬಕಬಕನೆ ಫಕ್ಕನೆ; ವೇಗವಾಗಿ.
ಬಕರೆ ಹೋತ.
ಬಕವಿಡಂಬನ ಕೊಕ್ಕರೆಯ ಕಪಟವಿದ್ಯೆ; ಸೋಗು; ತೋರಿಕೆಯ ಸೌಜನ್ಯ.
ಬಕಾಸುರ ಬಕನೆಂಬ ರಾಕ್ಷಸ.
ಬಕಾಳ ಅಂಗಡಿಕಾರ, (ಅಂಗಡಿಕಾರರ ಕುತ್ಸಿತ ಹೆಸರು); ಅನ್ನ, ಮೊಸರು, ಹುಳಿ ಸೇರಿದ ಮಿಶ್ರಣ; ಹುಸಿ ಮಾತಿನವ.
ಬಕುತಿ (ದ್ಭ) ಭಕ್ತಿ (ಸಂ).
ಬಕುಳ (ವಕುಲ), ಬಾಗಳು; ನಾಗಕೇಸರ.
ಬಕ್ಕ(ದ್ಭ) ಭಕ್ಷ(ಸಂ); ಶೂನ್ಯ,ಬರಿದು; ಸಿತಗೆ.
—ಬೊರಲು ತಿರುವುಮುರುವು.
ಬಕ್ಕಟೆ ಬರಿದು; ಬಂಜರು.
ಬಕ್ಕುಡಿ ವಿಸ್ಮಯ; ಭೀತಿ; ತಳಮಳ, ಗಡಿಬಿಡಿ.
ಬಕ್ಕೆ ಸವಿ, ಮಾಗಿದ; ಗಟ್ಟಿಯೂ ಸವಿಯೂ ಆದ ಹಣ್ಣು.
ಬಕ್ರಿ (ಬಕ್ಕರಿ), ಬಕರಿ, ಜೋಳದ ರೊಟ್ಟಿ.
ಬಕ್ಷಿ ಮುಖಂಡ; ಮುಖ್ಯ ನೌಕರ.
ಬಕ್ಷೀಸು ಇನಾಮ್ಮು, ಉಚಿತ; ಕಾಣಿಕೆ.
ಬಗಟು ಕಾಲು ಅಗಲಿಸು.
ಬಗಡೆ ಗುಡ್ಡು ಅಕ್ಕಿ, ಕಜೆ ಅಕ್ಕಿ, ಕೇಸಕ್ಕಿ.
ಬಗರ್ (ಬಗರು), ಇಲ್ಲದುದು, ವಿನಾ; ದೋಚು, ಕೈಯಿಂದ ಗೋರು, (ಕೆಬರು).
ಬಗರಗೆ ನೀರಾರಿದ ನದಿಯಲ್ಲಿ ತೋಡಿದ ನೀರ ಕುಳಿ, ವರ್ತಿ; ಒಂದು ಬಗೆಯ ಪಾತ್ರೆ.
ಬಗರಿ ವರ್ತಿ, ನೀರ ಕುಳಿ.
ಬಗರ್ಬದಲಿ ಬದಲಿಲ್ಲದು.
ಬಗಲ್(ಬಗಲು),ಕಂಕುಳು;ಮಗ್ಗುಲು,ಪಕ್ಕ.
ಬಗಸಿಗೆ ಬೊಗಸೆ, ಬಗಸೆ, ಅಂಜಲಿ.
ಬಗಿ (ಬಗೆ), ವಿಭಾಗಿಸು; ಹಿಸಿ, ಸೀಳು; ಬದಿಗೆ ಸರಿಸು; ಕೆರೆ, ಗೀರು, ಕೆದರು.
ಬಗಿನಿ (ಬಗನಿ), ಬಯನಿ, ಬಯನೆ ಮರ.
ಬಗುಡ ದೊಡ್ಡ ಹೊಕ್ಕುಳಿನವ.
ಬಗುಳ್ (ಬೊಗಳು), ನಾಯಿಯ ಕೂಗು; ಹಳಿ,ತೆಗಳು,ನಿಂದಿಸು; ನೋವಿಂದ ನರಳು.
ಬಗೆ ಯೋಚಿಸು, ಆಲೋಚಿಸು; ಲಕ್ಷ್ಯಮಾಡು; ಭಾವಿಸು, ಎಣಿಸು; ರೀತಿ; ಮನಸ್ಸು; ಯೋಚನೆ; ಅಭಿಪ್ರಾಯ; ಇಷ್ಟಾರ್ಥ.
—ಬಾಗೆ ಹೂ; ಹೃದಯ; ರೀತಿ; ಭಾಗ, ಅಂಶ; ಬಕಪುಷ್ಪ.
—ಹರಿಸು ಕೆಲಸ ಮುಗಿಸು; ನೆರವೇರಿಸು.
ಬಗೆರಗೆ ಪಕ್ಕಲೆ, ಒಂದು ಬಗೆಯ ಪಾತ್ರೆ.
ಬಗ್ಗ (ದ್ಭ) ವ್ಯಾಘ್ರ (ಸಂ), ಹುಲಿ.
ಬಗ್ಗಡ ಕೆಸರು, ಗೋಡು, ರೊಜ್ಜು, ರೊಚ್ಚು.
ಬಗ್ಗಡಿಯ ಮೂರ್ಖ; ಕಲಕಾದ.
ಬಗ್ಗಡೆ (ಬಂಗುಡೆ), ಒಂದು ಜಾತಿ ಮೀನು.

ಬಗ್ಗಣೆ ಧ್ವನಿ, ಕೂಗು.
ಬಗ್ಗರಿ (ಬಗ್ಗುರಿ), ಗಂಟಲು, ತಾಳ, ಕೊರಳು; ಎದೆಯ ಪಂಜರ.
ಬಗ್ಗು ಕೂಗು, ಚಿಲಿಪಿಲಿ ಮಾಡು; ಪಕ್ಷಿಗಳ ಚಿಲಿಪಿಲಿ; ಬಾಗು; ನಮಿಸು; ಹುಲಿ; ಭಾಗ್ಯ.
— ಇಸು ಬಡಿ, ಚೆನ್ನಾಗಿ ಬಡಿ, ಮುರಿವಂತೆ ಹೊಡೆ; ಬಾಗಿಸು; ಚಿಲಿಪಿಲಿ ಮಾಡು.
ಬಗ್ಗೆ (ಬಗ್ಯೆ), ಸಲುವಾಗಿ; ಉದ್ದೇಶದಿಂದ.
ಬಚಾವು ರಕ್ಷಣೆ, ಪಾಲನೆ; ಪಾರಾಗುವಿಕೆ.
ಬಚಾಯಿಸು ಬದುಕಿ ಬರು, ಉಳಿಸು; ಪಾರಾಗು; ಅಂಟಿಸು; ಮುಟ್ಟಿಸು.
ಬಚ್ಚ ಮಗು; ವೈಶ್ಯ; ಮೈ ಬಡಕಲಾದವ; ತೆಳ್ಳಗಿನ; ಕೆಟ್ಟ; ಹಸುರು, ಪಚ್ಚೆ.
ಬಚ್ಚಕಾನೆ ರೇಷ್ಮೆ ಅಂಚಿರುವ ಪಂಚೆ.
ಬಚ್ಚಣೆ(ದ್ಭ) ವರ್ಜನಾ(ಸಂ), ಬಣ್ಣ; ಹೊದ್ದಿಕೆ
ಬಚ್ಚರಣೆ ವಜ್ರವನ್ನು ಕತ್ತರಿಸಿ ಮಿರುಗು ಕೊಡುವವ; ಬಣ್ಣಗಾರ.
ಬಚ್ಚರೆ ಸ್ವರ್ಗ, ಬರ್ದಿಲ.
ಬಚ್ಚಲ್ (ಬಚ್ಚಲು), ಸ್ನಾನಗೃಹ, ಮಿಯುವ ಕೋಣೆ; ಹೊಲಸು ನೀರು ಹರಿಯುವ ಚರಂಡಿ, ಕುಣಿ.
ಬಚ್ಚಲೆ (ಬಚ್ಚಳೆ), ಬಸಳೆ; ಬತ್ತಳಿಕೆ; ವತ್ಸಲೆ.
ಬಚ್ಚಂಗಾಯಿ ಕಲ್ಲಂಗಡಿ ಹಣ್ಣು, ಕರಗುಂಜ ಹಣ್ಣು, ಕರಬೂಜ.
ಬಚ್ಚು ಬೆಚ್ಚು, ಬೇತು, ಇರಿಸು; ಅಡಗಿಸು; ಬಡವಾಗು, ಕ್ಷೀಣವಾಗು, ಬಡಕಲಾಗು.
— ಇಡು ಅಡಗಿಸು, ಮರೆಮಾಡು; ರಹಸ್ಯವಾಗಿ ಇರಿಸು; ಗೋಪ್ಯಮಾಡು.
ಬಚ್ಚೆವೋಗು ವ್ಯರ್ಥವಾಗು, ಫಲವಿಲ್ಲದಾಗು.
ಬಜಂತ್ರಿ ವಾದ್ಯ, ಸನಾಯಿ, ಸನಾದಿ.
ಬಜಾಯಿಸು ಬಾರಿಸು, ವಾದ್ಯಮಾಡು; ಸಾಧಿಸು; ಪೂರೈಸು.
ಬಜಾರ ಸಂತೆ, ಸಂತೆಬೀದಿ; ಪಟ್ಟಣ.
ಬಜಾರಿ ಸಂತೆಯು, ಸಂತೆಬೀದಿಯ; ಮಾನಗೆಟ್ಟ ಸ್ತ್ರೀ, ಹೀನ ಸ್ತ್ರೀ.
ಬಜಾವಣೆ ಆಟ; ಸಂಗೀತ ವಾದ್ಯಗಳ ಪ್ರದರ್ಶನ; ಓಲಗಮಾಡುವಿಕೆ.
ಬಜೆ (ಬಜ), ಉಗ್ರಗಂಧ; ಒಂದು ಜಾತಿಯ ಬೇರು.
ಬಜ್ಜರ (ದ್ಭ) ವಜ್ರ (ಸಂ), (ಬಜ್ಜಿರ), ಒಂದು ರತ್ನ; ಇಂದ್ರನ ವಜ್ರಾಯುಧ.
ಬಜ್ಜರಕ್ಕೆ (ಬಗರಗೆ).
ಬಜ್ಜಿ ಗೊಜ್ಜು; ತರಕಾರಿ ಇಲ್ಲವೆ ಕಾಳುಗಳನ್ನು ಅರೆದು ಮಾಡಿದ ಮೇಲೋಗರ.
ಬಟ ಧೈರ್ಯ, ಶೌರ್ಯ; ಭಟ.
— ತನ (ಬಂಟತನ) ಧೈರ್ಯ, ಸಾಹಸ.
ಬಟವಾಡೆ ಹಂಚುವಿಕೆ.
ಬಟವೆ ಸಂಚಿ, ಚಂಚಿ, ಎಲೆ ಅಡಿಕೆ ಚೀಲ.
ಬಟಾಟೆ ಆಲುಗಡ್ಡೆ, ಉರುಳುಗಡ್ಡೆ.
ಬಟಾಣಿ ಒಂದು ಜಾತಿ ಅವರೆಕಾಳು.
ಬಟಾಯಿ ಕಾಳುಕಡಿಗಳ ತೆರಾನೆ, ಧಾನ್ಯ ರೂಪದ ಗೇಣಿ, ತೆರಾನೆ, ಲಾವಣಿ.
ಬಟು ದುಂಡಗೆ, ಉರುಟು.
ಬಟ್ಟ ವೃತ್ತ, ಉರುಟು, ದುಂಡು, ಗೋಲವಾಗಿರುವುದು; ಬರಿದಾಗಿರುವುದು; ಬಂಜರು.
— ಆಡು ಹನಿಯಾಗಿ ಬೀಳು, ತುಟುಕು.
ಬಟ್ಟಲು ಚಟ್ಟೆ ಪಾತ್ರ, ಗಂಗಾಳು; ಥಾಲಿ; ದುಂಡಗಿನ ಪಾತ್ರೆ; ಊಟದ ಪಾತ್ರೆ.
ಬಟ್ಟಿ ವ್ಯರ್ಥ, ಬರಿದು; ಒಡೆತ, ಬಿರಿತ; ಕುಲುಮೆ; ಸಾರಾಯಿ ಮಾಡುವ ಹಬೆ ಸಾಧನ; ಸಾರ ಇಳಿಸುವ ಸಾಧನ.
ಬಟ್ಟು ಮಂಡಲ; ತಿಲಕ; ಹೊಲಗೇರಿ, ಕೊಪ್ಪ; ಬರಿದು; ಪಾವಾಣೆ; ಉರುಟು; ತೊಟ್ಟು; ಬಿಂದು, ಹನಿ.
ಬಟ್ಟೆ ದಾರಿ, ಮಾರ್ಗ; ಅರಿವೆ, ವಸ್ತ್ರ.
— ಕೆಡು ದಾರಿತಪ್ಪು, ರೀತಿ ತಪ್ಪು.

—ಗ ಮಾರ್ಗಸ್ಥ, ಹಾದಿಹೋಕ.

ಬಡ ಉತ್ತರ ದಿಕ್ಕಿನ; ಉತ್ತರ ದಿಕ್ಕು; ದರಿದ್ರನಾದ; ಕ್ಷೀಣವಾದ; ದೀನ, ವಿನೀತ.

—ಕಲು ತೆಳ್ಳಗಿನ, ಕ್ಷೀಣವಾದ, ಸೊರಗಿದ

—ತನ (ಬಡಸ್ತನ), ದಾರಿದ್ರ್ಯ, ಕಂಗಾಲುತನ.

—ಪಡು ಬಡವಾಗು, ಕೃಶವಾಗು.

—ವ ದರಿದ್ರ; ಕಂಗಾಲ.

ಬಡಗ ಉತ್ತರ ದಿಕ್ಕಿನ; ನೀಲಗಿರಿಯ ಮೂಲ ನಿವಾಸಿ.

ಬಡಗಲೆ ವಿಶಿಷ್ಟಾದ್ವೈತಿಗಳ ಒಂದು ಪಂಗಡ.

ಬಡಗಿ (ಬಡಿಗಿ), ಮರಗೆಲಸ ಮಾಡುವವ.

ಬಡಪು ಪ್ರವಾಹ.

ಬಡಬಾಗ್ನಿ ಕಡಲ್ಗಿಚ್ಚು.

ಬಡಬಾನಲ (ಬಡವಾಗ್ನಿ), ಸಾಗರದ ಆಳದಲ್ಲಿದೆ ಎನ್ನುವ ಒಂದು ಮಹಾ ಅಗ್ನಿ; ಕಡಲ್ಗಿಚ್ಚು.

ಬಡವಾ ಹೆಣ್ಣು ಕುದುರೆ; ಸೇವಕಿ; ಕಡಲ್ಗಿಚ್ಚು.

—ಸುತ ಅಶ್ವಿನೀ ಕುಮಾರ.

ಬಡಾಯಿ ಜಂಬ, ಕೊಚ್ಚುವಿಕೆ, ತಿರುಳಿಲ್ಲದ ಮಾತು; ದೊಡ್ಡತನ; ಒಣಹೆಮ್ಮೆಮಾತು.

—ಇಸು ವಿಸ್ತರಿಸು, ದೊಡ್ಡದು ಮಾಡು; ಹೆಚ್ಚಿಸು; ಬೆಳೆಯಿಸಿ ಹೇಳು.

ಬಡಿ ಹೊಡೆತ; ಬಡಿಗೆ, ಡೊಣ್ಣೆ, ಕೋಲು; ಹೊಡೆ; ಸಾಗಿಸು.

—ಗೆ ಹೊಡೆಯುವ ಕೋಲು; ಗುದಿಗೆ, ಗುದ್ದಿ.

ಬಡಿಕ ಬಡಕ, ಬಾಯ್ಬಿಡಿಗ; ಹೊಡೆಯುವವ, ಬಡಿವವ; ಬಡಿಸುವವ; ಬಕಳ.

ಬಡಿದಾಟ ಹೆಣಗಾಟ, ಕಡುಶ್ರಮ; ಹೊಡೆದಾಟ.

ಬಡಿವಾಡು ಶ್ರಮಿಸು, ಹೆಣಗು; ಜಗಳವಾಡು.

ಬಡಿವಾರ ಬಡಾಯಿ, ಬಾಯಿಜಂಬ; ಡೌಲು.

ಬಡಿಶ (ಬಡಿಸ), ಮೀನು ಹಿಡಿಯುವ ಗಾಳ, ಗಾಣ.

ಬಡಿಸು (ಬಳಿಸು), ಅನ್ನ ಮೊದಲಾದುವನ್ನು ಎಲೆಗೆ ಇಕ್ಕು; ಊಟಕ್ಕೆ ಹಾಕು.

ಬಡಿಹೋರಿ ಹೋರಿಯಂತೆ ಹೊಡಸಿಕೊಳ್ಳುವವ.

ಬಡ್ಡ ಮೊಂಡ, ದಡ್ಡ; ಮೊಂಡಾದ, ಹರಿತವಿಲ್ಲದ; ಚುರುಕಿಲ್ಲದ.

ಬಡ್ಡಿ (ದ್ಭ) ವೃದ್ಧಿ (ಸಂ), ಸಾಲದ ಹಣಕ್ಕೆ ಕೊಡುವ ಹೆಚ್ಚಿನ ತೆರಾನೆ, ಹೊಲಿ; ಬಂಜೆ, ಗೊಡ್ಡಿ; ಕರುಹಾಕದ ದನ.

ಬಡ್ಡು (ಬರಡು), ದಡ್ಡ, ಮಂದ ಬುದ್ಧಿಯವ; ಅಲ್ಪ; ಮೊಂಡ, ಹರಿತವಲ್ಲದ; ಗೊಡ್ಡು.

—ಬಣಗ ಪ್ರಯೋಜನಕ್ಕೆ ಬಾರದವ, ಏನೂ ತಿಳಿಯದವ.

ಬಣ ನಿರ್ಜನತೆ, ಬರಿದುತನ; ಬಳಿ, ಕುಲ.

ಬಣಗು ಅಲ್ಪ; ಕೈಲಾಗದವ, ದುರ್ಬಲ.

—ತನ ಅಲ್ಪ ಯೋಗ್ಯತೆ.

ಬಣಜಿಗ ವಣಿಕ್ಕು, ವ್ಯಾಪಾರಿ.

ಬಣಜಿಸು ವ್ಯಾಪಾರಮಾಡು.

ಬಣಬೆ (ಬಣವೆ), ಬಣಂಬೆ, ಮೆದೆ; ರಾಶಿ, ಗುಂಪು; ನೆಲ್ಲು ಹುಲ್ಲುಗಳ ರಾಶಿ; ಗೂಡು.

ಬಣಿಕ್ (ಭಣಿಜ್), ವಣಿಕ್ಕು, ವ್ಯಾಪಾರಿ.

—ಭಾವ ವ್ಯಾಪಾರ; ಕ್ರಯವಿಕ್ರಯ.

ಬಣಿತೆ ಭಣಿತ; ಮಿತ್ರಗೋಷ್ಠಿ; ಮಾತುಕತೆ.

ಬಣ್ಣ (ದ್ಭ) ವರ್ಣ (ಸಂ); ಕಳೆ.

—ಇಸು ವರ್ಣಿಸು, ವಿವರಿಸು; ಹೊಗಳು.

—ಗಾರ ಗುಡಿಗಾರ, ಚಿತ್ರಕಾರ; ಜೀನಗಾರ; ವರ್ಣನೆ ಮಾಡುವವ.

ಬಣ್ಣವುರ (ದ್ಭ) ವರ್ಣಪೂರ, ವರ್ಣಸರ (ಸಂ), ಬಣ್ಣಬಣ್ಣಗಳಿಂದ ಕೂಡಿರುವ ಮಾಲಿಕೆ.

ಬತೇರಿ (ಬತ್ತೇರಿ), ಬುರುಜು, ಹಂಡೆ; ತೋಪು ಇರಿಸುವ ದಿನ್ನೆ.

ಬತ್ತ (ಭತ್ತ), ಕಳಮೆ, ನೆಲ್ಲು; ಬತ್ಯ, ಭತ್ತೆ.
ಬತ್ತಲೆ ನಗ್ನ, ಬರಿಮೈ; ಬೋಳು.
ಬತ್ತಳಿಕೆ ಬಾಣಗಳನ್ನಿರಿಸುವ ಚೀಲ.
ಬತ್ತಾಸು ಒಂದು ಸವಿ ತಿನಿಸು, ಮಿಠಾಯಿ.
ಬತ್ತಿ (ದ್ಭ) ವರ್ತಿ (ಸಂ), ದೀವಿಗೆಯಲ್ಲಿ ಉರಿಯುವ ವಸ್ತು.
—ಇಡು ಬತ್ತಿಕೊಡು, ಮೋಸಮಾಡು.
—ಕೊಡು ಬೆಂಕಿ ಹಚ್ಚು; ಮನಸ್ಸುಕೆಡಿಸು.
ಬತ್ತೀಸು (ಬತ್ತೀಸ), ಮೂವತ್ತೆರಡು.
ಬತ್ತು ಆರು, ಒಣಗು; ಬಚ್ಚು, ಕ್ಷೀಣಿಸು.
—ಕಂದಿ ಹಾಲು ಬತ್ತಿದ ದನ.
ಬದ (ಪದ), ಹೇಳು, ಮಾತಾಡು.
ಬದಗು ಬೇಸರ ಬರುವ ಕೆಲಸ, ಬೇಸರು; ವಂಚನೆ.
ಬದನಾಮಿ ಅಪಯಶಸ್ಸು, ಕೆಟ್ಟ ಹೆಸರು.
ಬದನಿಕೆ (ಬಂದರಿಕೆ), ಬಂದಳಿಕೆ; ಬೇರೊಂದು ಸಸ್ಯದ ಮೇಲೆ ಜೀವಿಸುವ ಗಿಡ.
ಬದನೆ ಒಂದುತರಕಾರಿ, ಗುಳ್ಳ, ಮುಳುಗಾಯಿ
ಬದರಿ ಬದರಿ ಗಿಡ; ಎಲಚಿ ಗಿಡ; ಹತ್ತಿ ಗಿಡ.
ಬದರಿಕಾಶ್ರಮ ಹಿಮಾಲಯದಲ್ಲಿ ಅಳಕನಂದಾ ನದಿ ದಂಡೆಯ ಮೇಲಿನ ಒಂದು ಕ್ಷೇತ್ರ. ಇಲ್ಲಿ ನರನಾರಾಯಣರ ಗುಡಿ ಇದೆ. ಇಲ್ಲಿನ ವಿಗ್ರಹಕ್ಕೆ ಬದರೀನಾಥ ಎಂಬ ಹೆಸರೂ ಇದೆ. ಈ ಸ್ಥಳ ಪ್ರಾಚೀನ ಕಾಲದ ಋಷ್ಯಾಶ್ರಮ.
ಬದಲ್ (ಬದಲು), ಒಂದಕ್ಕೊಂದು; ಮಾರ್ಪಾಡು, ವಿನಿಮಯ; ಬೇರೆಯಾಗು.
—ಇಸು ವ್ಯತ್ಯಾಸಗೊಳಿಸು, ವಿನಿಮಯ ಮಾಡು; ಅದಲುಬದಲು ಮಾಡು.
ಬದಲಾವಣೆ ಬದಲುಮಾಡುವುದು; ಮಾರ್ಪಾಟು.
ಬದಸು ಬದಗು, ವಂಚನೆ; ಒಳಗೊಂದು ಹೊರಗೊಂದು; ಡೊಂಕುತನ.

ಬದಿ ಪಕ್ಕ, ಮಗ್ಗುಲು; ಸಮೀಪ; ಕೆಸರು; ರೊಜ್ಜು.
ಬದುಕು (ಬರ್ದುಕು, ಬರ್ದುಂಕು), ಬಾಳು, ಜೀವಿಸು; ಆಸ್ತಿ, ವಸ್ತುಒಡವೆ; ಬಾಳುವೆ; ಉದ್ಯೋಗ.
ಬದುಹು ಪಾಳಿ, ಹುಣಿ, ಗದ್ದೆಯಂಚು, ಪರಿ.
ಬದೆಗ (ಬದಗ), ಕೀಳಾಳು, ಅಲ್ಪ.
ಬದ್ದ (ದ್ಭ) ಬದ್ಧ (ಸಂ); ಭದ್ರ, ಗಾಢ; ಕಟ್ಟಲ್ಪಟ್ಟ; ಸತ್ಯ.
ಬದ್ದಣ ಹಲಗೆ, ಒಂದು ಚರ್ಮವಾದ್ಯ.
ಬದ್ದರ (ದ್ಭ) ಭದ್ರ (ಸಂ), ಗಟ್ಟಿಮುಟ್ಟು.
ಬದ್ದವಣ (ಬದ್ದಣ) ವರ್ಧಮಾನ (ಸಂ), ಮಂಗಳವಾದ್ಯ.
ಬದ್ದಿಕಾರ ಬಿಗಿಯಲ್ಪಟ್ಟವ, ಸೆರೆಯಾಳು.
ಬದ್ದಿಕೆ ಕಟ್ಟು, ಬಂಧನ; ಅಳತೆ, ಹೋಲುವೆ.
ಬದ್ದು (ಬರ್ದು), ಜಾಣ್ಮೆ, ನೈಪುಣ್ಯ.
ಬದ್ದುಗೆದಾರ ಸೊಂಟದ ದಟ್ಟಿ, ಉಡಿದಾರ.
ಬದ್ದೆ ಸತ್ಯ ನುಡಿವವಳು.
ಬಧ (ವಧ), ಕೊಲೆ, ಕೊಲುವಿಕೆ.
ಬಧಿರ ಕಿವುಡ, ಕಿವಿ ಕೇಳದವ.
ಬಧು (ವಧು), ಸ್ತ್ರೀ, ಹೆಂಡತಿ; ಸೊಸೆ.
ಬಧೂಟಿ ಚಿಕ್ಕ ವಯಸ್ಸಿನ ಸ್ತ್ರೀ.
ಬದ್ಧ (ಬದ್ದ), ಬಿಗಿಯಲ್ಪಟ್ಟ, ಕಟ್ಟಲ್ಪಟ್ಟ.
ಬದ್ಧಕಂಕಣ ಕೈಗೆ ಕಂಕಣ ಕಟ್ಟಿದ, ದೃಢ ನಿಶ್ಚಯಮಾಡಿದ.
ಬದ್ಧಪ್ರಕೃತಿ ಜಡಶೀಲ, ಮಲಬದ್ಧತೆಇರುವಿಕೆ
ಬದ್ಧಮುಷ್ಟಿ ಬಿಗಿದ ಕೈ; ಜಿಪುಣತನ, ಲೋಭ.
ಬದ್ಧವೈರ ಕಡು ವೈರ; ಬಲು ಹಗೆ.
ಬದ್ಧಶಿಖಿ ಕಟ್ಟಿದ ಜುಟ್ಟುಳ್ಳ; ಮಗು; ಜಟ್ಟಿ ಕಟ್ಟಿದ ಹುಡುಗ.
ಬದ್ಧಾಂಜಲಿ ಮುಗಿದ ಕೈ.
ಬಧ್ಯ (ವಧ್ಯ), ಹಿಂಸಕ; ವಧೆಗೆ ಯೋಗ್ಯ; ಪರ ಉಪದ್ರವ.

—ಭೂಮಿ ಕೊಲ್ಲುವ ಜಾಗ, ವಧ್ಯ ಸ್ಥಾನ; ಶ್ಮಶಾನ.
ಬನ (ವನ), ಕಾಡು; ಮನೆ ಬಳಿಯ ತೋಟ.
ಬನಪು (ಬಣಪು), ಒಂದು ನಾಟದ ಮರ.
ಬನವಸೆ (ಬನವಾಸಿ), ಪ್ರಾಚೀನ ಕದಂಬರ ರಾಜಧಾನಿ, ಬನವಸೆ; ವನವಾಸಿ, ವೈಜ ಯಂತಿ.
ಬನಾತು ಉಣ್ಣೆವಸ್ತ್ರ, ದಾವಳಿ; ಕಸೂತಿ ಮಾಡಿದ ಶಾಲು.
ಬನಾಯಿಸು ಮಾಡು, ಕೃತಕವಾಗಿ ರಚಿಸು.
ಬನಾವಟು ನಕಲಿ, ಕೃತಕ; ಮಾಡಿದುದು.
ಬನೀಸು ಕಿರಿ ಅಂಗಿ, ಗಿಡ್ಡಕೈಯ ಷರಾಯಿ.
ಬನ್ನ (ದ್ಭ) ಭಂಗ (ಸಂ), ಕಷ್ಟ; ಕೇಡು, ಬಾಧೆ, ಉಪದ್ರವ; ಸೋಲು.
ಬನ್ನಿ 'ಬಾ' ಎಂಬುದರ ಬಹುವಚನ; ಶಮಿ, ಜಾಲಿ; ಪಡಿ, ಕೊಚ್ಚು; ತೆರಿಗೆ.
ಬಬ್ಬರ ಒಂದು ನಾರುವ ಬೇನೆ; ಒಂದು ದೇಶ; ಬರ್ಬೂರ, ಜಾಲಿ.
ಬಬ್ಬುಲಿ ಬಬ್ಬುಳಿ (ದ್ಭ), ಬರ್ಬೂರ (ಸಂ), ಜಾಲಿಮರ.
ಬಭ್ರು ಶಿವ; ವಿಷ್ಣು; ಮುಂಗುಲಿ; ಅಗ್ನಿ; ಒಬ್ಬ ಮುನಿ; ಒಂದು ದೇಶ; ಆ ದೇಶದವ; ಪಿಂಗ ಳವರ್ಣ, ಕಂದು ಬಣ್ಣ; ಹೊಂಬಣ್ಣ.
ಬಭ್ರುವಾಹನ ಮಣಿಪುರದ ರಾಜಕುಮಾರಿ ಚಿತ್ರಾಂಗದೆಯಲ್ಲಿ ಅರ್ಜುನನಿಗೆ ಹುಟ್ಟಿದ ಮಗ. ಅರ್ಜುನನು ಅಶ್ವಮೇಧದ ಕುದು ರೆಯನ್ನು ಹಿಂಬಾಲಿಸಿ ಹೊರಟಾಗ ಈತನು ಅವನನ್ನು ಕಾಳಗದಲ್ಲಿ ಕೆಡಹಿದನೆಂದೂ, ಮುಂದೆ ಉಲೂಪಿಯೆಂಬ ನಾಗಕನ್ಯೆಯ ಸಹಾಯದಿಂದ ಬದುಕಿದನೆಂದೂ ಕಥೆ.
ಬಮ್ಮರಿ ಮೂರ್ಛೆ.
ಬಯ್ ಹುಗಿ, ನಿಕ್ಷೇಪಿಸು, ಅಡಗಿಸು; ಬಚ್ಚಿಡು; ಬೈ, ದೂರು, ನಿಂದಿಸು; ಬಾಚು; ಸಂಜೆ.
—ಗಳು ಬಯ್ಯುವಿಕೆ, ದೂರು, ನಿಂದೆ, ಶಾಪ; ಕೆಟ್ಟ ವಚನ.
—ಚು ಬಚ್ಚು, ಬಚ್ಚಿಡು, ಅಡಗಿಸು.
ಬಯಕೆ ಇಚ್ಛೆ, ಕಾಂಕ್ಷೆ, ಹಂಬಲ, ಆಸೆ; ನಿಧಿ, ನಿಕ್ಷೇಪ; ಬಸುರಿಯ ಆಸೆ.
ಬಯಲ್ (ಬಯಲು), ವಿಸ್ತಾರವಾದ ಜಾಗ; ಗದ್ದೆ; ಪ್ರಕಟ; ಮಾಯ; ಅಡಗುವಿಕೆ; ಶೂನ್ಯ; ಅಹಂಕಾರ.
—ಆಗು ಮಾಯವಾಗು, ಅಡಗು; ಪ್ರಕಟ ವಾಗು, ಗುಟ್ಟುರಟ್ಟಾಗು.
ಬಯಲುಗ ವ್ಯರ್ಥವೇದಾಂತಿ; ಲಿಂಗಾಯಿತ ನಲ್ಲದವ; ಭವಿ.
ಬಯಸಿ ಕಾಳು ಮೆಣಸು, ಕರಿಮೆಣಸು.
ಬಯಸು ಅಪೇಕ್ಷಿಸು; ಹಂಬಲಿಸು; ಕಾಮಿಸು.
ಬಯ್ಗು (ಬೈಗು), ಸಂಜೆ, ಸಾಯಂಕಾಲ, ಮುಸ್ಸಂಜೆ.
—ಪೊಳ್ತು ಸಾಯಂಕಾಲದ ಸಮಯ.
ಬಯ್ತುಬಯ್ಕೆ ಅಡಗಿಸಿದ ಮನೋರಥ.
ಬಯ್ತಲೆ ಹೆರಳು ಹಾಕಿದ ತಲೆ, ಬಾಚಿದ ತಲೆ; ಹೆರಳಿನ ನಡುವೆ ಬರುವ ಗೀರು.
ಬಯ್ನೆ ಬಗಿನಿ, ಸೀತಾಳೆ ಮರ, ತಾಳೆ.
ಬಯಿರುಗೆ (ಬೈರಿಗೆ), ಗುರುಮ, ತೂತು ಕೊ ರೆವ ಸಾಧನ.
ಬರ್ (ಬರು), ಬಾ; ಆಗು; ಸಂಭವಿಸು; ಕೂಡು, ಸೇರು; ಆಗುವಂಥದು; ಸಾಧ್ಯವಾಗು.
ಬರ ವರ (ಸಂ), ಶ್ರೇಷ್ಠ; ಗಂಡ; ದೇವತೆಗಳಿಂದ ಬೇಡುವ ಹರಕೆ; ಆರುವಿಕೆ; ಕ್ಷಾಮ; ಬರುವಿಕೆ, ಆಗಮನ.
ಬರಕ ಅವಕಾಶ, ಎಡೆ; ಕಲ್ಲಿ, ಬಲೆಚೀಲ.
ಬರಕತ್ತು ಯಶಸ್ಸು; ಒಳಿತು; ಹೆಚ್ಚುವಿಕೆ.
ಬರಖಾಸ್ತು ಮುಗಿತ, ಕೊನೆ, ಬಿಳಿತ.
ಬರಗು ಬಾಚು, ದೋಚು; ಒಂದು ಧಾನ್ಯ; ದರ್ಭೆಕಡ್ಡಿ, ಗಲಗು; ಕೀಳು ಅಕ್ಕಿ.

ಬರಟಿ (ಬೆರಣಿ), ಒಣಗಿದ ಸಗಣಿ ಬಿಲ್ಲೆ.
ಬರಟು ಬೆರಳಿಂದ ಇಲ್ಲವೆ ಉಗುರಿಂದ ಕೆರೆ, ಕೀಳು.
ಬರಡು ನಿಸ್ಸಾರ; ಬಂಜೆ; ಟೊಳ್ಳು; ಗೊಡ್ಡು.
ಬರಣಿ (ಭರಣಿ), ಸೀಸೆ; ಸಣ್ಣ ಕರಡಿಕೆ.
ಬರತಿ(ದ್ಭ) ಭರ್ತಿ (ಸಂ), ತುಂಬುವಿಕೆ, ಭರತ, ನೀರಿನ ಉಬ್ಬರ.
ಬರದಾಸ್ತು ಕ್ಷಮೆ.
ಬರಮು (ದ್ಭ), ಭರಮ, ಬ್ರಹ್ಮ (ಸಂ).
ಬರಲು ಬೊರಲು, ಪೊರಕೆ, ಕಸಬರಿಗೆ.
ಬರವಣಿಗೆ ಬರಹ, ಬರೆಪ; ಬರುವಿಕೆ.
ಬರವಸೆ(ಭರವಸೆ),ನಂಬಿಕೆ,ವಿಶ್ವಾಸ; ವಿಶ್ವಾಸ ಹುಟ್ಟಿಸುವಿಕೆ, ಅಭಯ.
ಬರವಿಗ ಬರುವಾತ.
ಬರಸಿಡಿಲು (ಬರೆ ಸಿಡಿಲು), ಕಠಿಣವಾದ ಸಿಡಿಲು, ಬಿರುಸಾದ ಸಿಡಿಲು.
ಬರಸೆಳೆ ಹತ್ತಿರ ಬರುವಂತೆ ಸೆಳೆ.
ಬರಹ ಕಡತ; ಬರೆವ ಲೇಖನ, ಬರೆದುದು; ಅಕ್ಷರ ಸಂಕೇತ, ಲಿಪಿ.
ಬರಂ ವರೆಗೆ.
ಬರಂಗಿ ಪಪ್ಪಾಯ, ಪರಂಗಿ, ಅಕ್ಕತಂಗಿಯರ ಕಾಯಿ.
ಬರಾಬರಿ ಸಮ, ಸರಿ; ತಕ್ಕ, ಯೋಗ್ಯ; ಹಾಳಿತ
ಬರಾಮುದ್ದು ಬರವಣಿಗೆ; ಬರೆದು ತಯಾರಿಸುವ ಲೆಕ್ಕಾಚಾರ; ನೌಕರರ ಪಟ್ಟಿ.
ಬರಿ (ಬದಿ), ಮಗ್ಗುಲು, ಪಕ್ಕ; ಏನೂ ಇಲ್ಲದ, ಬರಿದು.
—ಕೈ ಆನೆ ಕೈ; ಏನಿಲ್ಲದ ಕೈ.
—ದು ಶೂನ್ಯ; ಏನಿಲ್ಲದುದು, ತೆರವು.
ಬರಿದೊರೆ(ತೊರೆ=ಹೊಳೆ), ಬತ್ತಿದ ಹೊಳೆ, ನೀರಾರಿದ ಹೊಳೆ.
ಬರಿವೇಟ ವ್ಯರ್ಥಮೋಹ, ವ್ಯರ್ಥಅನುರಾಗ.
ಬರಿಸ (ದ್ಭ) ವರ್ಷ (ಸಂ).
ಬರು ಬಾ.
ಬರುಗು ಹರೆ, ಬಗ್ಗಿ ನಡೆ.
ಬರುಬ ಬರಿದಾದುದು, ಶೂನ್ಯ.
ಬರುವ ಸಹಾಯಶೂನ್ಯ.
ಬರೆ ಅಂಕಿಸು, ಗುರುತಿಸು; ಒಣಗು; ಘಟ್ಟದ ಝರಿ, ಬೆಟ್ಟದ ತಪ್ಪಲು; ಗುಳದಿಂದ ಎಳೆದ ಗೀಟು; ಗೀಟು; ಪಟ್ಟೆ; ಪೆಟ್ಟು.
—ಇಸು (ಬರೆಯಿಸು, ಬರಾಯಿಸು), ಬರೆಯುವಂತೆ ಮಾಡು.
ಬರ್ಕ ಜಿಂಕೆ ಮತ್ತು ಮೊಲವನ್ನು ಹೋಲುವ ಒಂದು ಚಿಕ್ಕ ಪ್ರಾಣಿ.
ಬರ್ಕರಕರ್ಕರ ಸುಖದುಃಖ; ಒಳಿತುಹಾಳು, ಹಾಳುಬೀಳು.
ಬರ್ಕಣೆ ಬಣ್ಣ.
ಬರ್ಚಿ ಈಟಿ, ಭಲ್ಲೆ.
ಬರ್ಚಿಸು ಬಣ್ಣಬರೆ, ಚಿತ್ರಬಿಡಿಸು.
ಬರ್ದಿಲ ಸ್ವರ್ಗ; ಮರಣವಿಲ್ಲದವ, ದೇವತೆ.
ಬರ್ದು ಪ್ರೌಢಿ, ಜಾಣತನ; ಮರಣ, ಸಾವು.
ಬರ್ದುಕು (ಬದುಕು), ಬರ್ದುಂಕು, ಬಾಳು.
ಬರ್ದೆ ಪ್ರೌಢೆ, ಜಾಣ ಸ್ತ್ರೀ.
ಬರ್ಫ ಹಿಮ, ಮಂಜುಗಡ್ಡೆ.
ಬರ್ಫಿ (ಬರ್ಫೆ), ಪೇಡೆ, ಒಂದು ಸಿಹಿ ತಿಂಡಿ.
ಬರ್ಬರ ಅನಾಗರಿಕ; ಗ್ರೀಕನಲ್ಲದವ; ಪಾಮರ; ಕರ್ಕಶ; ಹರಿಚಂದನ; ಬೊಬ್ಬುಳಿ.
ಬರ್ಬೂರ (ಬೊಬ್ಬುಳಿ), ಬಿಳಿ ಜಾಲಿ.
ಬರ್ಮ (ದ್ಭ) ಬ್ರಹ್ಮ (ಸಂ); ಬರ್ಮಾದೇಶ.
ಬರ್ಹ ನವಿಲಿನ ಸೋಗೆ; ಹಕ್ಕಿಯ ಬಾಲ; ಪರಿವಾರ; ಎಲೆ, ದರ್ಭೆ; ಬರುವ.
ಬರ್ಹಿ ಬರ್ಹವುಳ್ಳುದು, ನವಿಲು; ದರ್ಭೆ.
ಬರ್ಹಿಷ್ಠ ಬಲಶಾಲಿ, ಶ್ರೇಷ್ಠ.
ಬಲ್ ಬಲವಾಗು, ವೃದ್ಧಿಯಾಗು; ವಿಶೇಷವಾಗು; ಮಾರು; ತ್ರಾಣ, ಶಕ್ತಿ; ಸ್ಥೈರ್ಯ; ಆಧಿಕ್ಯ

—ಮೆ ಆಧಿಕ್ಯ, ಹೆಚ್ಚಳ; ಪರಾಕ್ರಮ.

ಬಲ ಸೈನ್ಯ; ದೇಹಶಕ್ತಿ; ಗಾತ್ರವಾಗಿರುವುದು; ವೀರ್ಯ; ದೇಹ; ಎಲೆ; ರಕ್ತ; ಕಾಗೆ; ಬಲರಾಮ; ಒಬ್ಬ ದೈತ್ಯ; ಎಡಕ್ಕೆ ವಿರುದ್ಧವಾದುದು; ಪಕ್ಕಾ.

—ಕಾಯಿಸು ಬಲಗೊಳ್ಳು; ಬಲಗೊಳಿಸು.

—ಕೊಳ್ ಪ್ರದಕ್ಷಿಣೆ ಮಾಡು.

—ಬರು ಪ್ರದಕ್ಷಿಣೆ ಬರು.

—ರುಕ್ಣ ಬಲನಾಶವಾದುದು; ಬಿಳಿ ಬಣ್ಣ.

—ವಂತ ಶಕ್ತಿವಂತ; ಬಲಾತ್ಕಾರ, ಬಲಪ್ರಯೋಗ.

—ವಿನ್ಯಾಸ ಸೈನ್ಯವನ್ನು ಕಾದಾಟಕ್ಕೆ ನಿಲ್ಲಿಸುವ ರೀತಿ.

ಬಲಜೆ ಅಗಸೆ, ಪುರದ್ವಾರ; ಗದ್ದೆ; ಗೊಂಬೆ.

ಬಲದೇವ ಬಲಭದ್ರ, ಶಕ್ತಿಯಿಂದ ಹೊಳೆವವ, ಬಲರಾಮ.

ಬಲಮುರಿ ಬಲಗಡೆ ತಿರುವುಳ್ಳ ಶಂಖ.

ಬಲರ ಬಲವಾದ ಪಿಶಾಚ.

ಬಲರಾಮ ಕೃಷ್ಣನ ಅಣ್ಣ. ದೇವಕಿಯ ಮಗನಾದ ಇವನನ್ನು ಗೋಕುಲದಲ್ಲಿ ಕೃಷ್ಣನೊಡನೆ ಬೆಳಸಿ ಬಂದರು. ಕೃಷ್ಣನ ಬಾಲಲೀಲೆಗಳಲ್ಲಿ ಬಲರಾಮನು ಬಹಳವಾಗಿ ಸೇರಿದನು. ಇವನು ದುರ್ಯೋಧನ ಭೀಮರಿಗೆ ಗುರು. ಮಹಾಭಾರತ ಯುದ್ಧದಲ್ಲಿ ಆವನು ಯಾತ್ರೆಗೆ ಹೊರಟು ಹೋದನು. ಈತನು ತೀರ ಮಧುಪ್ರಿಯನು. ಬಲರಾಮನಿಗೆ ರೇವತಿ ಎಂಬ ಹೆಂಡತಿಯೂ, ಇಬ್ಬರು ಮಕ್ಕಳೂ ಇದ್ದರು.

ಬಲವಿರೋಧಿ ಬಲಸೂದನ, ಇಂದ್ರ.

ಬಲಾ ಬಲವುಳ್ಳ; ವಿಶ್ವಾಮಿತ್ರನು ರಾಮನಿಗೆ ಬೋಧಿಸಿದ ಒಂದು ಬಿಲ್ವಿದ್ಯೆ.

ಬಲಾಕ ಬಲಾಕೆ, ಬೆಳ್ಳಕ್ಕಿ, ಕೊಕ್ಕರೆ; ಪ್ರಿಯೆ.

ಬಲಾಢ್ಯ ಬಲಶಾಲಿ, ಬಲಾನ್ವಿತ.

ಬಲಾತ್ ಪಕ್ಕನೆ, ಜೋರಿನಿಂದ, ಜುಲುಮೆಯಿಂದ.

—ಕರಿಸು ಬಲವಂತಮಾಡು, ಒತ್ತಾಯಮಾಡು; ಬಲದಿಂದ ನಿಲ್ಲಿಸು.

—ಕಾರ ಬಲದಿಂದ ಮಾಡಿದುದು, ಬಲವಂತ.

ಬಲಾಹಕ ಮೇಘ; ಪರ್ವತ; ಒಂದು ಜಾತಿಯ ಕೊಕ್ಕರೆ; ಕೃಷ್ಣನ ರಥದ ಒಂದು ಕುದುರೆ.

ಬಲಿ ಪ್ರಹ್ಲಾದನ ಮಗನಾದ ಇವನು ಬಲು ಬಲಶಾಲಿಯಾದವನು. ಈತನು ಇಂದ್ರನನ್ನು ಸೋಲಿಸಿದನು. ಆಗ ಇಂದ್ರನು ವಿಷ್ಣುವಿನ ಶರಣುಹೋಗಲು, ಅವನು ವಾಮನರೂಪಿಯಾಗಿ ಬಂದು ಬಲಿಯನ್ನು ನಿಗ್ರಹಿಸಿದನು. ಬಲಪಡಿಸು; ಬಲವುಳ್ಳ; ಬಲವಾಗು; ಬೆಳೆ, ಮಾಗು; ದೇವತೆಗಳಿಗೆ ಒಪ್ಪಿಸುವ ಪೂಜೆ, ಉಪಾಹಾರಾದಿಗಳು; ಉಪದ್ರವ; ಪೀಡೆ; ಬಾರುಕೋಲು; ಭೂತಯಜ್ಞ; ಬಾಣಾಸುರನ ತಂದೆ; ಸುಕ್ಕು, ನೆರಿಗೆ, ನೀರಿಗೆ; ಚರು, ಹವಿಸ್ಸು.

—ದಾನ ಬಲಿಕೊಟ್ಟು ಸಮಾಧಾನಪಡಿಸುವುದು; ತನ್ನನ್ನೆ ಬಲಿಕೊಡುವಿಕೆ.

ಬಲಿಪಾಡ್ಯ ಕಾರ್ತಿಕ ಶುಕ್ಲ ಪಾಡ್ಯಮಿ. ಈ ದಿನ ವಿಷ್ಣುವು ಬಲಿಯನ್ನು ದಮನಮಾಡಿದನೆಂದು ಕಥೆ.

ಬಲಿಪೀಠ ಬಲಿಯನ್ನು ಅರ್ಪಿಸುವ ವೇದಿಕೆ.

ಬಲಿಪುಷ್ಟ ಬಲಿ ಇತ್ತ ಅನ್ನವನ್ನು ತಿನ್ನುವ ಕಾಗೆ, ಬಲಿಭುಕ್.

ಬಲಿಮುದ್ರೆ ಬಲಿ ಕೊಡಲಿರುವ ಪ್ರಾಣಿಯ ಮೇಲೆ ಒತ್ತುವ ಗುರುತು.

ಬಲಿಸು ಬಲಪಡಿಸು, ಭದ್ರಮಾಡು; ಬಿಗಿ, ಕಟ್ಟು; ನಡು; ನಿರ್ಮಾಣಮಾಡು.

ಬಲಿಹ ಬಿಗಿತ, ಬಲಗೊಳಿಸುವಿಕೆ.

ಬಲೀವರ್ಧ ಎತ್ತು.

ಬಲು ಬಹಳ; ಬಲ; ಗಟ್ಟಿಯಾಗಿರುವಿಕೆ, ಪೂರ್ಣ ಬೇಯದಿರುವಿಕೆ.

—ಮೆ (ಬಲ್ಮೆ), ಬಲುಹು, ಶಕ್ತಿ, ಬಲ್ಪು.

ಬಲೆ ಮೃಗಗಳನ್ನು ಹಿಡಿಯುವ ಜಾಳಿಗೆ; ಕಾರಣ; ಒಂದು ಬಗೆಯ ಹಾವಸೆ; ತೊಡಕು.

—ಗಾರ ಬೆಸ್ತ; ಮೀನು ಹಿಡಿವವ; ಬಲೆಯಿಂದ ಬೇಟೆಯಾಡುವವ.

—ಬೀಸು ಮೋಸದಲ್ಲಿ ಕೆಡೆ, ಹಿಡಿ.

ಬಲೋದ್ಬಂಧ ಬಲವಂತ, ಬಲಾತ್ಕಾರ.

ಬಲ್ಕಣೆ ಬಲವಾದ ತೊಡಕುಳ್ಳ; ಬಲವಾದ ಅಂಬು.

ಬಲ್ಗಣ್ಣೆ ದೊಡ್ಡ ಕತ್ತಿ; ದೊಡ್ಡ ಉರುಳು.

ಬಲ್ಗೆಯ್ಯ ಸಮರ್ಥ, ವೀರ, ಪರಾಕ್ರಮಿ.

ಬಲ್ಡಿಡಿಗ ಬಹು ಬಲಶಾಲಿ.

ಬಲ್ದೊರೆ ದೊಡ್ಡ ಹೊಳೆ.

ಬಲೌಘ ಸೈನ್ಯಸಮೂಹ.

ಬಲ್ಮು (ಬಲ್ಪು), ಬಲುಹು, ಶಕ್ತಿ.

ಬಲ್ಮೊಳಗು ದೊಡ್ಡಗುಡುಗು; ದೊಡ್ಡಮೊರೆ

ಬಲ್ಯ ಭಲ್ಲೆ, ಈಟ.

ಬಲ್ಲಿ ಶಕ್ತಿ, ತ್ರಾಣಿ; ಬಲ್ಲಿದ, ತಿಳಿದವ.

—ಇತು ಬಲವಾದುದು.

ಬಲ್ಲಹ(ದ್ಭ) ವಲ್ಲಭ(ಸಂ), ಸ್ವಾಮಿ, ಒಡೆಯ; ಗಂಡ.

ಬಲ್ಲಾಟಲಿಕ ಕಡು ವಂಚಕ; ಬಲ್ಲವ, ತಿಳಿದವ.

ಬಲ್ಲಾಳ್ (ಬಲ್ಲಾಳ), ವೀರ; ಹೆಗ್ಗಡೆ; ಶಕ್ತ.

ಬಲ್ಲಾಳದಡ್ಡಿ ತಡಿಕೆ, ತಟ್ಟ, ಮರೆ.

ಬಲ್ಲಿದ ಬಲ್ಲವ, ಕೋವಿದ; ಬಲಶಾಲಿ.

ಬಲ್ಲೆ ಹೆಚ್ಚಾಗಿ, ಅಭಿವೃದ್ಧಿ; ಪೊದೆ, ಬೀಳಲಿನ ಜಾಳಿಗೆ; ಪೊದರು, ಬೀಳಲಿನ ಜಿಡುಕು; ಬರ್ಚಿ, ಈಟ.

ಬಲ್ಸಾಲ ಅತಿಶಯ.

ಬಲ್ಸುರಿಕೆ ಬಲವಾಗಿ ನುಗ್ಗುವಿಕೆ.

ಬವ (ದ್ಭ) ಭವ (ಸಂ), ಜನ್ಮ, ಸಂಸಾರ.

ಬವಣೆ (ದ್ಭ) ಭ್ರಮಣ (ಸಂ), ಬವಣಿ, ಅಲೆತ.

ಬವನಾಸಿ (ಬೋನಾಶಿ), ಭಿಕ್ಷಾಪಾತ್ರೆ, ಸಾರು ಬಡಿಸುವ ಮೂತಿಯುಳ್ಳ ಪಾತ್ರೆ.

ಬವರ (ದ್ಭ) ಭ್ರಮರ (ಸಂ), ತುಂಬಿ; ಯುದ್ಧ, ಸಂಗ್ರಾಮ.

ಬವರಿ ಭ್ರಮರಿ, ಹೆಣ್ಣು ತುಂಬಿ; ಸುತ್ತು ತಿರುಗುವಿಕೆ; ದ್ವಂದ್ವ ಯುದ್ಧದಲ್ಲಿ ಸುತ್ತು ಬರುವಿಕೆ.

—ಗಡ್ಡ ಕಪ್ಪಾದ ಗಡ್ಡ; ತಿಕ್ಕಿ ತೀಡಿದ ನಯವಾದ ಗಡ್ಡ; ಸುಳಿ ಗಡ್ಡ.

ಬವಸೆ (ದ್ಭ) ವ್ಯವಸಾಯ (ಸಂ), ಪ್ರಯತ್ನ; ಅಪೇಕ್ಷೆ.

ಬವಳಿ (ಬವಣಿ), ಬವಳಿಕೆ, ಮೂರ್ಛೆ.

ಬವಿ (ದ್ಭ) ಭವಿ (ಸಂ).

ಬಸ (ದ್ಭ) ವಶ (ಸಂ), ಸ್ವಾಧೀನ, ಅಧೀನ.

ಬಸತಿ (ಬಸದಿ), ಜೈನದೇಗುಲ; ವಸತಿ, ಮನೆ.

ಬಸನ (ದ್ಭ) ವ್ಯಸನ (ಸಂ), ಚಿಂತೆ; ಅತ್ಯಾಸಕ್ತಿ, ಅಭ್ಯಾಸ; ಚಾಳಿ, ಚಟ.

ಬಸರಿ ಒಂದು ಜಾತಿ ಮರ; ಬಸುರಿ.

ಬಸಲೆ (ಬಸಳೆ), ಒಂದು ಬಗೆ ಬಳ್ಳಿ, ಒಂದು ಪಲ್ಲೆಯ.

ಬಸವ (ದ್ಭ) ವೃಷಭ (ಸಂ), ಗೂಳಿ, ಗಂಗೆತ್ತು; ವೀರಶೈವಮತಸ್ಥಾಪಕನಾದ ಬಸವೇಶ್ವರ.

ಬಸವನಹುಳ ಒಂದು ಚಿಪ್ಪುಳ್ಳ ಹುಳು.

ಬಸವಳಿ ಶಕ್ತಿಗುಂದು, ದಣಿ; ಜ್ಞಾನತಪ್ಪು, ಪರವಶನಾಗು.

ಬಸವಿ (ಬಸವೆ), ವೇಶ್ಯೆ; ದೇವರಿಗೆ ಬಿಟ್ಟಾಕೆ.

ಬಸಂತ (ದ್ಭ) ವಸಂತ (ಸಂ), ಚೈತ್ರವೈಶಾಖ ಮಾಸಗಳು; ಈ ಕಾಲದ ದೇವತೆ, ಮನ್ಮಥನ ಗೆಳೆಯ; ಒಂದು ರಾಗ; ಓಕುಳಿ.

ಬಸಿ ಸುರಿ; ಸೋರು, ನೀರನ್ನಿಳಿಸು; ಬಗಿ; ಶೂಲಕ್ಕೇರಿಸು, ಮೊನೆ, ಶೂಲ; ಮೊನಚು.

ಬಸಿರ್ (ಬಸಿರು, ಬಸುರ್), ಹೊಟ್ಟೆ; ಗರ್ಭ.

ಬಸಿರಿ (ಬಸುರಿ), ಗರ್ಭವತಿ, ಬಸಿರುಳ್ಳವಳು.
ಬಸು ಜಿನುಗು, ಒರತೆ.
ಬಸೆ (ದ್ಭ) ವಸಾ (ಸಂ), ಮೇದಸ್ಸು, ನೆಣ, ಕೊಬ್ಬು; ಹೆಣ್ಣಾನೆ; ಪ್ರಸನ್ನವಾಗು.
ಬಸ್ತಿ ಬಸದಿ, ನಾಸ್ತಿಕಾಲಯ; ವಸತಿ, ಮನೆ.
ಬಹ ಬರುವ, ಬಪ್ಪ.
ಬಹನೆ ನೆವ, ನೆಪ; ಬರುವನೆ.
ಬಹಳ ವಿಪುಲ, ಹೆಚ್ಚು, ವಿಶೇಷ, ಅತಿಶಯ.
ಬಹಾದರ್ (ಬಹದ್ದೂರ) ವೀರ, ಶೂರ, ಪರಾಕ್ರಮಿ; ಬಿರುದಾಂಕಿತ.
ಬಹಿರ್ ಹೊರಗೆ.
ಬಹಿರಂಗ ಹೊರಗಣ ಸ್ಥಳ, ಹೊರಗಡೆ; ಖ್ಯಾತಿ, ಪ್ರಕಟಣೆ.
ಬಹಿರ್ಪುರ ಊರಿನ ಹೊರಗೆ, ಹೊರಗಡೆ.
ಬಹಿರ್ದೇಶ ಊರಿನ ಹೊರಗೆ; ಬೈಲುಕಡೆ.
ಬಹಿರ್ದ್ವಾರ ಅಗಸೆ ಬಾಗಿಲು, ಪುರದ್ವಾರ.
ಬಹಿರ್ಮುಖ ಮುಖ ತಿರುಗಿಸಿದವ; ಜುಗುಪ್ಸೆಗೊಂಡವ.
ಬಹಿಷ್ಕರಿಸು ಹೊರಗೆ ಹಾಕು; ತಿರಸ್ಕರಿಸು, ದೂರಮಾಡು.
ಬಹಿಷ್ಕಾರ ಹೊರಗಿಡುವಿಕೆ, ಗುಂಪಿಂದ ಬೇರೆ ಮಾಡುವಿಕೆ.
ಬಹು ಬಹಳ, ವಿಪುಲ; ಕಡು, ಬಲು.
—ತರ ವಿಶೇಷ, ಅತಿಶಯ; ಬಹಳವಾಗಿ.
—ಧಾ ಹಲವು ವಿಧದಿಂದ, ಅನೇಕಪ್ರಕಾರ
ಬಹುತೇಕ ಬಹು, ಬಹುವಾಗಿ, ಬಹಳಮಾಡಿ.
ಬಹುದು ಆದೀತು, ಅಕ್ಕು; ಬರುವುದು.
ಬಹುಧಾನ್ಯ ಬಹಳ ಕಾಳು; 12ನೆಯ ಸಂವತ್ಸರ.
ಬಹುನಾಯುಕತ್ವ ಹಲವು ಯಜಮಾನರಾಗುವಿಕೆ; ಅನಾಯಕತೆ.
ಬಹುಪದ ಬಹಳ ಪಾದವುಳ್ಳದು; ಅಂಜೂರದ ಮರ.
ಬಹುಭಾಷಿ ಬಹಳ ಮಾತಾಡುವವ, ಬಾಯ್ಬಡಕ; ಹಲವು ಭಾಷೆ ಬಲ್ಲವ.
ಬಹುಮಾನ ಉಚಿತ, ಇನಾಮು; ಮರ್ಯಾದೆ, ಮನ್ನಣೆ; ಗೌರವ.
ಬಹುರೂಪ ಹಲವು ರೂಪ ಉಳ್ಳದು; ರಾಕ್ಷಸ; ಶಿವ, ವಿಷ್ಣು.
ಬಹುರೂಪಿ ಜಾತಿಗಾರ, ಸೋಗು ಹಾಕುವವ
ಬಹುಲ (ಬಹುಳ); ಬಹಳ; ಅಗ್ನಿ; ಕಪ್ಪುಬಣ್ಣ; ಕೃಷ್ಣಪಕ್ಷ.
ಬಹುಲೆ (ಬಹುಳೆ), ದನ; ಏಲಕ್ಕಿ.
ಬಹುವಚ ವಾಚಾಳಿ, ಬಲು ಮಾತಾಡುವವ.
ಬಹುವಚನ ಒಂದಕ್ಕೆ ಮೀರಿದ ಸಂಖ್ಯೆ; ಮನ್ನಣೆ.
ಬಹುವಿಧ ತೆರತೆರ, ವಿಧವಿಧ, ನಾನಾ.
ಬಹುವ್ರೀಹಿ ಅನೇಕ ಧಾನ್ಯಗಳಿಂದ ಕೂಡಿದುದು; ಅನ್ಯ ಪದಾರ್ಥ ಪ್ರಧಾನವಾದ ಒಂದು ಸಮಾಸ.
ಬಹುಶಃ (ಬಹುಶ), ಪ್ರಾಯಶಃ, ಬಹುವಾಗಿ, ಬಹು ಮಟ್ಟಿಗೆ, ಬಹಳ ಮಾಡಿ.
ಬಹುಶ್ರುತ ಬಹುವಾಗಿ ಕೇಳಿ ತಿಳಿದ, ಬಲ್ಲಿದ, ಜ್ಞಾನಿ.
ಬಹುಸೂತಿ ಬಹಳ ಕರುಹಾಕಿದ ದನ.
ಬಹ್ವಾಶಿ ಹೊಟ್ಟೆಬಾಕ, ತಿಂಡಿಪೋತ; ಧೃತರಾಷ್ಟ್ರನ ಮಗನೊಬ್ಬ.
ಬಳ್ ನರಿ.
ಬಳಕೆ ದಾರಿ; ರೀತಿ; ಮಾಡುವಿಕೆ, ತಾಳಿಕೆ; ಉಪಯೋಗ.
ಬಳಗ ಸಮೂಹ, ರಾಶಿ; ಸಂಬಂಧಿಕರು; ಕುಟುಂಬ; ಪಡೆ.
ಬಳಚು ಕೆತ್ತು, ಕತ್ತರಿಸು; ಕೈಯಿಂದ ಸವರಿ ಹುಡುಕು; ಸವರು.
ಬಳಪ ಒಂದು ಬಗೆಯ ಸ್ಲೇಟುಕಲ್ಲು; ಹಲಗೆ ಮೇಲೆ ಬರೆಯುವ ಕಲ್ಲು; ಒಂದು ಆಯುಧ

ಬಳಲ್ (ಬಳಲು), ಆಯಾಸಪಡು, ದಣಿ; ಜೋಲು.
— ಇಸು ಆಯಾಸಪಡಿಸು.
— ಕು (ಬಳಕು), ಅತ್ತಿತ್ತ ಮಾಲು, ಓಲಾಡು, ಹೊಂಗು.
ಬಳವಳ ಹೆಚ್ಚಾಗಿ.
ಬಳವಿ ಆಧಿಕ್ಯ; ಬೆಳೆಯುವಿಕೆ, ಬಳವಿಗೆ; ಹೆಚ್ಚುವಿಕೆ.
ಬಳಸು ಸುತ್ತು, ಸುತ್ತುಗಟ್ಟು; ಉಪಯೋಗಿಸು; ಬಡಿಸು; ಕವಚ; ಪಡೆ, ಹೊಂದು.
— ಆಡು ಸುತ್ತುಸುತ್ತಿ ಮಾತಾಡು.
ಬಳಹ (ಬಳಪ), ಬರೆಯುವುದಕ್ಕೆ ಉಪಯೋಗಿಸುವ ಒಂದು ಮಿದು ಕಲ್ಲು.
ಬಳಿ ಸವರು; ಲೇಪಿಸು; ಸೆಗಣಿಯಿಂದ ನೆಲ ಸವರಿ ಚೊಕ್ಕಮಾಡು, ಉಜ್ಜಿತೆಗೆ; ಬಾಗು, ಸುಳಿ; ಸಮೀಪ; ಸೋಂಕು ತೆಗೆಯುವ ಒಂದು ರೀತಿ; ಸೋಂಕು; ಕುಲ, ವಂಶ; ಸಮೀಪ, ಸನಿಯ; ಬದಿ; ದಾರಿ; ಬಟ್ಟೆ; ಕರೆ; ದೂತ.
— ಅಟ್ಟು ದೂತನನ್ನು ಕಳುಹು.
— ಪಿಡಿ ಹಿಂಬಾಲಿಸು, ಅನುಸರಿಸು; ಬೆನ್ನು ಹತ್ತು.
— ಬಿಡು ಹಾದಿಬಿಡು, ದಾರಿಬಿಡು.
ಬಳಿಕ ಆಮೇಲೆ, ತರುವಾಯ.
ಬಳಿಚು ಬಿಡು; ಉರುಳಿಸು; ಬಳಚು, ಸವರು.
ಬಳಿದೊತ್ತು ಪರಂಪರೆಯಿಂದ ಬಂದ ತೊತ್ತು.
ಬಳಿವಳಿ ಹತ್ತಿರಹತ್ತಿರ, ಸಮೀಪ; ಹಿಂದೆಹಿಂದೆ.
ಬಳಿಸಲು ಅನುಗಮನ; ಹಿಂದೆಹೋಗುವುದು; ಹಿಂಬಾಲಿಸು; ಆಶ್ರಯಿಸು, ಆಸರೆಹೊಂದು
ಬಳುಕು (ಬಳುಂಕು), ತೆವಳು; ಹೊಂಗು.
ಬಳುಗರೆ ನಾಯಿಗಳು ಗೋಳಿಡುವ ಬಗೆ.
ಬಳುವಳಿಹೆಣ್ಣು ಮಕ್ಕಳಿಗೆ ಕೊಡುವ ಉಚಿತ, ಮದುಮಗಳಿಗೆ ಅತ್ತೆಯ ಮನೆಗೆ ಹೋಗುವ ಕಾಲದಲ್ಲಿ ಕೊಡುವ ಗೃಹಕೃತ್ಯದ ಸಾಮಗ್ರಿಗಳು; ಉಂಬಳಿ.
ಬಳುವು (ಪಳುವು), ಭಾರ, ತೂಕ, ಒಜ್ಜೆ.
ಬಳುವೆ (ಬಳಬೆ), ದೊಡ್ಡ ರಾಶಿ, ಬಣಬೆ; ಭೀತರ ಸೋಂಕು ತೆಗೆಯುವ ಒಂದು ವಿಧಿ.
ಬಳೆ ಆಧಿಕವಾಗು, ಬೆಳೆ; ಕಂಕಣ, ಕೈಗೆ ತೊಡುವ ಆಭರಣ; ಉಪಯೋಗಿಸು; ಲೇಪಿಸು.
ಬಳ್ಕು (ಬಳುಕು), ಬಾಗು, ಅಲ್ಲಾಡು, ಹೊಂಗು
ಬಳ್ಕುಗೆಡೆ ಆರ್ಭಟಿಸು.
ಬಳ್ಕುಡಿ ಭೀತಿ.
ಬಳ್ಪಳ ಬಳ್ಪಳಿಕೆ, ಬೆಳವಣಿಗೆ; ಬೀಸಾಟ.
ಬಳ್ಳ ಎಂಟು ಕುಡುತೆ; ದ್ರವ್ಯದ ಒಂದು ಅಳತೆ, ಕಾಲು ಕೊಳಗ; ಎರಡು ಸೇರು; ೪ ಮಣ.
ಬಳಾಹಕ ಮೇಘ, ಮೋಡ; ಬಲಾಕ, ಒಂದು ಜಾತಿಯ ಕೊಕ್ಕರೆ, ಬಕ.
ಬಳ್ಳಾಳ (ಬಲ್ಲಾಳ), ನಾಯಕ, ಪಾಳೆಯಗಾರ; ಜೈನ ನಾಯಕರ ಒಂದು ಬಿರಿದು.
ಬಳ್ಳಿ (ದ್ಭ) ವಲ್ಲಿ (ಸಂ), ಬೀಳಲು, ಲತೆ; ಬಳಿ, ಕುಲ.
— ಕುರುಳ್ ಸುರಳಿಗೂದಲು, ಗುಂಗುರು ಕೂದಲು.
— ಬಳ್ಳಿ ಪರಂಪರೆ; ವಂಶವೃಕ್ಷ.
— ಮಾಡ(ದ್ಭ)ವಲ್ಲಿಮಾಟ(ಸಂ)ಲತೆಮನೆ
ಬಳ್ಳು ನರಿ.
ಬಂಕ (ಬಂಕು), ಮುರಿ, ಬಾವು, ಡೊಂಕು.
ಬಂಕೆ ಬೊಂಕೆ, ಗೋಂದು, ಅಂಟು.
ಬಂಗ (ದ್ಭ) ಭಂಗ (ಸಂ).
ಬಂಗಲೆ (ಬಂಗ್ಲೆ), ಮನೆ, ನಿವಾಸ.
ಬಂಗಾರ (ಭಂಗಾರ), ಭೃಂಗಾರ (ಸಂ), ಚಿನ್ನ, ಕನಕ, ಹೊನ್ನು.
ಬಂಗಾಳ ವಂಗ ದೇಶ.
ಬಂಗಾಳಿ ಬಂಗಾಳದವ, ಬಂಗಾಳದ ಮಾತು; ಠಕ್ಕು, ವಂಚನೆ, ಮೋಸ.

ಬಂಗಿ (ಭಂಗಿ), ತೋರಿಕೆ, ಸೋಗು; ಸಾಮ್ಯ; ಓರಣ; ಒಂದು ಅಮಲುದ್ರವ್ಯ.

ಬಂಗು ಒಂದು ಚರ್ಮವ್ಯಾಧಿ.

ಬಂಚ (ದ್ಭ) ವಂಶ (ಸಂ), ಕುಲ; ಬಿದಿರು; ಕೊಳಲು.

ಬಂಚರ ತಂಬೂರಿ; ಏಕತಾರಿ, ಕಿನ್ನರಿ.

ಬಂಚನೆ (ದ್ಭ) ವಂಚನೆ (ಸಂ), ಮೋಸ, ಕಪಟ.

ಬಂಚಿಸು ವಂಚಿಸು, ಮೋಸಮಾಡು; ಮರೆ ಮಾಡು.

ಬಂಜರು ಗೊಡ್ಡು; ಬೀಳುಜಾಗ, ಹಡಿಲು ಭೂಮಿ.

ಬಂಜೆ (ದ್ಭ) ವಂಧ್ಯಾ (ಸಂ), ಮಕ್ಕಳಾಗದವಳು.

ಬಂಟ ಕಿಂಕರ, ಸೇವಕ, ಚಾಕರ; ಭಟ (ಸಂ), ವೀರ; ಒಂದು ಜಾತಿ, ನಾಡವ.

—ಇಗೆ ಶೌರ್ಯ, ವೀರ್ಯ; ವೀರ, ಭಟ.

—ತನ ಶೌರ್ಯ, ಆಳ್ತನ; ದಾಸ್ಯ.

ಬಂಟುಗೆ (ಬಂಟತನ).

ಬಂಡ (ದ್ಭ) ಭಂಡ (ಸಂ), ದ್ರವ್ಯ, ವಸ್ತು; ಬೆಲೆ; ಬಾಲಹೋದ ಎತ್ತು; ನಾಚಿಕೆಗೇಡಿ ತನ; ಅಶ್ಲೀಲ.

—ವಲ (ಬಂಡವಾಳ), ಸಂಪತ್ತು, ದ್ರವ್ಯ; ಮೂಲಧನ, ಅಸಲು.

ಬಂಡಣ ಕಾಳಗ, ಕೊಳುಗುಳ.

ಬಂಡಲು ಕೆಸರು, ಗೋಡು, ರೊಜ್ಜು.

ಬಂಡಾಯ (ಬಂಡಾಯಿ), ಬಂಡು, ದಂಗೆ, ಜಗಳ, ಬಂಡು.

ಬಂಡಾರ (ಭಂಡಾರ), ಕೋಶ.

—ಇಸು ಭಂಡಾರದಲ್ಲಿ ಇರಿಸು, ಶೇಖರಿಸು; ಬೊಡ್ಡಾಗು; ಉಗ್ರಾಣದಲ್ಲಿ ಸೇರಿಸು.

ಬಂಡಿ ಗಾಡಿ, ಶಕಟ; ಚಕ್ರ, ಗಾಲಿ.

—ಬೋವ ಗಾಡಿ ಹೊಡೆವವ, ಸಾರಥಿ.

—ಮಾಳ ಗಾಡಿಗಳು ತಂಗುವ ಸ್ಥಳ.

ಬಂಡು ಮಕರಂದ, ಜೇನು, ಪುಷ್ಪರಸ; ಪರಾಗ; ಲಜ್ಜಾಸ್ಪದ ನಡತೆ; ಹೊಲಸು ಮಾತು; ದಂಗೆ, ಬಂಡಾಯ.

—ಇಸು ನಾಚಿಕೆ ಇಲ್ಲದೆ ವರ್ತಿಸು, ಹೇಯ ವಾಗಿ ನಡೆ.

—ಉಣಿ ಜೇನು ತಿನ್ನುವುದು, ತುಂಬಿ, ಭ್ರಮರ.

ಬಂಡೆ ಉಣ್ಣೆ, ಕುರಿಯ ರೋಮ; ಶಿಲೆ, ಅರೆ ಕಲ್ಲು; ಬಂಡ ಹೆಂಗುಸು.

ಬಂತಿ (ದ್ಭ) ಪಜ್ತಿ (ಸಂ), ಹಂತಿ, ಸಾಲು.

—ತಲೆಯ ಸಾಲಾಗಿ ತಲೆಯುಳ್ಳವ, ದಶಕಂಠ.

—ತೇರ (ಬಂತಿದೇರ), ಪಂಕ್ತಿರಥ, ದಶರಥ.

ಬಂತೆ (ಬೊಂತೆ), ಜಡೆ, ಸಿಕ್ಕು, ಜಿಡುಕಾದುದು; ದಪ್ಪಕ್ಕೆ ಹೊಲಿದು ಮಾಡಿದ ಮೆತ್ತೆ.

ಬಂದ ಸಮೀಪವಾದ; ಫಲಬಿಟ್ಟ; ಬಂಧ (ಸಂ).

—ಗಿ ನಿರ್ಬಂಧ, ದಾಸ್ಯ.

ಬಂದಣಿಕೆ (ಬದನಿಕೆ), ನೋಡು.

ಬಂದರು (ಬಂದರ), ರೇವು, ಹಡಗುಗಳು (ನೆಲಕ್ಕೆ ಸಮೀಪವಾಗಿ) ನಿಲ್ಲುವ ಸ್ಥಳ.

ಬಂದಿ (ಬಂಧಿ), ಬಂಧನಕ್ಕೊಳಗಾದವ; ಸೆರೆ; ತಡೆ; ತೋಳ್ಸರಿಗೆ, ಒಂಕಿ.

—ವಾನ ಸೆರೆಯಾದವ; ಕಳ್ಳ, ಪಟಿಂಗ.

ಬಂದು ನಿರ್ಬಂಧ; ಮುಗಿತ, ಕೊನೆಯಾಗು ವಿಕೆ; ಮುಚ್ಚುವಿಕೆ.

ಬಂದುಕ ಹೊಗಳುವಿಕೆಯಿಂದ ತನ್ನ ಜೀವನ ಸಾಗಿಸುವವ.

ಬಂದುಗೆ (ದ್ಭ) ಬಂಧೂಕ (ಸಂ), ಒಂದು ಹೂ; ಗುಲಾಬಿ.

ಬಂದೂಕು ಕೋವಿ, ತುಬಾಕಿ.

ಬಂದೋಬಸ್ತು ಕಾವಲು, ಭದ್ರತೆ; ವ್ಯವಸ್ಥೆ; ನಿರ್ಬಂಧ.

ಬಂಧ (ಬಂಧನ), ಕಟ್ಟು; ತಡೆ; ನಿರ್ಬಂಧ; ಸೇರಿಕೆ, ಕೂಡಿಕೆ; ರಚನೆ.

—ಇಸು ಕಟ್ಟಿಗೆ ಸಿಲುಕಿಸು; ಕಟ್ಟು, ಬಿಗಿ; ನೋವುಂಟುಮಾಡು.

—ಕ ರಚನೆ; ಹೊಂದಿಕೆ; ತಡೆ; ಮುರಿವವ; ಪಣ, ಒತ್ತೆ.

**ಬಂಧಗ್ರಂಥಿ** ಉರುಳು, ಪಾಶ.

**ಬಂಧನಾಲಯ** ಸೆರೆಮನೆ, ಜೈಲು.

**ಬಂಧು** ಸೋದರಮಾವ; ತಾಯಿತಂದೆ ಮೊದಲಾದವರು; ನಂಟರು, ಹತ್ತಿಗೆಯವ.

**ಬಂಧುಕ** ಬಂಧುಲ,ಹಾದರದಿಂದಹುಟ್ಟಿದವ.

**ಬಂಧುಕಿ** (ಬಂಧಕಿ), ವ್ಯಭಿಚಾರಿಣಿ.

**ಬಂಧುರ** ಸುಂದರ, ಚೆಂದ; ಅಲೆಅಲೆಯಾದ; ಬಾಗಿದ, ಚೆಲುವಾದ; ಡೊಂಕಾದ; ಗೋಮೇಧಿಕ; ಬಾತುಕೋಳಿ.

**ಬಂಧ್ಯ** ವಂಧ್ಯ; ಫಲವಿಲ್ಲದ ಮರ; ಮಕ್ಕಳಿಲ್ಲದ ಸ್ತ್ರೀ, ಬಂಜೆ.

**ಬಂಪು** ನಪ್ಪು, ಎಲೆ ಇಲ್ಲವೆ ತೊಗಟೆಯ ಪುಡಿ, ಜಿಡ್ಡು ತೆಗೆಯಲು ಉಪಯೋಗಿಸುವರು.

**ಬಂಬಲ್** (ಬಂಬಲು), ಸಮೂಹ, ತೊಂಗಲು.

**ಬಂಬಳ** ಆಯಾಸ,ದಣಿವು; ಸಂಕಟ, ವಿಪತ್ತು.

**ಬಂಬು** ಪಂಪು, ನೀರು ತಳ್ಳುವ ಯಂತ್ರ; ಗಳ, ಬಿದಿರು.

**ಬಂಭರ** ಭ್ರಮರ, ತುಂಬಿ.

**ಬಂಭಾರವ** ಕೋಲಾಹಲ,ಗದ್ದಲ;ಜೇಂಕಾರ.

**ಬಂಭ್ರಮತ್** ಸುತ್ತುತ್ತಿರುವ.

**ಬಾ** ಬರು; ಊದು, ಬೀಗು.

**ಬಾಕಿ** ಉಳಿತ, ಶಿಲ್ಕು; ಸಾಲ.

**ಬಾಕು** ದೊಡ್ಡ ಚೂರಿ.

**ಬಾಕುಡ** ಗಂಡ.

**ಬಾಕುಳ** ಅತ್ಯಾಶೆ, ಅತ್ಯಾಶೆಯುಳ್ಳವ; ಆಸೂಯೆವಂತ; ಬಯಸುವವ.

**ಬಾಗ್** ತೋಟ.

**ಬಾಗಾಯತಿ** (ಬಾಗಾಯತು), ತೋಟ, ತೋಟ ಸಂಬಂಧವಾದ.

**ಬಾಗಿ** ಬಾಗೆಮರ, ಶಿರೀಷ.

**ಬಾಗಿನ** (ದ್ಭ)ವಾಯನ(ಸಂ),ಉಚಿತ,ಕಾಣಿಕೆ

**ಬಾಗಿಲ್** (ಬಾಗಿಲು), ಬಾಕಿಲು, ಬಾಗಲು, ದ್ವಾರ, ಹೋಗುವ ದಾರಿ.

**ಬಾಗು** ಬಗ್ಗು, ವಕ್ರವಾಗು, ಡೊಂಕಾಗು; ವಂದಿಸು, ನಮಸ್ಕರಿಸು; ವಿಧೇಯನಾಗು; ಬಾಗಿದುದು.

—ಹ ಬಾಗುವಿಕೆ, ವಕ್ರತೆ.

**ಬಾಗುರಿ** ಭಾಗುರಿ, ಒಬ್ಬ ಕವಿ; ಒಬ್ಬ ಋಷಿ.

**ಬಾಗುಳ** ವ್ಯಾಕುಲ (ಸಂ), ಬಕುಳ ಬಾಗಿ ಹೂ; ವ್ಯಥೆ, ದುಃಖ.

**ಬಾಚಣಿಗೆ** ಕೂದಲು ಬಾಚುವ ಹಣಿಗೆ.

**ಬಾಚಿ** ಕವಚ, ರವಕೆ; ಮರ ಕೆತ್ತುವ ಸಾಧನ.

**ಬಾಚಿಸು** ವಾಚಿಸು, ಓದಿಸು.

**ಬಾಚು** ದೋಚು; ಹಿಡಿದುಕೊಳ್ಳು; ಸುಲಿ; ಕೆತ್ತು; ಹಣಿಗೆಯಿಂದ ಹೆರಳು ಹಾಕು.

**ಬಾಜಾ** ವಾದ್ಯ.

**ಬಾಜಾರ** (ಬಜಾರ), ಅಂಗಡಿಬೀದಿ; ಸಂತೆ.

**ಬಾಜಿಸು** ವಾದನಮಾಡು, ಬಾರಿಸು; ಧ್ವನಿ ಮಾಡು.

**ಬಾಜು** ಮಗ್ಗಲು, ಪಕ್ಕ, ಬದಿ; ಪಂಗಡ,ಪಕ್ಷ.

**ಬಾಜುಬಂದಿ** ತೋಳ್ಸರಿಗೆ, ಒಂಕಿ.

**ಬಾಡ** (ದ್ಭ) ವಾಟ (ಸಂ), ಊರು; ಸಾಲು; ಗ್ರಾಮ; ಬಹಳ, ಅತಿಶಯ.

**ಬಾಡಬ** ಕುದುರೆಗಳ ಗುಂಪು; ಕಡಲ್ಗಿಚ್ಚು; ಬ್ರಾಹ್ಮಣ.

**ಬಾಡಬಾಗ್ನಿ** ವಡಬಾಗ್ನಿ, ಕಡಲ್ಕಿಚ್ಚು.

**ಬಾಡವ್ಯ** ಬ್ರಾಹ್ಮಣರ ಗುಂಪು.

**ಬಾಡಿಗೆ** ಒಂದುಮನೆ ಇಲ್ಲವೆವಸ್ತುವನ್ನು ಪರರ ಉಪಯೋಗಕ್ಕೆಕೊಟ್ಟುದಕ್ಕೆಕೇಳುವಹಣ

**ಬಾಡಿಸು** ಸುಡು; ನಂಜಿಕೊ.

**ಬಾಡು** (ದ್ಭ), ಮಾಂಸ (ಸಂ); ಕಾಂತಿಹೀನವಾಗು, ಕಾಂತಿಗೆಡು.

ಬಾಣ ಬಲಿಯ ಮಗನು. ಇವನ ಮಗಳಾದ ಉಷೆಯು ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ವರಿಸಿದಳು. ಬಾಣನು ಈ ವಿವಾಹವನ್ನು ತಡೆಯಲು ಕೃಷ್ಣನೊಡನೆ ಕಾದಾಡಿ ಮಡಿದನು; ಶರ, ಸರಳು; ದನದ ಮೊಲೆ; ಕಾದಂಬರಿ, ಹರ್ಷ ಚರಿತೆಗಳನ್ನು ಬರೆದು ಹೆಸರಾದ ಸಂಸ್ಕೃತ ಕವಿ; ಬಿರುಸು ಮೊದಲಾದ ಬೆಂಕಿಯ ಚಮತ್ಕಾರಗಳು; ಬಾನು, ಆಕಾಶ.

—ಆಸನ ಬಾಣದ ಆಸನವಾಗಿ ಉಳ್ಳದು, ಬಿಲ್ಲು.

ಬಾಣತಿ (ಬಾಣಂತಿ).

ಬಾಣಧಿ ಬಾಣಗಳನ್ನು ಧರಿಸಿರುವುದು, ಬತ್ತಳಿಕೆ.

ಬಾಣಲೆ (ಬಾಣಾಲಿ), ಬಾಣಲಿಗೆ; ಎಣ್ಣೆ ಹಾಕಿ ಕರಿಯುವ ಪಾತ್ರೆ, ಕಡಾಯ.

ಬಾಣಸ (ದ್ಭ) ಮಹಾನಸ (ಸಂ), ಅಡುಗೆಯ ಮನೆ, ಅಡುಗೆ.

—ಇಗ ಅಡುಗೆಯವ.

ಬಾಣಂತಿ ಪ್ರಸೂತೆ, ಹೆರಿಗೆಯಾದವಳು, ಹಡೆದವಳು.

ಬಾಣಾಸುರ ಉಷೆಯ ತಂದೆ, ಒಬ್ಬ ರಕ್ಕಸ.

ಬಾಣಿ (ವಾಣಿ), ಸರಸ್ವತಿ; ನೀರಿನ ಪಾತ್ರೆ; ದೋಣಿಯ ಬದಿ; ನೀರು.

ಬಾತ ಹರಟೆ ಮಾತು; ಊದಿಕೊಂಡಿರುವ.

ಬಾತಮಿ ವರ್ತಮಾನ, ಸುದ್ದಿ.

ಬಾತು ಬಾತುಕೋಳಿ, ಒಂದು ಜಲಪಕ್ಷಿ.

ಬಾದಣ ಗವಾಕ್ಷ, ಕಿಟಕಿ.

ಬಾದರ ಹತ್ತಿಯಿಂದಾದುದು.

ಬಾದರಾಯಣ ಬದರಿಕಾಶ್ರಮದಲ್ಲಿ ಇದ್ದವ, ವೇದವ್ಯಾಸಮುನಿ.

ಬಾದರಾಯಣ ಸಂಬಂಧ ಬಲುದೂರದ ನಂಟು; ನಂಟಲ್ಲದ ನಂಟು.

ಬಾದಶಹ ಪಾಚ್ಛ, ಮುಸಲ್ಮಾನ ಸಮ್ರಾಟ, ಸುಲ್ತಾನ.

ಬಾದಾಮಿ ಬಾದಾಮು; ಪ್ರಾಚೀನ ವಾತಾಪಿಪುರ.

ಬಾದಿ ಸಹಾಯಕ, ದಾತ; ತೂಕ, ವಂಚನೆ.

ಬಾದು (ದ್ಭ) ವಾದ (ಸಂ), ಮಾತು.

ಬಾಧ್ಯ ಸಂಬಂಧಿಕ, ಬೇಕಾದವ; ಹಕ್ಕುದಾರ; ಹೊಣೆ.

—ತನ (ಬಾಧ್ಯತೆ), ಹಕ್ಕುದಾರಿಕೆ, ಹೊಣೆಗಾರಿಕೆ; ಅಧಿಕಾರ; ನಂಟುತನ.

ಬಾಧ (ಬಾಧೆ), ನೋವು, ಪೀಡೆ; ತೊಂದರೆ, ತಡೆ, ಉಪದ್ರವ; ಹಗೆ, ವೈರಿ; ಆವಶ್ಯಕತೆ.

—ಕ ತೊಂದರೆ, ಹಾನಿಕಾರಕ.

ಬಾಧ್ಯ ತೊಂದರೆಗೊಂಡ; ಉಪದ್ರವಕ್ಕೀಡಾದ, ಹೊಣೆಹೊತ್ತ, ಅಧಿಕಾರಕ್ಕೀಡಾದ

ಬಾನ್ (ಬಾನು), ಬಾಣ, ಆಕಾಶ; ಕುರುಳು ಬಾಣ, ಬೆರಣಿ.

—ಬಟ್ಟೆ ಆಕಾಶಮಾರ್ಗ.

—ಪಾವು ಆಕಾಶದ ಹಾವು, ರಾಹು.

ಬಾನಲ್ (ಬಾನಲು), ಮಾಸುವಿಕೆ, ಮಸುಕಾಗುವಿಕೆ.

ಬಾನವರು ದೇವತೆಗಳು.

ಬಾನಿ (ಬಾಣಿ), ಅಗಲಬಾಯ ಪಾತ್ರೆ.

ಬಾನುಲಿ ಅಶರೀರವಾಣಿ; ಆಕಾಶವಾಣಿ.

ಬಾನ್ನುಡಿ ಆಕಾಶವಾಣಿ, ಅಶರೀರವಾಣಿ.

ಬಾಪು ಬಾವು, ಬಾತುಕೊಂಡ ಭಾಗ, ಉಬ್ಬು; ಭಾಪು, ಶಹಭಾಸ್.

ಬಾಪುರಿ ತೋಳ್ಸರಿಗೆ, ಒಂಕಿ, ತೋಳ್ಬಂದಿ.

ಬಾಬತ್ (ಬಾಬತ್ತು), ಸಂಬಂಧಿಸಿದುದು; ವಿಷಯವಾದ, ದೆಸೆಯಿಂದ; ಸಲುವಾಗಿ.

ಬಾಬು ಬಾಬತ್ತು; ಪಾಪ, ಚಿಕ್ಕ ಕೂಸು.

ಬಾಮು (ದ್ಭ) ವಾಮು (ಸಂ), ಎಡಗಡೆ; ಸುಂದರ; ವಿನಯ; ಓರಣ; ಅಶುಭ.

ಬಾಮಿ (ಧ್ಭ) ವಾಪಿ (ಸಂ).

ಬಾಯ್ (ಬಾಯಿ), ಮುಖ, ವದನ; ತಿನ್ನುವ ಅವಯವ; ಬಾಗಿಲು, ದ್ವಾರ; ಧಾರೆ, ಸ್ತ್ರೀ; ಅತಿಯಾಗಿ ಮಾತಾಡುವುದು.

— ಪಾಟ ಕಂಠಪಾಠ, ಉರು.

— ಬಿಡು ಉಸುರು, ಸುದ್ದಿಹೇಳು, ರಹಸ್ಯ ಒಡೆ; ದೀನತೆ ತೋರು, ಕೂಗು.

— ಮಾಡು ಉದ್ಧತನಾಗಿ ಮಾತಾಡು.

ಬಾಯಳಿ ಬಾಯಿಸೊಲ್ಲು; ಬಾಯಿತೆರೆ.

ಬಾಯಿ (ಬಾಯ್) ಸ್ತ್ರೀಯರಿಗೆ ಗೌರವದಿಂದೆನ್ನುವ ಮಾತು; ಬಾಯ್; ಮುಖ.

— ತೆರೆ ತುಟತೆರೆ; ಬಾಯಿಂದಲೇ.

— ಬಡುಕ ಹರಟೆಮಲ್ಲ, ಮನಸ್ವೀ ಮಾತಾಡುವವ, ವಾಚಾಳಿ.

— ಬೀಗ ಮೌನ, ಮಾತಾಡದಿರುವುದು.

ಬಾಯಿನ (ಬಾಗಿನ).

ಬಾಯು ಉಬ್ಬು, ಊದು.

ಬಾರ್ (ಬಾರು), ಸುರಿ; ಚರ್ಮದ ಕೆಲಸ ಮಾಡು; ಸೋಸು, ಶೋಧಿಸು.

ಬಾರ ದ್ವಾರ; ಹದಿನೆರಡು; ಬಾರು.

ಬಾರದಾನೆ (ಭಾರವಣೆ), ಭಾರ; ಹೊರೆ; ಸಮತೂಕ ಮಾಡುವ ಸಾಧನ.

ಬಾರವಣೆ ಭಾರಣೆ, ಭಾರ; ಅಧಿಕ; ಪ್ರಾಮುಖ್ಯ, ಗೌರವ.

ಬಾರಿ ಭಾರಿ, ಅಧಿಕವಾದ; ಸರದಿ, ಸಲ; ಸೂಳು; ಏಟು; ಬಾರು, ತೊಗಲಿನ ಪಟ್ಟಿ.

ಬಾರಿಸು ಬಹಳ ಭಾರವಾಗು; ಅಧಿಕವಾಗು, ಹೆಚ್ಚಾಗು; ಭಾರವಾಗು; ಬಡೆ; ತಡೆ; ವಾದ್ಯಮಾಡು; ಪೆಟ್ಟುಕೊಡು.

ಬಾರು ಚರ್ಮ; ಶೋಧಿಸು; ಚರ್ಮದ ಪಟ್ಟಿ; ನಡುಗು; ಅಳತೆಯ ಮಾರು.

— ಕೋಲು ಚರ್ಮದ ಪಟ್ಟಿ, ಕಟ್ಟಿದ ಕೋಲು, ಚಾಟ; ಚಬುಕು.

ಬಾರ್ಚು (ಬಾಚು), ಒಟ್ಟಿಗೆ ಎಳೆದುಕೋ; ಹೊಡೆದು ಕೊಲ್ಲು.

ಬಾರ್ತೆ (ನೋಡು: ವಾರ್ತೆ), ಸುದ್ದಿ, ವಿಷಯ.

ಬಾರ್ಪು ಕಾಂತಿಹೀನತೆ, ಮಸಕುತನ.

ಬಾಲ ಶಿಶು, ಹುಡುಗ; ಎಳೆಯ; ಕರು, ಮರಿ; ಕೂದಲು; ಪ್ರಾಣಿಗಳ ಪುಚ್ಛ; ತೆಂಗಿನ ಕಾಯಿ; ಸೂರ್ಯ; ಹುಲ್ಲು.

— ಕ ಹುಡುಗ; ಮರಿ, ಕರು; ಪುಚ್ಛ; ಕೈಬಳೆ; ಕೂದಲು.

— ಧಿ ಕೂದಲುಳ್ಳುದು, ಬಾಲ.

— ಹಿಡಿ ಹಿಂಬಾಲಿಸು; ಅಟ್ಟು.

ಬಾಲಕೇತು ಧೂಮಕೇತು, ಬಾಲ ಚಿಕ್ಕೆ.

ಬಾಲಗ್ರಹ ಮಕ್ಕಳನ್ನು ಪೀಡಿಸುವ ಒಂದು ಪಿಶಾಚಿ, ಒಂದು ಬೇನೆ, ಗ್ರಹಣಿ ರೋಗ.

ಬಾಲಚಂದ್ರು ಎಳೆಯ ಚಂದ್ರ, ಕ್ಷೀಣಿಸುವ ಚಂದ್ರ.

ಬಾಲಬಂಡು ದೇವನಾಗರಿ ಲಿಪಿ.

ಬಾಲಬೋಧೆ ಮಕ್ಕಳ ಶಿಕ್ಷಣ; ನಾಗರಿಲಿಪಿ.

ಬಾಲಭಾಷೆ ತೊದಲ್ನುಡಿ, ಮಕ್ಕಳ ಮಾತು; ಪ್ರಾಕೃತ ಭಾಷೆ.

ಬಾಲಲೀಲೆ ಮಕ್ಕಳಾಟ, ಮಕ್ಕಳಾಟಿಕೆ.

ಬಾಲವ್ಯಜನ ಕೂದಲಿನ ಬೀಸಣಿಗೆ, ಚೌರಿ.

ಬಾಲಶಯ್ಯೆ ತೊಟ್ಟಲು.

ಬಾಲಸನ್ಯಾಸಿ ಚಿಕ್ಕಂದಿನಲ್ಲೇ ಸನ್ಯಾಸ ಪಡೆದವ.

ಬಾಲಾ (ಬಾಲೆ), ಬಾಲಿಕೆ, ಹದಿನಾರು ವರ್ಷ ಪ್ರಾಯದ ಕನ್ಯೆ, ಹುಡುಗಿ.

ಬಾಲಾರ್ಕ ಎಳೆಯ ಸೂರ್ಯ; ಈಗ ತಾನೆ ಮೂಡಿದ ಸೂರ್ಯ.

ಬಾಲಿಶ ಮೂರ್ಖ; ಕೂದಲುಳ್ಳುದು, ತಲೆ; ತಲೆದಿಂಬು; ಮಕ್ಕಳಾಟಿಕೆ; ಎಳಮೆ.

ಬಾಲೇಯ ಬಲಿಯ ಮಗ; ಬಾಣಾಸುರ; ಕತ್ತೆ.

ಬಾಲ್ಯ ಚಿಕ್ಕತನ, ಎಳೆತನ; ಮಕ್ಕಳಾಟಿಕೆ.
ಬಾವನ್ನ ಗಂಧ, ಸಿರಿಗಂಡ, ಶ್ರೀಗಂಧ.
ಬಾವನ್ನದಿಗುರು ಶ್ರೀಗಂಧ ಲೇಪನ.
ಬಾವಲಿ ಗಬ್ಬಿಲ, ತೊಗಲುಬಾವಲಿ; ಕಿವಿಗೆ ತೊಡುವ ಒಂದು ಆಭರಣ.
ಬಾವಳಿಸು ವ್ಯಾಕುಲಿಸು; ಕಳವಳಪಡು.
ಬಾವಿ ವಾಪಿ (ಸಂ), ಕೃತಕ ನೀರಿನ ಆಸರೆ.
ಬಾವು ಬಾಪು, ಮೈ ಉಬ್ಬು; ಕುರ; ಡೊಂಕು.
ಬಾವುಗ ಗಂಡು ಬೆಕ್ಕು.
ಬಾವುಟೆ ಕುಡಿ, ಪತಾಕೆ, ವಾಯುಪಟ(ಸಂ).
ಬಾಷ್ಕಳ ಹಿರಣ್ಯಕಶಿಪುವಿನ ಒಬ್ಬ ಮಗ.
— ಕೆಡೆ ಬಾಯಿಗೆ ಬಂದಂತೆ ಮಾತಾಡು.
ಬಾಷ್ಪ ಕಣ್ಣೀರು; ಉಷ್ಣ; ನೀರ ಉಗಿ.
ಬಾಸಣ(ದ್ಭ) ಭಾಷಣ (ಸಂ), ಮಾತು; ಉಪನ್ಯಾಸ.
ಬಾಸಣೆ (ಬಾಸಣಿಗೆ), ಬಚ್ಚಣೆ; ಮುಚ್ಚಳ.
ಬಾಸರ(ದ್ಭ) ವಾಶ್ರ(ಸಂ),ಸಂತೋಷದ ಸ್ವರ.
ಬಾಸಳು ಬಾಸಾಳು, ದಡಿಕೆ, ಊಬು.
ಬಾಸಂಗುಳಿಗೆ ಒಂದು ಬಗೆಯ ನಡಗೆ.
ಬಾಸಿಗ (ಬಾಸಿಂಗ), ತಲೆಯಲ್ಲಿ ಧರಿಸುವ ಹೂವಿನ ಮಾಲೆ; ಮದುವಣಿಗರ ತಲೆಯ ಅಲಂಕಾರ; ಮಾತುಗಾರ; ಹಾಸ್ಯಗಾರ.
ಬಾಸು ವಾಸನೆ, ನಾರುವಿಕೆ.
ಬಾಸುಗಿ (ದ್ಭ) ವಾಸುಕಿ (ಸಂ), ಒಬ್ಬ ಸರ್ಪ ರಾಜ.
ಬಾಸುಂಡೆ ಹಾಲು ಸಕ್ಕರೆಗಳಿಂದ ಮಾಡುವ ಒಂದು ಖಾದ್ಯ; ಬಾಸಳು; ದಡಿಕೆ.
ಬಾಸೆ ಹೆಂಗುಸರಿಗೆ ನಾಭಿಯಿಂದ ಎದೆಯ ತನಕ ಇರುವ ರೋಮಗಳ ಸಾಲು,ರೋಮ ರಾಜಿ; ಭಾಷೆ (ಸಂ); ಪಕ್ಕ್ಯಾಸು, ತೊಲೆ.
— ಗ ಬಾಸಿಗ; ಭಾಷಿಕ, ಮಾತುಗಾರ.
ಬಾಹತ್ತುರ ಎಪ್ಪತ್ತೆರಡು; ಅಧಿಕ; ಅನೇಕ.
ಬಾಹಪ್ಪಳಿಸು ಭುಜತಟ್ಟು, ಸಡ್ಡುಹೊಡೆ.

ಬಾಹಿರ ಹೊರಗಾದವ, ಬಹಿಷ್ಕೃತ.
ಬಾಹು ತೋಳು; ಸೂರ್ಯವಂಶದ ಸಗರ ರಾಜನ ತಂದೆ.
— ಜ ತೋಳಿಂದ ಹುಟ್ಟಿದವ, ಕ್ಷತ್ರಿಯ.
— ರಕ್ಷೆ ಬಾಹುರಿಕೆ, ತೋಳಿನ ರಕ್ಷಣೆ.
ಬಾಹುಕ ಕಾರ್ಕೋಟಕನಿಂದ ಕಡಿಸಿಕೊಂಡ ನಳನು ಋತುಪರ್ಣನ ಆಳಾಗಿ ಸೇರಿದಾಗ ಇರಿಸಿಕೊಂಡ ಹೆಸರು.
ಬಾಹುದೆ ಹಿಮಾಲಯದಿಂದ ಹರಿದು ಬರುವ ಒಂದು ನದಿ.
ಬಾಹುಮೂಲ ತೋಳಿನ ಬುಡ, ಕಂಕುಳು.
ಬಾಹುಯುದ್ಧ ತೋಳಿನಿಂದಾಡುವ ಯುದ್ಧ, ಮಲ್ಲಯುದ್ಧ.
ಬಾಹುರ ಬಾಹುಪೂರ, ತೋಳ್ಸರಿಗೆ, ಒಂಕಿ.
ಬಾಹುರಕ್ಕೆ (ಬಾಹುರಕ್ಷೆ), ತೋಳನ್ನು ರಕ್ಷಿಸುವ ಒಂದು ವಸ್ತು; ಭುಜಪತ್ರ.
ಬಾಹುಲ ಅಗ್ನಿ; ಕಾರ್ತಿಕಮಾಸದ ಹುಣ್ಣಿಮೆ; ಕಾರ್ತಿಕಮಾಸ.
ಬಾಹುಲೇಯ ಕೃತ್ತಿಕೆಯ ಮಗ, ಕಾರ್ತಿಕೇಯ; ಶಿವನ ಹಿರಿಯ ಮಗ ಷಣ್ಮುಖ.
ಬಾಹುಲ್ಯ ಬಹಳವಾಗಿರುವಿಕೆ, ಅತಿಶಯ, ಹೆಚ್ಚುಗೆ.
ಬಾಹ್ಯ ಬಾಹೆ, ಹೊರಗೆ; ಪಟ್ಟಣದ ಹೊರಗಡೆ.
— ಮತಿ ಹೊರಗಿನ ವಸ್ತುಗಳಿಗೆ ಮನಸ್ಸು ಕೊಡುವ, ಬಹಿರ್ಮುಖ.
ಬಾಹ್ಲಿಕ (ಬಾಹ್ಲೀಕ), ಚಂದ್ರವಂಶದ ಪ್ರತೀಪನ ಮಗ. ಇವನೊಬ್ಬ ಅಧಿರಥ. ಇವನನ್ನು ಭೀಮನು ಕೊಂದನು; ಪಂಜಾಬಿನ ಬಳಿ ದೇಶ; ಅಲ್ಲಿನ ಕುದುರೆ; ಹಿಂಗು.
ಬಾಳ್ (ಬಾಳು), ಬದುಕು, ಜೀವಿಸು; ಕತ್ತರಿಸು; ಜೀವ, ಜೀವನ; ಕತ್ತಿ; ಕ್ಷೌರಕತ್ತಿ.
— ಮೊದಲ್ ಕತ್ತಿಯ ಹಿಡಿ; ಹುಟ್ಟು.
— ವೆ (ಬಾಳುವೆ) ಬದುಕು, ಜೀವನ, ಬಾಳು.

ಬಾಳ (ದ್ಭ) ಬಾಲ(ಸಂ), ಹುಡುಗ, ಬಾಳದ ಬೇರು, ಲಾವಂಚ, ಲಾಮಚ.

ಬಾಳಗೊಲೆಯು ಮಕ್ಕಳನ್ನು ಕೊಲ್ಲುವವ; ಕ್ರೂರ; ನಿಷ್ಕರುಣಿ.

ಬಾಳಬಂದು ದೇವನಾಗರಿ ಬರಹ.

ಬಾಳವಂದ ಮಕ್ಕಳು ತೊಡುವ ಒಂದು ಆಭರಣ.

ಬಾಳಿಕೆ (ಬಾಳ್ಕೆ), ಜೀವನ; ದೀರ್ಘಕಾಲ ತಾಳುವಿಕೆ; ಬಾಳುವುದು; ಬಾಳ್ತೆ.

ಬಾಳುಕ (ಬಾಳುಡಿ) ಕತ್ತರಿಸಿ ಉಪ್ಪುಕಾರ ಹಾಕಿ ಕರಿಯುವ ಒಂದು ತಿಂಡಿ.

ಬಾಳೆ ಕದಳಿ; ಮೀನು.

ಬಾಳ್ತೆ (ಬಾಳ್ವೆ) ಬಾಳುವಿಕೆ.

—ಗೈಯ್ ಲಕ್ಷ್ಯಮಾಡು.

ಬಾಳ್ದಲೆ ಕಡಿದ ತಲೆ.

—ಪಿಡಿ ಜೀವಂತ ಸೆರೆಹಿಡಿ.

ಬಾಳ್ವಾಸೆ ದಂದ್ವ, ಖಡ್ಗಯುದ್ಧ.

ಬಾಂಕು ಬಾಂಕಿ; ಒಂದು ವಿಧದ ಕಹಳೆ, ಬಿಗಿಲು; ಬೆಂಚು, ಬಾಕು.

ಬಾಂಗಿ ಕಾವಡಿಕೋಲು; 'ಪಾರ್ಸೆಲು', ಸಣ್ಣ ಕಟ್ಟು.

ಬಾಂಗೆರೆ ಆಕಾಶಗಂಗೆ.

ಬಾಂದಳ ಆಕಾಶ, ಗಗನ.

ಬಾಂದಿ ದಾಸಿ, ಬಂಧಿಕೆ; ವ್ಯಭಿಚಾರಿಣಿ.

ಬಾಂದು ಗಡಿಯ ಗುರುತು; ರಾಶಿ; ಕಟ್ಟೆ; ಒಡ್ಡು, ಒಂಡಿ.

ಬಾಂದೊರೆ ಆಕಾಶದ ಹೊಳೆ, ಆಕಾಶಗಂಗೆ.

ಬಾಂಧವ ಬಂಧು, ಸಂಬಂಧಿಕ, ನಂಟ.

ಬಾಂಬ ಕುಂಬಾರ, ಕುಲಾಲ; ಕುರುಬ.

ಬಾಂಬಟ್ಟೆ ಆಕಾಶಮಾರ್ಗ.

ಬಾಂಬಾವು ಆಕಾಶದ ಹಾವು, ರಾಹು.

ಬಾಂಬು ಸಿಡಿಗುಂಡು; ಚೀಲದಿಂದ ಕಾಳುಗಳನ್ನು ಮಾದರಿಗಾಗಿ ತೆಗೆವ ಸಾಧನ.

ಬಾಂಬೊಳೆ ಬಾನಿನ ಹೊಳೆ, ಆಕಾಶಗಂಗೆ, ದುಗ್ಧಪಥ.

ಬಿಕರಿ (ದ್ಭ) ವಿಕ್ರಯ (ಸಂ), ಮಾರಾಟ.

ಬಿಕಾರಿ (ಭಿಕಾರಿ), ಬೇಡುವವ, ತಿರುಪೆಯುವ; ನಿರ್ಗತಿಕ; ತಿರುಕ.

ಬಿಕ್ಕನೆ ಒಡೆಯುವಾಗ ಹುಟ್ಟುವ ಶಬ್ದದೊಡನೆ; ಶಬ್ದಸಹಿತ ಒಡೆ.

ಬಿಕ್ಕಲು (ಬಿಕ್ಕಳಿಕೆ), ಏಗುವಿಕೆ, ಬಿಕ್ಕುಳಿಕೆ; ತೊದಲು, ಕೊಡಲು, ಉಗ್ಗುವಿಕೆ.

ಬಿಕ್ಕು ಎದೆ; ಮಾಂಸ; ಭಿಕ್ಷು, ಬುದ್ಧ ವಟು; ಚೆಲ್ಲು; ಏಗುತ್ತಅಳು; ಏಗು; ವಾಂತಿಮಾಡು

ಬಿಕ್ಕೆ (ದ್ಭ) ಭಿಕ್ಷಾ (ಸಂ), ತಿರುಪೆ.

ಬಿಗಡಾಯಿಸು ವಿಂಗಡವಾಗು; ಒಡೆ; ಕೆಡು; ಬಿಗಿಯಾಗು, ಸೆಡು.

ಬಿಗಿ ಕಟ್ಟು, ಬಿಮ್ಮಗೆ ಹಿಡಿ, ಗಟ್ಟಿಮಾಡು; ಜಟಿಲ; ನಡುಪಟ್ಟಿ; ಹೆಮ್ಮೆ; ಠೀವಿ.

—ತ ಬಿಗುಹು, ಬಿಗುವು, ಕಟ್ಟು; ನಿರ್ಬಂಧ.

ಬಿಗು ಬಿಗಿಯಾದುದು; ತೀರ ಎಳೆದುದು.

ಬಿಗುರ್ ಭಯಪಡು, ಭೀತಿ.

—ವಣೆ ಭಯ, ಭೀತಿ.

ಬಿಚಾನ (ಬಿಚಾನೆ), ಹಾಸಿಗೆ, ಚಾಪೆ.

ಬಿಚ್ಚ (ದ್ಭ) ಭಿಕ್ಷೆ (ಸಂ).

—ಟೆ (ದ್ಭ) ಭಿಕ್ಷಾಟನ (ಸಂ), ಬೇಡುವಿಕೆ, ತಿರಿವಿರಿ.

ಬಿಚ್ಚತ (ದ್ಭ) ವಿಸ್ತೃತ (ಸಂ), ತೆರೆದುದು; ವಿಸ್ತರಿಸಿದುದು; ನೀಡಿದುದು; ವಿಶಾಲಿಸಿದುದು.

ಬಿಚ್ಚಟ ಬಿಚ್ಚಳ, (ದ್ಭ) ವಿಸ್ತೃತ (ಸಂ), ಹರಡಿದ, ವಿಶಾಲವಾದ.

ಬಿಚ್ಚು (ಬಿಚ್ಚು); ಬಿಡಿಸು; ತೆರೆ; ಕಳಚು; ವಿಸ್ತರಿಸು, ದೊಡ್ಡದಾಗು; ವಿಂಗಡಿಸು.

—ಕತ್ತಿ ತೆರೆಬಾಯ ಕತ್ತಿ, ಕುಡುಗೋಲು.

ಬಿಚ್ಚೆ (ಬಿಜ್ಜೆ), ಬಂಜೆ, ಗೊಡ್ಡಿ; ಭಿಕ್ಷೆ (ಸಂ).

ಬಿಜ (ಬಿಜಯ), ಗೆಲು, ಗೆದ್ದುಬರು.

—ಮಾಡು ಬಿಜಯಿಸು, ದಯಮಾಡು.
ಬಿಜಯ (ದ್ಭ) ವಿಜಯ (ಸಂ), ಗೆಲುವಿಕೆ, ಯಶಸ್ಸು.
ಬಿಜಯಂಗೆಯ್ ದಯಮಾಡಿ ಬರು; ಹೊರಟು ಹೋಗು; ಕರೆತರು.
ಬಿಜರು ಉಬ್ಬು, ನೀರಲ್ಲಿ ನೆನೆದು ದೊಡ್ಡ ದಾಗು; ಸೊಕ್ಕು.
ಬಿಜಾಗರಿ ಎರಡು ವಸ್ತುಗಳ ಸಂದು; ಚಲಿಸುವ ಜೋಡಣೆ; ಮರಡು.
ಬಿಜ್ಜ (ದ್ಭ) ವಿದ್ಯಾ (ಸಂ); ಇಂದ್ರ.
ಬಿಜ್ಜಣಿಗೆ ಬೀಸಣಿಗೆ.
ಬಿಜ್ಜಲ ಕಣೆ, ಎಸೆಯುವ ದೊಡ್ಡ ಅಂಬು.
ಬಿಜ್ಜು ಬಹಳ ತಿನ್ನುವ ಒಂದು ಹಕ್ಕಿ; ಹಾಳು.
ಬಿಜ್ಜೆ (ದ್ಭ) ವಿದ್ಯಾ (ಸಂ), ವಿದ್ಯೆ; ವಿನಯ, ಹಿರಿಮೆ.
—ವಳ ವಿದ್ಯಾವಂತ, ವಿದ್ವಾಂಸ; ವಿದ್ಯಾ ಬಲ.
ಬಿಜ್ಜೋದರ (ದ್ಭ) ವಿದ್ಯಾಧರ (ಸಂ), ದೇವತೆ.
ಬಿಟ್ಟಳ ದೊಡ್ಡ.
ಬಿಟ್ಟಿ ಪ್ರತಿಫಲ ದೊರೆಯದ ಕೆಲಸ, ಬೇಗಾರು; ಮನಸ್ಸಿಲ್ಲದೆ ಮಾಡಿದ ಕೆಲಸ; ಧರ್ಮಕ್ಕೆ ಸಿಕ್ಕಿದುದು; ಪುಕ್ಕಟೆ.
ಬಿಟ್ಟಿಕಲ್ಕು ನುಗ್ಗಿಸಿ ಹೊಡೆ.
ಬಿಟ್ಟಿರ್ ಬೀಡು ಬಿಡು, ತಂಗು, ಪಾಳೆಯ ಹಾಕು.
ಬಿಟ್ಟೆ ಒರಟುತನ.
ಬಿಟ್ಟೇರು ಉದ್ದವಾದ ಬರ್ಚಿ, ಈಟಿ; ಎಸೆಯುವ ಕಣೆ.
ಬಿಡಬೀಸು ಉದ್ದವಾಗಿ ಬೀಸು.
ಬಿಡಯ ಗುಂಪು, ಸಮೂಹ; ಭಿಡೆ, ದಾಕ್ಷಿಣ್ಯ, ಸಂಕೋಚ; ನಯ; ನಿಟ್ಟು.
ಬಿಡಾರ (ಬೀಡಾರ), ತಾತ್ಕಾಲಿಕ ನಿವಾಸ.
ಬಿಡಾಲ ಬೆಕ್ಕು.
ಬಿಡಿ (ಬಿಡು), ಪ್ರತ್ಯೇಕವಾದ; ಒಂಟಿಯಾದ.
—ಕು ಬೇರಾದುದು, ಬಿಟ್ಟುದು; ಒಡೆದಾದುದು.
—ಕೆ ವಿರಾಮ, ಬಿಡುವು, ತೆರಪು.
ಬಿಡಿಬಿಸರ ಅಲಕ್ಷ್ಯ, ಉಪೇಕ್ಷೆ.
ಬಿಡು ಬಿಚ್ಚು; ತ್ಯಜಿಸು; ತೆರೆ; ಬೆಳೆಯಗೊಡು; ಸರಿಯಗೊಡು; ವ್ಯವಧಾನ, ವಿರಾಮ, ಬೀಡು; ಒಂಟಿಯಾದ, ಬೇರೆಯಾದ.
—ಕಣ್ಣ ತೆರೆಗಣ್ಣವ, ದೇವತೆ.
—ತೆ ಬಿಡುಗಡೆ; ಬಿಡಿಯಾಗಿರುವಿಕೆ.
ಬಿಡುಗಣ್ಣು ತೆರೆದ ಕಣ್ಣು.
ಬಿಡುಮುಡಿ ಕೆದರಿದ ಮುಡಿ, ಬಿಚ್ಚಿದ ಮುಡಿ.
ಬಿಡೆ ವಿಶೇಷವಾಗಿ, ಬಲವಾಗಿ.
ಬಿಡೆನೋಡು ವಿಶೇಷವಾಗಿ ನೋಡು, ದೃಷ್ಟಿಯಿಟ್ಟು ನೋಡು.
ಬಿಡೆಯ ಬಿಡುವುದು; ಮುಂದೆ ನಡಸುವುದು.
ಬಿಡೌಜ ನಾಲ್ಕು ಕಡೆಗೂ ಹರಡುವ ಕಾಂತಿಯುಳ್ಳವ, ಇಂದ್ರ.
ಬಿಣ್ ದೊಡ್ಡ, ಗಡುತರ; ಭಾರ.
ಬಿಣಿತೆ ಬಲ, ಅತಿ ಶಕ್ತಿ; ಪ್ರಾಬಲ್ಯ.
ಬಿಣ್ಣಿತು ಭಾರವಾದುದು; ದೊಡ್ಡಿತು, ಬಲವಾದುದು.
ಬಿಣ್ಪು (ಬಿಣ್ಪು), ಭಾರ; ಗೌರವ; ಗಡುತರ.
ಬಿತ್ತ ಬಿತ್ತು; ಬೀಜ.
ಬಿತ್ತನೆ (ಬಿತ್ತಿಗೆ), ಬೀಜ ಬಿತ್ತುವಿಕೆ.
ಬಿತ್ತರ (ದ್ಭ) ವಿಸ್ತಾರ (ಸಂ), ವಿವರ.
—ಇಸು ವಿಸ್ತರಿಸು, ವಿವರವಾಗಿ ಹೇಳು.
ಬಿತ್ತರಿಗೆ (ದ್ಭ) ವಿಷ್ಟರಕ (ಸಂ), ಸಿಂಹಾಸನ.
ಬಿತ್ತಿ (ಭಿತ್ತಿ), ಗೋಡೆ; ಪುಸ್ತಕ.
ಬಿತ್ತಿಗ ಪ್ರೌಢ, ಬುದ್ಧಿವಂತ.
ಬಿತ್ತು ಬೀಜ; ಬೀಜ ಹಾಕು, ನಡು.
ಬಿತ್ತೆವಿತ್ ವಿದ್ಯೆ, ತಿಳುವಳಿಕೆ.
—ಗ (ಬಿಜ್ಜೆಗ) ವಿದ್ಯಾವಂತ, ಬಲ್ಲಿದ.

ಬಿದಿ (ದ್ಭ) ವಿಧಿ (ಸಂ), ಬ್ರಹ್ಮ; ಅದೃಷ್ಟ, ಭಾಗ್ಯ.
— ಗ ವಿಧಿಯುಕ್ತವಾಗಿ ವರ್ತಿಸುವವ.

ಬಿದಿಗೆ ಪಕ್ಷದ ಎರಡನೆಯ ದಿನ.

ಬಿದಿರ್ (ಬಿದಿರು), ವಂಶ; ವೇಣು, ಬಿದುರು; ಅಲ್ಲಾಡಿಸು, ಅಗಲವಾಗಿ ಎರಚು; ಹರಡು, ವಿಸ್ತರಿಸು; ಕಳಚು; ಒಡೆ.
— ಚು ಎರಚು; ಹರಡು, ಬಿಡಿಸು.

ಬಿದು (ದ್ಭ) ವಿಧು (ಸಂ), ಚಂದ್ರ.

ಬಿದುಗಲ್ ಚಂದ್ರಕಾಂತ ಶಿಲೆ.

ಬಿದುರ್ (ಬಿದುರು), ನಡುಗು; ಹಾರು; ಕಟ್ಟು ಸಡಲಿಸು, ಜಾಡಿಸು; ಒದೆ; ಓಟೆ, ಗಳ, ಬಂಬು.

ಬಿದ್ದಣ (ಬಿದ್ದು) ಔತಣ, ಔತಣದ ಕರೆ; ಬಿದ್ದನ, ಔತಣಕ್ಕೆ ಕರೆಯಲ್ಪಟ್ಟವ.

ಬಿದ್ದಿನ ಬೀಗ; ಆಗಂತುಕ, ಅತಿಥಿ; ಔತಣ, ಊಟಕ್ಕೆ ಆಮಂತ್ರಣ, ಕರೆ.
— ಅವ ಔತಣಕ್ಕೆ ತಕ್ಕವ, ನಂಟ, ಬಂಧು.

ಬಿನದ (ದ್ಭ) ವಿನೋದ (ಸಂ), ಲೀಲೆ, ಆಟ.
— ಇಸು ವಿನೋದಿಸು, ಆಟವಾಡು.

ಬಿನುಗು ಕೀಳು; ಪಾಮರ, ನೀಚ, ಅಲ್ಪ.

ಬಿನ್ನಗೆ (ಬಿನ್ನನೆ), ಮೆಲ್ಲಗೆ, ಸುಮ್ಮಗೆ.

ಬಿನ್ನಣಿ (ದ್ಭ) ವಿಜ್ಞಾನಿ (ಸಂ), ವಿದ್ಯಾವಂತ, ಕೋವಿದ, ಪಂಡಿತ.

ಬಿನ್ನಣೆ (ದ್ಭ) ವಿಜ್ಞಾನ (ಸಂ), ತಿಳಿವಳಿಕೆ; ಚಮತ್ಕಾರ, ಪ್ರೌಢಿಮೆ.

ಬಿನ್ನಪ (ಬಿನ್ನಹ), ಮನವಿ, ವಿನಂತಿ, ಹೇಳಿ ಕೊಳ್ಳುವುದು, ವಿನಯದಿಂದ ತಿಳಿಸುವುದು.

ಬಿನ್ನಯಿಸು ಬಿನ್ನವಿಸು, ವಿಜ್ಞಾಪಿಸು, ಅರಿಕೆ ಮಾಡಿಕೊಳ್ಳು.

ಬಿನ್ನವತ್ತಳೆ ಮನವರಿಕೆ, ವಿಜ್ಞಾಪನೆ ಪತ್ರಿಕೆ.

ಬಿನ್ನಾಣ (ಬಿನ್ನಣೆ), ಮನೋಹರ; ಚಮತ್ಕೃತಿ
— ಗಾತಿ ಬಿನ್ನಾಣಿ, ವಿಲಾಸವತಿ, ಮನೋಹರೆ, ಚತುರೆ.

ಬಿಬ್ಬೋಕ ಪ್ರೀತಿಯ ವಸ್ತುವಿನ ಮೇಲೆ ಅನಾದರ; ಹುಸಿಕೋಪ.

ಬಿಮ್ಮಗೆ ಹತ್ತ, ಬಿಗಿಯಾಗಿ; ದೃಢವಾಗಿ; ಗಟ್ಟಿಯಾಗಿ, ಜೋರಾಗಿ.

ಬಿಮ್ಮನಿಸಿ ಗರ್ಭಿಣಿ.

ಬಿಮ್ಮು ಗಂಭೀರತೆ, ಗಾಂಭೀರ್ಯ; ದೊಡ್ಡತನ.

ಬಿಯ (ದ್ಭ) ವ್ಯಯ (ಸಂ), ಖರ್ಚು, ವೆಚ್ಚ.

ಬಿಯದ (ದ್ಭ) ವ್ಯಾಧ (ಸಂ), ಬೇಡ.

ಬಿಯದಿ (ದ್ಭ) ವ್ಯಾಧಿ (ಸಂ), ಬೇನೆ.

ಬಿಯ್ಯ (ವ್ಯಯ).

ಬಿಯ್ಯಗ ಬೀಗ, ನೆಂಟ; ಬಾಗಿಲಿಗೆ ಹಾಕುವ ಬೀಗಮುದ್ರೆ.

ಬಿರಡೆ (ಬಿರಟೆ) ಕೀಲಿ, ಕೀಲು; ವೀಣೆಯ ತಂತಿ ಬಿಗಿಯುವ ಕೀಲಿ; ಅಂಗಿ ಗುಂಡಿ.

ಬಿರನೆ ವೇಗವಾಗಿ, ಪಕ್ಕನೆ.

ಬಿರಯಿ (ದ್ಭ) ವಿರಹಿ (ಸಂ), ಸಂಸಾರವನ್ನು ಅಗಲಿರುವವ.

ಬಿರಾಣ (ದ್ಭ) ಬ್ರಾಹ್ಮಣ (ಸಂ).

ಬಿರಿ ಅರಳು; ತೆರೆ; ಒಡೆ; ಗಾಡಿಯ ವೇಗವನ್ನು ತಡೆಯುವ ತಡೆ, ತರೆ.

ಬಿರಿದು (ದ್ಭ) ವಿರುದ (ಸಂ), ಹೊಗಳಿಕೆ.

ಬಿರುಕು (ಬಿರಿಕು), ಒಡಕು, ಬಿರಿದುದು.

ಬಿರುಗಾಣ್ಕೆ ಕ್ರೂರ ನೋಟ.

ಬಿರುಗೋಲು ಕ್ರೂರ ಬಾಣ, ಕಠಿಣವಾದ ಅಂಬು.

ಬಿರುದನಿ ಬಿರುಸಾದ ಸ್ವರ.

ಬಿರುದು (ಬಿರದು, ಬಿರಿದು), ಕೀರ್ತಿ, ಸ್ತುತಿ; ಗೌರವದಿಂದ ಕೊಡುವ ಹೆಸರು; ಕಚ್ಚಳಿ, ಕೀರ್ತಿಗಾಗಿ ಧರಿಸುವ ಬಳೆ; ಭಯಪಟ್ಟು.
— ಆವಳಿ ಬಿರುದುಗಳು.

ಬಿರುಬು ಕಾಠಿಣ್ಯ, ಪ್ರಾಬಲ್ಯ; ದುಃಖ; ಬಲ; ಆವೇಶ.

ಬಿರುವರಿ ತ್ವರೆಯಾಗಿ ಹರಿ.
ಬಿರುಸು(ಬಿರಿಸು),ಬಿಟ್ಟತು; ಕಠಿಣವಾದುದು, ಗಟ್ಟಿಯಾದುದು.
ಬಿರುವಳೆ(ಬಿರುಮಳೆ), ಜಡಿಮಳೆ, ಬಿರುಸಾದ ಮಳೆ, ಅಡ್ಡಮಳೆ.
ಬಿರುವೊಯ್ಲು ಕಠಿಣವಾದ ಪೆಟ್ಟು, ಬಲವಾದ ಪೆಟ್ಟು.
ಬಿರುಸರ ಬಿರುಸು ಧ್ವನಿ.
ಬಿರ್ಚು(ಬಿಚ್ಚು), ತೆರೆ, ಬಿಡಿಸು; ತುಂಡರಿಸು.
ಬಿರ್ದಣ (ಬಿದ್ದಣ).
ಬಿರ್ದಿನ (ಬಿದ್ದಿನ), ಅತಿಥಿ.
ಬಿರ್ದು ಔತಣ; ಶಬ್ದಸಾರ.
ಬಿಲ್ ಬಿಲ್ಲು; ಮಾರು; ಕೊಳ್ಳು; ಕ್ರಯ, ವಿಕ್ರಯ.
—ತಿರುವು (ಬಿಲುದಿರುವು); ಬಿಲ್ಲಿನ ಹಗ್ಗ, ಹೆದೆ.
ಬಿಲ ಹೋರು;ತೂತು,ಕುಣಿ; ಕಂಡಿ; ಬಿರುಕು.
ಬಿಲಾರ ಬಿಲ್ಲುವಿದ್ಯೆ; ಬಿಲ್ವದ ಮರ.
ಬಿಲಿ ಬಿಲಿಂಬಿ, ಒಂದು ಮರ.
ಬಿಲೇಶಯ ಬಿಲದಲ್ಲಿ ಮಲಗಿರುವುದು, ಸರ್ಪ; ಇಲಿ; ಮೊಲ.
ಬಿಲ್ಪತ್ರೆ ಬಿಲ್ವಪತ್ರೆ, ಒಂದು ಮರ,ಅದರ ಎಲೆ.
ಬಿಲ್ಲಂತರ ಬಿಲ್ಲಿನಷ್ಟು ದೂರ, ಮಾರುದೂರ.
ಬಿಲ್ಲಾಳು (ಬಿಲ್ಲಣಿ), ಧನುರ್ಧಾರಿ, ಬಿಲ್ಲು ಹಿಡಿದವ.
ಬಿಲ್ಲಿ ಹುಬ್ಬು, ಭ್ರೂ.
ಬಿಲ್ಲು ಬಿಲ್, ಧನು, ಚಾಪ.
ಬಿಲ್ಲುಂಬೆರಗು ಅತ್ಯಾಶ್ಚರ್ಯ.
ಬಿಲ್ಲೆ ಚಪ್ಪಟೆಯಾಗಿರುವ ಚೂರು; $\frac{1}{4}$ ಆಣೆ ನಾಣ್ಯ.
— ಅವ ಪೋಲೀಸು.
ಬಿಲ್ಲೊವಜ(ಬಿಲ್ಲೋಜ), ಬಿಲ್ಲುವಿದ್ಯೆ ಗುರು.
ಬಿಲ್ವ ಬಿಲ್ಪತ್ರೆ, ಅದರ ಮರ; ಬೆಲ್ಲವತ್ತ.
ಬಿಸ (ದ್ಭ) ವಿಷ, ನಂಜು (ಸಂ); ನೀರು,
—ಕೊರಳ ವಿಷಕಂಠ,ಕುತ್ತಿಗೆಯಲ್ಲಿ ವಿಷವುಳ್ಳವ, ಶಿವ.
ಬಿಸಕಂಠ ಕೊಕ್ಕರೆ, ಬಲಾಕ, ಬೆಳ್ಳಕ್ಕಿ; ಶಿವ.
ಬಿಸವಳ (ಬಿಸುದಳ), ವಿಸ್ಮಯ, ಆಶ್ಚರ್ಯ.
ಬಿಸವಂದ(ದ್ಭ) ವಿಸ್ಮಾಪನ(ಸಂ), ಆಶ್ಚರ್ಯ, ವಿಸ್ಮಯ.
ಬಿಸಸನ ವಿಶಸನ(ಸಂ),ಕೊಲ್ಲುವುದು,ಕೊಲೆ; ನೋವು, ಸಂಕಷ್ಟ.
ಬಿಸಾಡು ಬಿಸುಡು, ಎಸೆ.
ಬಿಸಿ ಕಾವೇರಿದುದು, ತಾಪಗೊಂಡುದು; ಸಿಟ್ಟೇರಿದುದು; ಕಾವು, ಸೆಕೆ, ಉಷ್ಣ.
ಬಿಸಿಲ್ (ಬಿಸಿಲು) ಸೂರ್ಯನ ಜಳ.
—ಕುದುರೆ ಮರೀಚಿಕೆ, ಮೃಗಜಲ.
—ತೊರೆ ಮರೀಚಿಕೆ, ಬಿಸಿಲಲ್ಲಿ ಕಾಣುವ ಹೊಳೆ, ಗಾಳಿಕುದುರೆ.
ಬಿಸಿಲಕ್ಕಿ ಚಕ್ರವಾಕ.
ಬಿಸು ಲೋಹಸಂಧಾನ, ಲೋಹದ ಬೆಸುಗೆ; ಬೆಸಿಗೆ, ಉರಿ, ಡಗೆ, ಕಾವು.
—ಕಣ್ ಕೆಂಡದಂತ ಕಣ್ಣು; ಉರಿಗಣ್ಣು.
—ಗೆ ಸೇರಿಕೆ; ಅಂಬಾರಿ.
—ವು (ಬಿಸುವು), ಜಳ, ಬಿಸಿ, ತಾಪ.
—ಸುಯ್ ಬಿಸಿಯಾಗಿ ಉಸಿರುಬಿಡು; ದುಃಖದಿಂದ ಬಿಸಿ ಉಸಿರು ಬಿಡು.
ಬಿಸುಡು(ಬಿಸುಳ),ಎಸೆ;ತ್ಯಜಿಸು,ಒಗೆ,ಕಳಚು.
ಬಿಸುವಂದ (ವಿಸ್ಮಯ).
ಬಿಹ ಬಿಲಹ, ವ್ಯೂಹ; ಕಾಳಗಗಳಲ್ಲಿ ಸೇನೆ ನಿಲ್ಲಿಸುವ ರೀತಿ; ಒಡ್ಡಣ.
ಬಿಳ್ ಬೀಳು; ಆಗು; ಬರು; ಹಾಳಾಗು; ಸಾಯು.
ಬಿಳಿ ಬೀಳಾಗು; ಮುಗಿ, ಹಿರಿ; ಬೆಳ್ಳಗೆ.
—ಪು ಬಿಳಿದುದು, ಮುಗಿತನ; ಬಿಳಿತನ.
ಬಿಳ್ಕಿ ಬಿಕ್ಕೆಕಾಯಿ; ಕಾಯಿ.

ಬಿಳ್ತೀಗೆ ನೆಲಕ್ಕೆ ಬಿದ್ದು ತಗಲುವಂತೆ, ನೆಲಕ್ಕೆ ಹತ್ತಿಕೊಳ್ಳುವಂತೆ.

ಬಿಳ್ತು ಬಿತ್ತು, ಬೀಜ.

ಬಿಂಕ ಗರ್ವ, ಹೆಮ್ಮೆ; ಜಂಬ, ಪ್ರತಿಷ್ಠೆ.

—ಕಾತಿ ಯೌವನೆ, ಗರ್ವಿತೆ; ಗರ್ವಿಷ್ಠೆ.

ಬಿಂಕಣ (ದ್ಭ) ವ್ಯಂಜನ (ಸಂ), ಬೀಸಣಿಗೆ.

ಬಿಂಕು ಡೊಂಕು, ವಕ್ರ; ಕುಟಿಲ.

ಬಿಂಗ (ದ್ಭ) ಭೃಂಗ (ಸಂ), ದುಂಬಿ.

ಬಿಂಗಾರಿ (ದ್ಭ) ಭೃಂಗಾರ (ಸಂ), ಚಿನ್ನದ ಗಿಂಡಿ; ಗಾಜಿನ ರಸಬುರುಡೆ.

ಬಿಂಜ (ದ್ಭ) ವಿಂಧ್ಯ (ಸಂ), ವಿಂಧ್ಯವೆಂಬ ಬೆಟ್ಟ; ಅಡವಿ, ಕಾಡು.

ಬಿಂದಿಗೆ ತಂಬಿಗೆ, ದೊಡ್ಡ ಚಂಬು, ಜಲಪಾತ್ರೆ.

ಬಿಂದು ಹನಿ, ತೊಟ್ಟು; ಗುರುತು, ಚುಕ್ಕಿ; ವೀರ್ಯ.

ಬಿಂದುಸಾರ ಚಂದ್ರುಗುಪ್ತನ ಮಗ.

ಬಿಂದುಮಾಧವ ವಿಷ್ಣುವಿನ ಒಂದು ಹೆಸರು.

ಬಿಂಬ ಉರುಟುಗೊಂಬೆ; ಸೂರ್ಯಮಂಡಲ; ಕನ್ನಡಿ; ಪ್ರತಿರೂಪ; ಕನ್ನಡಿಯಲ್ಲಿ ಕಾಣುವ ರೂಪಛಾಯೆ; ಮಳೆಬಿಲ್ಲು; ಆಕಾಶ, ಮಳೆ; ತಂಡಿಯಾದ ವಸ್ತ್ರ; ತೊಂಡೆಹಣ್ಣು.

—ಇಸು ಪ್ರತಿಫಲಿಸು, ಪ್ರತಿರೂಪು ಕಾಣು.

ಬಿಂಬಾಧರ ಬಿಂಬೋಷ್ಠ, ತೊಂಡೆಹಣ್ಣಿನಂತೆ ಕೆಂಪಾದ ಮೇಲ್ ತುಟಿ.

ಬೀ ತೀರು, ಸವೆ; ಬೀಳಾಗು; ಮುಗಿದು ಹೋಗು; ಇಲ್ಲವಾಗು; ನಾಶವಾಗು; ಬಿತ್ತು.

ಬೀಕಲ ಕೆಲಸಕ್ಕೆ ಬಾರದ.

ಬೀಗ (ಬಿಯ್ಯಗ), ಬಾಗಿಲಿನ ಭದ್ರತೆಗೆ ತೊಡಿಸುವ ಒಂದು ಸಾಧನ; ನಂಟ.

ಬೀಗಿತಿ ನಂಟಳಾದವಳು.

ಬೀಗು ಗರ್ವಿಸು; ಹಿಮ್ಮೆಟ್ಟು; ಚೆದರು; ಅಡಗು; ಉಬ್ಬು, ಸ್ಥೂಲವಾಗು; ಸಂತೋಷಪಡು.

ಬೀಜ ಬಿತ್ತು; ಕಾರಣ, ಮೂಲ.

—ಕೋಶ ಬೀಜ ತುಂಬಿರುವ ಪಾತ್ರೆ.

ಬೀಜಗಣಿತ ಒಂದು ಬಗೆಯ ಲೆಕ್ಕ, ಗಣಿತದ ಒಂದು ಭಾಗ.

ಬೀಜಾಕ್ಷರ ಮೂಲಮಂತ್ರ; ಮಂತ್ರದ ಮುಖ್ಯ ಅಕ್ಷರ.

ಬೀಟೆ ಒಂದು ಜಾತಿಯ ಕರಿಮರ; ಒಡಕು, ಬಿರುಕು, ಸಿಸವ.

ಬೀಟೆಗಾಲ್ (ಬೇಟಗಾಲ್), ಅಗಲಿಸಿದ ಕಾಲು, ಅಟ್ಟೆಗಾಲು.

ಬೀಡಾರ (ಬಿಡಾರ), ಮನೆ; ದಾರಿಯಲ್ಲಿ ತಂಗಿದ ತಾವು; ಬೀಡು.

ಬೀಡಿ ಒಂದು ಬಗೆ ಚುಟ್ಟ, ಹೊಗೆಬತ್ತಿ.

ಬೀಡು ಬಿರಿದುದು, ಒಡೆದುದು; ಮನೆ, ಬಿಡಾರ; ಶಿಬಿರ, ಪಾಳೆಯ; ರಾಶಿ, ಸಮೂಹ; ಉಕ್ಕಿನ ಒಂದು ಜಾತಿ.

—ಇಕೆ ನಿವೇಶ, ಶಿಬಿರ, ಪಾಳೆಯ.

—ಕೊಳ್ ವಸತಿಮಾಡು, ತಂಗು; ಸೇರು; ಗುಂಪಾಗು; ಗೂಡುಸೇರು.

—ಬಿಡು ತಂಗು, ವಸತಿಮಾಡು.

ಬೀಡುಗಲಹ ಗೃಹಕಲಹ, ಮನೆಯ ಜಗಳ.

ಬೀಡುಗಾಣಿಕೆ ಪ್ರಜೆಗಳು ಕೊಡುವ ನಜರು, ಕಾಣಿಕೆ.

ಬೀಡೆ ಬಿರುಕು, ಒಡಕು.

—ಪರಿ ಬಿರುಕುಬಿಡು, ಒಡೆ.

ಬೀಣೆ (ದ್ಭ) ವೀಣಾ (ಸಂ), ವೀಣೆ, ಒಂದು ತಂತಿಯ ವಾದ್ಯ.

—ಬಿನ್ನಾಣಿಗ ವೀಣೆಯ ಪಂಡಿತ.

ಬೀದಿ (ದ್ಭ) ವೀಥಿ (ಸಂ), ಹಾದಿ; ಪೇಟೆ.

—ಪರಿ ಸ್ವೇಚ್ಛೆಯಾಗಿ ಮುಂದುವರಿ, ಮನಸ್ಸು ಬಂದತ್ತ ಕಡೆಗೆ ಹೋಗು; ಜನರ ಗುಂಪನ್ನು ನುಗ್ಗು.

ಬೀದಿಗಲಹ ಬೀದಿಯಲ್ಲಿ ಮಾಡುವ ಜಗಳ.

ಬೀಬಿ ಮುಸಲ್ಮಾನ ಸ್ತ್ರೀ.

ಬೀಭತ್ಸ ಅಸಹ್ಯವಾದ,ನಿಂದಿತವಾದ;ನವರಸ ಗಳಲ್ಲಿ ಒಂದು ರಸ.
ಬೀಭತ್ಸು ಯುದ್ಧ ನಿಯಮಗಳನ್ನು ಮನ್ನಿಸಿ ಕಾದುವ ವೀರ, ಅರ್ಜುನ.
ಬೀಯ (ದ್ಭ) ವ್ಯಯ (ಸಂ), ಖರ್ಚು; ನಿಷ್ಪ್ರಯೋಜನ; ಬಳಸುವ ಪದಾರ್ಥ; ಅನ್ನ, ಆಹಾರ; ಅಮೃತ.
ಬೀರ್ (ಬೀರು), ಹರಡು; ಚೆದರು; ಚೆಲ್ಲು.
—ಇಗೆ ಚೆದರಿದುದು, ಒಡೆದುದು.
ಬೀರ (ದ್ಭ) ವೀರ, ವೀರ್ಯ (ಸಂ), ಪರಾಕ್ರಮ; ವೀರ, ಪರಾಕ್ರಮಿ; ವೀರಭದ್ರ; ಒಬ್ಬ ಕುರುಬರ ದೇವತೆ.
ಬೀರವರೆ (ಬೀರಪರೆ) ಭೇರಿ, ರಣಭೇರಿ.
ಬೀರು ಬಿಸಾಡು; ಚೆದರು; ವಿಸ್ತರಿಸು; ಸಂದುಕ, ಕವಾಟು; ಬೀಳು, ಸಿಲುಕು.
ಬೀವು ನರ; ಅಡುಗೆಯ ಪಾತ್ರೆ.
ಬೀಸ (ಬೀಸು), ಬೇಗ, ವೇಗವಾಗಿ.
ಬೀಸಣಿಗೆ ಗಾಳಿಹಾಕುವ ಸಾಧನ, ವ್ಯಜನ.
ಬೀಸರ ಕೊನೆ; ನಾಶ.
ಬೀಸಂಬೂರಿಗೆ ಒಂದು ಬಗೆಯ ತಿಂಡಿ.
ಬೀಸಿಗೆ ಇಪ್ಪತ್ತು ಭಾಗ.
ಬೀಸು ಗಾಳಿಹಾಕು, ಗಾಳಿ ಬರುವಂತೆ ಏನನ್ನಾದರೂ ಚಲಿಸು, ಆಯುಧವನ್ನು ವೇಗವಾಗಿ ಚಲಿಸು; ಹುಡಿಮಾಡು; ಇಂಬಾದ.
—ಕಲ್ಲು ಕಾಳು ಹುಡಿಮಾಡುವ ಸಾಧನ
ಬೀಸುವಲೆ ಬೀಸಿ ಮೃಗಗಳನ್ನೂ ಮೀನನ್ನೂ ಹಿಡಿಯುವ ಬಲೆ.
ಬೀಳ್ (ಬೀಳು), ತಪ್ಪು; ಜಾರಿಬೀಳು,ಕಳಚು. ಕೀಳಾದುದು; ಬಳ್ಳಿ; ಅಪ್ಪಣೆ; ಪತನ.
—ಕೆ ಬೀಳುವಿಕೆ, ಪತನ.
—ಕೆಡೆ ಸಾಗುಮಾಡದೆ ಬಿಡು.
ಬೀಳಲು ಕೊಂಬೆಯಿಂದ ಇಳಿದ ಬೇರು; ಬಳ್ಳಿ.
ಬೀಳುಡೆ ಉಟ್ಟು ಕಳಚಿದ ಉಡುಗೆ; ಬಳ್ಳಿ.
ಬೀಳುವಚನ ಅಶ್ಲೀಲ ವಾಕ್ಯ; ತಿರಸ್ಕಾರದ ನುಡಿ.
ಬೀಳ್ಕೊಡು ವಿದಾಯಮಾಡು; ಗೌರವದಿಂದ ಕಳುಹು.
ಬೀಳ್ತರು ಈಚೆಗೆ ಬರು, ಬೀಳುತ್ತಿರು.
ಬೀಳ್ಮಾಡು ಮರುಳುಗೊಳಿಸು, ಹುಚ್ಚು ಹಿಡಿಸು, ಮೋಹ ಹುಟ್ಟಿಸು; ಕೆಡಿಸು.
ಬುಕಣಿ ಪುಡಿ.
ಬುಕುಟು ಬಟ್ಟೆ ಮೊದಲಾದುವಕ್ಕೆ ಹತ್ತುವ ಆಳುಬೆ, ಬೂಜು, ಬುಕಷ್ಟು, ಬುಕ್ಕು, ಬುರುಸು.
ಬುಕ್ಕ ಮುಸುವ, ಕರಿ ಮುಸುಡಿನ ಕೋತಿ; ಎದೆ, ಹೃದಯ; ವಿಜಯನಗರ ಸಂಸ್ಥಾನವನ್ನು ಸ್ಥಾಪಿಸಿದವರಲ್ಲೊಬ್ಬ.
ಬುಕ್ಕಿಟ್ಟು ಒಂದು ಪರಿಮಳದ ಪುಡಿ; ಕಾರಣೆಯ ಪುಡಿ.
ಬುಕ್ಕೆ ಎದೆಗುಂಡಿಗೆ, ಹೃದಯ; ತಯಾರಿಸಿದ ಹೂಗೊಂಚಲು; ತುರಾಯಿ.
ಬುಗಟಿ (ಬುಗಟೆ),ಗಂಟು; ಬಾವು; ಬುಕುಟು.
ಬುಗಡಿ ಕಿವಿಯ ಒಂದು ಆಭರಣ; ಒಂದು ಬಗೆಯ (ನೆಯಿಗೆಯ) ಅಂಚು.
ಬುಗರಿ ಒಂದು ಆಟದ ಒಡವೆ, ಒಂದು ಮೊನೆಯ ಮೇಲೆ ನಿಲ್ಲುವ ಗಿರ್ಗಿಟ; ಬೋರೆ ಮರ, ಅದರ ಹಣ್ಣು.
ಬುಗುಡು ಬಾವು,ಉಬ್ಬು;ದೊಡ್ಡಹೊಕ್ಕುಳು.
ಬುಗ್ಗಿ ಕೆನ್ನೆ, ದವಡೆ, ಕಪಾಳ.
ಬುಗ್ಗೆ ಊಟೆ, ನೀರಿನ ಉದ್ಗಮ, ಚಿಲುಮೆ.
ಬುಜರಿಕೆ ಗಂಭೀರ.
ಬುಜ್ಜಯಿಸು ಹೊಗಳು; ಪುಸಲಾಯಿಸು; ಬೋಳಯಿಸು, ಉಬ್ಬಿಸು.
ಬುಟ್ಟೆ ಬಿಡಿ ಇಲ್ಲದ,ಚುಂಗಡಿ ಇಲ್ಲದ,ರಖಮು.
ಬುಟ್ಟಿ ಕುಕ್ಕೆ, ಹೆಡಗೆ; ಬೀಳಲಿಂದ ಮಾಡಿದ ಪಾತ್ರೆ.

ಬುಡ ತಳ; ಅಡಿ, ತೂರು; ಆದಿ, ಮೊದಲು.

ಬುಡಿ ಗಾಲಿಯ ಅಂಚಿನ ತುಂಡುಗಳು; ಕಸೂತಿ ಕೆಲಸ, ಹೂ ತೆಗೆಯುವ ಕೆಲಸ.

ಬುಡುಬುಡಿಕೆ ಕಿರಿ ಡಮರು; ಒಂದು ಹಾವು.

ಬುಡೆ ತರಡು ಬಾತಿರುವಿಕೆ; ಅಂಡಕೋಶದ ರೋಗ.

ಬುಡ್ಡಿ ದೌತಿ, ಶಾಯಿಪಾತ್ರೆ; ಸೀಸೆ; ಹೆಂಡದ ಪಾತ್ರೆ.

ಬುಡ್ನು ಉರುಟು, ದುಂಡು.

ಬುತ್ತಿ (ದ್ಭ) ಭುಕ್ತಿ (ಸಂ), ಆಹಾರ, ಅನ್ನ; ಹಾದಿಯಲ್ಲಿ ತಿನ್ನಲು ಒಯ್ಯುವ ಅನ್ನ.

ಬುದ್ದಣಿಗೆ (ಬುದ್ದಲಿಗೆ), ತೊಗಲ ಪಾತ್ರೆ; ಬುದ್ದಲಿ.

ಬುದ್ಬುದ (ಬುದಬುದ), ನೀರಮೇಲೆಹುಟ್ಟುವ ಗುಳ್ಳೆ, ನೊರೆ ಗುಳ್ಳೆ.

ಬುಧ್ ತಿಳಿ.

ಬುಧ ತಿಳಿದವ, ಪಂಡಿತ; ಬ್ರಾಹ್ಮಣ, ಬೃಹಸ್ಪತಿಯ ಮಗ; ಸೂರ್ಯನನ್ನು ಸುತ್ತುವರಿಯುವ ಒಂದು ಗ್ರಹ.

—ವಾರ ಏಳು ದಿನಗಳಲ್ಲಿ ನಡುವಿನದು.

ಬುಧರತ್ನ ಬುಧನಿಗೆ ಪ್ರಿಯವಾದ ರತ್ನ, ಮರಕತ, ಪಚ್ಚೆ.

ಬುದ್ಧ ತಿಳಿದ, ಬಲ್ಲ, ಜ್ಞಾನ ಗಳಿಸಿದ; ಬೌದ್ಧ; ಶಾಕ್ಯವಂಶದ ಒಬ್ಬ ರಾಜಕುಮಾರ. ಈತನ ಮೊದಲಿನ ಹೆಸರು ಸಿದ್ಧಾರ್ಥ. ಇವನಿಗೆ ಯಶೋಧರೆಯು ಹೆಂಡತಿ. ರಾಹುಲ ಮಗ. ಈತನು ಜಗತ್ತಿನ ಸಾವುನೋವುಗಳಿಗಾಗಿ ಮರುಗಿ ಅವುಗಳ ತೊಡಕು ಬಿಡಿಸಲು ತಪಸ್ಸುಮಾಡಿ ಜ್ಞಾನ ಗಳಿಸಿದನು. ಅಂದಿನಿಂದ ಬುದ್ಧನೆನಿಸಿಕೊಂಡನು.

—ಸಮಯ ಬೌದ್ಧ ಧರ್ಮ.

ಬುದ್ಧಿ ಜ್ಞಾನ, ತಿಳುವಳಿಕೆ, ವಿವೇಕ; ಅಂತಃಕರಣ.

—ಪೂರ್ವಕ ಉದ್ದೇಶಪೂರ್ವಕ, ತಿಳಿದೇ; ಬೇಕೆಂದೇ.

ಬುಧ್ನ ಮೂಲ, ಬುಡ; ಮರದ ಬೇರು; ಶಿವ.

ಬುನಗು ಹಿಂಬದಿ, ಹಿಂದು; ಹಿಮ್ಮಗ್ಗಲು.

ಬುನಾದಿ ತಳ, ಪಾಯ; ಬುಡ; ಮೂಲ.

ಬುಭುಕ್ಷೆ ಉಣ್ಣುವ ಅಪೇಕ್ಷೆ, ಹಸಿವೆ.

ಬುರಕಿ ತೆರೆ, ಮರೆ; ಮುಖಮುಚ್ಚುವ ಪರದೆ; ಘೋಷಾ; ಸೊಳ್ಳೆಪರದೆ.

ಬುರಲಿ ಒಂದು ಚಿಕ್ಕ ಹಕ್ಕಿ, ಪೊದೆಗಳಲ್ಲಿ ವಾಸಿಸುವ ಒಂದು ಹಕ್ಕಿ.

ಬುರುಗಲು ಹುರಿಯಕ್ಕಿ, ಮಂಡಕ್ಕಿ, ಪುರಿ.

ಬುರುಗು ನೊರೆ; ಹರೆ.

ಬುರುಜು ಬತ್ತೇರಿ, ಅಟ್ಟಳೆ; ಹುಡೆ.

ಬುರುಡೆ (ಬರಡೆ), ತಲೆಯೋಡು, ತಲೆಪರಟೆ; ಉರುಟು ಪಾತ್ರೆ, ಬುಡ್ಡಿ; ದೀಪದ ಚಿಮಣಿ; ಸೀಸೆ; ಟೊಳ್ಳು; ಸುಳ್ಳು ಮಾತು.

ಬುರುದೆ ಕೆಸರು, ಗೋಡು.

ಬುರುಲೆ ಒಂದು ಜಾತಿ ಹಕ್ಕಿ.

ಬುರ್ನಾಸು ಗಾರೆಮಣೆ, ಸಾರಣೆಮಾಡುವ ಹಲಗೆ; ವ್ಯರ್ಥ, ಹಾಳು.

ಬುಲಾಕು ಮೂಗಿಗೆ ತೂಗುವ ನತ್ತು.

ಬುಲ್ಬುಲ್ ಕೊಟ್ಟುಗ, ಒಂದು ಹಾಡುವಹಕ್ಕಿ.

ಬುಲ್ಲ ಪುರುಷನ ಜನನೇಂದ್ರಿಯ.

ಬುಲ್ಲಯಿಸು (ಬುಲ್ಲವಿಸು), ಉತ್ಸಾಹಗೊಳ್ಳು, ಉಬ್ಬು; ಮರುಳುಮಾಡು, ಮೋಹಗೊಳಿಸು, ಉಬ್ಬಿಸು.

ಬುಲ್ಲವಣೆ ಉತ್ಸಾಹ; ಹೆಚ್ಚುಗೆ.

ಬುವಿ (ದ್ಭ) ಭೂಮಿ (ಸಂ).

ಬುಷ ಬುಸಾ, ಕೀಳುಧಾನ್ಯ, ಬತ್ತ ಮೊದಲಾದುವುಗಳ ಹೊಟ್ಟು, ಉಮಿ.

ಬುಸುಗುಟ್ಟು (ಬುಸುಗುಡು), ಬುಸ್ ಎಂದು ಸದ್ದುಮಾಡು, ಹಾವಿನಂತೆ ಉಸಿರುಬಿಡು.

ಬುಂದಿ ಕಡಲೆ ಹಿಟ್ಟು; ಕಡಲೆ ಹಿಟ್ಟಿನ ಉಂಡೆ.

ಬೂಕು (ಬುಕ್ಕು), ಪುಸ್ತಕ.
ಬೂಚಿ ಜೇಡನ ಬಲೆ,ಭೂತ, ಪಿಶಾಚಿ;ಕಾಡಿಗೆ, ಮಸಿ; ದನದ ಕರು; ಸೀಸೆಗಳ ಬೆಣೆ.
ಬೂಚು ಮುಚ್ಚಳ, ಗಿಡಿ, ಬೆಣೆ.
ಬೂಜು ಬುಕುಟು, ಬರುಸು; ನೀರಿನ ಪಸೆ ಯಿಂದ ಹುಟ್ಟುವ ಒಂದು ಜಾತಿ ಬಿಳಿ ಆಳುಬೆ; ಗಂಧದ ಗಿಡ.
ಬೂಟಿಕ ಮೋಸ, ಕಪಟ, ಠಕ್ಕು; ಸುಳ್ಳು.
ಬೂಟು ಠಕ್ಕು, ಮೋಸ; ಸುಳ್ಳು.
—ಆಟ ಸುಳ್ಳು; ಕಪಟ; ಜಂಬ, ಡೌಲು.
ಬೂತಾಟ ಹೀನ ಮಾತು.
ಬೂತು ಭಂಡ, ನಾಚಿಕೆಗೇಡಿ; ಅತಿವರ್ಣನೆ; ಭೀತಿ; ಪ್ರಾಣಿ, ಭೂತ (ಸಂ).
—ಕೆಡೆ ನೀಚವಾಗಿ ಮಾತಾಡು, ಅಶ್ಲೀಲ ಮಾತಾಡು.
—ಗ ನಾಚಿಕೆಗೇಡು, ಜಜ್ಜಬಂಡ.
ಬೂದಿ ಭಸ್ಮ; ಬೂದುಬಣ್ಣ.
ಬೂದು ಬೂದಿಯ ಬಣ್ಣ, ಬಿಳಿ ಕಪ್ಪುಮಿಶ್ರ ಬಣ್ಣ, ನರೆಬಣ್ಣ.
ಬೂರುಗ (ಬೂರಗ), ಬೂರಲ, ಎಲವದ ಮರ, ಶಾಲ್ಮಲೀ ವೃಕ್ಷ.
ಬೂಮಿ (ದ್ಭ) ಭೂಮಿ (ಸಂ).
ಬೂಸ ಉಮಿ, ಧಾನ್ಯದ ಹೊಟ್ಟು; ತೌಡು.
ಬೂಸಣ (ದ್ಭ) ಭೂಷಣ (ಸಂ), ಅಲಂಕಾರ.
ಬೂಸು ಬೂಜು; ವ್ಯರ್ಥ, ಹೊಟ್ಟನಂತೆ ವ್ಯರ್ಥ.
ಬೃಹತ್ (ಬೃಹತ್ತು) ದೊಡ್ಡ, ವಿಶಾಲವಾದ.
ಬೃಹತ್‍ಕ್ಷತ್ರ ಕೇಕೆಯದ ಒಬ್ಬ ರಾಜ; ನಿಶದ ದೇಶದ ಒಬ್ಬ ಅರಸು.
ಬೃಹತಿ ಗುಳ್ಳದ ಗಿಡ, ಬದನೆಗಿಡ; ಛಂದಸ್ಸಿನ ಭೇದ.
ಬೃಹತಿಕ ಆನೆಯ ಕೂಗು.
ಬೃಹತಿಕೆ ಮೇಲುದ್ದೆ, ಹೊದ್ದಿಕೆ; ಉತ್ತರೀಯ.
ಬೃಹದಶ್ವ ಪಾಂಡವರಿಗೆ ಪಾಠ ಹೇಳಿದ ಒಬ್ಬ ಋಷಿ.
ಬೃಹದಾರಣ್ಯಕ ಒಂದು ಪ್ರಖ್ಯಾತ ಉಪ ನಿಷತ್ತು.
ಬೃಹದ್ರಥ ಇಂದ್ರ.
ಬೃಹನ್ನಳೆ ವಿರಾಟ ನಗರದಲ್ಲಿ ನಪುಂಸಕ ವೇಷದಲ್ಲಿ ವಾಸವಾಗಿದ್ದ ಅರ್ಜುನ.
ಬೃಹಸ್ಪತಿ ದೇವತೆಗಳ ಗುರು, ಗುರು; ಒಂದು ಗ್ರಹ; ಪಂಡಿತ, ಜ್ಞಾನಿ.
ಬೃಂದ (ವೃಂದ), ಸಮೂಹ, ಗುಂಪು; ವೃಂದೆ.
ಬೃಂದಾವನ (ವೃಂದಾವನ), ಮಥುರೆ ಬಳಿಯ ಒಂದು ಕ್ಷೇತ್ರ. ಇಲ್ಲಿ ಕೃಷ್ಣನ ಬಾಲ ಲೀಲೆಗಳಾದುವೆಂದು ಕಥೆ; ತುಳಸಿ ತೋಟ; ಸನ್ಯಾಸಿಗಳ ಶ್ಮಶಾನ.
ಬೃಂಹಿತ ಆನೆಯ ಕೂಗು.
ಬೆಕ್ಕಸ ಆಶ್ಚರ್ಯ, ವಿಸ್ಮಯ, ಬೆರಗು;ಬಿಗುಪು.
—ಮುತ್ತ ಆಶ್ಚರ್ಯಪಟ್ಟವ.
ಬೆಕ್ಕು ಬಿಡಾಲ, ಮಾರ್ಜಾಲ; ಕಾಮಿ.
ಬೆಕ್ಕೆ ಪರಿತಾಪ, ದುಃಖ.
ಬೆಗಡು (ಬೆಗಳು), ಆಶ್ಚರ್ಯ, ವಿಸ್ಮಯ; ಭಯ; ವಿಷ.
ಬೆಗರ್ ಬೆವರು; ಭೀತಿ, ವಿಸ್ಮಯ.
ಬೆಚ್ಚಗೆ (ಬೆಚ್ಚನೆ), ಬಿಸಿಯಾಗಿ, ಹೊಚ್ಚಗೆ.
ಬೆಚ್ಚರ ಅವಸರ; ವೇಗ, ತೀವ್ರ; ವಿಸ್ಮಯ; ಭೀತಿ; ಭ್ರಮಣೆ, ಅಲೆದಾಟ.
ಬೆಚ್ಚಳಿಸು ಗಡಿಬಿಡಿಯಾಗು, ಗಾಬರಿಯಾಗು; ಭೀತಿತಾಳು; ಭ್ರಮಿಸು, ಅಲೆದಾಡು.
ಬೆಚ್ಚು ಭಯ; ಬೆರಗು; ಬಿಸುಪು; ಹಕ್ಕಿಗಳನ್ನು ಓಡಿಸಲು ಮಾಡುವ ಗೊಂಬೆ, ಬೆದರು; ಇಡು; ಇರಿಸು; ಬೆಸುಗೆಹಾಕು.
—ಪಡು ಹೆದರು.
ಬೆಜ್ಜ ವೇಧ (ಸಂ), ವೆಜ್ಜ, ತೂತು; ವೈದ್ಯ(ಸಂ), ಮದ್ದುಗಾರ, ಔಷಧ ಕೊಡುವವ.

ಬೆಜ್ಜರ (ಬೆಚ್ಚರ).
ಬೆಜ್ಜೆ ಪಕ್ಷಿಗಳ ಉಲಿ, ಚಪ್ಪರಣೆ, ಚಿಲಿಪಿಲಿ.
ಬೆಟ್ಟ ಪರ್ವತ; ಗಟ್ಟಿತನ, ಬಿರುಸು.
ಬೆಟ್ಟನೆ ಕಠಿಣವಾಗಿ; ಬಿರುಸಾಗಿ, ಬಲವಾಗಿ.
ಬೆಟ್ಟವಗೆ ಬೆಟ್ಟದ ಹಗೆ, ಇಂದ್ರ.
ಬೆಟ್ಟಿ ಬೇಟ; ಸಂದರ್ಶನ; ಸಂಧಾನ; ಸೇರುವೆ; ಒರಟು; ಪ್ಲೇಗು ಬೇನೆ.
—ತು ಬಿಗಿ; ಕಠಿಣ; ಬಿರುಸು; ನಿಷ್ಠುರ; ಕ್ರೂರ.
ಬೆಟ್ಟು ನಾಟು; ಬೆರಳು; ಪರ್ವತ; ಮಟ್ಟವಾದ ಪ್ರದೇಶ; ಬೆಣ; ಗಟ್ಟಿಯಾದ ಗೂಟ; ಪೆಟ್ಟು; ಮಿಶ್ರವಾದ.
—ಬೆನಕ ಒಂದು ಜಾತಿ ಹುಳ.
ಬೆಟ್ಟಿಸಿ ಮಲ್ಲವಿದ್ಯೆಯ ಒಂದು ಗತ್ತು.
ಬೆಟ್ಟೆ ಗಟ್ಟಿ ಅಡಕೆ; ಬೇಯಿಸಿ ಒಣಗಿಸಿದ ಅಡಕೆ.
ಬೆಡಗ ಮರುಳುಮಾಡುವವ, ಒಯ್ಯಾರಿ.
ಬೆಡಗಿ ಒಯ್ಯಾರಿ, ಮೋಹಿಸುವ ಸ್ತ್ರೀ.
ಬೆಡಗು (ಬೆಡಂಗು), ಸೌಂದರ್ಯ; ವಿಲಾಸ; ಒಯ್ಯಾರ; ಸೊಬಗು; ತೋರಿಕೆ, ಜಂಬ.
ಬೆಣಚು (ಬೆಣಚಿ), ಬೆಳಚುಗಲ್ಲು, ಬಿಳಿಗಲ್ಲು, ಸ್ಫಟಿಕ ಜಾತಿ ಕಲ್ಲು.
ಬೆಣತಿಗೆ ಬೆಳತಿಗೆ; ಬಿಳಿದಾದುದು; ಬಿಳಿದಾದ ಅಕ್ಕಿ.
ಬೆಣೆ (ಬೆಣಿ), ಬೂಚು, ಮುಚ್ಚಳ, ಸೀಸೆಗಳ ಗಿಡಿ; ಗೂಟ; ಎಣೆ, ಸರ್ಪ ಸಂಭೋಗ.
ಬೆಣ್ಣೆ (ಬೆಣ್ಣಿ), ಮೊಸರಿನ ಸಾರ, ಹಾಲಿನಲ್ಲಿ ದೊರೆಯುವ ತೈಲ ಇಲ್ಲವೆ ಕೊಬ್ಬಿನ ಅಂಶ, ನವನೀತ.
ಬೆತ್ತ (ದ್ಭ) ವೇತ್ರ (ಸಂ), ಒಂದು ಜಾತಿ ಬೀಳಲು; ಅದರ ಸಲಕೆ; ಸಪುರ ಕೋಲು, ಗಲಗು.
ಬೆತ್ತಲೆ (ಬತ್ತಲೆ), ನಗ್ನ, ಬರಿ ಮೈ.
ಬೆದಕು ಹುಡುಕು; ವಿಚಾರಮಾಡು; ಉಗುರಿಂದ ಸೋಣೆ, ಕುಟುಕು.
ಬೆದಬೆದನೆ ಅಧಿಕವಾಗಿ, ಹೆಚ್ಚಾಗಿ.
ಬೆದರ್ (ಬೆದರು), ಹೆದರು; ಭೀತಿಗೊಳ್ಳು; ಗಾಬರಿಯಾಗು; ಬೆಚ್ಚು, ಪ್ರಾಣಿಗಳನ್ನೂ ಪಕ್ಷಿಗಳನ್ನೂ ಹೆದರಿಸಲು ಮಾಡುವ ಗೊಂಬೆ.
—ಅಣೆ ಹೆದರಿಸು, ತಳಮಳ.
—ಇಕೆ ಭೀತಿ; ಗಾಬರಿ, ತಳಮಳ.
—ಪೊನಲು ಭಯರಸ.
ಬೆದಂಡೆ ಗೊಬ್ಬರ; ಒಂದು ವಿಧದ ಕಾವ್ಯ; ವಿಮರ್ಶೆ.
ಬೆದೆ ಬಿತ್ತನೆ; ಮೊಳಕೆ; ಬಿತ್ತಾಗುವ ಕಾಲ; ಸಂತತಿಯಾಗುವ ಕಾಲ; ಮೃಗಗಳು ಕಾವಾಗುವುದು, ಬೆದಿಕೆ; ಪ್ರಾಣಿಗಳಲ್ಲಿ ಹೆಣ್ಣುಗಳು ಗಂಡುಗಳನ್ನು ಬಯಸುವ ಕಾಲ; ಕಾಮುಕತೆ.
—ಕಾಲ ಋತುಕಾಲ; ಬಿತ್ತುವ ಕಾಲ.
—ಗಾರ ಕಾಮುಕ.
ಬೆದ್ದಲು ಜಳ್ಳು.
ಬೆನ್ (ಬೆನ್ನು), ಶರೀರದ ಹಿಂಗಡೆ; ಹಿಂಗಡೆ; ಒಂದಾದ ಮೇಲೆ ಒಂದು.
ಬೆನಕ (ದ್ಭ) ವಿನಾಯಕ (ಸಂ), ಗಣಪತಿ; ದುಂಡಗಿರುವ ಸಣ್ಣ ಕಲ್ಲು.
ಬೆನ್ನಾರೆ ಹಿಂದೆಯೇ, ಬೆನ್ನಿಗೇ.
ಬೆನ್ನೀರ್ ಬಿಸಿನೀರು.
ಬೆನ್ನು (ಬೆನ್), ಹಿಂಭಾಗ; ಶರೀರದ ಹಿಂಭಾಗ, ಭುಜದ ಹಿಂಭಾಗ.
—ಹತ್ತು ಅಟ್ಟು, ಹಿಂಬಾಲಿಸು.
ಬೆಪ್ಪು ಹುಚ್ಚು; ಮರಳು, ಮಂಕು; ಹೆಡ್ಡತನ.
ಬೆಪ್ಪುತಕ್ಕಡಿ ಮೂಢ, ಹೆಡ್ಡ.
ಬೆಬ್ಬನೆ ಹೆಮ್ಮೆಯಿಂದ; ಮದವೇರಿ.
ಬೆಬ್ಬಳ (ಬೆಬ್ಬುರ), ಗಾಬರಿ, ಗಲಿಬಿಲಿ.

ಬೆಮರ್ (ಬೆಮರು), ಬೆವರು; ಭೀತನಾಗು, ಅಳುಕು; ಬೆವರು ಸುರಿ.

—ಚು ಬೆವರು ಸುರಿ.

ಬೆಮೆ (ದ್ಭ) ಭ್ರಮೆ (ಸಂ), ತಬ್ಬಿಬ್ಬು.

ಬೆರಗು ವಿಸ್ಮಯ, ಆಶ್ಚರ್ಯ; ದಿಗ್ಭ್ರಮೆ, ದಾಕ್ಷಿಣ್ಯ.

ಬೆರಟು (ಬೆರಂಟು), ಚಿವುಟು; ಗೊರಸಿನಿಂದ ಕೆರೆ, ಬೆರಲಿಂದ ಕೆರೆ, ಪರಚು.

ಬೆರಣಿ ಬೆರಟ,ಸೆಗಣಿಯ ಒಣ ಬಿಲ್ಲೆ,ಕುರುಳು.

ಬೆರಲ್ (ಬೆರಳು), ಬೆರಲು, ಬೆಟ್ಟು; ತುದಿ.

ಬೆರಸು (ಬೆರೆಸು), ಕೂಡಿಕೊಳ್ಳು, ಸೇರಿಸು; ಒಡನೆ ಸ್ನೇಹ ಉಂಟುಮಾಡು; ಅಟ್ಟು.

—ಹ ಕೂಡುವಿಕೆ, ಕೂಡಾಟ.

ಬೆರಂಜು ರಾಶಿಮಾಡು, ಕೂಡಿಸು, ಸೇರಿಸು.

ಬೆರೆ (ಬೆರಿ), ಜತೆಗೂಡು, ಸೇರು; ಗಟ್ಟಿಯಾಗು; ಒಣಗು; ಹೆಮ್ಮೆಗೊಳ್ಳು; ಅಹಂಕಾರ, ಹೆದರಿಕೆ.

—ಕೆ ಬೆರಕೆ,ಸೇರಿಕೆ,ಹೊಂದಿಕೆ,ಕೂಡಿಕೆ; ಮಿಶ್ರಣ.

ಬೆರೆಸೆಡೆ ಭಯಪಡು.

ಬೆರ್ಚು (ಬೆಚ್ಚು), ಹೆದರಿಕೆ, ಬೆರಗು; ಬೆರಗಾಗು, ಹೆದರು.

—ನೀರು ಹೆದರಿಕೆ ಹೋಗಲಾಡಿಸಲು ಮುಖಕ್ಕೆ ಬಡಿಯುವ ನೀರು; ಓಕುಳಿ.

ಬೆಲೆ ಮೌಲ್ಯ, ಕ್ರಯ, ಕಿಮ್ಮತ್ತು.

ಬೆಲೆಗು ಸೂರ್ಯನ ಕಲೆ.

ಬೆಲೆವೆಣ್ಣು ಬೆಲೆಗೆ ತನ್ನನ್ನು ಮಾರಿಕೊಳ್ಳುವವಳು, ಸೂಳೆ.

ಬೆಲ್ಲ ಕಬ್ಬಿನ ರಸದ ಪಾಕ, ಗುಡ; ರುಚಿಯುಳ್ಳ

ಬೆಲ್ಲವತ್ತ (ದ್ಭ) ಬಿಲ್ವಪತ್ರ (ಸಂ).

ಬೆವರು (ಬೆಮರು),ಮೈಯಿಂದ ಸುರಿವ ನೀರು; ರೋಮಕೂಪಗಳಿಂದ ಬರುವ ನೀರು; ನೀರಹನಿ; ಗುಡಿಸು, ತೆಗೆ, ಸವರಿ ತೆಗೆ.

ಬೆವಸಾಯ (ದ್ಭ) ವ್ಯವಸಾಯ (ಸಂ), ಕೃಷಿ.

ಬೆವಹಾರ (ದ್ಭ) ವ್ಯವಹಾರ (ಸಂ), ವ್ಯಾಪಾರ.

ಬೆಸ (ಬೆಸು), ಅಪ್ಪಣೆ, ಆಜ್ಞೆ; ವಿಷಮಸಂಖ್ಯೆ.

ಬೆಸಕೆಯ್ ಸೇವಿಸು, ಕೆಲಸಮಾಡು; ವಿಧೇಯನಾಗಿ ವರ್ತಿಸು.

ಬೆಸಕಿಲ್ ಪೊರಕೆ, ಕಸಬರಿಗೆ, ಭಾರಿಗೆ.

ಬೆಸಗೊಳ್ ಬೆಸಸು, ಕೇಳು; ಪ್ರಶ್ನೆಮಾಡು.

ಬೆಸನ (ದ್ಭ) ವ್ಯಸನ (ಸಂ), ಕಾರ್ಯ, ಹೇಳಿದ ಕೆಲಸ; ಯೋಚನೆ, ಚಿಂತೆ; ಆಜ್ಞೆ, ಅಪ್ಪಣೆ; ಚಾಳಿ, ಅಭ್ಯಾಸ; ವಿಧಾನ (ಸಂ), ರೀತಿ, ಬಗೆ; ಹೆರಿಗೆ.

ಬೆಸಲು ಹೆರಿಗೆ, ಹಡೆಯುವಿಕೆ.

ಬೆಸಸು ಅಪ್ಪಣೆಕೊಡು, ಆಜ್ಞಾಪಿಸು.

ಬೆಸಳಿಗೆ ಕೆಂಡ ತುಂಬಿದ ಪಾತ್ರೆ, ಅಗ್ಗಿಷ್ಟಿಕೆ.

ಬೆಸಿ ಬೆಸ; ಮುಗಿಲೆ, ಸರಿಯಲ್ಲದ ಸಂಖ್ಯೆ.

ಬೆಸು ಸೇರಿಸು,ಬೆಸುಗೆಹಾಕು;ಬಿಮ್ಮಗೆ ಹಿಡಿದುಕೊಳ್ಳು.

—ಗೆ (ಬೆಸಿಗೆ), ಸೇರಿಕೆ, ಹೊಂದಿಕೆ; ಒಂದು ಲೋಹವನ್ನು ಇನ್ನೊಂದಕ್ಕೆ ಹೊಂದಿಸುವ ರೀತಿ; ಕಿವಿಯ ಬುಡ.

ಬೆಸೆ ಹತ್ತಿಹಿಂಜುವ ಬಿಲ್ಲು; ಸೇರಿಸು; ಗರ್ವಿಸು; ಲೋಹಗಳನ್ನು ಸೇರಿಸು; ಗರ್ವತಾಳು.

ಬೆಸೆಗೆಣೆಯ ಮನ್ಮಥ.

ಬೆಸ್ತ ಅಂಬಿಗ; ಮೀನುಗಾರ.

ಬೆಳ್ ಮರುಳು;ಬೆಪ್ಪು; ಬಿಳಿಯ, ಬಿಳಿದು; ಬೆಳೆ.

—ತನ ಬೆಪ್ಪು, ಮಂಕು.

ಬೆಳಕು ಕಾಂತಿ, ತೇಜಸ್ಸು, ಪ್ರಕಾಶ; ದೀಪ.

ಬೆಳಗು ಪ್ರಕಾಶಿಸು, ಹೊಳೆ; ಬೆಳಕು; ಬೆಳಗಿನ ವೇಳೆ; ಶುಭ್ರಮಾಡು; ಹೊಳೆ.

—ಅಳಿ ಬೆಳಕು ನಂದುವುದು.

—ಇಸು ಹೊಳೆಯುವಂತೆ ಮಾಡು; ತಿಕ್ಕು

ಬೆಳಗ್ಗೆ (ಬೆಳಿಗ್ಗೆ), ಬೆಳಕು ಹರಿಯುತ್ತಲೆ, ಪ್ರಾತಃಕಾಲ.

**ಬೆಳತಿಗೆ**(ಬೆಣತಿಗೆ), ಬಿಳುಪಾದ; ಹೊಳಪಾದ; ಬಿಳಿದಾದ ಅಕ್ಕಿ.
**ಬೆಳರ್** (ಬೆಳರು), ಕಾಂತಿ, ಪ್ರಕಾಶ; ಬಿಳಿದಾಗು; ಕಾಂತಿಹೊಂದು, ಹೊಳೆ.
—**ಪು** ಹೊಳಪು; ಕಾಂತಿ; ಬಿಳಿದು.
**ಬೆಳವಣಿಗೆ** (ಬೆಳವಳಿಗೆ), ಬೆಳೆವಣಿಗೆ; ಅಭಿವೃದ್ಧಿ.
**ಬೆಳವಲ** ಬಿಲ್ವಪತ್ರೆ; ಫಲವತ್ತಾದ ದೇಶ; ಹರಿಹರ ಹುಬ್ಬಳ್ಳಿ ಪ್ರಾಂತದ ನಾಡು.
**ಬೆಳಸ** ರಸ ತುಂಬಿದ ಕಾಳು.
**ಬೆಳು** ಬೆಳ್, ಬಿಳಿಯ.
**ಬೆಳುಗವತೆ** ಹಗಲು ದರೋಡೆ; ಹಗಲು ಕಳ್ಳತನ.
**ಬೆಳುನಗೆ** (ಬೆಳ್ನಗೆ), ಶುಭ್ರವಾದ ನಗೆ.
**ಬೆಳುವ** (ಬೆಳವ), ಒಂದು ಬಗೆಯ ಪಾರಿವಾಳ; ಸೋರೆಹಕ್ಕಿ.
**ಬೆಳೆ** (ಬೆಳೆಯು), ಪಯಿರು; ಬೆಳೆದುದು; ಹೆಚ್ಚು, ವೃದ್ಧಿಯಾಗು; ಸೊಕ್ಕು.
—**ವಣಿಗೆ** (ಬೆಳೆವಿಗೆ), ಬೆಳೆವಳಿಗೆ; ಬೆಳೆಯುವಿಕೆ; ಅಭಿವೃದ್ಧಿ; ಏಳಿಗೆ; ಎತ್ತರ, ಪುಷ್ಟಿ
**ಬೆಳ್ಕುರ್** (ಬೆಳ್ಕುರು), ಭಯಪಡು.
**ಬೆಳ್ಗಳ್** ದಡ್ಡರು, ಮೂಢರು.
**ಬೆಳ್ಗೊಡೆ** ಬಿಳಿ ಕೊಡೆ, ಶ್ವೇತಛತ್ರ.
**ಬೆಳ್ಪಳ** ನಡುಕು, ಕಂಪನ; ತಳಮಳ.
**ಬೆಳ್ಪಳಿ** ನಿರ್ಮಲತೆ; ಹೊಳೆವು, ಕಾಂತಿ; ಕಂಪನ.
**ಬೆಳ್ಪೊಗರು** ಶುಭ್ರ ಪ್ರವಾಹ; ಬಿಳಿದಾದ ಕಾಂತಿ.
**ಬೆಳ್ಪಕ್ಕ** ಶುಕ್ಲಪಕ್ಷ.
**ಬೆಳ್ಪು** ಬಿಳುಪು; ಬಿಳಿದಾಗು.
**ಬೆಳ್ಳಕ್ಕರಿಗ** ಅರಸಿಕ; ಅಲ್ಪಜ್ಞ.
**ಬೆಳ್ಳಡಿ** ಕುರುಬ; ಬುಟ್ಟಿ ಮಾಡುವವ, ಮೇದರವ.
**ಬೆಳ್ಳಡಿಯ** ಈಶ್ವರ.
**ಬೆಳ್ವಾರ** ಬಲು ವಿಸ್ತಾರಕ್ಕೆ ಹರಡುವ ಬಲೆ.
—**ಸುತ್ತು** ಕಾಡಿನಲ್ಲಿ ವಿಸ್ತಾರಕ್ಕೆ ಬಲೆ ಹಾಕಿ ಬೇಟೆಗಾಗಿ ಸುತ್ತುವುದು.
**ಬೆಳ್ಳಿ** ಬಿಳಿದಾದ ಲೋಹ, ರಜತ; ಶುಕ್ರಗ್ರಹ.
**ಬೆಳ್ಳುಳ್ಳಿ** ಬಳ್ಳುಳ್ಳಿ; ಒಂದು ವಾಸನೆಯುಳ್ಳ ಗಡ್ಡೆ
**ಬೆಂಕಿ** ಕಿಚ್ಚು.
**ಬೆಂಗಡೆ** ಬೆನ್ನ ಕಡೆ, ಬೆನ್ನ ಹಿಂದೆ.
**ಬೆಂಗದಿರ** ಬಿಸಿಯಾದ ಕಿರಣ ಉಳ್ಳವ, ಸೂರ್ಯ.
**ಬೆಂಗರೆ** (ಬೆಂಗ್ರೆ), ಮರಳುದಿನ್ನೆ, ಕಡಲಿನ ಬದಿಯ ಮರಳಿನ ಪ್ರದೇಶ, ಅರಾಲು.
**ಬೆಂಗಾಡು** (ಬೆಗ್ಗಾಡು), ಸಸ್ಯ ಹೀನವಾದ ಪ್ರದೇಶ, ಮರುಭೂಮಿ.
**ಬೆಂಗೊಡು** ಓಡು, ಸೋಲು; ಓಡಿಹೋಗು.
**ಬೆಂಗೊಳು** ಅನುಸರಿಸು, ಹಿಂಬಾಲಿಸು.
**ಬೆಂಚು** ಬಾಂಕು, ಮಂಚ.
**ಬೆಂಚೆ** ಸಣ್ಣ ಸರೋವರ, ಗುಮ್ಮಿ, ನೀರ ಹೊಂಡ, ಕುಂಟೆ.
**ಬೆಂಡು** ಸಾರವಿಲ್ಲದ ವಸ್ತು; ಹೀಲಿ, ಒಂದು ಬಗೆಯ ಹಗುರ ಮರ.
**ಬೆಂಡೆ** ಒಂದು ಪಲ್ಲೆಯ, ತರಕಾರಿ.
**ಬೆಂತರ** (ದ್ಭ) ವ್ಯಂತರ (ಸಂ), ಭೂತ, ಪಿಶಾಚಿ.
**ಬೆಂಬಡಿಗೆ** ಬೆನ್ನಿನ ಮೇಲೆ ಹೊಡೆಯುವ ದೊಣ್ಣೆ.
**ಬೆಂಬಲ** (ಬೆಂಬಳ), ಪ್ರೋತ್ಸಾಹ; ಅನುಕರಣೆ; ಸಹಾಯ.
**ಬೇಕರೆ** (ಬೇ = ಅನ್ನು), ದೀನವಾಗಿ ಕೂಗು.
**ಬೇಕು** (ಬೇಹು), ಅಪೇಕ್ಷೆಯ ಸೂಚನೆ, ಬಯಕೆಯ ಸೂಚನೆ.
**ಬೇಕೂಪ** (ಬೇಕೂಬ), ಬುದ್ಧಿಗೇಡಿ, ಮರುಳ, ತಿಳಿಗೇಡಿ.
**ಬೇಗ** (ದ್ಭ) ವೇಗ (ಸಂ); ಹೊತ್ತು, ಕಾಲ; ತೀವ್ರ, ತ್ವರೆ.

ಬೇಗಡೆ ಹೊದಿಕೆ; ಕಾಂತಿ; ಹೊಳೆಯುವ ಬಣ್ಣದ ತಗಡು; ಒಂದು ರಾಗ.

ಬೇಗಾರಿ (ಬೇಗಾರು), ಬಿಟ್ಟಿ ಕೆಲಸ; ವೇತನ ಕೊಡದೆ ಮಾಡಿಸುವ ಕೆಲಸ.

ಬೇಗುದಿ ಬಿಸಿಯಾದ ಕುದಿ, ಸಂತಾಪ, ವ್ಯಸನ; ಸಂಕಟ.

ಬೇಗೆ ಉಷ್ಣ, ಕಾವು, ತಾಪ; ಕಾಡ್ಗಿಚ್ಚು.

ಬೇಜಾರು ಬೇಸರ, ಉಲ್ಲಾಸಹೀನತೆ; ವ್ಯಥೆ.

ಬೇಟ ವಿರಹ, ಬೇರೆ ಬೇರೆಯಾಗಿರುವುದು; ಪ್ರಣಯಿಗಳ ಬೆಟ್ಟ, ಸ್ತ್ರೀಮೋಹ; ಇಂದ್ರಿಯ ಸುಖ; ಕಾಮಪರವಶತೆ, ಕಾಮಾಸಕ್ತಿ; ಒಲುಮೆಯ ಚೇಷ್ಟೆ, ಕಾಮಚೇಷ್ಟೆ.

ಬೇಟಿಕೆ ಪ್ರೀತಿ.

ಬೇಟೆ(ಬೇಂಟೆ),ಮೃಗಗಳನ್ನು ಹಿಡಿಯುವುದು, ಕೊಲ್ಲುವುದು; ಶಿಕಾರಿ; ಬೇಟೆಗೆ ಗುರಿಯಾದ ಮೃಗ.

— ಕಾರ ಬೇಟೆಯಾಡುವವ, ಶಬರ.

ಬೇಡ ಬೇಟೆಗಾರ; ಲುಬ್ಧಕ; ತನಗೆ ಸಲ್ಲದೆನ್ನುವುದು, ಆಗದು; ಭೀತ.

ಬೇಡಿ ಬಂಧನ, ಸಂಕೋಲೆ, ಕೋಳ.

ಬೇಡಿತಿ ಬೇಡರವಳು.

ಬೇಡ್ವಟ್ಟಿ ಬೇಡರ ಹಟ್ಟಿ.

ಬೇಡು ಬಯಸು, ಹಂಬಲಿಸು; ಕೇಳು, ಬೇಕೆನ್ನು; ಭಿಕ್ಷೆಕೊಳು; ಬೇಟೆಕಾರರ ಗುಂಪು.

ಬೇತಾಳ (ವೇತಾಳ), ಒಂದು ದೊಡ್ಡ ರಣಭೂತ; ಬಹಳ ಬಲವಾದ ದೆವ್ವ.

ಬೇತು ಇರಿಸು, ಬೆಚ್ಚು; ಹಂಚಿಕೆ, ಯುಕ್ತಿ.

ಬೇದನೆ (ನೋಡು: ವೇದನೆ).

ಬೇನೆ ನೋವು; ರೋಗ, ಕಾಯಿಲೆ, ಜಡ್ಡು.

ಬೇಪಾರ(ಧ್ಭ) ವ್ಯಾಪಾರ(ಸಂ), ಕೊಡುವಿಕೆ, ಕೊಳ್ಳುವಿಕೆ; ಕ್ರಯವಿಕ್ರಯ; ಉದ್ಯೋಗ; ಮಾರಾಟ.

ಬೇಬಂದು ಅವ್ಯವಸ್ಥೆ; ಗೊಂದಲ.

ಬೇಯು ಕಾವಿನಿಂದ ತಪಿಸು; ಕುದಿ, ಅಡುಗೆಯಾಗು; ಕುಚ್ಚು; ತಪಿಸು.

ಬೇರ್ (ಬೇರು), ಮೂಲ, ಗಿಡಗಳು ನೆಲದೊಳಗೆ ಬಿಡುವ ಭಾಗ.

— ಬಿಡು ಬೇರೂರು, ಗಟ್ಟಿಯಾಗಿ ನಿಲ್ಲು.

ಬೇರಡಿ ಸೀಳಿದ ಗೊರಸು.

ಬೇರೀಜು ಕೂಡಿಕೆ, ಮೊತ್ತ.

ಬೇರುಂಡ(ಭೇರುಂಡ),ಎರಡು ತಲೆಯ ಹಕ್ಕಿ.

ಬೇರೆ (ಬೇರ್), ಇತರ, ಇನ್ನೊಂದು, ಮತ್ತೊಂದು, ಪ್ರತ್ಯೇಕವಾದ.

ಬೇರೇಜು ಸರಕಾರಿ ಕಂದಾಯ.

ಬೇಲ ಕಪಿತ್ಥ, ಒಂದು ಜಾತಿಯ ಮರ, ಅದರ ಹಣ್ಣು.

ಬೇಲಿ ಸುತ್ತಲು ಎಬ್ಬಿಸಿದ ತಡೆ; ದನಮೇಯದಂತೆ ಹೊಲಕ್ಕೆ ಸುತ್ತುಹಾಕಿದ ಆವರಣ; ತಡೆ.

ಬೇವಸ ತೊಂದರೆ; ದುಃಖ, ವ್ಯಸನ; ಚಿಂತೆ.

ಬೇವಳ ವರ್ತಕ.

ಬೇವಾರಿಸು (ಬೇವಾರಸು), ಯಜಮಾನರಿಲ್ಲದ; ಹೊಣೆಯಿಲ್ಲದ, ಹೊಣೆಯಿಲ್ಲದಂತೆ ವರ್ತಿಸುವ.

ಬೇವು ಕಹಿ ಎಲೆಯುಳ್ಳ ಒಂದು ಮರ; ಅರಿಷ್ಟ; ಕೈಬೇವು.

ಬೇಷು ಸೊಗಸು, ಚೆನ್ನ, ಶಹಭಾಸ್.

ಬೇಸಗೆ ಬೇಸಿಗೆ(ಧ್ಭ), ವೈಶಾಖ(ಸಂ), ಬಿಸಿಲು ಕಾಲ; ಸೆಕೆಗಾಲ.

ಬೇಸರ ಬೇಸರಿಕೆ, ಆಲಸ್ಯ, ಬೇಜಾರು; ಅಸಮಾಧಾನ; ಮನೋವ್ಯಥೆ; ದಣಿವು; ಉದಾಸೀನತೆ.

ಬೇಸಾಯ (ಧ್ಭ) ವ್ಯವಸಾಯ (ಸಂ), ಕೃಷಿ; ಒಕ್ಕಲತನ.

ಬೇಹ ಬೇಕಾದ, ಅಪೇಕ್ಷಿಸುವ; ಸಮರ್ಥರಾದ; ಮುಖ್ಯ.

ಬೇಹರ (ದ್ಭ) ವ್ಯವಹಾರ (ಸಂ), ವ್ಯಾಪಾರ.
ಬೇಹವರ್ ಬೇಡುವವರು ಭಿಕ್ಷುಕರು; ಕಾವಲವರು; ಸುದ್ದಿಗಾರರು.
ಬೇಹಾಗ ಬೇಕಾದಾಗ; ಒಂದು ರಾಗ.
ಬೇಹಾರ ವ್ಯವಹಾರ, ವ್ಯಾಪಾರ.
ಬೇಹು ಶೋಧ, ಹುಡುಕುವುದು, ಗೂಢಚರ್ಯೆ;ಸೂಚನೆ,ಗುರುತು,ಸಂಜ್ಞೆ; ಬೇಕು.
ಬೇಹುಷಾರು ಎಚ್ಚರ ಮರೆಯುವಿಕೆ; ಅಜಾಗ್ರತೆ.
ಬೇಳ್ (ಬೇಳು), ಮಂಕು, ಗಡಿಬಿಡಿ,ತಳಮಳ; ಹೋಮ; ಬಲಿ; ಬಲಿಯಿಕ್ಕು; ಬೇಡು; ಕಿರಿಚು, ಕೂಗು; ಬೇಡು.
—ವೆ ದುರಾಲೋಚನೆ; ನಾಶಮಾಡುವ ಯೋಚನೆ; ಮಂಕುಗೊಳಿಸುವಿಕೆ; ಗಾಬರಿ; ಮಬ್ಬು; ಭ್ರಮೆ, ಹೋಮ.
ಬೇಳಂಬ ವಿಚಾರ; ಚಿಂತೆ; ಪ್ರಯತ್ನ; ಅಶುಭ ವಾರ್ತೆ, ದುಃಖಸಮಾಚಾರ.
ಬೇಳೆ ಎರಡಾಗಿ ಒಡೆದ ಧಾನ್ಯ; ಎಂಟರಲ್ಲಿ ಒಂದು ಪಾಲು; ಕೊಬರಿ; ದ್ರವ್ಯದ ಒಂದು ಅಳತೆ.
ಬೈ (ಬಯ್), ನೆಲ್ಲುಹುಲ್ಲು; ನಿಂದಿಸು, ಹಳಿ.
ಬೈಗಳು ತೆಗಳಿಕೆ, ಶಾಪ; ದೂಷಣೆ, ಕೆಟ್ಟ ಮಾತುಗಳು.
ಬೈಗು ಸಾಯಂಕಾಲ.
ಬೈತು (ಬೆಯ್ತು) ಮರೆಯಾಗಿ.
—ಇಡು ಮರೆಯಾಗಿಂಸು, ಬಚ್ಚಿಡು.
ಬೈತ್ರ ತೆಪ್ಪ; ನಾವೆ, ಕಪ್ಪಲು, ಹಡಗು.
ಬೈರವಾಸ ಉತ್ತರೀಯ, ಮೇಲೆ ಹೊದೆಯುವ ವಸ್ತ್ರ; ಬಹಿರ್ವಾಸ.
ಬೈರಿಗೆ ಮರ ಕೊರೆಯುವ ಸಾಧನ,ಗುರುಮ; ನೆಲ ಕೊರೆಯುವ ಸಾಧನ.
ಬೈರೂಪ (ಬಹುರೂಪ); ವಿಚಿತ್ರವಾದ ರೂಪ.
ಬೈಲು (ಬಯಲು).
ಬೈವಸ ಬೆಂಕಿ; ದುಃಖ.
ಬೈಸಿಕೆ ಅಭಿನಯ ನರ್ತನದ ರೀತಿಗಳು; ಬೆಸುಗೆ,ಬೈಸಿಕೊಳ್ಳುವಿಕೆ; ಕೂತೇಳುವುದು
ಬೊಕ್ಕ ಕೂದಲಿಲ್ಲದ ಮನುಷ್ಯ, ಬೋಳ; ಬೋಡ, ಹಲ್ಲಿಲ್ಲದವ; ಕೋಡಿಲ್ಲದ ಎತ್ತು.
ಬೊಕ್ಕಣ (ಬಕ್ಕಣ), ಬಾವುಳ್ಳ, ಬಾಗುಳ್ಳ, ಡೊಂಕಾದ;ಜೇಬು,ಕಿಸೆ; ಚಂಚಿ,ತೋಬರಿ.
ಬೊಕ್ಕಸ ಕೋಶ, ಭಂಡಾರ; ಅಂಗಿ ಜೇಬು.
ಬೊಕ್ಕೆ(ಬೊಕ್ಕಿ), ಮುಡವೆ; ಗುಳ್ಳೆ; ಹೋರು; ಬಿಲ; ತೂತು; ಸಮಾಧಿ, ಗೋರಿ.
ಬೊಗಸೆ ಬಗಸೆ, ಎರಡು ಹಸ್ತ; ತೆರೆದು ಹಿಡಿದ ಕುಡಿಕೆ, ಅಂಜಲಿ.
ಬೊಗ್ಗು ಹೆಗ್ಗಾಳೆ ಬಗ್ಗಿರುವ ದೊಡ್ಡ ಕಹಳೆ.
ಬೊಚ್ಚು ಉಣ್ಣೆ; ಕೂದಲು; ಬಗಡ; ತುಪ್ಪಳ.
ಬೊಜಗ ಬೊಜಂಗ(ದ್ಭ), ಭುಜಗ(ಸಂ), ವಿಟ.
ಬೊಜ್ಜ ಸಾವಿನ ಬಳಿಕ ನಡೆಯುವ ಅಪರ ಕ್ರಿಯೆ; ಉತ್ತರಕ್ರಿಯೆ.
ಬೊಜ್ಜಾರ ಬಿನ್ನಾಣ; ನಪುಂಸಕ.
ಬೊಜ್ಜು (ಬೊಜ್ಜೆ), ಡೊಳ್ಳು, ಹೊಟ್ಟೆ ಮೇಲೆ ಕೊಬ್ಬು ಸೇರುವುದು; ಸೊಕ್ಕು.
ಬೊಟ್ಟೆ ಮೋಟ, ಮೊಂಡ.
ಬೊಟ್ಟು (ಬಟ್ಟು), ಬೆರಳು; ತಿಲಕ; $\frac{1}{4}$ಆಣೆ; ತೊಟ್ಟು, ಹನಿ; ಮೊಂಡ, ದಡ್ಡ.
ಬೊಡ್ಡಿ ದುಷ್ಟ ಸ್ತ್ರೀ; ಅಪವಿತ್ರ ಹೆಂಗಸು; ಮರದ ಬುಡದ ದಿಂಡು, ಮರದ ತಾಳು.
ಬೊಪ್ಪ (ದ್ಭ) ವಪ್ರ (ಸಂ), ತಂದೆ; ನಾಯಕ.
ಬೊಪ್ಪರ ಜಟ್ಟಿಗಳ ಕಾದಾಟದ ಒಂದು ರೀತಿ.
ಬೊಬ್ಬುಳಿ ಬೊಬ್ಬುಲಿ(ದ್ಭ), ಬರ್ಬೂರ(ಸಂ), ಬಿಳಿ ಜಾಲಿಮರ; ನೀರಗುಳ್ಳೆ, ನೊರೆಗುಳ್ಳೆ.
ಬೊಬ್ಬೆ ಕೋಲಾಹಲ, ಗದ್ದಲ, ಕೂಗು; ಸುಟ್ಟು ಆದ ಬೊಕ್ಕೆ, ಹುಗುಳು, ಪುಗುಳು.
ಬೊಮ್ಮ (ದ್ಭ) ಬ್ರಹ್ಮ (ಸಂ).
ಬೊಮ್ಮಾಂಡ (ದ್ಭ) ಬ್ರಹ್ಮಾಂಡ (ಸಂ), ವಿಶ್ವ.

**ಬೊಮ್ಮೇತಿ** (ದ್ಭ) ಬ್ರಹ್ಮಹತ್ಯ (ಸಂ), ಬ್ರಾಹ್ಮಣನನ್ನು ಕೊಲ್ಲುವುದು; ದೆವ್ವ, ಪಿಶಾಚಿ.

**ಬೊಳ್ಳು** ಬೊಗಳು; ನಾಯಿಯ ವಿಚಿತ್ರವಾದ ಒಂದು ಕೂಗು.

**ಬೊಂಕು** ಸುಳ್ಳಾಡು; ಹರಟು; ಬಗಳು.

**ಬೊಂಗು** ಮೋರೆಯಲ್ಲಿ ಆಗುವ ಕಂದು, ಮುಡವೆ.

**ಬೊಂಡ** ಎಳನೀರು, ಸೀಯಾಳ.

**ಬೊಂಡಾಲ** ನಿರಿ ಚಲ್ಲಣ; ಪಠಾಣರು ತೊಡುವ ಸಡಿಲು ಚಲ್ಲಣ.

**ಬೊಂತೆ** ಕಂಥೆ, ಹರಕು ಬಟ್ಟೆಗಳನ್ನು ಸೇರಿಸಿ ಹೊಲಿದ ಹಚ್ಚಡ.

**ಬೊಂದರಿಗೆ** ಮೆತ್ತೆ, ಗಾದಿ, ಲೋಡು.

**ಬೊಂದಿ** ಶರೀರ; ಹುರಿಹಗ್ಗ, ಕಾತಿ, ನಾರಿನ ಕಟ್ಟು.

**ಬೊಂಪಳೆ** (ಬೊಂಪು), ನೊರೆ; ಸಾರ; ತಿರುಳು.

**ಬೊಂಬಾಳ** ದೊಡ್ಡದಾಗಿ ಉರಿಯುವ, ಬಲು ಪ್ರಕಾಶಕೊಡುವ.

**ಬೊಂಬುಳಿ** ಒಂದು ಬಗೆಯ ತಮಟೆ.

**ಬೊಂಬೆ** ಗೊಂಬೆ; ಪುತ್ಥಳಿ; ಆಟದ ಸಾಮಾನು.

**ಬೋಕಿ** ತಲೆಪರಟೆ, ಚಿಪ್ಪು; ತಿರುಪೆ ಪಾತ್ರೆ.

**ಬೋಗಾರ** (ದ್ಭ) ವ್ಯೋಕಾರ (ಸಂ), ಲೋಹಕಾರ, ಕಮ್ಮಾರ; ಜೈನರ ಒಂದು ಪಂಗಡ, ಶಂಖದಿಂದ ಬಳೆ ಮಾಡುವವ.

**ಬೋಗಿ** (ದ್ಭ) ಭೋಗಿ (ಸಂ), ಸುಖಿ; ಒಂದು ಜಾತಿ ನಾಟದಮರ, ಕಿರಿಬೋಗಿ, ಹೆಬ್ಬೋಗಿ

**ಬೋಚಿ** ಬೋಳ, ಬೋಳಿಸಿಕೊಂಡವ.

**ಬೋಡ** ಹಲ್ಲಿಲ್ಲದವ; ಹೆಡ್ಡ.

**ಬೋಣಿ** ದಿನದ ಮೊದಲಿನ ಕೆಲಸ; ಅಂಗಡಿಯಲ್ಲಿ ದಿನಕ್ಕೆಮೊದಲು ಆಗುವ ವ್ಯಾಪಾರ.

**ಬೋದಿಗೆ** (ಬೋದುಗೆ), ಕಂಬಗಳ ಮೇಲೆ ಜಂತಿಗಳಿಗೆ ಆಧಾರವಾಗಿಡುವ ತುಂಡು; ಸ್ತಂಭದ ಶಿಖರ.

**ಬೋದು** ಸೊಕ್ಕುವಿಕೆ, ಜೊಳ್ಳು ಮೈ; ಉಬ್ಬುವಿಕೆ.

**ಬೋಧ** ಜ್ಞಾನ; ಎಚ್ಚರಗೊಳ್ಳುವುದು.

**ಬೋಧಕ** ಬೋಧಕರ, ಎಚ್ಚರಗೊಳಿಸುವ, ತಿಳಿವು ಉಂಟುಮಾಡುವ; ಜ್ಞಾನಕೊಡುವ; ಶಿಕ್ಷಕ; ಸ್ತುತಿಪಾಠ.

**ಬೋಧನೆ** ಶಿಕ್ಷಣೆ, ಸೂಚನೆ; ಪಿತೂರಿ; ಪ್ರೇರಣೆ.

**ಬೋಧಾಯನ** ಪ್ರಾಚೀನ ಧರ್ಮಶಾಸ್ತ್ರಕಾರನೊಬ್ಬ.

**ಬೋಧಿ** ಅರಳಿ ಮರ, ಅಶ್ವತ್ಥ.

**ಬೋಧೆ** ಬೋಧನೆ, ತಿಳುವಳಿಕೆ; ಎಚ್ಚರ, ಸ್ಮೃತಿ.

**ಬೋನ** ಅನ್ನ, ಆಹಾರ; ಅನ್ನದಿಂದ ಮದ್ದಲೆಗೆ ಹಚ್ಚುವ ಕರ್ನ.

**ಬೋನು** ಗೂಡು; ಕರ್ಪು; ಪ್ರಾಣಿಗಳನ್ನು ಹಿಡಿಯುವ ಉರುಳು.

**ಬೋರ** ಮಾಸಲು ಬಣ್ಣ.

**ಬೋರಲು** (ಬೋರಲ), ಅಂಗಾತ, ನೆಕ್ಕನೆ; ಕವುಚಿ; ಡಬ್ಬ, ತಿರುವಿ.

**ಬೋರು** ಪಾತ್ರೆಗೆ ಬಾಯಿಹಾಕಿ ಸದ್ದುಮಾಡಿ ಕುಡಿ.

**ಬೋರೆ** ಬುಗರಿ ಹಣ್ಣು, ಬದರಿ ಹಣ್ಣು.

**ಬೋಲು** ಡೊಂಕು.

**ಬೋವ** ಬೋಯಿ; ಪಲ್ಲಕ್ಕಿ ಹೊರುವವ; ಗಾಡಿ ಹೊಡೆವವ, ಸಾರಥಿ.

**ಬೋಸರಿಸು** ಬೋಳಯಿಸು, ಸಮಾಧಾನಗೊಳಿಸು; ಕಪಟಪ್ರೇಮ ತೋರು; ಪ್ರೇರಿಸು.

**ಬೋಹರಿಸು** ಆವರಿಸು, ಸುತ್ತು.

**ಬೋಳ** ಮೃತ್ಯು; ಮೈ ನೋವು ತೆಗೆಯುವ ಒಂದು ಮದ್ದು; ಕೂದಲಿಲ್ಲದವ; ಬೋಡ.

**ಬೋಳಯಿಸು** (ಬೋಳಯ್ಸು), ಸಮಾಧಾನಪಡಿಸು; ಮರುಳುಮಾಡು; ಮಾತು ಒಪ್ಪುವಂತೆ ಮಾಡು; ಬೋಳವಿಸು; ಸವರು, ಚಪ್ಪರಿಸು.

ಬೋಳಿ ವಿಧವೆ, ತಲೆ ಬೋಳಿಸಿಕೊಂಡವಳು.

ಬೋಳು ಕೂದಲಿಲ್ಲದ; ಆಯುಧವಿಲ್ಲದ; ಕಾಂತಿಯಿಲ್ಲದ; ಬರಿದು.

ಬೋಳೆ ಮರದ ಬಾಣ; ಮೊನೆಯಾದ ಬಾಣ; ದೇವತೆ; ಹೆಡ್ಡ; ಸರಳ.

ಬೋಳೆಯ ದೇವತೆ.

ಬೋಂಡ ಕರಿದ ಒಂದು ತಿಂಡಿ, ಒಂದು ಜಾತಿಯ ಪಕೋಡಾ, ವಡೆ.

ಬೌದ್ಧ ಬುದ್ಧ ಸಂಬಂಧವಾದ, ಬುದ್ಧನ ಹೇಳಿಕೆಯನ್ನು ಅನುಸರಿಸುವವ; ಬುದ್ಧ.

ಬ್ರುತ (ದ್ಭ) ವ್ರುತ (ಸಂ), ನಿಯಮ, ಒಂದು ಬಗೆ ತಪಸ್ಸು; ಆಚರಣೆ, ನೋಹಿ, ದೀಕ್ಷೆ.

ಬ್ರುತಿ (ದ್ಭ) ವ್ರುತಿ (ಸಂ), ನಿಯಮಸ್ಥ; ಕಟ್ಟು ಕಟ್ಟಲೆಯಂತೆ ವರ್ತಿಸುವವ.

ಬೃಹಸ್ಪತಿ (ದ್ಭ) ದೇವತೆಗಳ ಗುರು. ಮನುಷ್ಯರ ಮತ್ತು ದೇವತೆಗಳ ಸುಖಕ್ಕಾಗಿ ಪ್ರಯತ್ನಿಸುವವನು. ಈತನು ಗುರುಗ್ರುಹವೆಂದು ಕಥೆಯಿದೆ. ಈತನ ಹೆಂಡತಿಯಾದ ತಾರೆಯನ್ನು ಸೋಮನು ಒಯ್ದನೆಂದೂ ಅವಳಲ್ಲಿ ಬುಧನೆಂಬ ಮಗನು ಹುಟ್ಟಿದನೆಂದೂ ಕಥೆ, ಬೃಹಸ್ಪತಿ (ಸಂ).

ಬ್ರಹ್ಮ ಜಗತ್ತಿನ ಸೃಷ್ಟಿಕರ್ತ; ವೇದ; ಸತ್ಯ; ತತ್ವ; ಜ್ಞಾನಸ್ವರೂಪ; ಬ್ರಾಹ್ಮಣ; ತ್ರಿಮೂರ್ತಿಗಳಲ್ಲಿ ಮೊದಲಿಗನು. ಜಗತ್ತಿನ ಸೃಷ್ಟಿಯು ಇವನ ಕೆಲಸ. ಈತನಿಗೆ ನಾಲ್ಕು ಮುಖಗಳಿವೆಯೆಂದು ಕಥೆ. ಈತನು ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದನು. ಬ್ರಹ್ಮನ ವಿಚಾರವಾದ ಕಥೆಗಳು ವೇದಕಾಲದ ಅನಂತರ ತೊಡಗುವುವು. ಬ್ರಾಹ್ಮಣಗಳಲ್ಲಿ ಇವನ ವಿಷಯವಾದ ಕೆಲವು ಕಥೆಗಳಿವೆ. ಬ್ರಹ್ಮನಿಗೆ—ವಿಧಿ, ಧಾತ್ರು, ಆದಿಕವಿ, ಪಿತಾಮಹ ಮೊದಲಾದ ಬಿರುದುಗಳಿವೆ.

ಬ್ರಹ್ಮಕಲ್ಪ ಬ್ರಹ್ಮನ ಯುಗ.

ಬ್ರಹ್ಮಕೂರ್ಚ ಒಂದು ವಿಧವಾದ ವ್ರುತ; ಇದರಲ್ಲಿ ಪಂಚಗವ್ಯವೇ ಆಹಾರ.

ಬ್ರಹ್ಮಚರ್ಯ ಉಪನಯನವಾದ ಬಳಿಕ ಬರುವ ಆಶ್ರಮ; ಅವಿವಾಹಿತನಾಗಿರುವ ನಿಯಮ; ವೇದಾಧ್ಯಯನ ಮಾಡುವ ಆಶ್ರಮ.

ಬ್ರಹ್ಮಚಾರಿ ಬ್ರಹ್ಮನನ್ನು ತಿಳಿಯಲು ನಿಯಮ ಹಿಡಿದವ; ಸ್ತ್ರೀಸಂಗ ತ್ಯಾಗಮಾಡಿದವ, ವಟು.

ಬ್ರಹ್ಮಣ್ಯ ಬ್ರಾಹ್ಮಣ, ವೇದ ರಕ್ಷಿಸುವವ; ವಿಷ್ಣು; ಬ್ರಾಹ್ಮಣನ ಧರ್ಮ; ಬ್ರಾಹ್ಮಣರ ಸಂಖ್ಯೆ.

ಬ್ರಹ್ಮದಾಯ ವೇದಾಧ್ಯಯನ ಮುಗಿದ ಬಳಿಕ ಅರಸು ಬ್ರಾಹ್ಮಣನಿಗೆ ಕೊಡುವ ದಾನ, ಕಾಣಿಕೆ.

ಬ್ರಹ್ಮಪುತ್ರು ಒಂದು ತೀಕ್ಷ್ಣ ವಿಷ; ಬ್ರಹ್ಮನ ಮಕ್ಕಳಾದ ಮರೀಚಿ; ನಾರದ; ಬಂಗಾಲದಲ್ಲಿ ಹರಿಯುವ ಒಂದು ನದಿ.

ಬ್ರಹ್ಮಯಜ್ಞ ಪರಮಾತ್ಮನಿಗಾಗಿ ಮಾಡುವ ಒಂದು ಯಜ್ಞ; ವೇದಪಠಣ.

ಬ್ರಹ್ಮರಂಧ್ರು ಬ್ರಹ್ಮನ ಕುರಿತು ಯೋಗವನ್ನು ಹೊಂದುವ ಒಂದು ಸ್ಥಾನ. ಇದು ತಲೆಯಲ್ಲಿದೆ ಎಂದು ಹೇಳುತ್ತಾರೆ.

ಬ್ರಹ್ಮರಾಕ್ಷಸ ದುಷ್ಕರ್ಮಿಯಾದ ಬ್ರಾಹ್ಮಣನು ಸತ್ತ ಬಳಿಕ ಹೊಂದುವ ಪ್ರೇತರೂಪ.

ಬ್ರಹ್ಮರ್ಷಿ ಬ್ರಹ್ಮನಿಗೆ ಸಮಾನನಾದ ಋಷಿ; ವಸಿಷ್ಠ ಮೊದಲಾದವರು.

ಬ್ರಹ್ಮಸೂ ಬ್ರಹ್ಮನನ್ನು ಹೆತ್ತವ, ವಿಷ್ಣು; ಅನಿರುದ್ಧ.

ಬ್ರಹ್ಮಸೂತ್ರು ಜನಿವಾರ, ಯಜ್ಞೋಪವೀತ; ಶಾರೀರಕವೆಂಬ ವೇದಾಂತ ಸೂತ್ರ.

ಬ್ರಹ್ಮಸ್ವ ಬ್ರಾಹ್ಮಣರ ಸೊತ್ತು.

ಬ್ರಹ್ಮಹತ್ಯ (ಬೊಮ್ಮೇತಿ), ಬ್ರಾಹ್ಮಣನ ವಧೆ.

ಬ್ರಹ್ಮಾಂಡ ಬ್ರಹ್ಮನಿಂದ ಹುಟ್ಟಿದ ಜಗತ್ತು; ವಿಶ್ವ; ಬಲು ದೊಡ್ಡ; ಒಂದು ಪುರಾಣ.

ಬ್ರಾಹ್ಮ ಬ್ರಹ್ಮನಿಗೆ ಸಂಬಂಧಿಸಿದುದು; ಬೆರಳಿನ ಬುಡ; ರಾಜರ ಧರ್ಮ; ಒಂದು ಪುರಾಣ.

ಬ್ರಾಹ್ಮಣ ವಿಪ್ರ, ದ್ವಿಜ; ನಾಲ್ಕು ವರ್ಣದವರಲ್ಲಿ ಇವನು ಶ್ರೇಷ್ಠನು. ಇವನು ಭೂಮಿಯಲ್ಲಿ ದೇವತೆಗಳಷ್ಟು ಮಾನ್ಯನು. ವೇದಾಧ್ಯಯನ, ಯಾಗ ಮೊದಲಾದುವು ಇವನ ಉದ್ಯೋಗಗಳು. ಮನುವು ಇವನಿಗೆ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳನ್ನು ವಿಧಿಸುತ್ತಾನೆ; ಬ್ರಾಹ್ಮಣರಿಗಾಗಿ ನಿರ್ಮಾಣವಾದ ಶಾಸ್ತ್ರಗ್ರಂಥಗಳು.

ಬ್ರಾಹ್ಮಣ್ಯ ಬ್ರಾಹ್ಮಣಿಕೆ; ಬ್ರಾಹ್ಮಣನ ಗುಣ.

ಬ್ರಾಹ್ಮಮುಹೂರ್ತ ಬ್ರಹ್ಮನೇ ದೇವತೆಯಾಗಿರುವ ಸಮಯ; ಬೆಳಗಿನ ಜಾವ.

ಬ್ರಾಹ್ಮಿ ಒಂದೆಲಗ, ತಿಮಿರೆ, ಗರ್ಗ; ಸಪ್ತಮಾತೃಕೆಯರಲ್ಲಿ ಒಬ್ಬಳು; ಒಂದು ಲಿಪಿ.

# ಭ

ಭ ನಕ್ಷತ್ರ; ಮೇಷಾದಿ ರಾಶಿಗಳು; ಶುಕ್ರಾಚಾರ್ಯ; ತುಂಬಿ; ಭ್ರಾಂತಿ; ಛಂದಸ್ಸಿನಲ್ಲಿ ಒಂದು ಗಣ; 27ರ ಸಂಖ್ಯೆ.

ಭಕ್ತ ಅನ್ನ; ಸೇವಕ, ವಿಶ್ವಾಸಿ; ರಾಗ; ವಿಭಾಗಿಸಲ್ಪಟ್ಟವ; ಆರಾಧಕರಲ್ಲಿ ತುಂಬ ಪ್ರೇಮ ಉಳ್ಳವ, ದೇವರು.

ಭಕ್ತಮಂಡ ಅನ್ನದಿಂದ ಹೊರಟ ತಿಳಿ.

ಭಕ್ತಿ ಸೇವೆ; ಆರಾಧನೆ; ಆಸಕ್ತಿ; ಉಪಚಾರ; ಅವಯವ ರಚನೆ; ಶ್ರದ್ಧೆ; ಹಿರಿಯರಲ್ಲಿ ತೋರಿಸುವ ಶ್ರದ್ಧೆ, ಪ್ರೇಮ.

—ಭಾವ ಭಕ್ತಿಯ ವಿವಿಧ ಬಗೆಗಳು.

—ಮಾರ್ಗ ಸೇವೆ, ಉಪಚಾರಗಳಿಂದ ದೇವರನ್ನು ಒಲಿಸುವ ಬಗೆ.

ಭಕ್ತಿಯೋಗ ದೇವರನ್ನು ಒಲಿಸುವ ದಾರಿಗಳಲ್ಲಿ ಭಕ್ತಿಯೇ ಮುಖ್ಯವಾಗಿ ಉಳ್ಳ ಹಾದಿ.

ಭಕ್ಷಕ ತಿನ್ನುವ.

ಭಕ್ಷಣ ತಿನ್ನುವಿಕೆ, ಊಟ.

ಭಕ್ಷಿಸು ತಿನ್ನು, ಊಟಮಾಡು.

ಭಕ್ಷ್ಯ ತಿನಿಸು; ಕಜ್ಜಾಯ; ತಿನ್ನುವಿಕೆ ಕುಡಿಯುವಿಕೆ; ವಿಶೇಷ ಬಗೆಯ ಆಹಾರ.

ಭಗ ಸೂರ್ಯ; ಅಷ್ಟೈಶ್ವರ್ಯ; ವೀರ್ಯ; ಕೀರ್ತಿ; ಲಕ್ಷ್ಮಿ; ಜ್ಞಾನ; ವೈರಾಗ್ಯ; ಸ್ತ್ರೀಯರ ಗುಪ್ತಾಂಗ; ಯತ್ನ; ಧರ್ಮ; ಮೋಕ್ಷ; ಸೌಭಾಗ್ಯ; ಕಾಂತಿ; ಚಂದ್ರ.

ಭಗಣ ನಕ್ಷತ್ರ; ನಕ್ಷತ್ರಗಳ ಗುಂಪು; ಆದಿ ಗುರುವುಳ್ಳ ಒಂದು ಗಣ.

ಭಗದತ್ತ ಕಾಮರೂಪದೇಶದ ರಾಜ; ನರಕಾಸುರನ ಮಗ. ಈತನು ಕೌರವರ ಪರವಾಗಿ ಕಾದಿದನು.

ಭಗವತ್ ಐಶ್ವರ್ಯಾದಿ ಗುಣಗಳುಳ್ಳ ಪರಮೇಶ್ವರ.

ಭಗವತಿ ದೇವತೆ; ಜಗನ್ಮಾತೆ.

ಭಗವದ್ಗೀತೆ ಕೃಷ್ಣನು ಅರ್ಜುನನಿಗೆ ರಣಭೂಮಿಯಲ್ಲಿ ಬೋಧಿಸಿದ ತತ್ವಮಾರ್ಗ.

ಭಗವಂತ ದೇವರು, ಪರಮಾತ್ಮ, ವಿಷ್ಣು.

ಭಗಂದರ ಜನನೇಂದ್ರಿಯ ಸಂಬಂಧವಾದ ಒಂದು ಬೇನೆ.

ಭಗಿನಿ ಸಹೋದರಿ, ಅಕ್ಕ ಅಥವಾ ತಂಗಿ.

ಭಗೀರಥ ಇಕ್ಷ್ವಾಕು ವಂಶದ ದಿಲೀಪರಾಯನ ಮಗ. ತನ್ನ ಕುಲದವರಾದ ಸಗರಪುತ್ರರನ್ನು ಉದ್ಧರಿಸಲು ಇವನು ತಪಸ್ಸು ಮಾಡಿ ದೇವಲೋಕದ ಗಂಗೆಯನ್ನು ಒಲಿಸಿ ಭೂಮಿಗೆ ಬರುವಂತೆ ಮಾಡಿದನು. ಶಿವನು ಈಕೆಯನ್ನು ಜಡೆಯಲ್ಲಿ ತಡೆದನೆಂದು ಕಥೆ.

— ಪ್ರಯತ್ನ ಭಗೀರಥನಂತೆ ಕಠಿಣ ತಪಸ್ಸು; ಕಠಿಣ ಸಾಧನೆ; ದೀರ್ಘ ಪ್ರಯತ್ನ.

ಭಗ್ನ ಮುರಿದ; ಒಡೆದ; ಸೋತ; ನಿರಾಶೆಗೊಂಡ; ಭಂಗಪಡೆದ.

ಭಜ್ ಭಾಗ; ಬೇಯಿಸು; ಸೇವೆಮಾಡು; ಪೂಜೆಮಾಡು.

ಭಜಕ ಪೂಜಿಸುವವ; ಹೊಗಳುವವ; ಸ್ತುತಿ ಮಾಡುವವ; ಪೂಜಾರಿ.

ಭಜನ (ಭಜನೆ), ಹಂಚುವಿಕೆ, ಪಾಲುಗಾರಿಕೆ; ಪೂಜೆ, ಸ್ತುತಿ; ಸೇವೆ.

ಭಜಿಸು ಆರಾಧಿಸು, ಪೂಜಿಸು.

ಭಟ ಯೋಧ, ಶೂರ, ವೀರ; ಕಲಿ; ಸೇವಕ, ಬಂಟ.

ಭಟ್ಟ ಸ್ತುತಿಪಾಠಕ ವೃತ್ತಿಯವ, ಭಟ್ಟಂಗಿ; ಸ್ವಾಮಿತ್ವ, ಒಡೆತನ; ಶಾಸ್ತ್ರಗಳನ್ನರಿತ ಪಂಡಿತ.

ಭಟ್ಟಾರಕ ಪೂಜೆಗೆ ಯೋಗ್ಯನಾದವ; ಸೂರ್ಯ; ಭಟ್ಟಂಗಿ.

ಭಟ್ಟಿನಿ ಒಡತಿ, ಸ್ವಾಮಿನಿ; ಬ್ರಾಹ್ಮಣ ಸ್ತ್ರೀ; ರಾಣಿ; ರಾಜನ ಪಟ್ಟವಾಗದ ಪತ್ನಿ.

ಭಡ್ ಬಲವಾಗಿ ಹೇಳು.

ಭಡಭಡ ಲಘುವಾಗಿ ಹೇಳು, ಬೇಗ ಹೇಳು.

ಭಣ್ ಹೇಳು.

ಭಣಿತ (ಭಣಿತಿ), ಹೇಳಿಕೆ.

ಭದ್ ಮಂಗಳಮಾಡು, ಶುಭಮಾಡು.

ಭದಂತ ಬೌದ್ಧ ಭೇದ.

ಭದ್ರ ಮಂಗಳ; ಬಂಗಾರ; ಮಹಾದೇವ; ಎತ್ತು; ಒಂದು ಸುಂದರ ಆನೆ; ಬಲರಾಮ; ರಾಮಚಂದ್ರ; ಮೇರು; ಸಾಧು, ಶ್ರೇಷ್ಠ.

ಭದ್ರಕಾಳಿ ಭದ್ರಾ, ಪಾರ್ವತಿ, ದುರ್ಗೆ.

ಭದ್ರಾವತಿ ಯೌವನಾಶ್ವನೆಂಬ ದೊರೆಯ ಪಟ್ಟಣ; ಶಿವಮೊಗ್ಗ ಜಿಲ್ಲೆಯ ಒಂದು ಉದ್ಯೋಗ ಕೇಂದ್ರ.

ಭದ್ರಾಶ್ವ ಒಂದು ಭೂಖಂಡ; ಒಂದು ದ್ವೀಪ.

ಭದ್ರಾಸನ ಮಂಗಳವಾದ ಆಸನ, ಸಿಂಹಾಸನ.

ಭದ್ರೆ ಕರಣ; ಮಂಗಲೆ.

ಭಪ್ಪರೆ ಭಳಿರೆ, ಭಾಪುರೆ, ಭಲೆ.

ಭಯ ಹೆದರಿಕೆ, ಭೀತಿ; ವಿಸ್ಮಯ, ಗಾಬರಿ.

ಭಯಂಕರ ಭಯವನ್ನು ಹುಟ್ಟಿಸುವುದು, ಭಯಕ್ಕೆ ಕಾರಣವಾದುದು.

ಭಯಾನಕ ಭೀತಿಕಾರಕ; ಹುಲಿ; ಕಲ್ಪನಾತೀತ; ರಾಹು.

ಭರ ಅತಿಶಯ, ಬಹಳ; ರಭಸ, ಉದ್ದೇಶ; ಕಾಪಾಡುವವ.

ಭರಣ ಪೋಷಣ, ಕಾಪಾಡುವಿಕೆ; ಸಂಬಳ; ಧರಿಸುವುದು; ಒಂದು ನಕ್ಷತ್ರ.

ಭರಣಿ ಒಂದು ನಕ್ಷತ್ರ; ಗಾಜಿನ ಪಾತ್ರೆ; ಪಿಂಗಾಣಿ ಇಲ್ಲವೆ ಜೇಡಿಮಣ್ಣಿನ ಪಾತ್ರೆ.

ಭರಣ್ಯ ವೇತನ, ಸಂಬಳ; ಕೂಲಿ.

ಭರತ ಒಬ್ಬ ಮುನಿ. ಈತನು ನಾಟ್ಯಶಾಸ್ತ್ರವನ್ನೂ ಆಲಂಕಾರ ಶಾಸ್ತ್ರವನ್ನೂ ಬರೆದು ಹೆಸರಾದನು; ದಶರಥನ ಒಬ್ಬ ಮಗ; ದುಷ್ಯಂತನ ಒಬ್ಬ ಮಗ; ಜಾಡ, ನೇಕಾರ; ನದಿ ಕಡಲುಗಳ ಉಬ್ಬರ.

— ಅಗ್ರಜ ರಾಮಚಂದ್ರ.

ಭರತಖಂಡ ಭಾರತವರ್ಷ, ಹಿಂದುಸ್ಥಾನ.

ಭರತಶಾಸ್ತ್ರ ನಾಟ್ಯಶಾಸ್ತ್ರ; ಭಾವ, ರಸ, ತಾಳಗಳ ವಿಚಾರವಾದ ಒಂದು ಗ್ರಂಥ.

ಭರದ್ವಾಜ ವೈದಿಕ ಋಷಿಯೊಬ್ಬ. ಈತನು ಬೃಹಸ್ಪತಿಯ ಮಗನು, ದ್ರೋಣನ ತಂದೆ; ಸಂಬಾರಕಾಗೆ, ಕುಪ್ಪುಳು, ಕಾಜಾಣ.

ಭರಬರಾಟಿ ಏರಿಕೆ, ಹೆಚ್ಚಳ.

ಭರಭಾರ ಹೆಚ್ಚಿನ ಭಾರ, ವಿಶ್ವಾಸ, ನಂಬಿಕೆ; ಅಭಯ.

ಭರವಸೆ (ಬರವಸೆ), ಗುಂಪು, ಸಮೂಹ; ಉತ್ಸುಕತೆ; ಆತುರತೆ.

ಭರಾಬ್ಬರಿ ವ್ಯವಸ್ಥೆ, ಕ್ರಮ; ಸಮ.

ಭರಿ ಉಳ್ಳ; ತುಂಬುವ; ಪಾಲಿಸುವ; ಬೆಳೆಯುವ; ಸೊಂಡಿಲು.

ಭರಿತ ತುಂಬಿದ; ಭರತ.

ಭರ್ಗ ಶಿವ; ಪ್ರಕಾಶವುಳ್ಳ ಪದಾರ್ಥ.

ಭರ್ತಾಘ ನೃತ್ಯ, ಗೀತ, ವಾದ್ಯ ಸೇರಿದ ಕೂಟ.

ಭರ್ತಿ ತುಂಬ, ತುಂಬಿದ; ಭರತ, ಕಡಲಿನ ಉಬ್ಬರ, ನೀರೇರುವಿಕೆ.

ಭರ್ತೃ ಸ್ವಾಮಿ, ಅಧಿಪತಿ, ರಾಜ; ಪಾಲಿಸುವವ; ಗಂಡ.

ಭರ್ತೃಹರಿ ಈತನು ವಿಕ್ರಮಾದಿತ್ಯನ ಸಹೋದರನೆಂದು ಹೇಳಿಕೆಯಿದೆ. ಈತನು ಶೃಂಗಾರ, ನೀತಿ ಮತ್ತು ವೈರಾಗ್ಯ ಶತಕ ಎಂಬ ಮೂರು ಶತಕಗಳನ್ನು ಬರೆದು ಹೆಸರಾದನು.

ಭರ್ತ್ಸನ ನಿಂದಿಸುವುದು; ಬಯ್ಯುವುದು.

ಭಲ ಭಲಾಭಲಾ, ಅಹಾ, ಭಳಿರೆ; ಒಳ್ಳೇದು, ಚೆನ್ನಾಯ್ತು.

ಭಲ್ಲ ದಾನ, ಕೊಡುವುದು; ಭಾಲೆ, ಈಟಿ, ಬರ್ಚಿ; ಕರಡಿ.

ಭಲ್ಲೂಕ (ಭಲ್ಲುಕ), ಕರಡಿ.

ಭವ ಜನ್ಮ, ಹುಟ್ಟು; ಸಂಸಾರ; ಶಿವ; ಆಗುವ, ಜನಿಸುವ; ಪ್ರಾಪಂಚಿಕ, ಸಂಸಾರಿಕ, ಲೌಕಿಕ.

—ಸಾಗರ ಸಂಸಾರವೆಂಬ ಕಡಲು.

ಭವಕ್ಷಯ ಸಂಸಾರ ನಾಶ; ಸಂಸಾರದ ತಾಪವನ್ನು ಕೊನೆಗಾಣಿಸಿದವ; ಪುನಃ ಹುಟ್ಟಲ್ಲದವ.

ಭವಣಿ (ದ್ಭ) ಭ್ರಮಣ (ಸಂ), ಸುತ್ತುವಿಕೆ; ಸುತ್ತಾಟ, ಬವಳಿಕೆ; ಕಷ್ಟ, ತೊಂದರೆ.

ಭವತ್ ತಮ್ಮ, ನಿಮ್ಮ.

ಭವತಿ ಗೌರವದಿಂದ ಸ್ತ್ರೀಯರನ್ನು ಸಂಬೋಧಿಸುವ ರೀತಿ.

ಭವದೀಯ ತಮ್ಮ, ತಮ್ಮನ, ತಮ್ಮನವನಾದ.

ಭವದೂರ ಸಂಸಾರಕ್ಕೆ ದೂರವಾಗಿದ್ದವ, ಹುಟ್ಟೂ ಸಾವೂ ಇಲ್ಲದವ.

ಭವನ ಮನೆ.

ಭವಭೂತಿ ಅರಮನೆ; ದೊಡ್ಡಮನೆ; ಹೆಸರಾದ ಒಬ್ಬ ಸಂಸ್ಕೃತ ಕವಿ.

ಭವರೋಗ ಜನನ ಮರಣವೆಂಬ ಬೇನೆ.

ಭವಾನಿ ಶಿವನ ಪತ್ನಿಯಾದ ಪಾರ್ವತಿ; ಶಿವಾಜಿಯ ಇಷ್ಟದೇವತೆ.

ಭವಾರಿ ಕಾಮ, ಮನ್ಮಥ.

ಭವಿ ಆಗುವಿಕೆ, ಇರುವಿಕೆ; ವೀರಶೈವನಲ್ಲದವ; ಪ್ರಾಪಂಚಿಕ, ಸಾವು ಹುಟ್ಟನಲ್ಲಿ ತೊಳಲುವವ.

ಭವಿತವ್ಯ ಅವಶ್ಯ ಆಗಬೇಕಾದುದು; ಭಾಗ್ಯ, ಪುಣ್ಯ; ಮುಂದಾಗುವುದು; ವಿಧಿ; ಮುಂದೆ.

ಭವಿಷ್ಯ ಭವಿಷ್ಯತ್ತು, ಮುಂದೆ ಬರಬೇಕಾದ ಕಾಲ; ಭಾಗ್ಯ, ಪುಣ್ಯ; ಕ್ಷೇಮ; ಗಳಿಗೆ.

ಭವ್ಯ ಸುಂದರ; ಶುಭ; ಸತ್ಯ; ಯೋಗ್ಯ; ಕಲ್ಯಾಣ, ಮಂಗಳ; ಮೋಕ್ಷಗತ ಜೀವಿ; ತಕ್ಕ; ಆಗಲು ಯೋಗ್ಯವಾದ; ಜೈನ ಧರ್ಮ.

ಭವ್ಯತೆ ಯೋಗ್ಯತೆ; ತಕ್ಕುದು, ಸಮವಾದುದು.

ಭಷಣ ಬಗುಳ್ಕೆ, ಬೊಗಳು, ನಾಯಿ.

ಭಸಿತ ಭಸ್ಮ, ಒಂದು ಬಗೆಯ ವಿಭೂತಿ.

ಭಸ್ಮ ಬೂದಿ; ಲೋಹಾಮ್ಲ.

ಭಂಗ ಮುರಿ, ಒಡೆ; ನಂಬಿಕೆ ತಪ್ಪಿಸು; ಹರಿಯುವುದು, ಹೋಗುವುದು; ಪರಾಜಯ; ತುಂಡು; ಭೇದ; ತೆರೆ, ಅಲೆ; ಕಪಟ; ಭಯ.

—ಇಸು ಒಡೆ; ಸೋಲಿಸು; ಮುರಿ.

ಭಂಗಿ ವಿಭಾಗ; ಕಪಟ; ಇಡುವಿಕೆ; ರಚನೆ; ದೊಡ್ಡ ತೆರೆ; ಭೇದ; ನೆವ; ಶರೀರವನ್ನು 'ವಿರಮಿಸುವ ಬಗೆ; ತೋಟ, ಜಾಡಮಾಲಿ.

ಭಂಗುರ ಉಲ್ಲೋಲಕಲ್ಲೋಲವಾದ; ಕಪಟ; ನದಿಯ ಅಲೆ; ನಾಶ; ಡೊಂಕಾದ, ಬಾಗಿದ.

ಭಂಜನೆ (ಭಂಜನ), ನಾಶಮಾಡುವಿಕೆ; ಮುರಿಯುವಿಕೆ; ತುಂಡುಮಾಡುವಿಕೆ.

ಭಂಡ ಅಶ್ಲೀಲವಾದ ಮಾತುಗಳನ್ನಾಡುವವ; ಒಬ್ಬ ರಕ್ಕಸ; ನಾಚಿಕೆ ಇಲ್ಲದವ.

ಭಂಡನ (ಬಂಡಣ), ಕಾಳಗ, ಯುದ್ಧ.

ಭಂಡಾಟ ಪೇಚು, ಪೇಚಾಟ, ಒದ್ದಾಟ.

ಭಂಡಾರ ಭಾಂಡಾಗಾರ, ಬೊಕ್ಕಸ, ಖಜಾನೆ.

ಭಂಡಾರಿ ಕೋಶಾಧಿಕಾರಿ.

ಭಸ್ಮಾಸುರ ಒಬ್ಬ ರಕ್ಕಸ. ಇವನು 'ತಾನು ಯಾರ ತಲೆಯನ್ನು ಮುಟ್ಟಿದರೂ ಸುಟ್ಟು ಹೋಗಬೇಕೆಂ'ಬ ವರವನ್ನು ಶಿವನಿಂದ ಪಡೆದನು. ಈ ವರಬಲದಿಂದ ಎಲ್ಲರನ್ನು ಹಿಂಸಿಸುತ್ತ ಬರಲು ವಿಷ್ಣುವು ಮೋಹಿನೀ ರೂಪತಾಳಿ, ತನ್ನ ತಲೆ ಮೇಲೆಯೇ ಕೈ ಇರಿಸಿಕೊಂಡು ಸಾಯುವಂತೆ ಮಾಡಿದನು.

ಭಳಿರೆ ಭಲರೆ, ಭಾಪುರೆ, ಭಲಾ.

ಭಾ ಪ್ರಕಾಶ, ಕಾಂತಿ; ಪ್ರಕಾಶಿಸು.

ಭಾಗ ಅಂಶ, ಪಾಲು; ಭಾಗ್ಯ, ಪುಣ್ಯ, ಅದೃಷ್ಟ; ಸ್ಥಳ; ಅರಮನೆ; ಪ್ರಾಂತ.

ಭಾಗಧೇಯ ಭಾಗ್ಯ, ಪುಣ್ಯ; ಅರಸನಿಗೆ ಕೊಡತಕ್ಕ ದ್ರವ್ಯ, ಕಂದಾಯ, ತೆರಿಗೆ, ಕರ; ದಾಯಾದ, ಸಪಿಂಡಿ.

ಭಾಗವತ ಭಗವಂತನ ಸಂಬಂಧದ; ವಿಷ್ಣುವನ್ನು ಕುರಿತಾದ ಒಂದು ಗ್ರಂಥ, ಪುರಾಣ; ವಿಷ್ಣುಭಕ್ತ; ಹಾಡುಗಾರ; ಕಥೆ ಹೇಳುವವ; ಸೂತ್ರಧಾರ; ಬಯಲಾಟದ ಹಾಡುಗಾರ; ವಿಷ್ಣುವನ್ನು ಕುರಿತ ಪುರಾಣ.

ಭಾಗಾಕಾರ ಭಾಗಾಹಾರ, ಭಾಗಕೊಡುವಿಕೆ.

ಭಾಗಿ ಪಾಲುಗಾರ; ಪಾಲುಳ್ಳವ; ಅದೃಷ್ಟಶಾಲಿ; ಯಜಮಾನ, ಒಡೆಯ.

—ದಾರ ಪಾಲುಗಾರ.

ಭಾಗಿನೇಯ ತಂಗಿಯ ಮಗ, ಸೋದರಿಯ ಮಗ.

ಭಾಗೀರಥಿ ಭಗೀರಥನ ತಪಸ್ಸಿಂದ ತರಲ್ಪಟ್ಟವಳು, ಗಂಗೆ.

ಭಾಗ್ಯ ಅದೃಷ್ಟ, ಪುಣ್ಯ; ಐಶ್ವರ್ಯ, ಸಂಪತ್ತು; ಶುಭಾಶುಭ ಸೂಚಕ; ಕರ್ಮಶಾಲಿ; ಪುಣ್ಯಶಾಲಿ; ಪಾಲುಗಾರ.

ಭಾಜಕ ವಿಭಜಿಸುವವ, ವಿಭಾಗಿಸುವ ಸಂಖ್ಯೆ (ಗಣಿತದಲ್ಲಿ).

ಭಾಜನ ಪಾತ್ರ; ಆಧಾರ, ಆಸರೆ; ಯೋಗ್ಯ, ತಕ್ಕ, ಪಡೆಯತಕ್ಕವ.

ಭಾಜ್ಯ ವಿಭಾಗಿಸಲ್ಪಡುವುದು; ಭಾಗಾಹಾರದಲ್ಲಿ ಭಾಗಿಸಲ್ಪಡುವ ಸಂಖ್ಯೆ.

ಭಾಟ ಕೂಲಿ, ಮಜೂರಿ, ವೇತನ, ಸಂಬಳ; ಬಾಡಿಗೆ; ಸೂಳೆಯ ಗಳಿಮೆ.

ಭಾಣ ಒಂದು ದೃಶ್ಯಕಾವ್ಯಭೇದ, ಏಕಾಂಕ ನಾಟಕದಲ್ಲಿನ ಒಂದು ರೀತಿ.

ಭಾದ್ರಪದ ಒಂದು ಚಾಂದ್ರಮಾನ ತಿಂಗಳು.

ಭಾನು ಸೂರ್ಯ, ಎಕ್ಕೆಗಿಡ; ಪ್ರಕಾಶ; ಸ್ವಾಮಿ, ಒಡೆಯ; ರಾಜ.

—ವಾರ ಆದಿತ್ಯ ವಾರ, ರವಿವಾರ.

ಭಾನುದತ್ತ ಶಕುನಿಯ ಸಹೋದರನೊಬ್ಬ.

ಭಾನುಮತಿ ಕೃತವೀರ್ಯನ ಮಗಳು; ಅಂಗೀರಸನ ಮಗಳು; ದುರ್ಯೋಧನನ ಹೆಂಡತಿ; ವಿಕ್ರಮಾದಿತ್ಯರಾಯನ ಹೆಂಡತಿ; ಸುಂದರಿ.

ಭಾಪು (ಭಾಪುರೆ), ಶಹಭಾಸ್, ಭಳಿರೆ.

ಭಾಮ (ಭಾಮೆ), ಕ್ರೋಧ, ಸಿಟ್ಟುಳ್ಳ ಸ್ತ್ರೀ.

ಭಾಮಿನಿ ಕೋಪಶೀಲಳಾದ ಹೆಂಗುಸು; ಹೆಂಗುಸು.

ಭಾಮಿನಿಷಟ್ಪದಿ ಆರು ಚರಣಗಳುಳ್ಳ ಒಂದು ಪದ್ಯಜಾತಿ.

ಭಾರ ಗುರುತ್ವ ಪರಿಮಾಣ, ತೂಕ, ಒಜ್ಜೆ; 20 ತೊಲೆ ತೂಕ; ಹೊರೆ, ಕಟ್ಟು; ಕಷ್ಟ.

ಭಾರಣೆ ಹೊರೆ; ಹೊಡೆತ.

ಭಾರತ ಭರತನ ವಂಶಧವರ ಕಥೆಯನ್ನು

ಹೇಳುವ ಒಂದು ಉದ್ಗ್ರಂಥ. ವೇದವ್ಯಾಸನು ಇದನ್ನು ಸಂಸ್ಕೃತದಲ್ಲಿ ಬರೆದನು; ಕನ್ನಡದಲ್ಲಿ ಕುಮಾರವ್ಯಾಸನು ಬರೆದನು; ಭಾರತವರ್ಷದ ಒಬ್ಬ ಅರಸು. ಈತನು ಪ್ರಥಮ ಮನ್ವಂತರದ ಕಾಲದವನು. ಈತನು ರಾಜ್ಯವನ್ನು ಬಿಟ್ಟು ಋಷಿಯಾದನು. ಆ ಕಾಲದಲ್ಲಿ ಒಂದು ಅನಾಥ ಜಿಂಕೆಯನ್ನು ಪಾಲಿಸಿ, ಕೊನೆಗೆ ಸಾಯುವಾಗ ಅದರಲ್ಲಿ ಮೋಹತಾಳಿದುದರಿಂದ, ಕೆಲವು ಜನ್ಮಾಂತರಗಳನ್ನು ಕಳೆಯಬೇಕಾಯಿತು. ಮುಂದೆ ಅವನು ವಿಷ್ಣುವಿನಿಂದ ಸದ್ಗತಿ ಪಡೆದನು; ಹಿಂದುಸ್ಥಾನ; ಹಿಂದೂದೇಶದ ನಿವಾಸಿ.

ಭಾರತಿ ವಾಕ್ಯ, ವಚನ; ವಾಗೀಶ್ವರಿ, ಸರಸ್ವತಿ; ಪಕ್ಷಿವಿಶೇಷ; ಅಲಂಕಾರದ ಒಂದು ರೀತಿ; ಸಂಸ್ಕೃತ ಭಾಷೆ.

ಭಾರತೀಯ (ಭಾರತೇಯ), ಭರತಖಂಡದ ನಿವಾಸಿ; ಭರತಖಂಡಕ್ಕೆ ಸಂಬಂಧಿಸಿದ.

ಭಾರವಿ ಕಿರಾತಾರ್ಜುನೀಯ ಕಾವ್ಯವನ್ನು ಬರೆದ ಒಬ್ಬ ಸಂಸ್ಕೃತ ಕವಿ.

ಭಾರಿ ಬಹಳ, ಅಧಿಕ, ದೊಡ್ಡ.

ಭಾರ್ಗವ ಭೃಗುವಂಶದವ.

ಭಾರ್ಗವಿ ಪಾರ್ವತಿ; ಲಕ್ಷ್ಮಿ; ಗರಿಕೆ(ಕರಿಕೆ).

ಭಾರ್ಯಾ (ಭಾರ್ಯೆ), ವಿಧಿಯುಕ್ತ ವಿವಾಹಿತಳಾದ ಹೆಂಡತಿ, ಪತ್ನಿ.

ಭಾಲನೇತ್ರ (ಫಾಳನೇತ್ರ), ಹಣೆಯಲ್ಲಿ ಕಣ್ಣುಳ್ಳವ, ಶಿವ.

ಭಾಲಾಂಕ ಹಣೆಯಲ್ಲಿ ಗುರುತುಳ್ಳವ, ಶಿವ; ಶಾಕಭೇದ; ಒಂದು ಆಯುಧ; ರೋಹಿತವೆಂಬ ಒಂದು ಜಾತಿ ಮೀನು.

ಭಾಲೆ ಬಲ್ಲೆ, ಬರ್ಚಿ, ಈಟಿ.

ಭಾವ ಇರುವಿಕೆ; ಹೃದಯದ ಅವಸ್ಥೆಯನ್ನು ಹೊರಗೆಡೆಹುವ ಮನೋವಿಕಾರ; ಸ್ವೇದ ಕಂಪನಾದಿ ವ್ಯಭಿಚಾರೀಭಾವ; ಅಭಿಪ್ರಾಯ; ಚಿತ್ರವಿಕಾರ; ಸ್ಥಿತಿ; ಸತ್ಯ; ಯೋಚನೆ; ತಾತ್ಪರ್ಯ; ಒಂದು ಸಂವತ್ಸರ; ವಿಟಾದಿಗಳನ್ನು ಕುರಿತು ಸಂಬೋಧನೆ; ಸೋದರಿಯ ಗಂಡ.

—ಕ (ಭಾವುಕ), ಮನೋವಿಕಾರ; ರಸಿಕ; ವಿದ್ವಾಂಸ; ಭಕ್ತ.

—ಜ್ಞ ಇಂಗಿತಜ್ಞ; ಪರರ ಅಂತಃಕರಣವನ್ನು ತಿಳಿಯಬಲ್ಲವ.

ಭಾವನ (ಭಾವನೆ), ಯೋಚನೆ; ಧ್ಯಾನ; ಪರ್ಯಾಲೋಚನೆ, ಎಣಿಕೆ; ಅಭಿಪ್ರಾಯ; ಸಂಕಲ್ಪ; ಇಚ್ಛೆ; ಔಷಧ ತಯಾರಿಯ ಒಂದು ಕ್ರಮ; ಚಿಮುಕಿಸುವುದು.

ಭಾವಿ ಆಗಲಿರುವುದು; ಮುಂದಾಗುವ, ಭವಿಷ್ಯತ್ತಿನ; ಉಳ್ಳ, ಕೂಡಿದ; ಸುಂದರ.

—ಕ ಸ್ವಾಭಾವಿಕ; ಉಳ್ಳ; ಶುಭಾಪೇಕ್ಷೆಯುಳ್ಳವ; ಮಂಗಲಕರ; ಒಂದು ಅಲಂಕಾರ ಜಾತಿ; ಭಕ್ತ, ಆಸ್ತಿಕ.

ಭಾವಿನಿ ಒಂದು ರೀತಿಯ ಮನೋವಸ್ಥೆ ಉಳ್ಳವಳು, ಸ್ತ್ರೀ; ಮುಂದಾಗತಕ್ಕದ್ದು.

ಭಾವಿಸು ಯೋಚಿಸು; ಮರ್ಯಾದಿಸು; ಪೂಜಿಸು; ತಿಳಿ.

ಭಾಷಣ ಮಾತಾಡು; ಮಾತು, ಮಾತುಗಾರಿಕೆ; ನುಡಿ; ಉಪನ್ಯಾಸ.

ಭಾಷಾಂತರ ತರ್ಜುಮೆ, ಅನುವಾದ, ಒಂದು ಭಾಷೆಯಿಂದ ಇನ್ನೊಂದಕ್ಕೆ ಪರಿವರ್ತನೆ.

ಭಾಷೆ ವಾಕ್ಯ; ಮಾತು, ನುಡಿ; ವ್ಯವಹಾರ; ಶಪಥ; ಭರವಸೆ.

ಭಾಷ್ಯ ಗ್ರಂಥಕ್ಕೆ ಸೂತ್ರರೂಪವಾದ ವ್ಯಾಖ್ಯಾನ; ಹೇಳತಕ್ಕ, ಹೇಳಲು ಯೋಗ್ಯವಾದ.

ಭಾಸ ಒಬ್ಬ ಹೆಸರಾದ ಸಂಸ್ಕೃತ ನಾಟಕಕಾರ; ವೇದಾಂತ ಸೂತ್ರಗಳಿಗೆ ಭಾಷ್ಯ ಬರೆದ ಒಬ್ಬ ಆಚಾರ್ಯ; ಪ್ರಕಾಶ;

ಗೋವು ಕಟ್ಟುವ ಜಾಗ, ಹಟ್ಟಿ; ನಾಯಿ; ಶುಕ್ರ; ಹೊಳೆ, ತೋಡು.

ಭಾಸುರ ಹೊಳೆಯುವ ಸ್ವಭಾವ ಉಳ್ಳ; ಸ್ಪಟಿಕ; ವೀರ; ಕುಷ್ಠರೋಗಕ್ಕೆ ಔಷಧ.

ಭಾಸ್ಕರ ಸೂರ್ಯ; ಅಗ್ನಿ; ವೀರ; ಗಣಿತ ಸಿದ್ಧಾಂತ ಶಾಸ್ತ್ರವನ್ನು ಬರೆದ ಪ್ರಾಚೀನ ಪಂಡಿತ.

—ಪ್ರಿಯ ಸೂರ್ಯನಿಗೆ ಪ್ರಿಯವಾದುದು, ಪದ್ಮರಾಗವೆಂಬ ಮಣಿ.

ಭಾಂಗಿ ಟಪ್ಪಾಲು ಮೂಲಕ ಕಳುಹುವ ಪಾರ್ಸೆಲು, ಕಟ್ಟು, ಗಂಟು.

ಭಾಂಡ ಗಡಿಗೆ, ಪಾತ್ರ; ಎಣ್ಣೆ ತುಂಬುವ ಪಾತ್ರ; ಮೂಲಧನ; ರಾಶಿ; ಖಂಡ, ಪರಿಚ್ಛೇದ, ಅಧ್ಯಾಯ.

ಭಾಂಡಾಗಾರ(ಸಂ) ಭಂಡಾರ(ದ್ಭ), ಖಜಾನೆ, ಕೋಶ.

ಭಿಕಾರಿ ಭಿಕ್ಷುಕ; ನಿರ್ಗತಿಕ.

ಭಿಕ್ಖು (ದ್ಭ) ಭಿಕ್ಷು (ಸಂ), ಬೌದ್ಧಸನ್ಯಾಸಿ.

ಭಿಕ್ಷ (ಭಿಕ್ಷೆ), ಬಿಕ್ಕೆ, ಬೇಡುವಿಕೆ, ಸಂಪಾದನೆ; ಪಡಿ.

ಭಿಕ್ಷಾಟನ ತಿರುಪೆ, ಬೇಡುವುದು, ತಿರಿವಿರಿ.

ಭಿಕ್ಷು ಫಕೀರ; ಸನ್ಯಾಸಿ; ಬಿಕ್ಕು, ಬೌದ್ಧ ಸನ್ಯಾಸಿ; ತಿರುಕ.

ಭಿತ್ತಿ ಗೋಡೆ.

ಭಿದೆ (ಭಿದಾ), ಒಡೆಯುವುದು, ಸೀಳುವುದು.

ಭಿದ್ಯ ಉಕ್ಕುವ ನದಿ, ನೆರೆ, ನೀರುಬ್ಬಿದ ಹೊಳೆ; ಭೇದಿಸಲು ಶಕ್ಯವಾದುದು.

ಭಿನ್ನ ಸೀಳಲ್ಪಟ್ಟ; ಬೇರೆ; ಪ್ರತ್ಯೇಕ; ಚೂರಾದ, ಮುರಿದ.

ಭಿಲ್ಲ (ಬಿಲ್ಲ), ಮ್ಲೇಚ್ಛ ಜಾತಿಭೇದ; ಒಂದು ಕಾಡುಜನ ಸಮುದಾಯ, ಶಬರ.

ಭಿಷಕ್ ರೋಗಕ್ಕೆ ಚಿಕಿತ್ಸೆಮಾಡುವವ, ವೈದ್ಯ, ಹಕೀಮ, ಡಾಕ್ಟರ.

ಭಿಸ್ಸೆ ಅನ್ನ, ಬೋನ.

ಭಿಂಡಿವಾಲ (ದ್ಭ) ಭಿಂದಮಾಲ (ಸಂ), ಒಂದು ಬಗೆಯ ಆಯುಧ; ಮಾರುದ್ದದ ಗುದಿಗೆ.

ಭಿಂದಮಾಲ ಕೈಯಿಂದ ಬಿಸಾಡುವ ಗುದಿಗೆ, ಬಡಿತಿಗೆ; ಬಾಣ.

ಭೀ ಭಯಪಡು, ಭಯ.

ಭೀಕರ ಭಯಂಕರ, ಭಯ ಹುಟ್ಟಿಸುವ.

ಭೀತಿ ಭಯ, ಹೆದರಿಕೆ.

—ಶಂಕೆ ಭಯದಿಂದ ಉಂಟಾದ ಅನುಮಾನ.

ಭೀತೆ ಭಯಗೊಂಡವಳು.

ಭೀಮ ಭಯಕ್ಕೆ ಕಾರಣವಾದುದು; ಭಯಾನಕ ರಸ; ದುರ್ಗಾದೇವಿ; ಯಮ; ವಿದರ್ಭ ದೇಶದ ಭೀಷ್ಮಕನೆಂಬ ಒಬ್ಬ ಅರಸು; ದಮಯಂತಿಯ ತಂದೆ; ಪಾಂಡವರಲ್ಲಿ ಎರಡನೆಯವನು. ಈತನ ಮತ್ತು ಕೌರವನ ವೈರವೇ ಭಾರತಯುದ್ಧಕ್ಕೆ ಬಲವಾದ ಕಾರಣ. ಈತನು ದುಡುಕಿ. ಆದರೆ ಬಹು ಬಲಶಾಲಿ. ಇವನ ಶೀಲವನ್ನು ಚೆನ್ನಾಗಿ ತಿಳಿದ ದ್ರೌಪದಿಯು, ದುಶ್ಶಾಸನ ಕೌರವರ ಮೇಲಿನ ಸೇಡನ್ನು ಇವನ ಮೂಲಕ ತೀರಿಸಿಕೊಳ್ಳುವಳು. ಭೀಮನು ವಾಯುವಿನ ಆಶೀರ್ವಾದದಿಂದ ಹುಟ್ಟಿದನೆಂದು ಕಥೆ.

ಭೀರು ಹೆದರಿರುವವ, ಹೇಡಿ, ಅಂಜುಬುರುಕ.

ಭೀಷಣ ಭಯ, ಭಯಂಕರ; ಭಯಾನಕ ರಸ; ಒಬ್ಬ ರಾಕ್ಷಸ.

ಭೀಷ್ಮ ಶಂತನು ಚಕ್ರವರ್ತಿಯ ಮಗ. ಈತನು ತನ್ನ ತಂದೆಯ ಪ್ರಣಯವು ಸಫಲವಾಗಲೆಂದು ತಾನು ಅವಿವಾಹಿತನಾಗಿ ಉಳಿದನು. ಭಾರತ ಯುದ್ಧದಲ್ಲಿ ಕೌರವರ ಪರವಾಗಿ ಕಾದಿದನು. ಆಗಿನ ಕಾಲದ ಅತಿ ದೊಡ್ಡ ವೀರನೂ ಜ್ಞಾನಿಯೂ ಆಗಿದ್ದನು; ಭಯಂಕರ; ಭಯಾನಕ ರಸ.

**ಭೀಷ್ಮಪಂಚಕ** ಕಾರ್ತಿಕಮಾಸದಲ್ಲಿ ಮಾಡುವ ಒಂದು ವ್ರತ.
**ಭುಕ್ತ** ಉಂಡ, ತಿಂದ; ಊಟ.
**ಭುಕ್ತಿ** ಆಹಾರ; ಊಟ; ಸುಖ.
**—ಪ್ರದ** ಸ್ವಲ್ಪ ಪ್ರಯಾಸದಿಂದ ಆಹಾರವಾಗುವುದು; ಪಚ್ಚೆ ಹೆಸರು.
**ಭುಗ್ನ** ಮುರಿದ; ರೋಗಾದಿಗಳಿಂದ ಬಗ್ಗಿದ ಮೈ; ಸೊಟ್ಟಾದ.
**ಭುಜ** ತೋಳು, ರಟ್ಟೆ; ಹಸ್ತ; ಒಂದು ಕ್ಷೇತ್ರದ ಸುತ್ತಲಿನ ರೇಖೆ; ಆನೆಸೊಂಡಿಲು; ಮರದ ಗೆಲ್ಲು; ಕಾಪಾಡುವವನ, ರಾಜ.
**—ಶಿರ** ತೋಳಿನ ತುದಿ, ಹೆಗಲು.
**ಭುಜಗ** ಡೊಂಕಾಗಿ ಚಲಿಸುವುದು, ಹಾವು; ಆಶ್ಲೇಷಾ ನಕ್ಷತ್ರ.
**ಭುಜವಲಯ** ತೋಳ್ಸರಿಗೆ, ಒಂಕಿ.
**ಭುಜಂಗ**(ಭುಜಗ),ಡೊಂಕಾಗಿಚಲಿಸುವುದು, ಸರ್ಪ; ವಿಟ, ಜಾರ; ಆಶ್ಲೇಷಾ ನಕ್ಷತ್ರ.
**ಭುಜಿಸು** (ಭುಂಜಿಸು), ಉಣ್ಣು, ತಿನ್ನು.
**ಭುಜಸ್ಫಾಲನ** ಭುಜ ತಟ್ಟುವುದು; ಸಡ್ಡು ಹೊಡೆಯುವುದು.
**ಭುಲ್ಲವಣೆ** ಉಬ್ಬುವಿಕೆ; ಮೋಹ; ಅಬ್ಬರ, ಸಂಭ್ರಮ.
**ಭುಲ್ಲವಿಸು** ಸಂತೋಷದಿಂದ ಉಬ್ಬು, ಸಂತೋಷಪಡು.
**ಭುವನ** ಆಕಾಶ; ಲೋಕ; ಪ್ರಪಂಚ, ಭೂಮಿ; ನೀರು.
**ಭುವನಕುಕ್ಷಿ** ಲೋಕವೇ ಹೊಟ್ಟೆಯಾಗಿರುವವ, ವಿಷ್ಣು; ನೀರುಳ್ಳುದು, ಸರೋವರ.
**ಭುವನತ್ರಯ** ಮೂರು ಲೋಕಗಳು, ಸ್ವರ್ಗ–ಮರ್ತ್ಯ–ಪಾತಾಳ.
**ಭುವರ್ಲೋಕ** ಸ್ವರ್ಗಕ್ಕೂ, ಭೂಮಿಗೂ ನಡುವಣ ಲೋಕ.
**ಭುಂಜಿಸು** ಊಟಮಾಡು, ತಿನ್ನು.
**ಭೂ** ಭೂಮಿ, ನೆಲ.
**ಭೂಕಂಪ** ಭೂಮಿ ಅದುರುವುದು; ನೆಲದ ನಡುಕು.
**ಭೂಕೇಶ** ಭೂಮಿಯ ಕೂದಲಂತಿರುವುದು, ಆಲದ ಬೀಳಲು (ಬೇರು); ಹಾವಸೆ.
**ಭೂಗತ** ಭೂಮಿಯ ಒಳಕ್ಕೆ ಬಿದ್ದ.
**ಭೂಗೋಲ** ಗೋಲಾಕಾರದ ಭೂಮಿ; ಭೂಮಿಯ ಹೊರಮೈಯ ವಿಚಾರವಾದ ಶಾಸ್ತ್ರ.
**ಭೂಜ** ಭೂಮಿಯಲ್ಲಿ ಹುಟ್ಟಿದುದು, ಮರ.
**ಭೂಜಾತೆ** ಸೀತೆ, ಜಾನಕಿ. ಈಕೆ ನೇಗಿಲಿನ ಸಾಲಿನಲ್ಲಿ ಜನಕರಾಯನಿಗೆ ಸಿಕ್ಕಿದಳು.
**ಭೂತ** ಪ್ರಾಣಿ; ಭೂತತ್ವ, ಪಂಚಭೂತಗಳು; ಗಣ, ಪಿಶಾಚಿ, ದೆವ್ವ; ದೊಡ್ಡದು, ಅದ್ಭುತವಾದುದು; ಉಂಟಾದ.
**ಭೂತಕಾಲ** ಹಿಂದೆ ಸಂದ ಸಮಯ.
**ಭೂತದಯೆ** ಪ್ರೇಮ, ಪ್ರಾಣಿದಯೆ, ಜೀವದಯೆ.
**ಭೂತನಾಶನ** ರುದ್ರಾಕ್ಷಿ; ಸಾಸಿವೆ; ಗೇರು.
**ಭೂತಪೂರ್ವ** ಹಿಂದೆ ನಡೆದ.
**ಭೂತಬಲಿ** ಪ್ರಾಣಿಗಳಿಗೆ ಕೊಡುವ ಹವಿಸ್ಸು.
**ಭೂತಭವನ** ಪಂಚಭೂತಗಳನ್ನು ನಿರ್ಮಿಸಿದವ, ವಿಷ್ಣು.
**ಭೂತಯಜ್ಞ** ವಾಯಸ ಬಲಿ; ನಿತ್ಯ ಯಜ್ಞಗಳಲ್ಲಿ ಒಂದು.
**ಭೂತಲ** ಭೂಮಂಡಲ, ಭೂಮಿ; ಪಾತಾಳ.
**ಭೂತಾತ್ಮ** ಪರಬ್ರಹ್ಮ, ಪರಮಾತ್ಮ.
**ಭೂತಿ** ವಿಭೂತಿ; ಸಂಪತ್ತು; ಅಷ್ಟಸಿದ್ಧಿಗಳು; ಜನ್ಮ, ಹುಟ್ಟು.
**ಭೂದಾರ** ಭೂಮಿಯನ್ನು ಸೀಳುವುದು, ಕಾಡುಹಂದಿ.
**ಭೂದೇವ** ಭೂಮಿಯಲ್ಲಿ ದೇವತೆಯಂತೆ ಪೂಜ್ಯನಾದವ, ಬ್ರಾಹ್ಮಣ.

ಭೂದೇವಿ ಭೂಮಿಯೆಂಬ ದೇವತೆ; ವಿಷ್ಣುವಿನ ಪತ್ನಿ.
ಭೂಧರ ಭೂಮಿಗೆ ಆಧಾರವಾದುದು, ಪರ್ವತ, ಬೆಟ್ಟ; ರಾಜ.
ಭೂನಾಗ ಎರೆಹುಳು, ನಕ್ಕುಳ, ಮಳೆಹುಳ.
ಭೂಪ ಭೂಮಿಯನ್ನು ರಕ್ಷಿಸುವವ, ಅರಸು.
ಭೂಪಾಲಿ ಒಂದು ರಾಗ ವಿಶೇಷ; ಒಂದು ದೇಶ; ಹರ.
ಭೂಪ್ರದಕ್ಷಿಣ ಭೂಮಿಗೆ ಸುತ್ತುಬರುವುದು; ಕ್ಷೇತ್ರಯಾತ್ರೆ.
ಭೂಭುಜ ಅರಸು, ರಾಜ.
ಭೂಮ ಭೂಮಿ; ಪ್ರಪಂಚ.
ಭೂಮಂಡಲ ಮಂಡಲಾಕಾರದ ಭೂಮಿ, ಭೂಗೋಲ.
ಭೂಮಿ ಪೃಥಿವೀ; ನಾಲಗೆ; ಯೋಗಿಯ ಒಂದು ಅವಸ್ಥೆ; ಒಂದು ಎಂಬ ಸಂಖ್ಯೆ.
ಭೂಮಿಕೆ ರಚನೆ; ಭೂಮಿ; ಕಥಾಸಾರ; ಅವತರಣಿಕೆ; ಮನಸ್ಸಿನ ಒಂದು ಅವಸ್ಥೆ; ಉಪ್ಪರಿಗೆ; ಮೂಲಪ್ರತಿ; ನಾಟಕದ ಪಾತ್ರ.
ಭೂಮಿಜ ಭೂಮಿಯಲ್ಲಿ ಹುಟ್ಟಿದುದು, ಮಂಗಳ ಗ್ರಹ; ನರಕಾಸುರ; ಮರ.
ಭೂಮಿಜೆ ಭೂಮಿಯಲ್ಲಿ ಹುಟ್ಟಿದವಳು, ಸೀತೆ.
ಭೂಯಃ ಬಹಳ; ತಿರುಗಿ.
ಭೂರಿ ಬಂಗಾರ; ಶಿವ; ಇಂದ್ರ; ವಿಷ್ಣು; ಬ್ರಹ್ಮ; ಚಂದ್ರವಂಶದ ಸೋಮದತ್ತನ ಮಗ; ಬಹಳ; ಉದಾರವಾಗಿ ಕೊಟ್ಟದ್ದು; ಶ್ರಾದ್ಧದ ಊಟ.
ಭೂರಿಮಾಯು ಬಹು ಕಪಟಮಾದುದು, ನರಿ.
ಭೂರಿಶ್ರವ ಸೋಮದತ್ತನ ಮಗ. ಈತನು ಭಾರತ ಯುದ್ಧದಲ್ಲಿ ಕಾದಿದನು.
ಭೂರುಹ ಮರಗಿಡ.
ಭೂಲೋಕ ಭೂಮಿ, ಇಳೆ.
ಭೂಶಿರ ಕಡಲಿನೊಳಗೆ ಚಾಚಿದ ಯಾವುದೇ ಭೂಖಂಡದ ಕೊನೆ.
ಭೂಷಣ ಅಲಂಕಾರ, ತೊಡುಗೆ.
ಭೂಷಾಮಣಿ ರತ್ನಗಳಿಂದ ಆದ ಆಭರಣ.
ಭೂಷಿಸು ಅಲಂಕರಿಸು; ಅಲಂಕಾರಪ್ರಾಯನಾಗು; ಸಿಂಗರಿಸು.
ಭೂಸುತ ಕುಜ, ಮಂಗಳ ಗ್ರಹ.
ಭೂಸುರ ಭೂಮಿಯಲ್ಲಿ ದೇವತೆಯಂತಿರುವವ, ಬ್ರಾಹ್ಮಣ.
ಭೃ ಕಾಪಾಡು, ಪಾಲಿಸು; ಧರಿಸು.
ಭೃಕುಟಿ ಹುಬ್ಬುಗಂಟು; ಭ್ರೂಭಂಗಿ.
ಭೃಗು ವೈದಿಕಯುಗದ ಒಬ್ಬ ಋಷಿ; ಪ್ರಜಾಪತಿಗಳಲ್ಲಿ ಒಬ್ಬನು, ಈತನಿಂದ ಭಾರ್ಗವ ಕುಲ ತೊಡಗಿತು. ಈತನು ದಕ್ಷನ ಯಾಗ ಕರ್ತನಾಗಿದ್ದಂತೆಯೂ ಒಮ್ಮೆ ವಿಷ್ಣುವನ್ನು ತುಳಿದಂತೆಯೂ ಕಥೆ ಇದೆ; ಶುಕ್ರ ಗ್ರಹ; ಪರ್ವತದ ಇಳಿಜಾರು; ಜಮದಗ್ನಿ; ಶಿವ; ಭೃತ್ಯ, ಸೇವಕ.
ಭೃತ್ಯ ಸೇವಕ.
—ಕ ಸಂಬಳಕ್ಕೆ ಕೆಲಸಮಾಡುವವ, ಜೀತದ ಆಳು.
ಭೃತಿ ಸಂಬಳ; ಪಾಲನೆ, ಪೋಷಣೆ; ಅಮೌಲ್ಯ.
ಭೃತ್ಯ ದಾಸ, ಗುಲಾಮ; ಸೇವಕ; ಸಂರಕ್ಷಿಸಲ್ಪಡತಕ್ಕವ.
ಭೃಷ್ಟ ಹುರಿದ, ಕರಿದ; ಒಣಗಿದ.
ಭೃಂಗ (ಫ) ಬಿಂಗ (ದ್ಭ), ಭ್ರಮರ, ತುಂಬಿ; ಕಳಿಂಗಪಕ್ಷಿ; ಜಾರ; ರಸಬುರುಡೆ.
ಭೃಂಗಾರ(ಸಂ) ಬಿಂಗಾರಿ (ದ್ಭ), ಚಿನ್ನದ ಗಿಂಡಿ; ರಸಬುರುಡೆ.
ಭೃಂಗಿ ಶಿವನ ದ್ವಾರಪಾಲಕ, ಭೃಂಗೀನಾಥ.
ಭೆಟ್ಟಿ ಸಂಧಾನ, ಒಬ್ಬರು ಇನ್ನೊಬ್ಬರನ್ನು ಸೇರುವುದು; ಕೂಟ, ಬೇಟ.
ಭೇಕ ಕಪ್ಪೆ; ಮೋಡ.

ಭೇಕಿ ಹೆಣ್ಣು ಕಪ್ಪೆ; ಸಣ್ಣ ಕಪ್ಪೆ.
ಭೇಟಿ ಭೆಟ್ಟಿ, ಸಂದರ್ಶನ.
ಭೇದ ಬೇರೆಮಾಡುವುದು; ಒಡೆಯುವುದು; ಸೀಳುವುದು; ವ್ಯತ್ಯಾಸಗೊಳಿಸುವುದು; ವ್ಯತ್ಯಾಸ, ಅಂತರ.
ಭೇದಿಸು ಒಡೆ, ಸೀಳು; ಬೇರೆಗೊಳಿಸು.
ಭೇರಿ ದೊಡ್ಡ ನಗಾರಿ, ದೋಲು, ದುಂದುಭಿ.
ಭೇರುಂಡ ಗಂಡಭೇರುಂಡ; ಎರಡು ತಲೆಯ ಒಂದು ಹಕ್ಕಿ. ಇದು ಆನೆ ಮತ್ತು ಸಿಂಹಗಳ ವೈರಿಯೆಂದು ಕಥೆ.
ಭೇಷಜ ರೋಗ ಪರಿಹರಿಸುವುದು, ಔಷಧ, ಮದ್ದು; ವೈದ್ಯ.
ಭೈರವ ಭಯಂಕರ; ಭಯ; ಭಯಾನಕ; ಶಿವ, ಶಿವನದೊಂದು ಅವತಾರ; ಒಂದು ರಾಗಭೇದ.
ಭೈರವಿ ಚಾಮುಂಡಿ, ಶಕ್ತಿ; ತಂತ್ರ ಶಾಸ್ತ್ರ ವರಿತ ಸನ್ಯಾಸಿನಿ,ಭೈರವನ ಉಪಾಸಕಳು; ಒಂದು ರಾಗ.
ಭೈರಾಗಿ(ದ್ಭ)ವೈರಾಗಿ(ಸಂ), ವಿರಕ್ತ;ಸನ್ಯಾಸಿ.
ಭೈಷಜ್ಯ ಮದ್ದು, ಔಷಧ.
ಭೋಕ್ತವ್ಯ ಅನುಭವಿಸತಕ್ಕುದು.
ಭೋಕ್ತೃ (ಭೋಕ್ತಾರ), ಉಣ್ಣತಕ್ಕವ; ಅನುಭವಿಸುವವ.
ಭೋಗ ಅನುಭವ; ಸುಖಾನುಭವ; ಪಾಲನೆ; ಸರ್ಪನ ಹೆಡೆ; ಸರ್ಪನ ಶರೀರ; ದ್ರವ್ಯ; ಆಹಾರ; ಸರ್ಪ; ಶರೀರ; ರತಿಕ್ರೀಡೆ.
ಭೋಗವತಿ ನಾಗಲೋಕ; ಪಾತಾಳ ಗಂಗೆ ಎಂಬ ನದಿ. ಇದರಲ್ಲಿ ಬಹಳ ಸರ್ಪಗಳಿವೆ.
ಭೋಗಷಟ್ಪದಿ ಆರು ಚರಣಗಳುಳ್ಳ ಒಂದು ಪದ್ಯ ಜಾತಿ.
ಭೋಗಾವತಿ ಅಧೋಲೋಕ, ಪಾತಾಳ; ನಗರ; ನದಿ; ಮಹಾಲಕ್ಷ್ಮಿ.
ಭೋಗಿ ಸರ್ಪ; ರಾಜ; ಗ್ರಾಮದೊಡೆಯ; ಕ್ಷೌರಕ; ಸುಖವುಳ್ಳವ; ಒಂದು ತಮಿಳು ಹಬ್ಬ.
ಭೋಗಿನಿ ಅರಸನ ಸೂಳೆ; ಸರ್ಪಿಣಿ.
ಭೋಗಿಸು ಸುಖಪಡು; ಅನುಭವಿಸು; ಸುರತ ಮಾಡು.
ಭೋಗ್ಯ ಅನುಭವಿಸತಕ್ಕ—ಧನ, ಧಾನ್ಯ, ಸ್ತ್ರೀ ಮೊದಲಾದುವು.
ಭೋಗ್ಯಾದಿ ಅನುಭವಿಸಲು ಅಧಿಕಾರವುಳ್ಳ.
ಭೋಜ ಒಂದು ದೇಶ; ಧಾರಾಪುರದ ದೊರೆ ಭೋಜರಾಜ. ಈತನು ಕಾಳಿದಾಸನನ್ನು ಆಸ್ಥಾನದಲ್ಲಿರಿಸಿಕೊಂಡಿದ್ದನು; ಮಾಳವದ ದೊರೆ ಒಬ್ಬ; ಭೋಜದೇಶದ ಕೃತವರ್ಮ; ವಿಷ್ಣು.
ಭೋಜಕಟ ಬೀರಾರಿನ ಒಂದು ಊರು, ಈಗಣ ಎಲಿಚ್‌ಪುರ.
ಭೋಜನ ಊಟ.
ಭೋಜ್ಯ ಉಣ್ಣತಕ್ಕ ವಸ್ತು.
ಭೋರನೆ ಶೀಘ್ರವಾಗಿ, ಬೇಗ; ಬೋರೆಂದು ಸದ್ದುಮಾಡಿ.
ಭೋರ್ಗರೆ ಭೋ—ಎಂದು ಮೊರೆ.
ಭೋಷ ರೀತಿ, ಬಗೆ; ಗೌರವದ ನಡೆ.
ಭೋಸಡಿ ಸ್ತ್ರೀ ಯೋನಿ; ವ್ಯಭಿಚಾರಿಣಿ, ಹೀನೆ.
ಭೌತ ಹಿಂದಾದ; ಭೂತಗಳಿಗೆ ಸಂಬಂಧಿಸಿದ. —ಶಾಸ್ತ್ರ ವಿಜ್ಞಾನ ಶಾಸ್ತ್ರಭೇದ. ಇದು ಪ್ರಕೃತಿಯ ಶಕ್ತಿಗಳನ್ನು ಕುರಿತು ವಾದಿಸುವುದು.
ಭೌತಿಕ ಪಂಚಭೂತಗಳಲ್ಲಿ ಯಾವುದರಿಂದಾಗಲೀ ಆದುದು; ವ್ಯಾಧಿ; ಉಪದ್ರವ, ಪೀಡೆ; ಮರಗಿಡ; ಭೂತಗಳ ವಿಚಾರ; ವಿಜ್ಞಾನದ.
ಭೌಮ ಭೂಮಿಗೆ ಸಂಬಂಧಿಸಿದ್ದು; ಮಂಗಳ ಗ್ರಹ; ನರಕಾಸುರ; ನೀರು; ಆಕಾಶ; ಜನಕನ ಮಗಳು ಸೀತೆ; ಅತ್ರಿ ಮುನಿ.
ಭೌರಿಕ ಕೋಶಾಧಿಕಾರಿ, ಖಜಾನ್ಜಿ.

ಭ್ರಮ (ಭ್ರಮೆ), ತಪ್ಪು ತಿಳಿವಳಿಕೆ; ಒಂದನ್ನು ಇನ್ನೊಂದಾಗಿ ತಿಳಿಯುವುದು; ಮಂಕು; ನೀರು ಹೋಗುವ ಸ್ಥಾನ; ಸುತ್ತಾಟ.
ಭ್ರಮಣ (ಭ್ರಮಣೆ) ತಿರುಗುವಿಕೆ, ಸುತ್ತುವಿಕೆ.
ಭ್ರಮರ ಜೇನಿಗಾಗಿ ತಿರುಗುವುದು, ತುಂಬಿ; ತಿಗುರಿ.
—ಕ ತುಂಬಿಯಂತಹ ಮುಂಗುರಳು, ಜುಲ್ಪು.
ಭ್ರಮಿಸು ಒಂದನ್ನು ಇನ್ನೊಂದಾಗಿ ತಿಳಿ; ಮರಳುಗೊಳು; ಸುತ್ತಾಡು.
ಭ್ರಷ್ಟ ಕೆಳಗೆ ಬಿದ್ದ; ಪತಿತ, ನೀಚ, ಕೆಡುಕ.
ಭ್ರಾಜ ಪ್ರಕಾಶ.
ಭ್ರಾಜಿಷ್ಟ ಪ್ರಕಾಶಿಸುವ.
ಭ್ರಾತೃ ಸಹೋದರ, ಅಣ್ಣ, ತಮ್ಮ.
ಭ್ರಾಮಕ ತಪ್ಪು ತಿಳುವಳಿಕೆ, ಹುಚ್ಚು; ತಪ್ಪು ತಿಳುವಳಿಕೆ ಉಂಟುಮಾಡುವ; ನರಿ; ಅಯಸ್ಕಾಂತ, ಸೂಜಿಕಲ್ಲು.
ಭ್ರಾಂತ ಸುತ್ತುವ; ತಪ್ಪು ತಿಳುವಳಿಕೆಯುವ, ಮರುಳ, ಹುಚ್ಚ.
ಭ್ರಾಂತಿ ಮರುಳು, ಭ್ರಮೆ, ಮತಿ ವಿಕಾರ, ಹುಚ್ಚು; ಸುತ್ತಾಟ, ತಿರುಗಾಟ.
ಭ್ರುಕುಟಿ ಭ್ರೂಕೋಪ,ಹುಬ್ಬುಗಂಟಿಕ್ಕುವಿಕೆ
ಭ್ರೂ ಹುಬ್ಬು.
ಭ್ರೂಣ ನಂಬಿಕೆ ಹುಟ್ಟಿಸು, ಆಶೆಮಾಡು; ಸ್ತ್ರೀಯ ಗರ್ಭದೊಳಗಿನ ಶಿಶು; ಹಸುಳೆ, ಬಾಲಕ; ಸಣ್ಣ ಎಳೆಗೂಸು.
ಭ್ರೇಷ ಬೀಳುವಿಕೆ, ಪತನ; ಹಾದಿಬಿಟ್ಟು ಚಲಿಸುವುದು, ಅಡ್ಡಹಾದಿ ಹಿಡಿಯುವುದು.

# ಮ

ಮಕ ಮಂಕುಗಟ್ಟುವಿಕೆ.
ಮಕರ ಮೊಸಳೆ, ಮೊಣಕ, ನೆಗಳೆ; ದೊಡ್ಡ ಮೀನು; ಮನ್ಮಥನ ಧ್ವಜದ ಚಿಹ್ನೆ; ಒಂದು ನಕ್ಷತ್ರರಾಶಿ;ಒಂದು ಸೌರಮಾನ ತಿಂಗಳು.
—ಆಕರ ಮಕರಾಲಯ, ಮೀನುಗಳಿಗೆ ಆಸರೆಯಾದುದು, ಸಮುದ್ರ.
ಮಕರತೋರಣಹೊತ್ತುಕೊಂಡು ತಿರುಗುವ ಒಂದು ಬಗೆಯ ತೋರಣ.
ಮಕರವೃತ್ತ ಮಕರಮಾಸಕ್ಕೆ ಸೂರ್ಯನು ಬರುವ ಪಥ.
ಮಕರಂದ ಹೂವಿಗೆ ಚೆಲುವನ್ನು ಕೊಡುವುದು, ಜೇನು, ಮಧು, ಬಂಡು.
ಮಕರಾಕ್ಷ ವರುಣ.
ಮಕರಿ ಹೆಣ್ಣು ನೆಗಳೆ; ಬುಟ್ಟಿ; ಹೆಡಿಗೆ.
ಮಕರಿಕೆ ಪ್ರಾಚೀನಸ್ತ್ರೀಯರುಎದೆಯಮೇಲೆ ಬರೆದುಕೊಳ್ಳುತ್ತಿದ್ದ ಚಿತ್ರಾವಳಿ.
ಮಕರಿಸು ಬತ್ತು; ಹೆಚ್ಚು, ವರ್ಧಿಸು.
ಮಕಾರ ಚೇಷ್ಟೆ, ಕುಚೇಷ್ಟೆ; ಅಪಮಾನ.
ಮಕುಟ (ಮುಕುಟ), ಶಿರೋಭೂಷಣ, ಕಿರೀಟ; ಜುಟ್ಟು, ಚಂಡಿಕೆ.
ಮಕುರ (ಮುಕುರ), ಕನ್ನಡಿ, ದರ್ಪಣ.
ಮಕ್ಕಡ (ದ್ಭ) ಮರ್ಕಟ (ಸಂ), ಮಂಗ.
ಮಕ್ಕರಿ (ದ್ಭ) ಮಸ್ಕರಿ (ಸಂ); ಬುಟ್ಟಿ, ಹೆಡಗೆ, ಮಂಕರಿ, ಮಕ್ಕರಿ.
ಮಕ್ಕಳ್ (ಮಕ್ಕಳು), ಸಂತತಿ; ಶಿಶುಗಳು, ಚಿಕ್ಕವರು.
—ಆಟಿಕೆ ಹುಡುಗಾಟ, ಎಳೆಯ ಬುದ್ಧಿ.
ಮಕ್ಕಾ ಮುಸಲ್ಮಾನರ ಯಾತ್ರಾಸ್ಥಳ. ಇದು ಅರಬಸ್ಥಾನದಲ್ಲಿದೆ.
ಮಕ್ಕಿ ಹುಲುಸಾಗಿ ಬೆಳೆಯುವ ಬೆಟ್ಟುಗದ್ದೆ; ತಾಜಾ ಪ್ರತಿ, ಇದ್ದಂತೆ ಮಾಡಿದುದು.
ಮಕ್ಷಿ ಒಂದು ಜಾತಿಕೊಡಲಿ,ಮಚ್ಚು;ನೊಣ, ಮಕ್ಷಿಕ.
ಮಖ ಯಜ್ಞ, ಯಾಗ.

ಮಖೆ ಮಘೆ, ನಕ್ಷತ್ರ ರಾಶಿ.
ಮಗ ಸೂನು, ಸಂತತಿ; ವಿವಾಹಿತ ಹೆಂಡತಿಯಲ್ಲಿ ಹುಟ್ಟಿದವ; ಸುವಾಸನೆ.
ಮಗಧ ಒಂದು ದೇಶ, ಈಗಣ ಬಿಹಾರ ಪ್ರಾಂತ
ಮಗಮಗಿಸು ಪರಿಮಳಿಸು.
ಮಗರೂರಿ ಸೊಕ್ಕು, ದಿಟ್ಟತನ; ಜುಲುಂ.
ಮಗಳ್ (ಮಗಳು), ತನಯೆ, ಪುತ್ರಿ.
ಮಗು ಶಿಶು, ಕಂದ, ಕೂಸು.
ಮಗುಚು (ಮಗಚು), ತಿರುವು; ಅಡಿಮೇಲಾಗು; ಅಡಿಮೇಲಾಗಿಸು.
ಮಗುಟ (ಮಗಟ), ಮುಕುಟ; ರೇಶ್ಮೆ ವಸ್ತ್ರ.
ಮಗುಡ (ದ್ಭ) ಮುಕುಟ (ಸಂ), ಕಿರೀಟ.
ಮಗುರು ಮಗುಚು; ಎಗರು, ಮೈಮೇಲೆ ಬೀಳು; ಎಡವು, ಮುಗ್ಗರಿಸು.
ಮಗುಳ್ (ಮಗುಳು), ಹಿಂದಿರುಗು, ಮರಳು; ಆಗು; ಸಂತೋಷಿಸು; ತಿರುಗಿ, ಪುನಃ.
ಮಗುಳೆ ತಿರುಗಿ, ಮತ್ತೆ, ಪುನಃ.
ಮಗೆ (ವೊಗೆ) ಸಣ್ಣ ಮಡಕೆ, ಕರಗ.
ಮಗ್ಗ ಬಟ್ಟೆ ನೇಯುವ ಸಾಧನ.
ಮಗ್ಗಿ ಗುಣಿತ; ಗುಣಾಕಾರದ ಕೋಷ್ಟಕ.
ಮಗ್ಗಿಸು ಪೀಡಿಸು; ಕಾಣದಂತೆ ಮಾಡು.
ಮಗ್ಗು ಆಯಾಸಗೊಳ್ಳು, ದಣಿ; ಶಕ್ತಿಗುಂದು; ಗರ್ಜಿಸು; ಬಗ್ಗಿಸು, ಸದೆಬಡಿ.
ಮಗ್ಗುಲ್ (ಮಗ್ಗಲು), ಪಕ್ಕ, ಕೆಲ, ಬದಿ.
ಮಗ್ನ ಮುಳುಗಿದ, ಕಂತಿದ; ಲೀನವಾದ.
ಮಘೆ (ಮುಖೆ), ಒಂದು ನಕ್ಷತ್ರರಾಶಿ.
ಮಚರ್ಚಿಕೆ ಪ್ರಶಸ್ತ, ಶ್ರೇಷ್ಠ, ಉತ್ತಮ.
ಮಚ್ಚ ಮಚ್ಚೆ, ಮೈಮೇಲೆ ಬರುವ ಕರಿಯ ಮತ್ತಿ ಇಲ್ಲವೆ ಗುರುತು; ಗುರುತಿಗೆ ಕೊಡುವ ವಸ್ತು.
ಮಚ್ಚರ (ದ್ಭ) ಮತ್ಸರ (ಸಂ), ಹೊಟ್ಟೆಕಿಚ್ಚು, ಅಸೂಯೆ.
—ಇಗ ಅಸೂಯೆವಂತ.
ಮಚ್ಚಿನಾಟ ಪ್ರಿಯವಾದ ಆಟ.
ಮಚ್ಚು ಮೆಚ್ಚು, ಬಹುಮಾನ; ಒಂದು ಬಗೆಯ ಕೊಡಲಿ; ಕುಡುಗೋಲು; ಒಪ್ಪುಗೆ; ತೃಪ್ತಿ; ಪ್ರೀತಿಸುವಿಕೆ, ಒಪ್ಪುವಿಕೆ; ಮಾಯೆ, ಮೋಸ, ಠಕ್ಕು.
ಮಚ್ಚೆ ಮಚ್ಚ, ಮೈಮೇಲೆ ಹುಟ್ಟುವಾಗಲೆ ಇರುವ ಕರಿ ಚುಕ್ಕಿ; ಚಪ್ಪಲಿ, ಕೆರ.
ಮಜಕೂರು ಅಡಕವಾಗಿರುವ ಸಂಗತಿ; ಬರೆದ ಒಕ್ಕಣೆ; ಸದ್ಯದ ಸುದ್ದಿ.
ಮಜಬೂತು ಗಟ್ಟಿಮುಟ್ಟು, ದಢೂತಿ.
ಮಜಲು ನಿಲ್ದಾಣ, ತಂಗುವ ಸ್ಥಳ; ದಿನದ ಪಯಣ; ಬೀಡುಬಿಡುವ ಬಯಲು, ಬೆಟ್ಟು ಗದ್ದೆ.
ಮಜಾ ವಿಲಾಸ, ಚೇಷ್ಟೆ; ವಿನೋದ.
ಮಜೂರಿ ಕೂಲಿ, ದಿನಗೂಲಿ; ಪಡಿ; ವೇತನ.
ಮಜ್ಜ ಮೇದಸ್ಸು, ಶರೀರದ ಸ್ನಾಯು; ಮರದ ಕೆಚ್ಚು.
ಮಜ್ಜನ ಸ್ನಾನ, ಜಳಕ.
ಮಜ್ಜಾಸಾರ ಕೆಚ್ಚು, ಕೊಬ್ಬು; ಮುಖ್ಯವಾದುದು; ವೀರ್ಯ; ದುಃಖ; ವಾತ.
ಮಜ್ಜಿಗೆ ಹಾಲನ್ನು ಹುಳಿಯಿಸಿ ಮಾಡುವ ಒಂದು ಪಾನೀಯ; ಒಂದು ಹುಲ್ಲು.
ಮಜ್ಜೆ ಎಲುಬಿನ ಸಾರ, ಅಸ್ಥಿಸಾರ; ಮರದ ಸಾರ.
ಮಝು ಶಹಭಾಸ್, ಭಲಾ, ಭಾಪು; ಮೆಚ್ಚಿಕೆ ಸೂಚಿಸುವ ಅವ್ಯಯ ಪದ.
ಮಟ ಮೋಸ, ವಂಚನೆ; ಗಡಿಬಿಡಿ, ತಟವಟ.
—ಮಟ ತೀರ, ಕೇವಲ.
ಮಟ್ಟ ಸರಿಯಾಗಿ; ಸುಮ್ಮನೆ; ಗಿಡ್ಡ; ಕಡಮೆಯಾಗುವ; ಸಮತಳವಾಗಿರುವಿಕೆ; ಸಮತಳವಾಗಿದೆಯೊ ಎಂದು ನೋಡುವ ಒಂದು ಸಾಧನ; ಸಮಕೋನ ತೋರಿಸುವ ಒಂದು ಸಾಧನ, ಮಟ್ಟವಲಗೆ; ಟಾಕಣ.

— ಹಾಕು ನೆಲಸಮಮಾಡು, ಬಲಹಾಕು.
ಮುಟ್ಟೆ ಮೃತ್ತಿಕೆ, ಆವೆಮಣ್ಣು, ಗೋಪಿಚಂದನ.
ಮುಟ್ಟೆಗೆ ಪರ್ಯಂತ, ತನಕ, ವರೆಗೆ; ತಾತ್ಕಾಲಿಕ.
ಮುಟ್ಟು ಮಡು; ಹೂವನ್ನು ಹೆಣೆ; ಮಾಡು; ಹೊಡೆ; ಮಡುವು; ಹಾಡಿನ ಧಾಟ; ಮಾಡಿದ್ದು; ಕಡಮೆ.
ಮುಟ್ಟೆ ಮೊಟ್ಟೆ; ಕಪಲಿ, ದೊಟ್ಟೆ; ಉಡಿ; ನಾರಿನ ಹೊದಿಕೆ, ಕತ್ತ.
ಮುಠ ಗುಡಿಸಿಲು; ಪರ್ಣಶಾಲೆ; ಶಾಲೆ; ದೇವಾಲಯ; ಸನ್ಯಾಸಿಗಳ ಮನೆ.
— ಪತಿ ಧರ್ಮಾಧಿಕಾರಿ, ಮಹಂತ; ಸ್ವಾಮಿ.
ಮುಡ ಹಿಮ್ಮಡ, ಪಾದದ ಹಿಂಭಾಗ; ಬಂಡಿಯ ಹಿಂಭಾಗ; ಮಠ.
ಮುಡಕೆ ಕುಂಭ, ಗಡಿಗೆ, ಮಣ್ಣಿನ ಪಾತ್ರೆ; ಒಂದು ಧಾನ್ಯ, ಅವಡೆ.
ಮುಡಗು ಇಡು; ಗೋಪನಮಾಡು, ಅಡಗಿಸು.
ಮುಡಗೂಳು ಎಂಜಲನ್ನ.
ಮುಡದಿ ಹೆಂಡತಿ; ಎಳೆ ಹೆಂಗುಸು.
ಮುಡಲ್ (ಮುಡಲು), ಅಧಿಕವಾಗು, ಹೆಚ್ಚು; ಹಬ್ಬು, ಪೊದೆ; ವಿಸ್ತರಿಸು; ಉಡಿ.
ಮುಡಲು ತೆಂಗಿನ ಸೋಗೆಯಿಂದ ಮಾಡಿದ ಚಾಪೆ; ತೆಂಗಿನ ಸೋಗೆ; ಉಡಿ; ಪೊದೆ.
ಮುಡಂಬ (ಮುಡುಂಬ), ದೊಡ್ಡ ಊರು; ಗುಲ್ಮ; ಕಾಡಾಣಿ.
ಮುಡಿ ಮರಣಹೊಂದು, ಸಾಯು; ಉದುರು, ಮುಡಿಚು; ಬೀಜಗಳನ್ನು ಒತ್ತಾಗಿ ಬಿತ್ತಿದ ಸ್ಥಾನ, ಅಗೆಯ ಅಡಿ; ಶುಭ್ರಮಾಡಿದ ಬಟ್ಟೆ; ಮುಸುರೆ, ಮೈಲಿಗೆ ಅಲ್ಲದುದು; ಇಚ್ಚಿಡಿಮಾಡು, ಪದರುಮಾಡು.
— ತೆ ಮುಡಿದ ಗುರುತು, ಪದರು ಆಗಿ ಮಾಡಿದುದು, ನಿರಿಗೆ, ನೆರಿಗೆ.
ಮುಡಿಲು ಸೋಗಿಲು, ಉಡಿ, ಉಡಿಲು; ಉಟ್ಟ ಬಟ್ಟೆಯಲ್ಲಿ ಏನಾದರೂ ತುಂಬಿಸಲು ಮಾಡಿದ ಚೀಲ.
ಮುಡಿವಾಳ ಬಟ್ಟೆ ಮಡಿಮಾಡುವವ, ಅಗಸ.
ಮುಡು ಬಿಗಿಯಾಗಿಡು; ಮಾಡು; ಹೂವನ್ನು ಸರವಾಗಿ ಮಾಡು; ಕಂತವಾದ ಗುಂಡಿ, ಆಳವಾದ ನೀರಿರುವ ನದಿಯ ಭಾಗ.
ಮುಡುಹ ಕೊಲೆ, ಕೊಲ್ಲುವಿಕೆ; ಸೇರಿಕೆ, ಹೊಂದಿಕೆ.
ಮುಡೆ ಎಂಜಲು; ನೀರ್ಕಟ್ಟೆ, ಕಟ್ಟೆ, ದಂಡೆ, ಒಡ್ಡು.
ಮುಡ್ಡ ಮೂರ್ಖ, ದಡ್ಡ.
ಮುಡ್ಡಿ ದಡ್ಡ, ದಡ್ಡ ಹೆಂಗುಸು; ಮುದ್ದೆಯಾದುದು; ಜಿಡ್ಡು, ಕೆಸರು; ಗುಗ್ಗುಳು, ಅಗರು; ಗಂಜಿ.
ಮುಡ್ಡು ದೊಡ್ಡ ದುಂದುಭಿ, ಒಂದು ವಾದ್ಯ; ಗಸಿ, ಕಲಕಾಗಿ ಉಳಿಯುವ ಜಿಡ್ಡು.
ಮುಣ್ (ಮುಣ್ಣು), ನೆಲ, ಮೃತ್ತಿಕೆ.
— ಕೊಡು ಹುಗಿ, ಹೂಳು
— ಮಾಡು ಹೆಣ ಹೂಳು, ಉತ್ತರಕ್ರಿಯೆ ಮಾಡು; ಹಾಳುಮಾಡು.
ಮುಣ 48 ಸೇರು ಇಲ್ಲವೆ 28 ರಾತ್ಲಿನ ಒಂದು ತೂಕ.
ಮುಣಕ ಕಡಸು; ಕರು, ಮರಿ; ಗಾಳಿ.
ಮುಣಕನೆ ತ್ವರೆಯಾಗಿ, ಬೇಗನೆ.
ಮುಣಲ್ (ಮುಳಲ್), ಮರಳು, ಉಸುಬು, ಹೊಯಿಗೆ; ಹುಡಿ.
ಮುಣಿ ಬಾಗು; ವಂದಿಸು, ನಮಸ್ಕರಿಸು; ಹೆದರು; ರತ್ನ; ಕೌಸ್ತುಭ; ಉತ್ತಮವಾದುದು; ಗಂಟೆಯ ಕೋಲು; ಆಡಿನ ಕೊರಳಲ್ಲಿ ತೂಗುವ ಮೊಲೆಯಂಥ ಮಾಂಸ.
ಮುಣಿಕ (ಮುಣಕ), ಹೂಜಿ, ನೀರದಾನಿ.
ಮುಣಿಕಟ್ಟು ಹರಡು, ಹಸ್ತಬಂಧ, ಮುಂಗೈ.

ಮಣಿಕಾರ ಮಣಿಗಳನ್ನು ಮಾರುವವ, ರತ್ನ ವ್ಯಾಪಾರಿ.

ಮಣಿಕೂಟ ಉತ್ತರದೇಶದ ಒಂದು ಪರ್ವತ.

ಮಣಿಪುರ ಪ್ರಾಚೀನ ಪ್ರಸಿದ್ಧಿಯ ಒಂದು ನಗರ. ಇಲ್ಲಿನ ರಾಜಕನ್ಯೆ ಚಿತ್ರಾಂಗದೆಯನ್ನು ಅರ್ಜುನನು ವರಿಸಿದನು. ಅವಳ ಮಗನು ಬಭ್ರುವಾಹನ.

ಮಣಿಮಂಚ ರತ್ನಖಚಿತವಾದ ಮಂಚ.

ಮಣಿಯ ಆಡಳತೆ; ದೇವಾಲಯ, ಗ್ರಾಮ ಮೊದಲಾದುವುಗಳ ಆಡಳಿತ, ಮೇಲ್ವಿಚಾರ.

—ಗಾರ (ಮಣೇಗಾರ), ಗ್ರಾಮಗಳ ಇಲ್ಲವೆ ಗುಡಿಗಳ ಆಡಳತೆದಾರ.

ಮಣಿಶಿಲೆ ಒಂದು ರತ್ನಶಿಲೆ; ಒಂದು ಔಷಧ ವಸ್ತು.

ಮಣಿಹ (ಮಣಿಯ), ಕಸುಬು; ಊಳಿಗ, ಸೇವೆ.

ಮಣೆ ಪೀಠ, ಆಸನ.

ಮಣೆಯ ಒಂದು ಧಾರ್ಮಿಕ ವಿಧಿ; ದಾಸಯ್ಯಗಳ ಕುಣಿತದ ಒಂದು ಬಗೆ.

ಮಣ್ಣು (ಮಣ್), ನೆಲ, ಭೂಮಿ.

—ಎರಚು ಮಂಕುತಳೆ; ಕಣ್ಣುಕಟ್ಟಿಸು.

—ಕೂಡು ಸಾಯು, ತೀರು, ನಶಿಸು; ಹುಗಿ, ಹೂಳು.

ಮಣ್ಣುವೊರವ ಗಟ್ಟಿ ಕಿರಿಚುವ ಒಂದು ಜಾತಿಯ ಹುಳು.

ಮಣ್ಮಳಿ ರೂಪು ಅಳಿದ ಸಾವು.

ಮತ್ (ಮದ್), ನನ್ನ.

ಮತ ಆಲೋಚನೆ, ಅಭಿಪ್ರಾಯ; 'ವೋಟು'; ಆಶಯ; ನಂಬಿದ ಧರ್ಮ; ತತ್ತ್ವ.

—ಆಚಾರ ಯಾವುದೇ ಜಾತಿಯ ವಿಶಿಷ್ಟವಾದ ಪದ್ಧತಿ.

—ಸ್ಥ ಒಂದು ತತ್ತ್ವದ ಅನುಯಾಯಿ.

ಮತಂಗ ಮೋಡ; ಒಬ್ಬ ಬ್ರಹ್ಮರ್ಷಿ; ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷೌರಕನಿಂದ ಹುಟ್ಟಿದವ; ಚಂಡಾಲ.

ಮತಲಬು ಉದ್ದೇಶ, ಗುರಿ; ಮಸಲ, ತಾತ್ಪರ್ಯ.

ಮತಲ್ಲಿಕೆ ಉತ್ತಮ, ಶ್ರೇಷ್ಠ.

ಮತಾಪು 'ಥಂ' ಎಂದು ಬಡಿದೊಡನೆ ಸದ್ದು ಮಾಡುವ ಮದ್ದು, ಪಟಾಸು; ಹಗಲುಬತ್ತಿ.

ಮತಿ ಜ್ಞಾನ, ಬುದ್ಧಿ; ಇಚ್ಛೆ; ಸ್ಮೃತಿ; ತಿಳಿವು; ಒಂದು ಸಂಚಾರೀಭಾವ.

—ವಂತ ತಿಳಿವು ಉಳ್ಳವ.

ಮತ್ಕುಣ ತಿಗಣೆ, ತಗಣೆ; ಒಂದು ಕೀಟ; ಗಡ್ಡವಿಲ್ಲದ ಮನುಷ್ಯ; ಕೊಂಬಿಲ್ಲದ ಕೋಣ.

ಮತ್ತ ಮದವೇರಿದ; ಅಮಲೇರಿದ; ಸಂತೋಷಗೊಂಡ; ಸೊಕ್ಕಿದ.

ಮತ್ತಕಾಶಿನಿ ಮತ್ತಕಾಶಿ; ಮದವೇರಿದವಳಂತೆ ಮೆಲ್ಲನೆ ನಡೆಯುವವಳು; ಸುಂದರಿ.

ಮತ್ತಂ ತಿರುಗಿ, ಇನ್ನೊಮ್ಮೆ; ಆಮೇಲೆ, ಅಲ್ಲದೆ; ಹಾಗೂ.

ಮತ್ತಿ ಒಂದು ಜಾತಿಯ ನಾಟದ (ಮೋಪು) ಮರ; ಸಾಲ; ಬೆತ್ತ; ಬೊಟ್ಟು, ಚುಕ್ಕಿ; ಗುರುತು.

ಮತ್ತಿನ ಉಳಿದ; ಇನ್ನೊಂದಾದ, ಬೇರೆಯ.

ಮತ್ತು ಇನ್ನೊಂದು; ತಿರುಗಿ; ಜೊತೆಗೆ; ಅಹಂಕಾರ; ಅಮಲು, ಮದವೇರಿಕೆ.

ಮತ್ತೆ ಮದವೇರಿದವಳು; ಆಮೇಲೆ, ಆ ಬಳಿಕ; ಅಲ್ಲಿಂದ, ಅಷ್ಟೇ ಅಲ್ಲದೆ, ಇದಲ್ಲದೆ.

ಮತ್ತೇಭ ಮದಗಜ, ಮದ್ದಾನೆ; ಒಂದು ವೃತ್ತಜಾತಿ.

ಮತ್ಯ ಜ್ಞಾನಸಾಧನೆಯ ರೀತಿ; ಬುದ್ಧಿವಂತಿಕೆ.

—ಅತೀತ ಜ್ಞಾನಕ್ಕೆ ಮೀರಿದ, ಬುದ್ಧಿಗೆ ಎಟುಕದ.

ಮತ್ಸರ ಅಸೂಯೆ, ಹೊಟ್ಟೆಕಿಚ್ಚು; ಸಿಟ್ಟು; ಕೃಪಣ, ಲೋಭಿ.

ಮತ್ಸ್ಯ ಮೀನು; ಉಪಚರ ಎಂಬ ವಸುವಿಗೆ ಮೀನಿನಲ್ಲಿ ಹುಟ್ಟಿದ ಮಗ; ಒಂದು ದೇಶ, ವಿರಾಟ; ವಿಷ್ಣುವಿನ ಮೊದಲನೆಯ ಅವತಾರ.

ಮತ್ಸ್ಯಗಂಧಿ ಮತ್ಸ್ಯೋದರಿ; ವ್ಯಾಸನ ತಾಯಿ.

ಮತ್ಸ್ಯಯಂತ್ರ ಮೀನಿನಂಥ ಒಂದು ಲಕ್ಷ್ಯವನ್ನು ಮೇಲಕ್ಕೆ ಕಟ್ಟಿ ಬಿಲ್ಲುಗಾರಿಕೆ ಪರೀಕ್ಷಿಸಲು ಹೂಡುವ ಒಂದು ಯಂತ್ರ. ದ್ರೌಪದಿಯ ಸ್ವಯಂವರಕ್ಕೆ ಇದೊಂದು ನಿರ್ಣಯವಾಗಿತ್ತು.

ಮಥನ ಕಡೆಯುವುದು; ಕೊಲ್ಲುವುದು; ದುಃಖಕೊಡುವುದು.

ಮಥಿತ ಕಡೆದ; ಪೀಡಿಸಲ್ಪಟ್ಟ; ಕೊಲ್ಲಲ್ಪಟ್ಟ; ಬೆರಸು ಮಜ್ಜಿಗೆ.

ಮಥಿಸು ಕಡೆ; ಚರ್ಚಿಸು.

ಮಥುರೆ ಉತ್ತರ ಹಿಂದುಸ್ಥಾನದ ಒಂದು ಪ್ರಾಚೀನ ಪ್ರಸಿದ್ಧಿಯ ನಗರ. ಇಲ್ಲಿ ಉಗ್ರಸೇನನು ಅರಸಾಗಿದ್ದನು. ಅವನ ಬಳಿಕ ಕಂಸನು ಅರಸಾದನು.

ಮದ ಗರ್ವ, ಹೆಮ್ಮೆ; ಆನೆಯ ಸೊಕ್ಕು; ನೀರು; ಸಂತೋಷ; ವೀರ್ಯ; ಕಸ್ತೂರಿ; ಮಂಗಳವಸ್ತು; ಸೇರಿಕೆ, ಕೂಟ, ವಿವಾಹ.
—ಅಂಧ ಗರ್ವದಿಂದ ಕಣ್ಣುಕಾಣದವ, ಸೊಕ್ಕಿಂದ ಕೊಬ್ಬಿದವ.
—ಇಸು ಮದದಿಂದ ತುಂಬು; ಕೊಬ್ಬು, ಸೊಕ್ಕು.

ಮದಗ ತೂಬು; ಮರದ ದಿಮ್ಮಿ; ಸೋಮಾರಿ; ನೀರು ಮಳೆಗಾಲದಲ್ಲಿ ಕಲೆಯುವ ತಗ್ಗು ಪ್ರದೇಶ.

ಮದಜಲ ಮದೋದಕ, ಮದವೇರಿದ ಗಂಡಾನೆಯ ಕಣ್ಣಿಂದ ಕೆನ್ನೆಯ ಮೇಲೆ ಇಳಿಯುವ ನೀರು.

ಮದಡ ದಡ್ಡ, ಜಡಶೀಲ.

ಮದಡು ಜಡತೆ, ಮಂಕುತನ, ಮೊಂಡತನ.

ಮದತಳಿ ಬಸಲೆ.

ಮದನ ಅನಂಗ, ಕಾಮ; ವಸಂತ; ಉನ್ಮತ್ತದ ಗಿಡ, ಮದ್ದುಗುಣಿಕೆ, ಒಂದು ಮರ.
—ಕಳೆ ಕಾಮಚೇಷ್ಟೆ, ಕಾಮಕಳಾಸ್ಥಾನ.

ಮದನಕೈ ಕಂಭಕ್ಕೂ ಬೋದಿಗೆಗೂ ಆತು ನಿಲ್ಲಿಸುವ ಕೈ; ಬೋದಿಗೆಗೆ ಒರಗಿಸುವ ಸುಂದರ ವಿಗ್ರಹ.

ಮದನಾರಿ ಮನ್ಮಥನಿಂದಾಗುವ ಪೀಡೆ, ಕಾಮತಾಪ; ಶಿವ.

ಮದನಿ ದುಂಡುಮಲ್ಲಿಗೆ, ಚಂಡುಮಲ್ಲಿಗೆ.

ಮದಪಟ್ಟಿಕೆ ಆನೆಯ ಮದಜಲ ಹರಿದ ಗೆರೆ.

ಮದಪು ಅವ್ಯವಸ್ಥೆ.

ಮದರಂಗಿ ಇದರ ಸೊಪ್ಪಿನ ರಸದಿಂದ ಉಗುರು ಕೆಂಪು ಮಾಡುತ್ತಾರೆ.

ಮದವನ ಗಂಡ.

ಮದವಳಿಗೆ ಮದುವಣಗಿತ್ತಿ, ಮದುಮಗಳು.

ಮದವರ್ಕಳು ವಧೂವರರು.

ಮದಿಪು ಮೊದೆಹುಲ್ಲು; ಮೌಲ್ಯ; ದರ, ಬೆಲೆ.

ಮದಿರೆ ಮದಿಷ್ಠೆ, ಮದ್ಯ, ಹೆಂಡ.

ಮದಿಲ್ ಕೋಟೆಯ ಗೋಡೆ; ಗೋಡೆ.

ಮದೀಯ ನನ್ನ.

ಮದುಮಗ ಮದುವಣಿಗ, ವರ.

ಮದುಮನೆ ಮದುವೆಯ ಮನೆ.

ಮದುವೆ ವಿವಾಹ, ಪರಿಣಯ, ಪಾಣಿಗ್ರಹಣ, ಲಗ್ನ.

ಮದೇಭ ಮತ್ತಗಜ, ಮದ್ದಾನೆ.

ಮದೋನ್ಮತ್ತ ಸೊಕ್ಕಿದವ; ಗರ್ವಿಷ್ಠ; ದುರಹಂಕಾರಿ.

ಮದ್ಗು ನೀರ್ಕಾಗೆ, ಒಂದು ಜಾತಿ ಜಲಪಕ್ಷಿ; ಹೆಮ್ಮೀನು.

ಮದ್ದತು ಅನುಕೂಲ, ಸಹಾಯ; ಬೆಂಬಲ.

ಮುದ್ದಲೆ ಒಂದು ಚರ್ಮವಾದ್ಯ, ಮೃದಂಗ (ಸಂ)
ಮುದ್ದು ಔಷಧ; ಚಿಕಿತ್ಸೆ; ವನಸ್ಪತಿ; ಕೋವಿ ಗುಂಡು, ಚರೆ ಮೊದಲಾದುದು.
— ಅರೆ ಎದುರಿಸು; ಸೇಡುತೀರಿಸು; ವೈರ ಸಾಧಿಸು.
ಮುದ್ಯ ಹೆಂಡ, ಸೆರೆ, ಕಳ್ಳು, ಸೇಂದಿ.
—ಗೊಟ್ಟಿ (ದ್ಭ) ಮದ್ಯಗೋಷ್ಠಿ (ಸಂ), ಕುಡಿಕರ ಪಾನಕೂಟ.
—ಪಾಯಿ ಕುಡಿಕ, ಕಳ್ಳುಕುಡಿವವ.
ಮುದ್ಯವಾಚಿ ಕಲರವ, ಬಾಸರ, ಉತ್ಸಾಹದ ದನಿ.
ಮುದ್ರ ರಾವಿ ಮತ್ತು ಚೀನಾಬ ನದಿಗಳ ನಡುವಣ ದೇಶ; ಸಂತೋಷ.
ಮುಧು ಮದ್ಯ, ಹೆಂಡ; ಜೇನು; ನೀರು; ಸಿಹಿ ರಸ; ವಿಷ್ಣುವಿನ ಕಿವಿಯಿಂದ ಹುಟ್ಟಿದ ಒಬ್ಬ ರಕ್ಕಸ; ರಾವಣನ ಭಾವನಾದ ಒಬ್ಬ ರಾಕ್ಷಸ; ವಸಂತ ಋತು; ಚೈತ್ರಮಾಸ; ಅಶೋಕವೃಕ್ಷ; ಪ್ರಾಣಿಗಳ ಶುಭಾಶುಭ ಕರ್ಮ.
—ಪ ಮಧುಪಾನಮಾಡುವವ, ಹೆಂಡ (ಸೆರೆ) ಕುಡಿಕ; ಭ್ರಮರ, ಜೇನ್ನೊಣ.
—ಪರ್ಕ ಜೇನಿನ ಸೇರಿಕೆಯುಳ್ಳುದು, ಮೊಸರು, ತುಪ್ಪ, ನೀರು ಜೇನುಗಳ ಒಂದು ಸವಿಪಾನಕ. ಇದನ್ನು ಅತಿಥಿಗಳಿಗೂ ಮದುಮಕ್ಕಳಿಗೂ ಕೊಡುವುದು ರೂಢಿ ಇತ್ತು.
ಮುಧುಕರ ಜೇನು ಸಂಗ್ರಹಿಸುವುದು, ಜೇನ್ನೊಣ; ಗಂಡು ತುಂಬಿ.
ಮುಧುಕರಿ ಕುಷ್ಠರೋಗ; ಹೆಣ್ಣು ತುಂಬಿ.
ಮುಧುಚ್ಛಂದ ವಿಶ್ವಾಮಿತ್ರನ ಒಬ್ಬ ಮಗ.
ಮುಧುದೂತಿ ವಸಂತಕಾಲ, ದೂತಿಕೆ.
ಮುಧುಮಾಧವಿ ಒಂದು ರಾಗಜಾತಿ; ಜೇನುಳ್ಳ ವಸಂತಕಾಲದ ಹೂ.
ಮುಧುಮಾಸ ವಸಂತಕಾಲ; ಚೈತ್ರ.
ಮುಧುರ ಕಬ್ಬು; ಬೆಲ್ಲ; ಸಕ್ಕರೆ; ತೊಂಡೆ; ಮನೋಹರ; ಸಿಹಿ; ಪ್ರಿಯವಾದುದು; ಒಬ್ಬ ಕನ್ನಡ ಕವಿ.
ಮುಧುರಸ ಜೇನಿನಂಥ ರಸ ಉಳ್ಳುದು, ಕಬ್ಬು.
ಮುಧುರೆ ದಕ್ಷಿಣ ಹಿಂದುಸ್ಥಾನದ ಒಂದು ಕ್ಷೇತ್ರ.
ಮುಧುವನ ಮಧು ರಾಕ್ಷಸನಿದ್ದ ಕಾಡು; ಮಧುರೆಯ ಬಳಿಯ ಒಂದು ಕಾಡು; ಕಿಷ್ಕಿಂಧೆ ಬಳಿ ಇದ್ದ ಒಂದು ಕಾಡು.
ಮುಧುಸೂದನ ಮಧು ಎಂಬ ರಾಕ್ಷಸನನ್ನು ಕೊಂದವ, ಕೃಷ್ಣ; ವಿಷ್ಣು.
ಮುಧ್ಯ ನಡುವೆ; ನಡುಬೆರಲು; ತೀರ ಜಡವೂ ತೀರ ತೀವ್ರವೂ ಅಲ್ಲದ ನಡು ಗತಿ; ಗ್ರಹಗಳ ಒಂದು ಗತಿ; ಒಂದು ದೇಶ; ಆರ್ಯಾವರ್ತದ ಒಂದು ಭಾಗ.
—ಮ ನಡುವಣ; ಸಪ್ತಕದಲ್ಲಿ ನಾಲ್ಕನೆ ಸ್ವರ (ಸಂಗೀತದಲ್ಲಿ); ಪಾಂಡವರಲ್ಲಿ ನಡುವಿನವ, ಭೀಮ; ಅರ್ಜುನ.
—ವರ್ತಿ ಮಧ್ಯಸ್ಥ; ನಡುವೆ ಇರುವವ.
—ಸ್ಥ ನಡುವಿನವ; ಉದಾಸೀನ; ತಟಸ್ಥ; ಪಕ್ಷ ವಹಿಸದ.
ಮುಧ್ಯಮೆ ಋತುಮತಿಯಾದ ಬಾಲೆ, ನಡು ವಯಸ್ಸಿನವಳು, ನೆರೆತವಳು.
ಮುಧ್ಯಾಹ್ನ ನಡುಹಗಲು; ಸೂರ್ಯ ನೆತ್ತಿಗೆ ಬರುವ ಕಾಲ.
ಮುಧ್ವ ವೈಷ್ಣವ ಪಂಥದ ದ್ವೈತ ಸಿದ್ಧಾಂತವನ್ನು ಪ್ರಚಾರಗೊಳಿಸಿದ ಆಚಾರ್ಯ; ಅವನು ಸ್ಥಾಪಿಸಿದ ಮತ.
ಮನ (ಮನಸ್), ಪಂಚೇಂದ್ರಿಯಗಳನ್ನು ನಡೆಸುವ ಒಂದು ಇಂದ್ರಿಯ; ಗಮನ, ಲಕ್ಷ್ಯ.
— ಕತ ಕೋಪ; ವ್ಯಥೆ.
—ಕಾಣು ತಿಳಿ, ಮುಂದಟ್ಟುಮಾಡಿಕೊ.
— ಕುಂದು ಧೈರ್ಯಗುಂದು.

—ವಾರೆ ಮನಃಪೂರ್ವಕವಾಗಿ, ಮನಸ್ಸಿಟ್ಟು.
—ಸ್ಕ ಮನಸ್ಸುಳ್ಳವ.
ಮನದನ್ನ ಪ್ರಿಯತಮ; ಇಷ್ಟಾನುವರ್ತಿ.
ಮನನ ಚಿಂತನ, ಆಲೋಚನೆ.
ಮನವಿ ಅರ್ಜಿ, ಹೇಳಿಕೆ; ಬಿನ್ನವತ್ತಳೆ; ಮೊರೆ, ಪ್ರಾರ್ಥನೆ.
ಮನಶ್ಶಾಸ್ತ್ರ ಮನಸ್ಸಿನ ಧರ್ಮವನ್ನು ಹೇಳುವ ಶಾಸ್ತ್ರ.
ಮನಸಿಜ ಮನಸ್ಸಿನಲ್ಲಿ ಹುಟ್ಟುವವ, ಕಾಮ.
ಮನಸ್ತಾಪ ಮನಸ್ಸಿನ ಪೀಡೆ, ಬೇಸರ; ದ್ವೇಷ.
ಮನಸ್ವೀ ಉತ್ತಮ ಮನಸ್ಸಿನವ, ಪಂಡಿತ; ಮನಸ್ಸಿಗೆ ತೋಚಿದಂತೆ, ಸ್ವೇಚ್ಛೆ.
ಮನಃಪೂರ್ವಕ ಮನಸ್ಸು ಕೊಟ್ಟು.
ಮನಃಸಾಕ್ಷಿ ಮನಸ್ಸಿಗೆ ಒಪ್ಪಿದ ಬಗೆ, ಆತ್ಮಸಾಕ್ಷಿ.
ಮನಾಕ್ ಸ್ವಲ್ಪ (ಅವ್ಯಯ), ತ್ವರೆ.
ಮನೀಷಿ ಬುದ್ಧಿವಂತ; ಪಂಡಿತ; ವಿಶ್ವಾಸ.
ಮನೀಷೆ ಯೋಚನೆ, ಚಿಂತನೆ, ತಿಳಿವು, ಜ್ಞಾನ.
ಮನು ಧರ್ಮಶಾಸ್ತ್ರಕಾರನಾದ ಪ್ರಾಚೀನ ಮುನಿಯೊಬ್ಬ; ಒಬ್ಬ ಪ್ರಜಾಪತಿ; ಸ್ವಾಯಂಭು ಮೊದಲಾದ 14 ಮನುಗಳು; ಹದಿನಾಲ್ಕು ಎಂಬ ಸಂಖ್ಯೆ.
—ಜ ಮನುವಿನಿಂದ ಹುಟ್ಟಿದವ, ಮನುಷ್ಯ, ನರ.
—ಜೆ ಸ್ತ್ರೀ, ನಾರಿ.
ಮನುಷ್ಯ ಮನುವಿನ ಸಂತಾನ, ಮಾನವ, ಮನುಷ್ಯ ಜಾತಿ.
—ತ್ವ ಪೌರುಷ; ಗಂಡುತನ.
ಮನುಸ್ಮೃತಿ ಮನು ಬರೆದ ಧರ್ಮಶಾಸ್ತ್ರ.
ಮನೂತಿ ಸಮಾಧಾನದ ಮಾತು.
ಮನೆ ಗುಡಿ; ಆಶ್ರಯ; ಬೀಡು; ಕೋಣೆ.
—ತನ ಗೃಹಸ್ಥ ಧರ್ಮ; ಕುಲ, ವಂಶ.
—ಮಾಡು ನೆಲಸು, ವಾಸಿಸು.
—ವಾರ್ತೆ (ಮನೆವಾರ್ತೆ), ಗೃಹಕೃತ್ಯ ವಿಚಾರ; ಮನೆಗೆಲಸ.
ಮನೋಗತಿ ಮನಸ್ಸಿನ ಬಯಕೆ; ಇಚ್ಛಾವೇಗ, ಮನಸ್ಸಿನ ರೀತಿ.
ಮನೋಜ್ಞ ಮನೋಹರ, ಸುಂದರ; ಜ್ಞಾನಿ, ಬಲ್ಲಿದ.
ಮನೋದತ್ತ ಮನಸ್ಸು ಒಪ್ಪಿದ; ಮನಸ್ಸು ಎರೆದ.
ಮನೋಧರ್ಮ ಮನಸ್ಸಿನ ನಡಾವಳಿ; ಮನಸ್ಸಿನ ರೀತಿ, ಬಗೆ.
ಮನೋರಂಜನೆ ವಿನೋದ, ಮನಸ್ಸನ್ನು ಸರಸವಾಗಿರಿಸುವಿಕೆ.
ಮನೋರಥ ಇಚ್ಛೆ, ಅಪೇಕ್ಷೆ, ಬಯಕೆ, ಅಭಿಲಾಷೆ.
ಮನೋರಮ ಮನಸ್ಸನ್ನು ಸಂತೋಷಗೊಳಿಸುವುದು, ಸುಂದರ, ಚೆಲುವು.
ಮನೋವಾಕ್ಕಾಯ ಮನಸ್ಸು, ಮಾತು, ಕಾರ್ಯ—ಈ ಮೂರು ಸೇರಿ.
ಮನೋವಿಕಾರ ಭ್ರಮೆ; ಬೆರಗು; ತಬ್ಬಿಬ್ಬು.
ಮನೋವೃತ್ತಿ ಮನೋಧರ್ಮ; ಮನಸ್ಸಿನ ರೀತಿನೀತಿಗಳು.
ಮನೋಹರ ಚೆಲುವು, ಸುಂದರ, ಮೋಹಕ.
ಮನ್ನಣೆ (ದ್ಭ), ಮಾನ್ಯತಾ (ಸಂ), ಮರ್ಯಾದೆ, ಗೌರವ.
—ಪೆರ್ ಗೌರವಪಡೆ, ಮರ್ಯಾದೆ ಹೊಂದು.
ಮನ್ನಾ ವಜಾ; ಬಹಿಷ್ಕಾರ, ತಡೆ; ನಿಲ್ಲಿಸುವಿಕೆ.
ಮನ್ನಿಸು ಕ್ಷಮಿಸು, ಮಾಫುಮಾಡು; ಮರ್ಯಾದಿಸು; ಗೌರವಿಸು.
ಮನ್ನೆಯ (ದ್ಭ), ಮಾನ್ಯ (ಸಂ), ಮರ್ಯಾದೆವಂತ; ಮುಖ್ಯಸ್ಥ; ಪ್ರಧಾನ; ಹೆಗ್ಗಡೆ; ನಾಯಕ; ಪಾಳೆಯಗಾರ.

ಮನ್ಮಥ ಬುದ್ಧಿಯನ್ನು ಕಲಕಿಸುವವ, ಕಾಮ, ಅನಂಗ; ಬೇಲ.

ಮನ್ಯು ವ್ಯಥೆ, ಶೋಕ, ದುಃಖ; ದೈನ್ಯ; ಕೋಪ; ಯಜ್ಞದ ಕೊನೆ; ಇಂದ್ರಿಯ; ಕಣ್ಣೀರು.

ಮನ್ವಂತರ ಸ್ವಯಂಭು ಮೊದಲಾದ ಹದಿನಾಲ್ಕು ಮನುಗಳು ಆಳಿದ ಸಮಯ, 71 ಯುಗಗಳ ಕಾಲ.

ಮಬ್ಬಿಗ ಅಸುರ, ರಕ್ಕಸ.

ಮಬ್ಬು (ಮರ್ಬು), ಅಂಧಕಾರ, ಕತ್ತಲೆ; ಮಂಕುತನ, ಬುದ್ಧಿ ತೋಚದಿರುವಿಕೆ.

ಮಮ ನನ್ನ.

—ಕರಿಸು ಅಹಂಕರಿಸು; ನನ್ನದೆಂದು ತಿಳಿ; ಪ್ರೇಮದೋರು.

—ಕಾರ ತನ್ನದೆಂಬ ಪ್ರೀತಿ; ಸ್ವಾರ್ಥ; ಹೆಮ್ಮೆ.

ಮಮ್ಮಲ ಅಧಿಕವಾಗಿ, ಹೆಚ್ಚಾಗಿ; ತಳಮಳ, ಕಳಕಳಿ, ಮಲಮಲ.

ಮಮ್ಮಳಿ ಭಯಂಕರವಾದ ಮರಣ; ರೂಪವಳಿದ ಸಾವು.

ಮಮ್ಮು ಅನ್ನ (ಮಕ್ಕಳ ಮಾತಿನಲ್ಲಿ).

ಮಯ ಒಂಟೆ; ಹೇಸರಕತ್ತೆ; ಶಿಲ್ಪಿಯಾದ ಒಬ್ಬ ರಾಕ್ಷಸ; ವಿಕಾರ; ಪ್ರಾಚುರ್ಯ; ಹೆಚ್ಚಾಗಿ ಉಳ್ಳ ಎಂಬ ಅರ್ಥದ ಒಂದು ತದ್ಧಿತ ಪ್ರತ್ಯಯ.

ಮಯಣ (ದ್ಭ) ಮದನ (ಸಂ), ವಸಂತಕಾಲ; ಮೇಣ.

ಮಯು ಕಿನ್ನರ, ದೇವಯೋನಿವಿಶೇಷ; ಎರಳೆ.

ಮಯೂಖ ಕಿರಣ; ಕಾಂತಿ, ಶೋಭೆ; ಜ್ವಾಲೆ, ಕೀಲು, ಆಣಿ.

ಮಯೂರ ನವಿಲು; ಒಬ್ಬ ಸಂಸ್ಕೃತ ಕವಿ; ಸ್ವರ್ಗನಿವಾಸಿಗಳ ಒಂದು ಗುಂಪು.

ಮಯೂರಿಕೆ ಹೆಣ್ಣು ನವಿಲು.

ಮಯ್ದುನ (ಮೈದುನ) ತಂಗಿಯ ಗಂಡ; ಹೆಂಡತಿಯ ಸೋದರ; ಗಂಡನ ಸೋದರ.

ಮಯ್ಮು (ಮಯ್ಮೆ) ಬೆರಗು, ತಬ್ಬಿಬ್ಬು, ಮಬ್ಬು

ಮಯ್ಲು (ಮೈಲೆ, ಮೈಲು); ಕೊಳೆ; ಸಿಡುಬು, ಮೈಲಿ; ನವಿಲು.

ಮಯ್ಲಾರ (ಮೈಲಾರ), ಒಬ್ಬ ವೀರ; ಒಂದು ಊರು.

ಮರ ತರು, ವೃಕ್ಷ; ಮರೆವು, ಮರವು.

—ಕಟ್ಟು ಮರದಂತೆ ಸ್ತಂಭಿತವಾಗು, ಜೋಂಪು ಹಿಡಿ.

ಮರಕತ ದೈವಿಕವಾದ ಮತ್ತು ಭೌತಿಕವಾದ ಉಪದ್ರವಗಳಿಂದ ಪಾರಾಗಿಸಬಲ್ಲ ರತ್ನ, ಪಚ್ಚೆ.

ಮರಕಾಲು ಹೋದ ಕಾಲಿಗೆ ಬದಲಾಗಿ ಕೃತಕ ಕಾಲು.

ಮರಕುಟಿಕ ಮರಕೂಟ, ಮರದ ಪೊಟರೆಯಲ್ಲಿ ವಾಸಿಸುವ ಒಂದು ಹಕ್ಕಿ.

ಮರಗುಳಿ ಮರವೆಯ ಚಟ ಉಳ್ಳವ.

ಮರಗೊಡಲೆ ಒಂದು ಬಗೆ ಹಕ್ಕಿ; ಇದ್ದ ಮರಗಳ ಅತಿಶಯದಿಂದ ಹೊಸ ಸಸ್ಯಗಳ ಬೆಳವಣಿಗೆಗೆ ತೊಡಕಾಗುವ ಸ್ಥಿತಿ.

ಮರಚು (ಮರಳ್ಚು), ಹಿಂದಿರುಗು.

ಮರಡಿ (ಮೊರಡಿ), ದಿನ್ನೆ, ದಿಮ್ಮೆ.

ಮರಡು ಎಡವು; ಉಳುಕು.

ಮರಣ ಸಾವು, ಮೃತಿ.

ಮರತ ಹವಳ.

ಮರನಾಗು ಮರವಡು, ಬೆಪ್ಪಾಗು; ನಿಶ್ಚೇಷ್ಟವಾಗು.

ಮರಲ್ (ಮರಲು), ಹೂ ಬಿಡು; ಹಿಂದಿರುಗು; ತಿರುಗಿ ಬಾ, ಮರಳು; ಹೂವು; ಉಸುಬು, ಹೊಯಿಗೆ.

ಮರವಡು ಶಕ್ತಿಗುಂದು; ನಿಶ್ಚೇಷ್ಟಿತವಾಗು; ಮೈಮರೆತ; ಉನ್ಮಾದ.

ಮರವೆ ಅಜ್ಞಾನ; ನೆನಪು ಅಳಿಸುವಿಕೆ; ಮೈ ಮರೆತ; ಮತ್ತ್ರತೆ; ಗರ್ವ.
ಮರಸು ಮಾಜು, ಮರೆವಂತೆ ಮಾಡು, ರೇಗು, ಕೋಪಿಸು; ಮರೆಮಾಡು.
—ಹ ಅಪಲಾಪ, ಅಪಜ್ಞಾನ, ಅಪವ್ಯಯ.
ಮರಸುತ್ತು ಮಲಸುತ್ತು, ಮರಸೂತ್ರ, ತಿರು ಪಣಿ, (ಸ್ಕ್ರೂ).
ಮರಸುಂದು ಮೈಮರೆತು ನಿದ್ರೆಮಾಡು.
ಮರಳ್ (ಮರಳು), ಹಿಂದಿರುಗು; ಉಸುಬು, ಹೊಯಿಗೆ, ಮಳಲು.
—ಚು ಹಿಂದಿರುಗುವಂತೆ ಮಾಡು.
ಮರಳಿ ತಿರುಗಿ, ಪುನಃ; ಜಾಣನಾಗಿದ್ದರೂ ಹೆಡ್ಡನೆಂದು ತೋರಿಸಿಕೊಳ್ಳುವವ.
ಮರಂದ ಮಕರಂದ, ಜೇನು.
ಮರಾಟ ಮಹಾರಾಷ್ಟ್ರ ಕರ್ಣಾಟಕದಉತ್ತರ ಕ್ಕಿರುವ ಒಂದು ದೇಶ; ಆ ದೇಶದ ಜನ.
ಮರಾಟಿ ಮಹಾರಾಷ್ಟ್ರದ ಭಾಷೆ; ಮಹಾ ರಾಷ್ಟ್ರದ ಜನ.
ಮರಾಮತ್ ದುರುಸ್ತಿ, ಸಮಗೊಳಿಸುವಿಕೆ.
ಮರಾಲ (ಮರಾಳ), ಹಂಸ; ರಾಜಹಂಸ; ಕಾಡಿಗೆ; ನೀರ್ಕಾಗೆ.
ಮರಿ ಅರ್ಭಕ, ಪೋತ; ಸಣ್ಣ ಶಿಶು, ಕರು.
ಮರಿಗೆ ಕಲ್ಲು ಇಲ್ಲವೆ ಮರದಲ್ಲಿ ಮಾಡಿದ ಅಗಲ ಬಾಯ ಪಾತ್ರೆ, ಬಾನಿ, ಬಾಣಿ.
ಮರಿಚ ಮರೀಚ; ಮೆಣಸು; ಕರಿಮೆಣಸು.
ಮರೀಚಿ (ಮರೀಚಿಕೆ), ಕಿರಣ, ಪ್ರಕಾಶ; ಒಬ್ಬ ಅಪ್ಸರೆ; ಸಪ್ತರ್ಷಿಗಳಲ್ಲಿ ಒಬ್ಬ; ಮೃಗಜಲ, ಬಿಸಿಲ್ಗುದುರೆ, ಗಾಳಿಕುದುರೆ.
ಮರು (ಮೃ) ಸಾಯು; ಇಲ್ಲಿ ನೀರಿಲ್ಲದೆ ಪ್ರಾಣಿ ಗಳು ಸಾಯುವ ಪ್ರದೇಶ, ಮರುಭೂಮಿ, ಬೆಂಗಾಡು; ಇನ್ನೊಂದು; ತಿರುಗಿ.
—ಬಾಳ್ ಇನ್ನೊಂದು ವಿವಾಹ.
ಮರುಕ ವ್ಯಸನ, ದುಃಖ; ದಯೆ, ಕನಿಕರ.
ಮರುಕುಳಿ ಕಳವಳ, ಬೆದರಿಕೆ; ತಿರುಗಿ ಬರು ವಿಕೆ, ಹೋದ ಬೇನೆ ಬರುವುದು.
ಮರುಗ ಮರುವಕ, ಸುರಭಿ, ಒಂದು ಬಗೆ ಜಂಭೀರ.
ಮರುಗು ದುಃಖಪಡು, ಸಂತಾಪಗೊಳ್ಳು; ಸುಡು.
ಮರುಜ ಮರುಜೆ, ಸಂಜೀವನ, ಸತ್ತವರನ್ನು ಬದುಕಿಸುವ ಮರ.
ಮರುತ್ ಗಾಳಿ, ವಾಯು; ಒಬ್ಬ ದೇವತೆ.
—ದೆಸೆ ವಾಯುವ್ಯ ದಿಕ್ಕು.
ಮರುಭೂಮಿ ಮರುಭೂ, ಮರಳುಕಾಡು, ಬೆಂಗಾಡು, ನೀರಿಲ್ಲದ ಪ್ರದೇಶ.
ಮರುಮೊನೆ ಮತ್ತೊಂದು ಮೊನೆ; ಇನ್ನೊಂದು ತುದಿ.
ಮರುವ ಮರುವಕ, ಒಂದು ನಾಟದ ಮರ, ಜಂಭೀರ.
ಮರುವಡೆ ಶತ್ರುಸೇನೆ.
ಮರುವುಟ್ಟು ಪುನರ್ಜನ್ಮ.
ಮರುಳ್ (ಮರುಳು), ಭೂತಗಣ; ಗಣ, ಪಿಶಾ ಚಿ; ಹುಚ್ಚು; ಹುಚ್ಚ, ಮೂಢ, ಮೂರ್ಖ.
ಮರುಳ ಹುಚ್ಚ; ದುಶ್ಶೀಲ.
ಮರುಳು (ಮರುಳ್), ಪಿಶಾಚಿ, ಕೊಲೆ; ಹುಚ್ಚು, ಉನ್ಮಾದ.
ಮರೆ ಒಂದು ಜಾತಿಯ ಜಿಂಕೆ; ಕಾಪು, ರಕ್ಷೆ, ಆಶ್ರಯ; ಶರಣು; ದಿಕ್ಕು ಕಾಣದ ಹಾಗೆ ಮಾಡುವ ಸ್ಥಳ; ಮರೆತುಬಿಡುವಿಕೆ; ವಂಚನೆ, ಮೋಸ.
—ಆಗು ಅಡ್ಡವಾಗು, ಅಡಗು.
—ತ ಮುರೆಯುವಿಕೆ.
—ಪಿಡಿ ಆಶ್ರಯಕೊಡು; ಅಡ್ಡವಾಗಿ ಹಿಡಿ.
—ಮಾಜು ಮರೆಯಿಸು; ಅಳಿಸು; ಮರೆ ಯುವಂತೆ ಮಾಡು; ಅಡಗಿಸು; ಬಚ್ಚಿಡು.
—ಮೋಸ ಠಕ್ಕು, ವಂಚನೆ.

—ಹೊಗು ಶರಣುಹೋಗು, ಆಶ್ರಯ ಬೇಡು.
ಮರೆಮಾತು ತಾತ್ಪರ್ಯ ಅಡಗಿಸಿರುವ ಮಾತು, ಸಂಶಯದ ಮಾತು, ಕಟಕಿ.
ಮರ್ಕಟ ಮಂಗ, ಕೋತಿ; ಜೇಡರ ಹುಳು; ಅರ್ಕ, ಎಕ್ಕೆ.
ಮರ್ಕಟಧ್ವಜ ಕಪಿಧ್ವಜ, ಅರ್ಜುನ.
ಮರ್ಕಳ್(ಮಕ್ಕಳು)ಕಂದಗಳು,ಕೂಸುಗಳು, ತನಯರು.
ಮರ್ಚು ಕಡಿ, ಕೆತ್ತು; ಮಚ್ಚು, ಕೆತ್ತುವ ಒಂದು ಬಗೆ ಕೊಡಲಿ.
ಮರ್ಜಿ ಖುಶಿ, ಇಷ್ಟ; ಅಭಿಮತ; ಡೌಲು; ಮನಸ್ಸಿನ ಬಗೆ.
ಮರ್ತ್ಯ ಸಾಯುವವ, ಮನುಷ್ಯ.
ಮರ್ದನ ಪುಡಿಮಾಡುವುದು; ನಾದು; ಕೈ ಕಾಲು ಒತ್ತುವುದು; ಒತ್ತು; ಕೊಲ್ಲು; ಸೊಕ್ಕುಮುರಿ.
ಮರ್ದಲ ಮದ್ದಳೆ, ಮೃದಂಗ.
ಮರ್ದಿಸು ಪುಡಿಮಾಡು; ಹಿಚುಕು,ಹಿಸುಕು, ಒತ್ತು, ತಿಕ್ಕು.
ಮರ್ದು (ಮದ್ದು), ಔಷಧ.
ಮರ್ದುಗುಣಿಕೆ ಉನ್ಮತ್ತದ ಗಿಡ.
ಮರ್ಬು (ಮಬ್ಬು), ಕತ್ತಲೆ; ಮುಸುಕು.
ಮರ್ಮ ಜೀವಸ್ಥಾನ; ದೇಹದ ಸಂದುಕಟ್ಟು; ತಾತ್ಪರ್ಯ, ಸಾರ; ಗುಟ್ಟು, ರಹಸ್ಯ; ಸಾಧನ, ಸಲಕರಣೆ; ಉಪಾಯ, ಯುಕ್ತಿ.
—ಜ್ಞ ಗುಟ್ಟು ತಿಳಿದವ, ತತ್ವಬಲ್ಲವ.
ಮರ್ಮರ ವಸ್ತ್ರ ಇಲ್ಲವೆ ಎಲೆ ಮೊದಲಾದುವುಗಳಿಂದ ಆಗುವ ಸಪ್ಪುಳು.
ಮರ್ಮಸ್ಪೃಶ್ ಪ್ರಾಣಸ್ಥಾನವನ್ನು ಮುಟ್ಟುವುದು; ದುಃಖಿತಮವಾದುದು.
ಮರ್ಮಿ ಗೋಪ್ಯ ರೀತಿಯವ.
ಮರ್ಯಾದೆ (ಮರ್ಯಾದಾ), ಗಡಿ, ಹದ್ದು; ಮಿತಿ, ರೀತಿಯಂತ ವರ್ತನೆ; ನ್ಯಾಯ ಮಾರ್ಗದಲ್ಲಿರುವುದು; ಗೌರವ.
ಮಲ ಪಾಪ; ಶರೀರದಿಂದ ಹೊರಗೆ ಹೋಗುವ ಕೊಳೆ; ಕಬ್ಬಿಣದ ಕಿಟ್ಟ; ಕಳಂಕ; ವಾತ, ಪಿತ್ತ, ಕಫ; ಮೈಲಿಗೆ; ದುಃಖ; ಇನ್ನೊಂದು, ಮತ್ತೊಂದು; ಬೆಟ್ಟ.
ಮಲಕು ಒಂದು ಶಿರೋಭೂಷಣ; ಸರ; ಗಂಟು; ಮಡಿಚು, ತಿರುವು; ಬಾಗಿಸು.
ಮಲಗು (ಮಲಂಗು), ಶಯನಿಸು, ನಿದ್ರಿಸು; ಒರಗು; ಭೋಗಿಸು, ಪಡು, ಹಡು; ಸಾಯು; ದಿಂಬು.
ಮಲತ್ರಯ ವಾತ, ಪಿತ್ತ, ಕಫಗಳೆಂಬ ಮೂರು ಶಾರೀರಕ ಕಶ್ಮಲಗಳು.
ಮಲಮಾಸ ಅಧಿಕ ಮಾಸ.
ಮಲಮೂತ್ರ ಶರೀರದಿಂದ ಹೋಗುವ ಮುಖ್ಯ ಕೊಳೆಗಳು, ಉಚ್ಚೆ, ಹೇಲು.
ಮಲಯ ಒಂದು ಕುಲಪರ್ವತ; ಪಶ್ಚಿಮ ಘಟ್ಟದ ದಕ್ಷಿಣ ಸೆರಗು; ಮಲಯದೇಶ.
—ಆಚಲ ಮಲಯ, ಬಾವನ್ನ ಬೆಟ್ಟ; ಪಶ್ಚಿಮ ಘಟ್ಟದ ದಕ್ಷಿಣ ಸೆರಗು.
—ಜ ಮಲಯ ಪರ್ವತದಲ್ಲಿ ಬೆಳೆಯುವ, ಶ್ರೀಗಂಧ.
ಮಲಯಧ್ವಜ ಮಣಿಪುರದ ಅರಸು,ಚಿತ್ರಾಂಗದೆಯ ತಂದೆ.
ಮಲರ್ ಪುಷ್ಪ, ಹೂ; ಮರಳು, ಹೊಯಿಗೆ; ಮುಖ ತಿರುಗುವಿಕೆ.
ಮಲರೋಗ ಅಪಸ್ಮಾರ, ಗಿರ, ಮೂರ್ಛಾರೋಗ.
ಮಲಾಮತು ತೊಂದರೆ;ಗಡಿಬಿಡಿ;ಉಪದ್ರವ.
ಮಲಾರ ಹೂಸರ, ಮಾಲಾಹಾರ(ಸಂ); ಬಳೆ ಸರ; ಒಂದು ರಾಗ, ಮಲ್ಲಾರ್.
ಮಲಿನ ಮಾಸಿದ; ಮಲವುಳ್ಳ, ದೂಷಿತವಾದ, ಕಪ್ಪಾದ; ಪಾಪ, ಕೊಳೆ.

—ತೆ ಕೊಳೆ, ಕಶ್ಮಲ; ಪಾಪ ಬುದ್ಧಿ.
ಮಲಿನಮುಖ ಅಗ್ನಿ; ಮಂಗ; ಕ್ರೂರ; ನೀಚ.
ಮಲುಕು ಮೆಲುಕುಹಾಕು, ತಿಂದುದನ್ನು ತಿರುಗಿ ಬಾಯಿಗೆ ತರು, ನೆಮರು.
ಮಲೆ ಪರ್ವತ; ಬೆಟ್ಟ, ಗುಡ್ಡ; ಔದ್ಧತ್ಯ, ದಿಟ್ಟತನ; ಇದಿರಿಸು; ವಿರೋಧಿಸು; ಕೊಬ್ಬು, ಸೊಕ್ಕು, ಮದವೇರು, ಗರ್ವಿಸು.
ಮಲ್ಮಲು ಮಸಲೀನು ಬಟ್ಟೆ, ಅತಿ ತೆಳ್ಳಗಿನ ಅರಿವೆ.
ಮಲ್ಯ ದೊಡ್ಡ; ಶ್ರೇಷ್ಠ; ಮುಖ್ಯ.
ಮಲ್ಲ ಜಟ್ಟಿ, ಬಾಹುಯುದ್ಧ ಮಾಡುವವ, ಪೈಲವಾನ, ಕುಸ್ತಿಗಾರ; ಒಂದು ದೇಶ; ಒಂದು ಜಾತಿ; ಕಷ್ಟಪಟ್ಟು ದುಡಿ.
—ರಂಗ ಮಲ್ಲ ಸಾಲೆ, ಕುಸ್ತಿಯ ಕಣ.
ಮಲ್ಲಣೆ ವ್ಯಥೆ.
ಮಲ್ಲಳಿ ಬೆರಗಾಗುವ ಸ್ಥಿತಿ; ಸೊಕ್ಕಿದ ತುಂಬಿ; ಸ್ವೇಚ್ಛೆಯ ತಿರುಗಾಟ; ಗುಂಪು, ಮೇಳ.
ಮಲ್ಲಂತಿಗೆ ನಡುಕಟ್ಟು.
ಮಲ್ಲಾಡ ಮಲೆನಾಡು.
ಮಲ್ಲಾಮಲ್ಲಿ ನೂಕುನುಗ್ಗಲು.
ಮಲ್ಲಾರ (ಮಲಾರ), ಹೂಗೊಂಚಲು; ಬಳೆ ಸರ; ಒಂದು ರಾಗ.
ಮಲ್ಲಾರಿ (ಮೈಲಾರಿ), ಕೃಷ್ಣ; ಶಿವ.
ಮಲ್ಲಿ ಮಲ್ಲಿಗೆ; ಒಂದು ಜಾತಿಯ ಹಂಸೆ.
ಮಲ್ಲಿಕ ಕರಿಯ ಕಾಲು ಕೊಕ್ಕುಗಳುಳ್ಳ ಬಾತು ಅಥವಾ ಹಂಸ.
ಮಲ್ಲಿಕಾರ್ಜುನ ಶಿವ.
ಮಲ್ಲಿಕೆ ಮಲ್ಲ, ಮಲ್ಲಿಗೆ(ದ್ಭ); ಕೊತ್ತಂಬರಿ.
ಮಲ್ಲೆ ಮಣ್ಣ ಬಟ್ಟಲು, ಕೋರಕೆ; ಮಲ್ಲಿಗೆ.
ಮಶ್ ಧ್ವನಿಮಾಡು.
ಮಶಕ ನೊಣ; ಸೊಳ್ಳೆ; ಗುಂಗಾಡು.
ಮಶೀದಿ (ಮಶೀತಿ), ಮುಸಲ್ಮಾನರ ಪ್ರಾರ್ಥನೆಯ ಸ್ಥಳ.
ಮಸಕ ಕೊಳಕು; ಸಿಟ್ಟು; ಅತಿಶಯ; ವೇಗ; ವಂಚನೆ; ವಿಜೃಂಭಣೆ; ಅಬ್ಬರ; ತಿಕ್ಕಾಟ.
ಮಸಕು ಮಬ್ಬು; ಅಸ್ಪಷ್ಟ ನೋಟ; ಕೊಳೆ ಹತ್ತಿದಂತೆ, ಮಾಸಿದ.
ಮಸಗು ವಿಜೃಂಭಿಸು, ಉಬ್ಬು, ಉತ್ಸಾಹಗೊಳ್ಳು; ಹೆಚ್ಚಾಗು, ಹಬ್ಬು; ಹರಿತಮಾಡು; ಕೆರಳು; ಉಕ್ಕು, ತಿಕ್ಕು.
ಮಸಗೆ ವಿಜೃಂಭಣೆ; ಅಭಿವೃದ್ಧಿ; ಮಸುಕಾಗುವಿಕೆ; ನರೆ ಬಣ್ಣ.
ಮಸಣ(ದ್ಭ), ಶ್ಮಶಾನ(ಸಂ), ಹೆಣ ಸುಡುವ ಇಲ್ಲವೆ ಹೂಳುವ ಜಾಗ; ರುದ್ರಭೂಮಿ, ಸುಡುಗಾಡು.
ಮಸಣಿ ಶ್ಮಶಾನಿ;ಶ್ಮಶಾನವಾಸಿಯಾದ ದೇವತೆ, ದುರ್ಗಿ.
ಮಸಪು ಸೋಂಕು.
ಮಸಲತ್ತು ಗೋಪ್ಯ ಸಭೆ; ಹೊಂಚು, ಒಳಸಂಚು; ಹಿಕ್ಮತು.
ಮಸಾರೆ (ಮಸಾರಿ), ಕೆಂಪು ನೆಲ.
ಮಸಾಲೆ ಸಾಂಬಾರ;ಮೇಲೋಗರಕ್ಕೆ ತಯಾರಿಸಿದ ಸಾಂಬಾರ.
ಮಸಾಳು (ಮಸಾಳಿ), ದಂಡು.
ಮಸಿ ಮಷಿ, ಶಾಯಿ; ಇದ್ದಲಿ ಪುಡಿ.
ಮಸೀದಿ (ಮಸೂತಿ),ಮಸೀದೆ;ಮುಸಲ್ಮಾನರ ಪ್ರಾರ್ಥನಾಸ್ಥಳ.
ಮಸುಕು ಮಾಸಲು, ಕಂದಿದ ಬಣ್ಣ.
ಮಸುಳ್ (ಮಸಳು), ಮಾಸು, ಕಾಂತಿ ತಗ್ಗು.
ಮಸೂದೆ ಕಾಯಿದೆ, ಕಾಯಿದೆ ನಿರ್ಣಯ; ಹುಕುಂ; ಪ್ರತಿ ಸವಾಲು.
ಮಸೂರಿಕೆ ಒಂದು ಬೇನೆ; ಮೈಯ ಬೇನೆ, ಮುದಿಸೂಳೆ; ಒಂದು ಬಗೆ ತೊಗರಿ.
ಮಸೃಣ ಮಿದು, ಮೆತ್ತನೆ.
ಮಸೆ ತಿಕ್ಕು; ಹರಿತಮಾಡು; ಹುರುಡಿಸು; ಗಾಯ, ಪುಟ್ಟ ಗಾಯ.

—ಒಗರ್ ಚಲನೆಯಿಂದ ಇಲ್ಲವೆ ಮಸೆತದಿಂದ ಬರುವ ಕಾಂತಿ.

—ಪೆರ್ ಸಾಣೆ ಹಿಡಿಯಲ್ಪಡು; ಗಾಯಗೊಳು; ಹರಿತಗೊಳು.

ಮಸೆದಂಕ ತಿಕ್ಕಾಟದ ಕಾಳಗ, ಹೋರಾಟ.

ಮಸ್ಕರ ಬಿದಿರು; ಜ್ಞಾನ; ಚಲನ.

ಮಸ್ಕರಿ ಜ್ಞಾನವಂತ, ಸನ್ಯಾಸಿ; ಭಿಕ್ಷು; ಚೇಷ್ಟೆ; ಅಪಹಾಸ; ಮಕ್ಕರಿ; ಚಂದ್ರ.

ಮಸ್ತಕ ತಲೆ; ತಲೆಪರಟೆ; ಹಣೆ, ಮರ ಇಲ್ಲವೆ ಬೆಟ್ಟದ ಶಿಖರ.

ಮಸ್ಲತು ಮಸಲತ್ತು, ಹೊಂತು, ಒಳಸಂಚು.

ಮಸ್ತಿ ಕೊಬ್ಬು; ಸೊಕ್ಕು, ಮದ; ಆನೆಯ ಕಾಮಸನ್ನಿ.

ಮಸ್ತಿಷ್ಕ ತಲೆಯೊಳಗಿನ ಮಿದುಳು.

ಮಸ್ತು ಮೊಸರಿನ ಕೆನೆ, ಮಜ್ಜಿಗೆ; ಬಹಳ; ತುಂಬ; ಮತ್ತ್ತತೆ.

ಮಹ ಉತ್ಸವ; ಸದಾ ಸಂತೋಷಕೊಡುವ ಕೆಲಸ; ತೇಜಸ್ಸು; ಯಾಗ, ಯಜ್ಞ; ಕೋಣ.

ಮಹಜರುಅ ರಸನಿಂದ ದೊರೆತ ಅಧಿಕಾರ; ಪತ್ರ, ಒಂದು ದಾವೆಯ ಮೇಲಾದ ನಿರ್ಣಯ; ಹಲವರು ಒಪ್ಪಿ ಮಾಡಿದ ಹೇಳಿಕೆ.

ಮಹಡಿ ಮಾಳಿಗೆ, ಉಪ್ಪರಿಗೆ, ಮೇಲಟ್ಟ.

ಮಹತ್ (ಮಹತ್ತು), ಅಧಿಕವಾದುದು, ದೊಡ್ಡದು; ಬಲವಾದ; ವಿಶೇಷವಾದ; ಬಹಳ; ಶ್ರೇಷ್ಠ.

ಮಹತಿ ನಾರದನ ತಂಬೂರಿ; ಮಹತ್ವ.

ಮಹತ್ತಮ ಮಹತ್ತರ, ಅತಿಶಯ, ವಿಶೇಷ.

ಮಹದೇವ (ಮಹಾದೇವ), ಶಿವ.

ಮಹದೇವಿ (ಮಹಾದೇವ); ಪಾರ್ವತಿ; ಹೆಸರಾದ ಒಬ್ಬ ವೀರಶೈವ ಶರಣೆ.

ಮಹನೀಯ ದೊಡ್ಡವ, ಮಹಾಶಯ, ಗೌರವಸ್ಥ.

ಮಹಮ್ಮದ ಮುಸಲ್ಮಾನ; ಪೈಗಂಬರ.

ಮಹರ್ಲೋಕ ಭೂಮಿಯ ಮೇಲಿನ ಏಳು ಲೋಕಗಳಲ್ಲಿ ಒಂದು.

ಮಹರ್ಷಿ ಬ್ರಹ್ಮಜ್ಞಾನವುಳ್ಳ ಋಷಿ, ವೇದವ್ಯಾಸ ಮೊದಲಾದವರು.

ಮಹಲು (ಮಹಾಲು).

ಮಹಂತ (ದ್ಭ) ಮಹಾತ್ಮಾ (ಸಂ), ದೊಡ್ಡ ಮನುಷ್ಯ;ಗುಡಿ ಮಠಗಳ ಧರ್ಮಾಧಿಕಾರಿ.

ಮಹಾ ದೊಡ್ಡ; ಶ್ರೇಷ್ಠವಾದ.

ಮಹಾಕಾಲ ಎಡೆಬಿಡದ ಸಮಯ; ಶಿವ; ಭೈರವ; ವಿಶೇಷ.

ಮಹಾತಳ ಐದನೆಯ ಪಾತಾಳ.

ಮಹಾತ್ಮ ದೊಡ್ಡ ಬುದ್ಧಿಯುಳ್ಳವ; ಶ್ರೇಷ್ಠ ವ್ಯಕ್ತಿ, ವಿಭೂತಿಪುರುಷ; ಉತ್ತಮ ಆತ್ಮ ಉಳ್ಳ ವ್ಯಕ್ತಿ.

ಮಹಾದೇವ (ಮಾದೇವ), ಶಿವ.

ಮಹಾದೇವಿ (ಮಾದೇವಿ), ಪಾರ್ವತಿ.

ಮಹಾನದಿ ಒರಿಸ್ಸಾ(ಉರಿಯ)ದಲ್ಲಿ ಹರಿಯುವ ಒಂದು ದೊಡ್ಡ ನದಿ.

ಮಹಾನವಮಿ (ಮಾನೋಮಿ), ನವರಾತ್ರಿಯ ಕೊನೆಯ ದಿನ.

ಮಹಾನುಭಾವ ತುಂಬ ಅನುಭವಶಾಲಿ; ಉದಾರಿ.

ಮಹಾಪ್ರಾಣ ಹೆಚ್ಚು ಬಲದಿಂದ ಉಚ್ಚರಿಸಬೇಕಾದ ಅಕ್ಷರ, ಗಂಡಕ್ಕರ.

ಮಹಾಬಲ ಬಹಳ ಶಕ್ತಿಯುಳ್ಳವ, ಶಿವ.

ಮಹಾಭಾರತ ಭರತನ ವಂಶಸ್ಥರಾದ ಕೌರವ ಪಾಂಡವರ ಇತಿಹಾಸ; ವೇದವ್ಯಾಸನು ಬರೆದ ಭಾರತ ಗ್ರಂಥ.

ಮಹಾಮಾತ್ರ ಪ್ರಧಾನಿ; ಮಾವಟಿಗ.

ಮಹಾಮಾಯೆ ವಿಶ್ವವು ಸಟೆಯಾದರೂ ಸಹಜವಾಗಿ ಕಾಣುವಿಕೆ; ದುರ್ಗೆ.

ಮಹಾಮೇರು ಮೇರು ಪರ್ವತ.

ಮಹಾರಥ ಮಹಾವೀರ; ರಥದಲ್ಲಿ ಕುಳಿತು

ತನ್ನವರನ್ನು ಕಾಪಾಡಿ ವೈರಿಯ ಮೇಲೆ ಕಾಳಗ ಎಸಗುವವನು.

**ಮಹಾರಾಜ** ಅರಸರ ಅರಸ, ಸಮ್ರಾಟ, ಚಕ್ರವರ್ತಿ.

**ಮಹಾರಾಯ** (ದ್ಭ) ಮಹಾರಾಜ (ಸಂ), ಅರಸು; 220 ಮಂದಿ ಗಣದೇವತೆಗಳು; ದೊಡ್ಡ ಮನುಷ್ಯ.

**ಮಹಾರಾಷ್ಟ್ರ** ಮರಾಟದೇಶ; ದೊಡ್ಡ ದೇಶ.

**ಮಹಾಲಕ್ಷ್ಮೀ** ಎಂಟು ಭುಜವುಳ್ಳ ದುರ್ಗೆ.

**ಮಹಾಲಯ** ಸಂಪೂರ್ಣವಾಗಿ ಲೋಕವು ನಾಶವಾಗುವ ಕಾಲ; ದೊಡ್ಡ ಮನೆ; ತೀರ್ಥ ಸ್ನಾನ; ಭಾದ್ರಪದ ಮಾಸದ ಕೃಷ್ಣಪಕ್ಷ; ಸರ್ವ ಪಿತೃಗಳಿಗೆ ಪಿಂಡದಾನ ಮಾಡುವ ಒಂದು ಶ್ರಾದ್ಧ, ಮಾಳ.

**ಮಹಾಲು** (ಮಹಲು), ಅರಮನೆ, ಮಂದಿರ; ಒಂದು ನರಕ.

**ಮಹಾವೀರ** 24ನೆಯ ಜೈನ ತೀರ್ಥಂಕರರಲ್ಲೊಬ್ಬ. ಈತನು ಬುದ್ಧನ ಸಮಕಾಲೀನ.

**ಮಹಾಶಯ** ಉದಾರ ಮನಸ್ಸಿನವ, ಮಹಾನುಭಾವ; ಹುಲಿ.

**ಮಹಾಶ್ವೇತೆ** ಕಾದಂಬರಿ ಗ್ರಂಥದ ನಾಯಿಕೆ.

**ಮಹಿ** ಭೂಮಿ; ಮಾಳವದೇಶದಲ್ಲಿ ಹರಿಯುವ ಒಂದು ನದಿ.

**ಮಹಿಕೆ** ಹಿಮ, ಬರ್ಫ.

**ಮಹಿಪ** ಅರಸು.

**ಮಹಿಮ** ಮಹತ್ವ, ದೊಡ್ಡತನ; ಪರಮೇಶ್ವರನಲ್ಲಿರುವ ಒಂದು ಐಶ್ವರ್ಯ; ಅಷ್ಟಸಿದ್ಧಿಗಳಲ್ಲಿ ಒಂದು.

**ಮಹಿಮೆ** (ಮೈಮೆ), ಶ್ರೇಷ್ಠತೆ, ಹಿರಿಮೆ.

**ಮಹಿಷ** ಕೋಣ; ಮಹಿಷಾಸುರನೆಂಬ ಕೋಣನ ಆಕಾರದ ಒಬ್ಬ ರಕ್ಕಸ; ಪಟ್ಟಾಭಿಷಿಕ್ತ ರಾಣಿ.

**ಮಹಿಷಿ** ಎಮ್ಮೆ; ಅರಸನ ಪಟ್ಟಾಭಿಷಿಕ್ತರಾಣಿ.

**ಮಹಿಳೆ** (ಮಹಿಲೆ), ಸ್ತ್ರೀ.

**ಮಹುಳಿ** (ದ್ಭ) ಮೌಳಿ (ಸಂ), ಬೀಸಾಟ; ಆಳ್ವಿಕೆ.

**ಮಹೇಶ** (ಮಹೀಶ), ಮಹೇಶ್ವರ; ದೊಡ್ಡ ಒಡೆಯ, ಶಿವ.

**ಮಹೇಶ್ವರಿ** ಪಾರ್ವತಿ.

**ಮಹೇಂದ್ರ** ಇಂದ್ರನಿಗೇ ಆಜ್ಞೆ ಕೊಡುವವ, ಪರಮೇಶ್ವರ; ಬಹಳ ಐಶ್ವರ್ಯ ಉಳ್ಳವ; ಇಂದ್ರ.

**ಮಹೈಶ್ವರ್ಯ** ಅತಿ ಸಂಪತ್ತು, ಮಹಾಸಂಪತ್ತು.

**ಮಹೋತ್ಸವ** ಹೆಚ್ಚಿನ ಸಂತಸ; ಸದಾ ಸುಖ ಕೊಡುವ ವ್ಯಾಪಾರ.

**ಮಹೋದಯ** ಹೆಚ್ಚಿನ ವೃದ್ಧಿಯುಳ್ಳುದು; ಕನ್ಯಾಕುಬ್ಜ ದೇಶ; ಪ್ರತಾಪ; ಅಹಂಕಾರ; ಒಂದು ಶುಭಮುಹೂರ್ತ; ಮಹಾನುಭಾವ

**ಮಹೋದರ** ಹೊಟ್ಟೆ ಬಾತುಕೊಳ್ಳುವ ಒಂದು ಬೇನೆ, ಜಲೋದರ.

**ಮಳಲು** (ಮಳಲ್), ಮರಳು, ಉಸುಬು, ಹೊಯಿಗೆ, ಉಸುಕು.

**ಮಳಿ** ಕಪ್ಪೆಚಿಪ್ಪು, ಮಳಿಚಿಪ್ಪು; ಕಡಲು ನದಿಗಳಲ್ಲಿ ದೊರೆಯುವ ಚಿಪ್ಪುಳ್ಳ ಪ್ರಾಣಿ.

**ಮಳಿಗೆ** (ದ್ಭ) ಮಠಿಕಾ (ಸಂ), ಅಂಗಡಿ, ಮಂಡಿ; ಜವುಳಿ ಅಂಗಡಿ.

**ಮಳ್ಕು** ಸಂಹಾರಮಾಡು, ಕೊಲ್ಲು; ಅಡಗು; ಶಕ್ತಿಕುಂದು.

**ಮಂಕ** ಬುದ್ಧಿಭ್ರಮೆಗೊಂಡವ; ಬೆರಗಾದವ; ಹುಚ್ಚ, ತಬ್ಬಿಬ್ಬಾದವ.

**ಮಂಕಡ** (ದ್ಭ) ಮರ್ಕಟ (ಸಂ), ಮಂಗ, ಕಪಿ.

**ಮಂಕಣಿ** ಹೇರೆತ್ತುಗಳ ಮೇಲೆ ಹಾಕುವ ಬೀಳಲಿನ ತಡಿಕೆ, ಕಂಟಲಿ.

**ಮಂಕರಿ** ಮಕ್ಕರಿ, ಬುಟ್ಟಿ, ಹೆಡಗೆ.

**ಮಂಕು** ಬೆರಗು, ವಿಸ್ಮಯ; ಬುದ್ಧಿಭ್ರಮಣೆ.

—ಬಡಿ ಮರುಳುಗೊಳ್ಳು; ಬುದ್ಧಿ ವಿಕಲಿತ ವಾಗು.
ಮಂಗ (ದ್ಭ) ಮರ್ಕಟ (ಸಂ), ಕಪಿ, ಕೋತಿ.
ಮಂಗಲ ಒಂದು ಗ್ರಹ; ಒಂದು ವಾರ; ಶುಭ, ಒಳಿತು, ಕಲ್ಯಾಣ; ಗುರುಕೆ.
—ಸೂತ್ರ ತಾಳಿ, ಅಯ್ದೆತನದ ಗುರುತು.
ಮಂಗಳ (ಮಂಗಲ), ಅಂಗಾರಕ; ಶುಭ ಶೋಭನ; ಶಕುನ; ಅದೃಷ್ಟ, ಸುದೈವ.
—ವಾರ ಒಂದು ವಾರ.
ಮಂಗಳಚ್ಛಾಯೆ ಒಳ್ಳೆನೆರಳುಳ್ಳುದು, ಆಲದ ಮರ.
ಮಂಗಳಾರ ಸಂತೋಷದ ಸ್ಥಳ.
ಮಂಗಳಾರತಿ ಶುಭ ಸೂಚನೆಗಾಗಿ ಎತ್ತುವ ಆರತಿ; ಹರಸುವುದಕ್ಕಾಗಿ ಎತ್ತುವ ಆರತಿ.
ಮಂಗಳಾಷ್ಟಕ ವಿವಾಹಕಾಲದಲ್ಲಿ ಮಂಗಳ ವನ್ನು ಬಯಸಿ ಹಾಡುವ ಶ್ಲೋಕಗಳು.
ಮಂಗಿನಿ ದೋಣಿ, ಹಡಗು.
ಮಂಗೇಶ ಸುಗ್ರೀವ; ಹನುಮಂತ; ಗೋವೆ ಯ ಒಂದು ದೇವಾಲಯ.
ಮಂಚ ಮಲಗುವ ಅಟ್ಟಳೆ; ಮಲಗುವ ಮಂಚ; ಪರ್ಯಂಕ, ಪಲ್ಲಂಗ; ಅಟ್ಟಳಿಗೆ, ಬುರುಜು.
ಮಂಚಿಕೆ ಮರದ ಮೇಲೆ ಮಾಡಿದ ಮಲಗುವ ಮನೆ; ಹೊಲ ಕಾಯುವ ಅಟ್ಟಳೆ.
ಮಂಜರ ಬೆಕ್ಕು; ಗಂಡು ಬೆಕ್ಕು, ಬಾವುಗ.
ಮಂಜರಿ ಗೊಂಚಲು, ಜೊಲ್ಲೆ; ಮೊಗ್ಗೆ, ಮಿಟ್ಟೆ; ಚಿಗುರು, ಕುಡಿ.
ಮಂಜಳ ಅರಸಿನ; ಕೇಸರ ಬಣ್ಣ.
ಮಂಜಿ ಒಂದು ಹಾಯಿಯ ಹಡಗು; ಸಣಬು, ಒಂದು ಬಗೆ ನಾರು.
ಮಂಜೀರ ಅಂದುಗೆ, ಪಾದಾಭರಣ, ಪೈಜಣಿ; ಕಡೆಗೋಲನ್ನು ಕಟ್ಟುವ ಕಂಬ.
ಮಂಜು ಮನೋಹರ, ಚೆಲುವಿನ; ಹಿಮ, ಇಬ್ಬನಿ, ಶೀತ, ಚಳಿ; ಮಂಜುಳ, ಚೆಲುವು.
ಮಂಜುಘೋಷ ಒಬ್ಬ ತಾಂತ್ರಿಕ ದೇವತೆ; ಮನೋಹರವಾದ ಶಬ್ದ ಉಳ್ಳುದು; ಒಬ್ಬ ಅಪ್ಸರೆ.
ಮಂಜುಲ (ಮಂಜುಳ), ಮನೋಹರ; ಒಳಿತು; ನಿಕುಂಜ, ಪೊದೆ.
ಮಂಜುಳಿಕೆ (ಮಂಜೀರಕ), ಪೆಟ್ಟಗೆ.
ಮಂಜೂರು ಒಪ್ಪಿಗೆ; ಕಾಯಂಮಾಡುವುದು.
ಮಂಜೂಷ ಪೆಟ್ಟಗೆ, ಸಂದುಕ.
ಮಂಟಪ (ಮಂಡಪ) ಚಪ್ಪರ; ಅಲಂಕರಿಸಿದ ವೇದಿಕೆ.
ಮಂಟಿಕೆ ಉಂಗುರ.
ಮಂಡ ಅನ್ನದ ಸಾರ, ತಿಳಿ, ಗಂಜಿ; ಮದ್ಯ; ನೆಲ್ಲಿಕಾಯಿ; ಹರಳು; ಗಿಡ; ಜೂಜಿನ ಕಳ; ಕಪ್ಪೆ.
ಮಂಡಕಾಗೆ ಮೊಂಡಕಾಗೆ, ಕಾಡುಕಾಗೆ.
ಮಂಡನ ಅಲಂಕಾರ, ಆಭರಣ; ಸಮರ್ಥನೆ, ಪುಷ್ಟಿ.
ಮಂಡಪ (ಮಂಟಪ), ಚಪ್ಪರ; ಅಲಂಕರಿಸಿದ ಚಪ್ಪರ; ವಿಶ್ರಾಂತಿಸ್ಥಾನ; ದೇವಾಲಯ; ವಿವಾಹ ಗೃಹ; ನಿಕುಂಜ.
ಮಂಡಲ ಚಕ್ರಾಕಾರವಾದ ಸುತ್ತು; ಕಣ; ಗ್ರಹಪಥ; ಸಮೂಹ; ಗೋಲ; ಕೂಟ; ಒಂದು ವಿಷ ಸರ್ಪ.
ಮಂಡಲಿ (ಮಂಡಳಿ), ವೃತ್ತಾಕಾರವಾಗಿ ಸುತ್ತಿಕೊಂಡುದು; ಕೂಟ, ಸಭೆ; ಒಂದು ಸರ್ಪ; ಒಂದು ಬಗೆಯ ರಂಗವಲ್ಲಿ ಕೆಲಸ.
ಮಂಡಲೇಶ ಚಕ್ರವರ್ತಿ, ಸಮ್ರಾಟ.
ಮಂಡವಿಗೆ ಕಿರಿಯ ಮಂಟಪ; ಒಂದು ಬಗೆ ಬಲೆ.
ಮಂಡಳ (ಮಂಡಲ), ಚಕ್ರ; ವ್ಯೂಹ; ಚಕ್ರ ವಾಕ.
ಮಂಡಿ ಮೊಣಕಾಲು; ಅಂಗಡಿ, ಗೋದಾ ಮ್ಮು, ಮಳಿಗೆ; ವಾತರೋಗ; ಬಾಗಿದ.

ಮಂಡಿಗೆ ಒಂದು ಸವಿಯಾದ ಭಕ್ಷ್ಯ.

ಮಂಡೂಕ ಕಪ್ಪೆ.

ಮಂಡೂರ ಕಬ್ಬಿಣದ ಕಿಟ್ಟ; ಲೋಹಮಂಡೂರ (ಮೆಂಗನೀಸ್); ತುಕ್ಕು.

ಮಂಡೆ ಕುಡಿ; ತಲೆ; ಸ್ಥಳ.

ಮಂಡೋದರಿ ಸುಂದರವಾದ ನಡುವುಳ್ಳವಳು, ಚೆಲುವೆ; ರಾವಣನ ಹೆಂಡತಿ. ಮಯಾಸುರನ ಮಗಳು. ಈಕೆ ಇಂದ್ರಜಿತುವಿನ ತಾಯಿ.

ಮಂತಣ (ಧ್ಭ) ಮಂತ್ರಣ (ಸಂ), ಆಲೋಚನೆ; ಗೋಪ್ಯ; ಏಕಾಂತ.

ಮಂತಣೆ(ಧ್ಭ) ಮಂಥನ(ಸಂ), ಕಡೆಯುವಿಕೆ.

ಮಂತು ಅಪರಾಧ; ಮಂತ್ರಿ (ಸಂ), ಕಡೆಯುವಿಕೆ.

ಮಂತ್ರ ಗುಟ್ಟಾಗಿ ಮಾಡುವ ಯೋಚನೆ; ದೇವತಾಸಿದ್ಧಿಗಾಗಿ ಹೇಳುವ ಶಬ್ದವಿಶೇಷ; ವೇದದ ಒಂದು ಭಾಗ; ಯೋಚನೆ, ಆಲೋಚನೆ; ಸಂಚು, ಹೊಂತು.

ಮಂತ್ರಾಕ್ಷತೆ ಆಶೀರ್ವದಿಸುವಾಗ ಮಂತ್ರದೊಡನೆ ಕೊಡುವ ಅಕ್ಷತೆ ಕಾಳು.

ಮಂತ್ರಾಲೋಚನೆ ಗುಪ್ತಾಲೋಚನೆ, ಗೂಢಾಲೋಚನೆ.

ಮಂತ್ರಿ ಅರಸನೊಡನೆ ಗುಟ್ಟಾಗಿ ಯೋಚನೆಗೆ ನೆರವಾಗತಕ್ಕವನು, ದಿವಾನ, ಅಮಾತ್ಯ, ಸಚಿವ.

ಮಂತ್ರಿಕ ಮಾಂತ್ರಿಕ, ಮಾಟಗಾರ.

ಮಂತ್ರಿಸು ಬುದ್ಧಿ ಹೇಳು; ಮಂತ್ರಮಾಡು.

ಮಂಥ ಕಡೆಗೋಲು; ಮಜ್ಜಿಗೆ; ಕಣ್ಣಿನ ಒಂದು ಬೇನೆ, ಪರೆಬರುವುದು.

ಮಂಥನ ಕಡೆಯುವುದು; ಕಡೆಗೋಲು.

ಮಂಥರ ಮಂದರ; ಮೂರ್ಖ; ಕೋಪ; ವಿಷ್ಣು; ಜಡ, ಅಲಸಿ.

ಮಂಥರಶೈಲ ಕಡಲನ್ನು ಕಡೆಯಲು ಸುರರೂ ಅಸುರರೂ ಉಪಯೋಗಿಸಿದ ಒಂದು ಬೆಟ್ಟ, ಮಂದರಗಿರಿ.

ಮಂಥರೆ (ಮಂದರೆ), ದಶರಥನ ಹೆಂಡತಿಯಾದ ಕೈಕೇಯಿಯ ದಾಸಿ. ಈಕೆಯ ಉಪದೇಶದಿಂದ ಕೈಕೇಯಿ ರಾಮನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದಳು.

ಮಂಥು ಶೋಕ; ದೀನತೆ.

ಮಂದ ಮೂರ್ಖ, ದಡ್ಡ; ಬೊಡ್ಡ; ದಪ್ಪವಾದ; ಅಲ್ಪ; ನಿಧಾನ, ಜಡ; ದುಷ್ಟ; ಶನಿಗ್ರಹ; ಯಮ; ಒಂದು ಸೂರ್ಯಸಂಕ್ರಾಂತಿ.

—ಕಾರಿ ಅಜೀರ್ಣಕಾರಿ.

—ಗಮನೆ ಮೆಲ್ಲನಡೆಯುವವಳು; ಚೆಲುವೆ.

ಮಂದಜ ತಾವರೆ.

ಮಂದಪಾಲ ಪ್ರಾಚೀನಕಾಲದ ಒಬ್ಬ ಋಷಿ.

ಮಂದಭಾಗ್ಯ ಹತಭಾಗ್ಯ, ಅದೃಷ್ಟಹೀನ.

ಮಂದಮಾರುತ ಮೆಲುಗಾಳಿ, ಹಗುರವಾಗಿ ಬೀಸುವ ಗಾಳಿ, ನಿಧಾನವಾಗಿ ಬೀಸುವ ಗಾಳಿ.

ಮಂದರ ಸಮುದ್ರಮಥನದ ಕಾಲದಲ್ಲಿ ಕಡೆಗೋಲಾಗಿ ಉಪಯೋಗಿಸಲ್ಪಟ್ಟ ಒಂದು ಬೆಟ್ಟ.

ಮಂದಲಿಗೆ ಹುಲ್ಲಿನ ಚಾಪೆ.

ಮಂದಹಾಸ ಮುಗುಳ್ನಗೆ, ನಸುನಗೆ.

ಮಂದಾಕಿನಿ ಮೆಲ್ಲಗೆ ಹರಿಯುವ ನದಿ; ಗಂಗೆ; ಸ್ವರ್ಗದ ಗಂಗೆ, ಆಕಾಶಗಂಗೆ.

ಮಂದಾನಿಲ ಮಂದಮಾರುತ, ಮೆಲ್ಲಗೆ ಬೀಸುವ ಗಾಳಿ.

ಮಂದಾರ ದೇವಲೋಕದ ಒಂದು ಪುಷ್ಪವೃಕ್ಷ; ಬೇಡಿದುದನ್ನು ಕೊಡುವ ಒಂದು ಮರ; ಒಂದು ಸಸ್ಯ.

ಮಂದಿ ಜನ; ಜಡ; ವ್ಯಾಪಾರದ ಭರ ಕಡಮೆಯಾಗುವಿಕೆ.

ಮಂದಿರ ಮನೆ; ದೇವಾಲಯ, ದೇವರ ಗುಡಿ.

ಮಂದಿವಾಳ ಮೂರ್ಖತನ; ಉದ್ಧಟತನ, ಹೆಮ್ಮೆ; ಅತಿ ಸಲಿಗೆ; ಕುಚೋದ್ಯ.

ಮಂದುರ (ಮಂದುರಾ), ಅಶ್ವಶಾಲೆ, ಕುದುರೆ ಲಾಯ, ತಬೇಲಿ.

ಮಂದೆ ಪ್ರಾಣಿಸಮೂಹ; ಜನಸಮೂಹ; ಸಭೆ.
—ವಾಳ ಮುಂದೆ ನಡೆಸುವವ; ಕುರುಬ, ಹಿಂಡಿನ ಒಡೆಯ.

ಮಂದೈಸು ದಟ್ಟವಾಗು; ವ್ಯಾಪಿಸು.

ಮಂದೋಷ್ಣ ಸ್ವಲ್ಪ ಬಿಸಿ, ಬೆಚ್ಚಗೆ, ಉಗುರು ಬಿಸಿ.

ಮಂದ್ರ ತಗ್ಗಿದ ಸ್ವರ, ಇಳಿದನಿ; ಗಂಭೀರ ಸ್ವರ; ಒಂದು ವಿಧ ವಾದ್ಯ.

ಮಾ ಬೇಡ; ಅಳೆ; ಲಕ್ಷ್ಮಿ; ತಾಯಿ; ಮಾಂ, ಮಾವು; ಮಹಾ.

ಮಾಕರಿಸು ಮರ್ಮಚುಚ್ಚು, ರಹಸ್ಯ ಹೇಳು.

ಮಾಕಂದ ಮಾವಿನ ಮರ; ನೆಲ್ಲಿಗಿಡ.

ಮಾಕಂದಿ ಗಂಗಾನದಿಯ ತೀರದಲ್ಲಿದ್ದ ದ್ರುಪದನ ಪಟ್ಟಣ.

ಮಾಕಾಳಿ (ದ್ಭ) ಮಹಾಕಾಳಿ (ಸಂ), ದುರ್ಗೆ.

ಮಾಕ್ಷಿಕ ನೊಣಗಳಿಂದ ಸಂಗ್ರಹಿಸಲ್ಪಟ್ಟುದು, ಜೇನುತುಪ್ಪ.

ಮಾಗಣಿ (ಮಾಗಣೆ), ತಾಲೂಕಿನ ಒಂದು ಭಾಗ, ಹೋಬಳಿ, ಗ್ರಾಮಸಮುದಾಯ; ಮಾಗಳಿ ಗಿಡ.

ಮಾಗಧ ಬಿಳಿಯ ಜೀರಿಗೆ; ಸ್ತುತಿಪಾಠಕ; ಮಗಧ ದೇಶದಲ್ಲಿ ಹುಟ್ಟಿದ್ದು; ಒಂದು ಭಾಷೆ, ಮಗಧ ದೇಶದ ಅರಸಾಗಿದ್ದ ಜರಾಸಂಧ; ಕ್ಷತ್ರಿಯನಿಂದ ವೈಶ್ಯಳಲ್ಲಿ ಹುಟ್ಟಿದ ಸಂಕೀರ್ಣ ಜಾತಿಯವ.

ಮಾಗಧಿ ಸ್ತುತಿಪಾಠಕಿ; ಪ್ರಾಕೃತವಾದ ಒಂದು ಭಾಷೆ; ಜಾಜಿಮಲ್ಲಿಗೆ; ಸೇವಂತಿಗೆ.

ಮಾಗಾಯಿ ಮಾವಿನಕಾಯಿ; ಕಿವಿಯ ಒಂದು ಆಭರಣ.

ಮಾಗಿ (ದ್ಭ) ಮಾಘ (ಸಂ), ಶಿಶಿರ ಋತು, ಚಳಿಗಾಲ.

ಮಾಗು ಹಣ್ಣಾಗು, ಪಕ್ವವಾಗು, ಬಲಿ.

ಮಾಘ ಮಘಾ ನಕ್ಷತ್ರದ ಹುಣ್ಣಿಮೆಯುಳ್ಳ ತಿಂಗಳು; ಒಬ್ಬ ಸಂಸ್ಕೃತ ಕವಿ.

ಮಾಚು (ಮಾಜು), ಮಾಸು, ಮರೆಯಿಸು.

ಮಾಜನ (ದ್ಭ) ಮಹಾಜನ (ಸಂ), ಜನ ಸಮುದಾಯ.

ಮಾಜಾತ ಲಕ್ಷ್ಮೀಸುತ, ಕಾಮ.

ಮಾಜಿ ಹಿಂದಿನ, ಕಳೆದ, ಗತ; ನಿವೃತ್ತ.

ಮಾಜು (ಮಾಚು), ಒರಸು; ಮಾಸು; ವಂಚಿಸು; ವಂಚನೆ.

ಮಾಟ ಮಾಡುವಿಕೆ, ಕಾರ್ಯ; ಕಪಟ, ಪರರಿಗೆ ಹಾನಿ ಮಾಡುವ ಹೊಂಚು.

ಮಾಡ ಹರ್ಮ್ಯ, ಉಪ್ಪರಿಗೆ, ಮಹಡಿ; ಮನೆ; ಉಪ್ಪರಿಗೆ ಮನೆ; ಗೂಡು, ಮಾಟ.

ಮಾಡಿ ಮಾಳಿಗೆ, ಮಹಡಿ, ಅಟ್ಟ.

ಮಾಡು ಮನೆಯ ಹೊದ್ದಿಕೆ; ಹರ್ಮ್ಯ; ಉಪ್ಪರಿಗೆ; ಕೆಲಸ ನಡಸು; ಆಗಿಸು, ಏರ್ಪಡಿಸು.

ಮಾಢಿ ಅಂಚು; ಎಲೆಗಳ ನರ; ದುಃಖ, ವ್ಯಥೆ.

ಮಾಣ್ ನಿಲ್ಲಿಸು, ನಿವಾರಿಸು; ಬಿಡು; ತಡೆ; ಗುಣಪಡಿಸು; ಗುಣಹೊಂದು.
—ಇಸು (ಮಾಣ್ಚು), ಬಿಡಿಸು; ನಿಲ್ಲಿಸು; ನಿವಾರಿಸು, ಹೋಗಲಾಡಿಸು.

ಮಾಣವ ಮಾಣಿ (ದ್ಭ), ತರುಣ, ಹುಡುಗ, ಎಳೆಯ.
—ಕ ಹುಡುಗ; ಬ್ರಹ್ಮಚಾರಿ, ಮಾಣಿ; ಮುತ್ತಿನ ಸರ.

ಮಾಣಿಕ (ದ್ಭ) ಮಾಣಿಕ್ಯ (ಸಂ), ಪದ್ಮರಾಗ, ಕೆಂಪು ರತ್ನ.

ಮಾಣು (ಮಾಣ್).

ಮಾತರಿಶ್ವ ಆಕಾಶದಲ್ಲಿ ಚಲಿಸುವುದು, ಗಾಳಿ.

ಮಾತಲಿ ಇಂದ್ರನ ಸಾರಥಿಯ ಹೆಸರು.

**ಮಾತಂಗ** ಮತಂಗನೆಂಬ ಋಷಿಗೆ ಸಂಬಂಧಿಸಿದ; ಆನೆ; ಒಂದು ಕಿರಾತ ಜಾತಿ; ಹೊಲೆಯ; ಒಂದು ಪರ್ವತ.

**ಮಾತಾ** (ಮಾತೆ), ತಾಯಿ, ಅವ್ವ, ಅಮ್ಮ.

— **ಮಹ** ತಾಯಿಯ ತಂದೆ, ಅಜ್ಜ.

**ಮಾತಾಳಿ** ವಾಚಾಳಿ, ಬಲು ಮಾತಾಡುವವ, ಬಾಯಿಬಡಕ; ಸ್ತ್ರೀ ದೇವತೆಯರು.

**ಮಾತು** ನುಡಿ, ಹೇಳಿಕೆ, ವಚನ, ವಾಕ್ಕು; ಭಾಷೆ; ಒಪ್ಪಿಗೆ; ನಿಂದೆ, ಸುದ್ದಿ.

— **ಕೊಡು** ವಚನಕೊಡು.

— **ಮಾಡು** ಒಪ್ಪಂದ ಮಾಡು, ಸಂಧಾನ ಮಾಡು.

— **ಹಿಡಿ** ಒಂದು ಮಾತಿಗೆ ಜೋತು ಬೀಳು, ಹಂಗಿಸು.

**ಮಾತುಲ** ತಾಯಸೋದರ,ಸೋದರಮಾವ.

**ಮಾತುಲಂಗ** ಮಾದಳ ಕಾಯಿ, ಮಾದಾಳ.

**ಮಾತುಲಾನಿ** ಸೋದರಮಾವನ ಹೆಂಡತಿ, ಅತ್ತೆ, ಸೋದರತ್ತೆ.

**ಮಾತುಶ್ರೀ** ತಾಯಿ; ಮಾತೃಸಮಾನಳಾದವಳು, ಪೂಜ್ಯೆ.

**ಮಾತೃ** ಮಾತೆ, ತಾಯಿ; ಬ್ರಾಹ್ಮೀ, ಮಾಹೇಶ್ವರಿ, ವಾರಾಹಿ, ವೈಷ್ಣವಿ, ಕೌಮಾರಿ, ಚಾಮುಂಡಿ, ಇಂದ್ರಾಣಿ—ಎಂಬ ಏಳು ಮಾತೃದೇವತೆಗಳು; ಭೂಮಿ; ಸಂಪತ್ತು.

**ಮಾತೃಕೆ** ಉಪಮಾತೃ,ಸಾಕುತಾಯಿ;ದಾದಿ; ಮೂಲಪ್ರತಿ.

**ಮಾತೆ** (ಮಾತಾ), ತಾಯಿ.

**ಮಾತ್ರ** ಅಳತೆ; ರಾಶಿ; ಅಣು; ಅಷ್ಟರಮಟ್ಟಿಗೆ; ಅಷ್ಟೇ ಅಲ್ಲದೆ; ಆದರೆ.

**ಮಾತ್ರತ್ರಯ** ಪ್ಲುತ.

**ಮಾತ್ರಾ** (ಮಾತ್ರೆ), ಮಾನ, ಕಾಲಮಾನ, ಅಳತೆ; ಅಣು, ಅಂಶ; ಸಂಪತ್ತು; ಸಾಮುಗ್ರಿ, ವಸ್ತು; ಅಕ್ಷರ; ರೇಖೆ.

**ಮಾತ್ರಾಗಣ** ಇಷ್ಟೆ ಮಾತುಗಳಿಗೆ ಒಂದು ಗಣ ಎಂದು ಏರ್ಪಟ್ಟ ಅಕ್ಷರಕೂಟ.

**ಮಾತ್ರೆ** (ಮಾತ್ರಾ), ಗುಳಿಗೆ; ಮದ್ದಿನ ಗುಳಿಗೆ; ಅಕ್ಷರ, ಉಚ್ಚಾರದ ಕಾಲಮಾನ.

**ಮಾತ್ಸರ್ಯ** ಅಸೂಯೆ, ಹೊಟ್ಟೆಕಿಚ್ಚು, ಮಚ್ಚರ.

**ಮಾದ** ದರ್ಪ, ಅಹಂಕಾರ; ಸಂತೋಷ.

**ಮಾದಕ** ಅಮಲು; ಅಮಲೇರಿಸುವ.

**ಮಾದರಿ** ಆದರ್ಶ; ಕ್ರಿಸ್ತ ಸನ್ಯಾಸಿನಿ.

**ಮಾದಲ** (ದ್ಭ), ಮಾದಳ, ಮಾತುಲಂಗ (ಸಂ), ಒಂದು ಹಣ್ಣು.

**ಮಾದಿಗ** (ದ್ಭ) ಮಾತಂಗ (ಸಂ), ಶಬರ, ಬೇಡ; ಕೀಳು ಜಾತಿಯವ; ಹೊಲೆಯರ ಒಂದು ಪಂಗಡ.

**ಮಾದು** ಮರೆಯಾಗಿ, ಅಡಗಿ; ಹೋಗಿ.

**ಮಾದುರ** (ದ್ಭ) ಮಹಾಧುರ (ಸಂ), ಘೋರ ಯುದ್ಧ.

**ಮಾದುರಿಯ**(ದ್ಭ) ಮಾಧುರ್ಯ(ಸಂ),ಸವಿ.

**ಮಾದೇವ** (ದ್ಭ) ಮಹಾದೇವ (ಸಂ), ಶಿವ.

**ಮಾದೇವಿ**(ದ್ಭ) ಮಹಾದೇವಿ(ಸಂ),ಪಾರ್ವತಿ.

**ಮಾದ್ರ** ಮದ್ರ ದೇಶಕ್ಕೆ ಸಂಬಂಧಿಸಿದ; ಮದ್ರ ದೇಶದ ಅರಸನಾದ ಶಲ್ಯ.

**ಮಾದ್ರಿ** ಪಾಂಡುರಾಜನ ಎರಡನೆಯ ಹೆಂಡತಿ. ಇವಳು ಮದ್ರದೇಶದ ದೊರೆ ಋತಾಯನ ಮಗಳು. ಇವಳಿಗೆ ಅಶ್ವಿನಿ ದೇವತೆಗಳ ವರದಿಂದ ನಕುಲ ಸಹದೇವರೆಂಬ ಮಕ್ಕಳು ಹುಟ್ಟಿದರು. ಇವಳು ಕೊನೆಯಲ್ಲಿ ಪತಿಯೊಡನೆ ಸಹಗಮನ ಮಾಡಿದಳು.

**ಮಾದ್ರೇಯ** ಮಾದ್ರಿಯ ಮಕ್ಕಳು, ನಕುಲ, ಸಹದೇವ.

**ಮಾಧವ** (ಮಾ=ಲಕ್ಷ್ಮಿ), ಲಕ್ಷ್ಮೀಪತಿ, ವಿಷ್ಣು, ಕೃಷ್ಣ; ವೈಶಾಖಮಾಸ; ಮಧು, ಸಾರಾಯಿ; ಅರಸು.

ಮಾಧವಿ ಕಲ್ಲುಸಕ್ಕರೆ; ಒಂದು ಹೂ, ಇರುವಂತಿಗೆ; ಭೂಮಿ; ಕುಂಟನಿ.
ಮಾಧುರ್ಯ ಸಿಹಿ, ಸವಿ; ಮನೋಹರ.
ಮಾಧ್ಯಾಹ್ನಿಕ ಮಧ್ಯಾಹ್ನಕ್ಕೆ ಸಂಬಂಧಪಟ್ಟ ವಿಧಿ.
ಮಾಧ್ವ ಮಧ್ವಾಚಾರ್ಯರ ಪರಂಪರೆಯವ, ದ್ವೈತಿ, ವೈಷ್ಣವ.
ಮಾನ್ ಮಾಫು.
ಮಾನ ಅಳತೆ, ತೂಕ; ಗರ್ವ, ಅಹಂಕಾರ; ಸಮ್ಮಾನ, ಮರ್ಯಾದೆ; ಆತ್ಮಗೌರವ; ಶಿಷ್ನ; ಯೋನಿ.
—ಮರ್ಯಾದೆ ಗೌರವ, ಮನ್ನಣೆ.
—ವಂತ ಮರ್ಯಾದಸ್ಥ.
ಮಾನನೀಯ ಗೌರವಾರ್ಹ; ಮರ್ಯಾದೆಗೆ ಯೋಗ್ಯ.
ಮಾನವ ಮನುವಿನ ಸಂತತಿಯವ, ಮನುಷ್ಯ.
ಮಾನವಿ ಮನುಷ್ಯ ಸ್ತ್ರೀ, ಹೆಂಗುಸು.
ಮಾನಸ ಮನಸ್ಸು; ಕೈಲಾಸದ ಬಳಿಯ ಒಂದು ಸರೋವರ; ಮನುಷ್ಯ.
ಮಾನಸಿ ಬುದ್ಧಿಶಾಲಿನಿ; ಸ್ತ್ರೀ; ಮನಸಾದೇವಿ.
ಮಾನಸಿಕ ಮನಸ್ಸಿಗೆ ಸಂಬಂಧವಾದ.
—ಮಾಡು ತಾತ್ಸಾರಮಾಡು, ಹೀನಯಿಸು; ಉದಾಸೀನತೆ ತೋರು.
ಮಾನಸಿಕೆ ಗೌರವ; ಆತ್ಮಾಭಿಮಾನ.
ಮಾನಸ್ಥಾನ ಗುಪ್ತ ಅವಯವಗಳು.
ಮಾನಂಗಿ ಕಿರಿಯ ಬಾವಿ.
ಮಾನಾಮಿ (ದ್ಭ) ಮಹಾನವಮಿ (ಸಂ), ಆಶ್ವೀಜಮಾಸದ ಶುಕ್ಲಪಕ್ಷದ ನವಮಿ.
ಮಾನಾಯ ಧಾನ್ಯ ಅಳೆಯುವವನಿಗೆ ಕೊಡುವ ಕೂಲಿ ಇಲ್ಲವೆ ಪಡಿ.
ಮಾನಿ ಯೋಚನೆ; ಗಮನ; ಗೌರವಸ್ಥ.
ಮಾನಿನಿ ಮಾನವುಳ್ಳವಳು, ಕುಲೀನೆ; ಸ್ತ್ರೀ; ಪತಿಯೊಡನೆ ಕೋಪಗೊಂಡವಳು.
ಮಾನಿಸು ಮರ್ಯಾದಿಸು, ಗೌರವಿಸು; ಅಭಿಪ್ರಾಯಪಡು; ಯೋಚಿಸು.
ಮಾನುಷ ಮನುಷ್ಯಸಂಬಂಧವಾದ.
ಮಾನುಷಿ ಸ್ತ್ರೀ.
ಮಾನೆ ನಮೂನೆ, ಆದರ್ಶ, ಮಾದರಿ; ಮೇಲ್ಪಂಕ್ತಿ; ಒಂದು ಜಾತಿ ಹುಲ್ಲು.
ಮಾನೋಮಿ (ಮಹಾನವಮಿ).
ಮಾನ್ಯ(ಸಂ) ಮನ್ನೆಯ (ದ್ಭ), ಪೂಜ್ಯ, ಪೂಜಾಯೋಗ್ಯ; ಅರಸ; ಇನಾಮು, ಉಂಬಳಿ; ಒಕ್ಕಣೆಯಲ್ಲಿ ಒಬ್ಬರ ಹೆಸರಿನೊಂದಿಗೆ ಬರೆಯುವ ಗೌರವದ ಮಾತು; ಒಡಂಬಡಿಕೆ.
—ಗಾರ ಉಂಬಳಿದಾರ, ಇನಾಮುದಾರ.
ಮಾನ್ಯೆ ಕುಲೀನೆ, ಮರ್ಯಾದೆಗೆ ಯೋಗ್ಯಸ್ತ್ರೀ.
ಮಾಪಕ ಅಳೆಯುವ ಸಾಧನ; ಅದರಂತೆ.
ಮಾಪಣ ಅಳೆಯುವ; ನೋಯಿಸುವ.
ಮಾಪಳ (ದ್ಭ) ಮಹಾಫಲ (ಸಂ), ಮಾದಳ, ಮಾದಾಳ.
ಮಾಪಿ (ಮಾಫಿ), ಅಳತೆ; ಅಳೆಯುವ ಸಾಧನ; ಕ್ಷಮೆ; ರಿಯಾಯತಿ.
ಮಾಪಿಳ್ಳೆ ಮಲಬಾರಿನ ಮುಸಲ್ಮಾನ.
ಮಾಪುರುಷ (ದ್ಭ) ಮಹಾಪುರುಷ (ಸಂ).
ಮಾಫಕು ಮಾದರಿಯ; ಒಪ್ಪುವ, ತಕ್ಕ.
ಮಾಫು (ಮಾಫಿ, ಮಾಪಿ) ಕ್ಷಮೆ; ರಿಯಾಯತಿ, ಸೌಲತ್ತು.
ಮಾಮ ಮಾವ.
ಮಾಮಕ ನನ್ನ, ನನ್ನ ಸಂಬಂಧಿಯಾದ.
ಮಾಮರ ಮಾವಿನ ಮರ.
ಮಾಮಲೆ ತಾಲೂಕಿನ ಕಂದಾಯ ವಸೂಲಿ ಉದ್ಯೋಗ.
—ದಾರ ಕಂದಾಯ ವಸೂಲಿದಾರ, ತಹಸಿಲ್ದಾರ.
ಮಾಮುಸಕ ಅತಿ ರೋಷ; ಕೋಪಾತಿರೇಕ.
ಮಾಮೂಲು ಕಟ್ಟಳೆ, ಕಟ್ಟಳೆಯಿಂದ ಬಂದು

ದು; ರಿವಾಜು, ರೂಢಿ; ರೂಢಿಯಿಂದ ಕೊಡುವ ಕಾಣಿಕೆ.

ಮಾಯ್ (ಮಾಯು), ಅಡಗು,ಮರೆಯಾಗು; ಗುಣವಾಗು.

ಮಾಯ (ಮಾಯೆ,ಮಾಯಾ), ಇಂದ್ರಜಾಲ; ಜಂಬ, ವಂಚನೆ; ಇಲ್ಲದ ಭ್ರಾಂತಿ; ಬುದ್ಧನ ತಾಯಿ; ಒಂದು ವಿಶೇಷ ಶಕ್ತಿ.

ಮಾಯಾದೇವಿ ಶಾಕ್ಯ ಮುನಿಯ ತಾಯಿ; ಶಂಭರಾಸುರನ ಮಗಳು.

ಮಾಯಾವತಿ ಮಾಟಗಾರ್ತಿ; ಪ್ರದ್ಯುಮ್ನನ ಹೆಂಡತಿ.

ಮಾಯಾವಾದಿ ಪ್ರಪಂಚ ಮಿಥ್ಯವೆಂಬ ತತ್ವ ಒಪ್ಪುವವ; ಶಂಕರಾಚಾರ್ಯರ ಅದ್ವೈತ ಪಂಥದವ.

ಮಾಯಾವಿ ಮಾಯೆಮಾಡುವವ, ಇಂದ್ರ ಜಾಲಿಕ; ಬೆಕ್ಕು; ನರಿ.

ಮಾಯಿ ಮಾಯಕ; ಬ್ರಹ್ಮ; ಶಿವ; ಅಗ್ನಿ; ತಾಯಿ.

ಮಾಯು (ಮಾಯ್), ದೇಹದಲ್ಲಿನ ಪಿತ್ತ; ಒಂದು ರೋಗ; ಗುಣವಾಗು; ಕಾಣಿಸದೆ ಹೋಗು, ಮಾಜು; ರೋದಿಸು, ಮೊರೆ.

ಮಾರ್ (ಮಾರು), ಬಿಡಿಸಿ ಚಾಚಿದ ಎರಡು ಕೈಗಳ ತುದಿಯಿಂದ ತುದಿಯವಷ್ಟರ ಅಳತೆ; ವಿಸ್ತಾರ;ಎದೆ;ವಿಕ್ರಯಿಸು,ಬೆಲೆಗೆ ಕೊಡು; ಎದುರು; ಪ್ರತಿ; ಬೇರೆ.

ಮಾರ ಕೊಲ್ಲುವವ; ಮನ್ಮಥ; ವಿಘ್ನ; ತಡೆ; ಪಿಡುಗು; ಬಂದಣಿಕೆ.

— ಮಾರಣ ಮನ್ಮಥನನ್ನು ಕೊಂದವ; ಮಾರಹರ, ಶಿವ.

ಮಾರಜಿತ್ ಮಾರನನ್ನು ಜಯಿಸಿದವ,ಬುದ್ಧ.

ಮಾರಣ ಕೊಲ್ಲುವ, ಪರರನ್ನು ಕೊಲ್ಲುವು ದಕ್ಕೆ ಕಾರಣವಾದ ಕರ್ಮ; ಒಂದು ತಂತ್ರವಿಧಿ; ಕೊಲೆ.

ಮಾರವ ಮರುಗಾಡಿನ; ಮಾರವಾಡ ದೇಶ; ಒಂದು ರಾಗ.

ಮಾರವಾಡಿ ಮಾರವ ದೇಶದವ.

ಮಾರಹರ ಕಾಮಹರ, ಶಿವ.

ಮಾರಾಡು ಅದಲುಬದಲು ಮಾಡು, ಕೊಡು ಕೊಳ್ಳು.

ಮಾರಾನು ಇದಿರಿಸು, ಪ್ರತಿಭಟಸು.

ಮಾರಾಮಾರಿ ಜಗಳ, ಹೊಡೆದಾಟ ಬಡಿ ದಾಟ, ದೊಂಬಿ.

ಮಾರಾರಿ ಮನ್ಮಥನ ಶತ್ರು, ಶಿವ.

ಮಾರಾಳಿ ಅದಲುಬದಲು ಮಾಡುವ ವ್ಯಾಪಾರಿ.

ಮಾರಿ ಕೊಲೆ, ಕೊಲ್ಲುವ ದೇವತೆ, ದುರ್ಗೆ; ತೊಂದರೆ; ಹಿಂಸೆ; ಮಾರಿಕಾಬೇನೆ,ಪಿಡುಗು

ಮಾರೀಚ ತಾಟಕಿಯೆಂಬ ರಕ್ಕಸಿಯ ಮಗ. ಈತನು ಜಿಂಕೆಯ ರೂಪದಿಂದ ಪಂಚ ವಟಿಗೆ ಬಂದು ಸೀತೆಯನ್ನು ವಂಚಿಸಿದನು; ಮರೀಚ ಋಷಿಯ ಮಗ ಕಾಶ್ಯಪ.

ಮಾರೀಫತ್ತು ತಾಬೆ, ವಶ; ಮುಖಾಂತರ.

ಮಾರು (ಮಾರ್), ವಿಕ್ರಯಿಸು, ಅದಲು ಬದಲು ಮಾಡು; ಬಿಡಿಸಿದ ಒಂದು ಕೈತುದಿ ಯಿಂದ ಇನ್ನೊಂದು ತುದಿಯ ತನಕ ಆಗುವ ದೂರ; ಬದಲು, ಇನ್ನೊಂದು; ವಿಕ್ರಯಕ್ಕಿರಿಸಿದ ಒಡವೆ.

— ಒಡ್ಡು ಸೈನ್ಯಕ್ಕೆ ಇದಿರಾಗಿ ನಿಲ್ಲಿಸು; ಪ್ರತಿ ಸೈನ್ಯ.

— ಹೋಗು ಬೆಲೆಯಾಗಿ ಹೋಗು; ಅಡಿ ಯಾಳಾಗು, ದಾಸನಾಗು; ಕೊಂಡಂತಾಗು

ಮಾರುತ ವಾಯು, ಗಾಳಿ.

ಮಾರುತಿ ವಾಯುವಿನ ಮಗ, ಹನುಮಂತ; ಭೀಮ.

ಮಾರುತ್ತರ ಪ್ರತ್ಯುತ್ತರ, ಮರು ಉತ್ತರ; ಜವಾಬು.

ಮಾರುಳಿ ವಿವಾಹಕಾಲದ ಒಂದು ಕೆಲಸ; ಮರಗೆಲಸ, ಬೇರೆ ಕೆಲಸ.

ಮಾರ್ಕಂಡೇಯು ಮೃಕಂಡುವಿನ ಮಗನಾದ ಒಬ್ಬ ಋಷಿ. ಈತನು ಅಲ್ಪಾಯುಷಿ. ಇವನನ್ನು ಯಮನು ಸೆಳೆಯಲು ಬಂದಾಗ ಇವನು ಶಿವನ ಶರಣುಹೋದನು. ಆಗ ಶಿವನಿಂದ ಅವನಿಗೆ ದೀರ್ಘಾಯು ದೊರೆಯಿತು.

ಮಾರ್ಕೊಳು ಪ್ರತಿಭಟಿಸು; ಅಲ್ಲಗಳೆ, ತಿರಸ್ಕರಿಸು.

ಮಾರ್ಕೋಲ್ ಇನ್ನೊಂದು ಬಾಣ, ಮರುಬಾಣ.

ಮಾರ್ಗ ಹುಡುಕುವಿಕೆ; ದಾರಿ, ಪಥ; ಹಜ್ಜೆ, ಪಂಕ್ತಿ; ರೀತಿ, ಬಗೆ; ದೇಸಿ, ಸರಣಿ.

—ಣ ಹುಡುಕುವಿಕೆ; ಬೇಡುವಿಕೆ; ಪ್ರಣಯ; ಬಾಣ; ಯಾಚಕ, ಭಿಕ್ಷುಕ; ಐದರ ಸಂಖ್ಯಾಸೂಚಕ ಪದ.

—ಸ್ಥ ಹಾದಿಹೋಕ, ದಾರಿ ನಡೆವವ.

ಮಾರ್ಗಶೀರ್ಷ (ಮಾರ್ಗಶಿರ), ಮೃಗಶಿರಾ ನಕ್ಷತ್ರವು ಹುಣ್ಣಿಮೆಗೆ ಉಳ್ಳ ತಿಂಗಳು.

ಮಾರ್ಜನ (ಮಾರ್ಜನ), ಚೊಕ್ಕಮಾಡುವುದು; ಜಲ ಸೇಚನೆ.

ಮಾರ್ಜಾರ (ಮಾರ್ಜಾಲ), ಬೆಕ್ಕು.

ಮಾರ್ತಲೆ ಬೇರೆ ತಲೆ, ಇನ್ನೊಂದು ತಲೆ.

ಮಾರ್ತಾಂಡ (ಮಾರ್ತಂಡ), ಸೂರ್ಯ; ಹಂದಿ.

ಮಾರ್ದನಿ ಮರುಧ್ವನಿ; ಪ್ರತಿಧ್ವನಿ.

ಮಾರ್ದವ ಮೃದುವಾಗಿರುವಿಕೆ; ಇಂಪಾಗಿರುವಿಕೆ, ಮಿದು.

ಮಾರ್ನಡೆ ಇದಿರಿಸಿಹೋಗು, ದಾಳಿ ಇಡು.

ಮಾರ್ನುಡಿ ಪ್ರತಿವಚನ, ಎದುರು ಮಾತು.

ಮಾರ್ಪಡು ಬದಲಾಯಿಸು.

ಮಾರ್ಪಾಟು ಬದಲಾವಣೆ.

ಮಾರ್ಪು ವಿನಿಮಯ, ಬದಲುಗಾರಿಕೆ; ವ್ಯತ್ಯಾಸ, ಅಂತರ.

ಮಾರ್ಪೊಳೆ ಪ್ರತಿಬಿಂಬಿಸು.

ಮಾರ್ಬಲ ಇದಿರಿಸುವ ಸೈನ್ಯ, ಶತ್ರುಸೈನ್ಯ.

ಮಾರ್ಮ (ಮರ್ಮ), ವೈರಿ.

ಮಾರ್ಮಲೆ ಇದಿರುಬೀಳು; ಪ್ರತಿಭಟಿಸು; ಪ್ರತಿಯಾಗಿ ವಿಜೃಂಭಿಸು.

ಮಾರ್ಷ್ಟಿ ಶೋಧನ; ಚೊಕ್ಕಟ.

ಮಾಲ ಒಂದು ಜಾತಿ; ಒಂದು ದೇಶ; ಬರ್ಬರ; ಮೋಸ; ನೀಚ.

ಮಾಲಕ (ಮಾಲಿಕ), ಯಜಮಾನ, ದಣಿ.

ಮಾಲಕುಮಿ (ದ್ಭ) ಮಹಾಲಕ್ಷ್ಮಿ(ಸಂ).

ಮಾಲತಿ ಶೋಭೆಯಿಂದ ಸುತ್ತುವುದು, ಸುಂದರವಾದುದು, ಜಾಜಿ ಬಳ್ಳಿ; ಒಂದು ನದಿ; ರಾತ್ರಿ.

ಮಾಲವ (ಮಾಳವ), ರಾಜಪುತಾನದ ಒಂದು ದೇಶ.

ಮಾಲಾ (ಮಾಲೆ), ಸರ, ಹಾರ, ಅಲಂಕಾರ ಭೇದ.

—ಕಾರ ಮಾಲೆಗಾರ, ಹೂಸರ ಮಾರುವವ, ಹೂಸರ ಕಟ್ಟುವವ, ಹೂಗಾರ.

ಮಾಲಾವೃತ್ತ ಒಂದು ವೃತ್ತಜಾತಿ.

ಮಾಲಿ ಮಾಲೆ ಧರಿಸಿದವ, ಹೂಸರ ಉಳ್ಳವ; ಒಬ್ಬ ರಕ್ಕಸ; ಕಸಗುಡಿಸುವವ, ತೋಟಿ.

ಮಾಲಿಕ (ಮಾಲಕ), ಮಾಲೆಗಾರ, ಹೂಸರ ಮಾಡುವವ; ಯಜಮಾನ.

ಮಾಲಿನಿ ಒಬ್ಬಳು ಅಪ್ಸರಸ್ತ್ರೀ; ಅಜ್ಞಾತವಾಸದ ವೇಳೆ ವಿರಾಟನಗರದಲ್ಲಿ ದ್ರೌಪದಿಗೆ ಇದ್ದ ಉದ್ಯೋಗದ ಹೆಸರು; ಮಾಲೆಮಾಡುವವಳು.

ಮಾಲಿನ್ಯ ಕೊಳೆ, ಕೆಸರು, ಕಶ್ಮಲವಾಗಿರುವಿಕೆ; ಕರಿದಾಗಿರುವುದು.

ಮಾಲಿಸು ಬಾಗಿಸು, ಓರೆಮಾಡು; ಕಡೆಗಣ್ಣಿಂದ ನೋಡು, ದಿಟ್ಟಿಸು.

ಮಾಲೀಮು ನೌಕೆಯ ನಾಯಕ.
ಮಾಲೀಸು ಕುದುರೆಯ ಮೈ ಉಜ್ಜಿ ಚೊಕ್ಕ ಮಾಡುವಿಕೆ.
ಮಾಲು ಓಲಾಡು, ವಾಲು, ಹೊಂಗಾಡು; ಇಳುಕಲಾಗು; ಸಾಮಾನು; ಮಹಾಲು.
ಮಾಲೂರ ಬೆಲ್ಲವತ್ತ್ರ, ಬಿಲ್ವ, ಕಪಿತ್ಥ.
ಮಾಲೆ ಹೂಸರ; ಸರ; ಹೂಸರ ಕಟ್ಟುವ ದೇವಾಲಯದ ಸೇವಕ.
ಮಾಲೇಯ ಹೂಸರ ಕಟ್ಟುವುದರಲ್ಲಿ ಚತುರ.
ಮಾಲೋಪಮೆ ಉಪಮೆಗಳ ಒಂದು ಸರ.
ಮಾಲ್ಯ ಹೂವು; ಹೂಸರ; ನೆತ್ತಿಯ ಮೇಲಿನ ಹೂಸರ.
ಮಾಲ್ಯವಂತ ಒಬ್ಬ ರಕ್ಕಸ; ಹಂಪಿಯ ಒಂದು ಬೆಟ್ಟ.
ಮಾವ ತಾಯ ಸೋದರ; ಹೆಂಡತಿಯ ತಂದೆ.
ಮಾವಟಿಗ ಮಾವತಿಗ, ಆನೆಯ ಕಾಸ್ತಾರ, ಮಾವುತ.
ಮಾವಂತ (ಮಾವತಿಗ), ಮಾವುತ, ಆನೆಯ ಆಳು.
ಮಾವಿ ಜರಾಯು, ಹುದುವು, ಗರ್ಭಾಶಯ.
ಮಾವು ಮಾವಿನ ಮರ.
ಮಾವುತ (ಮಾವತ), ಮಾವಟಿಗ.
ಮಾವುಲಿಗ ಬಲೆಯಿಂದ ಪ್ರಾಣಿಗಳನ್ನು ಹಿಡಿಯುವವ, ಬಲೆಗಾರ.
ಮಾಷ ಉದ್ದು; ಒಂದು ತೂಕ; ಮೂರ್ಖ; ಒಂದು ರೋಗ.
ಮಾಸ ಚಂದ್ರ; ಮೂವತ್ತು ದಿನಗಳ ಕಾಲ.
ಮಾಸರ (ದ್ಭ) ಮಹಾಸ್ವರ (ಸಂ), ದೊಡ್ಡ ಧ್ವನಿ; ಗಂಜಿ ನೀರು; ಮಹಾಶ್ರಯ (ಸಂ); ಧಾರಾಳ.
ಮಾಸಲು ಮಸಕು ಬಣ್ಣ; ಕೊಳೆ; ಬಣ್ಣ ಕಂದಿದುದು.
ಮಾಸವಳ ವೀರ; ಮುಂದಾಳು.
ಮಾಸಾದಿ (ದ್ಭ) ಮಹಾಸಾದಿ (ಸಂ), ಶ್ರೇಷ್ಠ ಕುದುರೆ ಸವಾರಿ, ರಾವುತಿಕೆ.
ಮಾಸಾರ್ಧ ಪಕ್ಷ, ಹದಿನೈದು ದಿವಸ.
ಮಾಸಾಳು ವೀರ; ಮುಂದಾಳು; ದೊಡ್ಡ ಮನುಷ್ಯ.
ಮಾಸಿ ಐದು ಗುಂಜಿ ತೂಕ.
ಮಾಸಿಕ ತಿಂಗಳಿಗೆ ಮಾಡುವ ಶ್ರಾದ್ಧ; ತಿಂಗಳಿನ ವಂತಿಗೆ; ಮಾಸಪತ್ರಿಕೆ.
ಮಾಸು ಮಲಿನತೆ ಹೊಂದು, ಕಾಂತಿಹೀನವಾಗು; ಮಾಯವಾಗು, ಮಾಜು; ಕೊಳೆ, ಕಲ್ಮಷ.
ಮಾಹಾತ್ಮ್ಯ ಹಿರಿಮೆ, ಮಹಿಮೆ; ಕೀರ್ತಿಗೆ ಕಾರಣವಾದ ಗುಣ.
ಮಾಹಿಷ್ಮತಿ ಒಂದು ನಗರ. ಈ ನಗರಕ್ಕೆ ನೀಲನೂ ಕಾರ್ತವೀರ್ಯನೂ ಒಮ್ಮೊಮ್ಮೆ ರಾಜರಾಗಿದ್ದರು.
ಮಾಹಿಷ್ಯ ಕ್ಷತ್ರಿಯ ತಂದೆ ವೈಶ್ಯ ತಾಯಲ್ಲಿ ಹುಟ್ಟಿದ ಸಂತಾನ.
ಮಾಹೆ ಒಂದು ತಿಂಗಳು.
—ವಾರಿ ತಿಂಗಳು ಕಟ್ಟಳೆ; ತಿಂಗಳು.
ಮಾಹೇಯ ಭೂಮಿಯ, ನೆಲದ.
ಮಾಹೇಂದ್ರಿ ಪೂರ್ವ ದಿಕ್ಕು; ಇಂದ್ರಾಣಿ, ಶಚೀದೇವಿ.
ಮಾಳ್ ಮಾಡು, ನಡಸು.
—ಕೆ ಮಾಡುವಿಕೆ, ಮಾಟ; ರೀತಿ, ಕ್ರಮ.
ಮಾಳ ಗಂಡುಬೆಕ್ಕು; ಒಂದು ಜಾತಿಯ ಕರಿದೂ ನೀಳವೂ ಆದ ಕಾಡುಬೆಕ್ಕು, ಬೋಳಬೆಕ್ಕು; ಠಕ್ಕು, ಗುಡಿಸಲು; ಉಪ್ಪಿನ ಆಗರ; ಬಂಡಿಯ ನಿಲ್ದಾಣ.
ಮಾಳಿ (ಮಾಳೆ), ಆಗಸರವಳು; ಮಾಲೆಗಾರ್ತಿ.
ಮಾಳಿಗೆ ಮಹಡಿ, ಉಪ್ಪರಿಗೆ, ಅಟ್ಟ.
ಮಾಳಿ (ಮಾಲೆ), (ಮಾಳ).
ಮಾಳ್ಮಕಿ ಗಂಡನನ್ನು ಅಗಲಿರದ ಹೆಂಡತಿ.

ಮಾಂಕರಿಸು ಹಂಗಿಸು; ಹಾಸ್ಯಮಾಡು, ಚೇಷ್ಟೆಮಾಡು; ಅಣಕಿಸು; ತಿರಸ್ಕರಿಸು.
ಮಾಂಗಲ್ಯ ಮಂಗಳಕರವಾದುದು, ಮಂಗಳ.
—ಸೂತ್ರ ತಾಳಿ, ವಿವಾಹದ ಗುರುತು, ಅಯ್ದೆತನದ ಚಿಹ್ನೆ.
ಮಾಂಗಾಯ್ ಮಾವಿನ ಕಾಯಿ.
ಮಾಂಜು ಮಾಜು, ಮಾಯು, ಮಾಸು, ಅಡಗು, ನಶಿಸು.
ಮಾಂಡಲಿಕ ಮಂಡಲಕ್ಕೆ ಸಂಬಂಧಿಸಿದ; ಆಶ್ರಿತರಾಜ, ತುಂಡರಸು, ಸಾಮಂತ.
ಮಾಂತ್ರಿಕ ಮಂತ್ರಗಾರ; ಮಂತ್ರಮಾಡುವವ
ಮಾಂದಡೆ ನಿಲ್ಲದುದು, ತಡೆಯದುದು.
ಮಾಂದಳಿರು ಮಾವಿನ ಚಿಗುರು.
ಮಾಂದಿಸು ನಿಲ್ಲಿಸು; ಗತಿಯನ್ನು ತಡೆ.
ಮಾಂದ್ಯ ಮಂದವಾಗಿರುವುದು, ಜಡತ್ವ; ರೋಗ; ಮಂಕುತನ; ನಿಧಾನ.
ಮಾಂಧಾತ ಸೂರ್ಯವಂಶದ ಯೌವನಾಶ್ವ ಎಂಬವನ ಮಗ.
ಮಾಂಸ ಪ್ರಾಣಿಗಳ ದೇಹದ ಸ್ನಾಯುಖಂಡ, ಶರೀರದ ಒಂದು ಧಾತು.
—ಲ ಮಾಂಸವುಳ್ಳವ, ಬಲವುಳ್ಳವ; ಪುಷ್ಟಿಯಾದ; ಉದ್ದು.
ಮಿ ಚೆಲ್ಲು; ಕಟ್ಟು; ಅಳೆ.
ಮಿಕ ಮಿಗ (ದ್ಭ), ಮೃಗ (ಸಂ), ಜಿಂಕೆ; ಗಂಡು ಹಂದಿ.
ಮಿಕಮಿಕಿ ಮಿಟಮಿಟ, ಪಿಳಿಪಿಳಿ; ಕಣ್ಣನ್ನು ಮುಚ್ಚಿ ತೆರೆವ ನೋಟ.
ಮಿಕ್ಕು (ಮಿಗು), ಅಧಿಕವಾಗು, ಮೀರು.
ಮಿಗ (ದ್ಭ) ಮೃಗ (ಸಂ), ಜಿಂಕೆ.
ಮಿಗತೆ (ಮಿಗಿತೆ), ಹೆಚ್ಚುವಿಕೆ, ಮೀರುವಿಕೆ, ಶೇಷ, ಬಾಕಿ; ಮುಗಿಲೆ, ಅಸಮ ಸಂಖ್ಯೆ.
ಮಿಗಿಲ್ (ಮಿಗಿಲು), ಅಧಿಕ, ಹೆಚ್ಚು; ಮುಗಿಲೆ, ವಿಷಮ ಸಂಖ್ಯೆ.
ಮಿಗಿಸು ಹೆಚ್ಚುವಂತೆ ಮಾಡು, ಉಳಿಸು; ಮೀರು, ಸ್ಪರ್ಧಿಸು.
ಮಿಗು ಅತಿಕ್ರಮಿಸು, ಮೀರು, ಹೆಚ್ಚಾಗು; ಉಳಿ.
ಮಿಗೆ ಅಧಿಕವಾಗಲು, ಹೆಚ್ಚಾಗಲು; ಪಾದ ಪೂರಣಕ್ಕಾಗಿ ಪದ್ಯದಲ್ಲಿ ಬಳಸುವ ಒಂದು ಮಾತು.
ಮಿಟುಕು ಕಣ್ಣನ್ನು ತೆರೆ ಮತ್ತು ಮುಚ್ಚು; ಎವೆಬಡಿ; ದಿಟ್ಟಿಸು.
ಮಿಟ್ಟನೆ ವ್ಯಥೆಯಿಂದ.
ಮಿಟ್ಟಲೆ ಚಿಕ್ಕದು, ಸಣ್ಣದು.
ಮಿಟಮಿಟಿ ಪಿಳಿಪಿಳಿ, ಮಿಟಕಿನೋಡುವ ಬಗೆ.
ಮಿಟ್ಟು ಏರು, ದಿನ್ನೆ; ರಾಶಿ, ಜಂಗುಳಿ.
ಮಿಟ್ಟೆ ಒಂದು ಆಯುಧ; ಒಂದು ಬಗೆಯ ಬಾಣ; ಮೊಗ್ಗು, ಅರಳದ ಹೂ.
ಮಿಠಾಯಿ ಸಿಹಿ ತಿಂಡಿ.
ಮಿಡ (ದ್ಭ) ಮೃಡ (ಸಂ), ಈಶ್ವರ; ವ್ಯಥೆ.
ಮಿಡಿ ಬೆರಳಿನ ಮೇಲಿಟ್ಟು ಹಾರಿಸು; ಬೆರಳುಗಳನ್ನು ಹೊಡೆ, ಸಿಡಿ; ಬಿಲ್ಲಿನ ಹೆದೆಯನ್ನು ಟೇಂಕರಿಸು; ಮೀಟು; ಹಿಮ್ಮಡಿ; ಎಳಗಾಯಿ.
ಮಿಡಿಚೆ (ಮಿಡಿತೆ), ಮಟಚಿ (ಸಂ), ಮಿಡಿಚು, ಶಲಭ, ಸಸ್ಯಗಳನ್ನು ತಿನ್ನುವ ಒಂದು ಕೀಟ.
ಮಿಡು ಉದುರು.
ಮಿಡುಕು ಚೈತನ್ಯ, ಶಕ್ತಿ, ತ್ರಾಣ; ಪರಾಕ್ರಮ. ಪೌರುಷ, ಕಡುಪು; ಚಲಿಸು, ಅಲ್ಲಾಡು; ಚೇತರಿಸು; ಅಳಲು; ವೇದನೆಪಡು, ರೋದಿಸು; ನರಳು.
ಮಿಡುಗು ದುಃಖದಿಂದ ಚಿಂತಿಸು; ವ್ಯಥಿಸು; ನರಳು.
ಮಿಣ ಹೊಳೆವ, ಮಿನುಗುವ, ಥಳಿಸುವ.
—ಕುಡು ಮಿನುಗು; ಮಿಣಮಿಣನೆ ಉರಿ.
ಮಿಣಕು ಮಿನುಗುವ, ಹೊಳೆಯುವ ಸ್ವಭಾವ ಹುಳ, ಹೊನ್ನಿಹುಳ, ಗುಂಗಿ ಹುಳ.

ಮಿಣಿ (ಮಿಳಿ), ದಪ್ಪವಾದ ಹಗ್ಗ; ಅಲಾತಿ; ಚರ್ಮದ ಹಗ್ಗ; ಕಡಲಿನಲ್ಲಿ ಹಾಕುವ ತಂತಿ.
ಮಿಣುಕು (ಮಿಣಕು), ಮಂದವಾಗಿ ಹೊಳೆ, ಚಂಚಲವಾಗಿ ಹೊಳೆ.
ಮಿತ ಹಾಳಿತ; ಹದ್ದಿನಲ್ಲಿರುವ; ಹದವರಿತ.
ಮಿತಿ ಹಾಳಿತ, ಅಳತೆ, ಹದ; ಹದ್ದು, ಹಿಡಿತ; ನಿಶ್ಚಿತ ಜ್ಞಾನ.
—ಮೀರು ಅತಿಯಾಗು; ಹದ್ದುಮೀರು.
ಮಿತ್ತು (ದ್ಭ) ಮೃತ್ಯು (ಸಂ), ಮರಣಕಾರಕವಾದ ದೇವತೆ.
ಮಿತ್ರ ಸ್ನೇಹಿತ, ಗೆಳೆಯ; ಸೂರ್ಯ, ಒಂದು ವೈದಿಕ ದೇವತೆ.
ಮಿತ್ರಭೇದ ಸ್ನೇಹಿತರಲ್ಲಿ ಒಡಕುತರುವುದು; ಪಂಚತಂತ್ರದ ಪ್ರಥಮ ಕಾಂಡ.
ಮಿತ್ರೆ ಸಖಿ, ಗೆಳತಿ, ಕೆಳದಿ.
ಮಿಥಿಲಾ ಜನಕರಾಜನ ರಾಜಧಾನಿ.
ಮಿಥುನ ಸತಿಪತಿ; ಸ್ತ್ರೀಪುರುಷ; ಮೇಷದಿಂದ ಎಣಿಸಲು ಮೂರನೆಯ ರಾಶಿ; ಸುರತ, ಕೂಟ.
ಮಿಥ್ಯಾ (ಮಿಥ್ಯೆ ಮಿಥ್ಯ), ಅಸತ್ಯ, ಅಸಹಜ; ಸುಳ್ಳು.
—ವಾದಿ ಸುಳ್ಳುಗಾರ; ಜಗತ್ತು ಮಿಥ್ಯೆ ಎನ್ನುವವ; ಅದ್ವೈತಿ.
ಮಿಥ್ಯಾದೃಷ್ಟಿ ನಾಸ್ತಿಕತೆ; ನಾಸ್ತಿಕ.
ಮಿದಿ ಬತ್ತಕುಟ್ಟುವಿಕೆ, ಕುಟ್ಟುವಿಕೆ; ಕೊಲ್ಲು; ತಿಕ್ಕು, ತೇಯು; ಮಿದಿವು.
ಮಿದು (ದ್ಭ) ಮೃದು (ಸಂ), ಮಿದುವು, ಮಾರ್ದವ, ಮೆತ್ತನೆ.
ಮಿದುಗುಲಿ (ಮೆದುಗುಲಿ), ಅಕ್ಕಿ ತಯಾರಿ ಕೆಲಸ, ಕೊಟ್ಟಣ.
ಮಿದುಳು (ಮೆದುಳು), ತಲೆಬುರುಡೆಯೊಳಗಿನ ಒಂದು ಅವಯವ, ಮೇದಸ್ಸು.
ಮಿನಹು ವರೆಗೆ, ತನಕ.
ಮಿನಿಕೆ ಕಲ್ಲಂಗಡಿ ಬಳ್ಳಿ, ಕರಗುಂಜಿ ಬಳ್ಳಿ.
ಮಿನಿಯು ಆಯಿತೇ, ಆಗಬಹುದೇ.
ಮಿನುಕು ಗೊಣಗು, ಪಿಸುಮಾತಾಡು; ಹೊಳೆ, ಕಾಂತಿತೋರು; ಹೊಳೆಯುವಿಕೆ.
ಮಿನುಗು ಹೊಳೆ; ಶೋಭಿಸು, ರಂಜಿಸು; ಹೊಳಪು, ಕಾಂತಿ.
ಮಿನುಪು (ಮಿಣುಗು), ವಾರ್ಷಿಕ ಭೂಕಂದಾಯವುಳ್ಳುದು; ಗೌಡಿಕೆ.
ಮಿರಾಸ (ಮಿರಾಸು), ಜಮೀನು; ಪರಂಪರೆಯ ಭೂಕಂದಾಯದ ಲಾಭವುಳ್ಳ ಅಧಿಕಾರ.
—ದಾರ ಜಮೀನುದಾರ; ವಿಶೇಷ ಭೂಕಂದಾಯ ಲಾಭವುಳ್ಳವ.
ಮಿರುಗು (ಮಿರುಪು), ಪ್ರಕಾಶ, ಹೊಳಪು; ಶೋಭೆ; ಸಂಸ್ಕಾರ; ಪುಟ; ಹೊಳೆ, ಥಳಿಸು.
ಮಿಲನ ಕೂಟ; ಸೇರುವೆ, ಹೊಂದಿಕೆ; ಸಭೆ ಸೇರುವಿಕೆ.
ಮಿಲಾಕತ್ತು (ಮಿಲಾವಣೆ), ಸೇರಿಕೆ, ಬೆರಕೆ, ಮಿಶ್ರಣ; ಭೇಟ, ಭೆಟ್ಟಿ, ಮಿಲನ.
ಮಿಲಾಯಿಸು ಬೆರಸು, ಬೆಸೆ; ಸೇರಿಸು; ಕೂಡು.
ಮಿಲಾವು ಉಕ್ಕು, ಬೀಡು.
ಮಿಷನರಿ ಮಿಶನೆರಿ, ಮತಪ್ರಸಾರಕ.
ಮಿಶ್ರ ಸೇರಿದ, ಕೂಡಿದ; (ಜ್ಯೋತಿಷ್ಯದಲ್ಲಿ) ಕೃತ್ತಿಕಾ ವಿಶಾಖಾ ನಕ್ಷತ್ರ; ವಿವಿಧ.
—ಣ ಸೇರಿಕೆ, ಬೆರಕೆ, ಕೂಟ.
ಮಿಶ್ರವರ್ಣ ಹಲವು ಜಾತಿಗಳು ಸೇರಿದುದು; ಹಲವು ಬಣ್ಣಗಳ ಕೂಟ.
ಮಿಶ್ರಿತ ಬೆರೆತ, ಕೂಡಿರುವ; ಮರ್ಯಾದಿತ.
ಮಿಷ ಕಪಟ, ವಂಚನೆ; ಎವೆಮುಚ್ಚಾಟ; ನೆಪ; ಸ್ಪರ್ಧೆ; ಅಸೂಯೆ; ತೋರಿಕೆ.
ಮಿಷ್ಟ ಮಧುರ ರಸವುಳ್ಳ.
ಮಿಷ್ಟಾನ್ನ ರಸದೂಟ, ಸವಿಯೂಟ.
ಮಿಸು ಹೊಳೆ, ಮಿನುಗು.

ಮಿಸುಕು (ಮಿಸುಗು), ಅಲುಗು, ಅಲ್ಲಾಡು; ಕಂಪಿಸು; ಹೊಳೆ.
ಮಿಸುನಿ ಚಿನ್ನ, ಬಂಗಾರ.
ಮಿಹಿಕೆ ಹಿಮ, ಮಬ್ಬು, ಇಬ್ಬನಿ.
ಮಿಹಿರ ಸೂರ್ಯ; ಆಕಾಶ; ವಾಯು; ಚಂದ್ರ; ವಿಕ್ರಮಾದಿತ್ಯನ ಒಬ್ಬ ಸಭಿಕ.
—ಸುತ ಕರ್ಣ; ಯಮ; ಶನಿ.
ಮಿಳಿ (ಮಿಣಿ), ತೊಗಲ ಹಗ್ಗ; ಗಾತ್ರವಾದ ಹಗ್ಗ, ಅಲಾತಿ.
ಮಿಳಿರ್ ಚಲಿಸು, ಅಲ್ಲಾಡು; ಹೊರಳಾಡು; ಉರುಳು; ಹೆಚ್ಚು, ವೃದ್ಧಿಯಾಗು.
—ಚು ಚಲಿಸು, ಅಲ್ಲಾಡು.
ಮಿಳ್ತು (ದ್ಭ) ಮೃತ್ಯು (ಸಂ), ಸಾವು.
ಮಿಳ್ಳಿರಿ (ಮಿಳಿರ್), ಚಲಿಸು, ಅಲೆದಾಡು.
ಮಿಳ್ಳಿಸು ಚಲಿಸು; ಬಳಿ, ತೀಲು; ನೆಗೆ, ಜಿಗಿ.
ಮಿಳ್ಳೆ (ಮಿಳ್ಳಿ), ಗಿಂಡಿ, ಚಿಕ್ಕ ಕಂಚಿನ ಪಾತ್ರೆ.
ಮಿಂಚು ಪ್ರಕಾಶಿಸು; ಹೊಳೆ; ಚಂಚಲೆ, ಮುಗಿಲಲ್ಲಿ ಹುಟ್ಟುವ ವಿದ್ಯುತು; ಮೀರು, ಆಗಿಹೋಗು.
ಮಿಂಚುಹುಳು (ಮಿಂಚುಬುಳು), ಮಿಣುಕು ಹುಳು, ಹೊನ್ನಿಯಹುಳು, ದೀಪದಹುಳು.
ಮಿಂಟಿ ಒಂದು ಆಯುಧ; ಬಾಣ.
ಮಿಂಡ ಪ್ರೀತಿಯವ, ಉಪಪತಿ; ವೀರ, ಅಧಟ.
ಮಿಂಡಿ ಕಾಮುಕಳಾದ ಸ್ತ್ರೀ, ಸಿತಗೆ; ಹರೆಯ ದವಳು.
ಮಿಂಡು ಅತಿ ಏರು; ತುಂಬ ಮೀಟದುದು.
ಮೀ (ಮೀಯ), ಸ್ನಾನಮಾಡು, ಜಳಕಮಾಡು
ಮೀಟು (ಮೀಂಟು), ನೆಗೆತ; ಅದುಮುವಿಕೆ; ಮಿಡಿ, ನುಡಿಸು; ಉನ್ನತಿ, ಶ್ರೇಷ್ಠತೆ; ಅಗ್ಗ ಳಿಕೆ; ಮುದ್ದಾಡಿಸು.
ಮೀಟುಮೀನು ಹಾರುಮೀನು.
ಮೀಢ ಕಾಳಗ.
ಮೀಣ ಮೀಹ, ಜಳಕ, ಸ್ನಾನ.

ಮೀನ್ (ಮೀನು), ಮತ್ಸ್ಯ; ಒಂದು ನಕ್ಷತ್ರ ರಾಶಿ; ಹೊಳೆಯುವ, ಮಿನುಗುವ.
ಮೀನಕಂಡ ಜಂಘೆ, ಮೊಣಗಂಟಿಂದ ಪಾದದ ತನಕ ಕಾಲಿನ ಹಿಂಭಾಗ.
ಮೀನಕೇತನ ಮೀನಿನ ಪತಾಕೆ ಅಥವಾ ಮೀನಿನ ಚಿತ್ರದ ಪತಾಕೆವುಳ್ಳವ, ಮನ್ಮಥ.
ಮೀನಗೆ (ದ್ಭ) ಮೀನಕ (ಸಂ), ಮತ್ಸ್ಯ.
ಮೀನಾಕ್ಷಿ ಮೀನಿನಂತೆ ಚಂಚಲ ಕಣ್ಣುಳ್ಳವ ಳು; ದುರ್ಗೆ; ಮಧುರೆಯ ಒಬ್ಬ ದೇವತೆ.
ಮೀನು (ಮೀನ್), ಮೀನ, ಒಂದು ಜಲಚರ, ಮತ್ಸ್ಯ; ಒಂದು ನಕ್ಷತ್ರ ರಾಶಿ.
—ಕಾರ ಬೆಸ್ತ, ಅಂಬಿಗ.
ಮೀಮ್ (ಮೀನ್), ನಕ್ಷತ್ರ, ತಾರೆ; ಹೊಳೆ ಯುವಿಕೆ; ಆಕಾಶ.
ಮೀಮಾಂಸ ವಿಚಾರ, ವಿಚಾರದಿಂದ ತತ್ವ ನಿರ್ಣಯ; ಹಿಂದೂಧರ್ಮದ ತತ್ವಗ್ರಂಥ ಗಳು; ಷಡ್ದರ್ಶನಗಳಲ್ಲೊಂದು.
—ಕ ಮೀಮಾಂಸ ಶಾಸ್ತ್ರದ ಅಭ್ಯಾಸಿ.
ಮೀಯ್ (ಮೀಯು), ಸ್ನಾನಮಾಡು, ನೀರು ಎರೆದುಕೊಳ್ಳು, ಜಳಕಮಾಡು.
ಮೀರು (ಮೀರ್), ದಾಟು; ಹೆಚ್ಚಾಗು, ಮಿಗು; ಅತಿಕ್ರಮಿಸು; ಉದ್ಧತನಾಗು, ಸೊಕ್ಕು.
—ಹ ಮೀರುವಿಕೆ, ಅತಿಕ್ರಮಣ; ಮಿಗಿತ.
ಮೀಲನ ಮುಚ್ಚುವಿಕೆ.
ಮೀಸಲು ಮುಡುಪು; ಒಂದು ಉದ್ದೇಶಕ್ಕಾಗಿ ಬೇರ್ಪಡಿಸಿದುದು; ಕಾದಿಟ್ಟುದು.
—ಅಳಿ ಉದ್ದೇಶ ಭಂಗವಾಗು.
—ಕಟ್ಟು ಮೀಸಲಾಗಿ ತೆಗೆದಿರಿಸು; ಮು ಡಿಪು ಇಡು.
—ಮುರಿ ಕಾದಿಟ್ಟುದನ್ನು ಬಳಸು, ಉದ್ದೇ ಶಕ್ಕೆ ವಿರುದ್ಧವಾಗಿ ಉಪಯೋಗಿಸು.
ಮೀಸು (ಮೀಯಿಸು), ಸ್ನಾನಮಾಡಿಸು; ಈಸು, ಈಜು; ಪಾರಂಗತನಾಗು.

ಮೊಸೆ ಗಂಡುಸರಿಗೆ ತುಟಿಯಿಂದ ಮೇಲುಗಡೆ ಬರುವ ಕೂದಲು; ಧೈರ್ಯ.
ಮೊಹ ಸ್ನಾನ.
ಮೊಂಚುಳ್ಳಿ ಮೊನು ಹಿಡಿಯುವ ಒಂದು ಪಕ್ಷಿ; ನೀರಮುಳುಕ, ಜಾಲಗಾರ ಹಕ್ಕಿ.
ಮೊಂಟು ನೆಗೆ, ಜಿಗಿ, ಹಾರು; ಅದುಮು; ಕೀಳು, ಎಬ್ಬಿಸು; ಬಡಿ, ಅಪ್ಪಳಿಸು; ಬೆರಳಿಂದ ಒತ್ತು; ತ್ರಾಣಹಾಕು; ಮರ್ಮವನ್ನು ನೋಯಿಸು; ಅಧಿಕವಾಗು.
ಮುಂ ಮುಂದೆ.
ಮುಕ್ ಮೂರು ಎಂಬುದಕ್ಕೆ ಕೆಲವೊಮ್ಮೆ ಬರುವ ಆದೇಶ ರೂಪ.
ಮುಕ (ಧ್ಭ) ಮುಖ (ಸಂ).
ಮುಕರ ಮೂಗುತಿ; ಮುತ್ತಿನ ದೊಡ್ಡ ಮೂಗುತಿ, ಮುಖರ, ನತ್ತು.
ಮುಕರು ಉಬ್ಬಿ ಕುಳಿತಿರು.
ಮುಕಳಿ (ಮುಕುಳ), ಗುದ, ಕುಂಡೆ, ಕೂದಿ; ಯೋನಿ.
ಮುಕುಟ (ಮಕುಟ), ಕಿರೀಟ; ಕೊಟ್ಟು.
ಮುಕುಟು ಮುಗ್ಧ (ಸಂ).
ಮುಕುತಿ (ಧ್ಭ) ಮುಕ್ತಿ (ಸಂ), ಮೋಕ್ಷ, ಬಿಡುಗಡೆ.
ಮುಕುರ ಕನ್ನಡಿ, ದರ್ಪಣ; ಒಂದು ಬಗೆ ಮೂಗುತಿ.
ಮುಕುಲ (ಮುಕುಳ), ಮೊಗ್ಗೆ, ಮಿಟ್ಟೆ; ಕೈ.
ಮುಕುಂದ ಮೋಕ್ಷ ಕೊಡುವವ, ವಿಷ್ಣು.
ಮುಕುಳಿ(ಮುಕಳಿ), ಗುದ, ಪುಕಳಿ; ಯೋನಿ.
ಮುಕ್ಕ ಮುರಿದ, ವಿಕಲ; ಮೂರ್ಖ.
ಮುಕ್ಕಡಿ ಮೂರು ಕಡಿ, ಮೂರು ತುಂಡು.
ಮುಕ್ಕಣ್ಣ ಮೂರು ಕಣ್ಣಿನ ಶಿವ.
ಮುಕ್ಕಳಿಸು(ಮುಕ್ಕುಳಿಸು), ಬಾಯಿಗೆ ನೀರು ಹಾಕಿಕೊಂಡು ಕುಲುಕಿಸಿ ಉಗಿ,ಉಗುಳು
ಮುಕ್ಕಾಣಿ ಇರೋಣ; ಇರುವ ಠಾಣೆ.
ಮುಕ್ಕಾಲು ಮೂರು ಕಾಲು; ಮೂರು ಪೈ; ಮೂರು ಕಾಲಿನ ಮಣೆ.
ಮುಕ್ಕು ಗವಗವನೆ ನುಂಗು; ಚೂರು, ಚಕ್ಕೆ; ಒಡೆದ ಭಾಗ; ಮೂರ್ಖ; ಅಯೋಗ್ಯ, ಮಣ್ಣಿನ ಮುಚ್ಚುವ ಮರಿಗೆ; ಬೊಗಸೆ; ತುತ್ತು.
ಮುಕ್ಕುಡಿ ಅವಗಡಿಕೆ; ಮೂರುಕಡಿ.
ಮುಕ್ಕುರಿ ಕತ್ತರಿಸಿ ಹೋಗು; ನರಳು.
ಮುಕ್ಕುರಿಕು ಮುತ್ತಿಕೊಳ್ಳು, ಪ್ರತಿಭಟಿಸು; ಮುತ್ತು, ಗೂಳಿಗುಟುರು.
ಮುಕ್ಕುರು(ಮುಕುರು), ಮುತ್ತು, ಆವರಿಸು; ಪ್ರತಿಭಟಿಸು; ಮುಗ್ಗುರಿಸು.
ಮುಕ್ಕುಳ್(ಮುಕ್ಕುಳು),ಬಾಯಿಗೆ ತುಂಬಿಸಿಕೊಂಡ ನೀರು.
- ಇಸು ಬಾಯಿಂದ ಹೊರಚೆಲ್ಲು.
ಮುಕ್ಕೋಟಿ ಮೂರು ಕೋಟಿ.
ಮುಕ್ತ ಸಂಸಾರದಿಂದ ಬಿಡಲ್ಪಟ್ಟ;ಮೋಕ್ಷಕ್ಕೆ ಹೋದ; ಬಿಡುಗಡೆಗೊಂಡ.
—ಕ ಬಿಡುಗಡೆಗೊಂಡ, ವಿಮೋಚನೆಗೊಂಡ; ಚುಟಕ, ಬಿಡಿಪದ್ಯ.
ಮುಕ್ತಾ (ಧ್ಭ) ಮುತ್ತು (ಸಂ).
ಮುಕ್ತಾಯ ಪರಿಸಮಾಪ್ತಿ, ಮುಗಿಸುವುದು; ಪೂರಣೆ; ಮುಗಿತಾಯ, ಕೊನೆ.
ಮುಕ್ತಿ ಬಿಡುಗಡೆ, ಮೋಕ್ಷ.
ಮುಕ್ತಿಕನ್ನಿಕೆ ಮುಕ್ತಳಾದ ಸ್ತ್ರೀ; ಪಾರ್ವತಿ.
ಮುಕ್ತಿಮಾರ್ಗ ಬಿಡುಗಡೆಯ ದಾರಿ,ಮೋಕ್ಷಮಾರ್ಗ.
ಮುಕ್ತೆ (ಮುಕ್ತಾ), ಮುತ್ತು; ಬಿಡುಗಡೆಗೊಂಡವಳು; ಸೂಳೆ.
ಮುಖ ಮೊಗ, ಮೋರೆ; ಪ್ರಾರಂಭ; ನಾಟಕದಲ್ಲಿ ಬೀಜೋತ್ಪತ್ತಿಯುಳ್ಳ ಸಂಧಿ; ಮುಖ್ಯ; ಮುಂಭಾಗ, ಎದುರುಭಾಗ.
ಮುಖಕಮಲ ಮುಖಪಂಕಜ; ತಾವರೆಯಂತೆ ಸುಂದರವಾದ ಮುಖ.

ಮುಖಭಾವ ಮುಖಮುದ್ರೆ.
ಮುಖಮಜ್ಜನ ಮುಖ ತೊಳೆಯುವಿಕೆ.
ಮುಖಮಲ್ ಮಸಲೀನು ಬಟ್ಟೆ, ತೀರ ತೆಳ್ಳಗಿನ ಅರಿವೆ.
ಮುಖಮುದ್ರೆ ಮುಖದ ಭಾವ.
ಮುಖರ ಅಪ್ರಿಯವಾಗಿ ಮಾತಾಡುವವ; ಹರಟೆಗಾರ; ಚಂಚಲ; ಶಂಖ, ಶಬ್ದ.
ಮುಖವಾಡ ಮುಖ ಮರಸುವ ಸಾಧನ.
ಮುಖವಾಸ ಮುಖವನ್ನು ಪರಿಮಳಿಸುವ ವಸ್ತು; ಮುಖಕ್ಕೆ ಕಟ್ಟುವ ಬಟ್ಟೆ; ಪಚ್ಚೆ ಕರ್ಪೂರ.
ಮುಖವಿಕಾರ ಮುರುಕು, ಒಯ್ಯಾರ.
ಮುಖವೀಣೆ ಒಂದು ಬಗೆ ಕೊಳಲು.
ಮುಖಶ್ರೀ(ಮೊಗಸಿರಿ),ಮುಖದಸೌಂದರ್ಯ
ಮುಖಸ್ತುತಿ ಹೊಗಳಿಕೆ, ಸ್ತುತಿಪಾಠ, ಎದುರಿಗೇ ಹೊಗಳುವುದು.
ಮುಖಂಡ ಯಜಮಾನ,ಒಡೆಯ,ನಾಯಕ.
ಮುಖಾಬಿಲೆ ಮುಖಮುಖ ಭೇಟ; ಲೆಕ್ಕತಾಳೆ ನೋಡುವುದು.
ಮುಖಾಂತರ ಮೂಲಕ, ದ್ವಾರಾ.
ಮುಖಿ ಮುಖವುಳ್ಳವಳು.
ಮುಖೋದ್ಗತ ಬಾಯಿಂದ ಬರುವ; ಕಂಠಪಾಠ, ಬಾಯಿಪಾಟ.
ಮುಖ್ಯ ಮೊದಲನೆಯ; ಪ್ರಧಾನ; ಶ್ರೇಷ್ಠ; ನಾಯಕ, ಹೆಗ್ಗಡೆ.
—ಸ್ಥಯಜಮಾನ, ನಾಯಕ,ಮುಖಂಡ
ಮುಖ್ಯಪ್ರಾಣ ಹನುಮಂತ, ಆಂಜನೇಯ.
ಮುಗಟೆ ಮುಕುಟ, ರೇಶ್ಮೆಬಟ್ಟೆ, ನಾರುಮಡಿ.
ಮುಗಿ ಮುಚ್ಚು; ಮೊಗ್ಗೆಯಾಗು; ಜೋಡಿಸು, ಕೈ ಜೋಡಿಸು; ಅಂತ್ಯವಾಗು, ಕೊನೆಗೊಳ್ಳು, ತೀರು.
—ಕೆ ಜೋಡಿಸುವಿಕೆ, ಸೇರಿಸುವಿಕೆ, ವಂದಿಸುವಿಕೆ.
ಮುಗಿಲ್ (ಮುಗಿಲು), ಮೋಡ.
ಮುಗಿಲಟ್ಟಳೆ ಕೊತ್ತಳ, ಎತ್ತರವಾದ ಬುರುಜು, ಹುಡೆ, ಬತ್ತೇರಿ.
ಮುಗಿವಳಿ ಮುಗಿತಾಯ.
ಮುಗುದ (ದ್ಭ) ಮುಗ್ಧ (ಸಂ), ಮೂಢ, ಏನೂ ತಿಳಿಯದವ; ಸುಂದರ.
ಮುಗುದೆ (ಮುಗ್ಧೆ), ಮೂಢೆ; ಸುಂದರಿ.
ಮುಗುರು (ಮುಗುರ್), ಮುತ್ತಿಕೊಳ್ಳು.
ಮುಗುವಳಿ ಗೊತ್ತುವಳಿ, ಮುಂಚೇನೆ ಆದ ಕರಾರು.
ಮುಗುಳ್ (ಮುಗುಳು), ಮೊಗ್ಗೆ; ಮುಚ್ಚು; ಬೆದೆಬರು.
—ಚು ಮತ್ತೆ ಬರು; ಮೊಗ್ಗೆ ಬರು; ಸಂಕೋಚಪಡು; ಮುಚ್ಚು.
ಮುಗುಳಂಬ ಹೂವೇ ಬಾಣವಾಗಿರುವವ, ಕಾಮ.
ಮುಗುಳ್ಗಣೆ ಪುಷ್ಪಬಾಣ, ಹೂಬಾಣ.
ಮುಗುಳ್ನಗೆ ಮಂದಹಾಸ.
ಮುಗ್ಗರಿಸು ತಡವರಿಸು, ಎಡವು; ತೊದಲು.
ಮುಗ್ಗಲು ಹಳಸುನಾತ, ಹಳೆ ವಾಸನೆ.
ಮುಗ್ಗು ಗತಿಭಂಗವಾಗು, ಬೀಳು; ಎರಗು; ತೇವದಿಂದಾಗಿ ವಾಸನೆ ಹುಟ್ಟು; ಮುಗ್ಗರಿಸು, ಎಡವು; ಕೆಡು; ತಗ್ಗು, ಕುಣಿ.
ಮುಗ್ಧ(ಮುಗುದ),ಮೂರ್ಖ,ಮೂಢ;ಏನೂ ಅರಿಯದವ, ಸುಂದರ; ಒಬ್ಬ ನಾಯಿಕೆ.
ಮುಗ್ಧೆ (ಮುಗುದೆ), ಮೂಢೆ; ಚೆಲುವೆ.
ಮುಚ್ ಬೀಳಿಸು; ಬಿಡುಗಡೆಮಾಡು.
ಮುಚುಕುಂದ ಸೂರ್ಯವಂಶದ ಮಾಂಧಾತೃವಿನ ಒಬ್ಬ ಮಗ. ಇವನು ಕಾಲಯವನನೆಂಬ ಯವನ ರಾಜನನ್ನು ಕೊಂದನು.
ಮುಚ್ಚ ಮೂರ್ಛೆಹೋದವ, ಮೈಮರೆತವ.
ಮುಚ್ಚಲಿಕೆ (ಮುಚ್ಚಳಿಕೆ),ಬರಹದ ಒಪ್ಪಂದ; ಕರಾರು; ಒಪ್ಪಿಗೆ ಕೊಡುವ ದಾಖಲೆ.

**ಮುಚ್ಚಲು** (ಮುಚ್ಚಳ), ಮೊರ; ಸಿಬ್ಬಲು; ಮುಚ್ಚುವ ಸಾಧನ, ಟಪಾರಿಕೆ.
**ಮುಚ್ಚಳ** ಮುಚ್ಚುವ ಸಾಧನ.
**ಮುಚ್ಚು** ಆವರಿಸು; ಮರೆಮಾಡು; ಮಡಿಸು. —ಮರೆ ವಂಚನೆ, ಕಪಟ.
**ಮುಚ್ಚುರು** ಮೂರ್ಛೆಹೋಗು; ವ್ಯಾಕುಲ ಗೊಳ್ಳು.
**ಮುಚ್ಚೆ** (ದ್ಭ) ಮೂರ್ಛಾ (ಸಂ); ಮುಚ್ಚಳ, ಕೆರಹು, ಪಾದುಕೆ; ಮೆಚ್ಚೆ.
**ಮುಜರಾ** (ಮಜರೆ), ವಜಾ ಹಿಡಿಯುವುದು; ವಂದನೆ, ಸಲಾಮು.
**ಮುಜರಾಯಿ** ಕಂದಾಯ ಮೊದಲಾದುವು ಗಳಿಗೆ ಕೊಡುವ ವಜಾ; ದೇವಾಲಯ ಮೊದಲಾದುವುಗಳ ತಸದೀಕು.
**ಮುಟ್ಟೆ** ಸಮೀಪ. —ಕೋಲು ಬಹಿಷ್ಕಾರ; ಸೂರೆ.
**ಮುಟ್ಟಲಿ** ಕಡೆಯ ತನಕ.
**ಮುಟ್ಟಲೆ** (ಮುಟ್ಟವೆ), ಸ್ತ್ರೀಯರಲ್ಲಿ ಮುಟ್ಟು, ರಜಸ್ಸಿನ ಕಾಲ (ಕಡಿಗೆ).
**ಮುಟ್ಠಾಳ** ದಡ್ಡ, ಮೂರ್ಖ; ಕೊನೆಯ ಅವಸ್ಥೆ, ಅಂತ್ಯ.
**ಮುಟ್ಟಿ** (ದ್ಭ) ಮುಷ್ಟಿ (ಸಂ).
**ಮುಟ್ಟು** ಉಪಕರಣ, ಸಾಮಗ್ರಿ; ಆತು; ಆಪ್ಯ; ಸ್ತ್ರೀಯರ ರಜೋದರ್ಶನ; ಸೇರು, ತಲಪು; ಸ್ಪರ್ಶಮಾಡು; ಸೋಂಕು; ವೈಭವ, ಉನ್ನತಾವಸ್ಥೆ; ಸಮೀಪ, ಸನಿಯ.
**ಮುಟ್ಟುವಳಿ** ವೆಚ್ಚ, ತಗಲಿದ ವೆಚ್ಚ.
**ಮುಡ** (ಮುಡವೆ).
**ಮುಡಲಿಡು** ಕುಡಿಯೊಡೆದು ಹಬ್ಬು, ವೃದ್ಧಿ ಯಾಗು; ಕುಡಿಚಾಚು.
**ಮುಡಹ** ಚತುರ, ಉಪಾಯಗಾರ.
**ಮುಡಿ** ಜಡೆ; ತುರುಬು; ಕಿರೀಟ; ಧಾನ್ಯದ ಕುರುಟು; ಧಾನ್ಯದ 42 ಸೇರಿನ ಅಳತೆ; ಮುರಿ; ಬಗ್ಗಿಸು; ಮುಗಿ; ತಲೆಯಲ್ಲಿ ಧರಿಸು, ಸೂಡು; ಆಗು, ಕೆಲಸಕ್ಕೆ ಬರು, ತೀರು.
**ಮುಡಿಗಿಕ್ಕು** ತುರುಬಿಗೆ ಮುಡಿಸು.
**ಮುಡಿಪು** (ಮುಡುಪು), ಮುಗಿತಾಯ, ಕೊನೆ; ಒಂದು ಕೆಲಸಕ್ಕೆ ಪ್ರತ್ಯೇಕಿಸಿಟ್ಟ ವಸ್ತು; ಕಟ್ಟಿಟ್ಟ ಹರಕೆ; ಮೀಸಲು.
**ಮುಡಿಯ** ಆಗ, ಕೆಲಸಕ್ಕೆ ಬಾರ.
**ಮುಡಿವಾಳ** ಪರಿಮಳದ ಒಂದು ಬೇರುಳ್ಳಗಿಡ
**ಮುಡುಕು** (ಮಡುಗು), ಅಪ್ಪು; ಮುರಟು; ಮುದುಡು; ಬಾಗು; ವಿಕಾರಗೊಳು.
**ಮುಡುಬ** ಹೆಳವ; ಕಾಲಿಲ್ಲದವ.
**ಮುಡುಬು** (ಮುಡುಕು), ಮುಡವೆ, ಮುದ್ದಣ
**ಮುಡುಹು** ಭುಜಶಿರಸ್ಸು, ಹೆಗಲು.
**ಮುಣುಗು** (ಮುಳುಗು), ನೀರುಪಾಲಾಗು; ಕಂತು; ಹಾಳಾಗು.
**ಮುತ್ತ** ಎರಡು ವರ್ಷದ ಹಿಂದೆ; ಎರಡು ತಲೆಹಿಂದೆ; ಅಜ್ಜ; ಮುದುಕ; ಮುದಿಯಾದ.
**ಮುತ್ತವ್ವೆ** (ಮುತ್ತಬ್ಬೆ), ಅಜ್ಜಿ.
**ಮುತ್ತಯ್ಯ** ಅಜ್ಜ.
**ಮುತ್ತಲು** ಮುತ್ತುವಿಕೆ, ಸುತ್ತುವರಿಯುವಿಕೆ, ಆಕ್ರಮಣ.
**ಮುತ್ತಿಗೆ** ಮುತ್ತಲು; ಆಕ್ರಮಣ.
**ಮುತ್ತು** ಆವರಿಸು, ಸುತ್ತಿಕೊಳು; ಒಂದು ಕಡಲಚಿಪ್ಪಿನಲ್ಲಿ ಸಿಗುವ ವಸ್ತು, ಮೌಕ್ತಿಕ; ಮುಪ್ಪು, ಮುದಿತನ. —ಹ ಆಕ್ರಮಣ; ಆವರಿಸುವಿಕೆ, ಮೇಲೇರುವಿಕೆ, ಲಗ್ಗೆಹತ್ತುವಿಕೆ.
**ಮುತ್ತುಗ** (ಮುತ್ತಗ), ಪಾಲಾಶ, ಮುತ್ತಲ.
**ಮುತ್ತೆ** ಮುಕ್ತೆ; ಸುತ್ತ.
**ಮುತ್ತೆತ್ತು** ಮುದಿ ಎತ್ತು.
**ಮುತ್ತೈದೆ** ಗಂಡನುಳ್ಳವಳು, ಸುಮಂಗಲಿ, ಐದುಗಿತ್ತಿ.
**ಮುತ್ಯ** ಮುತ್ತಯ್ಯ.

ಮುತ್ಸದ್ದಿ ಮುನಷಿ, ಲೆಕ್ಕಗಾರ, ದೂರದೃಷ್ಟಿಯುವ.

—ತನ ಚಾಣಾಕ್ಷತನ.

ಮುದ ಸಂತೋಷ, ಹರ್ಷ, ಆನಂದ.

—ಇಸು ಆನಂದಪಡು.

—ವಿರು ಮುದತಾಳು, ಸಂತೋಷಗೊಳ್ಳು

ಮುದಿ ವಯಸ್ಸಾದ, ಮುಪ್ಪಿನ.

ಮುದಿರ ಮೋಡ, ಮೇಘ, ಮುಗಿಲು; ಪ್ರಿಯತಮ, ವಿಟ; ಕಪ್ಪ.

ಮುದು ಮುದಿತನ, ಮುಪ್ಪು.

ಮುದುಕ (ಮುದುವ), ಮುಪ್ಪಿನವ, ಹೆಳವ, ವಯಸ್ಸಾದವ.

ಮುದುಕು ತನ್ನ ಶರೀರವನ್ನು ತಾನೇ ತಬ್ಬು.

ಮುದುಡು ಮುರುಟು, ಸುರುಟು, ಸಂಕೋಚವಾಗು, ಚಿರುಟು; ಕಿರಿದಾಗು; ಕುಗ್ಗು; ಬಾಗು; ನುಗ್ಗಾಗು; ಉಡುಗು.

ಮುದುಪು ಮುಪ್ಪು.

ಮುದುರು (ಮುದುಡು).

ಮುದುವಳಿತ ಮುಪ್ಪು; ಸಾವು.

ಮುದ್ಗ ಹೆಸರ ಕಾಳು; ಶಂಖ; ಹೊದಿಕೆ.

ಮುದ್ಗರ ಮುದುಗರ, ಗದೆ, ಗುದ್ದಿ.

ಮುದ್ಗಾನ್ನ ಹುಗ್ಗಿ, ಕಿಚ್ಚಡಿ, ಅಕ್ಕಿಗೆ ಹೆಸರು ಸೇರಿಸಿ ಬೇಯಿಸಿದ ಪಾಕ, ಪೊಂಗಲು.

ಮುದ್ದಣ ಮುಡವೆ; ನಂದಳಿಕೆ ಲಕ್ಷ್ಮೀನಾರಾಯಣಯ್ಯನೆಂಬ ಕವಿ.

ಮುದ್ದತ್ತು ವಾಯಿದೆ, ಅವಧಿ.

ಮುದ್ದಾಂ ಜರೂರು, ಅವಶ್ಯ, ಅಗತ್ಯ; ನಿಶ್ಚಿತ.

ಮುದ್ದಿಗೆ (ದ್ಭ) ಮುದ್ರಿಕಾ(ಸಂ), ಮೊಹರು; ಮುದ್ರೆಯುಂಗುರ, ಮುದ್ರೆ.

ಮುದ್ದಿಸು ಪ್ರೀತಿಸು; ಲಲ್ಲಯಿಸು; ಚುಂಬಿಸು.

ಮುದ್ದು ಪ್ರೀತಿ, ಒಲವು; ಮುತ್ತು, ಚುಂಬನ.

ಮುದ್ದೆ ಉಂಡೆ; ಮಿದುವಾದ ರಾಗಿ ಉಂಡೆ; ಅನ್ನದ ಉಂಡೆ.

ಮುದ್ರಾ (ಮುದ್ರೆ), ಮೊಹರು, ಅಚ್ಚು; ರೂಪಾಯಿ; ನಾಟ್ಯದ ಹಸ್ತಸಂಕೇತಗಳು.

ಮುದ್ರಾಕ್ಷರ ಅಚ್ಚುಮೊಳೆ, 'ಟೈಪ್'; ಛಾಪೆ ಬರಹ, ಅಚ್ಚಿನ ಅಕ್ಷರ.

ಮುದ್ರಾಧಾರಣೆ ಮಾಧ್ವರಲ್ಲಿನ ಮುದ್ರೆಯೊತ್ತುವ ಒಂದು ಸಂಪ್ರದಾಯ.

ಮುದ್ರಿಕೆ ಮುದ್ರೆ; ರೂಪಾಯಿ; ಹೆಸರು ಕೆತ್ತಿದ ಉಂಗುರ.

ಮುದ್ರಿಸು ಮುದ್ರೆ ಒತ್ತು; ಅಚ್ಚುಹಾಕು; ಛಾಪಿಸು; ಮುಚ್ಚು.

ಮುನ್ ಮೂರು, ಮುಂಚೆ ಎಂಬ ಶಬ್ದಗಳಿಗೆ ಕವರ್ಗೀಯಗಳು ಸಮಾಸವಾಗುವಾಗ ಬರುವ ರೂಪ.

ಮುನ್‌ಸಾರ್ ಭವಿಷ್ಯ ಹೇಳು; ಕಣಿ ಹೇಳು; ನೋಟ ಹೇಳು.

ಮುನಸೀಪ ಒಬ್ಬ ನ್ಯಾಯಾಧಿಕಾರಿ.

ಮುನಾಸಬು ಶಕ್ತ್ಯನುಸಾರ, ತಕ್ಕಂತೆ, ಅನುಕೂಲತೆಗೆ ಸಮನಾಗಿ.

ಮುನಿ ಋಷಿ; ಭಕ್ತ; ಮೌನಿ; ಸಾಧು; ಅರ್ಹಂತ; ಏಳರ ಸಂಖ್ಯಾಸೂಚಕ ಪದ; ಸಿಟ್ಟಾಗು, ಕೋಪಿಸು.

—ಪು (ಮುನಿಸು), ಕೋಪ, ಸಿಟ್ಟು.

ಮುನಿಷಿ ಕಾರಕೂನ, ಬರಹಗಾರ, ಗುಮಾಸ್ತ; ಭಾಷಾಪಂಡಿತ.

ಮುನೀಶ್ವರ ಶ್ರೇಷ್ಠಋಷಿ.

ಮುನ್ನ ಮೊದಲು; ಮುಂಚೆ.

ಮುನ್ನಾ ಮುಂದೆ; ಮುಂಚೆ; ಮೊದಲು; ಇನ್ನುಮುಂದೆ; ಮತ್ತೆ; ಅಲ್ಲಿಂದ.

ಮುನ್ನಾಲ್ (ಮುನ್ನಾ), ಹಿಂದಿನ.

ಮುನ್ನಿರುಳ್ ಪ್ರದೋಷ, ಮುಸ್ಸಂಜೆ.

ಮುನ್ನೀರು ಮುನ್ನೀರ್, ಹೊಳೆನೀರು-ಮಳೆನೀರು-ಒರತೆನೀರು—ಇವು ಸೇರಿ ಆದ ಕಡಲು; ದಿನದ ಮೊದಲಿನ ಭರತದ ನದಿನೀರು.

ಮುನ್ನು ಮೊದಲು, ಮುಂಚೆ, ಹಿಂದಕ್ಕೆ.
ಮುಪ್ಪಟ್ಟೆ ಮೂರುಪಟ್ಟು, ಮೂರುಮಡಿ.
ಮುಪ್ಪಾಗ ಮುಕ್ಕಾಲು ಪಾಲು; ಮೂರು ಹಾಗ.
ಮುಪ್ಪು ಮುದಿತನ, ಜರೆ, ಹೆಳತನ.
ಮುಪ್ಪುರಿ ಮೂರು ಎಳೆಗಳನ್ನು ಹೊಸೆದುದು.
ಮುಪ್ಪೊಳಲ್ ಮೂರು ಪಟ್ಟಣ, ತ್ರಿಪುರ.
—ಉರಿಕ ಮೂರು ಪಟ್ಟಣ ಸುಟ್ಟವ, ಶಿವ.
ಮುಮ್ (ಮುಂ), ಮುಂದಿನ; ಹಿಂದಿನ, ಮುಂಚಿನ.
ಮುಮುಕ್ಷು ಮೋಕ್ಷಾಪೇಕ್ಷೆ ಉಳ್ಳವ.
ಮುಮ್ಮಡಿ ಮೂರು ಪಾಲು; ಮೂರನೆಯ.
ಮುಮ್ಮಳಿ ರೂಪಳಿದ ಸಾವು.
ಮುಮ್ಮಾರುವೋಗು ಮೊದಲೇ ವಿಕ್ರಯವಾಗು; ಮೊದಲೇ ಪರಾಧೀನವಾಗು.
ಮುಮ್ಮೇಳ ಮುಂದಿನ ಮೇಳ; ವಾದ್ಯಕಾರರ ಮುಂದೆ ಕುಣಿವವ.
ಮುಮ್ಮುರಿ ಕಾಸಿದ ಉಸುಬು.
ಮುಮ್ಮೋರೆ ಮುಂದಿನ ಮಗ್ಗಲು.
ಮುಯ್ ಭುಜಶಿರಸ್ಸು, ಹೆಗಲು; ತೋಳು; ಸೇಡು; ಮರು ಉಡುಗೊರೆ.
—ಪು (ಮುಯಿಬು), ಹೆಗಲು, ಭುಜಶಿರಸ್ಸು, ಭುಜ; ಮುಯ್, ಸೇಡು.
ಮುರ ತೊಗಲಪಟ್ಟಿ; ಒಂದು ಜಾತಿ ನೆಲ; ಮುರನೆಂಬ ರಾಕ್ಷಸ; ಕಿವಿ ಮೂಗುಗಳಲ್ಲಿ ಇಡುವ ಸರಿಗೆಯ ಉಂಗುರ.
—ಕೇಡಿ ಮುರನನ್ನು ಕೊಂದವ, ಕೃಷ್ಣ.
ಮುರಕು (ಮುರಿಕು), ಮುರಿದುದು, ಒಡಕು.
ಮುರಜ ಚರ್ಮದಿಂದಾದುದು, ಮದ್ದಲೆ.
ಮುರಜಿತ್ ಮುರವೈರಿ, ಕೃಷ್ಣ, ವಿಷ್ಣು.
ಮುರಟು ಸುರುಟು, ಮುದುರು, ಸಂಕೋಚಗೊಳ್ಳು; ಕುಗ್ಗು; ಉಡುಗು.
ಮುರದಾರ ಮೈಲುತುತ್ತೆ.
ಮುರಲಿ (ಮುರಳಿ), ವೇಣು, ಕೊಳಲು.
ಮುರಾರಿ (ಮುರಧ್ವಂಸಿ), ಕೃಷ್ಣ .
ಮುರಿ ತುಂಡುಮಾಡು; ತಿರುಗು; ತಿರುಗಿಸು; ಬಗ್ಗು, ಡೊಂಕಾಗು; ಕೊಲ್ಲು, ಸೋಲಿಸು; ಒಡೆ; ಡೊಂಕು, ತಿರುಪು; ಹಾಳುಮಾಡು.
—ಇಸು ಚುಂಗಡಿಮಾಡು; ಒಡೆಯಿಸು; ಅಳಿಸು, ರೊಕ್ಕತರು.
—ಕಿಲ್ ಕಳ್ಳ; ಕೆಡುಕು; ಅಶುಚಿ.
—ಕೆಡೆ ಮುರಿದುಬೀಳಿಸು; ಮುರಿದು ಬೀಳುವಂತೆ ಉರುಳು.
—ಪು ಅಪಜಯ; ಮರಳಿ ಬರುವುದು; ಭ್ರಮಣೆ.
ಮುರು ಬಾಗಿದುದು, ವಕ್ರವಾದ್ದು; ಕಿವಿಯ ಬಾಗಿದ ಒಂಟಿ, ಒಂದು ಕಿವಿ ಒಡವೆ.
ಮುರುಕ ಮುಖವಿಕಾರ; ವಿಲಾಸ; ಒಯ್ಯಾರ; ಮುರಿವವ.
ಮುರುಟು (ಮುರುಂಟು), ಕುಗ್ಗು; ಚಿರುಟು; ಮುದುರು; ಕುಗ್ಗು.
ಮುರುಡಿ ಕುಂಟ, ಪೊದರು, ಹೊದರು.
ಮುರುಡು ಹುರುಬುರುಕು; ದೊರಗು; ಒರಟು; ಮುರುಟು.
ಮುರ್ಚು ಮುದುರುವಂತೆಮಾಡು; ಬಾಗಿಸು.
ಮುರ್ಮುರ ಉಮಿ ಬೆಂಕಿ; ಹೊಟ್ಟಿನ ಬೆಂಕಿ.
ಮುಲಾಜು ಲಕ್ಷ್ಯ, ಗಣನೆ.
ಮುಲಾಮು ಲೇಪಿಸುವ ಔಷಧ; ಲೋಹಗಳ ಲೇಪನ, ಗಿಲಿಟು; ಕಲಾಯಿ.
ಮುಲು ಹರೆಯುವಿಕೆ, ಕೀಟಗಳ ಚಲನೆ.
ಮುಲುಕು ಹೆರು, ಪ್ರಸವಿಸು; ಗಿಂಡು.
ಮುಲ್ಕಿ ಗೂಟ; ಬಾಣ; ಕಂದಾಯಕ್ಕೆ ಸಂಬಂಧಿಸಿದ; ಊರಿನ, ದೇಶೀಯ.
ಮುಲ್ಲಾ ಮೌಲ್ವಿ, ಕುರಾನ ಪಂಡಿತ.
ಮುಲ್ಲಂಗಿ ಮುಳ್ಳಂಗಿ (ದ್ಭ), ಮೂಲಕ(ಸಂ), ಒಂದು ಜಾತಿಯ ಗಡ್ಡೆ, ಮೂಲಂಗಿ.

ಮುಲ್ಲಿಗ ದರಿದ್ರ, ಬಡವ.
ಮುಶಲಿಕೆ ಹಲ್ಲಿ, ಗೌಳಿ; ಉಡು, ಉಡ.
ಮುಶೀರ ಗ್ರೀಷ್ಮ, ಬೇಸಗೆ; ಗದೆ, ಗುದ್ದಿ; ಚವರಿ, ಕುಂಚ; ಮಜ್ಜಿಗೆ; ಸಭೆ.
ಮುಷಿತ ಅಪಹರಿಸಿದ, ಕದ್ದ.
ಮುಷ್ಕ ಅಂಡ, ವೃಷಣ, ತರಡು; ಲಿಂಗ; ಹಿಡಿತ, ಸಂಗ್ರಹ.
ಮುಷ್ಕರ ಒರಟುತನ; ಆಟ, ಚಲ; ಕೆಲಸ ಮಾಡೆನೆಂಬ ಹಟ; ಕಟ್ಟು, ಸಂಪು.
ಮುಷ್ಟಾಮುಷ್ಟಿ ಮುಷ್ಟಿ ಮುಷ್ಟಿಗಳಿಂದ ಮಾಡುವ ಬಡಿದಾಟ.
ಮುಷ್ಟಿಬೆರಳು ಮಡಿಸಿದ ಹಸ್ತ; ಹಿಡಿ, ಪಿಡಿ.
ಮುಷ್ಟಿಕ ಚಾಣೂರಕನ ಜತೆಯಲ್ಲಿ ಕೃಷ್ಣನಿಗೆ ಇದಿರಾಗಿ ಕಾದಿದ ಮಲ್ಲ; ಅಕ್ಕಸಾಲಿ.
ಮುಷ್ಟಿಮೈಥುನ ಹಸ್ತದಿಂದ ಕೃತಕ ರತಿ ಕೇಳಿ.
ಮುಷ್ಟಿಯುದ್ಧ ಮುಷ್ಟಿ ಮುಷ್ಟಿಯಿಂದ ಹೊಡೆದುಕೊಳ್ಳುವ ಒಂದು ಬಗೆಯ ದ್ವಂದ್ವ.
ಮುಸರೆ ಅನ್ನ ಮೊದಲಾದುವುಗಳು, ಅವುಗಳ ಸಂಪರ್ಕಗೊಂಡ ವಸ್ತುಗಳು; ಅಡುಗೆಮಾಡಿದ ಪಾತ್ರೆಗಳು.
ಮುಸಲ ಒನಕೆ; ಮುಸಲ್ಮಾನ.
ಮುಸಲಮಾನ ಇಸ್ಲಾಂ ಮತವನ್ನು ಅವಲಂಬಿಸುವವ.
ಮುಸಲಿ ಮುಸಲವೆಂಬ ಆಯುಧವುಳ್ಳವ, ಬಲರಾಮ; ಹಲ್ಲಿ, ಗೌಳಿ.
ಮುಸಾಫರಿ ಪ್ರಯಾಣಿಕರಿಗೆ ಸಂಬಂಧಿಸಿದ.
ಮುಸಾಫಿರ ದಾರಿಗ, ಪ್ರಯಾಣಿಕ.
ಮುಸಿ ಮೂಸೆ, ಕೂವೆ, ಲೋಹ ಕರಗಿಸುವ ಬಟ್ಟಲು.
ಮುಸು (ಮುಸುವ), ಕಪ್ಪು ಮುಖದ ಮಂಗ, ಮುಜು, ಬುಕ್ಕ.
ಮುಸುಕು (ಮುಸುಂಕು, ಮುಸ್ಕು), ತೆರೆ, ಆವರಣ; ಮರೆ; ಆವರಿಸು, ಮರೆಮಾಡು; ಮುಚ್ಚು.
ಮುಸುಡು (ಮುಸುಡಿ), ಮೊಗ, ಮೋರೆ, ಮೂತಿ, ಸೊಡ್ಡು; ಬಾಯಿ.
ಮುಸುರ್ (ಮುಸುರು), ಮುತ್ತು; ಮೇಲೆ ಬಿದ್ದು ಮುಚ್ಚು; ಹೊದ್ದಿಕೆ, ತೆರೆ.
ಮುಸುರುಹ ಹೊದ್ದಿಕೆ, ತೆರೆ, ಆಚ್ಛಾದನ.
ಮುಸುಳು ಮುಚ್ಚಿರುವಿಕೆ, ಮುಸುಕು; ಮರೆ ಮೋಸ.
ಮುಸುಂಡಿ ಒಂದು ಆಯುಧ; ಮೂರು ಮೊನೆಯುಳ್ಳ ಒಂದು ಆಯುಧ, ಹಟಮಾರಿ.
ಮುಸುಂಬಿ ಸಿಹಿ ನಿಂಬೆ, ಒಂದು ಬಗೆ ಕಿತ್ತಿಳೆ.
ಮುಸುಂಬು ತೆರೆ, ಹೊದಿಕೆ, ಆಚ್ಛಾದನೆ.
ಮುಸ್ತ ಕೇವಟ ಹುಲ್ಲು; ಜೇಕಿನ ಗಡ್ಡೆ.
ಮುಸ್ತೈದು ಸಿದ್ಧ, ತಯಾರಾದ; ಸಲಕರಣೆ.
ಮುಹಗ್ಗಳ ಮಲ್ಲರ ಕುಸ್ತಿಯ ಒಂದು ಬಗೆ.
ಮುಹೂರ್ತ ಮೂರ್ತ (ದ್ಭ), ನಿಶ್ಚಿತಕಾಲ; ಎರಡು ಗಳಿಗೆ; ಸ್ವಲ್ಪ ಸಮಯ.
— ಕೊಳು ಕುಳ್ಳಿರು, ಕೂತುಕೊಳು.
ಮುಹೂರ್ತಿಕ ಜ್ಯೋತಿಷ್ಕ, ಜೋಯಿಸ.
ಮುಳ್(ಮುಳು), ಮುಳ್ಳು; ಮುಳಿ, ಸಿಟ್ಟಾಗು; ನೋವುಗೊಳ್ಳು; ಚುಚ್ಚು.
ಮುಳಿ ಕೋಪಿಸು, ಸಿಟ್ಟಾಗು; ಚುಚ್ಚು.
— ಸು ಕೋಪ, ಸೆಣಸು, ಸಿಟ್ಟು.
ಮುಳುಕ ಮುಳುಗುವವ.
ಮುಳುಗು (ಮುಳುಕು), ನೀರಿನಲ್ಲಿ ಕಂತು, ನೀರ ಕೆಳಗಾಗು; ತಲ್ಲೀನನಾಗು.
ಮುಳುವು ನಾಶ, ಹಾನಿ.
ಮುಳುವೇಲಿ ಮುಳ್ಳಿನ ಬೇಲಿ.
ಮುಳ್ಗು (ಮುಗ್ಗು), ಬಾಗು, ವಂದಿಸು; ಬೀಳು.
ಮುಳ್ಳು ಕಂಟಕ; ಗಡಿಯಾರದಲ್ಲಿ ಗಂಟೆ ಮಿನಿಟುಗಳನ್ನು ತೋರಿಸುವ ಸೂಜಿ.
ಮುಂಕಣಿ ಮುಂಭಾಗ.

ಮುಂಕುಡಿ (ಮುಂಗುಡಿ), ಸೇನೆಯ ಮುಂಭಾಗ; ಮುಂಗೋಟು.
ಮುಂಕೊಳ್ಳು ಮುಂದುವರಿ, ಮುಂದಾಗು.
ಮುಂಗಟ್ಟು ಮುಂದಿನ ಚಾವಡಿ, ಮುಂದಿನ ಆಧಾರ.
ಮುಂಗಡ ಅಗಾವು, ಮುಂದಾಗಿ ಕೊಡುವ ಸಾಲ, ಮೂಬದಲು, ಸಂಚಕಾರ.
ಮುಂಗಡೆ ಎದುರು, ಮುಂಭಾಗ.
ಮುಂಗಾಣ್ ಮುಂದಾಗಿ ತಿಳಿ, ಮುಂದಾಗಿ ಕಾಣು.
—ಕೆ ಪ್ರಥಮ ನೋಟ; ಮೊದಲು ಕಾಣುವುದು, ಮುಂದಾಗುವುದರ ಅರಿವು.
ಮುಂಗಾರು ಕಾರು ತಿಂಗಳ ಮಳೆ, ಮಳೆಗಾಲದ ಪ್ರಾರಂಭ.
ಮುಂಗಾಲು ಕಾಲಿನ ಮುಂಭಾಗ.
ಮುಂಗು ಮುಗ್ಗು, ಮೊಳಕೆ, ಬೆದೆ.
ಮುಂಗುಡಿ (ಮುಂದಿನ), ಮೊದಲಿನ.
—ಕೂಸು ಕೊನೆಯ ಕೂಸಿಗಿಂತ ಮೊದಲಿನ ಕೂಸು.
ಮುಂಗುರುಳು ತಲೆಯ ಮುಂದಿನ ಕೂದಲು
ಮುಂಗುಲಿ (ಮುಂಗುರಿ), ಮುಂಗುಸಿ, ಕೀರ, ನಕುಲ.
ಮುಂಗೆಡೆ ಮುಂದಕ್ಕೆ ಬೀಳು, ಕವಚಿಬೀಳು, ಮುಂದೆ ಬೀಳಿಸು.
ಮುಂಗೇಣಿ ಮೊದಲಿಗೇ ಧನಿಗೆ ಕೊಡುವ ಗೇಣಿ (ಲಾವಣಿ).
ಮುಂಗೋಟು ದೋಣಿಯ ಮುಂಭಾಗ.
ಮುಂಗೋಪ ಎದುರು ಸಿಟ್ಟು.
ಮುಂಗೈ ಕೈಯ ಮುಂಭಾಗ, ಮಣಿಕಟ್ಟು; ಮುಂದೆಮಾಡುವ.
ಮುಂಚ ಮೊದಲಿಗ, ಮುಖಂಡ.
ಮುಂಚತ್ ತೆರವಿಕೆ, ಸಡಿಲಾಗುವಿಕೆ, ಕಳಚುವಿಕೆ.
ಮುಂಚಿತ ಮೊದಲೇ, ಪೂರ್ವದಲ್ಲೇ.
ಮುಂಚು ಮುಂದಾಗು; ಅತಿಕ್ರಮಿಸು; ಹೊರಡು.
ಮುಂಚೂಣಿ ಮುಂಭಾಗ.
ಮುಂಚೆ ಮುಂದಾಗಿ; ಮೊದಲೇ, ಮುಂದೆಯೆ.
ಮುಂಜ ನೊಸೆಹುಲ್ಲು, ಒಂದು ಜಾತಿ ದರ್ಭೆ.
ಮುಂಜಾನೆ (ಮುಂಜಾಲೆ), ಹೊತ್ತಾರೆ, ಬೆಳಗಿನ ಜಾವ.
ಮುಂಜಿ ಮೌಂಜಿ ಕಟ್ಟುವ ಕ್ರಮ, ಉಪನಯನ ವಿಧಿ, ಮುಂಜಿವೆ.
ಮುಂಜೆರಗು ಮೇಲುದಿನ ಸೆರಗು, ಬಟ್ಟೆತುದಿ.
ಮುಂಡ ತಲೆಯಿಲ್ಲದ ದೇಹ; ಒಬ್ಬ ರಾಕ್ಷಸ, ಕಬಂಧ; ರುಂಡ.
—ನ ಕ್ಷೌರ.
—ಮೋಚು ತಲೆ ಬೋಳಿಸು.
ಮುಂಡಕ ಕಾಡುಕೇದಗೆ ಗಿಡ.
ಮುಂಡಾಸ (ಮುಂಡಾಸು), ರುಮಾಲೆ, ಪಾಗು, ಪಕಡಿ.
ಮುಂಡಾಸನ ಯಾವ ವೈಭವವೂ ಇಲ್ಲದೆ ಬೋಳಾಗಿರುವುದು.
ಮುಂಡಿಗ ಕ್ಷೌರಕ; ಲೋಹಕವಚ.
ಮುಂಡಿಗೆ (ದ್ಭ) ಮುಂಡಕ (ಸಂ), ಕಾಡು ಕೇದಗೆ; ಗಡುತರವಾದ ದೊಣ್ಣೆ; ಕಂಭ; ಆಶ್ರಯ; ಒಡಪು, ಒಗಟೆ.
ಮುಂಡು ಮುಂಡ; ತಲೆಯಿಲ್ಲದ ದೇಹ; ಮೋಟು ಮರ; ನಾಲ್ಕು ಮೊಳದ ಪಂಚೆ.
—ಆಡು ಮುತ್ತಿಡು, ಮುದ್ದಾಡು.
ಮುಂಡುಮುಳುಕ ಬೆಲ್ಲ; ಬಾತುಕೋಳಿ.
ಮುಂಡೆ ವಿಧವೆ, ಅಮ್ಮ.
ಮುಂದರಿ ಮುಂಚಿತವಾಗಿ ತಿಳಿ.
ಮುಂದಲೆ ತಲೆಯ ಮುಂಭಾಗ, ನೆತ್ತಿ.
ಮುಂದಳೆ ಮುಂದಕ್ಕೆ ಹೋಗು.
ಮುಂದು (ಮುಂದೆ) ಮುಂಗಡೆ, ಇನ್ನು ಮುಂದೆ

—ಕೆಡಿಸು ಮುಂದಿನ ಕೆಲಸ ಹಾಳು ಮಾಡು; ಭ್ರಾಂತಿಹುಟ್ಟಿಸು.

—ಕೊಳ್ ಮುಂದಾಗು, ಮುಂದುವರಿ.

—ಪರಿ ಮುಂಬರಿ; ಅತಿಕ್ರಮಿಸು; ಆತುರ ಪಡು.

ಮುಂಪಥ ಮುಂದಿನ ದಾರಿ; ಮುಂಗಡೆಯ ಮಾರ್ಗ.

ಮುಂಪುಗು ಮೊದಲು ಹೊಗು.

ಮುಂಬ ಮುಂಭಾಗ; ಮುಂದಾಳು.

ಮುಂಬಗಲ್ ಹಗಲಿನ ಪೂರ್ವಭಾಗ, ಬೆಳಗಿನ ಹೊತ್ತು.

ಮುಂಬನಿ ಮಳೆಯ ಮೊದಲ ಹನಿ; ಮುಂಗಾರು ಮಳೆ.

ಮುಂಬಯಿ ಬೊಂಬಾಯಿ ನಗರ.

ಮುಂಬರಿ ಮುಂದುವರಿ; ಬೀಸು; ಮುಂದೆ ಬರು, ಮುಂದೆಹೋಗು.

—ಪರಿ ಆತುರದಿಂದ ಮುಂದೆಹೋಗು.

ಮುಂಬಿಗ ಮುಂದಿರುವವ, ಮುಂಭಾಗದವ.

ಮುಂಬು ಮುಂಚಿನದು, ಮುಂಭಾಗ.

ಮುಂಬೆಚ್ಚ ಅಧಿಕವಾದ; ಮೊದಲು ಸೇರಿದ.

ಮುಂಭಾಗ ಎದುರಿನಭಾಗ, ಮುಂದಿನಭಾಗ, ಮೂಕಿ.

ಮೂಕ (ಮೂಗ), ಮಾತಾಡಲು ಬಾರದವ; ಮೂಕನೆಂಬ ದಾನವ.

ಮೂಕಾಂಬೆ ಶಿವನ ಶಕ್ತಿಯ ಅಂಶ.

ಮೂಕಿ ಗಾಡಿಯ ಮುಖ; ನೊಗಕ್ಕೆ ಬಿಗಿದ ಮರದ ಮೊನೆ; ಮಾತುಬಾರದವಳು.

ಮೂಕೊರೆಯ ಮೂಗಿಲ್ಲದವ, ಮೂಗು ಕತ್ತರಿಸಿ ಹೋದವ.

ಮೂಗ (ಧ್ಭ) ಮೂಕ (ಸಂ), ಮಾತು ಬಾರದವ.

ಮೂಗರಿಕೆ ಮೂಗು ಹರಿದು ಹೋದವಳು.

ಮೂಗಳ ಮೂರು ಕೊಳಗ.

ಮೂಗಳ್ಕೆ ಮೂಗಿಂದ ನೀರು ಸುರಿಸಿ ಅಳುವುದು, ಬಹು ದುಃಖ.

ಮೂಗಿಲಿ ಸಪುರ ಮೂತಿಯ ಇಲಿ, ಸೊಂಡಿಲಿ.

ಮೂಗು ನಾಸಿಕ, ವಾಸನೆ ತಿಳಿಯುವ ಇಂದ್ರಿಯ.

—ದಾರ (ಮೂಗುದಾಣ), ಎತ್ತುಗಳ ಸೊಳ್ಳೆಗಳಿಗೆ ಹಾಕಿ ಹಿಂದಕ್ಕೆ ಬಿಗಿಯುವ ದಾರ; ಹತೋಟಿ.

ಮೂಗುತಿ ಮೂಗಿನ ಒಂದು ಆಭರಣ, ನತ್ತು.

ಮೂಗುಸಿರು ಮೂಕ ಪ್ರಾಣಿಗಳು.

ಮೂಟೆ ಮೊಟ್ಟೆ, ಗಂಟು, ಹೊರೆ.

ಮೂಡಲ್ (ಮೂಡಲು, ಮೂಡಣ), ಪೂರ್ವ, ಹೊತ್ತುಮೂಡುವ ದಿಕ್ಕು; ಉದಯಿಸಲು.

ಮೂಡಾವೆ ಕವುಳುಡೆ, ದಿಂಬು.

ಮೂಡಿ ಸೂರ್ಯೋದಯ.

ಮೂಡಿಗೆ ಬತ್ತಳಿಕೆ; ಮುಡಿ, ಮೂಡೆ.

ಮೂಡು ಉದಯಿಸು, ಹುಟ್ಟು; ಮುಚ್ಚು; ಪೂರ್ವದಿಕ್ಕು.

—ಇಸು ಹುಟ್ಟಿಸು; ಮೊಳೆಯಿಸು; ಹುಟ್ಟುವಂತೆ ಮಾಡು.

ಮೂಡೆ ಧಾನ್ಯದ ಮೂಟೆ, ಮುಡಿ, ಕುರುಟು.

ಮೂಢ ಬೆಪ್ಪ, ಮೂರ್ಖ, ಹೆಡ್ಡ; ತಿಳಿಯದವ.

ಮೂತ ಕಟ್ಟಿದ, ಬಿಗಿದ.

ಮೂತಿ (ಮೋತಿ), ನೀಳವಾಗಿರುವ ಮುಖ; ಮುಸುಡು.

ಮೂತ್ರ ಉಚ್ಚೆ.

—ಶಂಕೆ ಮೂತ್ರ ಬಿಡುವಿಕೆ, ಕಾಲ್ಮಡಿಯುವುದು.

ಮೂದಲೆ ತಿರಸ್ಕಾರ, ಹಳಿ, ಚುಚ್ಚುಮಾತು.

ಮೂಬದಲು ಮೂಲಧನ; ವಿನಿಮಯ, ಅದಲು ಬದಲು; ಕೊಟ್ಟು ಕೊಂಡುದು.

ಮೂರಂಬಕ ಮುಕ್ಕಣ್ಣ, ಶಿವ.

ಮೂರಿ ಸಮೂಹ, ಬಳಗ; ವಾಸನೆ.

ಮೂರು ಒಂದು ಸಂಖ್ಯೆ.
— ಬಟ್ಟೆ ದಿಕ್ಕಾಪಾಲು.
ಮೂರುತಿ (ದ್ಭ) ಮೂರ್ತಿ (ಸಂ).
ಮೂರುಸಂಜೆ ಮುಸ್ಸಂಜೆ, ಶ್ಯಾಮ, ಸಾಯಂಕಾಲ.
ಮೂರ್ಕೋಟಿ ಮುಕ್ಕೋಟಿ, ಮೂರುಕೋಟಿ
ಮೂರ್ಖ ಮರುಳ; ಮೂಢ, ಬೆಪ್ಪ; ಹಟದವ.
ಮೂರ್ಛನ ಮೈಮರೆತ, ವಿಸ್ಮೃತಿ, ಬವಳಿ.
ಮೂರ್ಛಾ(ಮೂರ್ಛೆ), ಮೈಮರೆತ, ವಿಸ್ಮೃತಿ.
— ಇಸು ಮೂರ್ಛೆಹೋಗು; ತಿಳಿವು ಮರೆ.
ಮೂರ್ಛಾವಿಲ ಅಮಲಿನಿಂದ ಇಲ್ಲವೆ ಮೂರ್ಛೆಯಿಂದ ಮಂಕಾದ.
ಮೂರ್ತ ರೂಪುಗೊಂಡ; ಮಂಕಾದ, ಸ್ಮೃತಿ ಕಳೆದ; ಮುಹೂರ್ತ.
ಮೂರ್ತಿ ರೂಪುಗೊಂಡುದು, ಪ್ರತಿಮೆ, ಗೊಂಬೆ, ಘನಾಕಾರ.
— ಕೊಳು ರೂಪುಗೊಳು.
— ಮತ್ ಪ್ರತ್ಯಕ್ಷ, ಕಾಣುವಂತೆ.
ಮೂರ್ತಿಪೂಜೆ ಪ್ರತಿಮೆಯಿಟ್ಟು ಪೂಜಿಸುವಿಕೆ
ಮೂರ್ಧ ತಲೆ; ನೆತ್ತಿ.
ಮೂರ್ಧನ್ಯ ತಲೆಗೆ ಇಲ್ಲವೆ ಮಿದುಳಿಗೆ ಸಂಬಂಧಿಸಿದ; ಋ ಋೂ ಮತ್ತು ಷ ಕಾರಗಳ ಗುಂಪು.
ಮೂರ್ಮೆ (ಮೂಮೆ), ಮೂರು ಬಾರಿ.
ಮೂರ್ವರು ಮೂವರು, ಮೂರು ಜನ.
ಮೂಲ ಬೇರು; ಮೊದಲು; ವ್ಯಾಪಾರಕ್ಕೆ ಉಪಯೋಗವಾದ ಬಂಡವಳು; 19ನೆಯ ನಕ್ಷತ್ರ.
— ತಃ ಮೊದಲಿಂದಲೇ, ಬುಡದಿಂದಲೇ.
ಮೂಲಕ ಮುಖಾಂತರ; ಮುಲ್ಲಂಗಿ.
ಮೂಲಕಾರಣ ಎಲ್ಲದಕ್ಕೂ ಕಾರಣವಾದವ.
ಮೂಲಗಂಟು ಮೂಲಧನ, ಬಂಡವಳ.
ಮೂಲದ್ರವ್ಯ ಮೂಲಧನ.
ಮೂಲನಿವಾಸಿ ಒಂದು ನಾಡಿನ ತೀರ ಆದಿ ನಿವಾಸಿ, ಮೊದಲಿಂದಲೂ ಇದ್ದವ.
ಮೂಲಭೂತ ಪ್ರಾರಂಭದ ವಸ್ತು; ಆಧಾರ.
ಮೂಲವಿಗ್ರಹ ಗುಡಿಗಳಲ್ಲಿ ಸ್ಥಾಪಿಸಲ್ಪಟ್ಟ ವಿಗ್ರಹ, ಹೊರಗೆ ಒಯ್ಯದ ವಿಗ್ರಹ.
ಮೂಲವ್ಯಾಧಿ ಕರುಳಿನ ಒಂದು ಬೇನೆ.
ಮೂಲಂಗಿ ಮುಲ್ಲಂಗಿ, ಒಂದು ಗಡ್ಡೆ.
ಮೂಲಾಧಾರ ಎಲ್ಲದಕ್ಕೂ ಮೂಲವಾದ; ಕುಂಡಲಿನಿ.
ಮೂಲಿಕ ಮುಖ್ಯ; ಅಗ್ರಜ; ವೈದ್ಯ; ಚಂದ್ರ.
ಮೂಲಿಕಾ ಮೂಲಿಕೆ; ಬೇರು.
ಮೂಲಿಗ ಬೇರು ಮಾರುವವ; ಮೂಲವಾಸಿ.
ಮೂಲಿಗೇಣಿ(ಮೂಲಗೇಣಿ), ಕಾಯಂಗೇಣಿ, ನಿಶ್ಚಿತ ಲಾವಣಿ, ಸ್ಥಿರಗೇಣಿ.
ಮೂಲೆ ಎರಡು ದಿಕ್ಕುಗಳು ಸೇರುವ ಸ್ಥಾನ.
— ಪಾಲು ದಿಕ್ಕಾಪಾಲು; ಯಾರೂ ಕೇಳದೆ ಹೋಗುವ ಸ್ಥಿತಿ; ಕೆಲಸಕ್ಕೆ ಬಾರದೆ ಹೋಗು.
— ಪಿಡಿ ಹಿಂದಾಗು; ವ್ಯರ್ಥವಾಗು.
ಮೂಲ್ಯ ಬೆಲೆ.
ಮೂಷಕ (ಮೂಷಿಕ), ಇಲಿ, ಹೆಗ್ಗಣ.
ಮೂಸು ಮೂಗಿಂದ ವಾಸನೆ ನೋಡು.
ಮೂಸುಂಡಿ ಮುಸುಂಟ; ಒರಟು ತೊತ್ತು, ಹಟಮಾರಿ ಸೇವಕಿ.
ಮೂಸೆ ಎರಕದ ಅಚ್ಚು; ಎರಕದ ಪಾತ್ರೆ; ಕೂವೆ.
ಮೂಳ ಕಿವಿಯಿಲ್ಲದವ; ಮೂರ್ಖ; ಹೇಡಿ.
ಮೂಳಿ ಕಿವಿಯಿಲ್ಲದವಳು; ಮೂರ್ಖ, ಬುದ್ಧಿಗೇಡಿ; ಹೇಡಿ.
ಮೂಳೆ ಎಲುಬು, ಅಸ್ಥಿ.
ಮೃಕಂಡು ಮಾರ್ಕಾಂಡೇಯನ ತಂದೆ; ಒಬ್ಬ ಋಷಿ.
ಮೃಗ ಮಿಗ; ಪಶು; ಜಿಂಕೆ; ಮೃಗಶಿರ ನಕ್ಷತ್ರ.

ಮೃಗಜಲ ಮೃಗತೃಷ್ಣೆ; ಬಿಸಿಲ್ಗುದುರೆ; ಬಿಸಿಲಿಂದ ಉಂಟಾಗುವ ಸರೋವರದ ಕೃತಕ ದೃಶ್ಯ.
ಮೃಗಣೆ ವಿಚಾರಣೆ; ಹುಡುಕುವಿಕೆ, ಶೋಧನೆ
ಮೃಗತೃಷ್ಣೆ (ಮೃಗಜಲ).
ಮೃಗಧರ ಚಂದ್ರ; ಶಿವ; ಪರ್ವತ.
ಮೃಗನಯನೆ ಜಿಂಕೆಯಂತೆ ಕಣ್ಣುಳ್ಳವಳು.
ಮೃಗನಾಭಿ ಮೃಗಗಳ ಹೊಕ್ಕುಳಲ್ಲಿ ಸಿಗುವ ಒಂದು ವಸ್ತು; ಕಸ್ತೂರಿ; ಕಸ್ತೂರಿಮೃಗ.
ಮೃಗನಾರಿ ವಿಳಂಗ.
ಮೃಗಮದ ಕಸ್ತೂರಿ.
ಮೃಗಯು ಬೇಟೆಗಾರ.
ಮೃಗಯೆ (ಮೃಗಯಾ), ಮೃಗವ್ಯ, ಬೇಟೆ.
ಮೃಗವಾಹನ ವಾಯು.
ಮೃಗಶಿರ (ಮೃಗಶೀರ್ಷ), ಒಂದು ನಕ್ಷತ್ರ.
ಮೃಗಶೃಂಗಧರ ಜಿಂಕೆ ಕೊಂಬನ್ನು ಯಜ್ಞಕಾಲದಲ್ಲಿ ಹಿಡಿವವ, ಯಾಜ್ಞಿಕ.
ಮೃಗಾಂಕ ಚಂದ್ರ.
ಮೃಗಿ ಮುರಗಿ; (ದ್ಭ), ಹರಿಣಿ, ಹೆಣ್ಣು ಎರಳೆ.
ಮೃಗೇಂದ್ರ ಸಿಂಹ; ಹುಲಿ.
ಮೃಡ ಶಿವ.
ಮೃಡಾನಿ (ಮೃಡಾಣಿ), ಪಾರ್ವತಿ.
ಮೃಣಾಲ (ಮೃಣಾಳ), ತಾವರೆಯ ದಂಟು, ದೇಟು, ದಡಿ.
ಮೃಣ[illegible] ಮಣ್ಣಿಂದ ಆದುದು.
ಮೃತ ಸತ್ತ, ಮರಣ ಹೊಂದಿದ.
ಮೃತಪತ್ರ ಉಯಿಲು, ಸಾಯುವಾಗ ಬರೆದಿಡುವ ಕಾಗದ, ಮರಣಶಾಸನ.
ಮೃತಸ್ನಾನ ಸೂತಕ ಸ್ನಾನ; ಉತ್ತರಕ್ರಿಯೆ ಬಳಿಕ ಮಾಡುವ ಸ್ನಾನ.
ಮೃತಿ ಸಾವು, ನಿರ್ಯಾಣ.
ಮೃತ್ತಿಕೆ (ಮೃತ್ತಿಕಾ), ಮಣ್ಣು, ಶುದ್ಧಿಮಣ್ಣು.
ಮೃತ್ಪಾತ್ರೆ ಮಣ್ಣಿನ ಪಾತ್ರೆ.

ಮೃತ್ಪಿಂಡ ಮಣ್ಣಿನ ಮುದ್ದೆ, ಮಣ್ಣುಉಂಡೆ.
ಮೃತ್ಯು ಸಾವು; ಸಾವಿನ ದೇವತೆ, ಯಮ.
ಮೃತ್ಯುಂಜಯ ಸಾವನ್ನು ಜಯಿಸುವವ; ಶಿವ.
ಮೃದಂಗ ಮದ್ದಲೆ.
ಮೃದು ಮಿದು, ಮೆತ್ತಗೆ; ನವುರು; ಶಾಂತ.
—ಲ ಎಳೆಯ, ಮಿದುವಾದ, ಕೋಮಲ.
ಮೃದುಸ್ಮಿತ ಮಿದು ನಗೆ, ಮಂದಹಾಸ.
ಮೃಷ್ಟ ಸವಿಯಾದ; ಶುದ್ಧವಾದ; ಉಜ್ಜಿದ, ಒರಸಿದ; ಲೇಪಿಸಿದ; ಪಕ್ವಮಾಡಿದ.
ಮೃಷ್ಟಾನ್ನ ಸವಿಯೂಟ, ರಸದೂಟ.
ಮೆಕ್ಕೆ ಒಂದು ತರದ ವಿಷ ಫಲ ಬಿಡುವ ಮರ; ಒಂದು ತರದ ಜೋಳ.
ಮೆಚ್ಚವಣಿಗೆ ಮೆಚ್ಚುಗೆಯ, ಪ್ರಶಸ್ತವಾದ.
ಮೆಚ್ಚಿಕೆ ಒಪ್ಪಿಗೆ; ತುಷ್ಟಿ; ಸಂತೋಷಕೊಡುವ.
ಮೆಚ್ಚು ಒಡಂಬಡು; ಅಂಗೀಕರಿಸು; ಸೀಳು; ಬಹುಮಾನ, ಉಡುಗೊರೆ; ನಜರು; ಸಂತೃಪ್ತಿ; ಸಂತೋಷ.
ಮೆಟ್ಟಕ್ಕಿ ವಿವಾಹಕಾಲದಲ್ಲಿ ವಧೂವರರು ಮೆಟ್ಟುವ ಅಕ್ಕಿ.
ಮೆಟ್ಟಲು ಮೆಟ್ಟುವ ತಾಣ; ಸೋಪಾನ; ಪಾವಟಗೆ, ಮೆಟ್ಟಕೆ.
ಮೆಟ್ಟು ದಪ್ಪವಾಗಿ ಲೇಪಿಸು; ವ್ಯಾಪಿಸುವಂತೆ ಮಾಡು; ಮುಚ್ಚು; ತುಳಿ; ಸದೆಬಡಿ; ತುರುಕು; ಪಾದುಕೆ, ಕೆರಹು, ಕಾಲ್ಮುರಿ.
ಮೆಡರು ಜಡೆ; ಹೆಣೆದು ಮಾಡಿದ ತಡಿಕೆ.
ಮೆಣಸು (ಮೆಳಸು), ಒಂದು ಕಾರದ ಕಾಳು.
ಮೆತ್ತಗೆ (ಮೆತ್ತನೆ), ಮಿದುವಾಗಿ; ನಯವಾಗಿ, ಲಘುವಾಗಿ, ಮೆಲ್ಲಗೆ; ಮೆತ್ತಿದ್ದು, ಗಚ್ಚು, ಗಾರೆ; ಮುಚ್ಚಿದುದು.
ಮೆತ್ತು ಮಿದು; ಕೈಯಿಂದ ಸವರು; ಗಾರೆ ಹಾಕು, ಮಣ್ಣಿಂದ ಮುಚ್ಚು; ಒತ್ತು.
ಮೆತ್ತೆ ಹಾಸಿಗೆ, ಗಾದಿ.
ಮೆದಗ ಮೂರ್ಖ, ಹೆಡ್ಡ.

ಮೆದು (ದ್ಭ) ಮೃದು (ಸಂ), ಮೆತ್ತಗೆ.
ಮೆದುಳು (ಮಿದುಳು), ತಲೆಬುರುಡೆಯೊಳಗಿನ ಒಂದು ವಸ್ತು, ಬುದ್ಧಿಗೆ ಆಶ್ರಯವಾದ ಒಂದು ಅಂಗ.
ಮೆದೆ ರಾಶಿ; ಹುಲ್ಲಿನ ರಾಶಿ, ಬಣವೆ, ಬತ್ತದ ಹುಲ್ಲು.
—ಕೆಡಕ ವಿಶಾಖಾ ಮಳೆ.
ಮೆಯ್ (ಮೈ), ಶರೀರ; ಅಂಗ; ಪಕ್ಕ,ಸ್ಥಳ; ಸತ್ವ.
—ಇಡು ನಮಸ್ಕರಿಸು, ಬಾಗು.
—ಇಳಿ ಗರ್ಭಸ್ರಾವವಾಗು, ಕುಗ್ಗು.
—ಕಟ್ಟು ಶರೀರ ರಚನೆ.
—ಕರೆ ಅಡಗು.
—ಕಳ್ಳ ಆಲಸಿ, ಸೋಮಾರಿ.
—ಕೊಡು ಮುಂದಾಗು, ವಹಿಸಿಕೊಳ್ಳು, ಹೊಣೆ ಹೊರು; ಸಹಾಯಮಾಡು.
—ತೆಗೆ ಹಿಂದೆಗೆ, ಹಿಮ್ಮೆಟ್ಟು; ಹೆದರು.
—ತೋರು ಕಾಣಿಸು, ಪ್ರಕಟವಾಗು.
—ನೆರೆ ಬಿಡು, ನಿರ್ಭಯವಾಗು; ಋತುಮತಿಯಾಗು, ರಜಸ್ವಲೆಯಾಗು.
—ಮರವು ಮೂರ್ಛೆ, ವಿಸ್ಮೃತಿ.
—ಸಿರಿ ಮೈಚೆಲುವು, ಸೌಂದರ್ಯ.
ಮೆಯ್ಮಿ ಅಂಕ.
ಮೆರವಣಿಗೆ ಅಲೆದಾಟ,ಸುತ್ತಾಟ;ಪ್ರದರ್ಶನ.
ಮೆರಸು ತಿರುಗಾಡಿಸು; ತೋರ್ಪಡಿಸು.
ಮೆರಹು ಶೋಭೆ, ಕಾಂತಿ, ಹೊಳಪು.
ಮೆರುಗು (ಮಿರುಗು), ಹೊಳಪು, ಕಾಂತಿ; ಪುಟ, ನುಣುಪು.
ಮೆರೆ ಶೋಭಿಸು, ಪ್ರಕಾಶಿಸು; ರಂಜಿಸು; ಕಾಣಿಸಿಕೊಳ್ಳು; ಹಾರಿಸು; ಜಂಬಕೊಚ್ಚು.
—ಇಸು(ಮೆರೆಸು),ತೋರಿಸು,ಪ್ರದರ್ಶಿಸು
ಮೆಚ್ಚು ಮೆಚ್ಚು.
ಮೆಲ್ (ಮೆಲ್ಲು), ಮೆಲು, ತಿನ್ನು; ಮೆಲುಕು ಕಡೆ; ಪಕ್ವವಾದುದು, ಮಾಗಿದುದು; ಮೆಲ್ಲಗೆ, ನಿಧಾನ, ಮಿದುವಾಗಿ.
ಮೆಲುಕು ತಿಂದುದನ್ನು ಬಾಯಿಗೆ ತಂದು ತಿರುಗಿ ಕಡೆ, ನೆಮರು.
ಮೆಲ್ನಡೆ ನಿಧಾನವಾದ ನಡಿಗೆ.
ಮೆಲ್ನುಡಿ ಮೃದುವಾದ ಮಾತು.
ಮೆಲ್ಪು (ಮೆಲ್ಪು), ಮಾರ್ದವ, ಮೃದುತ್ವ.
ಮೆಲ್ಲ ನಿಧಾನ, ಸಾವಕಾಶ; ಮೆತ್ತ; ವಿರಾಮವಾಗಿ, ವಿಲಂಬಿತ.
—ಮೆಲ್ಲನೆ (ಮೆಲ್ಲಗೆ), ನಿಧಾನವಾಗಿ.
ಮೆಲ್ಲಿತು (ಮೆಲ್ಲಿತ್ತು), ಮೃದು; ಮೆಲ್ಲಗೆ.
ಮೆಲ್ಲು ತಿನ್ನು; ಮೇಯು.
ಮೆಲ್ವಾತು ಮೃದುನುಡಿ.
ಮೆಲ್ವಾಸು ಮೃದುವಾದ ಹಾಸಿಗೆ.
ಮೆಲ್ಸರಿ ಹನಿಮಳೆ, ಸೋನೆ.
ಮೆಳ್ ಮರುಳು; ಬೆರಗು, ವಿಸ್ಮಯ.
—ಪಡು ಬೆರಗಾಗು.
ಮೆಳೆ ಪೊದರು, ಕುಂಜ, ಸಮೂಹ; ಹಿಂಡಲು, ಪೆಳೆ.
ಮೆಳ್ಪಡೆ ಮರುಳು, ಮಂಕು, ಭ್ರಾಂತು.
ಮೆಳ್ಳ ಒಡ್ಡು ಕಣ್ಣಿನವ; ಕಾಜುಗಣ್ಣಿನವ, ಕೋಸುಗಣ್ಣಿನವ.
ಮೆಳ್ಳಿಸು ಉರುಳು; ಕಣ್ಣಾಲಿ ಹೊರಳಿಸು.
ಮೆಳ್ಳೆ ಉರುಳುವ; ಕಾಜುಗಣ್ಣು; ಕೋಸುಗಣ್ಣು.
ಮೇ ಮೇಯು; ತಿನ್ನು; ಮೇಲೆ, ಮೇಗೆ.
—ಕರಿಸು ಮೇ ಅನ್ನು, ಬ್ಯಾಕರಿಸು.
ಮೇಕಲ ಒಂದು ಪರ್ವತ.
ಮೇಕಲಕನ್ಯೆ ನರ್ಮದಾ ನದಿ.
ಮೇಕು ಹೆಚ್ಚಿಕೆ;ಪೈಪೋಟಿ,ಮೇಲಾಟ,ಏರಾಟ
ಮೇಕೆ ಆಡು, ಹೆಣ್ಣಾಡು.
ಮೇಖಲೆ (ಮೇಖಳೆ), ಡಾಬು, ಉಡಿದಾರ, ಒಡ್ಯಾಣ; ಬೊಟ್ಟು.

ಮೇಗಣ ಮೇಲಿನ.
ಮೇಗಯ್ ಹಸ್ತದ ಹಿಂಭಾಗ.
ಮೇಗರೆ ಮೇಲ್ಭಾಗ; ಮೇಲಿನ; ಠಕ್ಕು, ವಂಚನೆ; ಬೇಸರ.
ಮೇಗಾಟ ಮುಖ್ಯ ಕಾವಲು.
ಮೇಗಾವಲು ಮೇಲ್ತನಖಿ, ಮೇಲ್ವಿಚಾರಣೆ, ಕಣ್ಕಾಣಿಕೆ.
ಮೇಗಾಳಿ ಮೇಲಿಂದ ಬೀಸುವ ಗಾಳಿ; ಮೇಲ್ಗಡೆ
ಮೇಗೆ (ಮೇಗು), ಮೇಲೆ.
ಮೇಘ ನೋಡ, ಮುಗಿಲು; ಒಬ್ಬ ರಾಕ್ಷಸ; ಒಂದು ರೋಗ.
ಮೇಘನಾದ ವರುಣ; ರಾವಣನ ಮಗ, ಇಂದ್ರಜಿತು; ಗುಡುಗು.
ಮೇಘಮಾಲೆ ಮುಗಿಲು ಕೂಟ.
ಮೇಘವಾಹನ ಮುಗಿಲೇರಿ ಸಂಚರಿಸುವವ, ಇಂದ್ರ.
ಮೇಘಾಗಮ ಮುಗಿಲು ಬರುವ ಸಮಯ, ಮಳೆಗಾಲ.
ಮೇಘಾಡಂಬರ ಕೊಡೆ, ಸತ್ತಿಗೆ; ಗುಡುಗು.
ಮೇಚಕ ಕತ್ತಲೆ; ನವಿಲಿನ ಗರಿಯ ಕಣ್ಣು; ಆಕಾಶ; ಕಪ್ಪುಬಣ್ಣ; ಕಿರಾತ, ಬೆಳುದಿಂಗಳು.
ಮೇಜವಾನಿ ಆತಿಥ್ಯ, ಉಪಚಾರ.
ಮೇಜು ಎತ್ತರದ ಮಂಚ; ಪಣ ದ್ರವ್ಯ.
ಮೇಜೋಡು ಕಾಲು ಚೀಲ, 'ಸ್ಟಾಕಿಂಗ್ಸ್'.
ಮೇಟ ಕಾಳಿನ ಅಟ್ಟ.
ಮೇಟಿ (ಮೇಡಿ), ಧಾನ್ಯವನ್ನು ಒಕ್ಕಲು ಅಂಗಳದ ನಡುವೆ ನಡುವ ಕಂಬ; ಮುಂದಾಳು, ನಾಯಕ; ನೇಗಿಲ ಕೋಲು.
ಮೇಡು ದಿನ್ನೆ, ದಿಬ್ಬ, ದಿಮ್ಮೆ.
ಮೇಢ (ಮೇಢಕ), ಆಡು, ಮೇಷ.
ಮೇಢ್ರ ಟಗರು; ಪುರುಷನ ಜನನೇಂದ್ರಿಯ.
ಮೇಣ್ ಮತ್ತು; ಅಲ್ಲದೆ.
ಮೇಣ ಮಯಣ.
ಮೇಣಕಪಡ ಮೇಣಸವರಿದ ವಸ್ತ್ರ.
ಮೇಣಬತ್ತಿ ಮುಂಬತ್ತಿ; ಮೇಣದಿಂದ ಮಾಡಿದ ದೀಪ ಉರಿಸುವ ಬತ್ತಿ.
ಮೇಣಿ (ಮೇಟ), ನೇಗಿಲು; ಕಂಬ, ಧಾನ್ಯ ಒಕ್ಕುವ ಅಂಗಳದಲ್ಲಿನ ನಡು ಕಂಭ. —ಪಾಲು ಸಾಗುವಳಿಯ ಹುಟ್ಟನಲ್ಲಿ ಸಹಾಯಕನಿಗೆ ಕೊಡುವ ಪಾಲು.
ಮೇಣಿಸು ಎಸುಗೆ.
ಮೇಣೆ ಮೇನೆ, ಒಂದು ಬಗೆಯ ಪಲ್ಲಕ್ಕಿ.
ಮೇತ ಮೇವು; ಮೇಯುವಿಕೆ.
ಮೇದ (ಮೇದಾರ), ಮೇದರವ; ಬಿದಿರಿನ ಕೆಲಸಮಾಡುವವ; ನೆಣ, ಕೊಬ್ಬು.
ಮೇದಸ್ಸು (ಮೇದಸ್), ಮಿದುಳು; ಕೊಬ್ಬು, ಚರ್ಬಿ, ನೆಣ; ಮಾಂಸದಿಂದ ಹುಟ್ಟತಕ್ಕ ಧಾತುವಿಶೇಷ.
ಮೇದಿನಿ ಭೂಮಿ.
ಮೇದುರ ಬಹು ನುಣುಪಾದ, ನಯವಾದ.
ಮೇಧ ಯಾಗ, ಯಜ್ಞ.
ಮೇಧಾ ಧಾರಣಾಶಕ್ತಿಯುಳ್ಳ ಬುದ್ಧಿ; ಶಕ್ತಿ. —ವಿ ಜ್ಞಾಪಕಶಕ್ತಿಯುಳ್ಳವ; ಬುದ್ಧಿವಂತ; ಗಿಳಿ; ಚಂದ್ರಹಾಸನ ತಂದೆ.
ಮೇಧ್ಯ ಪವಿತ್ರ; ಶುಚಿ; ಯಜ್ಞಕ್ಕೆ ಅನುಕೂಲವಾದುದು—ಆಡು; ಖದಿರ; ಯವ.
ಮೇನಕಾ ಒಬ್ಬ ಅಪ್ಸರ ಕನ್ಯೆ. ಈಕೆ ವಿಶ್ವಾಮಿತ್ರನ ತಪೋಭಂಗ ಮಾಡಿದಳು. ಶಕುಂತಲೆಯ ತಾಯಿ.
ಮೇನಕಾತ್ಮಜೆ ಹಿಮಾಲಯನ ಮಗಳು, ಪಾರ್ವತಿ.
ಮೇನೆ (ಮೇಣೆ), ಹಿಮಾಲಯನ ಪತ್ನಿ; ಪಲ್ಲಕ್ಕಿ, ಡೋಲಿ.
ಮೇಯ್ (ಮೇಯು), ತಿನ್ನು; ಹುಲ್ಲು ತಿನ್ನು.
ಮೇಯ ತಿಳಿಯಬಹುದಾದ; ಅಳೆಯಬಹುದಾದ.

ಮೇರು ಭೂವಲಯದ ಉತ್ತರಕ್ಕಿದೆ ಎನ್ನುವ ಒಂದು ಪರ್ವತ; ಭೂಮಿಯ ಅತ್ಯಂತ ಉತ್ತರ ತುದಿ.
ಮೇರುವೆ ರಾಶಿ; ಮೇಡು; ದಿಮ್ಮಿ.
ಮೇರುಸಾವರ್ಣಿ ಒಬ್ಬ ಮನು.
ಮೇರೆ ಸೀಮೆ,ಗಡಿ; ಮರ್ಯಾದೆ; ಪರ್ಯಂತ; ಮಿತಿ.
—ಪರಿ ಉಕ್ಕು, ಕಟ್ಟುಮೀರು.
ಮೇಲ್ (ಮೇಲೆ), ಮೇಲು, ಶುಭ; ಉನ್ನತಿ, ಶ್ರೇಷ್ಠತೆ.
—ಆಟ ಸ್ಪರ್ಧೆ, ಪೈಪೋಟಿ.
ಮೇಲ (ಮೇಳ), ಕೂಟ; ಸಂಗಡಿಕೆ; ನೃತ್ಯ ಗಾರರ ಕೂಟ.
—ಕ ಸೇರಿಕೆ, ಸಂಗ; ವಿವಾಹ, ಮದುವೆ.
ಮೇಲನರಿ (ಮೇಲರಿ), ಮುಂದಿನ ವಿಚಾರ ವನ್ನು ತಿಳಿ.
ಮೇಲಾಪ (ಮೇಳಾಪ), ಸೇರಿಕೆ, ಸೇರುವಿಕೆ; ಜತೆಗೊಳಿಸುವಿಕೆ.
ಮೇಲಾಂತು ಆ ಮೇಲಿನ; ಆ ಮೇಲೆ.
ಮೇಲಿಕ್ಕು ಮೇಲುವರಿ, ಮೇಲೆ ಬೀಳು.
ಮೇಲು (ಮೇಲ್), ಮೇಲಿರುವುದು; ಉತ್ತಮ ವಾದುದು.
ಮೇಲುಗಟ್ಟು ಮೇಲ್ಗಟ್ಟು, ಮೇಲೆ ಚಪ್ಪರಕ್ಕೆ ಹೊದೆಯಿಸುವ ವಸ್ತ್ರ.
ಮೇಲುಗಾಣು ಮುಂದಿನದನ್ನು ತಿಳಿ.
ಮೇಲುದಾಯ ಮುಂದಿನ, ಮುಂದೆ ಬರುವ.
ಮೇಲುದು ಮೇಲುಡು, ಮೇಲುಡೆ, ಎದೆಯ ಮೇಲಿನ ಸೆರಗು; ಉತ್ತರೀಯ.
ಮೇಲುವಾಸಿ ಕುಸುರಿ; ಉತ್ತಮ ಸ್ಥಿತಿ, ಹೆಚ್ಚಿನ ಸ್ಥಿತಿ.
ಮೇಲುಸಿರು ಮೇಲೆ ಮೇಲೆ ಹೊರಡುವ ಉಸಿರು, ಉಬ್ಬಸ, ನೇವಸ.
ಮೇಲೂರ್ ಸ್ವರ್ಗ.
ಮೇಲೆ ಮೇಗೆ, ಎತ್ತರದಲ್ಲಿ; ಅನಂತರ; ಆ ಮೂಲಕ; ಬಳಿಕ; ತರುವಾಯ.
—ಬೀಳು ಪ್ರತಿಭಟಿಸು; ಮೇಲೆ ಬರು, ಮುತ್ತಿಗೆ ಹಾಕು; ಮೈಮೇಲೆ ಎರಗು; ಜಗಳಕಾಯು.
—ಮೇಲೆ ತಿರುತಿರುಗಿ.
ಮೇಲ್ಗಣಿಯ್ ಮೇಲಾದ, ಉತ್ತಮವಾದ.
ಮೇವು (ಮೇಹು), ಪಶುಗಳ ಆಹಾರ.
ಮೇಷ ಮೇಸ (ದ್ಭ), ಕುರಿ; ಒಂದು ಸೌರ ಮಾನ ಮಾಸ.
ಮೇಷಾಂಡ ಇಂದ್ರ.
ಮೇಸು (ಮೇಯಿಸು).
ಮೇಸ್ತ್ರಿ ಕೂಲಿಕಾರರ ಪಡೆಗೆ ನಾಯಕ; ಸೇರೆಗಾರ, ಸೇರುವೆಗಾರ, ಮುಕಾದಮ.
ಮೇಹ ಜನನೇಂದ್ರಿಯ; ಗರ್ವ; ಆಕಾರ.
ಮೇಹನ ಒಂದು ಮೂತ್ರರೋಗ, ಬಹು ಮೂತ್ರ; ಮೂತ್ರ; ತುಣ್ಣೆ.
ಮೇಹು (ಮೇಪು; ಮೇವು), ಆಹಾರ.
ಮೇಳ ಜತೆ; ಕೂಟ, ಸಂಗಡ; ಹೊಂದಿಕೆ; ನೃತ್ಯಗಾರರ ಕೂಟ; ಸಂತೋಷ, ಕುಶಾಲು
—ಅಯ್ಸು ಜತೆಯಾಗು; ಸೇರು, ಹೊಂದು; ಮೇಳವಾಗು.
—ವಣೆ ಸಂಗೀತದಿಂದ ಕೂಡಿದ ನಾಟ್ಯ.
ಮೇಳದವ ನೃತ್ಯಕೂಟದವ; ವೇಶ್ಯೆಯ ಹುಡುಗ; ಹಾಸ್ಯಗಾರ.
ಮೇಳಂಬ ತುಂಬಿ, ಭ್ರಮರ.
ಮೇಳಾಪ ಸೇರಿಕೆ, ಹೊಂದಿಕೆ.
ಮೈಗಲಿ ಬಲಿಷ್ಠ.
ಮೈಗಣ್ಣ ಸಹಸ್ರಾಕ್ಷ, ಇಂದ್ರ.
ಮೈಗಾಣಿಕೆ ದೇಹ ತೋರಿಸುವುದು.
ಮೈಗಾವು (ಮೈಗಾಹು), ಮೈಗಾವಲು, ಶರೀರರಕ್ಷಣೆ.
ಮೈಗೂಡು ದೇಹತ್ತುಂಬು, ದೇಹ ಕೂಡಿಸು.

ಮೈಜೋಡು ಕವಚ, ಲೋಹದ ಅಂಗಿ.
ಮೈಝುಳ ದೇಹದ ಸೆಕೆ.
ಮೈತ್ರ ಮಿತ್ರನೇ ದೇವತೆಯಾಗಿ ಉಳ್ಳದು, ಅನುರಾಧೆ ನಕ್ಷತ್ರ; ಮಿತ್ರ; ಬ್ರಾಹ್ಮಣ.
ಮೈತ್ರಿ ಸ್ನೇಹ, ಗೆಳೆತನ.
ಮೈತ್ರೇಯ ಮಿತ್ರನೆಂಬ ಋಷಿಯಲ್ಲಿ ಹುಟ್ಟಿದ ಒಬ್ಬ ಬ್ರಹ್ಮರ್ಷಿ.
ಮೈತ್ರೇಯಿ ಯಾಜ್ಞವಲ್ಕ್ಯನ ಹೆಂಡತಿ. ಈಕೆ ಶ್ರೇಷ್ಠ ವಿದುಷಿ ಎನಿಸಿದ್ದಳು.
ಮೈಥುನ ಗ್ರಾಮ್ಯಧರ್ಮ; ಸ್ತ್ರೀ ಸಂಭೋಗ, ಸುರತ, ಹಡುವಿಕೆ.
ಮೈದಡಿ ಮೈಮೇಲಿನ ಜೀನು; ಸರಳವಾದ ದೇಹ.
ಮೈದಾನ ಬಯಲು,ಸಮತಳಭೂಮಿ,ಬೆಟ್ಟ, ಬೆಣ.
ಮೈದುನ ತಂಗಿಯ ಗಂಡ, ಗಂಡನ ತಮ್ಮ.
ಮೈದೊಡವು (ತೊಡವು=ಆಭರಣ), ತೊಡುಗೆ, ಆಭರಣ.
ಮೈನ ಒಂದು ಹಕ್ಕಿ, ಶಾರಿಕೆ.
ಮೈನಾಕ ಮೇನಕೆಯಲ್ಲಿ ಹುಟ್ಟಿದವ; ಒಂದು ಪರ್ವತ.
ಮೈನೋಟ ದೇಹದ ಚೆಲುವು; ದೇಹಸ್ಥಿತಿ; ದೇಹದ ಕಷ್ಟ.
ಮೈಪೆರ್ಚು ಶರೀರ ಪುಷ್ಟಿ; ಉತ್ಸಾಹಪಡು.
ಮೈಬಿದಿರು ಮೈಯನ್ನು ಅಲ್ಲಾಡಿಸು.
ಮೈಮರವು ದೇಹ ಮರೆವುದು, ಮೂರ್ಛೆ.
ಮೈಮಸಕ ತಿಕ್ಕಾಟ; ಅಭಿವೃದ್ಧಿ; ಜೋರು;
ಮೈಮಸೆ ಮೈಯ ಗಾಯ; ಮೈಕಾಂತಿ.
ಮೈಮುರಿ ಮೈಯನ್ನು ತಿರುವು; ದೇಹ ಅಲ್ಲಾಡಿಸು; ಆಲಸ್ಯವನ್ನು ಕಳಚುವ ಬಗೆ.
ಮೈಮೆ ಮಹಿಮೆ (ಸಂ), ಘನತೆ; ಪೂಜ್ಯತೆ.
ಮೈಯರಿ ಸ್ಮೃತಿಹೊಂದು, ಎಚ್ಚರವಾಗು; ದೇಹದ ಪರಿವೆ ಇಡು.
ಮೈಯಳಿ ಸಾಯು.
ಮೈರೇಯ (ಮಿರಾ = ಈಚಲ ನೀರು),ಹೆಂಡ, ಕಳ್ಳು, ಸೇಂದಿ, ಸೆರೆ.
ಮೈಲಿ (ಮೈಲು), ಎಂಟು ಫರ್ಲಂಗು ದೂರ; ಒಂದು ಅಂಟುರೋಗ; ಕೊಳೆ, ಸಿಡುಬು.
ಮೈವಳಿ (ಮೈಲಿಗೆ, ಮೈಯ ಬಳಿ), ಶರೀರದ ಸನ್ನಿಧಿ, ಸಮೀಪ; ಅನುಸರಣೆ.
ಮೈವೆಳಗು ಶರೀರ ಕಾಂತಿ.
ಮೈಸಿರಿ ದೇಹದ ಚೆಲುವು.
ಮೊಕದ್ದಮೆ ವ್ಯವಹರಣೆ; ನಂಬ್ರ, ವ್ಯಾಜ್ಯ, ದಾವೆ.
ಮೊಕರೂರು ತೀರ್ಮಾನ; ಗೊತ್ತುವಳಿ; ನಿಶ್ಚಯ; ನೇಮಕ.
ಮೊಕಾಬಿಲೆ ಮುಖತಃ ಮಾತಾಡುವಿಕೆ, ಭೇಟಿ, ಮಾತಾಡಿ ತೀರ್ಮಾನಿಸುವಿಕೆ.
ಮೊಕ್ಕ (ಮೋಕ್ಷ).
ಮೊಕ್ಕಳ (ಮೊಗ್ಗರ), ವಿಪುಲ, ಅತಿಶಯ, ಬಹು; ರಾಶಿ; ಮೊತ್ತ.
ಮೊಕ್ಕಾಮು(ಮುಕ್ಕಾಮು) ತಾವು, ಠಿಕಾಣಿ; ತಂಗಿದ ಸ್ಥಳ; ಇರತಕ್ಕ ಊರು; ಬೀಡು.
ಮೊಕ್ತಾ ಮುಕ್ತಾ, ಮುಖತಃ.
ಮೊಕ್ತಿಯಾರ್ ಸಂಪೂರ್ಣ ಅಧಿಕಾರದ; ಸ್ವತಂತ್ರವಾಗಿ ನಡೆಯಬಹುದಾದ, ಪ್ರತಿನಿಧಿ, ರಾಯಭಾರಿ.
ಮೊಕ್ತೇಸರ ದೇವಾಲಯಗಳ ಪಂಚ; ಮುಖಂಡ; ಮುಖ್ಯ ನೌಕರ.
ಮೊಖಮಲ್ಲು ಮಲಮಲ್, ಮಸಲೀನುಬಟ್ಟೆ
ಮೊಗ್ ಆಶ್ರಯ, ಮರೆ.
ಮೊಗ (ದ್ಭ) ಮುಖ (ಸಂ), ಮೊಕ, ಮೋರೆ, ಮೂತಿ, ಮುಸುಡು.
—ಕೆಡಿಸು ಅಪಮಾನಿಸು.
—ತೋರು ಕಾಣಿಸು; ಹುಟ್ಟು.
—ಪುಗು ಇದಿರಿಸು.

—ಪಡೆ ಮೊಗಂಬಡೆ,ಸಮಾಧಾನವಾಗು.
—ವಾಡ ಮುಖವಾಡ, ಮುಖದ ಮರೆ.
—ಸಿರಿ ಮುಖದ ಚೆಲುವು.
ಮೊಗಚು (ಮಗುಚು), ತಲೆ ಕೆಳಗೆ ಮಾಡು; ಅಡಿಮೇಲೆ ಮಾಡು, ಬುಡಮೇಲಾಗು.
ಮೊಗದಂಡೆ ಮುಖ ಮರೆಮಾಡುವ ಮರೆ, ಆಶ್ರಯ.
ಮೊಗರಂಬ ಕುದುರೆ, ಆನೆ ಮೊದಲಾದುವು ಗಳ ಮುಖವಾಡ.
ಮೊಗರು ಎಳೆಯ; ಮಗರು, ಮೊಗಚು.
ಮೊಗಲ ಒಂದು ಮುಸಲ್ಮಾನ ರಾಜವಂಶ.
ಮೊಗಲಾಯಿ ಮೊಗಲರಿಗೆಸಂಬಂಧಿಸಿದುದು; ಹೈದರಾಬಾದಿನ.
ಮೊಗವರಿತ ಮುಖಪರಿಚಯ.
ಮೊಗಸಾಲೆ ಪಡಸಾಲೆ; ಮನೆಯ ಮುಂದಿನ ಚಾವಡಿ.
ಮೊಗಸು ಆತುರಪಡು, ಆಸೆಮಾಡು; ಪ್ರಯತ್ನಿಸು, ಸಿದ್ಧಮಾಡು; ವಿರೋಧಿಸು.
ಮೊಗೆ ಆಕ್ರಮಿಸು; ಸುತ್ತಿಕೊ; ಸಮೀಪಿಸು; ನೀರನ್ನು ಎತ್ತಿಹಾಕು; ನೀರು ತುಂಬು; ನುಂಗು; ಒಂದು ಮಣ್ಣಿನ ಪಾತ್ರೆ, ಗೊಬ್ಬಿ.
ಮೊಗ್ಗರ ರಾಶಿ, ಮೊತ್ತ, ಜಂಗುಳಿ.
ಮೊಗ್ಗಲ್ಲು ಆಶ್ರಯಕೊಡುವ ಕಲ್ಲು.
ಮೊಗ್ಗು (ಮೊಗ್ಗೆ), ಮಿಟ್ಟೆ, ಅರಳದ ಹೂ; ಇಂದ್ರಜಾಲ; ಹಳಸು ವಾಸನೆ; ಅತಿಶಯ.
ಮೊಚ್ಚೆ (ಮೊಚ್ಚೆಯ) ಪಾಪಾಸು, ಪಾದರಕ್ಷೆ; ಕೆರಹು.
ಮೊಟಕು ತುಣುಕು,ಚೂರು;ಮೋಟು,ಗಿಡ್ಡ.
ಮೊಟ್ಟೆ (ಮೊಟ್ಟು), ತಕ್ಕ, ಹಾಳಿತ, ಹದ, ಸೊಗಸು.
ಮೊಟ್ಟೆ ನಿರ್ಮಲ.
ಮೊಟ್ಟು ಮುಷ್ಟಿಯಿಂದ ತಿವಿ, ಬಡಿ.
ಮೊಟ್ಟೆ ಕಟ್ಟು, ಗಂಟು, ಮೂಟೆ; ತತ್ತಿ, ಅಂಡ.
ಮೊಡವಿ ಮುಖದ ಮೇಲಾಗುವ ಬೊಕ್ಕೆ; ಮುದ್ದಣ; ಮುಡವು, ಮುಡಮೆ.
ಮೊಣ (ಮೊಳ), ಜಾನು, ಮೊಣಗಂಟು.
—ಕಾಲು ಡೊಗ್ಗಾಲು.
—ಕೆಯ್ ಕೈಯ ನಡುಗಂಟು.
ಮೊತ್ತ ರಾಶಿ, ಸಮೂಹ, ಜಂಗುಳಿ; ಜುಮ್ಲಾ; ಒಟ್ಟುಕೂಡಿದ್ದು, ಮೊಬಲಗು; ತೀರ.
—ಮೊದಲು ತೀರ ಮೊದಲು.
ಮೊದಲ್(ಮೊದಲು),ಪ್ರಥಮದಲ್ಲಿ,ಮುಂಚೆ; ಪೂರ್ವದಲ್ಲಿ;ಮುಖ್ಯವಾಗಿ;ಬುಡ;ಆರಂಭ.
ಮೊದೆ ಮುಂಜ, ಒಂದು ಜಾತಿ ದರ್ಭೆಹುಲ್ಲು; ಮೆದೆಹುಲ್ಲು.
ಮೊದ್ದು ಮುದ್ದೆಯಾಗಿರುವಿಕೆ;ಮೊಂಡ;ಹೆಡ್ಡ
ಮೊನೆ ಹರಿತವಾದ ತುದಿ; ಕಾಳಗ, ಯುದ್ಧ.
—ಆಳು (ಯೋಧ), ವೀರ, ಕಾದಾಳು.
—ಕಾಣಿಸು ಚುಚ್ಚು; ಮೊನೆದೋರು.
—ಕೊಡು ಯುದ್ಧಮಾಡು.
ಮೊನ್ನೆ ನಿನ್ನೆಯ ಹಿಂದಿನ ದಿನ, ಹಿಂದೆ.
ಮೊಬಲಗು ಹಣ, ಮೊತ್ತ, ಒಟ್ಟು ಹಣ.
ಮೊಬ್ಬು(ಮಬ್ಬು),ಕತ್ತಲೆ, ಮಸಕು; ಮಂದ.
ಮೊಮ್ಮ ಮೊಮ್ಮಗ; ಮಗನ ಇಲ್ಲವೆ ಮಗಳ ಮಗ.
ಮೊಮ್ಮಗ (ಮೊಮ್ಮ).
ಮೊಮ್ಮಲ (ಮುಮ್ಮಲ), ಹೆಚ್ಚಾಗಿ.
ಮೊರ ಕೆರಸೆ, ಗೆರಸೆ; ಸೇರು, ಒಂದು ಅಳೆಯುವ ಸಾಧನ; ನವಿಲು.
ಮೊರಕು ದರ್ಪದಿಂದ ತಲೆದೂಗು; ತಲೆ ದಿರುಗು.
ಮೊರಡಿ (ಮರಡಿ), ದಿನ್ನೆ, ದಿಬ್ಬ, ಗುಡ್ಡ.
ಮೊರಡು ದೊರಗು, ಏರುತಗ್ಗು; ಒರಟು.
ಮೊರಹು ಮೊರೆತ; ಗರ್ಜನೆ, ಕೂಗು; ಸಂಬಂಧ.
ಮೊರಂಗು ಧ್ವನಿ, ಗುಡುಗು.

ಮೊರೆ ವಿಜ್ಞಾಪನೆ, ದೂರು; ದೂರಿಡು, ಬಿನ್ನವಿಸು; ಕೂಗು; ಆರ್ಭಟಿಸು; ಹಾರಾಡು; ನಂಟು; ದಿಕ್ಕು.

—ಇಡು ಶರಣು ಬೇಡು, ಆಶ್ರಯ ಸೇರು; ಅಳು; ಬಿನ್ನವಿಸು; ಅಬ್ಬರಿಸು.

—ಪೊಗು ಆಸರೆ ಬೇಡು.

ಮೊಲ ಕುಂದಿಲಿ, ಶಶ, ಒಂದು ಪ್ರಾಣಿ.

ಮೊಲೆ ಸ್ತನ, ಕುಚ, ಎದೆ.

—ಊಡು ಮೊಲೆಯುಣ್ಣಿಸು.

—ಕಟ್ಟು ರವಕೆ, ಕುಪ್ಪಸ, ಮೊಲೆಮರೆ.

ಮೊಲ್ಲೆ ಮಲ್ಲಿಗೆ ಜಾತಿಯ ಒಂದು ಹೂ.

ಮೊಲ್ಲೆಗ ದರಿದ್ರ, ಕಂಗಾಲ.

ಮೊಸರು ದಧಿ, ಹುಳಿಯಿಸಿದ ಹಾಲು.

ಮೊಸಳೆ ಮೊಣಕ, ನೆಗಳೆ, ನಕ್ರ.

ಮೊಹರ ಒಂದು ಚಿನ್ನದ ನಾಣ್ಯ; ಮುದ್ರೆ.

ಮೊಹರಂ ಅಲಾಬಿ ಹಬ್ಬ, ಬಾಬಯ್ಯನ ಹಬ್ಬ, ಅಲಾ ಹಬ್ಬ.

ಮೊಹರು ಮುದ್ರೆ; ಮುದ್ರೆಯೊತ್ತುವ ಸಾಧನ; ಒತ್ತಿದ ಮುದ್ರೆ.

ಮೊಹಸಲೆ ತಡೆ, ರಿಮಾಂಡು, ನಿರ್ಬಂಧ.

ಮೊಳ ಎರಡು ಗೇಣು; ಮೊಣಕೈಯಿಂದ ಹಸ್ತದ ತುದಿಯಷ್ಟು ದೂರ.

ಮೊಳಕೆ ಬೆದೆ; ಗಿಡದ ಮೊದಲ ಸುಳಿ, ಅಂಕುರ.

—ಒಡೆ ಚಿಗುರು, ಬೆದೆ ಬರು.

ಮೊಳಗು (ಮೊಳೆ), ಗುಡುಗು; ಉಂಟಾಗು, ಧ್ವನಿಹೊರಡು, ಶಬ್ದಮಾಡು; ಗರ್ಜಿಸು, ನುಡಿ; ವಾದ್ಯಬಾರಿಸು.

ಮೊಳೆ ಮೊಳೆಯಾಗು, ಬೆದೆಬರು; ಚಿಗುರೊಡೆ; ಧ್ವನಿ ಹುಟ್ಟು; ಅಂಕುರ, ಮೊಳಕೆ; ಕಬ್ಬಿಣದ ಕೀಲು, ಆಣಿ.

—ಹೊಮ್ಮು ಚಿಗುರೊಡೆ; ಕೆಡು, ಆಗದೆ ಹೋಗು.

ಮೊಳೆಮೊಲೆ ಮೂಡಿಬರುತ್ತಿರುವ ಮೊಲೆ.

ಮೊಳ್ಗು ನಮಸ್ಕಾರಮಾಡು, ಬಾಗು.

ಮೊಂಡ ಕುಂಟಾದ; ಬೊಡ್ಡಾದ, ಒರಟಾದ; ತುಂಡಾದ; ಚಲವಾದಿ.

ಮೋಕ ಬಿಡುವುಗೊಂಡ.

ಮೋಕು ಕತ್ತರಿಸಿದ ತುದಿ, ಬೊಡ್ಡಿ; ತುದಿ.

ಮೋಕೂಪು ಕೈದು; ರಜೆ, ಬಿಡುವು, ಸೂಟ.

ಮೋಕ್ಷ್ ಬಿಡು.

ಮೋಕ್ಷ ಮುಕ್ತಿ; ಜನನ ಮರಣದಿಂದ ಬಿಡುಗಡೆ; ಬಿಡುಗಡೆ; ಸಾವು.

ಮೋಖೂಪು (ಮುಕೂಪು).

ಮೋಘ ನಿಷ್ಫಲ, ವ್ಯರ್ಥ.

ಮೋಘೆ ಪಾದರಿ ಹೂ.

ಮೋಚ (ದ್ಭ) ಮೋಕ್ಷ (ಸಂ).

—ಕ ಮೋಕ್ಷ, ಮುಕ್ತಿ; ಬಾಳೆಹಣ್ಣು; ವೈರಾಗ್ಯಶಾಲಿ; ಬಿಡುಗಡೆ ತರುವ.

—ನ ಬಿಡುಗಡೆ, ಮುಕ್ತಿ.

ಮೋಚಿ ಸಮಗಾರ, ಮಚ್ಚಿಗಾರ.

ಮೋಚು ವೈಧವ್ಯ.

ಮೋಚೆ ಬಾಳೆ, ಹತ್ತಿಗಿಡ; ಮೆಟ್ಟು, ಕೆರಹು.

ಮೋಜು ಆಟ, ವಿನೋದ, ತಮಾಷೆ.

ಮೋಟ ಮೊಂಡ; ಬೊಡ್ಡಿ; ಕೈಯಿಲ್ಲದ; ಕಾಲಿಲ್ಲದ ಕುಂಟ; ಮರಳು.

ಮೋಟು ಮೊಂಡಾದುದು.

ಮೋಡ ಮುಗಿಲು, ಮೇಘ; ಮೋಢ (ಸಂ); ಹೆಡ್ಡ, ಗಾಂಪ.

ಮೋಡಾಮೋಡಿ ಕೈಚಳಕ; ಮಾಯಕವಿದ್ಯೆ.

ಮೋಡಿ ರೀತಿ; ವಂಚನೆ; ರೂಢಿಯ ಕೈಬರಹ; ಒಯ್ಯಾರ, ಬಿನ್ನಾಣ; ವಿಲಾಸ; ಶೈಲಿ.

ಮೋತಿ ಮುತ್ತು; ದಿನಸು; ಕಣಜ.

ಮೋತೆ ಹೊರಗಿನ ಸಿಪ್ಪೆ; ಹೊರಗಿನ ಪರೆ.

ಮೋದ ಸಂತೋಷ; ತೆಂಗು.

—ಕ ಸಂತೋಷ ಪಡಿಸುವವ; ಒಂದು ಬಗೆಯ ಸಿಹಿ ತಿಂಡಿ; ಕಡುಬು.

—ನ ಸಂತೋಷ ಕೊಡುವಿಕೆ.

ಮೋದಿಸು ಸಂತೋಷಪಡು; ಪರಿಮಳವಾಗು; ಹೊಡಸು; ಸದೆಬಡಿ.

ಮೋದು ಅಪ್ಪಳಿಸು, ಹೊಡೆ, ತಿವಿ; ಬಾವು; ಕುರು.

ಮೋನ (ದ್ಭ) ಮೌನ (ಸಂ), ಮಾತಾಡದಿರುವುದು; ಸರದ ಹಿಡಿ.

ಮೋಪು ಹೊರೆ; ಹಿಡಿತ; ನಾಟ, ಮರದ ದೊಡ್ಡ ತುಂಡುಗಳು; ಮುಂಡಿಗೆ; ರಾಶಿ.

ಮೋರಟೆ ಕಬ್ಬಿನ ಬೇರು.

ಮೋರಿ ಶ್ರುತಿವಾದ್ಯ; ಚಿಕ್ಕ ಸಂಕ; ಚರಂಡಿ.

ಮೋರು ತಲೆಯಲ್ಲಿ ಹೊರು.

ಮೋರೆ ಮುಖ.

—ಮಾಡು ಸಿಟ್ಟುಮಾಡು; ಅಂಗಲಾಚು.

ಮೋಷ ಕಳವು, ಸೂರೆ, ಲೂಟ; ಕಳ್ಳ.

ಮೋಸ ವಂಚನೆ, ಠಕ್ಕು; ತಪ್ಪು, ಅಪರಾಧ.

—ಆಗು ತಪ್ಪು, ತಪ್ಪಿ ಒಂದು ಕೆಲಸವಾಗು

ಮೋಸಬೆ ಹೊಣೆ, ಜವಾಬುದಾರಿ.

ಮೋಸೂಮು ನಿಯತ ಮಳೆಗಾಲ.

ಮೋಹ ಮೈಮರೆಯುವಿಕೆ, ಮೂರ್ಛೆ; ಅಜ್ಞಾನ; ಭ್ರಾಂತಿಗೆ ಕಾರಣ; ದುಃಖ; ಪ್ರೇಮ.

—ಇಸು ನಾಟು; ಸೇರಿಸಿಡು; ಸಂಗ್ರಹಿಸು; ಭ್ರಮಿಸು; ಪ್ರಣಯಪ್ರೇರಿತನಾಗು; ಮರುಳುಗೊಳಿಸು.

—ನ ಮೋಹಗೊಳಿಸುವ ಧರ್ಮ; ಮೂರ್ಛೆಗೊಳಿಸುವ; ಮನೋಹರತ್ವ, ಮೋಹ.

ಮೋಹನಾಂಗಿ ಸುಂದರಿ, ಚೆಲುವೆ.

ಮೋಹಪಾಶ ಬೆಡಗಿನ ಜಾಲ; ಚೆಲುವಿನ ಸೆಳೆ.

ಮೋಹರ ಗುಂಪು; ಸೈನ್ಯ.

—ಇಸು ಗುಂಪುಕೂಡಿಸು, ವ್ಯೂಹಗಟ್ಟು, ಕ್ರಮದಲ್ಲಿ ನಿಲ್ಲಿಸು.

ಮೋಹಳ ಕತ್ತಿಯ ಹಿಡಿ, ಹಿಡಿಕೆ, ಹಿಡಿಪು.

ಮೋಹಿತ ಬೆರಗಾದವ; ಮಂಕುಗೊಂಡ.

ಮೋಹು ಹೊಡೆ; ಇದಿರಾಗು; ಒಡ್ಡು; ಮುಚ್ಚಿಸು; ಎತ್ತಿಹಿಡಿ; ಇದಿರಿಸು.

ಮೋಳ (ಮಾಳ), ಬಿಲ, ಹೋರು; ಗುದ್ದು.

ಮೋಳಬೆಕ್ಕು ಒಂದು ಜಾತಿಯ ಕರಿ ಬೆಕ್ಕು, ನೀಳ ಬಾಲವುಳ್ಳ ಬೆಕ್ಕು.

ಮೋಳೆ ಮೋಳ, ಬಿಲ; ರಾಶಿ.

ಮೌಕುಲಿ ಮೊಂಡಕಾಗೆ, ಅಡವಿಕಾಗೆ.

ಮೌಕ್ತಿಕ ಮುತ್ತು.

ಮೌಢ್ಯ ಮೂಢತನ, ಹೆಡ್ಡತನ, ಅಜ್ಞಾನ; ಬಾಲ್ಯ

ಮೌನ ಮಾತಾಡದಿರುವುದು.

ಮೌನಿ ಮಾತನಾಡದವ, ಋಷಿ.

ಮೌರಜಿಕ ಮದ್ದಲೆಗಾರ.

ಮೌರಿ (ಮೋರಿ), ಒಂದು ರಂಧ್ರವಾದ್ಯ.

ಮೌರ್ವಿ ಬಿಲ್ಲಿನ ಹೆದೆ, ಬಿಲ್ಲ ಹಗ್ಗ; (ತೊಗಲ ಬೇವು).

ಮೌಲಿ (ಮೌಳಿ), ಶಿಖರ; ಕಿರೀಟ; ಶಿಖೆ; ಮುಖಂಡ, ಶ್ರೇಷ್ಠ; ಮುಲ್ಲಂಗಿ.

ಮೌಲ್ಯ ಬೆಲೆ.

ಮೌಳಿ ಮುಕುಟ, ಕಿರೀಟ; ಜುಟ್ಟು; ತಲೆ.

ಮೌಂಜಿ ಮುಂಜವೆಂಬ ಹುಲ್ಲಿಂದ ಮಾಡಿದ ಕಟಸೂತ್ರ, ಮೇಖಲೆ.

ಮೌಂಜೀಬಂಧನ ಮುಂಜಿ ಕಟ್ಟುವುದು, ಉಪನಯನ ಸಂಸ್ಕಾರ.

ಮ್ಲಾನ ಬಾಡಿದ, ಕಂದಿದ; ಮಲಿನ; ಬೇಸತ್ತ; ಕಪ್ಪು, ಕಡಪು; ವೀರ್ಯಕ್ಷಯದಿಂದ ಕ್ಷೀಣವಾದ.

—ತೆ ಬಾಡಿದ ಸ್ಥಿತಿ, ಕಾಂತಿ ತಗ್ಗುವಿಕೆ; ಬೇಸರ.

ಮ್ಲಿಷ್ಟ ಅಸ್ಪಷ್ಟ ಮಾತು, ತೊದಲು.

ಮ್ಲೇಚ್ಛ ಕಿರಾತ; ಶಬರ, ನೀಚ ಜಾತಿ.

—ದೇಶ ಸದಾಚಾರವಿಲ್ಲದ ದೇಶ.

ಮ್ಲೋಚ್ಛ ಮುಖ; ಕೆಂಪು ಮೋರೆ.

ಮ್ಲೇಂಛ (ಮ್ಲೇಚ್ಛ)

# ಯ

**ಯಕೃತ್** ಹೊಟ್ಟೆಯ ಬಲಭಾಗದಲ್ಲಿರುವ ಒಂದು ಕೋಶ, ಕಾಳಿಜ, ಪಿತ್ತಕೋಶ.

**ಯಕ್ಕು** ಹೊಡೆ; ಚೆಲ್ಲಾಪಿಲ್ಲಿ ಮಾಡು, ನಜ್ಜು ಗುಜ್ಜು ಮಾಡು.

**ಯಕ್ಷ** ದೇವತೆಗಳ ಒಂದು ಬಳಗ.

—**ರಾಜ** ಕುಬೇರ.

**ಯಕ್ಷಕರ್ದಮ** ಒಂದು ಬಗೆ ಸುಗಂಧಲೇಪನ

**ಯಕ್ಷಗಾನ** ಒಂದು ಹಾಡಿನ ಪದ್ಧತಿ, ಅದಕ್ಕೇನೆ ಹೊಂದಿದ ಒಂದು ನೃತ್ಯ ಪದ್ಧತಿ, ಬಯಲಾಟದ ಪದ್ಧತಿ.

**ಯಕ್ಷಿ**(ಯಕ್ಷಿಣಿ),ಜಕ್ಕಿ, ಒಂದು ಸ್ತ್ರೀದೇವತೆ; ಕುಬೇರನ ಮಡದಿ; ಜಾದು, ಇಂದ್ರಜಾಲ.

**ಯಕ್ಷ್ಮ** ಕ್ಷಯರೋಗ, ಶ್ವಾಸಕೋಶದ ಕ್ಷಯ.

**ಯಜನ** ಯಜ್ಞ ಮಾಡುವಿಕೆ, ಯಾಗ.

**ಯಜಮಾನ** ಒಡೆಯ, ನಾಯಕ; ಯಜ್ಞ ಮಾಡುವವ.

—**ಇಕೆ** ಒಡೆತನ, ನಾಯಕತ್ವ.

**ಯಜಿಸು** ಯಜ್ಞಮಾಡು, ಯಾಗಮಾಡು.

**ಯಜುರ್ವೇದ** ನಾಲ್ಕು ವೇದಗಳಲ್ಲಿ ಎರಡನೆಯದು.

**ಯಜ್ಞ** ಯಾಗ, ದೇವತೆಗಳ ಪ್ರೀತ್ಯರ್ಥವಾಗಿ ಆರ್ಯರು ಮಾಡುತ್ತಿದ್ದ ಒಂದು ಕರ್ಮ; ಮೈಥುನ.

—**ಪುರುಷ** ಅಗ್ನಿ; ವಿಷ್ಣು; ಪರಮಾತ್ಮ.

**ಯಜ್ಞಾರಿ** ಸ್ಕಂದ; ಷಣ್ಮುಖ.

**ಯಜ್ಞಾಂಗ** ಯಾಗದ ಸಾಧನ; ಅತ್ತಿಮರ; ಖದಿರೆ; ಸೋಮಲತೆ.

**ಯಜ್ಞೇಶ್ವರ** ಅಗ್ನಿ; ವಿಷ್ಣು.

**ಯಜ್ಞೋಪವೀತ** ಜನಿವಾರ.

**ಯತಿ** ಸನ್ಯಾಸಿ, ಮುನಿ; ಪದ್ಯದ ಚರಣದಲ್ಲಿ (ಛಂದಸ್ಸಿನಲ್ಲಿ) ಉಸಿರಿನ ವಿಶ್ರಾಂತಿ ಸ್ಥಾನ, ನಿಲುಗಡೆ.

—**ಈಶ** ಶ್ರೇಷ್ಠಸ್ಥಾನ; ಸಂಯಮ; ಮುನಿ.

—**ಭಂಗ** ವಿರಾಮವಿಲ್ಲದಿರುವಿಕೆ; ನಿಲುಗಡೆ ತಪ್ಪಿದುದು (ಛಂದಸ್ಸಿನಲ್ಲಿ).

**ಯತ್ಕಿಂಚಿತ್** ಸ್ವಲ್ಪವಾದರೂ, ತುಸು.

**ಯತ್ನ** ಪ್ರಯತ್ನ, ಜತನ; ಸಾಧಿಸುವುದು; ಹಟಹಿಡಿದು ಮಾಡುವುದು.

**ಯಥಾ** ಹೇಗೆ; ಯಾವ ಪ್ರಕಾರದಿಂದ.

—**ಕ್ರಮ** ಕ್ರಮದಂತೆ, ಸಮವಾಗಿ.

—**ತಥಾ** ತಕ್ಕಂತೆ; ಕ್ರಮವಾಗಿ.

—**ಪೂರ್ವ** ಮೊದಲಿನಂತೆ; ಪೂರ್ವದಂತೆ.

**ಯಥಾಯೋಗ್ಯ** ಸಮನಾಗಿ; ತಕ್ಕ ರೀತಿ.

**ಯಥಾರ್ಥ** ಸತ್ಯದಂತೆ; ಸತ್ಯ; ಸಹಜ.

—**ಜ್ಞ** ಸತ್ಯವಿದ, ನಿಜವನ್ನು ಬಲ್ಲವ.

**ಯಥಾಶಕ್ತಿ** ಯೋಗ್ಯತೆಗೆ (ಶಕ್ತಿಗೆ) ತಕ್ಕಂತೆ.

**ಯಥಾಸ್ಥಿತಿ** ಮೊದಲಿದ್ದ ಸ್ಥಿತಿ; ಮೊದಲಿನಂತೆ; ಕಟ್ಟಲೆಯಂತೆ.

**ಯಥೇಚ್ಛ** ಇಚ್ಛಾನುಸಾರ; ತುಂಬ, ಸಾಲುವಷ್ಟು.

**ಯಥೇಷ್ಟ** ಇಷ್ಟಾನುಸಾರ; ಧಾರಾಳ; ಬೇಕಷ್ಟು.

**ಯಥೋಚಿತ** ಮರ್ಯಾದೆ ಮೀರದೆ, ಉಚಿತ, ತಕ್ಕ ರೀತಿಯಲ್ಲಿ.

**ಯದಾ** ಎಂದು, ಯಾವಾಗ; ಅಂದಿನಿಂದ; ಹಾಗೆ.

**ಯದಿ** ಹಾಗಾದರೆ, ರೆ.

**ಯದು** ಚಂದ್ರವಂಶದ ಯಯಾತಿ ರಾಜನ ಹಿರಿಯ ಮಗ; ಒಂದು ಹೆಸರಾದ ಕ್ಷತ್ರಿಯ ವಂಶ.

—**ನಾಥ** ಯದುಕುಲದ ಒಡೆಯ, ಕೃಷ್ಣ.

ಯದುಗಿರಿ ಮೇಲುಕೋಟೆ ಬೆಟ್ಟ.

ಯದೃಚ್ಛೆ ಸ್ವಾತಂತ್ರ್ಯ, ಸ್ವಾಧೀನತೆ; ಅಕಸ್ಮಾತ್, ಸ್ವೇಚ್ಛೆಯಿಂದ.

ಯದ್ವಾ ಅಥವಾ; ಹಾಗೋ.

ಯದ್ವಾತದ್ವಾ ಅವ್ಯವಸ್ಥಿತವಾಗಿ; ಹೇಗೆ ಹೇಗೋ, ಸಿಕ್ಕಾಪಟ್ಟೆ.

ಯಭನ ಭೋಗ, ಸುರತ.

ಯಮ ಇಂದ್ರಿಯನಿಗ್ರಹ; ಈತನು ಧರ್ಮಾಧಿಕಾರಿಯಾಗಿದ್ದು ಪ್ರಾಣಿಗಳ ಪಾಪಕ್ಕೆ ತಕ್ಕ ದಂಡನೆ ಕೊಡುವನೆಂದು ನಂಬಿಕೆ. ದಕ್ಷಿಣ ದಿಕ್ಕಿಗೆ ಇವನು ನಾಯಕ. ಇವನ ರಾಜಧಾನಿ ಶೈಮಿನಿ.

—ತನಯ ಯುಧಿಷ್ಠಿರ.

ಯಮಕ ತಡೆ; ಸಂಯಮ; ಎರಡು ಮಡಿ; ಒಂದೇ ಧ್ವನಿಕೊಟ್ಟರೂ ಭಿನ್ನಾರ್ಥಗಳನ್ನು ಕೊಡುವ ಪದ; ಮುರಕು, ವಿಲಾಸ.

ಯಮಧರ್ಮ ಯಮ.

ಯಮನಿಯಮ ಯೋಗದ ಕೆಲವು ಬಗೆಗಳು; ಇಂದ್ರಿಯ ನಿಗ್ರಹ: ವ್ರತಪೂಜಾದಿಗಳು.

ಯಮಯಾತನೆ ಬಲು ಹಿಂಸೆ; ಅತಿ ವ್ಯಥೆ.

ಯಮಲ (ಯಮಳ), ಅವಳಿ, ಜತೆ, ಜೊಂಡು.

ಯಮಲಿ ಅವಳಿ; ಜವಳಿ; ಎರಡು ತುಂಡುಗಳುಳ್ಳ.ಒಂದು ಉಡುಗೆ.

ಯಮಳರ್ ಜತೆಯಾಗಿ ಹುಟ್ಟಿದವರು, ಅವಳಿಜವಳಿಗಳು, ನಕುಲ ಸಹದೇವರು.

ಯಮಿ ತಪಸ್ವಿ; ಇಂದ್ರಿಯ ನಿಗ್ರಹವುಳ್ಳವ; ಯಮನ ಸೋದರಿ; ಯಮುನಾ ನದಿ.

ಯಮುನಾ (ಯಮುನೆ), ಜಗುನೆ(ದ್ಭ), ಗಂಗೆಯನ್ನು ಕೂಡುವ ಒಂದು ಉಪನದಿ.

ಯಮೋಪಮ ಯಮನಿಗೆ ಸಮನಾದವ; ಕರುಣೆಯಿಲ್ಲದ.

ಯಯಾತಿ ಚಂದ್ರವಂಶದ ನಹುಷನ ಮಗ, ದೇವಯಾನಿ, ಶರ್ಮಿಷ್ಠೆಯರು ಇವನ ಮಡದಿಯರು. ಅವನಿಗೆ ಮುಪ್ಪು ಬಂದಾಗ, ಇವನ ಮಗ ಪುರೂರವನು ತನ್ನ ತಾರುಣ್ಯವನ್ನು ಇವನಿಗೆ ಒಪ್ಪಿಸಲು ಬಂದನು. ಆಗ ಅವನ ಸಂತತಿಗೆ ಸಿಂಹಾಸನ ಒಪ್ಪಿಸಿ ಯಯಾತಿಯು ತಪಕ್ಕೆ ಹೋದನು.

ಯಯು ಹೋಗುವಿಕೆ; ಸಂಚಲನ; ಕುದುರೆ.

ಯರಣ ಕರುವಿನ ಸಗಣಿ.

ಯವ (ಯವಕ), ಯವೆ, ಜವೆಗೋಧಿ.

ಯವಕ್ಷಾರ ಪೆಟ್ಲುಪ್ಪು; ಸುಟ್ಟ ಹುಲ್ಲಿನಿಂದ ಗಳಿಸುವ ಕ್ಷಾರದ ಪುಡಿ.

ಯವನ ಒಂದು ದೇಶ; ಅದರ ಜನ; ಗ್ರೀಸು ದೇಶ; ಗ್ರೀಕ; ತುರುಕ, ಮುಸಲ್ಮಾನ.

—ಕ ಗ್ರೀಕರವ; ತುರುಕರವ.

—ಪ್ರಿಯ ಕಾಳುಮೆಣಸು, ಒಳ್ಳೆಮೆಣಸು.

ಯವನಾಲ ಜೋಳ.

ಯವನಿಕೆ (ಜವನಿಕೆ), ತೆರೆ, ಬುರುಕೆ, ಪಡದೆ.

ಯವಲ ಬಿದಿರಕ್ಕಿ.

ಯಶಸ್ (ಯಶ), ಕೀರ್ತಿ, ಖ್ಯಾತಿ.

ಯಶಸ್ತ್ರೀ ಕೀರ್ತಿಯೆಂಬ ಹೆಂಗುಸು.

ಯಶೋದೆ ನಂದಗೋಪನೆಂಬ ಗೊಲ್ಲನ ಹೆಂಡತಿ. ಇವಳು ಕೃಷ್ಣನ ಸಾಕುತಾಯಿ.

ಯಶೋವಂತ ಕೀರ್ತಿವಂತ.

ಯಷ್ಟಿ (ಯಷ್ಟಿಕೆ), ದಂಡ, ಕೋಲು; ಸ್ತಂಭ; ಮುತ್ತು ಸುರಿಯುವ ಹಗ್ಗ, ಪೋಣಿಸುವ ದಾರ.

ಯಂತ್ರ ಇಂದ್ರಿಯ ಸಂಯಮ; ದೇವತೆಯ ಆಸನ; ತಾಯಿತು, ರಕ್ಷೆ; ಒಂದು ಪಾತ್ರೆ; ಶ್ರಮವುಳಿಸುವ ಯಾವುದೇ ಸಾಧನ.

—ತಂತ್ರ ಉಪಾಯ, ಸಾಧನೆ.

ಯಂತ್ರಿಕ ಯಂತ್ರಕ್ಕೆಸಂಬಂಧಿಸಿದ; ಯಂತ್ರ ನಡೆಸುವವ.

ಯಂತ್ರಿಸು ತಡೆ, ಕಟ್ಟು, ನಿರ್ಬಂಧಿಸು.

ಯಾ ಇಲ್ಲವೆ, ಅಥವಾ; ಯಾವದು.
ಯಾಕೆ ಏಕೆ; ಏನು ಕಾರಣದಿಂದ.
ಯಾಗ ಯಜ್ಞ; ಮಂತ್ರಸಹಿತವಾಗಿ ಮಾಡುವ ಒಂದು ವಿಧಿ.
ಯಾಗಪ್ಪ ಚಾಣ, ಕಲ್ಲು ಒಡೆಯುವ ಚಾಣ.
ಯಾಚಕ ಬೇಡುವವ, ಭಿಕ್ಷುಕ, ತಿರುಕ.
ಯಾಚನೆ ಬೇಡಿಕೆ, ಭಿಕ್ಷೆ, ತಿರಿವಿರಿ.
ಯಾಚಿಸು ಬೇಡು, ವಿನಯದಿಂದ ಕೇಳು; ತಿರಿ.
ಯಾಚ್ಞೆ (ಯಾಚನೆ), ಬೇಡುವಿಕೆ.
ಯಾಜಕ ಯಾಜಿ, ಯಜ್ಞಮಾಡಿಸುವ ಪುರೋಹಿತ.
ಯಾಜನ ಯಜ್ಞ ಮಾಡಿಸುವಿಕೆ.
ಯಾಜ್ಞ ಯಜ್ಞಕ್ಕೆ ಸಂಬಂಧಿಸಿದ.
ಯಾಜ್ಞವಲ್ಕ್ಯ ಈತನು ಸ್ಮೃತಿಕಾರರಲ್ಲೊಬ್ಬ. ಅವನ ಕಾಲವು ಮನುವಿಗಿಂತ ಮೊದಲೆಂದು ಹೇಳುತ್ತಾರೆ. ಆತನು ಮಿಥಿಲೆಯ ಜನಕನ ಆಸ್ಥಾನದಲ್ಲಿದ್ದಂತೆಯೂ ಕಥೆಯಿದೆ. ಇವನಿಗೆ ಮೈತ್ರೇಯಿ ಕಾತ್ಯಾಯಿನಿಯರೆಂಬ ಇಬ್ಬರು ಮಡದಿಯರು.
ಯಾಜ್ಞಸೇನಿ ಧೃಷ್ಟದ್ಯುಮ್ನ; ದ್ರೌಪದಿ.
ಯಾಜ್ಞಿಕ ಯಾಗ ಸಂಬಂಧವಾದ; ಯಾಗ ಕರ್ತೃ.
ಯಾತ (ಏತ), ನೀರೆತ್ತುವ ಒಂದು ಸಾಧನ, ದೊಟ್ಟೆ; ಚಲನೆ; ಅಂಕುಶದಿಂದ ನಡೆಸುವಿಕೆ; ಪದಾತಿ.
ಯಾತಕೆ ಯಾತಕ್ಕೆ, ಏಕೆ; ಏನು ಕಾರಣ.
ಯಾತನ (ಯಾತನೆ), ನೋವು, ಪೀಡೆ, ವೇದನೆ; ದಂಡನೆ.
ಯಾತಯಾಮ ಹಾಳಾದ; ದಣಿದ, ಬಳಲಿದ.
ಯಾತರ ಯಾವ, ಏತರ.
ಯಾತ್ರು ಹಾದಿಕಾರ; ಸಂಚಾರಿ; ನಾದಿನಿ; ರಥಿಕ.

ಯಾತ್ರಿ (ಯಾತ್ರಿಕ), ಪುಣ್ಯಸ್ಥಳಗಳಿಗೆ ಹೋಗುವ ಪಯಣಿಗ.
ಯಾತ್ರೆ ಪಯಣ, ಸಂಚಾರ, ಯಾನ; ಕ್ಷೇತ್ರ ಗಮನ; ಉತ್ಸವ, ಜಾತ್ರೆ (ದ್ಭ).
—ಉತ್ಸವ ಹಬ್ಬ, ಜಾತ್ರೆ, ಉತ್ಸವ; ಕ್ಲ್ಪಪ್ತ ಕಾಲಕ್ಕಾಗುವ ಹಬ್ಬ.
ಯಾದವ ಯದುಕುಲದವ; ಕೃಷ್ಣ.
ಯಾದಾಸ್ತು ಪಟ್ಟಿ, ವಿವರಗಳುಳ್ಳ ಬರಹ, ಸರಕುಗಳ ಪಟ್ಟಿ.
ಯಾದಿ ಯಾದಾಸ್ತು, ಪಟ್ಟಿ.
ಯಾದೃಚ್ಛಿಕ ಸ್ವೇಚ್ಛೆಯಿಂದ ಬಂದ.
ಯಾನ ಗಮನ, ಪ್ರಯಾಣ, ಜಲಪ್ರಯಾಣ; ಸಂಚಾರ.
ಯಾಪನ ಕಾಲಹರಣ, ಕಳೆಯುವುದು; ಹೊರೆಯುವುದು.
ಯಾಪ್ಯ ವ್ಯರ್ಥ; ನೀಚ; ತಿರಸ್ಕೃತ.
ಯಾಭ ರತಿ, ಸುರತ, ಮೈಥುನ.
ಯಾಮ ಜಾವ (ದ್ಭ), ಪ್ರಹರ, 7½ ಗಳಿಗೆಯ ಕಾಲ; ಚಲನೆ, ಮೈಥುನ.
ಯಾಮಿ ಯಾಮಿನೀ, ರಾತ್ರಿ, ಇರುಳು.
—ಕ ಪಹರಿ; ರಾತ್ರಿ ಪಹರಿ, ಕಾವಲು.
ಯಾಮೀರ ಚಂದ್ರ.
ಯಾಮುನ ಯಮುನೆಗೆ ಸಂಬಂಧಿಸಿದ; ವಿಶಿಷ್ಟಾದ್ವೈತ ಸಂಪ್ರದಾಯದ ಒಬ್ಬ ಹೆಸರಾದ ಆಚಾರ್ಯ, ರಾಮಾನುಜರ ಗುರು.
ಯಾಯಿ ಚಲಿಸುವವ, ಹೋಗುವವ, ನಡೆವವ.
ಯಾರ್ (ಯಾರು), ಯಾವಾತ, ಯಾವ.
ಯಾಲಕ್ಕಿ (ಏಲಕ್ಕಿ); ಘಟ್ಟದ ಒಂದು ಗಿಡದ ಬೇರಿನಲ್ಲಾಗುವ ಕಾಯಿ, ಒಂದು ಪರಿಮಳ ದ್ರವ್ಯ.
ಯಾವ ಏತರ; ಯವೆಗೋಧಿಯ; ಅರಗು.
ಯಾವಕ ಅರಗು, ಅಲತಿಗೆ; ಜವೆಗೋಧಿಯ ಗಂಜಿ; ಅಲಸಂಡೆ.

**ಯಾವಜ್ಜೀವ** ಜೀವಮಾನವೆಲ್ಲ, ಬದುಕಿರುವಷ್ಟು ಕಾಲ, ಆಜೀವಪರ್ಯಂತ.
**ಯಾವತ್ಕಾಲ** ಎಲ್ಲಾ ಸಮಯ, ಎಂದೆಂದು.
**ಯಾವತ್ತು** (ಯಾವತ್), ಎಲ್ಲ, ಸಕಲ; ಪೂರ್ಣ, ಆದಷ್ಟು.
**ಯಾಂತ್ರಿಕ** ಯಂತ್ರಸಂಬಂಧವಾದ; ಯಂತ್ರ ನಡೆಸುವವ.
**ಯುಕುತಿ** (ಧ್ಭ). ಯುಕ್ತಿ (ಸಂ).
**ಯುಕ್ತ** (ಯುಕುತ), ಸೇರಿದ; ತಕ್ಕ; ಹೊಂದಿದ, ಕೂಡಿದ; ಯೋಗ್ಯ; ಉಚಿತ; ಸಿದ್ಧ.
—**ಅಯುಕ್ತ** ಯೋಗ್ಯ ಮತ್ತು ಅಯೋಗ್ಯ, ಉಚಿತ ಅನುಚಿತ.
**ಯುಕ್ತಿ** ನ್ಯಾಯ; ಉಪಾಯ; ಸಾಧನೆ; ತಕ್ಕುದು, ತಂತ್ರ, ಹೊಂಚು.
—**ಇಸು** ಯೋಚಿಸು; ತಕ್ಕ ಹಾದಿಯಲ್ಲಿ ಉಪಾಯ ಹೂಡು; ಪ್ರವರ್ತಿಸು.
**ಯುಗ** ಜತೆ; ಜೋಡು; ಕೃತ, ತ್ರೇತ, ದ್ವಾಪರ, ಕಲಿ ಮೊದಲಾದ ದೀರ್ಘ ಕಾಲ ಮಾನಗಳು; ಜೀವಕೋಟಿಯ ಬೇರೆ ಬೇರೆ ಬೆಳವಳಿಗೆಗಳನ್ನು ತಿಳಿಸುವ ಕಾಲಮಾನ; ನಾಲ್ಕು ಮೊಳ ಉದ್ದ; ಮಾರು; ನೊಗ; ದಂಪತಿ.
—**ಪದ್** ಒಮ್ಮೆಗೇ, ಒಂದೇ ಸಮಯ; ಜತೆಯಲ್ಲೇ.
**ಯುಗಲ** ಜತೆ, ಜೋಡಿ.
**ಯುಗಾದಿ**(ಉಗಾದಿ), ವರ್ಷದ ಮೊದಲದಿನ.
**ಯುಗಾಂತ** ಒಂದುಯುಗದ ಕೊನೆ; ಪ್ರಲಯ
**ಯುಗ್ಮ** ಜುಗುಮ, ಜತೆ; ಜೋಡಿ.
**ಯುಗ್ಯ** ನೊಗಬಿಗಿದ; ಗಾಡಿ; ಹೂಡಿದ ಎತ್ತು; ಬಂಡಿ, ಶಕಟ.
**ಯುತ** ಸೇರಿದ, ಉಳ್ಳ, ಕೂಡಿದ.
**ಯುತಕ** ಜತೆ; ಒಂದು ಬಗೆ ಉಡುಗೆ.
**ಯುತಿ** ಜೋಡಣೆ, ಸೇರುವೆ, ಸಂದು; ಕೂಡಲ.
**ಯುಧಾಮನ್ಯು** ಈತನು ಭಾರತಯುದ್ಧದಲ್ಲಿ ಭಾಗಿಯಾದ ಒಬ್ಬ ಪಾಂಚಾಲ.
**ಯುಧಿಷ್ಠಿರ** ಯುದ್ಧದಲ್ಲಿ ಸ್ಥಿರವಾಗಿರುವವ. ಧರ್ಮರಾಯ. ಪಾಂಡು ಕುಂತಿಯರ ಮಗ. ಈತನ ಸೋದರರಿಗೂ ಕೌರವರಿಗೂ ನಡೆದ ಕಾಳಗವೇ ಮಹಾಭಾರತ.
**ಯುದ್ಧ** ಜುದ್ಧ (ಧ್ಭ), ಕದನ, ಕಾಳಗ.
—**ಭೂಮಿ** ರಣರಂಗ, ಕಾಳಗ ಭೂಮಿ, ಕಳ.
**ಯುಯುತ್ಸು** ಧೃತರಾಷ್ಟ್ರನ ವೇಶ್ಯೆಯಲ್ಲಿ ಹುಟ್ಟಿದ ಒಬ್ಬ ಮಗ.
**ಯುಯುಧಾನ** ಸಾತ್ಯಕಿ ಎಂಬ ವೀರ.
**ಯುವ** ಯುವಾನ, ತರುಣ, ಎಳೆಯ; ಯೋಗ್ಯ; 9ನೆಯ ಸಂವತ್ಸರ.
**ಯುವನಾಶ್ವ** (ಯೌವನಾಶ್ವ), ಸೂರ್ಯವಂಶದ ಒಬ್ಬ ಅರಸು.
**ಯುವರಾಜ** ಪಟ್ಟದ ರಾಜಕುಮಾರ; ನಾಳೆ ಅರಸಾಗುವ ರಾಜಪುತ್ರ.
**ಯುಷ್ಮದ್** ತಮ್ಮ, ನಿಮ್ಮ.
**ಯೂಥ** ಸಮೂಹ, ಗುಂಪು; ಸೈನ್ಯ, ಒಂದೇ ಜಾತಿಯ ವಸ್ತುಸಮೂಹ.
**ಯೂಥಿಕೆ** ಒಂದು ಬಗೆ ಮಲ್ಲಿಗೆ, ಸೇವಂತಿಗೆ.
**ಯೂಪ** ಯೂಪಸ್ತಂಭ; ಯಾಗದಲ್ಲಿ ಪಶುವನ್ನು ಕಟ್ಟುವ ಕಂಭ, ಜಯಸ್ತಂಭ.
**ಯೂಷ** ಸಾರು.
**ಯೋಕ್ತೃ** ಗಾಡಿಯವ; ಉಳುವವ.
**ಯೋಗ** ಸೇರಿಕೆ; ಉಪಾಯ; ಧ್ಯಾನ; ಮನಸ್ಸನ್ನು ತಡೆದು ಪರಮಾತ್ಮನಲ್ಲಿ ನಿಲ್ಲಿಸುವ ಬಗೆ; ವಿಷ್ಕಂಭ; ಲಭ್ಯ, ದೈವ, ಅದೃಷ್ಟ; ತತ್ವ; ಉತ್ಸಾಹ; ಸದ್ಗುಣ; ಶರೀರ; ಸೋಗು; ವೇಷ, ಸಂಬಂಧ.
—**ಕ್ಷೇಮ** ಲಾಭದೊಡನೆ ಕೂಡಿದ; ಸುಖದುಃಖ ವಿಚಾರ; ಆರೈಕೆ.

—ನಿದ್ರೆ ಪ್ರಲಯಕಾಲದಲ್ಲಿ ಪರಮಾತ್ಮನು ಸ್ವೇಚ್ಛೆಯಿಂದ ಹೊಂದುವ ನಿದ್ರೆ.

ಯೋಗಾಸನ ಹಠಯೋಗಕ್ಕೆ ಸಂಬಂಧಿಸಿದ ಕೆಲವೊಂದು ವ್ಯಾಯಾಮ ಸಾಧನೆಗಳು; ಯೋಗಕ್ಕೆ ಕುಳಿತಿರುವ ಬಗೆ.

ಯೋಗಿ ಸುಖದುಃಖಗಳನ್ನು ಸಮಾನವಾಗಿ ತಿಳಿಯುವವ; ತಪಸ್ವಿ; ಜೋಗಿ (ದ್ಭ); ಯೋಗಶಕ್ತಿ ಸಾಧಿಸಿದವ.

ಯೋಗಿನಿ (ಯೋಗಿಣಿ), ಯೋಗಾಭ್ಯಾಸಿ.

ಯೋಗೀಂದ್ರು ಯತೀಂದ್ರ, ಮುನಿಶ್ರೇಷ್ಠ.

ಯೋಗ್ಯ ತಕ್ಕ; ಅನುಕೂಲವಾದ; ಹಿತವಾದ; ಹೊಂದತಕ್ಕ.

ಯೋಚನ (ಯೋಚನೆ), ಚಿಂತನೆ, ಆಲೋಚನೆ, ಒಂದೇ ವಿಷಯವಾದ ಧ್ಯಾನ; ವ್ಯಥೆ.

ಯೋಚಿಸು ಚಿಂತಿಸು, ವ್ಯಥಿಸು; ಒಂದು ವಿಷಯದ ಚಿಂತನೆಮಾಡು.

ಯೋಜನ ಸೇರಿಕೆ; ಎಂಟು ಮೈಲು ದೂರ; ಯೋಚನೆ, ಹಂಚಿಕೆ, ಕಾರ್ಯಕ್ಕೆ ಬೇಕಾದ ಆಲೋಚನೆ.

ಯೋಜನಗಂಧಿ ವ್ಯಾಸನ ತಾಯಿ ಸತ್ಯವತಿ; ಶಂತನು ದೊರೆಯ ಹೆಂಡತಿ ಸತ್ಯವತಿ.

ಯೋಜಿಸು ಸೇರಿಸು, ಕೂಡಿಸು; ಹಂಚಿಕೆ ಮಾಡು; ಸಮ್ಮತಿಸು, ಅನುಮತಿಸು.

ಯೋತ್ರ (ಯೋಕ್ತ್ರ), ಕಸೆ; ಹಗ್ಗ.

ಯೋಧ(ಯೋಧಕ,ಯೋದ್ಧ),ಜೋದ(ದ್ಭ), ಕಾದಾಳು, ವೀರ, ಭಟ.

ಯೋಧನ ಕದನ, ಕೊಳುಗುಳ, ಕಾಳಗ.

ಯೋನಿ ರತ್ನಾದಿಗಳು ಹುಟ್ಟುವ ಸ್ಥಾನ, ಗನಿ; ಕಾರಣ; ಸ್ತ್ರೀಯ ಜನನೇಂದ್ರಿಯ; ಎರಡು ಬೆಟ್ಟಗಳು ಕೂಡುವ ಸಂದು.

ಯೌಕ್ತಿಕ ನರ್ಮಸಚಿವ, ಆಪ್ತ ಮಂತ್ರಿ; ಯುಕ್ತಿಯಿಂದ ಕೂಡಿದುದು.

ಯೌತಕ ವಿವಾಹಕಾಲದಲ್ಲಿ ದೊರೆತ ದ್ರವ್ಯ, ಶುಲ್ಕ, ಬಳುವಳಿ.

ಯೌವತ ಸ್ತ್ರೀ ಸಮುದಾಯ.

ಯೌವನ ಪ್ರಾಯ, ಹರೆಯ; ಹದಿನಾರು ವರ್ಷಕ್ಕೆ ಮೀರಿದ ಪ್ರಾಯ.

—ಸ್ಥ ಹರೆಯ.

ಯೌವನಾಶ್ವ ಮಾಂಧಾತೃ.

ಯೌವನಿ ಜವ್ವನೆ, ಪ್ರಾಯಭರಿತ ಕನ್ಯೆ.

ಯೌವನಿಕ (ಯೌವನಿಗ), ಜವ್ವನಿಗ (ದ್ಭ), ಪ್ರಾಯಸ್ಥ.

# ರ

ರಕಮು (ರಖಮು), ಮೊತ್ತ, ಹಣದ ಮೊತ್ತ; ಹಣ; ದೊಡ್ಡ ಸಂಖ್ಯೆ; ಬಗೆ.

—ವಾರು ದೊಡ್ಡ ಸಂಖ್ಯೆಯಲ್ಲಿ, ದೊಡ್ಡ ಪ್ರಮಾಣದಲ್ಲಿ; ಗುಲಗುಂಜಿ.

ರಕುತ (ದ್ಭ) ರಕ್ತ (ಸಂ), ನೆತ್ತರು; ಕೆಂಬಣ್ಣ; ಆಸಕ್ತ.

ರಕ್ಕಸ (ದ್ಭ) ರಾಕ್ಷಸ (ಸಂ), ಅಸುರ.

ರಕ್ಕಸಂಕಲೆ (ದ್ಭ) ರಕ್ಷಾಶೃಂಖಲಾ (ಸಂ); ತಾಯಿತು, ಮಂತ್ರಿಸಿದ ತಾಳಿ.

ರಕ್ಕಸಿ (ದ್ಭ) ರಾಕ್ಷಸಿ (ಸಂ).

ರಕ್ಕೆ(ದ್ಭ) ರಕ್ಷಾ(ಸಂ), ಭೂತ ಪಿಶಾಚಿಗಳಿಂದ ಹಾನಿಯಾಗದಂತೆ ಕಟ್ಟುವ ತಾಳಿ, ತಾಯಿತ.

ರಕ್ತ ನೆತ್ತರು; ಕೆಂಪು; ಕುಂಕುಮ; ಕೇಸರ; ಬಣ್ಣಗೊಂಡ; ಆಸಕ್ತ.

—ಕ ಕೆಂಪಾದುದು.

ರಕ್ತಕಾಸ ಉಸಿರಿನೊಂದಿಗೆ ರಕ್ತಹೋಗುವ ಒಂದು ಬೇನೆ.

ರಕ್ತಚಂದನ ಕೆಂಪು ಚಂದನ.

ರಕ್ತಪ ನೆತ್ತರು ಕುಡಿಯುವವ, ರಾಕ್ಷಸ.

ರಕ್ತಪಾಯಿ ರಕ್ತಪ; ನೆತ್ತರು ಹೀರುವವ, ರಾಕ್ಷಸ; ತಿಗಣೆ.

ರಕ್ತಬಾಳ (ರಕ್ತಬೋಳ, ರಕ್ತಪಾಳ), ರಸಗಂಧ, ಒಂದು ಔಷಧ.

ರಕ್ತಭೇದಿ ಆಮಶಂಕೆ; ಭೇದಿಯಲ್ಲಿ ರಕ್ತ ಹೋಗುವ ಬೇನೆ, ಆಮಶೌಚ.

ರಕ್ತಮಂಡಲ ಒಂದು ವಿಷದ ಹಾವು.

ರಕ್ತಮೇಹ ಮೇಹ ರೋಗದ ಒಂದು ವಿಧ; ಜನನೇಂದ್ರಿಯ ರೋಗ, ಗರ್ಮಿ.

ರಕ್ತಾಕ್ಷ ಕೆಂಗಣ್ಣ; ಕೋಣ.

ರಕ್ತಾಕ್ಷಿ 58ನೆಯ ಸಂವತ್ಸರ; ಕೋಣ.

ರಕ್ತಿ ಆಸಕ್ತಿ; ಅನುರಾಗ; ಚೆಲುವು, ಸೊಗಸು.

ರಕ್ಷ ಪಾಲಕ; ಕಾವಲಿನವ.

ರಕ್ಷಣೆ ಕಾವಲು, ಪಾಲಿಸುವಿಕೆ.

ರಕ್ಷಾಪತ್ರ ಪುಸ್ತಕದ ದಟ್ಟಿ.

ರಕ್ಷಾಮಣಿ ತಾಯಿತು, ರಕ್ಷೆ.

ರಕ್ಷಿಸು ಕಾಯು; ಪಾಲಿಸು, ಸಾಕು, ಪೊರೆ.

ರಕ್ಷೆ ರಕ್ಕೆ (ದ್ಭ), ಕಾವಲು; ಪಾಲನೆ; ಭೂತ ಪ್ರೇತಗಳ ಬಾಧೆ ನಿವಾರಿಸಲು ಕಟ್ಟಿಕೊಳ್ಳುವ ಮಂತ್ರಿಸಿದ ವಸ್ತು, ತಾಯಿತು.

ರಗಡಿ ಚಿಂದಿ ವಸ್ತ್ರ; ಹರಕು ಅರಿವೆ.

ರಗಡು ತುಂಬ, ಧಾರಾಳ, ರಾಶಿ, ವಿಪುಲ.

ರಗಳೆ ಒಂದು ಪದ್ಯಜಾತಿ; ಒಣಹರಟೆ, ಬರಡು ಮಾತು; ತೊಂದರೆ; ಕೊನೆಯಿಲ್ಲದಂತಿರುವ ಒಂದು ಪದ್ಯಜಾತಿ.

ರಘುಟಾ ರಗಳೆ, ಒಂದು ಪದ್ಯ ಜಾತಿ.

ರಘು ಸೂರ್ಯವಂಶದ ದಿಲೀಪನ ಮಗ, ದಶರಥನ ಅಜ್ಜ.

ರಘುನಂದನ ರಘುವಂಶದವರ ಹರ್ಷಕಾರಣ ಎನಿಸಿದ ರಾಮ.

ರಚನ (ರಚನೆ), ಮಾಡುವಿಕೆ, ಸಿದ್ಧಮಾಡುವಿಕೆ; ನಿರ್ಮಾಣ; ಅಲಂಕಾರ; ಕವನ.

ರಚಿಸು ಮಾಡು, ನಿರ್ಮಿಸು; ಕಟ್ಟಿಸು.

ರಚ್ಚೆ ರಟ್ಟೆ; ಬಾಯಿಗೆ ಬಂದಂತೆ ಹರಟುವಿಕೆ, ಅರಚುವಿಕೆ; ರಹಸ್ಯಭೇದನ; ಬುರುಡೆ.

ರಜ (ರಜಸ್), ದೂಳು; ಸ್ತ್ರೀಯರ ಮುಟ್ಟು; ತ್ರಿಗುಣಗಳಲ್ಲಿ ಒಂದು; ಪರಾಗ.

ರಜಕ ಅಗಸ, ಮಡಿವಾಳ; ನೀಲಿಗಾರ.

ರಜತ ಬೆಳ್ಳಿ; ಚಿನ್ನ; ಆನೆಯ ದಂತ; ಒಂದು ಪರ್ವತ; ನಿರ್ಮಲ.

—ಗಿರಿ ಕೈಲಾಸಪರ್ವತ, ಬೆಳ್ಳಿಬೆಟ್ಟ.

ರಜನಿ (ರಜನೀ), ರಾತ್ರಿ, ಇರುಳು.

—ಮುಖ ರಾತ್ರಿಯ ಪ್ರಾರಂಭ, ಪ್ರದೋಷ, ಹೊತ್ತು ಕಂತಿದ ಒಂದು ಝಾವ.

ರಜಪುತ್ರ ರಾಜಪುತ್ರ; ರಜಪುತಾನದ ನಿವಾಸಿ.

ರಜಪೂತ ರಜಪುತಾನದ ನಿವಾಸಿ.

ರಜಸ್(ರಜ), ತ್ರಿಗುಣಗಳಲ್ಲಿ ಒಂದು; ದೂಳು, ಪರಾಗ; ಉದ್ವೇಗ, ಉಕ್ಕು; ಋತುಸ್ರಾವ.

ರಜಸ್ವಲೆ ಋತುಮತಿ, ಮುಟ್ಟಾದವಳು.

ರಜಾ(ರಜೆ), ಸೂಟ; ವಿರಾಮಕಾಲ, ಬಿಡುವು; ಕೆಲಸದಿಂದ ನಿವೃತ್ತಿ; ಉಳಿ.

ರಜಾಯಿ ಮೆತ್ತನೆ ಹಾಸಿಗೆ; ಹತ್ತಿ ತುಂಬಿಸಿ ಹೊಲಿದ ಕವಚ.

ರಜೋಗುಣ ಉದ್ವೇಗದ ನಡತೆ, ತ್ರಿಗುಣಗಳಲ್ಲಿ ಒಂದು.

ರಜ್ಜು ಹಗ್ಗ, ದಾರ; ಎಳೆ; ಜಡೆ.

ರಟತ್ ಕಿರುಚಾಟ, ಕೂಗಾಟ, ಅರಚುವಿಕೆ.

ರಟನ ಕೂಗಾಟ, ಬೊಬ್ಬೆ, ಅರಚಾಟ.

ರಟ್ಟಡಿ ರಟ್ಟಡಿತನ, ರಟ್ಟೆ, ಗಟ್ಟಿ ಕೂಗು, ಬೊಬ್ಬೆ; ರಹಸ್ಯ ಹೊರಗೆಡಹುವಿಕೆ.

ರಟ್ಟು ಪುಸ್ತಕಗಳ ದಟ್ಟಿ; ತೀರ ದಪ್ಪನಾದ ಕಾಗದ; ಹಟ್ಟಡ; ಬಹಿರಂಗ, ರಹಸ್ಯ ಒಡೆಯುವಿಕೆ.

ರಟ್ಟೆ ಹೆಗಲು, ತೋಳಿನ ಸಂದು.

ರಣ ಯುದ್ಧ; ಸಂತೋಷ; ಧ್ವನಿ; ವ್ರಣ(ಸಂ), ಹುಣ್ಣು; ತೀಕ್ಷ್ಣ.

—ಅಂಗಣ ಯುದ್ಧಭೂಮಿ.
—ಕಲಿ ಯುದ್ಧ ವೀರ.
—ಮಯ್ಲಾರ ಯುದ್ಧಕ್ಕೆ ಬರುವ ಒಂದು ಪಿಶಾಚಿ, ಮರುಳು.
—ರಂಗ ಯುದ್ಧಭೂಮಿ.
ರಣಗಾಳೆ (ರಣಗಹಳೆ), ಯುದ್ಧದಲ್ಲಿ ಉಪಯೋಗಿಸುವ ಕಹಳೆ.
ರಣಪಾಣೆಗ ಕಡುಗಲಿ, ಯುದ್ಧಸಮರ್ಥ.
ರಣಭೂತ ಅತಿ ದೊಡ್ಡ; ಶ್ಮಶಾನದ ದೆವ್ವ.
ರಣರಣಕ ಪ್ರೇಮುಕಾತರತೆ; ಆತುರ; ಅತಿಶಯ, ವಿಪರೀತ.
ರಣವಾದ್ಯ ರಣಬಾಜು.
ರಣಹದ್ದು ಹಪ್ಪುಕಳ, ಗೃಧ್ರ; ಹೆಣ ತಿನ್ನುವ ಹದ್ದು.
ರಣಹಲಗೆ ದೊಡ್ಡ ಹಲಿಗೆ, ದೊಡ್ಡ ತಮಟೆ.
ರಣಹೇಡಿ ಅಂಜುಬುರುಕ, ಅತಿ ಪುಕ್ಕ.
ರಣಾಗ್ರ ಯುದ್ಧ, ಕಾಳಗ.
ರಣಿತ ಶಬ್ದಮಾಡುವ.
ರತ ಅನುರಕ್ತನಾದ, ಪ್ರೀತಿಯುಳ್ಳ; ಮೈಥುನ; ಪತಿ, ಗಂಡ.
ರತಿ ರಾಗ, ಪ್ರೀತಿ; ವಿಲಾಸ, ಶೃಂಗಾರ ಚೇಷ್ಟೆ; ಭೋಗ, ಸುರತ; ಮನ್ಮಥನ ಹೆಂಡತಿ; ಒಂದು ರತ್ನ ತೂಕ.
ರತ್ನ (ರನ್ನ), ರತುನ(ದ್ಭ), ಹರಳು, ಅಮೂಲ್ಯ ಕಲ್ಲು; ಉತ್ಕೃಷ್ಟವಾದ ಒಡವೆ; ಶ್ರೇಷ್ಠ ವಸ್ತು.
—ಆಕರ ಸಮುದ್ರ, ಕಡಲು.
—ಗರ್ಭ ಭೂಮಿ.
—ಪ್ರಾಯ ಉತ್ತಮ, ಶ್ರೇಷ್ಠ.
ರತ್ನಗಂಬಳಿ ಸುಂದರವಾದ ಚಿತ್ರಕೆಲಸವುಳ್ಳ ಕಂಬಳಿ.
ರತ್ನಾಕರವರ್ಣಿ ಭರತೇಶ ವೈಭವವನ್ನು ಬರೆದ ಕನ್ನಡ ಕವಿ.
ರಥ ತೇರು; ಯುದ್ಧಕಾಲದಲ್ಲಿ ಪ್ರಾಚೀನರು ಉಪಯೋಗಿಸುತಿದ್ದ ಬಂಡಿ.
—ಕಾರ ಸಾರಥಿ, ರಥ ನಡಸುವವ.
ರಥಾಂಗ ಚಕ್ರ, ಗಾಲಿ; ಚಕ್ರವಾಕ; ಸುದರ್ಶನ ಚಕ್ರ.
ರಥಿ ರಥಿಕ, ರಥವುಳ್ಳವ; ರಥದ ಮೇಲಿಂದ ಕದನಮಾಡುವವ.
ರದನ ಹಲ್ಲು, ಕೋರೆ.
ರದನಿ ಹಲ್ಲು.
ರದಿ ರದನಿ; ಆನೆ.
ರದ್ದು ಡಜೆ; ವಜಾ; ಕೆಲಸಕ್ಕೆ ಬಾರದುದು.
ರನ್ನ (ದ್ಭ) ರತ್ನ (ಸಂ); ಅಮೂಲ್ಯವಾದ ಕಲ್ಲು; ಗದಾಯುದ್ಧ ನಾಟಕವನ್ನು ಬರೆದ ಒಬ್ಬ ಕನ್ನಡ ಕವಿ; ಚೆಲುವ.
ರನ್ನಗನ್ನಡಿ ರತ್ನದ ಕನ್ನಡಿ.
ರನ್ನದೆನೆ ರತ್ನಬಿಗಿದ ಕೋಟೆಯ ಗೋಡೆಯ ತುದಿ.
ರನ್ನವಸರ ರತ್ನಗಳ ಅಂಗಡಿ.
ರನ್ನೆ ಸುಂದರ ಸ್ತ್ರೀ, ಚೆಲುವೆ; ಸಂತೋಷಕಾರಕ; ಕಾಮು; ಕತ್ತೆ.
ರಪಣ (ರವಣ), ಒಂದು ಆಯುಧ; ದ್ರವ.
ರಪ್ಪನೆ 'ರಪ್' ಎಂಬ ಸದ್ದುಮಾಡಿ, ಬೀಸಿ.
ರಪ್ಪುಪತ್ರೆ, ಹರಕು ಮಚ್ಚಲು ಹಾಕುವ ಪತ್ರೆ; ಸಣ್ಣ ಹೊಲಿಗೆ.
ರಬ್ಬರು (ರಬ್ಬರ್), ಒಂದು ಮರದ ಸೊನೆಯಿಂದಾಗುವ ವಸ್ತು, ಬರೆದುದನ್ನು ಅಳಿಸುವ ಸಾಧನ.
ರಬ್ಬಳಿಗೆ ಜೋಳದ ಗಂಜಿ, ರವೆಗಂಜಿ.
ರಬ್ಬು ಕುಗ್ಗು, ತಗ್ಗು.
ರಭಸ ವೇಗ; ಭರ, ಜೋರು; ಆನಂದ, ಉತ್ಸಾಹ; ಕೂಗು, ಆರ್ಭಟೆ.
ರಮಡೋಲು ದೊಡ್ಡ ಭೇರಿ, ತಾಸುಮಾರು.
ರಮಣ ಗಂಡ, ಪತಿ, ಪ್ರಿಯ.

ರಮಣಿ ಸುಂದರಿ; ಮಡದಿ; ಇರಿಸಿಕೊಂಡವಳು, ಸೂಳೆ.
ರಮಣೀಯು ಮನೋಹರ, ರಮ್ಯ.
ರಮಾ (ರಮೆ), ಲಕ್ಷ್ಮಿ; ಇರಿಸಿಕೊಂಡವಳು; ವೈಭವ,ಪೆಂಪು;ಭೋಗ,ಸುರತ; ಚೆಲುವಿಕೆ.
ರಮಾಧವ ಲಕ್ಷ್ಮೀಪತಿ, ವಿಷ್ಣು.
ರಮಿಸು ಸುಖಿಸು; ಆನಂದಿಸು; ಮನಸ್ಸನ್ನು ರಂಜಿಸು; ಸಂಭೋಗಿಸು, ಸುರತವಾಡು; ಕ್ರೀಡಿಸು.
ರಮ್ಯ ಮನೋಹರ, ಸುಂದರ, ಚೆಲುವು.
ರಯು ಜಲಪ್ರವಾಹ; ನದಿಯ ಭರ; ವೇಗ, ರಭಸ, ತ್ವರೆ.
ರವ ಶಬ್ದ, ದನಿ; ಕೂಗು.
—ಇಸು ಧ್ವನಿಮಾಡು.
—ಕುಡು ಧ್ವನಿಗೊಡು.
ರವಕೆ ಪೊಲ್ಕ, ಕುಪ್ಪಸ, ಮೊಲೆಮರೆ.
ರವಡಿ ರಾಡಿ, ರೊಜ್ಜು, ರೊಚ್ಚು, ಕೆಸರು.
ರವಣ (ರಪಣ), ಕೂಗು; ವಿಶ್ರವಸು ಋಷಿ; ಕೋಗಿಲೆ; ಟೊಂಗೆ, ರೆಂಬೆ.
ರವದಿ ಜೋಳದ ಎಲೆ.
ರವಷ್ಟು ಸ್ವಲ್ಪ, ತುಸು; ರವೆಯಷ್ಟು.
ರವಳಿ ಕೂಗು, ಬೊಬ್ಬೆ, ಗದ್ದಲ.
ರವಳಿಗೆ ಬುಟ್ಟಿ, ಸಿಬ್ಬಲು.
ರವಾನಿಸು ಕಳುಹು.
ರವಾನೆ ಕಳುಹುವಿಕೆ; ರಹದಾರಿ; ಹೋಗಲು ಪರವಾನಗಿ.
ರವಿ ಸೂರ್ಯ, ನೇಸರು; ಗಿರಿ; ಹದಿನೆರಡು ಎಂಬ ಸಂಖ್ಯೆ; ಸಂಪತ್ತು.
—ಸುತ ಕರ್ಣ; ಸುಗ್ರೀವ; ಯಮ; ಶನಿ; ವೈವಸ್ವತ ಮನು.
ರವೆ ದೊರಗು ಪುಡಿ; ಗೋಧಿಯ ದೊರಗು ಪುಡಿ; ಸಜ್ಜಿಗೆ; ಚರೆ; ಚೂರು; ಲವ.
ರವೇಸು ಕಟ್ಟಳೆ, ರಿವಾಜು; ಪದ್ಧತಿ.
ರಶೀತಿ (ರಶೀದಿ), ರಸೀತು, ಹಣ ಬಂದುದಕ್ಕೆ ಕೊಡುವ ಒಪ್ಪಿಗೆಯ ಕಾಗದ.
ರಶ್ಮಿ ಕಿರಣ; ಹಗ್ಗ; ಲಗಾಮು.
ರಸ ತಿನ್ನಲು ಸವಿಯಾದುದು; ಸವಿ; (ಸಿಹಿ, ಕಾರ, ಕಹಿ, ಒಗರು, ಉಪ್ಪು, ಹುಳಿ); ಜೇನು; ವೀರ್ಯ; ದ್ರವ; ನೀರು; ವಿಷ; ಭಾವಪ್ರೇರಕ ಗುಣ–ಶೃಂಗಾರ, ಹಾಸ್ಯ, ವೀರ, ಕರುಣ, ವೀರ, ಭಯಾನಕ, ಬೀಭತ್ಸ, ದುಃಖ, ಶಾಂತ—ನವರಸಗಳು.
—ಜ ಸಕ್ಕರೆ, ಬೆಲ್ಲ; ರಕ್ತ.
—ವಾದಿ ಧಾತುವಾದ; ಕೀಳು ಲೋಹದಿಂದ ಚಿನ್ನ ಮಾಡುವವ.
—ಸಿದ್ಧಿ ಪಾದರಸ ಶುದ್ಧಿಮಾಡುವಿಕೆ.
ರಸಜ್ಞೆ (ರಸನ), ನಾಲಗೆ.
ರಸದಾನ ವಿಷ ಕೊಡು, ವಿಷವಿಕ್ಕುವಿಕೆ.
ರಸದಾಳಿ ಒಂದು ಬಗೆ ಕಬ್ಬು.
ರಸನ (ರಸನೆ), ನಾಲಗೆ; ಕೂಗು, ಆರ್ಭಟೆ; ಬೊಬ್ಬೆ.
ರಸಭಸ್ಮ ಪಾದರಸದ ಭಸ್ಮ.
ರಸಯೋನಿ ಕಂಕಣಕಾರ, ಬೆಳುಗಾರ.
ರಸವತಿ ಅಡುಗೆ ಮನೆ.
ರಸಾ (ರಸೆ), ಭೂಮಿ.
ರಸಾತಲ ಪಾತಾಳ, ಕೆಳಗಿನ ಒಂದು ಲೋಕ.
ರಸಾನ್ನ ಸವಿಯೂಟ, ಔತಣ.
ರಸಾಭಾಸ ರಸಬರುವ ಕಾಲದಲ್ಲಿ ಕೆಡುವಿಕೆ; ಚೆಲುವುಗೆಟ್ಟುದು; ಗೊಂದಲವಾಗುವುದು.
ರಸಾಯನ ಸಿಹಿ ವಸ್ತುಗಳ ಸೇರಿಕೆಯಿಂದಾಗುವ ಪಾನಕ, ಪಾಯಸ; ಒಂದು ಬಗೆ ಔಷಧ ಪಾಕ.
ರಸಾಲ (ಅಲ=ಶೋಭೆ), ಮಾವಿನ ಮರ; ಕಬ್ಬು.
ರಸಾವಿಷ್ಟ ರುಚಿಯರಿತವ; ಸವಿಗಾರ, ರಸದಿಂದ ಕೂಡಿದ.

ರಸಿಕ ರಸವುಳ್ಳ, ರುಚಿಕರ; ಚೆಲುವಿನ ಪರಿಚಯ ಉಳ್ಳವ; ಸವಿಗಾರ; ವಿಲಾಸಪ್ರಿಯ.
—ತನ ವಿಲಾಸಿಕೆ; ಸವಿಗಾರಿಕೆ, ಸೌಂದರ್ಯ ಪ್ರೀತಿ.
ರಸಿಕೆ ರಸ; ಕೆಟ್ಟ ರಕ್ತ, ಕೀವು.
ರಸಿತ ಬರಿಯ ಲೋಹದ ಹೊದ್ದಿಕೆ; ಗಿಲಿಟು ಅಥವಾ ಮುಲಮು ಹೊಂದಿದ; ಗದ್ದಲ, ಗೊಂದಲ.
ರಸೆ (ರಸಾ), ಭೂಮಿ, ನೆಲ.
ರಸೋಕ್ತಿ ಭಾವಭರಿತ ವಾಕ್ಯ.
ರಸ್ತೆ ಹಾದಿ, ಮಾರ್ಗ, ದಾರಿ, ಹೆದ್ದಾರಿ.
ರಹ (ರಹಸ್), ಏಕಾಂತ, ಗುಟ್ಟು; ರಹಿ, ಹಂಚಿಕೆ; ಸೋಜಿಗ; ದಾರಿ, ರೀತಿ.
ರಹಣಿ ಕಾಂತಿ, ಹೊಳಪು; ನಾಟ್ಯ, ನೃತ್ಯ.
ರಹದಾರಿ ಹೋಗಲು ಪರವಾನಗಿ; ಸುಂಕ; ಹೋಗಿ ಬರುವ ದ್ವಾರ.
ರಹಸ್ಯ ಗುಟ್ಟು, ಗೋಪ್ಯ; ಅಪ್ರುಕಟ, ಅವ್ಯಕ್ತ.
ರಹಾಟೆ ರಾಟ, ರಾಟೆ.
ರಹಿ (ರಹ), ಸೊಗಸು, ವಿನೋದ; ಸೊಕ್ಕು, ಅಮಲೇರಿಕೆ; ತೋಣಚಿ; ಒಂಟಿಗ.
ರಹಿಣಿ ರೀತಿ, ಕ್ರಮ.
ರಹಿತ ಬಿಟ್ಟ; ಇಲ್ಲದ.
ರಹಿಸು ರಮ್ಯವಾಗಿ ತೋರು.
ರಂಕ ಕ್ಷುಲ್ಲಕ, ಹೀನ, ನೀಚ; ದಡ್ಡ.
ರಂಕು ಚಿತ್ರಾಂಗ, ಜಿಂಕೆ.
ರಂಕೆ ಗುಟರು, ಗೂಳಿ ಗುಟುರು.
ರಂಗ ರಂಗು; ಬಣ್ಣ, ವರ್ಣ; ಪ್ರದರ್ಶನಶಾಲೆ, ಸ್ಥಳ; ಸಮರಭೂಮಿ; ನಾಟ್ಯಶಾಲೆ; ತವರ; ವಿಷ್ಣು; ಚೆಲುವು; ಸಿಟ್ಟು.
ರಂಗನಾಯಕ ವಿಷ್ಣು.
ರಂಗನಾಯಕಿ ಲಕ್ಷ್ಮಿ.
ರಂಗವಲಿ (ರಂಗೋಲೆ), ರಂಗವಲ್ಲಿ, ಮನೆ ಮುಂದೆ ಬರೆಯುವ ಚಿತ್ರಕೆಲಸ, ಪೂವಲಿ.
ರಂಗಸ್ವಾಮಿ ರಂಗ, ರಂಗನಾಥ, ವಿಷ್ಣು.
ರಂಗಾರ ಬಣ್ಣಗಾರ, ಗುಡಿಗಾರ.
ರಂಗು ಬಣ್ಣ.
—ಇಸು ಬಣ್ಣಹಾಕು.
ರಂಗೋಲೆ ರಂಗವಲ್ಲಿ.
ರಂಚಿಕೆ ಅಂಬಾರಿ; ಮಹಾಸನ.
ರಂಜಕ ಬಣ್ಣಹಾಕಿದ; ಪ್ರೀತಿಮಾಡುವ; ಮನೋಹರ; 'ಫಾಸ್ಫರಸ್' ಧಾತು; ಚಂದನ; ಫಿರಂಗಿ ಮೊದಲಾದುವುಗಳ ಸ್ಫೋಟನ ದ್ರವ್ಯಕ್ಕೆ ಬೆಂಕಿ ಹೊತ್ತಿಸಲು ಬೇಕಾದ ಮದ್ದು; ಸರಮದ್ದು, ಸಿಡಿಮದ್ದು.
ರಂಜಣಿಗೆ ಬಾಣಿ, ಬಾನಿ, ಮಣ್ಣಿನ ದೊಡ್ಡ ಪಾತ್ರೆ.
ರಂಜನ (ರಂಜನೆ), ಶೃಂಗಾರ; ಚೆಲುವು ಹುಟ್ಟಿಸುವಿಕೆ; ಸಂತೋಷಕಾರಕ.
ರಂಜಿಸು ಶೋಭಿಸು, ಚೆಲುವುದೋರು; ಮೆರೆ; ಹೊಳೆ.
ರಂಜೆ ಕುದುರೆ ಆನೆಗಳ ಜೂಲು, ಹಕ್ಕರಿಕೆ, ಒಂದು ಹೂ; ರತ್ನಗಂಧಿ.
ರಂಟೆ ನೇಗಿಲು.
ರಂಡೆ ವಿಧವೆ; ವ್ಯಭಿಚಾರಿಣಿ, ಹಾದರಗಿತ್ತಿ; ಅಮ್ಮ, ಬೋಳಿ.
– ತನ ವೈಧವ್ಯ.
—ಬಾಜಿ ವ್ಯಭಿಚಾರ, ಸೂಳೆಗಾರಿಕೆ.
ರಂತು ದಾರಿ, ರಸ್ತೆ; ನದಿ.
ರಂಧ್ರ ತೂತು; ಬಿರುಕು, ಒಡಕು; ಸಂದು; ಬಾಯಿ, ಕಿವಿ, ಗುದ ಮೊದಲಾದ ಶರೀರದ ತೂತುಗಳು; ಕೊರತೆ, ಶತ್ರುಚ್ಛೇದನ ಮಾರ್ಗ.
ರಂಪ ಗದ್ದಲ, ಗಲಾಟೆ, ಗುಲ್ಲು.
ರಂಪಿಗೆ ತೊಗಲು ಕೊಯ್ಯುವ ಉಳಿ.
ರಂಬಾಟೆ (ರಂಪ).
ರಂಭ ಬಾಳೆ ಗಿಡ.

ರಂಭೆ (ರಂಭಾ), ದೇವಲೋಕದ ಅತಿ ಚೆಲುವೆಯಾದ ಒಬ್ಬ ಅಪ್ಸರೆ.

ರಾಕಡಿ (ರಾಗಟ), ತಿರುಪಳಿ ಹೂ; ಮುಡಿಯ ಮೇಲೆ ತೊಡುವ ಒಂದು ಆಭರಣ.

ರಾಕಾಚಂದ್ರ ಪೂರ್ಣಚಂದ್ರ, ಹುಣ್ಣಿಮೆಯ ಚಂದ್ರ.

ರಾಕೆ (ರಾಕಾ), ತುಂಬಿದ ಚಂದ್ರ, ಪೂರ್ಣಿಮಿ ಚಂದ್ರ; ಹೊಸತಾಗಿ ಋತುಗೊಂಡವಳು.

ರಾಕೇಂದು (ರಾಕಾಚಂದ್ರ).

ರಾಕ್ಷಸ ರಕ್ಕಸ(ದ್ಭ) ಅಸುರ, ದಾನವ; ಬಲ; ಭಯಂಕರ, ಭೀಕರ.

—ಅರಿ ರಾಕ್ಷಸರ ಹಗೆ, ವಿಷ್ಣು, ಕೃಷ್ಣ.

—ವಿವಾಹ ಬಲಾತ್ಕಾರದಿಂದ ಕನ್ಯೆಯನ್ನು ಒಯ್ದು ವಿವಾಹವಾಗುವ ರೀತಿ.

ರಾಕ್ಷೆ (ಲಾಕ್ಷೆ), ಅರಗು.

ರಾಗ ಕಾಂತಿ; ಸಂತೋಷ; ಪ್ರೀತಿ; ಕೆಂಪು; ಬಣ್ಣ; ಗೀತದಲ್ಲಿನ ಸ್ವರ ಲಹರಿ; ಸಿಟ್ಟು; ಸಂಸಾರದಲ್ಲಿ ಆಸಕ್ತಿ.

—ಇಸು ರಾಜಿಸು, ಬಣ್ಣವಾಗಿರು, ಹೊಳೆ; ತುಂಬ ಅನುರಾಗಗೊಳು; ಪ್ರಣಯದೋರು.

ರಾಗದ್ವೇಷ ಅಸೂಯೆಯಿಂದ ಬರುವ ಸಿಟ್ಟು; ಸಿಟ್ಟು, ವೈರ.

ರಾಗಾಂಗ ಜನ್ಯರಾಗ, ಉಪರಾಗ.

ರಾಗಿ ಅನುರಾಗವುಳ್ಳವ, ಆಸಕ್ತ; ಪ್ರಣಯಿ; ಕಂಬು, ಒಂದು ಧಾನ್ಯ.

ರಾಘವ ರಘುಕುಲದಲ್ಲಿ ಹುಟ್ಟಿದವ, ರಾಮ.

ರಾಘೆ ತೊಡೆ.

ರಾಜ್ ಪ್ರಕಾಶಿಸು, ಶೋಭಿಸು.

ರಾಜ ರಾಯ (ದ್ಭ), ಅರಸು; ಚಂದ್ರ; ಯತಿ; ಉದಾರ.

—ಕಾರ್ಯ ರಾಜ್ಯಕ್ರಮ, ಅರಸನ ಕೆಲಸ.

—ತ್ವ ಅರಸುತನ, ದೊರೆತನ.

ರಾಜಕೀಯ ರಾಷ್ಟ್ರದ ರಾಜನೀತಿಗೆ ಸಂಬಂಧಿಸಿದ; ನಯಶಾಸ್ತ್ರ, ರಾಜನೀತಿ.

ರಾಜಗೃಹ ಅರಮನೆ; ಬುದ್ಧನ ಜನ್ಮಭೂಮಿ, ಕಪಿಲವಸ್ತು, ಈಗಿನ ರಾಜಗಿರ್.

ರಾಜಧಾನಿ ಅರಸನಿರುವ ಪಟ್ಟಣ, ರಾಜ್ಯದ ಮುಖ್ಯ ಪಟ್ಟಣ.

ರಾಜನೀತಿ ನಯಶಾಸ್ತ್ರ; ಶುಕ್ರನೀತಿ ಮೊದಲಾದ ಶಾಸ್ತ್ರಗಳು; ಸರಕಾರದ ರೀತಿನೀತಿಗಳನ್ನು ತಿಳಿಸುವ ಶಾಸ್ತ್ರ.

ರಾಜನ್ಯ ಕ್ಷತ್ರಿಯ.

ರಾಜಪುತ್ರ ಅರಸು ಮಗ; ರಜಪೂತ.

ರಾಜಮುದ್ರೆ ಅರಸನು ಒತ್ತುವ ಮುದ್ರಿಕೆ; ಅರಸುತನದ ಗುರುತಾದ ಮುದ್ರಿಕೆ.

ರಾಜಯೋಗ ಯೋಗಗಳಲ್ಲಿ ಒಂದು; ರಾಜನಾಗುವ ಗ್ರಹಕೂಟ (ಜ್ಯೋತಿಷ್ಯದಲ್ಲಿ).

ರಾಜರಾಜ ಕುಬೇರ; ಸಮ್ರಾಟ, ಚಕ್ರವರ್ತಿ.

ರಾಜರ್ಷಿ ರಾಜನಾದರೂ ಋಷಿಯಂತೆ ವಿರಕ್ತ ಜೀವನ ನಡಸುವವ.

ರಾಜವದನೆ ಚಂದ್ರನಂಥ ಮುಖವುಳ್ಳವಳು.

ರಾಜಶಾಸನ ಅರಸನು ಮಾಡಿಟ್ಟ ನಿಯಮ; ಕಾಯಿದೆ, ಕಾನೂನು.

ರಾಜಶೇಖರ ಶಿವ.

ರಾಜಸ ರಜೋಗುಣದಿಂದ ಹುಟ್ಟಿದುದು.

ರಾಜಸೂಯ ಬಲಿಷ್ಠ ರಾಜರಿಗೇನೆ ಸಾಧ್ಯವಾದ ಒಂದು ಯಾಗ, ಚಕ್ರವರ್ತಿ ಪದ ಸ್ಥಾಪಿಸಲು ಮಾಡುವ ಯಾಗ.

ರಾಜಹಂಸ ಅರಸಂಚೆ, ಕಲಹಂಸ; ಶ್ರೇಷ್ಠ ಅರಸು.

ರಾಜಾರ್ಕ ಸೂರ್ಯ ಚಂದ್ರ.

ರಾಜಾಂಗ ರಾಜರಸ್ತೆ, ಹೆದ್ದಾರಿ.

ರಾಜಿ (ರಾಜಿಕೆ), ಸಾಲು, ಶ್ರೇಣಿ; ಸಮೂಹ, ಕೂಟ; ಒಪ್ಪಿಗೆ, ಸಮ್ಮತಿ; ಕೌಲು, ಒಡಂಬಡಿಕೆ, ಸಂಧಾನ.

**ರಾಜಿಸು** ಶೋಭಿಸು; ಕಂಗೊಳಿಸು; ಮೆರೆ.

**ರಾಜೀನಾಮೆ** (ರಾಜಿನಾಮೆ), ನಿವೃತ್ತನಾಗುವೆನೆಂದು ಸೂಚಿಸುವ ಕೆಲಸ; ತಾನಾಗಿ ಉದ್ದೇಶಿಸುವ ಬಿಡುಗಡೆ.

**ರಾಜೀವ** ಕಮಲ.

**ರಾಜ್ಞಿ** ರಾಣಿ (ದ್ಭ), ಅರಸಿ.

**ರಾಜ್ಯ** ರಾಷ್ಟ್ರ, ಒಬ್ಬ ಅರಸನ ಕೆಳಗಿನ ದೇಶ; ಅಧಿಕಾರಕ್ಕೊಳಗಾದ ನೆಲ; ಸರಕಾರ.

—**ಅಂಗ** ಅರಸುತನಕ್ಕೆ ಬೇಕಾದ ನವ ನಿಧಿಗಳು, ರಾಜ್ಯಭಾರ ಸೂತ್ರಗಳು.

—**ಭಾರ** ಆಳುವಿಕೆ, ಪ್ರಭುತ್ವ.

—**ಶ್ರೀ** ಅರಸುತನವೆಂಬ ಸಂಪತ್ತು; ರಾಜ್ಯವೆಂಬ ಲಕ್ಷ್ಮಿ.

**ರಾಟ್** ರಾಜ, ಅರಸು.

**ರಾಟಣ** (ರಾಟಳ), ರಾಟೆ, ಚಕ್ರ; ಯಂತ್ರ, ಘಟಚಕ್ರ; ರಾಟವಾಳ, ರಾಟಾಳಕ.

**ರಾಟೆ** (ರಾಟೆ), ನೂಲುವ ಸಾಧನ, ಚರಕ; ನೀರೆತ್ತುವ ಸಾಧನ; ಗಾಲಿ; ಕಪ್ಪಿ.

—**ಇಸು** ಸುತ್ತು.

**ರಾಡಿ** ರೊಜ್ಜು, ಕೆಸರು, ಕೊಳಚೆ.

**ರಾಣ** ರಾಜ, ರಜಪೂತ ರಾಜನ ಬಿರುದು.

**ರಾಣಿ** (ದ್ಭ) ರಾಜ್ಞಿ (ಸಂ), ಅರಸಿ.

**ರಾಣೀವಾಸ** ಅಂತಃಪುರ; ರಾಣಿಯ ನಿವಾಸ.

**ರಾಣುವೆ** ಸೈನಿಕ, ಸಿಪಾಯಿ.

**ರಾತಲ್** ರತ್ತಲು, 40 ತೊಲೆ ತೂಕ.

**ರಾತೀಬು** ಪುಷ್ಟಿಕೊಡುವ ಆಹಾರ.

**ರಾತ್ರಿ** (ರಾತ್ರೆ), ಇರುಳು; ಒಡೆಯ, ಶ್ರೇಷ್ಠ.

—**ಚರ** ರಾಕ್ಷಸ; ಪಿಶಾಚ; ಕಳ್ಳ; ಕಾವಲುಗಾರ.

**ರಾದಾರಿ** (ನೋಡು: ರಹದಾರಿ).

**ರಾದ್ಧ** ಮುಗಿದ, ಕೊನೆಗಾಣಿಸಿದ, ಪೂರ್ಣವಾದ; ಗಳಿಸಿದ; ಸಿದ್ಧವಾದ, ಸಿದ್ಧಾಂತ; ರಂಪು.

**ರಾದ್ಧಾಂತ** ಪರಿಣಾಮ; ಮುಗಿತಾಯದ ಫಲ; ವಾದದ ತೀರ್ಮಾನ.

**ರಾಧ** ಕೂಗುವಿಕೆ; ದಯೆ; ಯಶಸ್ಸು; ವೈಶಾಖ ಮಾಸ.

**ರಾಧಾ** (ರಾಧಿಕೆ), ರಾಧೆ. ನಂದಗೋಕುಲದ ಒಬ್ಬಳು ಗೋಪಕನ್ಯೆ. ಕೃಷ್ಣನ ಪ್ರೇಯಸಿ; ಅಧಿರಥನೆಂಬ ಸೂತನ ಹೆಂಡತಿ. ಕರ್ಣನ ಸಾಕುತಾಯಿ.

**ರಾಧೇಯ** ರಾಧೆಯ ಸಾಕುಮಗ, ಕರ್ಣ.

**ರಾಪು** (ದ್ಭ) ರಾಹು (ಸಂ), ಗ್ರಹಣಕಾಲ; ರಾವು; ಗರ್ವ; ದೌಲತ್ತು, ಜಂಬ; ಅಂಜಿಕೆ.

—**ಕೊಳ್** ಗಲಿಬಿಲಿಯಾಗು; ಗರ್ವಪಡು.

**ರಾಮ** (ರಾಮಚಂದ್ರ), ದಶರಥನ ಹಿರಿಯ ಮಗ. ಚಿಕ್ಕತಾಯಿ ಕೈಕೇಯಿಗೆ ತಂದೆಯು ಕೊಟ್ಟ ಮಾತನ್ನು ಉಳಿಸಲು—ಇವನು ತಮ್ಮ ಲಕ್ಷ್ಮಣನೊಡನೆ ಅರಣ್ಯಕ್ಕೆ ನಡೆದನು.

**ರಾಮದೂತ** ಆಂಜನೇಯ, ಹನುಮಂತ.

**ರಾಮಫಲ** ಸೀತಾಫಲದಂಥ ಒಂದು ಹಣ್ಣು, ರಾಮಪೇರಲ.

**ರಾಮಬಾಣ** ನಿಶ್ಚಿತವಾದ ಚಿಕಿತ್ಸೆ; ಖಂಡಿತವಾದ ರೀತಿ; ರಾಮನ ಕರದ ಬಾಣ.

**ರಾಮಸೇತು** ರಾಮೇಶ್ವರದಲ್ಲಿರುವ ದ್ವೀಪಗಳ ಸಾಲು. ರಾಮನು ಲಂಕೆಗೆ ಹಾಕಿಸಿದ ಸೇತುವೆಯ ಅವಶೇಷ ಎನ್ನುತ್ತಾರೆ.

**ರಾಮಾನುಜ** ರಾಮನ ತಮ್ಮ, ಲಕ್ಷ್ಮಣ, ಭರತ, ಶತ್ರುಘ್ನ; ಶ್ರೀವೈಷ್ಣವ ಮತಸ್ಥಾಪಕನಾದ ಆಚಾರ್ಯ.

—**ಮತ** ವಿಶಿಷ್ಟಾದ್ವೈತ ಮತ.

**ರಾಮಾಯಣ** ಶ್ರೀರಾಮನು ಅರಣ್ಯವಾಸ ಮಾಡಿದ ಬಳಿಕ ಸೀತೆಯನ್ನು ಕಳೆದುಕೊಂಡು ರಾವಣನೊಡನೆ ಕಾಳಗವಾಡಿ ಅವಳನ್ನು ಮರಳಿ ಪಡೆದ ಕಥೆ; ಈ ಕಥೆ

ಯನ್ನು ವಾಲ್ಮೀಕಿಯು ಚಿತ್ರಿಸಿದ ಗ್ರಂಥ; ರಗಳೆ, ಹಾಳುಹರಟೆ.

ರಾಮೇಶ್ವರ ನಮ್ಮ ದೇಶದ ದಕ್ಷಿಣಕ್ಕಿರುವ ಒಂದು ಕ್ಷೇತ್ರ.

ರಾಯ (ದ್ಭ) ರಾಜ (ಸಂ), ಅರಸು, ದೊರೆ; ಗೌರವದ ಅರ್ಥ ಕೊಡುವ ಶಬ್ದ.

ರಾಯಸ ರಾಜಾಜ್ಞೆ.

ರಾಯಿ ಅರೆಕಲ್ಲು; ಕಲ್ಲು.

ರಾರಾಜಿಸು ಬಹಳ ಪ್ರಕಾಶಿಸು, ಶೋಭಿಸು, ಮೆರೆ, ಹೊಳೆ.

ರಾವ (ರವ), ಶಬ್ದ; ಅರಚಾಟ, ಕೂಗು; ಕುಹೂರವ.

ರಾವಣ ಲಂಕಾರಾಜ್ಯದ ಅರಸ. ಕುಬೇರನ ತಮ್ಮ. ಇವನು ರಾಮನ ಹೆಂಡತಿಯಾದ ಸೀತೆಯನ್ನು ಅಪಹರಿಸಿದುದರಿಂದ ರಾಮನು ಇವನನ್ನು ಇದಿರಿಸಿ ಕಾಳಗದಲ್ಲಿ ಸೋಲಿಸಿ ಕೊಲ್ಲುವಂತಾಯಿತು.

—ಸನ್ಯಾಸಿ ರಾವಣನು ಸನ್ಯಾಸಿ ವೇಷ ತಾಳಿದ ಬಗೆ; ಕಪಟಿ, ಮೋಸಗಾರ.

ರಾವಣಿ ರಾವಣನ ಮಗ ಮೇಘನಾದ, ಇಂದ್ರಜಿತು.

ರಾವಿ ಸಿಂಧೂವಿನ ಉಪನದಿ.

ರಾವು(ದ್ಭ)ರಾಹು(ಸಂ), ಗ್ರಹಣಸ್ಥಾನ; ಪೌರಾಣಿಕ ರಾಕ್ಷಸನೊಬ್ಬ; ಆವೇಶ ಬರುವಿಕೆ; ದೆವ್ವದ ಬಡಿತ.

—ಕಣ್ಣು ಕೆಟ್ಟ ಕಣ್ಣು.

ರಾವುತ ಕುದುರೆ ಸವಾರ.

—ಇಕೆ ಕುದುರೆ ಸವಾರಿ.

ರಾಶಿ ರಾಸಿ (ದ್ಭ), ಗುಪ್ಪೆ; ಸಮೂಹ; ನಕ್ಷತ್ರಗಳ ಒಂದು ಮನೆ (ಜ್ಯೋತಿಷ್ಯದಲ್ಲಿ).

—ಕುಂಡಲಿ ರಾಶಿ ಚಕ್ರ; ಜಾತಕದಲ್ಲಿ ನಕ್ಷತ್ರಗಳ ಸ್ಥಾನ ಸೂಚಿಸುವ ಮಣೆ.

ರಾಷ್ಟ್ರ ದೇಶ, ರಾಜ್ಯ.

ರಾಷ್ಟ್ರೀಯ ರಾಷ್ಟ್ರದಲ್ಲಿ ಹುಟ್ಟಿದ, ದೇಶೀಯ; (ನಾಟಕದಲ್ಲಿ) ರಾಜನ ಭಾವ ಮೈದುನ.

ರಾಸ ಶಬ್ದ, ಧ್ವನಿ; ಸ್ತ್ರೀಪುರುಷರು ಸುತ್ತುಗಟ್ಟಿ ಕುಣಿಯುವ ಒಂದು ವಿನೋದ.

—ಕ್ರೀಡೆ ಕೃಷ್ಣನು ಗೋಪಕನ್ಯೆಯರೊಡನೆ ಆಡಿದ ಒಂದು ವಿಲಾಸ.

ರಾಸಭ ಕತ್ತೆ.

ರಾಸಿ(ದ್ಭ)ರಾಶಿ(ಸಂ), ಕುಪ್ಪೆ, ಗುಪ್ಪೆ; ಸಮೂಹ

ರಾಸು ಗಂಟ, ಜನಾವರು, ಜಾನುವಾರು, ದನ.

ರಾಹು ರಾವು(ದ್ಭ), ಸಮುದ್ರಮಥನದ ವೇಳೆ ಅಮೃತವನ್ನು ಅಪಹರಿಸಿದುದರಿಂದ ಅವನ ಶರೀರವನ್ನು ವಿಷ್ಣು ತುಂಡರಿಸಿದನೆಂದು ಕಥೆ; ಗ್ರಹಣ; ಸಂಧಿ; ವಿಷ.

—ಗ್ರಸ್ತ ರಾಹುವಿನಿಂದ ತಿನ್ನಲ್ಪಟ್ಟ; ಗ್ರಹಣಗೊಂಡ; ಕಳೆಗುಂದಿದ.

—ಹಿಡಿ ಗರಹಿಡಿ, ಅತಿ ಆಸೆ ತೋರು.

ರಾಹುಟಿ ಡೇರೆ, ತಂಬು, ಗೂಡಾರ.

ರಾಹುತ (ರಾವುತ), ಕುದುರೆ ಸವಾರ.

ರಾಳ ಧೂಪ; ಅಗಿಲು, ಲೋಬಾನ; ಕೆಲವೊಂದು ಮರಗಳಿಂದ ಹೊರಡುವ ಮಯಣಗಳು.

ರಿಕಾಬು (ರಿಕಾಪು), ಕುದುರೆ ತಡಿಯ ಮೇಲೆ ಕುಳಿತವನು ಕಾಲನ್ನು ಸಿಕ್ಕಿಸುವ ಹಿಡಿ.

ರಿಕಾಮಿ ಏನೂ ಇಲ್ಲದ, ಬರಿಯ; ನಿರುದ್ಯೋಗಿಯಾಗಿರುವಿಕೆ.

ರಿಕ್ಕಟೆ (ರೆಕ್ಕಟ), ಮೌನ.

ರಿಕ್ತ ಶೂನ್ಯ, ಬರಿಯ; ಬಡ; ಏನೂ ಇಲ್ಲದ; ತ್ಯಕ್ತ.

—ಹಸ್ತ ಬರಿಗೈಯವ, ಬಡವ.

ರಿಪು ಹಗೆ, ವೈರಿ, ಎದುರಾಳಿ.

ರಿವಾಜು ಪದ್ಧತಿ, ಕಟ್ಟಳೆ.

ರಿಷ್ಟ ನೊಂದ, ಗಾಯಗೊಂಡ; ತೊಡಕು, ಹಾನಿ; ಪಾಪ.

ರಿಸಾಲು ಕಂದಾಯದ ತೆರಾನೆ, ಇರ್ಸಾಲು.
ರಿಂಗಣ(ರಿಂಖಣ),ಜಾರಿಕೆ; ನರ್ತನ, ಕುಣಿತ.
— ಕುಣಿ ಒಂದು ಬಗೆ ಕುಣಿತ; ಕುಣಿ ಕುಣಿದು ಬೀಳು; ದಿಗಿಣ ಹಾಕು.
ರೀತಿ ಬಗೆ, ಪದ್ಧತಿ, ಕ್ರಮ, ಸರಣಿ; ಕಂಚು; ಹಿತ್ತಾಳಿ; ಹಾದಿ; ಚಲನ; ಪತನ; ಕಾವ್ಯ ರಚನೆಯ ಒಂದು ಶೈಲಿ, ಸಂಪ್ರದಾಯ.
— ಕೆಡು ಬಗೆಗೆಡು, ಕ್ರಮದಪ್ಪು.
— ಪಡೆ ಕ್ರಮವಾಗಿ ಸಾಗು; ಕ್ರಮಕ್ಕೆ ಬರು, ಒಗೆಗೊಳು.
ರೀತಿಕೆ ಹಿತ್ತಾಳೆ; ಕಂಚು.
ರುಕ್ ರುಚ್, ಕಿರಣ.
— ಮಂಜರಿ ಕಿರಣ ಸಂಚಯ, ಕಂಬಿ.
ರುಕ್ಮ ಕಾಂತಿಯುತವಾದುದು, ಹೊನ್ನು.
— ಕಾರಕ ಸೊನೆಗಾರ, ಅಕ್ಕಸಾಲಿ.
ರುಕ್ಮವತಿ ಅನಿರುದ್ಧನ ಪತ್ನಿ.
ರುಕ್ಮಾಂಗದ ಒಬ್ಬ ಅರಸು. ಇವನು ಏಕಾದಶಿ ವ್ರತಮಾಡಿ ಹೆಸರಾದನು.
ರುಕ್ಮಿಣಿ ಶ್ರೀ ಕೃಷ್ಣನ ಹೆಂಡತಿ, ರುಕ್ಮನ ಸೋದರಿ.
ರುಕ್ಷ (ರೂಕ್ಷ), ಒರಟು, ನಯವಲ್ಲದ; ಅಸಭ್ಯವಾದುದು; ಅಸಂಸ್ಕೃತವಾದುದು; ಋಕ್ಷ; ನಕ್ಷತ್ರ; ಒಣಗಿದ; ಅರ್ಥವಿಲ್ಲದ.
ರುಗಾಗಮ (ಋಗಾಗಮ), ಋಗ್ವೇದ.
ರುಗ್ಣ ರೋಗದಿಂದ ಕೂಡಿದ; ಮುರಿದ.
ರುಚ್ (ರುಕ್), ಪ್ರಕಾಶ; ಕಾಂತಿ; ಶೋಭೆ; ಹಂಬಲ, ಆಸಕ್ತಿ; ಲಾಲಿತ್ಯ.
ರುಚಕ ಸವಿಯಾದುದು; ಮಂಗಲವಾದುದು; ಹಲ್ಲು; ಕೊರಳು; ಪರ್ವತ; ಸೌಳುಪ್ಪು; ಮಾದಲ, ಮಾದಾಳ.
ರುಚಿ ಸವಿ; ಪ್ರೇಮ; ಅಪೇಕ್ಷೆ, ಅಭಿಲಾಷೆ; ಕಿರಣ; ಶೋಭೆ; ಕಾಂತಿ; ಹಸಿವೆ; ಒಬ್ಬ ಪ್ರಜಾಪತಿ; ಚಟ.
— ಇಸು ಸವಿಯಾಗು; ತೃಪ್ತಿಗೊಳಿಸು; ಮುದವಾಗು; ರುಚಿಹತ್ತು, ರುಚಿನೋಡು.
ರುಚಿರ ಸುಂದರ; ಮಧುರ; ಅಪೇಕ್ಷೆ ಹುಟ್ಟಿಸುವುದು, ಮನೋಹರ.
ರುಚಿರಾಮ ಕಣ್ಣು; ಪಾದರಸ, ಪಾರದ; ಬಿಳಿದು.
ರುಜಿನ ರುಜೆ, ರೋಗ, ಕಸಾರಿಕೆ.
ರುಜು ಸಹಿ, ದಸ್ಕತು; ಒಪ್ಪಿಕೆ; ಋಜು (ಸಂ).
— ಮಾತು ರುಜುವಾತು, ಸತ್ಯ; ದಾಖಲೆ.
ರುಜೆ ರುಜಿನ ರೋಗ.
ರುತ (ರುತಿ), ಚಿಲಿಪಿಲಿ; ಜೇಂಕಾರ; ಗೀತ.
ರುದಿತ ಅತ್ತ; ದುಃಖಿಸಿದ; ವಿಲಾಪಿಸಿದ.
ರುದ್ಧ ನಿಂತ, ತಡೆದ; ಎದುರಾದ; ಆವರಿಸಿದ, ಆವೃತವಾದ; ಮುಚ್ಚಿದ.
ರುದ್ರ (ಕೂಗುವವ), ಶಿವನ ಒಂದು ಮೂರ್ತಿಭೇದ; ಏಕಾದಶ ರುದ್ರರು; ಬಿರುಗಾಳಿಯ ಒಡೆಯ; ಭೀಕರ.
ರುದ್ರಭೂಮಿ ಶ್ಮಶಾನ, ಮಸಣ, ಸುಡುಗಾಡು
ರುದ್ರವೀಣೆ ಒಂದು ಬಗೆ ವೀಣೆ.
ರುದ್ರವೀರ್ಯ ಪಾದರಸ, ಪಾರದ.
ರುದ್ರಸೂಕ್ತ ರುದ್ರನನ್ನು ಕುರಿತು ಸ್ತುತಿಸುವ ವೇದದ ಸೊಲ್ಲುಗಳು.
ರುದ್ರಾಕ್ಷ (ರುದ್ರಾಕ್ಷೆ), ಒಂದು ಕಾಯಿ; ರುದ್ರಾಕ್ಷಿಯಂತಿರುವ ಕಣ್ಣು.
ರುದ್ರಾಣಿ ರುದ್ರನ ಸತಿ, ದುರ್ಗಿ.
ರುಧಿರ ನೆತ್ತರು, ರಕ್ತ; ಕೆಂಪು.
ರುಧಿರಾಕ್ಷ ರಾವಣನಲ್ಲಿ ಸೆರೆಯಾಗಿದ್ದ ಒಬ್ಬ ಅಸುರ.
ರುಧಿರಾಕ್ಷಿ ಕೆಂಗಣ್ಣು.
ರುಧಿರೋದ್ಗಾರಿ 57ನೆಯ ಸಂವತ್ಸರ.
ರುಪಾಯಿ ಹದಿನಾರಾಣೆ ಬೆಲೆಯ ನಾಣ್ಯ.
ರುಬರೂಬು ಮುಖಮುಖ, ಎದುರೆದುರು.
ರುಬ್ಬು ಕಡೆ, ಅರೆ; ತೀಡು, ತೇಯು; ತಿರುವು.

ರುಮಾಲು ರುಮಾಲ, ಕರವಸ್ತ್ರ; ಬೈರಾಸು; ಪಾಗು; ಪಗಡಿ, ತಲೆಕಟ್ಟು, ಸಾವುಡ.
ರುಮೆ ಉಪ್ಪಿನ ಕಟ್ಟೆ; ಸುಗ್ರೀವನ ಪತ್ನಿ.
ರುಸುಮು ವೇತನ, ವಕೀಲರ ಕೆಲಸಕ್ಕೆ ಕೊಡುವ ಪ್ರತಿಫಲ; ಹಣ; ದಲ್ಲಾಳಿ.
ರುಹ ಹುಟ್ಟಿದುದು.
ರುಳಿ ಕಾಲುಗೆಜ್ಜೆ; ರೋಮ, ಮೈಕೂದಲು.
ರುಂಜೆ ಒಂದು ಯುದ್ಧವಾದ್ಯ.
ರುಂಡ ಶರೀರದಲ್ಲಿ ಕತ್ತಿನ ಮೇಲಿನ ಅಂಶ.
ರುಂಡಮಾಲಿ ತಲೆಗಳ ಸರ ಧರಿಸುವವ, ಶಿವ; ಕಾಳಿ.
ರುಂಡಿಕೆ ರಣರಂಗ; ಕುಂಟಣಿ; ಹೊಸ್ತಿಲು.
ರುಂದ್ರ ವಿಸ್ತಾರವಾದ; ಅಗಲವಾದ.
ರೂಕ್ಷ ಮೃದುವಲ್ಲದ; ಒಣ; ಸ್ನೇಹರಹಿತ; ತೈಲಹೀನ.
ರೂಡಿಸು ಅಭ್ಯಾಸಿಸು, ಬಳಕೆಗೆ ತರು; ಏರು.
ರೂಢ ಬಳಕೆಯ; ತಿಳಿದ, ಪರಿಚಿತ; ಏರಿದ; ಮೇಲೆ ಬಂದ; ಹುಟ್ಟಿದ, ಉತ್ಪನ್ನವಾದ; ನಿಶ್ಚಯವಾದ, ಗೊತ್ತಾದ.
— ಇಸು ಬಳಸು; ಉಪಯೋಗಕ್ಕೆ ತರು; ಏರು; ಉದಯಿಸು; ಬೆಳೆ; ಪಳಗಿಸು.
— ನಾಮ ಉಪಯೋಗದಿಂದ ಬಂದ ಹೆಸರು, ಬಳಕೆಯ ಹೆಸರು.
— ಮೂಲ ಬೇರೂರಿದ, ಬಲವಾದ.
ರೂಢಿ ಹುಟ್ಟು; ಪ್ರಸಿದ್ಧ; ವಾಡಿಕೆ, ಬಳಕೆ; ಭೂಮಿ; ಮೂಲ.
ರೂಪ ರೂಪು, ರೂಹು (ದ್ಭ); ಆಕಾರ; ಸ್ವಭಾವ; ರೀತಿ; ಸೌಂದರ್ಯ, ಚೆಲುವು; ಪಶು; ಹೆಸರು; ಮಾದರಿ; ಮಂಡೆ.
— ಇಸು ಆಕಾರಕ್ಕೆ ತರು, ರಚಿಸು.
— ಕರೆ ರೂಪವನ್ನು ಮರೆಮಾಡು.
— ತೋರು ಮೈದೋರು, ಪ್ರತ್ಯಕ್ಷವಾಗು.
ರೂಪಕ ನಟಿಸಿ ತೋರಿಸಬಹುದಾದ ಒಂದು ದೃಶ್ಯ ಕಾವ್ಯ; ಆಕಾರ; ಒಂದು ಅರ್ಥಾಲಂಕಾರ; ಒಂದು ತಾಳ ಜಾತಿ; ಚತುರ.
ರೂಪಣ ರೂಪುಗೊಳುವಿಕೆ; ವಿನಂತಿ, ಹೇಳಿಕೆ.
ರೂಪತೆ ರೂಪವುಳ್ಳುದಾಗಿ ಇರುವುದು.
ರೂಪಾಜೀವಾ ರೂಪದಿಂದ ಜೀವನ ಹೊರೆವವಳು, ಸೂಳೆ, ವೇಶ್ಯೆ.
ರೂಪಾಯಿ (ರುಪಾಯಿ), ಹದಿನಾರಾಣೆ ಬೆಲೆಯ ನಾಣ್ಯ, ಬೆಳ್ಳಿ.
ರೂಪಾರ ರೂಪಾಕಾರ, ಚೆಲುವಿನ ರೂಪ.
ರೂಪಾಂತರ ಮಾರ್ಪಾಟು, ಆಕಾರ ಬದಲಿಸುವಿಕೆ.
ರೂಪಿ ಚೆಲುವೆ; ಚೆಲುವ; ಆಕಾರವುಳ್ಳುದು; ಹಾಗಿರುವ, ಅಂತಿರುವ; ಆ ಮಾದರಿಯ.
ರೂಪಿತ ರೂಪುಗೊಂಡ; ಆ ಸ್ಥಿತಿಗೆ ಇಲ್ಲವೆ ಆಕಾರಕ್ಕೆ ಬಂದ.
ರೂಪ (ರೂಪು).
ರೂಪ್ಯ ಬೆಳ್ಳಿ; ರೂಪಾಯಿ.
ರೂಬರೂಬು ಎದುರೆದುರು, ಮುಖಮುಖಿ.
ರೂಲು ಗೀಟೆಳೆಯುವ ಉರುಟು ಕೋಲು, 'ರೂಲರ್'.
ರೂವು (ದ್ಭ) ರೂಪ (ಸಂ).
ರೂಹು (ರೂಪು).
— ಇಸು ರೂಪಿಸು, ಕಾಣಿಸಿಕೊಳ್ಳು.
ರೆಕ್ಕಟೆ (ರಿಕ್ಕಟ್ಟ) ವ್ಯರ್ಥ; ಸುಮ್ಮನೆ.
ರೆಕ್ಕೆ ಗರಿ; ಎರಕೆ; ಪಕ್ಷಿಗಳ ಪಕ್ಕ.
— ಬರು ಹಾರಲು ಶಕ್ತಿಬರು; ಉತ್ಸಾಹ ತೋರು, ಹುರುಪಾಗು; ಸೊಕ್ಕು.
ರೆಟ್ಟೆ ಮುರಿ, ಹಾರಾಟ ಕುಗ್ಗು; ಗರ್ವಭಂಗವಾಗು.
ರೆಟ್ಟೆ (ರಟ್ಟೆ), ತೋಳು.
ರೆಪ್ಪು ಹೊಡೆ, ಬಡಿ.
ರೆಪ್ಪೆ ಪರೆ, ಕಣ್ಣಿನ ಮುಚ್ಚಳ.
ರೆಂಕೆ (ರಂಕೆ), ಗುಟುರುಹಾಕು.

ರೆಂಜೆ (ರಂಜೆ), ರತ್ನಗಂಧಿ ಗಿಡ, ಅದರ ಹೂ.
ರೆಂಬೆ ಗೆಲ್ಲು, ಕೊಂಬೆ, ಎಗೆ, ಎಂಕಲು.
ರೇ ರೈ, ಸೊತ್ತು, ಆಸ್ತಿಪಾಸ್ತಿ; ಸಂಪತ್ತು; ಸೊಗಸು; ಕಾಂತಿ, ಶೋಭೆ; ಚೆಲ್ಲು.
ರೇಕು (ದ್ಭ) ಮುಲಮು, ಚಿನ್ನದ ಆಚ್ಛಾದನ; ತಗಡು; ವರೇಕು; ಪಟಲ, ದಳ, ಪಕಳಿ.
ರೇಕೆ ರೇಖೆ (ಸಂ), ಆಕಾರ, ಗೆರೆ; ಆರೈಕೆ, ರಕೋಲೆ, ಜತನ; ವ್ಯವಸ್ಥೆ.
ರೇಖಾ (ರೇಖೆ), ಲೇಖೆ; ಸಾಲು; ಗೆರೆ; ಸ್ವಲ್ಪ; ಕಪಟ, ಮೋಸ.
—ಗಣಿತ ಗೆರೆಗಳ ಗಣಿತ, ಜ್ಯಾಮಿತಿ, ಭೂಮಿತಿ.
ರೇಖಾಂಶ ಧ್ರುವದಿಂದ ಧ್ರುವಕ್ಕೆ ಭೂಮಿಯನ್ನು ವಿಂಗಡಿಸುವ ಕಾಲ್ಪನಿಕ ರೇಖೆ.
ರೇಗು ಕೋಪಿಸು,ಸಿಟ್ಟಾಗು;ಉದ್ರೇಕಗೊಳ್ಳು
—ಇಸು ಸಿಟ್ಟಿಗೆ ಬರುವಂತೆ ಮಾಡು, ಕೆರಳಿಸು.
ರೇಗುಪ್ತಿ ಒಂದು ರಾಗ.
ರೇಚ ಉಸಿರು, ಶ್ವಾಸ.
—ಕ (ರೇಚನ), ಉಚ್ಛ್ವಾಸ; ಹೊರಕ್ಕೆ ಹೋಗುವ, ಭೇದಿಯಾಗುವ.
ರೇಣು ಹೂವಿನ ದೂಳು, ಪರಾಗ; ದೂಳು; ಹೆಣ್ಣಾನೆ.
ರೇಣುಕ ಆನೆ; ಶಿವನ ಒಬ್ಬ ಗಣ; ಒಬ್ಬ ಯಕ್ಷ.
ರೇಣುಕೆ ಜಮದಗ್ನಿಯ ಪತ್ನಿ. ಪರಶುರಾಮನ ತಾಯಿ. ಈಕೆ ಅಸತಿಯಾದಳೆಂದು ಅವಳ ಪತಿ ಸಿಟ್ಟಾಗಿ, ಪರಶುರಾಮನಿಂದ ಕೊಲಿಸಿದನು. ತಿರುಗಿ ಪರಶುರಾಮನ ಬೇಡಿಕೆಯಂತೆ ಅವಳು ಬದುಕಿಸಲ್ಪಟ್ಟಳೆಂದು ಕಥೆ; ಎಲ್ಲಮ್ಮ.
ರೇತ (ರೇತಸ್), ಇಂದ್ರಿಯ, ಶುಕ್ಲ, ಧಾತು, ವೀರ್ಯ, ಹಾಟು; ಪಾದರಸ.
ರೇತಿ ಹಿಂದಿನ ಬಲ್ಪಗಾರರು ಮುಸಿಯನ್ನು ಆರಿಸಲು ಬಳಸುತ್ತಿದ್ದ ಒಂದು ಜಾತಿ ಕರಿ ಬಣ್ಣದ ಮರಳು.
ರೇಫ (ರೇಫೆ), ರಕಾರ, ರಕಾರದ ಧ್ವನಿ; ಗೀಟು, ಗೀರು; ಕಾಮು; ನೀಚ; ಹೀನ.
ರೇವ ರೈವತನೆಂಬವನ ತಂದೆ.
ರೇವಡಿ ಎಳ್ಳಿಂದ ಮಾಡಿದ ತಿಂಡಿ, ಚಿಗಳಿ; ಲೇವಡಿ, ಪರಿಹಾಸ್ಯ.
ರೇವತಿ ಬಲರಾಮನ ಸತಿ; 27ನೆಯ ನಕ್ಷತ್ರ.
ರೇವಂತ ಹೆಸರಾದ ಒಬ್ಬ ಪ್ರಾಚೀನ ಕುದುರೆ ಸವಾರ; ಒಬ್ಬ ಮನು.
ರೇವು ಬಂದರು, ಹಡಗಿನ ನಿಲ್ದಾಣ.
ರೇವೆ (ರೇವಾ), ರೇತಿ, ಸಣ್ಣ ಹರಳು; ನರ್ಮದಾ ನದಿ.
ರೇಶ್ಮೆ (ರೇಶಮಿ, ರೇಶಿಮೆ), ಒಂದು ಹುಳುವಿನಿಂದಾಗುವ ನೂಲು, ಬಟ್ಟೆ; ಪಟ್ಟೆ.
ರೈ (ರೇ), ಸಂಪತ್ತು; ಕಾಂತಿ; ಬಂಗಾರ.
ರೈತ ಕೃಷಿಕ, ಹೊಲ ಮಾಡುವವ.
ರೈವತ ಸಂಪತ್ತುಳ್ಳವ; ಒಬ್ಬ ರಾಜ; ದ್ವಾರಕೆಯ ಬಳಿಯ ಒಂದು ಪರ್ವತ, ಈಗಿನ ಗಿರ್ನಾರ್ ಎಂಬ ಬೆಟ್ಟ; ಒಬ್ಬ ಮನು.
ರೊಕ್ಕ ರೋಖು, ನಗದು ಹಣ; ಹಣ; ಚಿಲ್ಲರೆ, ಚುಂಗಡಿ, ಬಿಡಿ ಹಣ.
ರೊಚ್ಚು ರೊಜ್ಜು, ರಾಡಿ, ಕೆಸರು.
ರೊಟ್ಟಿ ಯಾವುದಾದರೂ ಹಿಟ್ಟನ್ನು ಚಪ್ಪಟೆ ಲಟ್ಟಿಸಿ ಸುಟ್ಟು ಮಾಡಿದ ತಿಂಡಿ.
ರೊಡ್ಡ ಚೊಟ್ಟೆ ಕೈಯವ, ಎಡಗೈಯವ.
ರೊಣಕು ಹಾರು, ನೆಗೆ, ಜಿಗಿ.
ರೊಪ್ಪ ಕುರಿ ದೊಡ್ಡಿ, ಕುರಿ ಹಟ್ಟಿ.
ರೊಷ್ಟು ಪೀಡಿಸು, ತೊಂದರೆ ಪಡಿಸು.
ರೋಕ ಹಡಗು, ಮಂಜಿ; ನಗದು ಹಣ, ರೊಕ್ಕ; ಕಾಂತಿ; ತೂತು, ಕುಣಿ.
ರೋಗ ಕಾಯಿಲೆ, ಬೇನೆ, ವ್ಯಾಧಿ, ಜಡ್ಡು.
ರೋಗಿ (ರೋಗಸ್ಥ), ಜಡ್ಡಾದವ, ಬೇನೆಯವ.

—ಷ್ಣ ಸದಾ ರೋಗಿಯಾದವ.

ರೋಚಕ ಸವಿಯಾದ; ತೃಪ್ತ, ಒಗ್ಗುವ, ಹೊಳೆಯುವ; ಹಸಿವು; ರುಚಿ.

ರೋಚನ ಹೊಳೆಯುವ; ಉತ್ತೇಜಕ; ಹಸಿವು ಹೆಚ್ಚಿಸುವ; ಗೋರೋಚನ.

ರೋಜ (ರೋಜಾ), ಗುಲಾಬಿ ಹೂ.

ರೋಜು ನಿತ್ಯ, ದಿನ; ದಿನಗೂಲಿ.

—ನಾಮ ಊಳಿಗ, ಕಿರ್ದಿ, ದಿನಚರಿ ಲೆಕ್ಕದ ಪುಸ್ತಕ.

ರೋಟು ರೋಡು, ಕಿರಿದಾರಿ; ಕುರುದಾರಿ.

ರೋಡಾಡು ಹಾಸ್ಯಮಾಡು,ನಗು; ತಿರಸ್ಕಾರ; ವಿಮುಖನಾಗು.

ರೋಡಿಸು ತಿರಸ್ಕರಿಸು, ವಿಕಾರಮಾಡಿ ಹೀಯಾಳಿಸು.

ರೋತೆ ರೊಚ್ಚು; ಅಳುಬುರುಕು.

ರೋದನ ಅಳುವಿಕೆ, ಮರುಕ, ವಿಲಾಪ.

ರೋದಸಿ ಭೂಮಿ; ಸ್ವರ್ಗ.

ರೋದಿಸು ಅಳು, ಮರಕು, ಮರುಗು.

ರೋಧಕ ತಡೆಯುವ, ನಿಲಿಸುವ, ಪ್ರತಿಬಂಧಿಸುವ.

ರೋಧಸ್(ರೋದಸಿ), ಭೂಮ್ಯಾಕಾಶಗಳು.

ರೋಪಣ ಬೆಳೆಯುವಿಕೆ; ನಿಲಿಸುವಿಕೆ, ಏರಿಕೆ.

ರೋಪಿತ ಎತ್ತಿದ, ನಿಲ್ಲಿಸಿದ, ಹೊರಿಸಿದ.

ರೋಮ ಲೋಮ, ಕೂದಲು, ರುಳಿ, ಉಣ್ಣೆ.

—ಕೂಪ ತ್ವಚೆಯೊಳಗಿನ ತೂತು, ರೋಮ ಕಾಣಿಸುವ ತೂತು.

ರೋಮಕ ರೋಮ್ ದೇಶದ.

ರೋಮಪಾದ ಸೂರ್ಯವಂಶದ ಒಬ್ಬ ಅರಸು, ದಶರಥನ ಮಿತ್ರ.

ರೋಮಶ ಮೈ ತುಂಬ ರೋಮ ಉಳ್ಳವ, ಒಬ್ಬ ಋಷಿ.

ರೋಮಂಥ ಮೆಲುಕು, ತಿಂದುದನ್ನು ತಿರುಗಿ ಬಾಯಿಗೆ ತರುವಿಕೆ,ನೆಮರು ಹಾಕುವುದು.

ರೋಮಾಳಿ ರೋಮಗಳ ಸಾಲು.

ರೋಮಾಂಚ ಸಂತೋಷದಿಂದ ಮೈಕೂದಲು ನಿಮಿರುವುದು, ಪುಲಕ.

ರೋಲಂಬ ಆರಡಿ, ತುಂಬಿ, ಭ್ರಮರ.

ರೋಷ ಸಿಟ್ಟು, ಕೆರಳಿಕೆ, ಕೋಪ; ಉದ್ವೇಗ; ಅಂಬು, ಬಾಣ.

ರೋಷಾವೇಶ ರೇಗಾಟ; ಕೋಪದಿಂದ ಉದ್ವೇಗಗೊಂಡ.

ರೋಸು (ರೋಸಿ), ರೊಚ್ಚು, ರಾಡಿ, ಕೊಳಚೆ, ಕೆಸರು; ಜುಗುಪ್ಸೆ, ಬೇಸರು; ಪೂರ್ತಿಯಾಗಿ ನಿರಾಶೆಗೊಳು; ಸಿಟ್ಟು.

— ಹೋಗು ಬೇಸರು ಬರು; ಜುಗುಪ್ಸೆ ಹುಟ್ಟು; ನಿರಾಶೆಗೊಳು.

ರೋಹಣ ಏರಿಕೆ, ಉತ್ಥಾಪನೆ; ಬೆಳವಳಿಗೆ; ಸಿಂಹಳದ ಒಂದು ಉನ್ನತ ಶಿಖರ.

ರೋಹಿ ಏರಿಕೆ; ಸವಾರಿ; ಸವಾರ.

ರೋಹಿಣಿ ದಕ್ಷ ಪ್ರಜಾಪತಿಯ ಮಗಳು. ಇವಳು ನಕ್ಷತ್ರ ರೂಪದಿಂದ ಚಂದ್ರನ ಹೆಂಡತಿಯಾದಳು; ಒಂದು ನಕ್ಷತ್ರ; ಬಲರಾಮನ ತಾಯಿ; ದನ, ಆಕಳು.

ರೋಹಿತ (ಲೋಹಿತ), ಕೆಂಪು; ಹರಿಶ್ಚಂದ್ರನ ಮಗ.

ರೋಹಿತಾಶ್ವ ಹರಿಶ್ಚಂದ್ರನ ಮಗನೊಬ್ಬ.

ರೌಕುಳ ಭಯಂಕರವಾದ; ಘೋರವಾದ, ಭಯಂಕರ ಸ್ಥಿತಿ.

ರೌದ್ರ ಭಯಂಕರ; ನವರಸಗಳಲ್ಲಿ ಒಂದು; ಸೂರ್ಯನ ಕಾವು, ಬಿಸಿಲು; ಉಗ್ರತೆ; ಭೀಕರ ಗುಣ, ರುದ್ರನ ಶೀಲ; ಉದ್ವೇಗ; ದೆವ್ವ; ರೌದ್ರಿ.

ರೌದ್ರಿ ಗೌರಿ; ಐವತ್ತನಾಲ್ಕನೆಯ ಸಂವತ್ಸರ.

ರೌರವ ಒಂದು ಮಹಾನರಕ; ಭೀಕರ, ಅತ್ಯುಗ್ರ; ಮೋಸ.

ರೌಹಿಷ ಕಾಚಿ ಹುಲ್ಲು; ಒಂದು ಜಾತಿ ಜಿಂಕೆ.

# ಲ

ಲಕ್ ಲಾಯಕು.

ಲಕುಡ (ದ್ಭ) ಲಗುಡ (ಸಂ), ದೊಣ್ಣೆ, ಗುದ್ದಿ.

ಲಕುಮಣ (ದ್ಭ), ಲಕ್ಷ್ಮಣ (ಸಂ).

ಲಕುಮಿ (ದ್ಭ), ಲಕ್ಷ್ಮೀ (ಸಂ).

ಲಕೋಟೆ ಕವರು, ಕಾಗದ ಹಾಕುವ ಚೀಲ; ಒಂದು ಹಣ್ಣು.

ಲಕ್ಕಣ (ದ್ಭ), ಲಕ್ಷಣ (ಸಂ); ಚಿಹ್ನ, ಗುರುತು; ಶಕುನ, ಚೆಲುವು; ಕಾವ್ಯ ಸೌಂದರ್ಯ ಕಾರಣ.

ಲಕ್ಕಿ ಲೊಕ್ಕಿ, ನಕ್ಕಿ, ಒಂದು ಗಿಡ.

ಲಕ್ತಕ ಅರಗು; ಚಿಂದಿ ವಸ್ತ್ರ, ಜಾವಡಿ.

ಲಕ್ಷ ಪದ; ಗುರುತು; ನೂರು ಸಾವಿರ; ಗುರಿ, ಲಕ್ಷ್ಯ.

ಲಕ್ಷಣ ಸಾರಸ, ಜಲಪಕ್ಷಿ; ಅವಯವ ಅರ್ಥದಿಂದ ಹುಟ್ಟುವ ಪದಕ್ಕೆ ಬೇರೆ ಅರ್ಥ; ಶುಭ ಚಿಹ್ನೆ; ವರ್ಣನೆ; ಉದ್ದೇಶ; ಚಿಹ್ನೆ, ಗುರುತು.

—ವಂತ ಸುದೈವಿ, ಅದೃಷ್ಟಶಾಲಿ; ಚೆಲುವ, ಸುಂದರ.

ಲಕ್ಷಣೆ ಸೂಚಿತವಾದ ಅರ್ಥ; ಗುಣ ಶೀಲೆ; ಸ್ಫುರದ್ರೂಪಿ.

ಲಕ್ಷಾವಧಿ ಬಹಳ, ಅತಿಶಯ; ಲಕ್ಷಗಟ್ಟಲೆ.

ಲಕ್ಷಿಸು ಗುರುತಿಸು; ಗಮನಿಸು; ನೋಡು; ಗೌರವಿಸು; ಗುರಿ ನೋಡು.

ಲಕ್ಷ್ಮಣ ದಶರಥನ ಎರಡನೆ ಮಗ, ರಾಮನ ತಮ್ಮ; ದುರ್ಯೋಧನನ ಒಬ್ಬ ಮಗ; ಗಂಡು ಕೊಕ್ಕರೆ.

ಲಕ್ಷ್ಮಿ ಶೋಭೆ, ಕಾಂತಿ, ಸಿರಿ; ವಿಷ್ಣುವಿನ ಪತ್ನಿ; ಸಂಪತ್ತು, ಸಿರಿ; ಅರಸಿನ; ಮುತ್ತು; ಶತಪದಿ, ಬೆಟ್ಟುಬೆನಕ; ವೇದಗಳಲ್ಲಿ ಅದೃಷ್ಟ ಎಂಬ ಈ ಅರ್ಥ ಇದೆ. ಮುಂದೆ ಲಕ್ಷ್ಮಿಯನ್ನು ಸ್ತ್ರೀ ಎಂಬುದಾಗಿಯೂ ಆಕೆಯು ಸಿರಿಯ ಒಡತಿ ಎಂಬುದಾಗಿಯೂ ತಿಳಿಯುತ್ತ ಬಂದರು. ಕ್ರಮೇಣ ಆಕೆಯು ವಿಷ್ಣುವಿನ ಪತ್ನಿಯೂ ಎನಿಸುವಳು. ಪುರಾಣಗಳಲ್ಲಿ, ವಿಷ್ಣುವು ಅವತಾರವೆತ್ತಿದಂತೆ ಅವಳೂ ಎತ್ತುವಂತೆ ಚಿತ್ರಿಸಿದೆ.

ಲಕ್ಷ್ಮೀಕಾಂತ ವಿಷ್ಣು; ರಾಜ.

ಲಕ್ಷ್ಮೀವರ ವಿಷ್ಣು, ಕೃಷ್ಣ.

ಲಕ್ಷ್ಯ ಗುರಿ; ಉದ್ದೇಶ; ಗಮನ; ತಿಳಿಯಲು ಯೋಗ್ಯವಾದುದು; ದೃಷ್ಟಾಂತ.

—ಸಿದ್ಧಿ ಲಕ್ಷಣಕ್ಕೆ ತಕ್ಕ ಉದಾಹರಣೆ; ಉದ್ದೇಶ ಸಾಫಲ್ಯ.

ಲಗಡಿ ಹೊಡೆತ; ಹಿಡಿತ.

—ಇಸು ಹೊಡೆ, ಬಡಿ.

ಲಗಳಿ ಎತ್ತಿನ ಮೇಲಿಂದ ನೀರುತರುವ ಸಾಧನ.

ಲಗಾಮು ಕಡಿವಾಣ, ಕಡಿಯಣ.

ಲಗಾಯಿಸು ಹೊಡೆ, ಬಡಿ; ಸೇರಿಸು, ಹೊಂದಿಸು; ತಾಗಿಸು; ತುರುಕು; ನೂಡು.

ಲಗಾವು ಹೊಂದಿಕೆ, ಸೇರುವೆ.

ಲಗು (ದ್ಭ), ಲಘು (ಸಂ), ಹಗುರ; ವೇಗ.

—ಬಗೆ ತ್ವರೆ, ಅವಸರದ ರೀತಿ.

ಲಗುಡ ದೊಣ್ಣೆ, ಬಡಿಗೆ, ಲಾಟ.

ಲಗ್ಗಿಕ ಲಾಗ್ನಿಕ.

ಲಗ್ಗೆ ವಾದ್ಯಗಳ ಮೊಳಗು; ಮುತ್ತಿಗೆ; ಕೋಟೆ ಏರುವುದು, ದಾಳಿ.

—ಚಂಡು ಒಂದು ಚಂಡಿನಾಟ.

ಲಗ್ಗೆವರೆ ರಣವಾದ್ಯ, ಲಗ್ಗೆ ಸೂಳು.

ಲಗ್ನ ಸೇರಿದ್ದ, ಹೊಂದಿದ.

ಲಗ್ನ ಮೇಷಾದಿ ರಾಶಿಗಳ ಉದಯ; ನಾಚಿಕೊಂಡ; ಸೇರಿದ, ಕೂಡಿದ; ಸ್ತುತಿ ಪಾಠ; ವಿವಾಹ.

—ಕಾಲ ಒಂದು ಕೃತ್ಯಕ್ಕೆ ಯೋಗ್ಯವೆಂದು ಸೂಚಿಸಿದ ಕಾಲ.
ಲಗ್ನಾಹ ಮದುವೆ ಮೊದಲಾದ ಶುಭಕರ್ಮಗಳಿಗಾಗಿ ಗೊತ್ತುಪಡಿಸಿದ ವೇಳೆ, ಲಗ್ನ.
ಲಘಿಮೆ ಹಗುರತನ; ಸಣ್ಣದಾಗುವಿಕೆ, ಕ್ಷುಲ್ಲತೆ; ಅಷ್ಟಸಿದ್ಧಿಗಳಲ್ಲೊಂದು.
ಲಘು ಶೀಘ್ರ, ಬೇಗ; ಹಗುರ; ಸಾರವಿಲ್ಲದುದು, ಸುಲಭ; ಹ್ರಸ್ವವಾದ್ದು; ದುರ್ಬಲ; ಮನೋಹರ; ತ್ವರೆ.
— ತಮ ಹಗುರವಾಗಿರುವಿಕೆ; ಬೇಗ.
— ತ್ವ ತ್ವರೆ; ಹಗುರಾಗಿರುವಿಕೆ; ಮರ್ಯಾದೆಯಿಂದ ನಡೆ.
ಲಘುಪಾಳಿ ಸುಲಭ ರೀತಿ.
ಲಘುಶಂಕೆ ಮೂತ್ರ ಶಂಕೆ; ಲಜ್ಜೆ.
ಲಘುಹಸ್ತ ಕೈಚಳಕ.
ಲಚುಮಣ (ದ್ಭ), ಲಕ್ಷ್ಮಣ (ಸಂ).
ಲಚ್ಚಣ (ದ್ಭ), ಲಕ್ಷಣ (ಸಂ).
ಲಚ್ಚಿ (ದ್ಭ) ಲಕ್ಷ್ಮೀ (ಸಂ),
ಲಜ್ಜಾ (ಲಜ್ಜೆ), ನಾಚಿಕೆ; ದಾಕ್ಷಿಣ್ಯ, ಭಿಡೆ, ಸಂಕೋಚ.
—ಲು ನಾಚಿಕೆ ಉಳ್ಳವಳು; ಸಂಕೋಚ ಸ್ವಭಾವಿ.
ಲಜ್ಜಿಸು ನಾಚಿಕೊಳ್ಳು, ನಾಚಿಕೆಪಡಿಸು.
ಲಟಕಟಿಸು ಉತ್ಸಾಹಪಡು, ಆತುರಪಡು.
ಲಟಪಟ ಚಂಚಲ; ಕರಕರೆ.
ಲಟಲಟಿಸು ಅಲುಗಾಡು; ಶಬ್ದಮಾಡು.
ಲಟಾಪಟಿ ಜಟಾಪಟ, ಬಾಯಿ ಜಗಳ.
ಲಟ್ಟ ದೊಣ್ಣೆ, ಬಡಿಗೆ; ದಪ್ಪನಾದ.
ಲಟ್ಟಣಿಗೆ ಹಪ್ಪಳ ಇಲ್ಲವೆ ರೊಟ್ಟಿ ಮಾಡುವ ಸಾಧನ.
ಲಟ್ಟನೆ ಥಕ್ಕನೆ, ಒಮ್ಮೆಗೆ.
ಲಟ್ಟು (ಲಡು), ಲಟ್ಟಿಸು, ಹಿಟ್ಟನ್ನು ಹಪ್ಪಳವಾಗಿ ಮಾಡು, ಒತ್ತು.
ಲಟ್ವೆ ನೀಚ ಸ್ತ್ರೀ; ನಾಚಿಕೆಗೇಡಿ.
ಲಡಾಯಿ ಕಾಳಗ, ಯುದ್ಧ; ಜಗಳ.
ಲಡ್ಡು ದುರ್ಬಲ, ಜಳ್ಳು; ಒಳಗೆ ಕೆಟ್ಟುದು; ಲಾಡು, ಉಂಡೆ.
ಲಡ್ಡುಕ (ಸಂ), ಲಡ್ಡುಗೆ (ಸಂ), ಲಾಡು, ಒಂದು ಸವಿ ಉಂಡೆ, ಉಂಡಿ.
ಲತಾ (ಲತೆ), ಬಳ್ಳಿ, ಬೀಳಲು, ಹಂಬು.
ಲತಾಕುಂಜ ಲತಾಗ್ರಹ, ಬಳ್ಳಿಮನೆ, ಪೊದೆಮನೆ.
ಲತಿಕಾ ಲತಿಕೆ, ಬಳ್ಳಿ, ಹಂಬು.
ಲತ್ತೆ ಪೆಟ್ಟು; ಒದೆ.
ಲದ್ದಿ ಆನೆ ಕುದುರೆ ಮೊದಲಾದ ಪಶುಗಳ ಸಗಣಿ.
ಲಪನ ಮಾತು; ಮುಖ; ಬಾಯಿ.
ಲಪ್ಪ ಲೇಪ, ಕಿಟ್ಟ; ಅಗಸೆ ಎಣ್ಣೆ ಮತ್ತು ಸೀಮೆ ಸುಣ್ಣ ಬೆರಸಿ ಮಾಡುವ ಒಂದು ಮಿಶ್ರಣ.
ಲಬ್ಧ ದೊರಕಿದ, ಸಿಕ್ಕಿದ; ಭಾಗಿಸಿ ಬಂದ.
ಲಬ್ಧವರ್ಣ ಪಂಡಿತ, ವಿದ್ವಾಂಸ.
ಲಬ್ಧಿ ದೊರಕಿದುದು; ಪ್ರಾಪ್ತಿ; ಗಳಿಮೆ.
ಲಬ್ಬೆ ಮುಸಲ್ಮಾನರ ಒಂದು ವರ್ಗ.
ಲಭಿಸು ದೊರಕಿಸು; ಸಿಗು.
ಲಭ್ಯ ದೊರಕಿದುದು, ಪಡೆದುದು, ಬಂದುದು; ತಕ್ಕ.
ಲಮಾಣಿ ಲಂಬಾಣಿ, ಒಂದು ಜನವರ್ಗ.
ಲಯ ನಾಶ; ಪ್ರಲಯ; ಸಂಗೀತದಲ್ಲಿ ತಾಲಮಾನ; ನಿದ್ರಿಸುವಿಕೆ; ಅಡಗುವಿಕೆ.
— ಇಸು ನಾಶವಾಗು; ಅಡಗು; ಲೀನವಾಗು.
ಲಲನೆ (ಲಲನಾ), ಹೆಂಗಸು; ವಿಲಾಸವತಿ ಸ್ತ್ರೀ.
ಲಲಂತಿಕೆ ಮೊಣಕಾಲ ಇಲ್ಲವೆ ಹೊಕ್ಕಳ ತನಕ ಮುಟ್ಟುವ ಹಾರ.
ಲಲಾಟ ಹಣೆ.
—ರೇಖೆ (ಲಲಾಟಲಿಖಿತ), ಹಣೆಬರಹ, ವಿಧಿಲಿಖಿತ; ಅದೃಷ್ಟ.

**ಲಲಾಮ** ತಿಲಕ; ಶ್ರೇಷ್ಠ; ಸುಂದರ; ಧ್ವಜ; ಗುರುತು; ಕುದುರೆ; ಭೂಷಣ.

**ಲಲಿತ** ಸುಂದರ, ಚೆಲುವಾದ; ಶೃಂಗಾರ ಚೇಷ್ಟೆ; ಒಂದು ವಿಧವಾದ ಸ್ವರ.

**—ಕಲೆ** ಮನ ಮೋಹಿಸುವ ಸಂಗೀತ, ಶಿಲ್ಪ, ನೃತ್ಯ, ಚಿತ್ರಾದಿಕಲೆಗಳು.

**ಲಲ್ಲೆ** ಮುದ್ದು, ಪ್ರೀತಿ; ಅನುರಾಗ ಸೂಚಕ ಮಾತು; ಕಪಟ; ಮೋಹ.

**—ಇಸು** ಮುದ್ದಿಸು; ಪ್ರೀತಿದೋರು.

**—ಗೆಯ್** ಸ್ವೇಚ್ಛಾಲಾಪಮಾಡು; ವಿನೋದಗೊಳಿಸು; ಮುದ್ದುಮಾಡು.

**—ಮಾತು** (ಲಲ್ಲೆವಾತು), ಸವಿನುಡಿ.

**ಲವ** ಅಲ್ಪ, ಸ್ವಲ್ಪ; ನಾಶ; ಕತ್ತರಿಸುವುದು; ರಾಮನ ಮಗ; ಅಲ್ಪಕಾಲ; ರೋಮ.

**ಲವಡಿ** ದಾಸಿ.

**ಲವಣ** ಉಪ್ಪು; ಮಧುಪನೆಂಬ ರಕ್ಕಸನ ಮಗ.

**ಲವಣಿ** (ಲವಣೆ), ಕಾಂತಿ; ಚೆಲುವು; ಚಮತ್ಕಾರ; ಹಿಂದೂ ಮುಂದೂ ಬಾಗುವುದು.

**—ಕಾರ** ಚಮತ್ಕಾರಿ;ವೀರ;ಸೊಗಸುಗಾರ

**ಲವನ** ಕತ್ತರಿಸುವಿಕೆ; ಕುಡುಗೋಲು.

**ಲವಲವಿಕೆ** ಔತ್ಸುಕ್ಯ; ಆತುರ; ಹಂಬಲ; ಚಟುವಟಿಕೆ.

**ಲವಲವಿಸು** ಆತುರಪಡು.

**ಲವಂಗ** (ಲವಿ), ಒಂದು ಸಸ್ಯ, ಅದರ ಹೂವಿನ ತೊಟ್ಟು; ರುಚಿಗೂ ಸುಗಂಧಕ್ಕೂ ಸೇರಿಸುವ ಒಂದು ಸಂಬಾರ.

**ಲವಿತ್ರ** ಕತ್ತರಿಸುವ ಒಂದು ಆಯುಧ, ಮಚ್ಚು, ಒಂದು ಬಗೆ ಕೊಡಲಿ.

**ಲಶುನ** ಪಲಾಂಡು, ಬೆಳ್ಳುಳ್ಳಿ.

**ಲಷ್ಕರು** ಸೇನೆ, ದಂಡು; ಸೈನಿಕ.

**ಲಸಿತ** ಪ್ರಕಾಶಿಸುವ, ಹೊಳೆಯುವ; ಶೋಭಿಸುವ; ಉಲ್ಲಾಸಿತ.

**ಲಹಣಿ** ರಾಗಾಲಾಪಧ ಏರಿಳಿತ; ಲಹರಿ, ಅಲೆ.

**ಲಹರಿ** (ಲಹರಿಕೆ), ದೊಡ್ಡ ತೆರೆ, ತೆರೆ, ಅಲೆ; ಕಾಂತಿಯುಳ್ಳ ಮಿಂಚು; ಸೌಂದರ್ಯ, ಪ್ರವಾಹ; ಅಮಲು; ಪರಂಪರೆ.

**ಲಳಿ** ತಡೆಯಿಲ್ಲದ; ಸೌಂದರ್ಯ; ಉಲ್ಲಾಸ; ಸಂತೋಷ; ಸಿಟ್ಟು; ಅಪ್ರಬುದ್ಧತೆ; ತೆರೆ, ತರಂಗ; ಸಾಮರ್ಥ್ಯ.

**ಲಳ್ಳಿ** ನಳ್ಳಿ, ಎಸಡಿ, ಏಡಿ.

**ಲಂಕಾ** (ಲಂಕೆ), ಸಿಂಹಳ ದ್ವೀಪ; ರಾವಣನ ರಾಜಧಾನಿ.

**ಲಂಕಿಣಿ** ಲಂಕೆಯಲ್ಲಿದ್ದ ಸ್ತ್ರೀ; ನಾಚಿಕೆಗೆಟ್ಟ ಹೆಂಗುಸು.

**ಲಂಗ** ಪರಕಾರ; ಲುಂಗಿ.

**ಲಂಗರ್** (ಲಂಗರು), ಹಡಗನ್ನು ಒಂದು ಕಡೆ ನಿಲ್ಲಿಸಲು ಇಳಿಬಿಡುವ ವಜೆ.

**ಲಂಗೋಟಿ** ಕೌಪೀನ, ಕೋವಣ, ಕಚ್ಚೆ; ಕೃಪ.

**ಲಂಘನ** ದಾಟುವುದು; ಏರುವುದು; ಗೆಲುವುದು; ಉಪವಾಸ, ಊಟ ಬಿಡುವುದು.

**ಲಂಘಿಸು** ಹಾರು, ಜಿಗಿ, ನೆಗೆ; ಮೀರು, ಮುರಿ; ಏರು.

**ಲಂಚ** ಗಿಂಬಳ, ಸಂಬಳವಲ್ಲದೆ ಗುಟ್ಟಿಂದ ಪಡೆಯುವ ಹಣ; ಒಳಸಂಚಿಂದ ಪಡೆಯುವ ಹಣ.

**—ಗಾರ** (ಲಂಚಗೂಳಿ), ಲಂಚಕೊಳ್ಳುವವ

**ಲಂಚೆ** ವ್ಯಭಿಚಾರಿಣಿ.

**ಲಂಡ** ಮೂರ್ಖ; ಗಿಡ್ಡ; ಉದ್ದವಲ್ಲದ.

**ಲಂಪಟ** ಆಸಕ್ತ; ಪರಸ್ತ್ರೀಯಲ್ಲಿ ಆಸಕ್ತಿಯುಳ್ಳವ, ಕಾಮುಕ.

**ಲಂಪು** ಸೊಗಸು; ವಿಭವ.

**ಲಂಬ** ಉದ್ದ; ತೂಗುತ್ತಿರುವ; ವಿಸ್ತಾರ; ತಳಕ್ಕೆ ಸಮಕೋನವಾಗಿರುವ ರೇಖೆ.

**ಲಂಬಕರ್ಣ** ಉದ್ದ ಕಿವಿಯುವ; ಕತ್ತೆ; ಆನೆ.

**ಲಂಬಣ** (ಲಂಬಳ), ಕುಚ್ಚು; ಉದ್ದವಾದ ಹೂವಿನ ಅಥವಾ ಮುತ್ತಿನ ಸರ.

ಲಂಬನ ತೂಗಾಡುವಿಕೆ; ಹೊಂದಿರುವಿಕೆ; ವಿಸ್ತಾರ; ದೂರ.

ಲಂಬಿಸು ತೂಗಾಡು; ನೇತಾಡು, ಜೋಲು; ವಿಸ್ತರಿಸು; ಎಳೆ.

ಲಂಬೋದರ ಜೋಲು ಹೊಟ್ಟೆಯವ, ಗಣಪತಿ, ಬೆನಕ.

ಲಂಭ ದೊರಕಿಸುವಿಕೆ, ಪಡೆಯುವಿಕೆ.

ಲಾಕುಳ ದಂಡ, ದೊಣ್ಣೆ; ಗಣೆ; ಯೋಗದಂಡ.

ಲಾಕ್ಷ (ಲಾಕ್ಷೆ, ಲಾಕ್ಷಾ), ಅರಗು, ಅಲತಿಗೆ.

ಲಾಕ್ಷಣಿಕ ಶಾಸ್ತ್ರಕಾರ; ಲಕ್ಷಣಶಾಸ್ತ್ರಬಲ್ಲವ.

ಲಾಕ್ಷಾಗೃಹ ಅರಗಿನ ಮನೆ; ಪಾಂಡವರ ನಾಶಕ್ಕೆಂದು ಕೌರವನು ಏರ್ಪಡಿಸಿದ ಮನೆ.

ಲಾಖ ಲಕ್ಷ; ನೂರು ಸಾವಿರ.

ಲಾಗ ಶರೀರವನ್ನು ತಲೆಕೆಳಗೆ ಮಾಡಿ ತಿರುಗಿ ಮೊದಲಿನಂತಾಗುವುದು; ಬೀಳುವೆ, ಪರಟ.

ಲಾಗಡು (ಲಾಗವಾಡು), ಖರ್ಚು, ಮೇಲು ಖರ್ಚು, ಸಾದಿಲ್ವಾರು.

ಲಾಗಾಯಿತು ಮೊದಲಿನಿಂದ, ಪ್ರಾರಂಭ, ಅಂದಿನಿಂದ ಮೊದಲಾಗಿ.

ಲಾಗಿಸು ಹಾರು, ನೆಗೆ; ಸಿದ್ಧಮಾಡು; ಉಪಾಯದಿಂದ ಯೋಚಿಸು; ಸಂತೋಷಿಸು; ಮುಂದುವರಿ.

ಲಾಗು ತಲೆ ಕೆಳಗಾಗು; ನೆಗೆತ; ವಿಸ್ತರಿಸುವಿಕೆ; ಆಧಿಕ್ಯ, ವೆಗ್ಗಳ.

ಲಾಗುವೊಗ ಕೈಚಳಕ; ತ್ವರೆ.

ಲಾಘವ ತ್ವರೆ; ಹಗುರ; ಚಳಕ; ಪಟುತ್ವ.

ಲಾಜಾ ಲಾಜೆ, ಅರಳು, ಬತ್ತದ ಅರಳು.

ಲಾಟ ಹಳೆ; ದಕ್ಷಿಣ ಗುಜರಾತಿನ ಒಂದು ದೇಶ; ಈ ದೇಶದವ.

ಲಾಟು ಗುಂಪು, ರಾಶಿ; ದೊಡ್ಡ ಸಂಖ್ಯೆ.

ಲಾಡ ಲಾಯ, ಕೊಟ್ಟಗೆ.

ಲಾಡಿ ಒಂದು ಹಗ್ಗ; ನೀಳ ಪಟ್ಟಿ, ಕಸೆ.

ಲಾಡು ಲಡ್ಡುಗೆ, ಉಂಡಿ.

ಲಾಭ ದೊರಕಿಸುವಿಕೆ, ಗಳಿಮೆ; ಮುನಾಫೆ, ಪ್ರಯೋಜನ.

—ಇಸು (ಲಭಿಸು), ಪ್ರಾಪ್ತವಾಗು, ದೊರೆ.

—ನಷ್ಟ ಪ್ರಯೋಜನ ಮತ್ತು ಹಾನಿ.

ಲಾಮಚ (ಲಾಮಂಚ), ಬಾಳದ ಬೇರು, ಒಂದು ಬಗೆ ಸುಗಂಧದ ಬೇರು.

ಲಾಯ ಕುದುರೆ ಮನೆ, ಆನೆಯ ಮನೆ.

ಲಾಲ್ ಒಂದು ಬಗೆ ಕೆಂಪು ಗುಬ್ಬಿ.

ಲಾಲಕಿ ದೇವರನ್ನು ಕುಳ್ಳಿರಿಸಿ ಒಯ್ಯುವ ಒಂದು ಅಲಂಕಾರದ ಸಾಗುಮಂಟಪ, ಪಾಲಕಿ.

ಲಾಲನ (ಲಾಲನೆ), ಪೋಷಣೆ, ಮಕ್ಕಳನ್ನಾಡಿಸುವುದು.

ಲಾಲಸ (ಲಾಲಸೆ), ಆಸಕ್ತಿ, ಹಂಬಲ; ಆಸಕ್ತ.

ಲಾಲಾ ಲಾಲಾಜಲ, ಬಾಯಜೊಲ್ಲು, ಲೋಳೆ.

ಲಾಲಿ ಮಕ್ಕಳಿಗಾಗಿ ಹಾಡುವ ಹಾಡು, ಜೋಗುಳ; ಲಾಲಿಕೆ.

ಲಾಲಿತ್ಯ ಚೆಲುವಿಕೆ, ಸೊಗಸು; ಲಾವಣ್ಯ.

ಲಾಲಿಸು ಕೇಳು, ಆಲಿಸು; ಪಾಲಿಸು; ಕೊಂಡಾಡು.

ಲಾವ ಕತ್ತರಿಸುವ.

ಲಾವಕ ಲಾವುಗೆ, ಲಾವಕ್ಕಿ; ಕೆಡುಕ, ದುಷ್ಟ; ಚಾಡಿಗಾರ.

ಲಾವಣಿ ಸಮೂಹ, ಮೊತ್ತ; ವೇಗ, ಜೋರು; ಜಾನಪದ ಗೀತೆಗಳಲ್ಲಿ ಕಥಾನಕ ಗೀತೆ; ಹೊಲದ ವಾರ್ಷಿಕ ಉತ್ಪನ್ನ; ಗೇಣಿ.

ಲಾವಣ್ಯ ಸೌಂದರ್ಯ, ಸೌಂದರ್ಯವಿಶೇಷ; ಸೊಗಸು, ಲಾಲಿತ್ಯ.

ಲಾವಂಚ ಲಾಮಚ, ಬಾಳದ ಬೇರು.

ಲಾವಾ ಅಗ್ನಿಪರ್ವತದಿಂದ ಹೊರಡುವ ರಸ.

ಲಾಸ ನೆಗೆದಾಟ, ಜಿಗಿದಾಟ; ಕುಣಿತ, ವಿಲಾಸ.

ಲಾಸಿಕೆ ನರ್ತಕಿ.

ಲಾಸ್ಯ ಮೃದು ನೃತ್ಯ, ನಾಟ್ಯ; ಲಲಿತ ನರ್ತನ.

ಲಾಳ ಸಾಲು; ನಳಿಗೆ; ಕಡ್ಡಿ; ದೇಟು; ಕುದುರೆ ಎತ್ತುಗಳ ಗೊರಸುಗಳಿಗೆ ಬಿಗಿಯುವ ಕಬ್ಬಿಣದ ರಕ್ಷೆ.

ಲಾಳಿ (ಲಾಲಿ), ನೇಯ್ಗೆಯವನು ಹೊಕ್ಕನ್ನು ಹಾಕಲು ಬಳಸುವ ನೂಲಿನ ಲಾಳಿಗೆ; ಇಕ್ಕಳ, ಚಿಮುಟ.

ಲಾಂಗಲ ನೇಗಿಲು; ತಾಳೆ.

ಲಾಂಗೂಲ ಬಾಲ.

ಲಾಂಛನ ಗುರುತು, ಕಲೆ; ಅಪಮಾನ.

ಲಾಂಬಿ ಲೆಪ್ಪ; ಅಗಸೆ ಎಣ್ಣೆ, ಸೀಮೆಸುಣ್ಣಗಳಿಂದ ಮಾಡುವ ಒಂದು ಲೇಪ; ಉದ್ದ.

ಲಿಖಿತ ಒಬ್ಬ ಪ್ರಾಚೀನ ಋಷಿ; ಬರೆದುದು; ಅಕ್ಷರ.

ಲಿಗಾಡು (ಲಿಗಾಡಿ, ಲಗಾಡಿ), ಪೇಚು, ತೊಡಕು; ಆರೋಪ; ನಷ್ಟದಾಯಕ ಪ್ರಸಂಗ.

ಲಿಪಿ ಅಕ್ಷರ; ಅಕ್ಷರ ಉಳ್ಳ ಪತ್ರ, ಬರಹ; ಲೇಪನ; ಬಳೆಯುವಿಕೆ.

ಲಿಪ್ತ ಹಚ್ಚಲ್ಪಟ್ಟ; ವಿಷ ಹಚ್ಚಿದ; ಬಳಿದ.

ಲಿಪ್ಸ (ಲಿಪ್ಸೆ), ದೊರಕಿಸುವ ಕಾಂಕ್ಷೆ, ಪಡೆಯುವ ಆಸೆ.

ಲಿಫಾಫೆ ಲಕೋಟೆ, ಲಕ್ಕೋಟೆ, ಪಾಕೀಟು.

ಲಿಹ್ ನೆಕ್ಕು.

ಲಿಂಗ ಗುರುತು; ಶಿವನ ಒಂದು ಮೂರ್ತಿವಿಶೇಷ; ಪುರುಷನ ಜನನೇಂದ್ರಿಯ; ಹೆಣ್ಣು—ಗಂಡು—ನಪುಂಸಕ ಸೂಚನೆ; ಸೃಷ್ಟ, ಪ್ರಕಟ.
—ತ್ರಯ ಹೆಣ್ಣು, ಗಂಡು, ನಪುಂಸಕ ಭೇದ; ಇಷ್ಟ, ಗುರು, ಪ್ರಾಣ—ಲಿಂಗಗಳು.
—ಧಾರಿ ಲಿಂಗವಂತ, ವೀರಶೈವ.
—ವಂತ (ಲಿಂಗಾಯತ), ವೀರಶೈವ; ಎದೆಗೆ ಲಿಂಗ ಕಟ್ಟಿಕೊಳ್ಳುವವ.
—ವೃತ್ತಿ ಸೋಗಿನ ಸನ್ಯಾಸ.

ಲಿಂಗವತ್ತಿಗೆ ಬಾಗಿಲಿಗೆ ಹಾಕುವ ಅಡ್ಡಮರ.

ಲಿಂಗಶರೀರ ಲಿಂಗದೇಹ, ಶರೀರ.

ಲಿಂಗಿ ಲಿಂಗವಂತ, ವೀರಶೈವ; ಲಿಂಗವಂತ ಸನ್ಯಾಸಿ; ಠಕ್ಕು ಸನ್ಯಾಸಿ ಸೋಗು.

ಲಿಂಗೈಕ್ಯ ಶಿವೈಕ್ಯ, ನಿರ್ಯಾಣ.

ಲಿಂಬೆ ನಿಂಬೆ.

ಲೀನ ಅನುರಕ್ತನಾದ; ಅಡಗಿದ, ಆಸಕ್ತ.

ಲೀಲಾವತಾರ ವಿನೋದಕ್ಕಾಗಿ ತಾಳಿದ ಜನ್ಮ.

ಲೀಲೆ (ಲೀಲಾ), ವಿಲಾಸ, ವಿನೋದ.

ಲುಕುಸಾನು (ನುಕ್ಸಾನು), ನಷ್ಟ, ಹಾನಿ.

ಲುಚ್ಚ ನೀಚ, ಕ್ಷುದ್ರ, ಕೀಳು ಮಾತಾಡುವವ.

ಲುಟಾಯಿಸು ಲೂಟಮಾಡು, ದೋಚು.

ಲುಠನ ಹೊರಳುವಿಕೆ, ಉರುಳುವಿಕೆ; ಹೊಂಗಾಟ, ಹಂದಾಟ.

ಲುಪ್ತ ಒಡೆದ, ನಷ್ಟವಾದ; ನಾಶವಾದ; ಮರೆಯಾದ; ಅಪಹೃತವಾದ.

ಲುಬ್ಧ ಬೇಡ; ಲಂಪಟ; ಲೋಭಿ, ಜಿಪುಣ.

ಲುಲಾಪ ಗಂಡು ಕೋಣ, ಹೋರಿ.

ಲುಲಾಯ ಕಾಡುಕೋಣ, ದುಡ್ಡು.

ಲುಲಿತ ತೂಗುತ್ತಿರುವ, ಚಲಿಸುತ್ತಿರುವ.

ಲುಳಿ ಕೈಚಳಕ; ಚಾತುರ್ಯ; ತಿರುಗಿಸುವಿಕೆ; ನಿಬಿಡತೆ, ಸಾಂದ್ರತೆ; ತ್ವರೆ.

ಲುಳಿತ (ಲುಲಿತ), ವ್ಯಾಪ್ತವಾದ; ಕೆದರಿದ.

ಲುಂಗಿ ಮಹಮ್ಮದೀಯರು ಉಡುವ ಬಣ್ಣದ ಬಟ್ಟೆ; ದಟ್ಟಿ.

ಲುಂಟಾಕ ಕಳ್ಳ; ಕೊಳ್ಳೆಬಾಕ, ಸುಲಿಗೆಕಾರ.

ಲೂಟಿ ಸುಲಿಗೆ, ದರೋಡೆ; ತಂಟೆ, ಮಕ್ಕಳ ಕಿಚಾಪತಿ.

ಲೂತಿ ಒಂದು ಬಗೆ ಕಜ್ಜಿ; ಒಂದು ಚರ್ಮ ವ್ಯಾಧಿ; ಒಂದು ಮರ.

ಲೂನ ಕತ್ತರಿಸಿದ; ಹೆಕ್ಕಿದ; ಕಡಿದ.

ಲೂಮ ಬಾಲ.

ಲೂಯಮಾನ ನಾಶಮಾಡುವ; ಕೊಲ್ಲುವ.

ಲೆಕ್ಕ ಅಂಕೆ, ಸಂಖ್ಯೆ; ಗಣಿತ, ಎಣಿಕೆ; ಗೌರವ, ಆದರ.

— ಇಸು ಗುಣಿಸು; ಮಾನಿಸು; ಕೂಡಿಸು.

ಲೆಕ್ಕಣಿ (ಲೆಕ್ಕಣಿಕೆ), ಪೇನು, ಲೇಖನಿ. ಬರೆಯುವ ಸಾಧನ, ಕಂಠ.

ಲೆಕ್ಕಿಗ ವಿದ್ವಾಂಸ, ಪಂಡಿತ, ಗಣಿತಜ್ಞ.

ಲೆತ್ತ ಪಗಡೆಯಾಟ.

ಲೆಪ್ಪ (ದ್ಭ) ಲೇಪ್ಯ (ಸಂ); ಗೊಂಬೆ; ಲೇಪ, ಲಾಂಬಿ; ಗಾರೆ ಕೆಲಸ.

ಲೆಂಕ (ಲೆಂಕಿಗ), ಸೇವಕ; ಭಕ್ತ; ಬಂಟ.

ಲೆಂಕಿತಿ ಸೇವಕಿ, ದಾಸಿ, ಲೆಂಕೆ.

ಲೇಖ ಲಿಪಿ, ಬರಹ; ಶಾಸನ; ಬರಹರೂಪದ ದಾಖಲೆ; ಒಬ್ಬ ದೇವತೆ.

— ಇಸು ಬರೆ.

— ಕ ಬರಹಗಾರ; ಬರೆದವ; ಗ್ರಂಥಕರ್ತ.

— ನ ಬರವಣಿಗೆ, ಬರಹ; ಕಾಗದಪತ್ರ.

ಲೇಣಾ ಕೊಳುವಿಕೆ; ಸಾಲ ಕೊಳುವಿಕೆ.

— ದೇಣೆ ಕೊಳುವಿಕೆ ಕೊಡುವಿಕೆ; ಕಡ ಕಟ್ಟು, ಕೊಡುಕೊಳ್ಳು.

ಲೇಪ ಹಚ್ಚುವುದು, ಬಳಿಯುವುದು; ಮುಲಮು; ಸವರುವುದು; ಸವರುವ ವಸ್ತು.

ಲೇಲಿಹಾನ ನಾಲಗೆ ಚಪ್ಪರಿಸಿ ನಿಡಿಯುವಿಕೆ.

ಲೇವಡಿ ಪರಿಹಾಸ್ಯ, ಅಣಕ.

ಲೇವಾದೇವಿ ಕೊಳುವಿಕೆ ಕೊಡುವಿಕೆ; ವ್ಯವಹಾರ.

ಲೇಶ ಚೂರು, ತುಣುಕು; ಸ್ವಲ್ಪ, ತುಸು.

— ಮಾತ್ರುಸ್ವಲ್ಪವಾದರೂ,ಇಷ್ಟಾದರೂ.

ಲೇಶ್ಯೆ ಕಾಂತಿ, ಹೊಳಹು.

ಲೇಸಿಗ ಯೋಗ್ಯ; ಧೀರ.

ಲೇಸು ಪಾಡು, ಒಳ್ಳೆಯದು; ಮೇಲು, ಉತ್ತಮ, ಉತ್ಕೃಷ್ಟ; ಸ್ವಲ್ಪ ಭಾಗ, ಲೇಶ(ಸಂ).

ಲೇಹ ನೆಕ್ಕುವುದು; ನೆಕ್ಕುವ ತಿಂಡಿ.

ಲೇಹ್ಯ ನೆಕ್ಕತಕ್ಕ ಔಷಧ ಮೊದಲಾದುವು.

ಲೈಂಗ್ಯ ಲಿಂಗಕ್ಕೆ ಸಂಬಂಧಿಸಿದ.

ಲೊಚ ಗೌಳಿ (ಹಲ್ಲಿ) ಕೂಗು.

— ಕುಟ್ಟು ಗೌಳಿ (ಹಲ್ಲಿ) ಕೂಗುವುದು.

ಲೊಟಕು ಬಯ್ಯು.

ಲೊಟ್ಟೆ ಸುಳ್ಳು, ಠಕ್ಕು; ಶೂನ್ಯ, ಪೊಳ್ಳು; ನಾಲಿಗೆ ಸಡಲಿಸುವಿಕೆ.

ಲೊತ್ತ ಉಳಿ, ಕುಣಿ; ಡೊಗರು.

ಲೊದಡಿ ಕಫ.

ಲೊದಳಿ ಲೋಳೆ; ಲಾಲಾಜಲ, ಜೊಲ್ಲು.

ಲೋಕ ಪ್ರಪಂಚ; ಪ್ರಾಂತ; ಜನ; ಸಾಮಾನ್ಯ ಜನ ವರ್ಗ; ನೋಟ; ಜಗತ್ತು.

— ತ್ರಯ ಸ್ವರ್ಗ,ಮರ್ತ್ಯ,ಪಾತಾಳಗಳು.

ಲೋಕನ ನೋಡುವಿಕೆ; ಪರಿಶೀಲನೆ.

ಲೋಕರೂಢಿ ಪರಂಪರೆ; ಕಟ್ಟಲೆಯಾಗಿ ಬಂದುದು, ನಡವಳಿ.

ಲೋಕವಾರ್ತೆ ಸುದ್ದಿ.

ಲೋಕಾಯತ ಲೋಕದಲ್ಲಿ ಬೆಳೆದ, ಕಷ್ಟವಿಲ್ಲದೆ ಸಿದ್ಧಿಯಾಗುವ ಒಂದು ನಾಸ್ತಿಕ ಮತ, ಚಾರ್ವಾಕ ಮತ.

ಲೋಕೋಕ್ತಿ ನಾಣ್ಣುಡಿ, ಗಾದೆಮಾತು.

ಲೋಕೋತ್ತರ ಬಹುಕಾಲ ಉಳಿಯುವ; ಈ ಲೋಕಕ್ಕೆ ಮೀರಿದ; ಅಸಾಮಾನ್ಯ.

ಲೋಗ (ದ್ಭ) ಲೋಕ (ಸಂ), ಮನುಷ್ಯ; ಮನುಷ್ಯಜಾತಿ; ಪರಕೀಯನಾದವ.

— ಅರ್ ಪರಕೀಯರು, ಅನ್ಯರು; ಜನರು.

ಲೋಚಕ ಮೊಂಡ; ಮಸಿ; ಕನೀನಿಕೆ, ಆಲಿ.

ಲೋಚನ ಕಣ್ಣು; ಎರಡು ಎಂಬ ಸಂಖ್ಯೆ; ಕಾಂತಿ.

— ವಾರಿ ಕಣ್ಣೀರು, ಕಂಬನಿ.

ಲೋಚು ತಲೆ ಕೂದಲನ್ನು ಕೀಳಿಸಿಕೊಳ್ಳು.

ಲೋಟಾ ಥಾಲಿ; ಒಂದು ಪಾರಿವಾಳ ಜಾತಿ.

ಲೋಟಿಸು ಹೊರಳು; ಗೆಯ್ಯು.

ಲೋಡು (ಲೋಡಿಗೆ), ದಿಂಬು, ತಿವಾಸಿ, ತೆಕ್ಕೆ.

ಲೋಧ್ರ ಲೊದ್ದಗೆ, ಬಿಳಿ ಹೂವಿನ ಒಂದು ಮರ, ಬಾಗೀಮರ.

ಲೋಪ ಕೊರತೆ, ಐಬು; ಮುರಿಯುವಿಕೆ, ನಾಶ;ಮಾಡದಿರುವಿಕೆ; ರದ್ದುಮಾಡುವಿಕೆ
—ಇಸು ಬಿಡು, ವಜಾಮಾಡು, ಇಲ್ಲದಂತೆ
ಲೋಪಾಮುದ್ರೆ ವಿದರ್ಭರಾಜನ ಮಗಳು, ಅಗಸ್ತ್ಯ ಋಷಿಯ ಹೆಂಡತಿ.
ಲೋಬಾನ ಅಗಿಲುಗಂಧ, ಧೂಪ, ಗುಗ್ಗುಳ.
ಲೋಭ ಪರರ ವಸ್ತುವಿಗಾಗಿ ಹಂಬಲ, ಅತ್ಯಾಶೆ; ಕೃಪಣತೆ.
ಲೋಭಿ ಕೃಪಣ, ಜಿಪುಣ, ಆಸೆಪಿನಾರಿ.
ಲೋಮ (ರೋಮ).
ಲೋಲ ಚಂಚಲ; ನಡುಗುವ; ಅಲುಗಾಡುವ; ಆಶೆ; ಆಸಕ್ತನಾದವ; ಕಾಮುಕ, ವಿಲಾಸ ಪ್ರಿಯ; ಸಂತೋಷ.
—ನ ಅಲೆತ, ಒಲೆತ.
ಲೋಲುಪ ಅತ್ಯಾಶೆಯುಳ್ಳವ; ಅತ್ಯಾಸಕ್ತ.
—ತೆ ಅತ್ಯಾಸೆ; ಅತ್ಯಾಸಕ್ತಿ, ಕಡುಹಂಬಲ
ಲೋಲೆ ಚಂಚಲೆ; ಆನಂದವಶಳು; ಭೋಗಿ.
ಲೋವೆ ಇಳಿಜಾರಾದ ಮಾಡು; ಪೌಳಿಯ ಮಾಡು; ಥಾಟು, ಚುಂಚು, ಸೂರು.
ಲೋಷ್ಟ ಮಣ್ಣು ಹೆಂಟೆ, ಮಣ್ಣುಮುದ್ದೆ.
ಲೋಹ ಒಂದು ಧಾತು, ತಾಮ್ರದಂಥ ವಸ್ತು; ರಕ್ತ; ಆಯುಧ; ಕೆಂಪು; ಕೆಂಚು.
—ಕಾರ ಕಮ್ಮಾರ; ಕಬ್ಬಿಣದ ಕೆಲಸ ಮಾಡುವವ.
ಲೋಹಕಾಂತ (ಲೋಹಚುಂಬಕ), ಸೂಜಿ ಕಲ್ಲು, ಅಯಸ್ಕಾಂತ.
ಲೋಹವರ ಲೋಹಗಳಲ್ಲಿ ಉತ್ತಮ, ಚಿನ್ನ.
ಲೋಹಿತ ಕೆಂಬಣ್ಣ; ರಕ್ತ.
ಲೋಹಿತಾಕ್ಷ ಕೆಂಪು ಕಣ್ಣು ಉಳ್ಳುದು, ಕೋಗಿಲೆ; ವಿಷ್ಣು; ಹರಿಶ್ಚಂದ್ರನ ಮಗ.
ಲೋಹಿತಾಂಗ ಕೆಂಪು ಬಣ್ಣದ್ದು; ಅಂಗಾರಕ ಗ್ರಹ.
ಲೋಳೆ (ಲೋಳಿ), ಜೊಲ್ಲು; ಬಂಕೆ; ಅಂಟು; ತತ್ತಿಯೊಳಗಿನ ರಸ.
ಲೌಕಾಯತಿಕ ಚಾರ್ವಾಕ ಮತೀಯ; ನಾಸ್ತಿಕವಾದಿ.
ಲೌಕಿಕ ಲೋಕಪ್ರಸಿದ್ಧವಾದ; ಲೋಕಕ್ಕೆ ಸಂಬಂಧಿಸಿದ; ಪಾರಮಾರ್ಥವಲ್ಲದ.
ಲೌಡಿ (ನೋಡು: ಲವುಡಿ).
ಲೌಲ್ಯತೆ ಚಾಂಚಲ್ಯಭಾವ, ಅಸ್ಥಿರತೆ.

# ವ

ವಕ ಬಕ.
ವಕಾಲತ್ತು ವಕೀಲಿ, ಒಬ್ಬನ ಪರವಾಗಿ ವಾದಿಸುವ ಕೆಲಸ.
ವಕೀಲ ಒಬ್ಬರ ಪರವಾಗಿ ವಾದಿಸುವವ; ರಾಯಭಾರಿ.
ವಕೀಲಿ ವಕೀಲನ ಉದ್ಯೋಗ; ರಾಯಭಾರ.
ವಕುಲ (ಬಕುಳ), ಪಗಡೆ ಮರ; ನಾಗಕೇಸರ.
ವಕ್ತವ್ಯ ವಾಗ್ಮಿತೆ, ಮಾತುಗಾರಿಕೆ; ಹೇಳಬೇಕಾದ, ಹೇಳಬಹುದಾದ.
ವಕ್ತಾರ (ವಕ್ತೃ), ವಾಗ್ಮಿ, ಮಾತುಗಾರ, ಮಾತುಬಲ್ಲವ; ಭಾಷಣಕಾರ.
ವಕ್ತ್ರ ಬಾಯಿ; ಮುಖ.
ವಕ್ರ ಕೊಂಕು, ಡೊಂಕು; ಕ್ರೂರ; ಶನಿ; ಮಂಗಳ.
—ಉಕ್ತಿ ಕೊಂಕುನುಡಿ, ಕಪಟದಮಾತು.
ವಕ್ರಗ್ರೀವ ಡೊಂಕು ಕತ್ತು; ಡೊಂಕು ಕತ್ತಿನದು, ಒಂಟೆ.
ವಕ್ರಾಂಗ ಡೊಂಕಾದ ಅವಯವ ಉಳ್ಳುದು, ಹಂಸ.
ವಕ್ರಿ ಡೊಂಕು ಬುದ್ಧಿಯವ; ಡೊಂಕಾದುದು, ಕೊಂಕಾದುದು; ಕಪಟ.
ವಕ್ಷಸ್ಥಲ ಎದೆ.

ವಕ್ಷೋಜ ಎದೆಯಲ್ಲಿ ಹುಟ್ಟಿದುದು, ಮೊಲೆ, ಸ್ತನ.
ವಗೈರೆ ಇತ್ಯಾದಿ; ಮೊದಲಾದ, ಮುಂತಾದ.
ವಚನ ಮಾತು; ಸಂಖ್ಯೆ ಸೂಚಿಸುವ ಪದ; ಬಲ್ಲಿದರ ಉಕ್ತಿ; ವೀರಶೈವ ಸಾಹಿತ್ಯದ ಒಂದು ಬಗೆ.
—ತ್ರಯ ಏಕ, ದ್ವಿ, ಬಹುವಚನಗಳು.
—ಸ್ಥ ಮಾತುಗಾರ; ನಂಬಿಕಸ್ತ, ಏಕೀನಿ.
ವಚನೀಯ ಹೇಳತಕ್ಕುದು; ನಿಂದೆಗೆತಕ್ಕುದು; ಲೋಕಾಪವಾದ, ನಿಂದೆ.
ವಚೆ (ಬಜೆ); ಒಂದು ಕಾರವಾದ ಗಡ್ಡೆ.
ವಚೋಲಹರಿ ಮಾತಿನ ಪ್ರವಾಹ.
ವಜನು (ವಜನೆ), ಭಾರ.
ವಜಾ ರದ್ದು, ಇಲ್ಲದಂತೆ ಮಾಡು; ಕಳೆತ.
—ವಟ್ಟು ಕೊಡುವ ಅಂಶ ಕೊಟ್ಟು ಉಳಿಯಿಸುವುದು; ಆದಾಯ ಸಂದಾಯ, ಚುಕ್ತ
ವಜೀರ ಮುಖ್ಯ ಮಂತ್ರಿ, ಪ್ರಧಾನಿ.
ವಜ್ಜೆ (ಒಜ್ಜೆ), ಭಾರ; ಹೊರೆ.
ವಜ್ರ ಬಜ್ಜರ (ದ್ಭ), ಹೀರಕ, ಒಂದು ರತ್ನ; ಇಂದ್ರನ ಒಂದು ಆಯುಧ; ಕೃಷ್ಣನ ಮೊಮ್ಮಗನೊಬ್ಬ; ಕಠಿಣ; ಒಂದು ಬಗೆಯ ಅಂಟು, ಸರಿ.
ವಜ್ರಕವಚ ಕಂಚುಕ; ಆಯುಧಗಳಿಂದ ಶರೀರವನ್ನು ರಕ್ಷಿಸಲು ಬೇಕಾದ ರಕ್ಷೆ.
ವಜ್ರದಂತ ಕಾಡುಹಂದಿ, ಇಲಿ.
ವಜ್ರದೇಹಿ ವಜ್ರಕಾಯ; ಗಟ್ಟಿಮುಟ್ಟಾದ ಶರೀರವುಳ್ಳವ.
ವಜ್ರಪಾಣಿ ವಜ್ರಾಯುಧ ಹಿಡಿದವ, ಇಂದ್ರ.
ವಜ್ರಪುಷ್ಪ ಎಳ್ಳ ಹೂ.
ವಜ್ರಮುಷ್ಟಿ ಬಲವಾದ ಹಿಡಿತ; ಒಂದು ಬಗೆ ಆಯುಧ; ಒಂದು ಮೂಲಿಕೆ.
ವಜ್ರಾಂಗ ತಾರಕಾಸುರನ ತಂದೆ.
ವಜ್ರಿ ವಜ್ರಾಯುಧವುಳ್ಳವ, ಇಂದ್ರ.
ವಟ ಆಲದ ಮರ; ಹಗ್ಗ, ದಾರ; ಬಂಧ; ಗುಳಿಗೆ; ಕಾಮು; ಕವಡೆ; ಉಚ್ಛಿಷ್ಟ; ಸೊನ್ನೆ.
—ಕುಡು ಗೋಣಗು, ಗುಸುಗುಡು.
ವಟರ್ ಒಡೆ, ಉದ್ದಿನಿಂದ ಮಾಡುವ ಒಂದು ಕಜ್ಜಾಯ; ಗುಳಿಗೆ; ಗೋಣಗುಡು, ಗುಸುಗುಡು.
ವಟಾರ ಸರಹದ್ದು, ಆಸುಪಾಸು, ಆಜುಬಾಜು; ಆವಾರದೊಳಗೆ ಇರುವ ಮನೆಗಳ ಗುಂಪು.
ವಟಿ (ವಟಕೆ), ಗುಳಿಗೆ, ಮಾತ್ರೆ.
ವಟು ಬ್ರಹ್ಮಚಾರಿ, ಮಾಣಿ.
ವಟ್ಟೆ ದಲ್ಲಾಲಿ; ದೊಡ್ಡ ನಾಣ್ಯ ಮುರಿದರೆ ಕೊಡುವ ಪ್ರತಿಫಲ.
ವಡ (ವಾಟ), ತೋಟ, ಉದ್ಯಾನ.
ವಡಬಾಗ್ನಿ ವಡಬೆ, ಕಡಲ್ಗಿಚ್ಚು; ಹೆಣ್ಣು ಕುದುರೆ
ವಡಬೆ (ವಡಬಾನಲ).
ವಡವೆ ಬಡಬೆ, ಹೆಣ್ಣು ಕುದುರೆ; ದಾಸಿ; ಸೂಳೆ; ಅಶ್ವಿನಿ ದೇವತೆ; ಒಕ್ಕಲಗಿತ್ತಿ.
ವಡಿಶ ಗಾಣ, ಗಾಳ.
ವಡೆ ಉದ್ದಿನ ಒಂದು ತಿಂಡಿ.
ವಡ್ಡಂತೀ (ದ್ಭ), ವರ್ಧಂತಿ (ಸಂ), ಹುಟ್ಟಿದ ದಿನ; ಅವತರಿಸಿದ ದಿನ.
ವಣಿಕ್ ವ್ಯಾಪಾರಿ, ಬಣಜಿಗ.
ವಣಿಗ್ಫಾಟ ವ್ಯಾಪಾರಿಗಳ ಅಂಗಡಿ; ಅಂಗಡಿ ಬೀದಿ.
ವಣಿಜ ಬಣಜಿಗ, ವ್ಯಾಪಾರಿ.
ವತ್ ಹಾಗೆ; ಅಂತೆ; ಸಾದೃಶ್ಯ.
ವತನ ಭಾರ, ಒಜ್ಜೆ; ತೂಕ; ಹಿರಿಯರಿಂದ ಬಂದ ಆಸ್ತಿ, ಸಂಪತ್ತು, ಸ್ಥಿತಿ.
ವತಿ ಉಳ್ಳವಳು; ಪರವಾಗಿ; ಬಗ್ಗೆ.
ವತ್ಸ ಕರು; ಪ್ರೀತಿ ಸೂಚಕ ಕರೆ; ಎದೆ; ವರುಣ; ಕುರುಹು.
ವತ್ಸನಾಭ ಒಂದು ತೀಕ್ಷ್ಣ ವಿಷ, ಬಚನಾಗ.
ವತ್ಸರ ವರ್ಷ, ಸಂವತ್ಸರ.

ವತ್ಸಲ ಪ್ರೀತಿಯುಳ್ಳ, ಪ್ರಿಯ; ಆಸಕ್ತ.
ವತ್ಸೆ ಹೆಣ್ಣು ಕರು; ಮಗು; ಮಗಳೆ; ಪ್ರಿಯೆ.
ವದನ ಮೋರೆ, ಮುಖ; ಬಾಯಿ.
ವದನಕೂಟ ಚುಂಬನ, ಮುತ್ತು.
ವದಾನ್ಯ ಬಲುದಾನ ಕೊಡುವವ, ಉದಾರಿ.
ವದ್ಯ ಹೇಳುವ, ಆಡುವ, ಮಾತಾಡುವ.
ವಧಿಸು ಕೊಲ್ಲು; ನಾಶಮಾಡು.
ವಧು ಹೆಂಡತಿ, ಹೊಸತಾಗಿ ಮದುವೆಯಾದ ವಳು, ಮದುಮಗಳು.
ವಧೂಟೀ ಅಲ್ಪ ವಯಸ್ಸಿನ ಸ್ತ್ರೀ; ಪ್ರಾಯಕ್ಕೆ ಬಂದವಳು; ಸ್ತ್ರೀ ಸಮೂಹ.
ವಧೂಜನ ಸ್ತ್ರೀ ಜನ.
ವಧೂವರ ಮದುಮಗ ಮದುವಣಿಗಿತ್ತಿ; ಮದುಮಕ್ಕಳು.
ವಧೆ (ವಧ), ಕೊಲೆ; ಬಡಿತ.
ವಧ್ಯ ನಾಶಕ್ಕೆ ಯೋಗ್ಯವಾದ.
ವನ (ಬನ), ಮರಗಳ ಗುಂಪು, ಕಾಡು; ನೀರು, ನಿವಾಸಸ್ಥಾನ; ಮನೆ; ಕಾಂತಿ.
—ಜ ನೀರಲ್ಲಿ ಹುಟ್ಟಿದುದು, ತಾವರೆ.
—ದೇವತೆ ಕಾಡಿನ ಅಧಿಕಾರಿಣಿಯಾದ ಒಬ್ಬ ದೇವತೆ.
—ಧಿ ನೀರಿನ ಆಶ್ರಯಸ್ಥಾನ, ಸಮುದ್ರ.
ವನನ ಪ್ರೀತಿಯ.
ವನಪಶು ಕಾಡು ಮೃಗ.
ವನಪ್ರಿಯ ಕೋಗಿಲೆ.
ವನಭೋಜನ ಕಾರ್ತಿಕಮಾಸದಲ್ಲಿ ವನ ದಲ್ಲಿ ಸೇರಿ ಮಾಡುವ ಊಟ.
ವನಮಾಲಿ ವನಮಾಲೆ ಧರಿಸಿದವ, ವಿಷ್ಣು; ಕೃಷ್ಣ.
ವನಮಾಲೆ ಹೂ ಎಲೆಗಳನ್ನು ಸೇರಿಸಿ ಮಾಡಿದ ಮಾಲೆ; ನೀಳ ಸರ.
ವನರಾಜಿ ಸಾಲುಮರ; ಕಾನನ.
ವನರುಹ ತಾವರೆ.
ವನವಾಸ ಅರಣ್ಯವಾಸ; ಕಾಡನ್ನು ಪರಿಮಳಿ ಸುವುದು.
ವನಸ್ಪತಿ ಅಶ್ವತ್ಥ ಮೊದಲಾದ ಮರ; ಹೂ ವಾಗದೆ ಹಣ್ಣಾಗುವ ಮರ.
ವನಾಯು ಅರಬಿದೇಶ, ಅರಬಸ್ತಾನ.
ವನಾಶ್ನ ತೋಳ, ಕೋಕ.
ವನಿ ದೊಡ್ಡ ಜಾತಿ ಹುಲ್ಲು, ಆಪು.
ವನಿತೆ ಸ್ತ್ರೀ; ಹೆಂಗುಸು; ಸೂಳೆ.
ವನೀಪಕ ಬೇಡುವವ, ಯಾಚಕ, ತಿರುಕ.
ವನೀಯಕ ಭಿಕ್ಷುಕ, ತಿರುಕ.
ವನೌಕಸ ವನದಲ್ಲಿ ವಾಸಮಾಡುವುದು, ಕಪಿ; ಮುನಿ, ಋಷಿ.
ವನ್ಯ ಕಾಡಿನ, ಅರಣ್ಯಕ್ಕೆ ಸಂಬಂಧಿಸಿದ.
ವಪನ ಕ್ಷೌರ; ಬಿತ್ತನೆ.
ವಪುಸ್ (ವಪ್ರ) ರೂಪ, ತೋರಿಕೆ; ಶರೀರ; ಸುಂದರ ರೂಪ.
ವಪೆ ಪ್ರಾಣಿಗಳ ರಕ್ತಸಾರ; ಪ್ರಾಣಿಯ ಒಂದು ಅವಯವ; ಕುಣಿ, ಡೊಗರು.
ವಪ್ತೃ ಕ್ಷೌರಕ; ರೈತ; ಸಂತಾನಕಾರಿ.
ವಪ್ರ ತೀರ; ಕಾಲುವೆ; ಕೋಟೆಯ ಬುರುಜು, ಹುಡೆ; ಪೌಳಿ, ಪಾಗಾರ; ಸೀಸ; ಪಾಪ; ಬಿತ್ತನೆ.
ವಮನ ವಾಂತಿ, ಒಗಡಿಕೆ, ಓಕರಿಕೆ; ನೋವು.
ವಯ (ವಯಸ್ಸು), ಪ್ರಾಯ, ಹರೆಯ; ಹಕ್ಕಿ.
—ಸ್ಕ ಪ್ರಾಯಸ್ಥ, ಹರೆಯ.
ವಯುನ ರೀತಿ; ಸಾಧನ; ಸೊಗಸು; ಒಳಿತು.
ವಯೋವೃದ್ಧ ಮುದುಕ.
ವಯ್ಯಾರ (ಒಯ್ಯಾರ), ಬೆಡಗು, ಬಿನ್ನಾಣ, ವಿಲಾಸ.
ವಯ್ಯಾರಿ ಬಿನ್ನಾಣಿ, ವಿಲಾಸಿನಿ.
ವಯ್ಯಾಳಿ (ಒಯ್ಯಾಳಿ), ಸವಾರ; ಸರ್ಕೀಟು, ಸವಾರಿ.
—ಇಗ ಸವಾರಿಮಾಡುವವ.

ವರ ಶ್ರೇಷ್ಠ; ದೇವರಿಂದ ಪಡೆದ ಅನುಗ್ರಹ; ಮದುಮಗ; ಸೀಮೆ, ಅವಕಾಶ; ಬಯಕೆ, ಇಚ್ಛೆ; ದಾನ; ಆವರಿಸುವವ; ನಾಲ್ಕು ರೂಪಾಯಿ (ವರಹ); ಒಂದು ಚಿನ್ನದ ನಾಣ್ಯ.

—ದ ವರವನ್ನು ಕೊಡುವವ.

—ದೆ ವರ ನೀಡುವವಳು; ಸರಸ್ವತಿ; ಶಿವಮೊಗ್ಗ ಜಿಲ್ಲೆಯ ಒಂದು ನದಿ.

ವರಕ ಹೊದಿಕೆ,ರೇಕು, ಮುಲಮು; ಬಯಕೆ; ವರಹ; ಕೇಳುವವ.

ವರಕು ವರೇಕು; ಗಿಲಿಟು; ವರ್ಣ ತಗಡು, ತೆಳ್ಳಗಿನ ಚಿನ್ನದ ಹಾಳೆ; ಆ ಹಾಳೆಯನ್ನು ಇನ್ನೊಂದಕ್ಕೆ ಅಂಟಿಸುವ ಕೆಲಸ.

ವರಟೆ ಕಣಜ; ಕಡುಜೀರಿಗೆ.

ವರಣ ಆರಿಸು; ಬೇಡು; ಮಧು; ಮುಚ್ಚು; ಸುತ್ತು; ಪ್ರೀತಿಸು; ಕನ್ಯಾಶೋಧೆ; ಸುತ್ತುವಿಕೆ; ಒಂದು ನದಿ.

—ಮಾಲೆ ವಿವಾಹಕಾಲದಲ್ಲಿ ಕನ್ಯೆ ವರನ ಕೊರಳಿಗೆ ಹಾಕುವ ಮಾಲೆ.

ವರಣ್ಯ ಮನೋಹರ.

ವರತ್ರ ದಟ್ಟಿ, ತೊಗಲ ಪಟ್ಟಿ, ತಂಗು.

ವರದಕ್ಷಿಣೆ ವಿವಾಹಕಾಲದಲ್ಲಿ ವರನಿಗೆ ಕೊಡುವ ದಕ್ಷಿಣೆ, ಶುಲ್ಕ.

ವರದರಾಜ ಕಂಚಿಯ ದೇವರ ವಿಗ್ರಹ.

ವರದಿ ವಾರ್ತೆ, ಸುದ್ದಿ; ಒಂದು ಕಾಲದ ಸುದ್ದಿ ಬರೆದ ಬರಹ.

ವರಪೂಜೆ ವಧುವನ್ನು ವರನಿಗೆ ಕೊಡುವ ಕಾಲದ ಸಮ್ಮಾನ; ವರನನ್ನು ಇದಿರುಗೊಳ್ಳುವ ಉತ್ಸವ.

ವರಯಿತ (ದ್ಭ) ವರಯಿತೃ(ಸಂ), ಕನ್ಯಾರ್ಥಿ, ಮದುವಣಿಗ.

ವರರುಚಿ ಒಬ್ಬ ಪ್ರಾಚೀನ ನಿಘಂಟುಕಾರ.

ವರಲೆ (ಒರಲೆ), ಗೆದ್ದಲು, ಬಿಳಿ ಇರುವೆ; ಹಂಸೆ.

ವರವಿ ಹರವಿ.

ವರಸೆ ಒಂದು ಸಂಗತಿ; ಒಂದು ಲಹರಿ; ರಾಗ ಸಂಚಾರ; ಖಡ್ಗಸಂಚಾರ; ನೃತ್ಯದ ಗತ್ತು; ಮನೆತನ.

ವರಾಕ ದುಃಖಕರ; ಸಣ್ಣ; ಯುದ್ಧ.

ವರಾಟ (ವಾರಾಟ), ಕವಡೆ; ಮಹಾರಾಷ್ಟ್ರದ ಒಂದು ಪ್ರಾಂತ ಭಾಗ, ವರ್ಹಾಡ.

ವರಾಡ ವಂತಿಗೆ, ಚಂದಾ.

ವರಾತ (ವರಾತು), ಸಾಲಕ್ಕಾಗಿ ಹಟಹಿಡಿಯುವಿಕೆ; ಬಲವಂತದ ಕೇಳಿಕೆ.

ವರಾರೋಹೆ ಚೆಲುವೆ; ನಡು; ಶಿಗ.

ವರಾಹ ಕಾಡುಹಂದಿ.

—ಅವತಾರ ವಿಷ್ಣುವಿನ ಮೂರನೆಯ ಅವತಾರ. ಹಿರಣ್ಯಾಕ್ಷನೆಂಬ ರಕ್ಕಸನ ವಧೆಗಾಗಿ ವಿಷ್ಣು ಈ ರೂಪು ತೊಟ್ಟನು.

ವರಾಳಿ ಒಂದು ರಾಗ.

ವರಾಂಗ ಉತ್ತಮ ಅವಯವ, ತಲೆ; ಯೋನಿ; ಆನೆ; ಮನ್ಮಥ.

ವರಿ ಮರಿ; ಕಂದಾಯ, ತೆರಿಗೆ; ತನಕ, ವರೆಗೆ.

ವರಿವಸ್ಯೆ ಸೇವೆ; ಭಕ್ತಿ; ದಾಸ್ಯ.

ವರಿಷ್ಠ ಉತ್ತಮ; ವಿಸ್ತಾರ; ತಾಮ್ರ.

ವರಿಸು ಸ್ವೀಕರಿಸು; ಅಪೇಕ್ಷಿಸು; ಮದುವೆಯಾಗು.

ವರುಣ ಪ್ರಾಚೀನ ವೈದಿಕ ದೇವತೆ. ಈತನು ವಿಶ್ವದ ಒಡೆಯನೆಂದೂ ಹಗಲಿಗೆ ಯಜಮಾನನೆಂದೂ ಹೇಳಿಕೆಯಿದೆ. ಕ್ರಮೇಣ ಆತನು ಆದಿತ್ಯರಲ್ಲಿ ಒಬ್ಬನೆನಿಸುತ್ತಾನೆ. ಅವನು ಸಮುದ್ರರಾಜನು. ಅವನಿಗೆ ನೆಗಳೆ ವಾಹನ.

ವರುಣಾನಿ ವರುಣನ ಹೆಂಡತಿ.

ವರುಷ ಬರಿಸ (ದ್ಭ), ವರ್ಷ,(ಸಂ), ಹನ್ನೆರಡು ತಿಂಗಳ ಕಾಲ; ಮಳೆ.

ವರೂಥ ರಥ; ಶಕಟ; ಬಂಡಿ.

ವರೂಥಿನಿ ರಥವುಳ್ಳದು; ಸೇನೆ.

ವರೆ ಮಿತಿ, ಮೇರೆ; ಅರೆ, ಅರ್ಧ; ವರೆಗೆ, ತನಕ; ಶ್ರೇಷ್ಠ ಸ್ತ್ರೀ; ಪತಿಯನ್ನಾರಿಸು ವವಳು; ಒರೆ, ನುರಿ.
ವರೆಗೆ ತನಕ.
ವರೇಕು ವೀಣೆಯ ಒಂದು ಬಗೆ ನುಡಿತ.
ವರೇಣ್ಯ ಶ್ರೇಷ್ಠ, ಮುಖ್ಯ.
ವರ್ಗ ಒಂದೇ ವಿಧವಾದ ವಸ್ತುಗಳ ಗುಂಪು; ಅಕ್ಷರಗಳ ಗುಂಪು; ಒಂದಂಕೆಯನ್ನು ಅದ ರಿಂದ ಗುಣಿಸಿ ಬರುವ ಫಲ; ಬದಲಾವಣೆ; ಊರಿಂದೂರಿಗೆ ಕಳುಹುವುದು; ದರ್ಜೆ.
ವರ್ಗಣಿ ವಂತಿಗೆ, ಚಂದಾ.
ವರ್ಗಮೂಲ ಯಾವದನ್ನು ಅದರಿಂದಲೇ ಗುಣಿಸಿ ಈ ಸಂಖ್ಯೆ ಬಂದಿತೋ ಅದು.
ವರ್ಗೀಯ ವರ್ಗಕ್ಕೆ ಇಲ್ಲವೆ ಗುಂಪಿಗೆ ಸೇರಿದ.
ವರ್ಚಸ್ಸು (ವರ್ಚಸ್), ರಭಸ; ಉತ್ಸಾಹ; ಕಾಂತಿ; ಪ್ರಕಾಶ; ಪ್ರಭಾವ; ಶಕ್ತಿಪ್ರಸಾರ.
ವರ್ಚಸ್ವಿ ತೇಜಸ್ವಿ; ಶಕ್ತಿಯುತ.
ವರ್ಜನ ಬಿಡುವಿಕೆ, ತ್ಯಜಿಸುವಿಕೆ; ಹಾನಿ.
ವರ್ಜಿಸು ಬಿಡು, ತೊಲಗಿಸು.
ವರ್ಣ ಬಣ್ಣ (ದ್ಭ); ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿಗಳು; ಆಕಾರ ಮೊದಲಾದ ಅಕ್ಷರ; ಸ್ತುತಿ, ಹೊಗಳಿಕೆ; ಕಾಂತಿ; ಗುಣ; ವೇಷ.
— ಇಸು ಬಣ್ಣಿಸು; ಹೊಗಳು.
— ಕ ವರ್ಣನೆಗಳಿಂದ ಕೂಡಿದ್ದು, ಕಾವ್ಯ ಜಾತಿ; ಸೋಗು; ಮುಖವಾಡ; ಗಂಧ.
ವರ್ಣನ (ವರ್ಣನೆ), ಬಣ್ಣನೆ; ವಿವರಣೆ; ಸ್ತುತಿ, ಹೊಗಳಿಕೆ.
ವರ್ಣಸಂಕರ ಬೇರೆ ಬೇರೆ ವರ್ಣದವರ ಶರೀರಸಂಬಂಧದಿಂದ ಕಲಬೆರಕೆಯಾಗು ವುದು; ಹೊಸ ಜಾತಿಗಳ ಉತ್ಪನ್ನ.
ವರ್ಣಿ ಬಣ್ಣವುಳ್ಳ; ಚಿತ್ರಕಾರ; ಬ್ರಹ್ಮಚಾರಿ.
ವರ್ಣಿಕೆ ನಟ, ನರ್ತಕ ಮೊದಲಾದವರು ಬಣ್ಣ ಬಳಿವ ಬಗೆ; ಶೃಂಗಾರ ವಿಧಾನ; ಚಿತ್ರಕಾರನು ಬಣ್ಣ ತುಂಬಿಸುವ ರೀತಿ.
ವರ್ತ ದಾರಿ, ರಸ್ತೆ; ತಿರುಗುವಿಕೆ; ಚಲನೆ; ಉದ್ಯೋಗ; ಪ್ರವೃತ್ತಿ.
ವರ್ತಕ ವ್ಯಾಪಾರಿ; ತಿರುಗುವವ; ಅನುಸರಿ ಸುವವ; ಗೊರಸು, ಕೊಳಗ.
ವರ್ತನ (ವರ್ತನೆ), ನಡತೆ, ನಡವಳಿ; ರೀತಿ; ಬಗೆ.
ವರ್ತಮಾನ ಸುದ್ದಿ, ವಾರ್ತೆ; ಒಸಗೆ; ಈಗಿನ; ಇರುವ; ಸದ್ಯದ ಸಮಯ.
ವರ್ತಿ ಬತ್ತಿ(ದ್ಭ), ದೀಪದ ಎಣ್ಣೆ ಸೆಳೆಯುವ ಸಾಧನ; ನದಿಯ ಮರಳಿನಲ್ಲಿ ತೋಡುವ ಬಾವಿ.
ವರ್ತಿಕೆ ಒಂದು ಜಾತಿ ಕೌಜಲು ಹಕ್ಕಿ; ಬತ್ತಿ; ಹಿಂಜಿ; ಕುಚ್ಚು, ಕುಂಚು.
ವರ್ತಿಸು ನಡೆ; ತಿರುಗು; ಹಿಂಬಾಲಿಸು, ಚಲಿಸು; ವಿಧೇಯವಾಗಿ ನಡೆ; ಉದ್ಯೋಗಿಸು
ವರ್ತುಲ ಉರುಟಾದ, ವೃತ್ತಾಕಾರವಾದ; ಚೆಂಡು; ಉರುಟು, ದುಂಡು.
ವರ್ತ್ಮ ಸುಳಿ; ನೀರಸುಳಿ; ಎವೆ; ಹಾದಿ; ಉರುಳಿ ಮುಂದೆ ನಡೆಯುವುದು.
ವರ್ಧಕ ಹೆಚ್ಚುವ, ಬೆಳಸುವ, ವೃದ್ಧಿಮಾಡುವ.
ವರ್ಧನ ಬೆಳವಣಿಗೆ; ಹೆಚ್ಚಳ; ವಿಸ್ತರಣ; ಉನ್ನತಿ; ಉನ್ನತಿಮಾಡುವವ.
ವರ್ಧಮಾನ ಬದ್ದವಣ (ದ್ಭ); ಹೆಚ್ಚಳ, ಅಭಿ ವೃದ್ಧಿ; ಬಲ್ಮೆ; ಒಬ್ಬ ಅರ್ಹಂತ; ಅರಮನೆ.
ವರ್ಧಂತಿ ಹುಟ್ಟಿದ ದಿನ; ಅಭಿವೃದ್ಧಿ ಇಲ್ಲವೆ ಉತ್ಸಾಹದ ದಿನ; ಹೆಚ್ಚಳ.
ವರ್ಧಿಸು ವೃದ್ಧಿಗೊಳ್ಳು, ಹೆಚ್ಚು.
ವರ್ಮ ಕವಚ; ಸನ್ನಾಹ; ಕ್ಷತ್ರಿಯ ಹೆಸರನ್ನು ಸೂಚಿಸುವ ಪದ; ಅಪಕಾರದ ಕಡು ನೆನಹು.
ವರ್ಯ ಶ್ರೇಷ್ಠ; ಉತ್ತಮ; ಆರಿಸಲ್ಪಡುವ.

ವರ್ವರ ಬರ್ಬರ.
ವರ್ಷ (ಸಂ) ವರುಷ (ದ್ಭ), ಹನ್ನೆರಡು ತಿಂಗಳ ಕಾಲ; ಮಳೆ; ದೇಶ, ಭೂಖಂಡದ ಭಾಗ.
—ಣ ಮಳೆ ಸುರಿಸುವಿಕೆ.
ವರ್ಷಗಂದಿ ವರ್ಷಕ್ಕೊಮ್ಮೆ ಕರುಹಾಕುವ ದನ.
ವರ್ಷಫಲ ಯುಗಾದಿಯ ದಿನದ ಮೇಲಿಂದ ವರ್ಷದ ಭವಿಷ್ಯ ನಿರ್ಣಯ.
ವರ್ಷವರ ವೀರ್ಯಹೀನ, ಷಂಡ, ನಪುಂಸಕ.
ವರ್ಷಾ ಪ್ರತಿ ವರ್ಷ; ಮಳೆ.
—ಕಾಲ ಮಳೆಗಾಲ.
—ವರ್ಷ ಪ್ರತಿವರ್ಷ, ವರ್ಷವರ್ಷವೂ.
ವರ್ಷಾಭು ಕಪ್ಪೆ; ಇಂದ್ರಗೋಪವೆಂಬ ಮಿಂಚು ಹುಳ, ಹೊನ್ನಿಯ ಹುಳ.
ವರ್ಷಾಶನ ಇಡಿಯ ವರ್ಷಕ್ಕೆ ಊಟಕ್ಕೆ ಕೊಡುವ ಉಂಬಳಿ.
ವರ್ಷೀಯ ಅತಿ ವೃದ್ಧ, ಬಹು ಮುದುಕ.
ವರ್ಷ್ಮ ದೇಹ, ಶರೀರ.
ವಲ ಬಲ, ಸೇನೆ; ನಿಶ್ಚಯ; ಅಲ್ಲವೆ.
ವಲಭಿ ಮಾಡಿನ ಮುಚ್ಚಿಗೆ, ಮಾಡಿನ ಮರದ ರಚನೆ, ಚಪ್ಪರದ ಚಟ್ಟು.
ವಲಯ (ವಳಯ), ಬಳೆ; ಮಂಡಲ; ವೃತ್ತಾಕಾರದ ಆವರಣ; ಭೂಮಿಯನ್ನು ವೃತ್ತಾಂಶದಂತೆ ವಿಂಗಡಿಸಿ ಮಾಡಿದ ಪ್ರಾಂತ.
ವಲಲ ಅಜ್ಞಾತಕಾಲದಲ್ಲಿ ಭೀಮನಿಗಿದ್ದ ಒಂದು ಹೆಸರು.
ವಲಸೆ ಊರು ಬಿಡುವುದು.
ವಲಿತ ಸೀಮೆ, ಪ್ರಾಂತ, ಪ್ರದೇಶ.
ವಲಿಯ ಭಾರದ್ವಾಜ, ಕುಪ್ಪುಳು, ಕಾಜಾಣ, ಸಂಬಾರಕಾಗೆ.
ವಲಿರ ಒಡ್ಡ, ಕೋಸುಗಣ್ಣ, ಮೆಳ್ಳಗಣ್ಣ.
ವಲೀಮುಖ (ವಲಿ=ನೆಂಗೆ), ಮುಖದಲ್ಲಿ ನೆರಿಗೆಯುಳ್ಳುದ್ದು, ಕಪಿ.

ವಲ್ಕ ಮರದ ತೊಗಟೆ; ಮೀನಿನ ಹಿಣಿಜು; ಪರೆ.
—ಲ ಮರದ ಕೆತ್ತೆ; ನಾರುಬಟ್ಟೆ; ನಾರು ಸೀರೆ.
ವಲ್ಗನ ನೆಗೆದಾಟ, ಕುಪ್ಪಳಿಸುವಿಕೆ, ಜಿಗಿತ.
ವಲ್ಗೆ ವಾಘೆ, ಲಗಾಮು, ಕಡಿವಾಣ.
ವಲ್ಮೀಕ ಹುತ್ತ; ಗೆದ್ದಲು ಹುತ್ತ; ಬಾಪು.
ವಲ್ಲಕಿ ವೀಣೆ; ಎರಡು ತಂತಿಯ ಕಿನ್ನರಿ.
ವಲ್ಲಭ ಗಂಡ; ಪ್ರಿಯ; ಒಡೆಯ, ಯಜಮಾನ, ನಾಯಕ; ಬಲ್ಲಹ.
ವಲ್ಲಭಾಚಾರ್ಯ ಗುಜರಾತಿನ ಒಬ್ಬ ವೈಷ್ಣವ ಸಾಧು.
ವಲ್ಲಭೆ ಹೆಂಡತಿ, ಪ್ರಿಯೆ, ಇನಿಯೆ.
ವಲ್ಲಯಿಸು ಹಿಂದೆಗೆ, ಮೈದೆಗೆ, ಹಿಮ್ಮೆಟ್ಟು.
ವಲ್ಲರಿ ಮಂಜರಿ, ಗೊಂಚಲು, ಜೊಂಕೆ.
ವಲ್ಲವ ಅಡಿಗೆಯವ, ಬಾಣಸಿಗ; ಗೋಪ.
ವಲ್ಲಿ ವಲ್ಲೀ, ಬಳ್ಳಿ (ದ್ಭ), ಲತೆ, ಬೀಳು; ಭೂಮಿ.
ವಲ್ಲೂರ ಒಣಮೀನು; ಹಂದಿಯ ಮಾಂಸ; ಒಣ ಮಾಂಸ.
ವಶ ಸ್ವಾಧೀನ, ಅಧೀನ; ಪಳಗಿದ, ಈಲಾದ; ಆಸೆ; ಅಧಿಕಾರ; ಶಕ್ತಿ; ಯಜಮಾನಿಕೆ; ಹಿರಿಮೆ.
—ಕೊಳಿಸು ಸ್ವಾಧಿನಪಡಿಸಿಕೊಳ್ಳು, ಹದ್ದಿಗೆ ತರು; ಪಳಗಿಸು, ಈಲುಮಾಡು.
—ವರ್ತಿ ಸ್ವಾಧೀನವಿರುವ; ಅಧೀನವಾದ.
ವಶಂವದ ಪ್ರಿಯವಾಗಿ ಮಾತಾಡುವವ, ಪ್ರಿಯಂವದ.
ವಶಿಕ ಶೂನ್ಯ.
ವಶಿತ್ವ ಪಳಗಿಸುವಿಕೆ, ಸಾಧುಮಾಡುವಿಕೆ, ಈಲುಮಾಡುವುದು; ಸ್ವಾಧೀನಕ್ಕೆ ತರುವಿಕೆ; ಅಷ್ಟಸಿದ್ಧಿಗಳಲ್ಲೊಂದು.
ವಶಿಷ್ಠ (ವಸಿಷ್ಠ).
ವಶೀಕರಣ ಸ್ವಾಧೀನಗೊಳಿಸುವಿಕೆ; ಮಂಕು ಗೊಳಿಸುವಿಕೆ.

ವಶೀಭೂತ ವಶವಾದ, ಹಿಡಿತಕ್ಕೆ ಬಂದ.
ವಷಟ್ ಹವಿಸ್ಸನ್ನು ಅಗ್ನಿಗೆ ಅರ್ಪಿಸುವಾಗ ಹೇಳುವ ಒಂದು ಮಂತ್ರ.
ವಸ (ದ್ಭ) ವಶ (ಸಂ), ಅಧೀನ.
ವಸಡು (ಒಸಡಿ), ದವಡೆ.
ವಸತಿ ಬಸದಿ (ದ್ಭ), ಮನೆ; ನಿವಾಸ; ರಾತ್ರಿ; ಅನುಕೂಲತೆ; ವಲಸೆಹೋಗಿ ನೆಲಸುವ ಪ್ರದೇಶ, ವಸಾಹತು; ಜೈನಮಂದಿರ.
ವಸಥ ವಾಸಸ್ಥಾನ.
ವಸನ ವಸ್ತ್ರ, ಅರಿವೆ, ಬಟ್ಟೆ; ಹೊದ್ದಿಕೆ.
ವಸರ ಹಸರ; ಸಾಮಾನುಗಳನ್ನು ಬಿಡಿಸಿಟ್ಟು ಮಾರುವ ಅಂಗಡಿ.
ವಸಂತ ಬಸಂತ (ದ್ಭ), ಚೈತ್ರವೈಶಾಖಮಾಸಗಳು; ಒಂದು ರಾಗ; ಓಕುಳಿ.
—ಉತ್ಸವ ವಸಂತಕಾಲದ ಒಂದು ಹಬ್ಬ.
ವಸಂತದೂತ ಕೋಗಿಲೆ; ಮಾವಿನ ಮರ.
ವಸಂತದೂತಿಕೆ ಅದಿರ್ಮುತ್ತೆ.
ವಸಾರೆ ಜಗಲಿ, ಪಡಸಾಲೆ.
ವಸಿ ಒಸಿ, ವಂಚ, ಕೊಂಚ, ಒಂದಿಷ್ಟು.
ವಸಿಷ್ಠ (ವಶಿಷ್ಠ), ಬ್ರಹ್ಮನ ಮಾನಸಪುತ್ರನಾದ ಒಬ್ಬ ಋಷಿ. ಇವನ ಹೆಂಡತಿ ಅರುಂಧತಿ. ಆತನು ಸಪ್ತಋಷಿಗಳಲ್ಲಿ ಒಬ್ಬ. ಪ್ರಜಾಪತಿಗಳಲ್ಲಿ ಒಬ್ಬನೆಂದು ಮನುವಿನ ಹೇಳಿಕೆ. ಒಂದು ಕಡೆ ಆತನು ಮಿತ್ರವರುಣರ ಸಂತತಿ ಎಂದೂ ಹೇಳಿದೆ. ಆತನು ಸುದಾಸನೆಂಬ ದೊರೆಯ ಕುಲಪುರೋಹಿತನಾಗಿದ್ದನು.
ವಸೀಲಿ ಅಧಿಕಾರಗಳ ಗುರುತು; ದೊಡ್ಡವರ ನೆರವು.
ವಸು ದ್ರವ್ಯ; ರತ್ನ; ಬಂಗಾರ; ನೀರು; ಅಗ್ನಿ; ಕಿರಣ; ಗಣದೇವತೆ; ಅಷ್ಟವಸುಗಳು; ಎಂಟೆಂಬ ಸಂಖ್ಯಾಸೂಚಕಪದ; ಪ್ರಕಾಶ; ಧನಿಷ್ಠಾ ನಕ್ಷತ್ರ.
ವಸುದೇವ ಕೃಷ್ಣನ ತಂದೆ. ದೇವಕಿಯ ಗಂಡ. ಇವನನ್ನು ಇವನ ಭಾವನಾದ ಕಂಸನು ಸೆರೆಯಲ್ಲಿ ಇರಿಸಿದ್ದನು.
ವಸುಧಾ (ವಸುಧೆ), ಭೂಮಿ, ಪೊಡವಿ.
ವಸುಮತಿ (ವಸುಂಧರೆ), ಭೂಮಿ.
ವಸುಷೇಣ ಕರ್ಣ, ರಾಧೇಯ.
ವಸುಂಧರಾ (ವಸುಂಧರೆ) ಭೂಮಿ.
ವಸೂಲು ಕಂದಾಯ; ಬಾಡಿಗೆ; ಸಲುವಳಿ, ಕೊಡಬೇಕಾದ ಹಣ, ಹಣ ಪಡೆಯುವಿಕೆ.
ವಸೆ ಬಸೆ (ದ್ಭ) ನೆಣ, ಕೊಬ್ಬು, ಚರಬಿ.
ವಸ್ತು ವಸತಿ, ಮನೆ; ಹೋತ; ಆಭರಣ, ನಗ, ಒಡವೆ.
ವಸ್ತಾದಿ (ಉಸ್ತಾದ್), ಮಲ್ಲ; ಮಲ್ಲವಿದ್ಯೆ ಇಲ್ಲವೆ ಗಾಯನ ಹೇಳುವ ಗುರು.
ವಸ್ತು ಇರುವಂಥ, ಇದ್ದುದು; ನಿಜ, ಸಹಜ; ಪದಾರ್ಥ, ಒಡವೆ; ಕಥೆಯ ವಿಷಯ; ಸಾಧನೆ.
—ಕ ನಿಜವಾದ, ಸಹಜವಾದ; ಕಾವ್ಯಜಾತಿ.
ವಸ್ತ್ರ ಬಟ್ಟೆ, ಅರಿವೆ; ತೊಡುಗೆ.
ವಸ್ನ ಮಜೂರಿ, ಕೂಲಿ; ಬಾಡಿಗೆ.
ವಹ ಹೊರುವ, ಸಾಗಿಸುವ, ಉಳ್ಳ; ದಾರಿ, ಹಾದಿ; ಭುಜ.
ವಹಣಿ ವಿಡಾಯ, ಆಡಂಬರ ತೋರಿಸುವಿಕೆ, ಜಂಬ; ಜೋಕು.
ವಹನ ಚಲನ, ಸಾಗಿಸುವಿಕೆ; ಹರಿಯುವಿಕೆ; ಹರಿಯುವಂಥದು.
ವಹವ್ವಾ ಶಹಭಾಸ್, ಭಾಪು.
ವಹಿ ಹೊಲಿದ ಪುಸ್ತಕ, ಪುಸ್ತಕ, ಬರೆಯುವ ಪುಸ್ತಕ.
ವಹಿತ್ರ (ಬಹಿತ್ರ), ಹಡಗು, ದೋಣಿ; ತೆಪ್ಪ; ಹರಿಗೋಲು.
ವಹಿಲ (ವಹಿಲತೆ), ವೇಗ, ತ್ವರೆ; ರಭಸ.

ವಹಿವಾಟು ಬಳಕೆ; ಲೆಕ್ಕಾಚಾರ, ಲೇವಾದೇವಿ; ವ್ಯವಹಾರ.
ವಹಿಸು ಹೊರು, ಜವಾಬುದಾರಿಕೊಳ್ಳು; ಸಾಗಿಸು.
ವಹ್ನಿ ಅಗ್ನಿ, ಕಿಚ್ಚು, ಬೆಂಕಿ.
ವಳಕ್ಷ ಶುಕ್ಲ, ಬಿಳಿಯ.
ವಳನ (ವಲನ), ಚಲನ; ಸಂಚಾರ.
ವಳಯ (ನೋಡು: ವಲಯ), ಕಟಕ, ಬಳೆ (ಧೃ); ಬಂದಿ; ಮೇಖಲೆ; ಮಂಡಲ, ದುಂಡಗಿರುವುದು.
ವಳವಳಿ (ವಳಾವಳಿ), ಆತುರ, ಕಳವಳ.
ವಳಿ (ವಲಿ), ನಿರಿ, ನಿರಿಗೆ; ಮಡಿತೆ; ಅಲೆ, ತೆರೆ.
ವಳಿತ ಪ್ರದೇಶ, ಜಿಲ್ಲೆ; ಆಡಳಿತ, ಅಧಿಕಾರ.
ವಂಕ (ಬಂಕ), ವಕ್ರ, ಡೊಂಕು; ಬಾಗಿಲು; ಮನೆಯೊಳಕ್ಕೆ ಹೋಗುವ ದಾರಿ; ಕಡೆ.
ವಂಕದರ ಸುತ್ತಿಸುತ್ತಿ ಹೋಗುವ ಬಾಗಿಲು, ಡೊಂಕು ಬಾಗಿಲು.
ವಂಕಿ ಕೇಯೂರ, ತೋಳುಬಂದಿ; ಗಾಣ.
ವಂಕುಡಿ ಒಂದು ಬಗೆ ಕಠಾರಿ.
ವಂಗ ಬಂಗಾಳ ದೇಶ; ಬಲಿಯ ಮಗ; ತವರ; ಸೀಸ.
ವಂಗಡ (ಪಂಗಡ), ಬಳಗ, ಸಮೂಹ; ವಿಭಾಗ.
—ಇಗ ಬಳಗದವ, ಸಮೂಹದವ.
ವಂಗಾ ಬಂಗಾರ.
ವಂಚ ಒಸಿ, ಸ್ವಲ್ಪ, ಒಂದಿಷ್ಟು.
ವಂಚಕ ಮೋಸಗಾರ, ಠಕ್ಕ; ನರಿ.
ವಂಚನ (ವಂಚನೆ), ಮೋಸ, ಠಕ್ಕು; ಮರೆಮಾಜುವಿಕೆ.
ವಂಚಿಸು ಮೋಸಮಾಡು; ಅಲ್ಲಗಳೆ.
ವಂಟನ ಪಾಲು; ಒಂಟಿಗ.
ವಂಟಿ (ಒಂಟಿ), ಕಿವಿಯ ತೊಡುಗೆ.
ವಂಟಿಸು ಒಚ್ಚು; ಕಿತ್ತುತೆಗೆ, ಹಿರಿ.
ವಂತಿಗೆ ಚಂದಾ, ವರ್ಗಣಿ, ವರಾಡ; ಉಳ್ಳಸ್ಥಿತಿ;
ವಂದನ (ವಂದನೆ), ಸ್ತೋತ್ರ; ನಮಸ್ಕಾರ; ತೋರಣ; ಕತ್ತಲೆ; ನೀರು; ಶೋಭೆ.
ವಂದಿ (ಬಂದಿ), ಸ್ತುತಿಪಾಠಕ, ಹೊಗಳು ಭಟ್ಟ; ಸೆರೆ ಸಿಲುಕಿದವ.
ವಂದಿಸು ನಮಸ್ಕರಿಸು; ಹೊಗಳು; ಗೌರವಿಸು.
ವಂದ್ಯ ವಂದನೆಗೆ ತಕ್ಕವ.
ವಂಧ್ಯೆ (ವಂಧ್ಯಾ), ಬಂಜೆ, ಗೊಡ್ಡಿ, ಸುಗಡಿ.
ವಂಶ ಕುಲ, ಬಳಿ, ತಳಿ; ಗುಂಪು, ಸಮೂಹ; ಬಿದಿರು; ಕೊಳಲು; ಬೆನ್ನೆಲುಬು; ನೀರು; ಮುಳ್ಳುಮುತ್ತುಗ.
—ಜ ಕುಲದವ, ಹುಟ್ಟಿದವ; ಬಿದಿರಿನ.
—ಧರ ಬಿದಿರು ಹೊರುವುದು, ಪರ್ವತ.
—ವೃಕ್ಷ ಕುಲಪರಂಪರೆ, ವಂಶಾವಳಿ ತೋರಿಸುವ ಚಿತ್ರ; ಪೀಳಿಗೆ, ಸಂತತಿ.
—ಸ್ಥ ಕುಟುಂಬದವ, ಬಳಿಯವ.
ವಂಶಿ ವೇಣು, ಊದುವ ವಾದ್ಯ, ಕೊಳಲು.
ವಾ ಇಲ್ಲವೆ, ಅಥವಾ, ಯಾ; ಹೋಲುವೆ; ನಿಶ್ಚಯ.
ವಾಕ್ (ವಾಕ್ಕು), ವಾಗ್, ವಚನ, ಮಾತು.
—ಪತಿ ನುಡಿಬಲ್ಲವ, ಮಾತುಗಾರ; ಬೃಹಸ್ಪತಿ, ಗುರು.
ವಾಕರಿಕೆ (ಓಕರಿಕೆ), ವಾಂತಿ, ವಮನ.
ವಾಕ್ಯ ಪೂರ್ಣ ಅರ್ಥ ಕೊಡಬಲ್ಲ ಶಬ್ದಗಳ ಗುಂಪು; ಕಾಲ; ಗದ್ಯ; ಗಾದೆ.
—ಅರ್ಥ ಮಾತಿನ ಚರ್ಚೆ, ಮಾತಿನ ತಾತ್ಪರ್ಯ.
ವಾಗಾಡಂಬರ ಶಬ್ದಾಡಂಬರ; ಮಾತಿನ ಜಂಬ, ಬಾಯಿ ಹೆಗ್ಗಳಿಕೆ.
ವಾಗೀಶ ಮಾತುಗಳ ಒಡೆಯ, ಬೃಹಸ್ಪತಿ; ವಾಗ್ದೇವಿಯ ಗಂಡ; ಬ್ರಹ್ಮ.
ವಾಗು ಹೆಮ್ಮೀನು.
ವಾಗುರಿಕೆ (ವಾಗುರೆ), ಬಲೆ.
ವಾಗೆ ವಾಘೆ, ಲಗಾಮು, ಕಡಿವಾಣ.

ವಾಗ್ಜಾಲ ಮಾತಿನ ಚಮತ್ಕಾರ.
ವಾಗ್ದತ್ತ ಮಾತಿನಿಂದ ಕೊಡಲ್ಪಟ್ಟುದು.
ವಾಗ್ದೇವಿ ಸರಸ್ವತಿ.
ವಾಗ್ಮಿ (ವಾಙ್ಮಿ), ಚೆನ್ನಾಗಿ ಮಾತಾಡ ಬಲ್ಲವ; ಬೃಹಸ್ಪತಿ.
ವಾಗ್ವಾದ ಚರ್ಚೆ, ವಾದವಿವಾದ.
ವಾಘೆ (ವಾಗೆ), ಲಗಾಮು.
ವಾಙ್ಮಯ ವಾಕ್ಯರೂಪವಾದ ಶಾಸ್ತ್ರ; ಶಾಸ್ತ್ರ ಕಾವ್ಯಾದಿಗಳು; ಸಾಹಿತ್ಯ ಪ್ರಪಂಚ; ಸರಸ್ವತಿ.
ವಾಙ್ಮುಖ ಮಾತಿನ ಪ್ರಸ್ತಾವನೆ.
ವಾಙ್ಮೂಲ ಬಾಯಿದೆರೆ ಹೇಳಿಕೆ, ಹೇಳಿಕೆ, ಅಂಬೋಣ.
ವಾಚ್ (ವಾಕ್).
ವಾಚಕ ಮಾತು,ಮಾತುಗಾರಿಕೆ;ಓದುವಿಕೆ.
ವಾಚಸ್ಪತಿ ಬೃಹಸ್ಪತಿ.
ವಾಚಾಲ (ವಾಚಾಳ), ಬರಿ ಮಾತಿನವ, ಬಡಾಯಿಯವ; ಬಕಾಳ.
ವಾಚಿಸು ಓದು, ಪಠಿಸು; ಹೇಳು.
ವಾಚೆ (ವಾಚಾ), ಮಾತು; ಶ್ಲೋಕ; ಭಾಷೆ.
ವಾಚ್ಯ ದೂಷಣ, ನಿಂದ್ಯ; ಹೇಳತಕ್ಕ.
ವಾಜ ಅನ್ನ; ನೀರು; ಯಜ್ಞ; ಬಾಣದ ಗರಿ; ವೇಗ.
ವಾಜಪೇಯ ಒಂದು ಬಗೆ ಯಜ್ಞ.
ವಾಜಿ ವೇಗ ಉಳ್ಳುದು, ಕುದುರೆ; ಪಕ್ಷಿ; ಬಾಣ; ಹಗೆ.
ವಾಜಿಮಿ(ವಾಜಿಬಿ),ತಕ್ಕ,ಯುಕ್ತ,ಯೋಗ್ಯ; ಸಮನಾದ.
ವಾಟ ದಾರಿ; ಸ್ಥಾನ; ಕೆಲಸ ನಡೆಯುವ ಸ್ಥಳ; ಮನೆ; ಆವಾರ; ನೀರಿನ ದಾರಿ; ತೋಟ, ಹಿತ್ತಿಲು; ಹಾದಿ; ಇಳುಕಲ ಓಣಿ.
ವಾಟಿಕೆ ಹೂದೋಟ; ವಾಸ್ತುಭೂಮಿ; ವಾಸ ಮಾಡುವ ಸ್ಥಳ.
ವಾಟಗ ಥಾಲಿ, ತಟ್ಟೆ.
ವಾಡಬ ಕುದುರೆ; ಬ್ರಾಹ್ಮಣ; ಬಡಬಾಗ್ನಿ.
ವಾಡವ್ಯ ಬ್ರಾಹ್ಮಣ ಸಮುದಾಯ.
ವಾಡಿ ಆವಾರ; ಚಿಕ್ಕ ಕಾಡು; ಹಾಡಿ; ಊರಿನ ವಿಭಾಗ.
ವಾಡಿಕೆ ರೂಢಿ, ಕಟ್ಟಳೆ, ರಿವಾಜು; ಅಭ್ಯಾಸ.
ವಾಢ ಬಾಣ, ಶರ, ಸರಳು; ಗಟ್ಟಿ, ಬಿರುಸು; ಅತಿಶಯ.
ವಾಣಿ (ಬಾಣಿ), ನೀರು; ಸರಸ್ವತಿ; ಮಾತು; ಗಾಣಿಗ.
ವಾಣಿಜ ವಾಣಿಯ, ವ್ಯಾಪಾರಿ; ಗೋಳಿಮರ.
ವಾಣಿಜ್ಯ (ವಾಣಿಯ), ವ್ಯಾಪಾರ.
ವಾತ ಗಾಳಿ, ವಾಯು; ಒಂದು ರೋಗ.
—ಜ ವಾಯುವಿನ ಮಗ, ಭೀಮ; ಹನುಮಂತ; ವಾತದಿಂದ ಹುಟ್ಟಿದುದು, ಒಂದು ಬೇನೆ.
ವಾತಪೂರಣ ಗಾಳಿ ತುಂಬಿಸುವಿಕೆ; ಬಾವುಟ.
ವಾತಾಯನ ಗಾಳಿ ಸಂಚಾರಕ್ಕೆ ಅನುಕೂಲಿಸಿದ್ದು, ಕಿಟಕಿ, ಕಂಡಿ, ಗವಾಕ್ಷ.
ವಾತಾಯು ಚಿಗರಿ, ಎರಳೆ, ಜಿಂಕೆ.
ವಾತಾಶನ ಗಾಳಿ ಕಂಡಿ, ಕಿಟಕಿ; ಸರ್ಪ.
ವಾತ್ಸಲ್ಯ ಮಮತೆ, ಪ್ರೇಮ, ಸ್ನೇಹವಿಶೇಷ.
ವಾತ್ಸ್ಯಾಯನ ಕಾಮಸೂತ್ರವನ್ನು ಬರೆದ ಒಬ್ಬ ಮುನಿ.
ವಾತ್ಯ ಬಿರುಗಾಳಿ, ಸುಂಟರ ಗಾಳಿ.
ವಾದ ಮಾತು; ಚರ್ಚೆ; ವಿವಾದ; ಸಂಭಾಷಣೆ; ಸಿದ್ಧಾಂತ.
—ಪ್ರತಿವಾದ ಚರ್ಚೆ, ಮಾತು ಇದಿರು ಮಾತು, ಸವಾಲು ಜವಾಬು.
—ವಿವಾದ ಚರ್ಚೆ, ತರ್ಕ.
ವಾದಿ ವಿವಾದಮಾಡುವವ; ಕಕ್ಷಿ; ಸಂಗೀತದಲ್ಲಿ ಒಂದು ರಾಗದ ಮುಖ್ಯ ಸ್ವರ; ಆರೋಪ ಹೊರಿಸುವವ; ವಿದ್ವಾಂಸ.

ವಾದು ಮಾತು.
ವಾದ್ಯ ಗೀತವನ್ನು ಕೊಡುವ ಸಾಧನ
ವಾದ್ಯಕೋಣ ವಾದನ ದಂಡ, ಕಮಾನು; ಬಾಜಿಸುವ ಸಾಧನ.
ವಾನ ಒಣಗಿದ, ಆರಿದ; ಚಲಿಸಿದ; ಉಳ್ಳ; ವನಕ್ಕೆ ಸಂಬಂಧಿಸಿದ.
ವಾನಪ್ರಸ್ಥ ಗೃಹಸ್ಥಾಶ್ರಮದ ಬಳಿಕ ಕೊಳ್ಳುವ ಒಂದು ಆಶ್ರಮ; ಅರಣ್ಯದಲ್ಲಿ ಕಾಲ ಕಳೆಯುವುದು.
ವಾನರ ಕಪಿ, ಮಂಗ, ಕೋತಿ.
ವಾಪ ಬಾವಿ, ಬಾಮಿ; ಕೆರೆ.
ವಾಪಸು ಹಿಂದಕ್ಕೆ, ಮರಳಿ.
ವಾಪಿ (ಸಂ) ಬಾವಿ (ದ್ಭ), ಬಾಮಿ, ಕೂರಿಗೆ.
ವಾಪಿತ ಕತ್ತರಿಸಿದ; ಕ್ಷೌರವಮಾಡಿದ.
ವಾಮ ಮನೋಹರ; ಪ್ರತಿಕೂಲ; ಎಡ; ತಾಂತ್ರಿಕರ ವೇದವಿರುದ್ಧವಾದ ನಡತೆ.
ವಾಮದೇವ ಶಿವ; ಒಬ್ಬ ಋಷಿ.
ವಾಮನ ಕುಬ್ಜ, ಕುಳ್ಳ; ದಕ್ಷಿಣ ದಿಗ್ಗಜ; ಬಲಿಯ ವಧೆಗಾಗಿ ವಿಷ್ಣು ತಳೆದ ಅವತಾರ.
ವಾಮಾಂಗ ಮೈಯ ಎಡಭಾಗ; ತಾಂತ್ರಿಕರ ಆಚಾರಗಳು.
ವಾಮೆ ವಾಮಾ, ಚೆಲುವೆ, ಸುಂದರಿ; ಗೌರಿ.
ವಾಯ (ದ್ಭ) ವ್ಯಾಜ (ಸಂ); ವಿಘ್ನ; ಸುಲಭ; ಮೋಸ; ಸುಳ್ಳು; ನೆವ; ಹುಸಿ, ವ್ಯಾಜ.
ವಾಯನ ಬಾಗಿನ (ದ್ಭ), ಬಾಯನ; ವ್ರತಗಳಲ್ಲಿ ಕೊಡುವ ಉಚಿತ.
ವಾಯುವ್ಯ ಗಾಳಿ ಕೊಡುವ; ಪಡು ಬಡಗುಗಳ ನಡುವಣ ದಿಕ್ಕು.
ವಾಯಸ ಕಾಗೆ.
ವಾಯಿದೆ ಕಾಲದ ಅವಧಿ, ಗಡಿ, ಗಡು.
ವಾಯು ಗಾಳಿ; ಒಬ್ಬ ದಿಗ್ದೇವತೆ; ವಾತ; ಒಬ್ಬ ವೈದಿಕ ಋಷಿ. ಈತನು ಸುವರ್ಣ ರಥವನ್ನೇರುವವನೆಂದೂ ಅವನ ಸಾರಥಿ ಇಂದ್ರನೆಂದೂ ಹೇಳಿಕೆ ಇದೆ. ವಾಯು, ಅನಿಲ ಮರುತ ಎಂಬೆಲ್ಲ ಹೆಸರುಗಳಿಂದ ಆತನು ದಿಗ್ದೇವತೆ ಎನಿಸಿಕೊಂಡಿದ್ದಾನೆ.
—ಪಂಚಕ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಈ ಐದು ಗಾಳಿಗಳು.
—ವೇಗ ತೀವ್ರಗತಿ, ಗಾಳಿಯಷ್ಟು ವೇಗ.
—ಸುತ ಹನುಮಂತ; ಭೀಮ.
ವಾಯುಭಕ್ಷಕ ಋಷಿ; ಸರ್ಪ.
ವಾರ ಸಮೂಹ; ಅವಸರ; ದ್ವಾರ; ದಿನ; ಹಪ್ತೆ, ಏಳು ದಿನ ಕಾಲ; ಕ್ರಮ; ಪಾಲು; ಭಾಗ; ಇಳಕಲು, ಸೂಳು, ಇಳಿಮೆ; ಕೂಟ; ಸರದಿ; ದಂಡೆ; ಲಾವಣಿ ಬಗ್ಗೆ ಕೊಡುವ ಧಾನ್ಯ; ವೇಳೆ, ಗಳಿಗೆ; ಸಂದರ್ಭ, ಪ್ರಸಕ್ತಿ.
—ಅನ್ನ ವಾರದಲ್ಲಿಂದ ದಿನಕ್ಕೊಂದು ಕಡೆ ಭಿಕ್ಷೆ ಕೊಳ್ಳುವ ಬಗೆ.
—ಕ ತಡೆಯುವವ; ಕುದುರೆಯ ಒಂದು ಬಗೆ ನಡಿಗೆ; ಉಚಿತವಾಗಿ ಕೊಡುವ ವಸ್ತು, ಉಡುಗೊರೆ.
ವಾರಗಿತ್ತಿ (ಓರಗಿತ್ತಿ), ಗಂಡನ ತಮ್ಮನ ಹೆಂಡತಿ, ಮೈದುನಿ.
ವಾರಣ ಒಂಟೆ; ಆನೆ; ತಡೆ; ಮರೆ; ನಿವಾರಣೆ; ಕವಚ; ದಂಡೆ, ಅಣೆಕಟ್ಟು, ಒಂಡು; ಒಡ್ಡು; ಮುಗಿಲು, ಮೋಡ.
ವಾರಣಾವತ ಹಸ್ತಿನಾ ನಗರದ ಬಳಿಯ ಒಂದು ಪ್ರದೇಶ.
ವಾರಣಾಸಿ ಕಾಶಿ; ವಾರಣ ಮತ್ತು ಅಸಿ ನದಿಗಳ ಸಂಗಮ ಸ್ಥಳ.
ವಾರವಾಣ ಯುದ್ಧಕವಚ; ಕವಚ; ಕುಪ್ಪಸ.
ವಾರಸತಿ ವಾರನಾರಿ, ವಾರಾಂಗನೆ, ವೇಶ್ಯೆ, ಸೂಳೆ.
ವಾರಾಶಿ ಬಹಳ ನೀರುಳ್ಳುದು, ಸಮುದ್ರ.
ವಾರಾಹ ವರಾಹಕ್ಕೆ ಸಂಬಂಧಿಸಿದ.

ವಾರಾಹಿ ಕಾಡುಹಂದಿ; ವಿಷ್ಣುವಿನ ಒಂದು ಅವತಾರ; ಒಂದು ನದಿ; ಸಪ್ತ ಮಾತೃಗಳಲ್ಲಿ ಒಬ್ಬಳು, ಶಿವಶಕ್ತಿ.

ವಾರಾಂಗನೆ (ವಾರಸತಿ).

ವಾರಿ ನೀರು; ಸರಸ್ವತಿ; ಆನೆಗಳನ್ನು ಹಿಡಿಯುವುದು; ಕ್ರಮ, ರೀತಿ; ಸರತಿ.

ವಾರಿಗೆ ಓರಗೆ, ಸಮವಯಸ್ಸು.

ವಾರಿದ (ವಾರಿಧರ), ಮುಗಿಲು.

ವಾರಿಧಿ ಸಮುದ್ರ.

ವಾರಿಸುದಾರ (ವಾರಸುದಾರ), ಹಕ್ಕುದಾರ, ಬಾಧ್ಯಸ್ಥ; ಒಡೆಯ, ಅಧಿಕಾರಿ.

ವಾರು ಗಜ, ಮೂರು ಅಡಿ; ಏಲಂ, ಹರಾಜು.

ವಾರುಣ ನೀರು; ಭಾರತವರ್ಷದ ಒಂದು ಪ್ರಾಂತ, ನೀರಿಗೆ ಸಂಬಂಧಿಸಿದ; ವರುಣಗೆ ಸಂಬಂಧಿಸಿದ.

ವಾರುಣಿ ವರುಣನ ಸಂತಾನ; ಪಡು ದಿಕ್ಕು; ಮದ್ಯ; ವರುಣನ ಹೆಂಡತಿ; ಕರ್ಪು; ಕಹಿ ಮೆಕ್ಕೆ.

ವಾರುವ ವಾಡವ (ದ್ಭ) ಕುದುರೆ.

ವಾರ್ತೆ ಸುದ್ಧೃಢ; ಜಳ್ಳು; ಕ್ಷುಲ್ಲಕ; ಸುದ್ದಿ.

ವಾರ್ತಾವಹ ಸುದ್ದಿಕೊಡುವ ಕಾಗದ, ವರ್ತಮಾನಪತ್ರ; ಸುದ್ದಿ ಒಯ್ಯುವವ.

ವಾರ್ತಿಕ ಸುದ್ದಿಕೊಡುವವ; ಓಲೆಕಾರ; ಶ್ರೇಷ್ಠ ಗುರು; ಗ್ರಂಥಕ್ಕೆ ಬರೆಯುವ ವೃತ್ತಿ; ಟೀಕೆಟಿಪ್ಪಣಿ.

ವಾರ್ತೆ ವರ್ತಮಾನ, ಸುದ್ದಿ.

ವಾರ್ಧಕ ಮುಪ್ಪು; ಒಂದು ಷಟ್ಪದಿ ಭೇದ.

ವಾರ್ಧಿ ನೀರಿಗೆ ಆಶ್ರಯವಾದುದು, ವಾರಿಧಿ, ಸಮುದ್ರ, ಕಡಲು.

ವಾರ್ಧಿಕ್ಯ ವೃದ್ಧತನ, ಮುಪ್ಪು.

ವಾಲಕ ವಾಲ, ಬಾಲಕ, ಬಾಲ; ಬಳೆ; ಉಂಗುರ.

ವಾಲಿ ಸುಗ್ರೀವನ ಅಣ್ಣ. ಸುಗ್ರೀವನ ಹೆಂಡತಿ ತಾರೆಯನ್ನು ವಾಲಿಯು ಅಪಹರಿಸಿ ಇರಿಸಿದ್ದನು. ರಾಮನು ವಾಲಿಯನ್ನು ಕೊಂದು ಸುಗ್ರೀವನಿಗೆ ಅವಳನ್ನು ಮರಳಿ ಕೊಡಿಸಿದನು.

ವಾಲು ಹೊಂಗು, ನೂಲು; ಇಳುಕಲಾಗು; ತೂಗು.

ವಾಲುಕ (ವಾಲುಕೆ), ಮರಳು, ಉಸುಬು.

ವಾಲ್ಮೀಕಿ ಹುತ್ತದಲ್ಲಿ ಹುಟ್ಟಿದವ, ಸಂಸ್ಕೃತ ರಾಮಾಯಣವನ್ನು ಬರೆದ ಕವಿ.

ವಾವದೂಕ ವಾಚಾಳಿ.

ವಾಶಿ (ವಾಸಿ), ಹಾಡಿದ್ದು, ಚಿಲಿಮಿಲಿ; ಗುಣ. ಲಾಭ; ಕಸುರು; ಅಂಶ; ಪ್ರಮಾಣ.

ವಾಶೀ ಅಬ್ಬರಿಸುವ, ಮೊರೆಯುವ.

ವಾಸ ವಸ್ತ್ರ; ಮನೆ; ಇರುವಿಕೆ; ಕೊಳಲು; ಕಂಪು, ಪರಿಮಳ.

—ಕ ಬಟ್ಟೆ, ಅರಿವೆ; ಸುವಾಸನೆ ಕೊಡುವ.

ವಾಸನ (ವಾಸನೆ), ಪರಿಮಳ, ಕಂಪು, ನಾತ; ಕರ್ಮಫಲ.

ವಾಸರ ದಿವಸ; ಶೀತ.

ವಾಸವ ಇಂದ್ರ.

ವಾಸಸ್ಥಲ ವಾಸಸ್ಥಾನ, ಇರುವ ತಾವು.

ವಾಸಂತಿ ಇರುವಂತಿಗೆ, ಅದಿಮುರ್ತ್ತೆ.

ವಾಸಿ ಕೀರ್ತಿ; ಸ್ಥಿತಿ; ಚಲ; ಭಾಷೆ; ಗುಣ; ಅಂಶ, ಪಾಲು; ಇರುವವ; ಬಟ್ಟೆ ಉಟ್ಟವ, ಕಂಪುಳ್ಳ; ಹಿತ, ಒಳಿತು.

ವಾಸಿವಟ್ಟೆ ಗೌರವ, ಮರ್ಯಾದೆ; ಪಂಥ.

ವಾಸಿಸು ವಾಸಮಾಡು, ನೆಲಸು; ಮೂಸಿ ನೋಡು; ಪರಿಮಳಿಸು.

ವಾಸುಕಿ ಒಬ್ಬ ಸರ್ಪರಾಜ, ಮಹಾಶೇಷ.

—ಶಯನ ಸರ್ಪನ ಮೇಲೆ ಮಲಗಿದವ, ವಿಷ್ಣು.

ವಾಸುದೇವ ವಸುದೇವ ದೇವಕಿಯರ ಮಗ, ಕೃಷ್ಣ, ವಿಷ್ಣು.

ವಾಸ್ತವ (ವಾಸ್ತವ್ಯ), ಸಹಜ, ನಿಜ; ಒಂದು ಅಲಂಕಾರ ಭೇದ; ನಿಜವಾದ ಹೇಳಿಕೆ.
ವಾಸ್ತು ವಾಸಮಾಡುವ ಭೂಮಿ; ಗೃಹ ರಚನಾಶಾಸ್ತ್ರ; ಮನೆ.
—ಶಿಲ್ಪ ವಾಸ್ತು ಕ್ರಮ, ಕಟ್ಟಡ ಕಟ್ಟುವ ರೀತಿ, ಕಟ್ಟಡ ಕಟ್ಟುವ ಶಾಸ್ತ್ರ.
ವಾಹ ಕುದುರೆ; ತೋಳು; ಹರಿಯುವುದು, ಒಯ್ಯುವುದು; ಧರಿಸುವ; ಸಾಗಿಸುವ.
—ಕ ಸಾಗಿಸುವವ, ಹೊರುವವ; ಕೂಲಿ; ಸಾರಥಿ; ರಾವುತ; ಓಲೆಕಾರ.
—ನ ರಥ, ಕುದುರೆ ಮೊದಲಾದ ಸವಾರಿ ಮಾಡುವ ಬಂಡಿ ಇಲ್ಲವೆ ಪ್ರಾಣಿ.
ವಾಹಸ ಹೆಬ್ಬಾವು, ಅಜಗರ, ದಾಸರ ಹಾವು.
ವಾಹಿನಿ ಸೈನ್ಯ; ಹೊಳೆ, ನದಿ.
ವಾಹ್ಯ ಹೊರಬಲ್ಲುದು; ಹೇರೆತ್ತು; ಕುದುರೆ.
ವಾಹ್ಯಾಳಿ ಕುದುರೆಗಳ ಓಟ, ಕುದುರೆ ಪಂದ್ಯ.
ವಾಳ ಬಾಲ; ಗಡ್ಡೆ; ಬಾವು, ಬಾಪು.
ವಾಳ್ತೆ ಸುದ್ದಿ, ವಾರ್ತೆ; ಆಡಳಿತ.
ವಾಂಚಲ್ಯ (ದ್ಭ) ವಾತ್ಸಲ್ಯ (ಸಂ).
ವಾಂಛೆ ಬಯಕೆ, ಹಂಬಲ, ಅಪೇಕ್ಷೆ.
ವಾಂತಿ ವಮನ, ಒಗಡಿಕೆ, ಕಾರುವಿಕೆ.
ವಾಂಶಿಕ ಕೊಳಲನ್ನು ಊದುವ ಉದ್ಯೋಗವುಳ್ಳವ; ಕುಲದವ, ಬಣದವ, ಕುಟುಂಬದವ.
ವಾಃಕಣ ನೀರಿನ ಕಣ.
ವಿಕಚ ಬೋಳು, ಕೂದಲಿಲ್ಲದ; ತೆರೆದ, ಅರಳಿದ.
ವಿಕಟ ವಿಗಡ (ದ್ಭ), ವಿಕಾರವಾದ; ದೊಡ್ಡದಾದ; ಕ್ರೂರವಾದ, ಕರಾಳ; ಸುಂದರ; ಏರುತಗ್ಗಾದ.
ವಿಕರಣ ವಿಕಾರಮಾಡುವುದು.
ವಿಕರಾಲ (ವಿಕರಾಳ), ಭೀಕರ, ಭಯಂಕರ.
ವಿಕರ್ಣ ಬಾಣ; ಧೃತರಾಷ್ಟ್ರನ ಮಗನೊಬ್ಬ.
ವಿಕರ್ಮ ವಿರೋಧ ಕರ್ಮ, ಮಾಡಬಾರದ ಕೆಲಸ; ಇಗ್ಗೆಲಸ.
ವಿಕಲ (ವಿಕಳ), ಗಾಬರಿ; ವ್ಯಾಕುಲ; ಊನವಾದ, ಕೊರತೆಯುಳ್ಳ.
—ಇಸು ಭ್ರಮೆಗೊಳ್ಳು.
ವಿಕಲ್ಪ ಅನಿಶ್ಚಯ; ಸಂದೇಹ, ಅನುಮಾನ, ಸಂಶಯ; ಊಹೆ; ಅಜ್ಞಾನ; ಇನ್ನೊಂದು ರೀತಿ.
—ಇಸು ಬೇರೆ ರೀತಿಯಲ್ಲಿ ಊಹಿಸು.
ವಿಕಸನ ಅರಳುವಿಕೆ, ತೆರೆಯುವಿಕೆ.
ವಿಕಸಿಸು ಅರಳು.
ವಿಕಸ್ವರ ತೆರೆಯುವಿಕೆ.
ವಿಕಾರ ಸ್ವಭಾವಕ್ಕೆ ಸಮನಲ್ಲದುದು; ರೋಗ; ವಿರೂಪ; ತಳಮಳ, ಗೊಂದಲ; ಉದ್ವೇಗ; ಭೇದ.
ವಿಕಾರಿ ಕುರೂಪಿ; ವಿರೋಧ ಮನಸ್ಸುಳ್ಳವಳು; 33ನೆಯ ಸಂವತ್ಸರ.
ವಿಕಾಸ ಅರಳುವಿಕೆ; ವಿಸ್ತರಿಸುವಿಕೆ; ತೋರಿಕೆ; ಹರ್ಷ, ತೋಷ.
—ವಾದ (ನೋಡು: ಪರಿಣಾಮವಾದ).
ವಿಕಾಸಿ ತೆರೆವ, ಅರಳುವ; ಕಾಣಿಸುವ; ವಿಸ್ತರಿಸುವ.
—ಇಸು ಅರಳು; ಪರಿಣಾಮಗೊಳು.
ವಿಕಾಳಿಸು ಪ್ರಬಲವಾಗು, ಅಧಿಕವಾಗು.
ವಿಕಿರ ಸುತ್ತಚೆಲ್ಲುವುದು; ಶ್ರಾದ್ಧಪಿಂಡ; ಹಕ್ಕಿ.
ವಿಕೀರ್ಣ ಚೆಲ್ಲಲ್ಪಟ್ಟ, ಬಿಚ್ಚಿ ಚೆದರಿದ; ತುಂಬಿದ; ಬಿಡಿದ.
ವಿಕುರ್ವಾಣ ಮನಸ್ಸು ಬದಲಾಗುವಿಕೆ.
ವಿಕುಂಠ ವೈಕುಂಠ; ವಿಷ್ಣುವಿನ ತಾಯಿ.
ವಿಕೃತ ವಿಕಾರಗೊಂಡ; ಬದಲಾದ, ಮಾರ್ಪಟ್ಟ; ವಿಕಾರ; ಮಲಿನವಾದ; ರೋಗಿಷ್ಠ.
ವಿಕೃತಿ ಮಾರ್ಪಾಟು, ಬದಲಾವಣೆ; ರೋಗ.
ವಿಕೃಷ್ಟ ಕ್ರೂರ; ಕಿರಿಚಿದ, ಅರಚಿದ.

ವಿಕ್ರಮ ಪರಾಕ್ರಮ; ಒಂದು ಸಂವತ್ಸರ; ಒಂದು ಶಕ; ಒಂದು ದಾಟು.
—ಶಕ ಕ್ರಿ. ಪೂ. 75ರಿಂದ ತೊಡಗುವ, ವಿಕ್ರಮಾದಿತ್ಯರಾಯನ ಹೆಸರಿನ ಶಕ.
ವಿಕ್ರಮಾದಿತ್ಯ (ವಿಕ್ರಮಾರ್ಕ), ಪ್ರಾಚೀನ ಉಜ್ಜಯಿನಿಯ ಹೆಸರಾದ ಒಬ್ಬ ದೊರೆ.
ವಿಕ್ರಯಿಸು ಮಾರು, ಬೆಲೆಗೆ ಕೊಡು.
ವಿಕ್ರಾಂತ ಪರಾಕ್ರಮಶೀಲ; ಜಯಶೀಲ; ವೀರ; ಹಜ್ಜೆ.
ವಿಕ್ರಿಯ ಮಾರಾಟ, ಬಿಕರಿ; ಬದಲಿ, ಮಾರ್ಪಾಟು; ಉದ್ವೇಗ.
ವಿಕ್ಷಿಪ್ತ ಬಿಡಲ್ಪಟ್ಟ, ದೂರವಮಾಡಿದ, ಚೆಲ್ಲಿದ.
ವಿಕ್ಷೇಪ ಬೀರುವಿಕೆ; ಬೀಸುವಿಕೆ; ಪ್ರೇರಣೆ; ಗಲಿಬಿಲಿ; ತ್ಯಾಜ್ಯವಾದ; ಕುಡಿನೋಟ.
—ಣ ಒಲೆದಾಟ; ಕುಡಿನೋಟ.
ವಿಖ್ಯಾತ ಪ್ರಖ್ಯಾತ, ಹೆಸರಾದ.
ವಿಖ್ಯಾತಿ ಹೆಸರಾಗುವಿಕೆ, ಕೀರ್ತಿ.
ವಿಗಡ(ದ್ಭ) ವಿಕಟ(ಸಂ),ಭಯಂಕರ;ದೊಡ್ಡ; ಕ್ರೂರ; ಕೆಡುಕ; ಶಬರ.
ವಿಗತ ಹೋದ; ನಿಂತ; ಬಿಟ್ಟ; ತೀರಿದ, ಕಳೆದ; ಹಕ್ಕಿಗಳ ಹಾರಾಟ.
ವಿಗಲಿತ (ವಿಗಳಿತ), ಜಾರಿದ; ಬಿಟ್ಟ.
ವಿಗಳತ್ ಸುರಿಯುವ; ಸೋರುವ.
ವಿಗುರ್ಬಣೆ ಭೀಕರ, ಭೀತಿವಡೆವುದು.
ವಿಗುರ್ವಿಸುಅಬೇಧ್ಯವಾಗು,ಅಸಾಧ್ಯವಾಗು.
ವಿಗ್ರು ಮೂಗಿಲ್ಲದ.
ವಿಗ್ರಹ ದೇಹ; ಯುದ್ಧ; ಆಕೃತಿ, ಪ್ರತಿಮೆ; ಮಾತಿನ ಅರ್ಥ ತಿಳಿಸುವ ವಾಕ್ಯ; ವಿಶೇಷ ಜ್ಞಾನ.
ವಿಗ್ರಹಾರಾಧನೆ ಮೂರ್ತಿಪೂಜೆ.
ವಿಗ್ರಹಿಸು ಇದಿರಿಸು; ಜಗಳಾಡು, ಕಾಳಗ ವಾಡು.
ವಿಘಟನೆ ವಿಭಾಗ, ಒಡೆಯುವಿಕೆ.
ವಿಘಟಿಕೆ (ವಿಘಳಿಗೆ), ಗಳಿಗೆಯ ಆರಂಭ, ಗಳಿಗೆಯ ಭಾಗ; ಫಲ.
ವಿಘಟಿಸು ವಿರೋಧ ತಾಳು.
ವಿಘಟ್ಟಿತವಿಯೋಗಗೊಂಡ,ಅಗಲಿದ;ಕಟ್ಟದ
ವಿಘಸ ಭೋಜನವಿಶೇಷ; ಉಚ್ಛಿಷ್ಟ,ಎಂಜಲು.
ವಿಘಾತ ನಾಶ; ಕೊಲೆ; ವಿಘ್ನ.
ವಿಘಾತಿ ನಾಶ; ಹೊಡೆತ, ಪೆಟ್ಟು; ನಾಶಕರ.
ವಿಘಾಯ ಕ್ರೂರವಾಗಿ.
ವಿಘೂರ್ಣಿಸು ನಡುಗು, ಕಂಪಿಸು.
ವಿಘ್ನ ತೊಡಕು, ತೊಂದರೆ, ತಡೆ.
—ಈಶ್ವರ ವಿನಾಯಕ, ಬೆನಕ.
—ರಾಜ ವಿನಾಯಕ, ಬೆನಕ.
ವಿಚಕಿಲ ಮಲ್ಲಿಗೆ, ಕೋಲುಮಲ್ಲಿಗೆ, ಸೂಜಿ ಮಲ್ಲಿಗೆ.
ವಿಚಕ್ಷಣ ಚತುರ, ವಿದ್ವಾಂಸ; ಚೆನ್ನಾಗಿ ನೋಡಬಲ್ಲವ; ಪ್ರವೀಣ.
ವಿಚಕ್ಷಣೆ ಚತುರ ಸ್ತ್ರೀ, ಚತುರೆ, ಜಾಣೆ.
ವಿಚಯ ಶೋಧನೆ, ಹುಡುಕಾಟ.
ವಿಚಲ ಚಲಿಸುವ, ಚಂಚಲ.
ವಿಚಾರ ವಿಮರ್ಶೆ; ಆಲೋಚನೆ; ಯೋಚನೆ; ಪಕ್ಷಿಗಳ ತಿರುಗಾಟ; ಸಂದೇಹ, ಅನುಮಾನ; ಆತುರ.
—ಇಸು ಪರೀಕ್ಷಿಸು, ವಿಮರ್ಶಿಸು.
—ಕ ವಿಚಾರ ನಡಸುವವ; ಮೇಲ್ವಿಚಾರ ಮಾಡುವವ.
—ಪರ ಯೋಚನಾಪರ, ವಿಚಾರಶೀಲ.
ವಿಚಾರಿ ವಿಚಾರಪರ; ವಿಮರ್ಶ ಬುದ್ಧಿಯುಳ್ಳವ, ವಿವೇಕಿ.
ವಿಚಿತ್ರ ಬಗೆಬಗೆಬಣ್ಣದ;ಆಶ್ಚರ್ಯ;ವಿಸ್ಮಯ.
—ತರ ಅತಿ ಸುಂದರ; ವಿಶೇಷ.
ವಿಚಿತ್ರವೀರ್ಯ ಶಂತನುವಿನ ಮಗ. ಇವನ ಹೆಂಡಿರಾದ ಅಂಬಿಕೆಯಲ್ಲಿ ಧೃತರಾಷ್ಟ್ರನೂ ಅಂಬಾಲಿಕೆಯಲ್ಲಿ ಪಾಂಡುವೂ ಹುಟ್ಟಿದರು

ವಿಚ್ಛಿನ್ನ ಕತ್ತರಿಸಿದ್ದ; ಒಡೆದ; ಜೋರಾದ, ಮುರಿದ.

ವಿಚ್ಛೇದ ತುಂಡರಿಸುವಿಕೆ; ಅಗಲಿಕೆ; ವಿಭಾಗ.
— ನ ಕತ್ತರಿಸುವಿಕೆ.

ವಿಜನ ಜನರಿಲ್ಲದಿರುವಿಕೆ, ಏಕಾಂತ; ಗುಟ್ಟು.

ವಿಜಯ (ಜಯಶಾಲಿಯಾದವ), ಅರ್ಜುನ; ಗೆಲವು, ಜಯ; ವೈಕುಂಠದ ದ್ವಾರಪಾಲಕ; ಅಣಿಲೆ ಗಿಡ, ನೆಲ್ಲಿ ಗಿಡ.
— ದಶಮಿ ರಾಮನು ರಾವಣನ ಮೇಲೆ ದಂಡಯಾತ್ರೆಗೆ ಹೊರಟದಿನ; ಅಶ್ವಯುಜ. ಶು ೧೦.

ವಿಜಯನಗರ ಈಗಣ ಹಂಪಿ. ಪ್ರಾಚೀನ ವಿಜಯನಗರ ಸಾಮ್ರಾಜ್ಯದ ರಾಜಧಾನಿ, ವಿದ್ಯಾನಗರ.

ವಿಜಯಶ್ರೀ ಗೆಲವೆಂಬ ಲಕ್ಷ್ಮಿ.

ವಿಜಯಿ (ವಿಜಯಾ), ಮಾದ್ರಿಸುತ ಸಹದೇವನ ಹಂಡತಿ. ಶಲ್ಯನ ಮಗಳು; ಗೆಲುವನ್ನು ಗಳಿಸಿದವ.

ವಿಜಯೋತ್ಸವ ಜಯದಿಂದ ಉಂಟಾದ ಸಂತೋಷ; ವಿಜಯಸೂಚಕ ಹಬ್ಬ.

ವಿಜಾತಿ ನೀಚ ಜಾತಿ; ಬೇರೆ ವರ್ಗ; ಪಕ್ಷಿಜಾತಿ.

ವಿಜಾತೀಯ ಬೇರೆ ಜಾತಿಯ.

ವಿಜಿಗೀಷು ಜಯಿಸುವ ಇಚ್ಛೆಯುಳ್ಳವ.

ವಿಜೃಂಭ ಪ್ರದರ್ಶನ, ತೋರಿಕೆ.
— ಣ ಅರಳುವಿಕೆ; ಆವಳಿಕೆ, ಆಕಳಿಕೆ; ಡೌಲು, ಸಂಭ್ರಮ ತೋರುವಿಕೆ.

ವಿಜೃಂಭಿಸು ಅರಳು, ವಿಸ್ತರಿಸು; ಆಕಳಿಸು; ಉಬ್ಬು; ಮೆರೆ; ಶೋಭಿಸು.

ವಿಜೇತ ವಿಜಯಿ; ಗೆದ್ದವ.

ವಿಜೇಯ ಜಯಿಸತಕ್ಕವ.

ವಿಜ್ಞಪ್ತಿ ವಿಜ್ಞಾಪನೆ, ವಿನಯದ ಹೇಳಿಕೆ; ಬಿನ್ನಹ.

ವಿಜ್ಞಾತ ಪ್ರಸಿದ್ಧವಾದ, ತಿಳಿದ.

ವಿಜ್ಞಾನ ಪ್ರಾಪಂಚಿಕ ವಸ್ತುಗಳ ವಿಚಾರ ತಿಳಿಸುವ ಯಾವುದೇ ಶಾಸ್ತ್ರ.

ವಿಜ್ಞಾನಿ ವಿದ್ವಾಂಸ; ತತ್ವಶಾಸ್ತ್ರ ಬಲ್ಲವ; ಭೌತಾದಿ ಶಾಸ್ತ್ರಗಳನ್ನು ತಿಳಿದವ.

ವಿಜ್ಞಾಪನ (ವಿಜ್ಞಾಪನೆ), ಬಿನ್ನಪ.

ವಿಜ್ಞಾಪಿಸು ಬಿನ್ನವಿಸು, ಹೇಳಿಕೊಳ್ಳು.

ವಿಟ ಜಾರ, ಘಟಿಂಗ; ವಿಲಾಸಿ.

ವಿಟಪ ಮರದ ಗೆಲ್ಲು, ಎಲೆಗಳು; ಎಲೆಗಳ ವಿಸ್ತಾರ.

ವಿಟಪಿ ಮರ; ಅತ್ತಿ ಮರ.

ವಿಟಂಕ ಕಪೋತ; ಸೂಳೆ.

ವಿಟಾಳ ಮಾಲಿನ್ಯ; ಕುಂದು, ಕೊರತೆ; ಹೇಸಿಕೆ.

ವಿಟ್ಠಲ ವಿಷ್ಣು, ಕೃಷ್ಣ; ಪಂಢರಪುರದ ವಿಠೋಬ; ಬಿಟ್ಟ.

ವಿಡಕ ಹೆಡಗೆ, ಬುಟ್ಟಿ, ಮಕ್ಕರಿ.

ವಿಡಂಬ ತಿರಸ್ಕಾರ; ಅನುಕರಣೆ; ಅಣಕ, ಪರಿಹಾಸ್ಯ.
— ಇಸು ತೋರು; ಹಾಸ್ಯಮಾಡು; ಅನುಕರಿಸು; ಅಣಕಿಸು.

ವಿಡಂಬನೆ ಅಣಕ, ಅಣಕದ ಬರಹ.

ವಿಡಾಯ ರೀತಿ; ಶೋಭೆ; ಸಾಲು; ಸಮೂಹ; ಆಧಿಕ್ಯ; ಆಡಂಬರ; ಸೊಗಸುಗಾರಿಕೆ; ಉತ್ಸವ.

ವಿಡಾಯಿ ಸಾಲು; ಸೊಗಸು; ಹೆಚ್ಚಾಗಿ.
— ಕೆಡು ಶಕ್ತಿಗುಂದು.

ವಿಡೂರ ವೈರ; ನಿಷ್ಠುರ, ಹಿಂಸೆ; ತಡೆ, ಅಡ್ಡಿ.

ವಿತತ ವಿಸ್ತಾರ; ತಂತೀ ವಾದ್ಯ.

ವಿತತಿ ಸಮೂಹ; ವಿಸ್ತರಣ.

ವಿತಥ ಸುಳ್ಳು.

ವಿತರಣ ದಾನ, ಔದಾರ್ಯ; ಹಂಚುವಿಕೆ.

ವಿತಂಡ ಇತ್ತಂಡ; ಒಂದು ಬಗೆ ಅಗಳಿ; ಆನೆ.
— ವಾದ ವ್ಯರ್ಥ ಚರ್ಚೆ, ಸಾಮಾನ್ಯ ಚರ್ಚೆ

ವಿತಂತು ವಿಧವೆ; ಒಳ್ಳೆಯ ಕುದುರೆ.

ವಿತಾನ ಮೇಲುಗಟ್ಟು, ಚಪ್ಪರ; ವಿಸ್ತಾರ; ಸಮೂಹ; ಪಾಲು; ಯಜ್ಞ.
ವಿತಾಳ ಅಪಾಯ; ವಿಸ್ತಾರ; ಗರ್ವ.
ವಿತ್ತ ತಿಳಿದ; ಹೊಂದಿದ, ಲಬ್ಧ; ದ್ರವ್ಯ; ಕೀರ್ತಿವಂತ; ಬಿಡಲ್ಪಟ್ಟ.
ವಿತ್ತಿ ಜ್ಞಾನ; ಲಾಭ; ವಿಚಾರ; ಸಂಪತ್ತಿ.
ವಿತ್ಪತ್ತಿ ವ್ಯುತ್ಪತ್ತಿ (ಸಂ), ಹುಟ್ಟು, ಮೂಲ; ಜ್ಞಾನ.
ವಿದ (ವಿದ್ = ತಿಳಿ), ತಿಳಿದ.
ವಿದಗ್ಧ ನಿಪುಣ, ಪಂಡಿತ; ಕಷ್ಟಪಟ್ಟ; ಸುಟ್ಟ; ಕಲಾಕೋವಿದ.
ವಿದನಿ (ದ್ಭ) ವಿಧ್ವನಿ (ಸಂ).
ವಿದರ್ಭ ದರ್ಭೆಯಿಲ್ಲದ ದೇಶ, ಬೀಹಾರು ಪ್ರಾಂತ.
— ಕನ್ಯೆ ವಿದರ್ಭದ ಭೀಷ್ಮಕನ ಮಗಳು, ದಮಯಂತಿ; ರುಕ್ಮಿಣಿ.
ವಿದಲ (ವಿದಳ), ದಳವಿಲ್ಲದ, ಬೇಳೆಯಾಗದ; ತೆರೆದ, ಬಿರಿದ; ಬಿದಿರ ಬುಟ್ಟಿ.
ವಿದಾರಕ ಸೀಳುವ; ಬಿರಿಯುವ.
ವಿದಿತ ತಿಳಿದ, ಗೊತ್ತಾದ, ಪ್ರಸಿದ್ಧವಾದ.
ವಿದೀರ್ಣ ಒಡೆದ, ಸೀಳಿದ, ಬಿರಿದ.
ವಿದು ಬಿದು (ದ್ಭ), ವಿಧು (ಸಂ), ಚಂದ್ರ; ವಿಷ್ಣು.
ವಿದುರ ವಿಚಿತ್ರವೀರ್ಯನಿಗೆ ತನ್ನ ಹೆಂಡತಿಯ ದಾಸಿಯಲ್ಲಿ ಹುಟ್ಟಿದ ಮಗ. ಈತನು ಪಾಂಡವ ಪಕ್ಷಪಾತಿಯಾಗಿದ್ದ ಮಹಾ ಜ್ಞಾನಿ.
ವಿದುಷ ವಿದ್ವಾಂಸ.
ವಿದುಷಿ ವಿದ್ಯಾವಂತೆ; ಪಂಡಿತೆ, ತಿಳಿದವಳು.
ವಿದೂಷಕ ಹಾಸ್ಯಗಾರ, ನಕಲಿಯುವ; ಹನುಮ ನಾಯಕ; ಕೇಡಿಗ.
ವಿದೇಶ ಅನ್ಯದೇಶ, ಪರದೇಶ.
ವಿದೇಹ ಮಿಥಿಲೆ. ಈಗಿನ ತಿರ್ಹತಿನ ರಾಜಧಾನಿ; ಈ ದೇಶದ ಅರಸಾಗಿದ್ದ ಜನಕ.
ವಿದ್ಯಮಾನ ಸದ್ಯದ ಸ್ಥಿತಿ; ಈಗಿರುವಂತೆ; ಪ್ರಕೃತದ; ಈಗಿನ ಪರಿಸ್ಥಿತಿ.
ವಿದ್ಯಾ (ವಿದ್ಯೆ), ತಿಳಿವಳಿಕೆ; ಶಿಕ್ಷಣ.
— ಅಭ್ಯಾಸ ಕಲಿಯುವಿಕೆ, ಶಿಕ್ಷಣ.
— ಅರ್ಥಿ ಓದುವವ; ಶಿಕ್ಷಣಪಡೆವವ.
— ವಂತ ವಿದ್ವಾಂಸ; ಬಲ್ಲಿದ.
ವಿದ್ಯಾಧರ ಜ್ಞಾನವಂತ; ಹಾನಿ. ಎಸಗುವ ಒಂದು ಅಮಾನುಷ ವರ್ಗ.
ವಿದ್ಯುತ್ (ವಿದ್ಯುತ್ತು), ಮಿಂಚು; ಮಿಂಚನ್ನು ಹುಟ್ಟಿಸುವ ಶಕ್ತಿ.
ವಿದ್ಯೆ ವಿದ್ಯಾ, ಬಿಜ್ಜೆ (ದ್ಭ).
ವಿದ್ಯೋತ ಹೊತ್ತಿ ಉರಿಯುತ್ತಿರುವ.
ವಿದ್ರುವ ಹರಿಯುವ; ನೀರಾಗಿ ಹರಿಯುವ; ಗಡಿಬಿಡಿ, ಕಳವಳ; ಖಂಡನೆ.
ವಿದ್ರಾವ ಕರಗುವಿಕೆ; ಹಿಂದೋಟ.
ವಿದ್ರುಮ ಹವಳ; ಚಿಗುರು.
ವಿದ್ವತ್ (ವಿದ್ವತ್ತು), ಪಾಂಡಿತ್ಯ, ತಿಳಿವು.
ವಿದ್ವಾನ್ ವಿದ್ವಾಂಸ, ಪಂಡಿತ; ಬಲ್ಲಿದ.
ವಿದ್ವೇಷ ವಿಶೇಷ ಹಗೆ.
ವಿಧ ರೀತಿ, ಬಗೆ, ತರ.
ವಿಧವೆ ವಿತಂತು, ಗಂಡನನ್ನು ಕಳೆದುಕೊಂಡವಳು.
ವಿಧಾತ ವಿಧಿ, (ವಿಧಾತೃ), ಬ್ರಹ್ಮ.
ವಿಧಾನ ರೀತಿ; ಸಮತಟ್ಟು; ಸರಿಯಾಗಿಡುವ ಕ್ರಮ; ನಿಯಮ; ಬಗೆ; ಸಾಧನ; ವ್ಯಾಕರಣದಲ್ಲಿ ಹಿಂದೆಯೂ ಮುಂದೆಯೂ ಸೇರುವ ಆದೇಶಗಳು.
ವಿಧಾಯಕ ನಿಯಮಮಾಡುವ.
ವಿಧಿ ಬಿದಿ (ದ್ಭ), ಬ್ರಹ್ಮ; ಭಾಗ್ಯ, ದೈವ, ಅದೃಷ್ಟ; ಕ್ರಮ; ಕರ್ಮ.
— ಜ್ಞ ಕರ್ಮ ನಿಯಮ ತಿಳಿದವ.
— ವತ್ ನಿಯಮಾನುಸಾರ.
— ಲಿಖಿತ ಹಣೆಬರಹ, ಬ್ರಹ್ಮನಿರ್ಧರಿಸಿದ.

ವಿಧಿತ ಹೇಳಲ್ಪಟ್ಟ, ಆಜ್ಞಾಪಿಸಲ್ಪಟ್ಟ; ನಿಶ್ಚಿತ.
ವಿಧಿಸು ಆಜ್ಞೆಮಾಡು; ನಿಶ್ಚಯಿಸು.
ವಿಧು ಚಂದ್ರ; ಪಚ್ಚಕರ್ಪೂರ; ವಿಷ್ಣು; ಬ್ರಹ್ಮ; ಶಂಕರ; ವಾಯು, ಬಿದು (ದ್ಭ).
ವಿಧುರ ವಿಂಗಡಿಸಲ್ಪಟ್ಟ, ಬೇರೆಯಾದ; ಭಾರವಿಲ್ಲದ; ಪತ್ನಿಯನ್ನು ಕಳೆದುಕೊಂಡವ.
ವಿಧೆ (ವಿಧಾ), ರೂಪ; ಬಗೆ, ರೀತಿ; ಕ್ರಮ; ಕ್ರಿಯೆ; ಕೂಲಿ, ಮಜೂರಿ; ಮೇವು.
ವಿಧೇಯ ಅಧೀನ; ಮಾಡಲಿಕ್ಕೆ ಯೋಗ್ಯವಾದ; ಹೇಳಿದಂತೆ ಮಾಡುವ; ಆಜ್ಞಾಪಾಲಕ.
—ತೆ ಅಧೀನತೆ; ಆಜ್ಞೆಯನ್ನು ಮಾನಿಸುವುದು.
ವಿಧ್ಯರ್ಥ ಮಾಡೆಂದು ಅರ್ಥ ಸೂಚಿಸುವ.
ವಿಧ್ಯುಕ್ತ ವೇದದಲ್ಲಿ ಹೇಳಿದ; ವಿಧಿಸುವ.
ವಿಧ್ವಂಸ ನಾಶ, ಪೂರ್ಣಹಾನಿ; ಹಗೆ, ವೈರ.
ವಿನತಾ ವಿನತಾದೇವಿ, ಗರುಡನ ತಾಯಿ; ಕಶ್ಯಪನ ಒಬ್ಬಳು ಹೆಂಡತಿ.
ವಿನದ ಸದ್ದು.
ವಿನಯ ಶಿಕ್ಷೆ; ಪ್ರಣಾಮ, ನಮಸ್ಕಾರ; ಅನುನಯ; ಜಿತೇಂದ್ರಿಯ; ಮೃದು ಶೀಲ; ರೀತಿ, ಮರ್ಯಾದೆ; ಬೌದ್ಧ ಪಿಟಕಗಳಲ್ಲಿ ಒಂದು.
ವಿನಾ ಹೊರತು; ಬಿಟ್ಟ, ಉಳಿದ.
ವಿನಾಡಿ ವಿಘಳಿಗೆ, 24 ನಿಮಿಷ ಕಾಲ.
ವಿನಾಯಕ ಬೆನಕ (ದ್ಭ), ಗಣೇಶ, ಗಣಪತಿ.
ವಿನಾಶ ಧ್ವಂಸ, ನಾಶ, ಹಾನಿ.
ವಿನಿಮಯ ಮಾರ್ಪಾಟು, ಅದಲು ಬದಲು.
ವಿನಿಯೋಗ ಸೇವೆ; ಊಳಿಗ; ಅಧಿಕಾರ; ವೆಚ್ಚ, ವ್ಯಯ.
ವಿನೀತ ವಿನಯದಿಂದ ಕೂಡಿದ, ನಮ್ರ; ಸಂಸ್ಕಾರಹೊಂದಿದ, ರೀತಿ ಬಲ್ಲ.
ವಿನೇಯ ನಿಯಮಿತ; ವಿಧೇಯವಾದ.
ವಿನೋದ ಬಿನದ (ದ್ಭ), ವಿಲಾಸ, ಆಟ; ಆಮೋದ; ಉತ್ಸಾಹ; ಹಾಸ್ಯ.
—ಇಸು ಸಂತೋಷಪಡು; ವಿಲಾಸವಾಡು.
—ಗಾರ ನಕಲಿಗಾರ, ಹಾಸ್ಯಗಾರ; ಲಘುಮತಿ.
ವಿನೋದಿನಿ ಹಾಸ್ಯಪ್ರಿಯೆ, ವಿಲಾಸಿನಿ.
ವಿನ್ನಾಣ ಬಿನ್ನಾಣ.
ವಿನ್ಯಾಸ ಇಡುವಿಕೆ; ರಚನೆ; ಜೋಡಣೆ; ಹಾವಭಾವ.
ವಿಪಕ್ಷ ವಿರೋಧ ಪಂಗಡ, ಶತ್ರು ಪಂಗಡ; ಎರಡು ಪಕ್ಷ; ವಿರೋಧ.
ವಿಪಣ ಮಾರುವುದು, ವಿಕ್ರಯ, ಬಿಕರಿ.
ವಿಪಣಿ ಕ್ರಯವಿಕ್ರಯ ನಡೆಯುವ ಜಾಗ, ಅಂಗಡಿ, ಮಳಿಗೆ.
ವಿಪತ್ತು (ವಿಪತ್ತಿ), ಕಷ್ಟ, ಆಪತ್ತು, ಪೀಡೆ; ತೊಡಕು, ತೊಂದರೆ.
ವಿಪದ್ (ವಿಪದ), ವಿಪತ್ತಿ, ವಿಪತ್ತು.
ವಿಪನ್ನ ದುರ್ದೈವ, ಸಂಕಟ; ಕಳೆದ, ನಷ್ಟವಾದ
ವಿಪರೀತ ಪೂರ್ತಿ ವಿರೋಧ; ಉಲಟ, ಹಿಂದು ಮುಂದು; ಅತಿರೇಕ, ಅತಿಶಯ, ಬಹಳ.
ವಿಪರ್ಯಾಸ ಉದ್ದೇಶಕ್ಕೆ ವಿರುದ್ಧ; ದುರ್ದೈವ; ತೊಡಕು.
ವಿಪಂಚಿ ವೀಣೆ.
ವಿಪಾಕ ಬಲು, ಚೆನ್ನಾಗಿ ಬೇಯದ; ಕರ್ಮಫಲದ ಪರಿಣಾಮ.
ವಿಪಿನ ಕಾಡು, ಕಾನನ, ಅರಣ್ಯ.
ವಿಪುಲ (ವಿಪುಳ), ವಿಶಾಲ; ಬಹಳ; ದೊಡ್ಡದು; ಆಳ; ಪುಷ್ಕಳ, ಹೇರಳ.
ವಿಪ್ರ ಭೂಸುರ, ಬ್ರಾಹ್ಮಣ; ಕಿರಣ; ದರ್ಭೆ.
ವಿಪ್ರಯೋಗ ವಿಯೋಗ, ಅಗಲಿಕೆ.
ವಿಪ್ಲವ ತಳಮಳ; ಸೆಣಸಾಟ, ವಿಪತ್ತು; ಕಾಳಗ.
ವಿಫಲ ವ್ಯರ್ಥ; ಪ್ರಯೋಜನವಾಗದ.

ವಿಬಾಡ (ವಿಭಾಡ), ಹೊಡೆಯುವವ; ನಾಶ ಕಾರಿ; ಧಿಕ್ಕಾರ.

ವಿಬುಧ ಬಲ್ಲಿದ, ತಿಳಿದವ; ವಿದ್ವಾಂಸ; ದೇವತೆ; ಬ್ರಾಹ್ಮಣ.

ವಿಭಕ್ತ ಒಡೆದ, ಭಾಗವಾದ, ಪಾಲಾದ.

ವಿಭಕ್ತಿ ವಿಭಾಗ; ಪಾಲು; ನಾಮಪದದ ಹೇತು ವನ್ನು ತಿಳಿಸುವ ಪ್ರತ್ಯಯ.

ವಿಭಜನ ಒಡೆಯುವಿಕೆ, ವಿಭಾಗಿಸುವಿಕೆ; ಎಕ್ಕುವಿಕೆ; ವಿಂಗಡಿಸುವಿಕೆ.

ವಿಭಜಿಸು ಒಡೆ, ವಿಭಾಗಿಸು, ವಿಂಗಡಿಸು.

ವಿಭವ ಸಂಪತ್ತು, ದ್ರವ್ಯ; 2ನೆಯ ಸಂವತ್ಸರ; ಉತ್ಸಾಹ; ವೈಭವ.

ವಿಭಾಕರ ಸೂರ್ಯ.

ವಿಭಾಗ ಭಾಗ; ಅಂಶ; ಒಡೆದ ಪಾಲು.

ವಿಭಾಜಕ ವಿಭಾಗಿಸಲ್ಪಡುವ, ವಿಂಗಡಿಸಲ್ಪ ಡುವ.

ವಿಭಾತ ಪ್ರಭಾತ, ಬೆಳಗು.

ವಿಭಾವಸು ಸೂರ್ಯ; ಅಗ್ನಿ; ಚಂದ್ರ.

ವಿಭಿನ್ನ ಬೇರೆಗೊಂಡ; ಒಡೆದ, ಭಾಗವಾದ.

ವಿಭೀಷಣ ರಾವಣನ ಒಬ್ಬ ಸೋದರ. ಈತನು ರಾಮರಾವಣರ ಕಾಳಗದ ಸಮಯದಲ್ಲಿ ರಾಮನ ಪಕ್ಷ ವಹಿಸಿದನು.

ವಿಭು ಪ್ರಭು, ಒಡೆಯ, ಸ್ವಾಮಿ; ಬ್ರಹ್ಮ, ವಿಷ್ಣು; ಶಿವ.

ವಿಭೂತಿ ಭಸ್ಮ, ಬೂದಿ; ಐಶ್ವರ್ಯ; ಅಣಿ ಮಾದಿ ಅಷ್ಟೈಶ್ವರ್ಯ; ಒಂದು ವೃತ್ತ ಜಾತಿ; ಮಹಾಪುರುಷ.

ವಿಭೂಷಣ ಅಲಂಕಾರ, ಆಭರಣ.

ವಿಭೇದ ಪ್ರಭೇದ, ವ್ಯತ್ಯಾಸ; ವಿಂಗಡ.

ವಿಭ್ರಮ ತಪ್ಪು ತಿಳಿವಳಿಕೆ; ಭ್ರಾಂತಿ, ಮಂಕು; ಶೃಂಗಾರದ ಒಂದು ಮನಃಸ್ಥಿತಿ.

ವಿಮನಸ್ಕ ಉತ್ಸಾಹ ಕುಂದಿದ; ವಿರುದ್ಧ ಮನಸ್ಸುಳ್ಳ.

ವಿಮನಸ್ಸು ಬೇರೆ ಮನಸ್ಸು; ಕಳವಳ.

ವಿಮರ್ಶ (ವಿಮರ್ಶೆ), ತೂಗುವುದು, ತುಲನೆ ಮಾಡುವುದು; ಪರಿಶೀಲನೆ; ಪರ್ಯಾ ಲೋಚನೆ.

—ಕ ಪರಿಶೀಲನೆ ನಡಸುವವ, ಟೀಕಾ ಕಾರ, ತುಲನೆ ಮಾಡುವವ.

ವಿಮಲ ಕಶ್ಮಲವಿಲ್ಲದ, ಸ್ವಚ್ಛ.

ವಿಮಾನ ಅರಮನೆ; ಗೋಪುರ; ಶವ ಸಾಗಿ ಸುವ ಮಂಟಪ; ಆಕಾಶದಲ್ಲಿ ಸಂಚರಿಸುವ ವಾಹನ.

ವಿಮುಕ್ತ ಬಿಡುಗಡೆಗೊಂಡ.

ವಿಮುಖ ಪ್ರತಿಕೂಲ ಮುಖ, ಮುಖ ತಿರು ಗಿಸುವಿಕೆ, ಉದಾಸೀನತೆ; ವಿರುದ್ಧ.

ವಿಮೋಚನ (ವಿಮೋಚನೆ), ಬಿಡುಗಡೆ; ತಪ್ಪಿ ಸುವಿಕೆ; ಕಳಿಸುವಿಕೆ.

ವಿಯತ್ ಆಕಾಶ, ವಿಯತ್ತಳ.

ವಿಯೋಗ ಅಗಲಿಕೆ, ವಿರಹ.

ವಿಯೋಗಿನಿ ಗಂಡನಿಂದ ದೂರಾದವಳು; ಒಂದು ವೃತ್ತ.

ವಿರಕ್ತ (ಬಿಡಲ್ಪಟ್ಟ), ಬೈರಾಗಿ, ಪ್ರಪಂಚದ ಮೋಹ ತೊರೆದವ.

ವಿರಕ್ತಿ ಅನುರಾಗವಿಲ್ಲದಿರುವಿಕೆ, ವೈರಾಗ್ಯ.

ವಿರಚನೆ ರಚನೆ, ನಿರ್ಮಾಣ.

ವಿರಚಿಸು ತಯಾರಿಸು, ಮಾಡು, ನಿರ್ಮಿಸು.

ವಿರಡ ವಿಸ್ತಾರ; ವಿರಾಟ.

ವಿರತ ಮುಗಿದ; ನಿಂತ; ತಡೆದ.

ವಿರತಿ ನಿಲುಗಡೆ; ತಡೆ; ನಿಷ್ಕಾಮ.

ವಿರಲ (ವಿರಳ), ಅವಕಾಶವುಳ್ಳ, ಒತ್ತಾಗಿರದ; ಬೇರೆಬೇರೆ; ದೂರದೂರ, ಬಿಡಿಬಿಡಿಯಾದ.

ವಿರಸ ಪ್ರೀತಿಯಿಲ್ಲದಿರುವುದು; ಪೀಡೆ; ರಸ ಹೀನತೆ.

ವಿರಹ ಅಗಲಿಕೆ.

ವಿರಹಿ ಅಗಲಿಕೆಯುಳ್ಳವ, ಅಗಲಿದವ.

ವಿರಹಿಣಿ ಪರಿತ್ಯಕ್ತೆ; ಅಗಲಿದವಳು.
ವಿರಳ (ವಿರಲ), ಬಿಡು; ದೂರದೂರ; ಕಡಮೆಯಾಗಿರುವುದು.
ವಿರಾಗಿ ವೈರಾಗಿ, ವಿರಕ್ತ, ಪ್ರಪಂಚದಲ್ಲಿ ಆಸಕ್ತಿಯಿಲ್ಲದವ.
ವಿರಾಜ ಹೊಳೆವ, ಕಾಂತಿತೋರುವ; ಬ್ರಹ್ಮನ ಒಬ್ಬ ಮಗ.
ವಿರಾಟ್ (ವಿರಾಜ್), ವಿಶ್ವವ್ಯಾಪಿ; ಕಾಂತಿಯುತ.
ವಿರಾಟ ಮತ್ಸ್ಯ ದೇಶದ ದೊರೆ. ಇವನು ಮಹಾರಥ. ಇವನ ನಗರದಲ್ಲಿಯೇ ಪಾಂಡವರು ಅಜ್ಞಾತವಾಸವನ್ನು ಕಳೆದರು.
— ಪುರುಷ ವಿಶ್ವಪುರುಷ, ಪರಮಾತ್ಮ.
ವಿರಾಡ್ರೂಪ ವಿರಾಟರೂಪ, ವಿಶ್ವರೂಪ.
ವಿರಾಧ ರಾಮನಿಂದ ಹತನಾದ ಒಬ್ಬ ರಾಕ್ಷಸ
ವಿರಾಮ ವಿಶ್ರಾಂತಿ; ತೆರಪು; ಬಿಡು; ಅವಸಾನ, ಅಂತ್ಯ; ವಿರಾಮದ ಸಂಕೇತ.
ವಿರಿಂಚಿ ಹಂಸವಾಹನ, ಬ್ರಹ್ಮ.
ವಿರುದ್ಧ ಇದಿರಾದ; ವಿಮುಖ; ಪ್ರತಿಕೂಲ; ಒಪ್ಪದ, ಒಗ್ಗದ.
ವಿರೂಪ ವಿಲಕ್ಷಣ ರೂಪ, ವಿಕಾರ ರೂಪ; ದುಷ್ಟರೂಪ.
ವಿರೂಪಾಕ್ಷ ಮುಕ್ಕಣ್ಣ, ಶಿವ.
ವಿರೋಚನ ಹೊಳೆಯುವವ; ಸೂರ್ಯ; ಚಂದ್ರ; ಬಲಿಯ ತಂದೆ; ಮಗು.
ವಿರೋಧ ಹಗೆತನ, ವೈರ; ತಡೆ; ಪ್ರತಿಕೂಲತೆ; ಇದಿರಾಳಿತನ.
— ಆಭಾಸ ಒಂದು ಬಗೆ ಶ್ಲೇಷೆ; ನಿಜವಾಗಿ ಇಲ್ಲದಿದ್ದರೂ ವಿರೋಧದಂತೆ ಕಾಣುವ.
— ಇಸು ಅಡ್ಡಿಮಾಡು, ಪ್ರತಿಭಟಿಸು; ಹಗೆಮಾಡು.
ವಿರೋಧಿ ಹಗೆ, ಇದಿರಾಳಿ, ವೈರಿ.
ವಿರೋಧಿಕೃತು 45ನೆಯ ಸಂವತ್ಸರ.
ವಿಲಕ್ಷ ಆಶ್ಚರ್ಯದಿಂದ ಕೂಡಿದ; ನಾಚಕೊಂಡ.
ವಿಲಕ್ಷಣ ಭಿನ್ನಗುರುತುಳ್ಳ; ವಿಚಿತ್ರ ಲಕ್ಷಣ; ನೂತನ; ಲಕ್ಷಣಕ್ಕೆ ವಿರೋಧವಾದ.
ವಿಲಗ ಕಷ್ಟ; ಅಪವಾದ; ಪೀಡೆ.
ವಿಲಯ ಪ್ರಳಯ; ನಾಶ.
ವಿಲಸ ಕಾಂತಿ; ವಿಲಾಸ.
ವಿಲಸಿತ ಹೊಳೆಯುವ, ಪ್ರಕಾಶಿಸುವ; ಚಮತ್ಕಾರಿಕ, ವಿಚಿತ್ರ.
ವಿಲಂಬ (ವಿಳಂಬ), ಸಾವಕಾಶ, ಮಂದ; ತೂಗಾಡುವ, ನೇಲುವ.
— ಇಸು ನಿಧಾನಿಸು, ಸಾವಕಾಶಮಾಡು; ತೂಗು; ಉದ್ದ ಎಳೆ, ಬೆಳೆಸು.
ವಿಲಾಪ ರೋದನ, ಅಳು; ಅತಿ ದುಃಖ.
ವಿಲಾಯತಿ ಯೂರೋಪು; ಇಂಗ್ಲೆಂಡ್; ವಿದೇಶ.
ವಿಲಾಸ ಹೊಳೆಯುವ, ಕಾಂತಿಯುತ; ಆಟ, ವಿನೋದ; ತಮಾಷೆ, ಚೇಷ್ಟೆ; ಲಾಸ್ಯ; ಲಾವಣ್ಯ; ಒಯ್ಯಾರ, ಬಿನ್ನಾಣ.
ವಿಲಿಪ್ತ ಬಳಿದ, ಬಳೆದ, ಲೇಪಿಸಲ್ಪಟ್ಟ.
ವಿಲುಪ್ತ ನಾಶಮಾಡಲ್ಪಟ್ಟ.
ವಿಲೂನ ತುಂಡಾದ, ತುಂಡು ಹಾರಿಸಿದ.
ವಿಲೋಕನ ನೋಡುವಿಕೆ, ನೋಟ.
ವಿಲೋಚನ ಕಣ್ಣು.
ವಿಲೋಮ ರೋಮ ಹೋದುದು; ವಿಪರೀತ; ಹಿಂದುಮುಂದೆ.
ವಿಲೋಲ ನಡುಕ, ಚಂಚಲ.
ವಿಲೋಲುಪ ಅತ್ಯಾಸೆಯುಳ್ಳ.
ವಿವಕ್ಷೆ ಅರ್ಥ, ಉದ್ದೇಶ; ಮಾತಾಡುವ ಇಚ್ಛೆ.
ವಿವಧ ಕಾಲುದಾರಿ.
ವಿವರ ರಂಧ್ರ, ತೂತು; ದೋಷ; ಬಿಲ; ವಿಸ್ತಾರವಾದ ಹೇಳಿಕೆ.
— ಇಸು ಹೇಳು, ವಿವರವಾಗಿ ತಿಳಿಸು.

—ಣೆ ಚಿತ್ರಿಸುವಿಕೆ; ಆಖ್ಯಾನ.
ವಿವರ್ಜಿಸು ಬಿಡು, ಪರಿತ್ಯಜಿಸು.
ವಿವರ್ಣ ಬಣ್ಣಗೆಟ್ಟ.
ವಿವರ್ತ ನೃತ್ಯ; ಪರಿವರ್ತನೆ; ವೇದಾಂತದಲ್ಲಿ ಒಂದು ವಾದ.
ವಿವಶ ಮೈಮರೆತ, ಪರಾಧೀನವಾದ; ವ್ಯಾಕುಲ
ವಿವಾದ ವಾದ, ತರ್ಕ, ಚರ್ಚೆ.
ವಿವಿಕ್ತ ಏಕಾಂತ, ಗುಟ್ಟು; ಜನರಿಲ್ಲದ; ಪವಿತ್ರ; ಸೇರಿರದ.
ವಿವಿಧ ನಾನಾ ತೆರನ; ಬಗೆಬಗೆಯ.
ವಿವಾಹ ಮದುವೆ; ಸೇರಿಕೆ, ಕೂಟ; ಉಡಿಕೆ; ಹೆಣ್ಣನ್ನು ಹೊತ್ತುಕೊಂಡು ಹೋಗುವುದು
ವಿವೇಕ ಜಾಣ್ಮೆ; ತಿಳಿವಳಿಕೆ; ವಿಚಾರಪರತೆ.
ವಿಶ ವೈಶ್ಯ.
ವಿಶದ ಬೆಳ್ಳಗಿರುವ, ಸ್ವಚ್ಛ; ಸ್ಪಷ್ಟ.
ವಿಶಸನ ಕೊಲೆ, ನಾಶ; ಕತ್ತಿ, ತರವಾರು.
ವಿಶಂಕೆ ದೇಹ; ಭಯ.
ವಿಶಾಖ ಗೆಲ್ಲಿಲ್ಲದ; ಹಗೆ, ವೈರಿ; ಒಂದು ನಕ್ಷತ್ರ.
ವಿಶಾರದ ಬಹಳ ಸಮರ್ಥ, ಪಂಡಿತ, ವಿದ್ವಾಂಸ
ವಿಶಾಲ ವಿಸ್ತಾರ, ಹರಡಿದ, ಅಗಲವಾದ.
ವಿಶಿಷ್ಟ ಬೇರೆಯಾದ; ತನ್ನದೇ ಆದ ಗುಣವುಳ್ಳ.
ವಿಶಿಷ್ಟಾದ್ವೈತ ಅದ್ವೈತದಲ್ಲೇ ಬೇರೆ ಆಗಿರುವ, ರಾಮಾನುಜರು ಸ್ಥಾಪಿಸಿದ ಒಂದು ಮತ ಸಂಪ್ರದಾಯ.
ವಿಶುದ್ಧ ಶುದ್ಧವಾದ, ಚೊಕ್ಕ, ಕುಂದಿಲ್ಲದ, ಸ್ಪಷ್ಟವಾದ.
ವಿಶೇಷ ಹೆಚ್ಚುಗಾರಿಕೆ; ವ್ಯತ್ಯಾಸ.
—ಣ ಗುಣ ಹೇಳುವ ಪದ, ಹೆಚ್ಚಿನ.
ವಿಶೇಷ್ಯ ವಿಶೇಷವೆನಿಸುವಿಕೆ; ಗುಣ ಹೇಳಿಸಿಕೊಳ್ಳುವ ಪದ.
ವಿಶ್ರಮ ವಿರಾಮ, ಕಾರ್ಯದ ಕೊನೆ; ವಿಶ್ರಾಂತಿ.
ವಿಶ್ರಾಮ ವಿರಾಮ, ಬಿಡುವು, ವಿಶ್ರಾಂತಿ.
ವಿಶ್ರಾಂತಿ ಕೆಲಸದಿಂದ ನಿವೃತ್ತಿ; ಆರಾಮ, ದಣಿವಿನ ಪರಿಹಾರ.
ವಿಶ್ರುತ ಪ್ರಸಿದ್ಧ.
ವಿಶೃಂಖಲ ನಿಯಮ ತಪ್ಪಿದ, ಅಂಕೆಯಿಲ್ಲದ.
ವಿಶ್ವ ಎಲ್ಲ ಜಗತ್ತು, ಲೋಕ; ಸಕಲ, ಎಲ್ಲಾ; ವಿಷ್ಣು.
ವಿಶ್ವಕರ್ಮ ಒಬ್ಬ ದೈವಶಿಲ್ಪಿ.
ವಿಶ್ವಸ್ತ ವಿಶ್ವಾಸವುಳ್ಳ, ನಂಬುಗೆಯುಳ್ಳ; ಧೀರ.
ವಿಶ್ವಸ್ತೆ ವಿಧವೆ.
ವಿಶ್ವಂಭರ ಪ್ರಪಂಚದ ರಕ್ಷಕ, ವಿಷ್ಣು.
ವಿಶ್ವಾನರ ವೈಶ್ವಾನರ, ಸೂರ್ಯ; ಅಗ್ನಿ.
ವಿಶ್ವಾಮಿತ್ರ ಕನ್ಯಾಕುಬ್ಜದ ಗಾದಿರಾಜನ ಮಗನು. ಇವನು ಕ್ಷತ್ರಿಯನಾಗಿ ಜನಿಸಿದರೂ ತಪೋಬಲದಿಂದ ಬ್ರಾಹ್ಮಣನಾದನು.
ವಿಶ್ವಾವಸು ಒಬ್ಬ ಗಂಧರ್ವ; ಒಂದು ಸಂಪತ್ತು; 39ನೆಯ ಸಂವತ್ಸರ.
ವಿಶ್ವಾಸ ನಂಬಿಕೆ, ಭರವಸೆ, ಶ್ರದ್ಧೆ.
ವಿಶ್ವೇಶ (ವಿಶ್ವೇಶ್ವರ), ಶಿವ.
ವಿಷ ನಂಜು, ಬಿಸ (ದ್ಭ); ಕಠೋರ ಮಾತು, ಚುಚ್ಚು ಮಾತು; ಕಹಿ; ಸೇರದ.
ವಿಷಕನ್ನಿಕೆ ಈಕೆಯ ಶರೀರ ಸಂಪರ್ಕಮಾಡಿದರೆ ಸಾವು ಉಂಟಾಗುವ ಕನ್ನಿಕೆ.
ವಿಷಕಂಠ ವಿಷಕಂಧರ, ಕೊರಳಲ್ಲಿ ವಿಷವುಳ್ಳವ, ಶಿವ.
ವಿಷಣ್ಣ ಚೇಳು; ಕಂದಿದ; ದುಃಖಿತ; ವಿಷಾದಗೊಂಡವ.
ವಿಷಪುಚ್ಛ ಚೇಳು.
ವಿಷಮ ಬೆಸ; ಸಮವಲ್ಲದ; ಕಠಿಣ; ಸಂಕಟ; ಅನ್ಯಾಯ; ನೀಚ; ಭೀಕರ.
ವಿಷಯ ದೇಶ; ಯೋಚನೆಗೆ ಗುರಿಯಾದ ವಸ್ತು; ಪ್ರಸಂಗ; ಕಾಮ; ಇಂದ್ರಿಯ; ಗೋಚರವಾದುದು; ಆಶ್ರಯ.
ವಿಷಾಣ ಕೊಂಬು, ಕೋಡು.

ವಿಷಾದ ದುಃಖ; ಭೀತಿ; ನಿರುತ್ಸಾಹ; ಪರಿತಾಪ
ವಿಷೂಚಿ (ವಿಸೂಚಿಕೆ), ಕಾಲರಾ, ಸನ್ನಿ, ವಾಂತಿಭೇದಿ, ಮಾರಿಕಾ.
ವಿಷ್ಕಂಭ ನಾಟಕದಲ್ಲಿ ಲೋಪವಾದ ಅಂಶ; ಅಂಕಗಳ ಎಡೆಯಲ್ಲಿ ತಿಳಿಸುವ ಕಥಾ ಭಾಗ; ತಡೆ; ತಾಳ, ಅಗಳಿ.
ವಿಷ್ಟ ಪಿಟ್ಟೆ, ಮಲ; ಪಾಪ.
ವಿಷ್ಟಪ ಪ್ರಪಂಚ.
ವಿಷ್ಟರ ಆಸನ, ಪೀಠ.
ವಿಷ್ಣು ಹಿಂದೂ ತ್ರಿಮೂರ್ತಿಗಳಲ್ಲಿ ಒಬ್ಬ. ವೇದಗಳ ಕಾಲಗಳಲ್ಲಿ ವಿಷ್ಣು ಅಷ್ಟೊಂದು ಪ್ರತಿಷ್ಠೆ ಪಡೆದಿರಲಿಲ್ಲ. ಬ್ರಾಹ್ಮಣಗಳಲ್ಲಿ ಅದಕ್ಕಿಂತ ಹೆಚ್ಚಿನ ಕೀರ್ತಿಯೂ ಮುಂದೆ ಪುರಾಣ ಯುಗದಲ್ಲಿ ಅನೇಕ ಕಥೆಗಳೂ ಅವನ ಹೆಸರಿಗೆ ಸೇರುವುವು. ಅವನು ಜಗತ್ತಿನ ಪಾಲಕನೆನಿಸಿ ದುಷ್ಟದಮನಕ್ಕಾಗಿ ಹಲವು ಅವತಾರಗಳನ್ನು ಕೊಂಡನೆಂದು ಕಥೆ. ವಿಷ್ಣುವಿಗೆ ಅಚ್ಯುತ, ಅನಂತ, ಮೊದಲಾದ ನೂರಾರು ಹೆಸರುಗಳಿವೆ. ಮೊದಲು ಸೂರ್ಯ ದೇವತೆಗೆ ಈ ಹೆಸರಿತ್ತು.
— ಶ್ರವಣ ನಕ್ಷತ್ರ.
ವಿಷ್ಣುಗುಪ್ತ ಚಾಣಕ್ಯ, ಕೌಟಲ್ಯ.
ವಿಸ (ದ್ಭ) ವಿಷ (ಸಂ).
ವಿಸರ್ಗ ದಾನ, ತ್ಯಾಗ; ಮೋಕ್ಷ; ಪ್ರಳಯ; ನಿಲುಗಡೆ; ಃ ಈ ಗುರುತುಳ್ಳ ಅಕ್ಷರ.
ವಿಸರ್ಜ ತ್ಯಾಜ್ಯ, ಬಿಡುವಿಕೆ; ರೋಷ.
— ನ ಬಿಡುವಿಕೆ, ತ್ಯಾಗ; ಆವಾಹನೆಯ ಕೊನೆ.
ವಿಸರ್ಪ ಪ್ರಸಾರ, ಹರಡುವಿಕೆ.
ವಿಸೃಷ್ಟ ಪ್ರೇರಿಸಲ್ಪಟ್ಟ; ಬಿಟ್ಟ.
ವಿಸ್ತರಿಸು ಹರಡು, ಬಿತ್ತರಿಸು.
ವಿಸ್ತರಣ ವಿಸ್ತರಿಸುವಿಕೆ; ವಿಸ್ತಾರ; ಬಡಾವಣೆ; ವಿವರವಾಗಿ ಹೇಳುವಿಕೆ.
ವಿಸ್ತಾರ (ವಿಸ್ತರ), ವಿಶಾಲ; ಹಾಸಿದುದು, ಹಾಸುಗೆ; ಪೀಠ; ಒಳ್ಳೆಯ.
ವಿಸ್ತೀರ್ಣ ವೈಶಾಲ್ಯ, ವಿಶಾಲತೆ.
ವಿಸ್ತೃತ ಹರಡಿದ, ಚೆದರಿದ, ಹರಹಿದ.
ವಿಸ್ಮಯ ಆಶ್ಚರ್ಯ, ಅದ್ಭುತ.
ವಿಸ್ಮಿತ ಆಶ್ಚರ್ಯಗೊಂಡ.
ವಿಸ್ಮೃತಿ ಮರವೆ; ಗಲಿಬಿಲಿ ಸ್ಥಿತಿ.
ವಿಹ ಆಕಾಶ, ಗಾಳಿ.
ವಿಹಗ (ವಿಹಂಗ, ವಿಹಂಗವು), ಪಕ್ಷಿ; ವಿಮಾನ.
ವಿಹರಿಸು ಸಂಚರಿಸು; ಅಲೆದಾಡು; ಹಾರಾಡು.
ವಿಹತಿ ಘಾತ, ಪೆಟ್ಟು; ರಭಸ.
ವಿಹಾಯ ಬಿಟ್ಟು, ತ್ಯಜಿಸಿ.
ವಿಹಾಯಸ ಗಗನ, ಆಕಾಶ; ಪಕ್ಷಿ.
ವಿಹಾರ ಕ್ರೀಡೆ; ಸಂಚಾರ; ಬುದ್ಧಸನ್ಯಾಸಿಗಳ ನಿವಾಸ; ಸುತ್ತುವಿಕೆ.
ವಿಹಿತ ಹಿತವಾದುದು; ಯೋಗ್ಯ, ಉಚಿತ; ಮಾಡಲ್ಪಟ್ಟ; ಬೋಧಿಸಲ್ಪಟ್ಟ.
ವಿಹೀನ ಬಿಡಲ್ಪಟ್ಟ, ಬಿಟ್ಟ; ಇಲ್ಲದವ.
ವಿಹ್ವಲ ಭಯಾದಿಗಳಿಂದ ಬೆಬ್ಬರಗೊಳುವಿಕೆ; ಕಳವಳ; ಗಲಿಬಿಲಿ.
ವಿಹ್ವಲೆ ಮದಿಸಿದವಳು; ಭಯಭ್ರಾಂತಳು; ಮೈಮರೆತವಳು; ಕಳವಳಗೊಂಡವಳು.
ವಿಳಸ (ವಿಲಸ), ವಿಲಾಸ; ಪತ್ರೆ.
ವಿಳಾಸಿನಿ (ವಿಲಾಸಿನಿ), ಸ್ತ್ರೀ; ಸೊಗಸುಗಾರ್ತಿ.
ವಿಳ್ಳೆಯ (ವೀಳೆಯ), ತಾಂಬೂಲ.
ವಿಂಗಡ ಬೇರೆ; ವಿಭಾಗ.
— ಇಸು ಬೇರೆ ಮಾಡು, ಪ್ರತ್ಯೇಕಿಸು.
ವಿಂಜು ಖಂಜನ, ಗೀಜುಗ.
ವಿಂಡು ಹಿಂಡು.
ವಿಂಧ್ಯ ಮಧ್ಯಹಿಂದುಸ್ಥಾನದ ಒಂದು ಬೆಟ್ಟ; ಆರ್ಯಾವರ್ತ ದಕ್ಷಿಣ ಪಥಗಳ ಗಡಿ.
ವೀಕ್ಷಣ ನೋಡುವಿಕೆ, ನೋಟ.
ವೀಕ್ಷಿಸು (ಈಕ್ಷಿಸು), ನೋಡು.

ವೀಚಿ ನೀರ ತೆರೆ, ಅಲೆ, ತರಂಗ.
ವೀಚಿತರಂಗ ತರಂಗವು ಇನ್ನೊಂದು ತರಂಗವನ್ನು ಹಿಂಬಾಲಿಸುವಂತೆ ಒಂದು ಕಾರ್ಯ ಇನ್ನೊಂದನ್ನು ಅನುಸರಿಸುವಿಕೆ.
ವೀಚಿಯೋಗ ಕಣ್ಮರೆಯಾಗು; ಕೆಡು.
ವೀಜನ (ವ್ಯಂಜನ), ಬೀಸಣಿಗೆ.
ವೀಣಾ (ವೀಣೆ), ಒಂದು ತಂತಿಯ ವಾದ್ಯ.
ವೀಣಾಪಾಣಿ ಕೈಯಲ್ಲಿ ವೀಣೆಯುಳ್ಳವಳು, ಸರಸ್ವತಿ.
ವೀತರಾಗ ರಾಗದ್ವೇಷಗಳನ್ನು ಬಿಟ್ಟ.
ವೀತಿಹೋತ್ರು ಅಗ್ನಿ.
ವೀಥಿ (ವೀಧಿ), ಬೀದಿ (ದ್ಭ), ಸಾಲು.
ವೀರ ನವರಸಗಳಲ್ಲೊಂದು; ಶೌರ್ಯ, ಪರಾಕ್ರಮ; ಶಕ್ತ, ಪರಾಕ್ರಮಿ.
ವೀರಕಂಕಣ ಯೋಧನು ತೊಡುವ ಬಳೆ; ತೋಳುಬಳೆ.
ವೀರಣ ಒಂದು ಡೋಲಿನಂಥ ವಾದ್ಯ; ಲಾಮಂಚ, ಬಾಳದ ಬೇರು.
ವೀರಪಳಿ ನಡುಕಟ್ಟು, ದಟ್ಟಿ.
ವೀರಪಾನ ವೀರರು ಕುಡಿಯುವ ಪಾನ, ಮದ್ಯಪಾನ.
ವೀರಶೈವ ಲಿಂಗಾಯುತ.
ವೀರಶ್ರೀ ಜಯಶ್ರೀ; ಪರಾಕ್ರಮವೆಂಬ ಲಕ್ಷ್ಮಿ.
ವೀರಸ್ವರ್ಗ ಮಡಿದ ವೀರರು ಸೇರುವ ಸ್ಥಳ.
ವೀರ್ಯ ಶಕ್ತಿ, ವೀರನೆಂಬ ಹೆಸರಿಗೆ ಕಾರಣವಾದ ಗುಣ; ಪರಾಕ್ರಮ; ಬಲ; ಧಾತು, ಶುಕ್ರ.
—ವಂತ ವೀರ; ಶಕ್ತಿಯುಕ್ತ.
ವೀಸ ಅಲ್ಪ; ಹಣದ $\frac{1}{16}$ನೆಯ ಭಾಗ.
ವೀಳೆಯ (ವೀಳ್ಯ), ವೀಟಕಾ (ಸಂ), ತಾಂಬೂಲ, ಎಲೆಅಡಕೆ, ಕವಳ.
ವೃಕ ತೋಳ; ನರಿ; ಕಾಗೆ.
ವೃಕೋದರ ಭೀಮಸೇನ.
ವೃಕ್ಷ ಮರ; ಪೊದೆ.
ವೃಜಿನ ಪಾಪ, ಪಾಪಕರ್ಮ; ಮುರಿದ.
ವೃತ ಸುತ್ತಲ್ಪಟ್ಟ, ಆವರಿಸಲ್ಪಟ್ಟ.
ವೃತ್ತ ನಡೆದ; ನಡತೆ; ಒಂದು ಬಗೆ ಪದ್ಯಜಾತಿ; ಉರುಟು; ದುಂಡು; ನಡೆದ ಕಥೆ, ಚರಿತ್ರ.
ವೃತ್ತಿ ಕೆಲಸ, ಉದ್ಯೋಗ; ಜೀವನದ ಕಸಬು; ತಿರುಗುವಿಕೆ; ಟೀಕೆ, ವ್ಯಾಖ್ಯಾನ.
ವೃತ್ತಾಂತ ಸುದ್ದಿ, ವಾರ್ತೆ, ಒಸಗೆ.
ವೃತ್ರ ಇಂದ್ರನ ವೈರಿಯಾದ ಒಬ್ಬ ಅಸುರ.
ವೃದ್ಧ ಮುದುಕ, ಹೆಳವ.
ವೃದ್ಧಾಪ್ಯ ಮುಪ್ಪು, ಮುದಿತನ.
ವೃದ್ಧಿ ಹೆಚ್ಚಳ; ಒಂದು ಸಿದ್ಧಿ; ಬೆಳವಳಿಗೆ, ಏಳಿಗೆ; ಬಡ್ಡಿ (ದ್ಭ).
ವೃಂತ ತೊಟ್ಟು.
ವೃಂದ ಸಮೂಹ.
ವೃಂದಾವನ ಮಥುರೆ ಬಳಿಯ ಒಂದು ಕ್ಷೇತ್ರ. ಕೃಷ್ಣನು ವಿಹರಿಸಿದ ಸ್ಥಳ; ತುಳಸಿ ತೋಟ; ಸನ್ಯಾಸಿಗಳ ಮಸಣ; ಪೂಜ್ಯರ ಸಮಾಧಿ ಸ್ಥಳ.
ವೃಂದೆ ಸಮೂಹ; ತುಲಸಿ.
ವೃಶ್ಚಿಕ ಚೇಳು; ಒಂದು ನಕ್ಷತ್ರರಾಶಿ.
ವೃಷ (ವೃಷಭ), ಗೂಳಿ, ಬಸವ; ಮೇಷದಿಂದ ಎರಡನೆಯ ರಾಶಿ; ಇಂದ್ರ; ಧರ್ಮ.
ವೃಷಕೇತು (ವೃಷಸೇಣ), ಕರ್ಣನ ಒಬ್ಬ ಮಗ; ಶಿವ.
ವೃಷಣ ಅಂಡಕೋಶ, ತರಡು.
ವೃಷಭ ಮೊದಲನೆಯ ತೀರ್ಥಂಕರ, ಜಿನ; ಎತ್ತು, ಬಸವ (ದ್ಭ), ನಂದಿ, ಗೂಳಿ; ಒಂದು ಸೌರಮಾನ ತಿಂಗಳು.
ವೃಷಲ ಶೂದ್ರ; ಚಂದ್ರಗುಪ್ತ ರಾಜ.
ವೃಷ್ಟಿ ಮಳೆ ಸುರಿಯುವಿಕೆ.
ವೃಷ್ಣಿ ಯಾದವ ಕುಲ; ಕೃಷ್ಣ; ಟಗರು; ಕಿರಣ; ಮಳೆ ಸುರಿಸುವ.

ವೆಕ್ಕಸ ಅತಿಶಯವಾಗಿ, ಹೆಚ್ಚಾಗಿ; ಕಠಿಣ, ಬಿರುಸು; ದೊರಗು; ಕ್ರೂರ.

ವೆಗ್ಗಳ (ವೆಗ್ಗಳೆ), ವೆಗ್ಗಳಿಕೆ; ಆಧಿಕ್ಯ; ಹೆಚ್ಚಿನವ, ದೊಡ್ಡವ.

—ಇಸು ಹೆಚ್ಚು, ಅಧಿಕವಾಗು.

ವೆಚ್ಚ (ದ್ಭ) ವ್ಯಯ (ಸಂ), ಖರ್ಚು; ಬೀಯ, ಬಳಿಕೆ.

ವೆಜ್ಜ ತೂತು, ರಂಧ್ರ.

ವೆಟ್ಟ ಬೆಟ್ಟ; ಕಾಡು.

ವೆಡ್ಡಯ್ಸು(ವೇಡಯ್ಸು), ಸುತ್ತುವರಿ, ಸುತ್ತುಗಟ್ಟು, ಮುತ್ತು.

ವೆಸನ ಬೆಸನ (ದ್ಭ), ವ್ಯಸನ (ಸಂ), ಚಿಂತೆ; ಅತ್ಯಾಸಕ್ತಿ, ದುರ್ಮೋಹ, ಅಭ್ಯಾಸ, ಚಾಳಿ, ಚಟ.

ವೆಂಗಿ ಹುಚ್ಚು; ವೆಂಗಿಮಂಡಲ.

ವೆಂಟಣಿಸು ಸುತ್ತುವರಿ; ಆವರಿಸು; ಹೆಚ್ಚು.

ವೇಗ ಬೇಗ (ದ್ಭ), ಭರ, ತ್ವರೆ; ಪ್ರವಾಹ.

ವೇಗಾಯ್ಲ(ವೇಗಾಯಿಲ), ವೇಗವಾದ, ತ್ವರೆಯಾದ; ವೇಗವಾಗಿ ಸುದ್ದಿ ಒಯ್ಯುವವ.

ವೇಡಯ್ಸು ಸುತ್ತುವರಿ, ಸುತ್ತುಗಟ್ಟು.

ವೇಡಿಕೆ ವಿನೋದ; ಬೇಡಿಕೆ.

ವೇಡೆ ವೇಷ್ಟ, ಸುತ್ತುಗಟ್ಟುವುದು, ಮುತ್ತಿಗೆ; ಆವಾರ, ಬೇಲಿ; ಜೀವಿ.

—ಕೊಳು ಸುತ್ತಿಕೊಳು, ಆವರಿಸು.

ವೇಣಿ ಹೆರಳು, ಜಡೆ; ಪ್ರವಾಹ.

ವೇಣು ಕೊಳಲು; ವಾದ್ಯ; ಬಿದಿರು.

ವೇತನ ಸಂಬಳ, ಕೂಲಿ, ಮಜೂರಿ.

ವೇತಸ ಬೆತ್ತ.

ವೇತಂಡ ಆನೆ.

ವೇತಾಲ (ವೇತಾಳ), ಬೇತಾಳ, ದೊಡ್ಡ ಭೂತ.

ವೇತ್ತೃ ವೇತ್ತೃ; ಬಲ್ಲಿದ, ಕೋವಿದ.

ವೇತ್ರ ಬೆತ್ತ (ದ್ಭ).

ವೇದ ಜ್ಞಾನದ ತಿರುಳು. ಇವು ಹಿಂದೂ ತತ್ತ್ವಶಾಸ್ತ್ರದ ಮೂಲಗಳು. ಇವುಗಳನ್ನು ಆರ್ಯರು ಬೇರೆ ಬೇರೆ ಕಾಲದಲ್ಲಿ ರಚಿಸಿದುದನ್ನು ಕೆಲವು ಋಷಿಗಳು ಕೂಡಿಸಿದರೆಂದೂ ಅವು ಸುಮಾರು ಕ್ರಿ. ಪೂ. 500ಕ್ಕೆ ಮೊದಲು ರಚನೆಗೊಂಡುವೆಂದೂ ತರ್ಕಿಸುತ್ತಾರೆ. ಅವುಗಳು ಋಕ್, ಯಜುರ್, ಸಾಮ, ಅಥರ್ವ ಎಂದು ನಾಲ್ಕು ಇವೆ. ವೇದಗಳು ಅಪೌರುಷೇಯವೆಂದು ಹಿಂದೂಗಳ ನಂಬಿಕೆ.

ವೇದನೆ ನೋವು; ಸಂಕಟ; ತಿಳಿವು.

ವೇದಬಾಹಿರ ವೇದಕ್ಕೆ ಹೊರತಾದವ—ಜೈನ, ಬೌದ್ಧ ಇತ್ಯಾದಿ ಜನವರ್ಗ.

ವೇದವ್ಯಾಸ ಪರಾಶರ ಮುನಿಯ ಮಗನಾದ ಕೃಷ್ಣ ದ್ವೈಪಾಯನ ಋಷಿ.

ವೇದಾಂಗ ಶಿಕ್ಷೆ, ಛಂದಸ್, ವ್ಯಾಕರಣ, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಅಂಗಗಳು. ಇವು ವೈದಿಕ ವಿಧಿಗಳ ಅನುಸರಣೆಗೆ ಆವಶ್ಯಕವೆಂದು ಹಿಂದಿನವರ ತಿಳಿವು.

ವೇದಾಂತ ವೇದದ ಕೊನೆಯ ಭಾಗ, ಉಪನಿಷತ್ತು.

ವೇದಾಂತಿ ವೇದಾಂತ ಪರಿಚಯ ಉಳ್ಳವ, ವೇದಾಂತದಲ್ಲಿ ಹೇಳಿದಂತೆ ವರ್ತಿಸುವವ.

ವೇದಿಕೆ ಜಗಲಿ, ಕಟ್ಟೆ.

ವೇದ್ಯ ತಿಳಿವಿಗೆ ಬರುವುದು; ತಿಳಿವಿಗೆ ಯೋಗ್ಯವಾದ; ತಿಳಿದ.

ವೇಧ (ವೇಧಸ್), ವೇಧೆ; ನೇಮ; ಕಷ್ಟ, ತೊಂದರೆ.

ವೇನ ಸ್ವಾಯಂಭು ಮನುವಿನ ಮಗನಾದ ಅಂಗ.

ವೇಮ ವೇಮನಾರ್ಯನೆಂಬ ಆಂಧ್ರ ಕವಿ.

ವೇಲಾ (ವೇಲೆ), ಗಡಿ; ಮೇರೆ, ಸಮಯ, ಕಾಲ.

ವೇಲ್ಲಿತ ಸಂಚಾರ; ಕಂಪಿಸಿದ; ನಡುಗಿದ; ಕುಟಿಲ.

ವೇಶ ಪ್ರವೇಶ, ದ್ವಾರ; ಮನೆ; ಸೂಳೆಯ ಮನೆ.
ವೇಶ್ಯಾ (ವೇಶ್ಯೆ), ವಾರಾಂಗನೆ, ಸೂಳೆ.
ವೇಷ ಸೋಗು, ಉಡುಗೆ; ಠಕ್ಕು, ವಂಚನೆ.
ವೇಷ್ಟ ಆವೃತ; ಮುಚ್ಚಿದ; ಪ್ರಭಾವಳಿ; ಧೋತ್ರ.
ವೇಷ್ಟಿ ಧೋತ್ರ, ಉಡುವ ಪಂಚೆ; ವಲ್ಲಿ.
ವೇಷ್ಟಿಸು ಸುತ್ತುಗಟ್ಟು, ಸುತ್ತುವರಿ; ಆವರಿಸು.
ವೇಸಿ (ದ್ಭ) ವೇಶ್ಯಾ (ಸಂ), ಸೂಳೆ.
ವೇಳೆ (ವೇಲೆ), ತೀರ, ದಡ; ಗಡಿ, ಮೇರೆ; ಸಮಯ, ಕಾಲ.
ವೇಳ್ಕು ಬೇಕು.
ವೇಂಗಿ (ವೆಂಗಿ) ಈಗಣ ರಾಜಮಹೇಂದ್ರಿ ಪ್ರಾಂತ, ವೆಂಗಿಮಂಡಲ.
ವೈಕಲ್ಪಿಕ ವಿಕಲ್ಪವಾದ, ಸಂಶಯಕರ, ಅನುಮಾನಾಸ್ಪದ.
ವೈಕಲ್ಯ ವಿಕಲತೆ; ಕೊರತೆ, ಅಪೂರ್ಣತೆ.
ವೈಕುಂಠ ವಿಷ್ಣುಲೋಕ, ವಿಷ್ಣುವಿನ ನಿವಾಸ.
— ಯಾತ್ರೆ ಸಾವು, ಮರಣ.
ವೈಚಿತ್ರ್ಯ ವಿಚಿತ್ರತೆ; ವಿಸ್ಮಯಕರ, ಆಶ್ಚರ್ಯಕರ; ಸೋಜಿಗ.
ವೈಜಯಂತ ವಿವಿಧ ಬಣ್ಣದ ಹೂಗಳಿಂದ ಮಾಡಿದ ಸರ; ಬಾವುಟ, ಪತಾಕೆ; ಇಂದ್ರನ ಅರಮನೆ.
ವೈಜಯಂತಿ ಪತಾಕೆ, ಬಾವುಟ; ವಿಷ್ಣುವಿನ ಕೊರಳ ಹಾರ; ಬನವಸೆ.
ವೈಡೂರ್ಯ (ದ್ಭ) ವೈದೂರ್ಯ. ವಿಡೂರವೆಂಬ ಗನಿಯಲ್ಲಿ ದೊರೆಯುವ ರತ್ನ. ಒಂದು ಬಗೆ ಕಪ್ಪು ಅಥವಾ ನೀಲ ಬಣ್ಣದ ರತ್ನ.
ವೈಣಿಕ ವೀಣೆ ಬಾರಿಸುವವ.
ವೈತರಣಿ ಯಮನ ಪಟ್ಟಣದ ಮುಂದಿರುವ ಒಂದು ನದಿ. ಆ ಪಟ್ಟಣ ಸೇರಲು ಈ ನದಿಯನ್ನು ದಾಟಬೇಕು ಎಂಬ ನಂಬಿಕೆ.
ವೈತಾಲಿಕ ಸ್ತುತಿಪಾಠಕ, ಭಟ್ಟಂಗಿ.
ವೈದಿಕ ವೇದವನ್ನು ಅರಿತವ; ವೇದಕ್ಕೆ ಸಂಬಂಧಿಸಿದ; ಪುರೋಹಿತ, ಕರ್ಮಕಾಂಡ ತಿಳಿದವ.
ವೈದುಷ್ಯ ಜ್ಞಾನ, ಪಾಂಡಿತ್ಯ.
ವೈದೇಶಿಗ ವಿದೇಶದವ, ಪರದೇಶಿ.
ವೈದೇಹಿ ಜನಕಜೆ, ಸೀತೆ.
ವೈದ್ಯ ಚಿಕಿತ್ಸಾಶಾಸ್ತ್ರ ಬಲ್ಲವ; ರೋಗ ನಿವಾರಣೆಯ ಕ್ರಮ ಅರಿತವ; ವೇದ ಸಂಬಂಧವಾದ.
ವೈಮನಸ್ಸು ದುಃಖ, ವ್ಯಸನ; ವೈರ, ವಿರೋಧಭಾವ.
ವೈಮಾನಿಕ ವಿಮಾನಕ್ಕೆ ಸಂಬಂಧಿಸಿದ; ವಿಮಾನಚರ.
ವೈಯಾಕರಣಿ ವ್ಯಾಕರಣ ಶಾಸ್ತ್ರ ಬಲ್ಲವ.
ವೈರ ಹಗೆತನ, ಶತ್ರುತ್ವ.
ವೈರಾಗಿ ಬೈರಾಗಿ, ವಿರಕ್ತ.
ವೈರಿ ಹಗೆ, ಶತ್ರು.
ವೈಲಕ್ಷಣ್ಯ ವ್ಯತ್ಯಾಸ; ವಿರುದ್ಧ ಲಕ್ಷಣವಿರುವಿಕೆ; ಅಸ್ವಾಭಾವಿಕತೆ.
ವೈಶಂಪಾಯನ ಕೃಷ್ಣ ಯಜುರ್ವೇದವನ್ನು ಬರೆದ ಒಬ್ಬ ಹೆಸರಾದ ಋಷಿ. ಈತನು ಭಾರತವನ್ನು ರಚಿಸಿದ ವ್ಯಾಸನ ಶಿಷ್ಯ.
ವೈಶಾಖ ಕಡೆಗೋಲು; ಬೇಸಗೆ, ಸೆಕೆಕಾಲ; ಒಂದು ಸೌರಮಾನ ತಿಂಗಳು.
ವೈಶ್ಯ ಕೋಮಟ; ಚತುರ್ವರ್ಣಗಳಲ್ಲಿ ಮೂರನೆಯ ಗುಂಪು; ವ್ಯಾಪಾರಿ.
ವೈಶ್ವಾನರ ಅಗ್ನಿ; ವಿಶ್ವನರನೆಂಬ ಋಷಿಯ ಮಗ.
ವೈಷ್ಣವ ವಿಷ್ಣುಭಕ್ತ; ದ್ವೈತ ಸಂಪ್ರದಾಯದವ
ವೊಲ್ (ವೊಲು), ಅಂತೆ, ಹಾಗೆ, ಆ ತೆರ.
ವ್ಯಕ್ತ ಕಾಣಿಸಿದ, ಪ್ರಕಟವಾದ; ತೋರಿಬಂದ; ಸ್ಪಷ್ಟವಾದ.
ವ್ಯಕ್ತಿ ಸೂಚನೆ; ಗುಂಪಿನ ಒಬ್ಬ.
— ತ್ವ ತನ್ನದೇ ಆದ ಗುಣ, ವಿಶಿಷ್ಟತೆ.

ವ್ಯಗ್ರ ಮಂಕುಗೊಂಡ; ಕಳವಳಗೊಂಡ; ಉದ್ವೇಗಗೊಂಡ.

ವ್ಯಜನ ಬೀಸಣಿಗೆ.

ವ್ಯತಿ ಬೇರೆ; ಅಂತರ.

—ಕರ ಸಂಬಂಧ, ವ್ಯಸನ; ದುಃಖ; ಸಂದರ್ಭ; ಸೇರಿಕೆ, ಸೇರಿಸುವಿಕೆ; ಮಿಶ್ರಣ.

ವ್ಯತಿರಿಕ್ತ ವಿರೋಧ; ಮಿತಿಮೀರಿದ; ತಡೆದ.

ವ್ಯತಿರೇಕ ಅತಿಕ್ರಮ; ಮೀರುವೆ; ಮಿತಿಮೀರುವೆ; ಪೂರ್ಣ ವಿರೋಧವಾದ; ವ್ಯತ್ಯಾಸ; ವಿಶೇಷ; ಅಭಾವ; ಹೊರತು; ಒಂದು ಅರ್ಥಾಲಂಕಾರ.

ವ್ಯತೀತ ಕಳೆದ.

ವ್ಯತ್ಯಯ ಬದಲಾದ; ಬೇರೆಯೇ ಆದ.

ವ್ಯತ್ಯಾಸ ಅಂತರ, ಹೆಚ್ಚುಕಡಮೆ.

ವ್ಯಥಿಸು ದುಃಖಿಸು, ಸಂಕಟಪಡು, ಚಿಂತಿಸು.

ವ್ಯಥೆ ದುಃಖ, ಚಿಂತೆ; ಸಂಕಟ; ಪೀಡೆ.

ವ್ಯಪಗತ ಹೋದ, ಕಳೆದ.

ವ್ಯಪಾಯ ಅಂತ್ಯ.

ವ್ಯಪೇತ ಕಳಚಿದ, ಉದುರಿದ; ತೀರಿದ; ವಿರೋಧವಾದ.

ವ್ಯಭಿಚಾರ ಹಾದರ.

ವ್ಯಯ ವೆಚ್ಚ, ಖರ್ಚು, ಬಿಯ (ದ್ಭ).

ವ್ಯರ್ಥ ನಿರುಪಯೋಗ, ಕೆಲಸಕ್ಕೆ ಬಾರದ, ಹಾಳು.

ವ್ಯರ್ಥಾಲಾಪ ಹಾಳುಹರಟೆ; ಜೊಳ್ಳುಮಾತು

ವ್ಯವಕಲನ ಅಗಲುವುದು; ಹೀನತ್ವ ಪಡೆಯುವುದು; ಕಳೆಯುವುದು.

ವ್ಯವಧಾನ ತೆರಪು, ಅವಕಾಶ; ಸಂದರ್ಭ.

ವ್ಯವಧೆ ಮರೆಮಾಡುವ ವಸ್ತು; ಮರೆ.

ವ್ಯವಸಾಯ ಬೇಸಾಯ, ಕೃಷಿ; ವ್ಯಾಸಂಗ, ಪರಿಶ್ರಮ; ಉದ್ಯಮ.

ವ್ಯವಸ್ಥಾ ಕ್ರಮಬದ್ಧತೆ; ದೂರದೂರ ಇಡುವಿಕೆ; ಸರಿಯಾಗಿಡುವಿಕೆ.

ವ್ಯವಸ್ಥಾಪಕ ಅಧಿಕಾರಿ; ವ್ಯವಸ್ಥೆಗೊಳಿಸುವವ, ಏರ್ಪಾಡುಮಾಡುವವ.

ವ್ಯವಹರಣ ವ್ಯವಹಾರ, ಕಸಬು; ಆಚಾರ.

ವ್ಯವಹರಿಸು ವರ್ತಿಸು, ಬಳಸು; ವಹಿವಾಟು ಮಾಡು, ಕೆಲಸ ನಡಸು; ನ್ಯಾಯಸ್ಥಾನದಲ್ಲಿ ವಾದ ನಡಸು.

ವ್ಯವಹಾರ ಬೇಹಾರ(ದ್ಭ) ಕೆಲಸ, ಉದ್ಯೋಗ; ಲೌಕಿಕ ವೃತ್ತಿ; ಬಳಕೆ, ರೂಢಿ.

ವ್ಯವಹಾರಿ ವ್ಯಾಪಾರಿ; ಲೌಕಿಕ ಬಲ್ಲವ.

ವ್ಯಷ್ಟಿ ಒಂಟಿತನ; ಗುಂಪಿಂದ ಬಿಡಿಸಿ ನೋಡುವಿಕೆ; ಬೇರೆಯಾದ.

ವ್ಯಸನ ಅತ್ಯಾಸಕ್ತಿ; ದುಃಖ; ಆಸಕ್ತಿ; ಚಾಳಿ, ದುಶ್ಚಾಳಿ, ಚಟ.

—ಕರ ಚಿಂತಾಸ್ಪದ, ದುಃಖದಾಯಕ.

ವ್ಯಸನಿ ದುರ್ವ್ಯಸನಿ; ದುಃಖಿ; ಚಾಳಿಗೆ ಬಲಿಯಾದವ, ಚಟಗಾರ.

ವ್ಯಸ್ತ ವ್ಯಾಕುಲ, ವಿಭಾಗಿಸಲ್ಪಟ್ಟ; ವಿಪರೀತ; ನಿಯಮ ಬಿಟ್ಟ.

ವ್ಯಂಗ್ಯ ವಿಡಂಬನ, ಅಣಕ, ಪರಿಹಾಸ.

ವ್ಯಂಜಕ ಸ್ಪಷ್ಟಗೊಳಿಸುವ; ಹಾವದಿಂದ ತೋರಿಸುವ.

ವ್ಯಂಜನ ಸ್ಪಷ್ಟಪಡಿಸುವಿಕೆ, ಸ್ವರವಲ್ಲದ ಅಕ್ಷರ; ಗುರುತು; ಕಜ್ಜಾಯ; ಪಲ್ಲೆಯ.

ವ್ಯಾಕರಣ ವಾಕ್ಯರಚನಾ ಶಾಸ್ತ್ರ; ಭಾಷೆಯ ನಿಯಮಗಳನ್ನು ಹೇಳುವ ಶಾಸ್ತ್ರ.

ವ್ಯಾಕುಲ ದುಃಖ, ವ್ಯಥೆ, ವ್ಯಸನ; ಕಷ್ಟ.

ವ್ಯಾಕೋಶ ಅರಳುವುದು.

ವ್ಯಾಖ್ಯಾನ ಟೀಕೆ, ವಿವರಣೆ.

ವ್ಯಾಖ್ಯೆ ಸೂತ್ರ, ವಿವರಣೆ.

ವ್ಯಾಘ್ರ ಬಗ್ಗ (ದ್ಭ), ಹುಲಿ.

—ನಖ ಕೈಗೆ ತೊಡುವ ಹುಲಿ ಉಗುರಿನಂಥ ಆಯುಧ.

ವ್ಯಾಘ್ರಿ ಹೆಣ್ಣು ಹುಲಿ.

ವ್ಯಾಜ ನಾಯ (ದ್ಭ), ಮೋಸ; ನೆವ.
ವ್ಯಾಜ್ಯ ದಾವೆ; ಜಗಳ, ವಿವಾದ.
—ಎಬ್ಬಿಸು ಕೀಟಲೆಮಾಡು, ಜಗಳತರು.
ವ್ಯಾಡ (ವ್ಯಾಳ), ವಂಚಕ, ನೀಚ; ಹಾವು.
ವ್ಯಾಧ ಬಿಯದ (ದ್ಭ), ಬೇಡ, ಕಿರಾತ.
ವ್ಯಾಧಿ ರೋಗ, ಬೇನೆ, ಜಡ್ಡು, ಕಸಾರಿಕೆ.
—ಸ್ಥ ರೋಗಗ್ರಸ್ತ, ಕಾಯಿಲೆಬಿದ್ದವ, ಜಡ್ಡಾದವ.
ವ್ಯಾನ ಒಂದು ಪ್ರಾಣವಾಯು.
ವ್ಯಾಪಕ ಹರಡುವ; ಪರಿವೇಷ್ಟಿಸುವ; ಹರಡುವ ಗುಣವುಳ್ಳ.
ವ್ಯಾಪನ ವ್ಯಾಪ್ತಿ; ಹರಡುವಿಕೆ; ವಿಸ್ತೃತಿ.
ವ್ಯಾಪಾರ ವ್ಯವಹಾರ; ಕೊಳುವಿಕೆ ಕೊಡುವಿಕೆ; ಪ್ರಸಂಗ, ಸಂಗತಿ.
ವ್ಯಾಪಾರಿ ವಿಕ್ರಯಗಾರ, ವಣಿಕ್ಕು, ಕೊಂಡು ಮಾರುವವ.
ವ್ಯಾಪಿಸು ಹಬ್ಬು, ಹರಡು.
ವ್ಯಾಪ್ತ ವಿಸ್ತಾರಗೊಂಡ; ವಿಸ್ತಾರ ಅರ್ಥ; ತುಂಬಿದ, ಹಬ್ಬಿದ.
ವ್ಯಾಪ್ತಿ ಹರಡುವಿಕೆ; ತುಂಬಿಕೆ; ಉದ್ಯೋಗ; ಪರಿಮಿತಿ.
ವ್ಯಾಬದ್ಧ ನಟ್ಟ, ಕಟ್ಟದ.
ವ್ಯಾಮ ಆಳತೆ; ಮಾರು; ಆಳು ಪ್ರಮಾಣ.
ವ್ಯಾಮೋಹ ಅತ್ಯಾಸಕ್ತಿ, ಹಂಬಲ; ಮೋಹ.
ವ್ಯಾಲ (ವ್ಯಾಳ), ಉರಗ, ಹಾವು; ಸರ್ಪ.
—ಶಾಯಿ ಶೇಷಶಾಯಿ, ವಿಷ್ಣು.
ವ್ಯಾವಹಾರಿಕ ವ್ಯವಹಾರಕ್ಕೆ ಸಂಬಂಧಿಸಿದ; ಲೌಕಿಕ.
ವ್ಯಾಸ ವೇದವ್ಯಾಸ ಋಷಿ. ಈತನು ಮಹಾಭಾರತವನ್ನು ಬರೆದನು. ಹಲವು ಪುರಾಣಗಳು ಇವನಿಂದ ಆದುವೆಂದು ಹೇಳಿಕೆ ಇದೆ; ಅಡ್ಡಗಲ; ವೃತ್ತದ ಪರಮಾವಧಿ ಅಗಲ.
ವ್ಯಾಸಘಟ್ಟ ಮಹಾಭಾರತದ ಕಠಿಣ ಭಾಗ.
ವ್ಯಾಸಪೀಠ ಪುಸ್ತಕವಿರಿಸಿಕೊಳ್ಳಲು ಅನುಕೂಲಿಸುವ ಮಣೆ.
ವ್ಯಾಸಂಗ ಸೇರಿಕೆ, ಸ್ನೇಹ; ಆಸಕ್ತಿ; ಅಭ್ಯಾಸ.
ವ್ಯಾಯಾಮ ಅಂಗಸಾಧನೆ; ಕುಸ್ತಿ; ಕಸರತ್ತು
ವ್ಯಾವಹಾರಿಕ ವ್ಯವಹಾರಕ್ಕೆ ಸಂಬಂಧಿಸಿದ, ಉದ್ಯೋಗಕ್ಕೆ ಅನುಕೂಲಿಸಿದ.
ವ್ಯುತ್ಪತ್ತಿ ಉತ್ಪನ್ನ, ಹುಟ್ಟು; ಶಬ್ದದ ಹುಟ್ಟು, ಮೂಲ; ಜ್ಞಾನ.
ವ್ಯುತ್ಪನ್ನ ವ್ಯುತ್ಪತ್ತಿ; ಹುಟ್ಟಿದ್ದು; ಪ್ರಚಲಿತ ನಾದುದು; ತಿಳಿದವ.
ವ್ಯುದಾಸ ಎಸೆಯುವಿಕೆ, ತ್ಯಜಿಸುವಿಕೆ; ಬಹಿಷ್ಕರಿಸುವಿಕೆ.
ವ್ಯುಷ್ಟಿ ಹೆಚ್ಚಿಕೆ, ವೆಗ್ಗಳ; ಅಭಿವೃದ್ಧಿ; ಫಲ, ಪರಿಣಾಮ.
ವ್ಯೂಹ ಸೇನಾರಚನೆ; ಸೇನೆಯನ್ನು ಯುದ್ಧಕ್ಕೆ ನಿಲ್ಲಿಸುವ ರೀತಿ, ಒಡ್ಡಣ.
ವ್ಯೋಮ ಆಕಾಶ, ಬಾನು.
—ಗಂಗೆ ಆಕಾಶಗಂಗೆ.
ವ್ರಜ ಹಿಂಡು, ಸಮೂಹ; ಹಟ್ಟಿ; ಗೋಕುಲ, ಮಥುರೆಯ ಬಳಿಯ ಒಂದು ಸ್ಥಳ.
ವ್ರಣ ಗಾಯ, ಹುಣ್ಣು.
ವ್ರತ ನಿಯಮ; ಕಟ್ಟಲೆ, ವಿಧಿ; ಯಜ್ಞ.
—ಸ್ಥ ಕಟ್ಟಲೆಯಂತೆ ನಡೆವವ; ವಿಧಿಯಂತೆ ಮಾಡುವವ.
ವ್ರತಿ ನಿಯಮ ಹಿಡಿದವ, ದೀಕ್ಷಾಬದ್ಧ, ಸನ್ಯಾಸಿ.
ವ್ರಯ ವೆಚ್ಚ, ವ್ಯಯ.
ವ್ರಾಜಕ ತಿರುಗುತ್ತಿರುವ ಸನ್ಯಾಸಿ.
ವ್ರಾತ ಸಮೂಹ; ಪಡೆ; ಶರೀರ ಶ್ರಮ.
ವ್ರಾತ್ಯ ಸಂಸ್ಕಾರಹೀನ; ನೀಚ.
ವ್ರೀಡೆ (ವ್ರೀಡಾ), ಲಜ್ಜೆ.
ವ್ರೀಹಿ ಬತ್ತ; ಅಕ್ಕಿ.

# ಶ

**ಶಕ** ಶಾಲಿವಾಹನನೆಂಬ ದೊರೆಯು ಶಕರನ್ನು ಸೋಲಿಸಿದ ಸಮಯದಿಂದ ತೊಡಗುವ ವರ್ಷ ಗಣನೆ; ಯಾವುದಾದರೂ ಒಂದು ಮುಖ್ಯ ಪ್ರಸಂಗ ನಡೆದ ಸಮಯದಿಂದ ಕಾಲದ ಎಣಿಕೆ ತೊಡಗುವುದು; ಗಾಳಿ; ಪರಿಣಾಮ.

—**ಅಬ್ದ** ಶಕಕರ್ತನ ಸಂಬಂಧವಾದ ವರ್ಷ.

**ಶಕಟ** ಬಂಡಿ, ಗಾಡಿ; ಒಬ್ಬ ರಾಕ್ಷಸ.

**ಶಕರು** ಪ್ರಾಚೀನ ಕಾಲದಲ್ಲಿ ಸಿಂಧು ದೇಶವನ್ನು ಆವರಿಸಿದ ಟಾರ್ಟರ ಜನರು.

**ಶಕಲ** ಚೂರು; ತೊಗಟೆ; ಮೀನು; ತಲೆಪರಟೆ, ತಲೆ ಓಡು; ಚಿಪ್ಪು.

**ಶಕಾರ** ರಾಜನ ಹೆಂಡತಿಯ ಸೋದರ; ಮದ; ಮೂರ್ಖ, ಮೃಚ್ಛಕಟಿಕ ನಾಟಕದ ಒಂದು ಪಾತ್ರ.

**ಶಕುನ** ಮುಂದಿನ ಶುಭಾಶುಭ ಸೂಚನೆಗೆ ಕಾರಣವಾದ ನಿಮಿತ್ತ; ಭಾರದ್ವಾಜ ಹಕ್ಕಿ; ಹಾಲು ಹಕ್ಕಿ.

**ಶಕುನಿ** ದುರ್ಯೋಧನನ ಸೋದರಮಾವ. ಈತನು ಪಾಂಡವರನ್ನು ಸೋಲಿಸಲು ಕಪಟ ದ್ಯೂತವಾಡಿದನು.

**ಶಕುಂತ** ಹಾಲುವಕ್ಕಿ, ಊಳಿಗನ ಹಕ್ಕಿ.

**ಶಕುಂತಲಾ** ಈಕೆಯು ವಿಶ್ವಾಮಿತ್ರ ಮೇನಕೆಯರ ಮಗಳು. ಇವಳನ್ನು ತಾಯಿತಂದೆಗಳು ಎಳೆತನದಲ್ಲಿ ತೊರೆದುದರಿಂದ ಕಣ್ವ ಋಷಿಯು ಪಾಲಿಸಿದನು. ಮುಂದೆ ಈಕೆಯು ದುಷ್ಯಂತನೆಂಬ ದೊರೆಯ ಹೆಂಡತಿಯಾಗುವಳು; ಈ ಕಥೆಯನ್ನು ಚಿತ್ರಿಸಿದ ಕಾಳಿದಾಸನ ಒಂದು ನಾಟಕ.

**ಶಕ್ತ** ಸಮರ್ಥ; ಬಲಶಾಲಿ.

**ಶಕ್ತಿ** ಸಾಮರ್ಥ್ಯ, ಬಲ; ದುರ್ಗೆ, ದೇವಿ; ವಸಿಷ್ಠನ ಹಿರಿಮಗ; ಬರ್ಚಿ, ಭಲ್ಲೆ.

**ಶಕ್ಯ** ಶಕ್ತಿಯುಳ್ಳ; ಸಾಧ್ಯ, ಮಾಡಬಹುದಾದ

**ಶಕ್ರ** ಇಂದ್ರ; ಮತ್ತಿಮರ; ಜ್ಯೇಷ್ಠಾ ನಕ್ಷತ್ರ; ವಿಷ್ಣು.

**ಶಚಿ** (ಶಚೀ), ಇಂದ್ರನ ಹೆಂಡತಿ, ಇಂದ್ರಾಣಿ.

—**ಪತಿ** ಇಂದ್ರ.

**ಶಠ** ಮೂರ್ಖ; ದುಷ್ಟ; ವಂಚಕ, ಠಕ್ಕ.

**ಶಣ** ಸಣಬು (ದ್ಭ), ಕಿತ್ತಾನಾರು; ಹುರಿ.

**ಶತ** ನೂರು; ಬಹಳ.

**ಶತಕ** ನೂರು; ನೂರು ಪದ್ಯಗಳುಳ್ಳ ಒಂದು ಕಾವ್ಯ.

**ಶತಕೋಟಿ** ಇಂದ್ರನ ವಜ್ರ, ಹೀರ, ವಜ್ರ; ಅನೇಕಾನೇಕ.

**ಶತಘ್ನಿ** ಒಂದು ಆಯುಧ ವಿಶೇಷ; ಫಿರಂಗಿ, ತೋಪು.

**ಶತಧೃತಿ** ಇಂದ್ರ; ಬ್ರಹ್ಮ.

**ಶತಪದಿ** ಹಲವು ಕಾಲುಗಳುಳ್ಳ ಒಂದು ಜಂತು; ಲಕ್ಷ್ಮೀಚೇಳು, ಬೆಟ್ಟು ಬೆನಕ.

**ಶತಪಥಬ್ರಾಹ್ಮಣ** ಯಾಜ್ಞವಲ್ಕ್ಯನಿಂದ ನಿರ್ಮಾಣವಾದ ಶುಕ್ಲಯಜುರ್ವೇದ.

**ಶತಭಿಷೆ** ಒಂದು ನಕ್ಷತ್ರರಾಶಿ.

**ಶತಮಾನ** ನೂರು ವರ್ಷಗಳ ಕಾಲ.

**ಶತಾನಂದ** ಗೌತಮ ಅಹಲ್ಯೆಯರ ಮಗ.

**ಶತಾಯು** ನೂರು ವರ್ಷ ಆಯುಷ್ಯವುಳ್ಳವ, ದೀರ್ಘಾಯು.

**ಶತ್ರು** ವೈರಿ, ರಿಪು, ಹಗೆ.

**ಶತ್ರುಘ್ನ** ರಾಮ ಲಕ್ಷ್ಮಣರ ಸೋದರನೊಬ್ಬ

**ಶನಿ** ಒಂದು ಗ್ರಹ; ಒಂದು ವಾರ; ಒಂದು ಕ್ರೂರ ದೇವತೆ; ಅರಿಷ್ಟ; ಶನಿಯು ಕೆಡುಕಿನ ಗುರುವೆಂದೂ ಸೂರ್ಯ ಮತ್ತು

ಛಾಯಾ ದೇವಿಯರ ಮಗನೆಂದೂ ಹೇಳಿಕೆಯಿದೆ; ಮಂದ, ಪಂಗು.

— ಪ್ರದೋಷ ಶಿವನನ್ನು ಕುರಿತು ಮಾಡುವ ಒಂದು ಶನಿವಾರ ವ್ರತ.

ಶನೀಶ್ವರ ಶನೈಶ್ವರ; ಮೆಲ್ಲಗೆ ನಡೆಯುವವ; ಶನಿಗ್ರುಹ.

ಶಪಥ ಪ್ರತಿಜ್ಞೆ; ಶಾಪ; ಪಂಥ, ಜಿದ್ದು; ಆಣೆ.

ಶಪಿಸು ಶಾಪಕೊಡು; ಕೆಡುಕನ್ನು ಹೇಳು, ಬಯ್ಯು.

ಶಫ ಕಾಲ ಗೊರಸು, ಕೊಳಗು.

ಶಬರ ಬೇಡ, ಕಿರಾತ; ನೀರು;ಹಿಮ;ಮುಗಿಲು.

ಶಬರಶಂಕರ ಶಬರ ವೇಷದಲ್ಲಿ ಅರ್ಜುನನ ಪರೀಕ್ಷೆಗೆ ಬಂದ ಶಿವ; ಈ ವಿಷಯವಾದ ಒಂದು ನಾಟಕ.

ಶಬಲ (ಶಬಳ), ಮಿಶ್ರುವರ್ಣ; ಹಲವು ಬಣ್ಣಗಳ ಬೆರಕೆ; ಸಾರಾಂಶ.

ಶಬ್ದ ಸದ್ದು (ದ್ಭ), ಧ್ವನಿ; ಮಾತು, ನುಡಿ, ಪದ.

— ಜ್ಞ ಭಾಷಾಶಾಸ್ತ್ರ ಬಲ್ಲವ; ತಾಳ ತಿಳಿದವ.

— ಮಂಜರಿ ಶಬ್ದಸಮೂಹ;ಅರ್ಥಕೋಶ

ಶಬ್ದಬ್ರುಹ್ಮ ವೇದ.

ಶಬ್ದಾನುಶಾಸನ ಪಾಣಿನಿಯ ವ್ಯಾಕರಣ ಗ್ರುಂಥ; ಒಂದು ಕನ್ನಡ ವ್ಯಾಕರಣ.

ಶಬ್ದಾರ್ಥ ಮಾತಿನ ಅರ್ಥ, ಪದದ ತಾತ್ಪರ್ಯ

ಶಬ್ದಾಲಂಕಾರ ಮಾತಿನ ಸೊಗಸು.

ಶಮ (ಶಮೆ), ಯಾಮ; ಶಾಂತಿ; ಸಹನೆ; ಬಹಿರ್ ಇಂದ್ರಿಯ ನಿಗ್ರಹ.

— ನ ಯಮ; ಶಾಂತಪಡಿಸುವಿಕೆ.

ಶಮಿ ಬನ್ನೀ ಮರ, ಜಂಬಿ; ಶಾಂತಿ, ಸಮಾಧಾನ.

ಶಯನ (ಶಯ), ಮಲಗುವಿಕೆ, ಒರಗುವಿಕೆ; ನಿದ್ರೆ; ಮಂಚ.

ಶಯಾಲು ನಿದ್ರಾಲು, ನಿದ್ರಾಶೀಲ; ಜಡ.

ಶಯ್ಯಾ (ಸಂ) ಶಯ್ಯೆ; ಸಜ್ಜೆ (ದ್ಭ), ಮಂಚ, ಹಾಸಿಗೆ.

— ಗೃಹ ಮಲಗುವ ಮನೆ.

ಶರ ಸೊನೆಹುಲ್ಲು, ಗಲಗು; ಬಾಣ; ಗಾಯ; ನೀರು; ಕೆನೆ; ಸರಸ್ಸು; ಧ್ವನಿ.

ಶರಜನ್ಮ ಶರವನದಲ್ಲಿ ಹುಟ್ಟಿದವ, ಕುಮಾರಸ್ವಾಮಿ.

ಶರಣ ಮನೆ; ರಕ್ಷಣೆ; ರಕ್ಷಕ; ಬತ್ತ; ಶೈವ ಸನ್ಯಾಸಿ; ಗಾಯಗೊಳಿಸುವಿಕೆ.

— ಅರ್ಥಿ ವಂದನೆ; ಶರಣುಹೋಗುವಿಕೆ, ಮರೆಹೊಗುವಿಕೆ.

ಶರಣಮ್ಮ ವೀರಶೈವ ಸನ್ಯಾಸಿನಿ.

ಶರಣಾರ್ಥಿ ಶರಣರ ಏಳಿಗೆ.

ಶರಣೆ ಶರಣಮ್ಮ, ಶರಣುಹೋದವಳು.

ಶರಣ್ಯ ಆಶ್ರುಯಕ್ಕೆ ಯೋಗ್ಯನಾದವ; ರಕ್ಷಿಸಬಲ್ಲುದು, ಮನೆ.

ಶರತ್ (ಶರದ್), ಶರದೆ, ಶರತ್ಕಾಲ, ವರ್ಷ ಋತುವಿನ ತರುವಾಯದ ಎರಡು ತಿಂಗಳು; ಚಳಿಗಾಲ.

— ಇಂದು ಶರತ್ಕಾಲದ ಚಂದ್ರು, ಶರಚ್ಚಂದ್ರು

ಶರಧಿ ಬಾಣ ಉಳ್ಳುದು, ಬತ್ತಳಿಕೆ; ನೀರುಳ್ಳುದು, ಸಮುದ್ರು; ಕಾಡು.

ಶರಪಂಜರ ಬಾಣದ ಹಾಸುಗೆ. ಭೀಷ್ಮಾಚಾರ್ಯನು ಇದರಲ್ಲಿ ತನ್ನ ಕೊನೆಗಾಲ ಕಳೆದನೆಂದು ಕಥೆ.

ಶರಭ ಒಂದು ಕಾಲ್ಪನಿಕ ಮೃಗ. ಇದು ಸಿಂಹವನ್ನು ಕೊಲ್ಲುವುದೆಂದು ಕಥೆ; ವೀರಭದ್ರು.

ಶರಷಟ್ಪದಿ ಷಟ್ಪದಿಗಳಲ್ಲಿ ಒಂದು ಜಾತಿ.

ಶರಸನ್ಯಾಸ ಬಾಣ ಹಿಡಿಯೆನೆಂದು ಶಪಥ ಮಾಡುವುದು.

ಶರಾರಿ ಒಂದು ಹಕ್ಕಿ, ಸರಕೂಟ, ಮರಕುಟಿಗ.

ಶರಾವತಿ ಒಂದು ನದಿ; ಇದೇ ಜೋಗು ಜಲಪಾತದ ನದಿ.

ಶರಾವೆ ಚಪ್ಪಟೆ ಪಾತ್ರೆ, ಕಾವಲಿ, ಹಂಚು; ಚಿಪ್ಪು.
ಶರಾಸನ ಬಾಣದ ಆಸನ, ಬಿಲ್ಲು; ಹೆದೆ.
ಶರೀರ ದೇಹ, ಕಾಯ.
—ಜ ದೇಹದಲ್ಲಿ ಆಗುವುದು, ಬೇನೆ; ಕಾಮ, ಮನ್ಮಥ.
—ಸಂಬಂಧ ಭೋಗ, ಸುರತ, ರತಿ; ಲಗ್ನ.
ಶರೀರಿ ದೇಹಿಯಾದವ, ದೇಹಿಯಾದ ಜೀವ, ಆತ್ಮ.
ಶರೆ ಸರೆ, ಹೆಂಡ, ಕಳ್ಳು, ಮದ್ಯ; ರಾಶಿ.
ಶರ್ಕರ ಸಕ್ಕರೆ (ಧ್ವ), ಬೂರಾ; ಹರಳುಕಲ್ಲು.
ಶರ್ಧ ಸೇನೆ; ಶಕ್ತಿ.
ಶರ್ಮ ಸುಖ, ಸಂತೋಷ; ಬ್ರಾಹ್ಮಣರ ಹೆಸರಿನ ಕೊನೆಯ ಪದ.
ಶರ್ಮಿಷ್ಠೆ ಯಯಾತಿರಾಜನ ಒಬ್ಬಳು ಹೆಂಡತಿ
ಶರ್ವ ಸರ್ವ; ಶಿವ.
ಶರ್ವರಿ ರಾತ್ರಿ.
ಶರ್ವಾಣಿ ಶಿವನ ಹೆಂಡತಿ, ಪಾರ್ವತಿ.
ಶಲ(ಶಲಲ), ಹಂದಿಯ ಕಣೆ; ಮುಳ್ಳುಹಂದಿ, ಏದು, ಕಣೆಹಂದಿ.
ಶಲಭ ಪತಂಗ; ಮಿಡಿಚಿ, ಮಿಡಿತೆ; ಹಾತೆ.
ಶಲಾಕೆ ಸಲಿಕೆ, ದಂಡ; ಈಟ; ಸಪುರವಾದ ಚುಚ್ಚುವ ಕೋಲು; ಹೂವಿನ ನಡುವಣ ನೀಳ ದಂಟು; ಕಬ್ಬಿಣಕೋಲು; ಶಾರಿಕೆ, ಮೈನಾ; ಪಕ್ಕೆಲುಬು.
ಶಲ್ಕ ತೊಗಟೆ, ಚೆಕ್ಕೆ; ಪರೆ, ಹಿಣಿಜು.
ಶಲ್ಯ ಸೆಲ್ಲೆಹ, ಬರ್ಚಿ; ಮದ್ರದೇಶದ ಒಬ್ಬ ದೊರೆ. ಈತನು ಪಾಂಡುವಿನ ಭಾವ. ಮಹಾಭಾರತದಲ್ಲಿ ಕರ್ಣನ ಸಾರಥಿಯಾಗಿ ಕೂಡಿದನು.
ಶವ ಹೆಣ, ಕಳೇಬರ, ಮಡಿದ ಶರೀರ.
—ಸಂಸ್ಕಾರ ಹೆಣದ ಕೊನೆಯ ಕ್ರಿಯೆಗಳು, ಸುಡುವಿಕೆ ಅಥವಾ ಹೂಳುವಿಕೆ.
ಶಶ ಮೊಲ, ಕುಂದಿಲಿ; ಚಂದ್ರನಲ್ಲಿ ಕಾಣುವ ಮೊಲದ ಆಕಾರದ ಕಲೆ.
—ಅಂಕ (ಶಶಕ), ಮೊಲದ ಗುರುತುಳ್ಳವ, ಚಂದ್ರ.
ಶಶಿ ಚಂದ್ರ.
—ಕಲೆ ಶಶಿ ಖಂಡ, ಚಂದ್ರನ ಹದಿನಾರು ಕಲೆಗಳಲ್ಲಿ ಒಂದು (ಧ್ವ); ಒಬ್ಬಳು ಸ್ತ್ರೀ.
ಶಷ್ಕುಲಿ ಚಕ್ಕುಲಿ; ಗಂಜಿ.
ಶಸನ ಹಿಂಸೆ, ಹೊಡೆಯುವಿಕೆ, ಬಡಿಯುವಿಕೆ.
ಶಸ್ತ ಶುಭ, ಮಂಗಳ; ಹೇಳಿದ; ಉಚ್ಚರಿಸಿದ; ಗಾಯಗೊಂಡ, ಪೆಟ್ಟಾದ.
ಶಸ್ತ್ರ ಆಯುಧ; ಗಾಯಗೊಳಿಸಬಲ್ಲ ಸಾಮಗ್ರಿ, ಈಟ, ಖಡ್ಗ.
—ಸನ್ಯಾಸ ಆಯುಧವನ್ನು ತ್ಯಜಿಸುವಿಕೆ; ಕಾದಾಡೆನೆಂದು ನಿರ್ಧರಿಸುವಿಕೆ.
ಶಸ್ತ್ರಾಸ್ತ್ರ ಆಯುಧಗಳು; ಕಣೆ, ಬಾಣಗಳು.
ಶಹಭಾಸ್ ಬಾಪು, ವಹವ್ವಾ, ಚೆನ್ನು.
ಶಹರ ಪಟ್ಟಣ, ನಗರ, ಪುರ.
ಶಹಾ ಅರಸು, ಸುಲ್ತಾನ; ತಡೆ.
ಶಂಕರ ಮಂಗಳಕಾರಕ, ಶಿವ.
—ಅರಿ ಶಿವನ ವೈರಿ, ಮನ್ಮಥ.
ಶಂಕರಾಚಾರ್ಯ ಎಂಟು ಒಂಬತ್ತನೆ ಶತಮಾನಗಳಲ್ಲಿದ್ದ ಒಬ್ಬ ವಿದ್ವಾಂಸ. ಈತನು ವೇದಾಂತ ತತ್ವವನ್ನು ಆಸೇತುಹಿಮಾಚಲ ಪರಿಯಂತ ಸಾರಿ ಹೆಸರಾದನು. ಈತನು ಅದ್ವೈತ ಸಂಪ್ರದಾಯವನ್ನು ಸಾರಿದವರಲ್ಲಿ ಮೊದಲಿಗನು.
ಶಂಕರಿ ಶಿವನ ಹೆಂಡತಿ, ಉಮೆ, ದುರ್ಗೆ.
ಶಂಕಾ (ಶಂಕೆ), ಅಳುಕು, ಭಯ, ಭೀತಿ; ಸಂದೇಹ, ಅನುಮಾನ.
ಶಂಕಿನಿ ಸಂಶಯಗ್ರಸ್ತೆ; ಅನುಮಾನಿಯಾದವಳು; ಭೀತೆ.
ಶಂಕಿಸು ಅನುಮಾನಿಸು, ಸಂದೇಹಪಡು.

ಶಂಕು ಗೂಟ, ಕೀಲು; ಒಂದು ಆಯುಧ; ಸಂದೇಹ; ಸೂರ್ಯನ ನೆರಳನ್ನು ಅಳೆಯುವ ಕೋಲು; ನಾಶ; ಕಟ್ಟಡ ರಚನೆಗೆ ಅಡಿಗಲ್ಲು.

—ಯಂತ್ರ ಛಾಯಾಯಂತ್ರ.

ಶಂಖ ಕಡಲಿನ ಒಂದು ಜೀವಿಯ ಚಿಪ್ಪು; ಹಣೆ; ಬಿಳಿಬಣ್ಣ; ನವನಿಧಿಗಳಲ್ಲಿ ಒಂದು; ಸಂಖ್ಯೆ; ಒಬ್ಬ ಮುನಿ; ಒಬ್ಬ ರಾಕ್ಷಸ.

ಶಂಖಪಾಲ ಸಂಕವಾಲ, ಕಾಳಿಂಗನ ಹಾವು, ರಾಜಸರ್ಪ.

ಶಂಖಪಾಷಾಣ ಒಂದು ಕಠಿಣ ವಿಷ.

ಶಂಖಲಿಖಿತ ಅಣ್ಣ ತಮ್ಮಂದಿರಾದ ಇಬ್ಬರು ಪುರೋಹಿತರು.

ಶಂಖಿನಿ ಒಂದು ಸ್ತ್ರೀ ಜಾತಿ.

ಶಂಟ ಶಾಟ, ಗುಪ್ತಭಾಗದ ರೋಮ.

ಶಂಡ ನಿವೇಶ, ಶಿಬಿರ, ಪಾಳೆಯ; ಸಮೂಹ.

ಶಂಢ ಗೂಳಿ; ಮಾನಗೇಡಿ; ಸೂಗ, ನಪುಂಸಕ.

ಶಂತನು ಭೀಷ್ಮನ ತಂದೆ. ಈತನ ಲಗ್ನದ ಸಲುವಾಗಿ ಭೀಷ್ಮನು ತಾನು ಮದುವೆಯಾಗುವುದಿಲ್ಲವೆಂದು ಶಪಥತೊಟ್ಟನು.

ಶಂಬರ ಒಬ್ಬ ರಾಕ್ಷಸ; ನೀರು; ಒಂದು ಜಾತಿ ಜಿಂಕೆ.

ಶಂಬೂಕ ಕಪ್ಪೆಚಿಪ್ಪು, ಮಳಿ; ಒಬ್ಬ ಶೂದ್ರ ಭಿಕ್ಷುಕ; ಬಸವನಹುಳು.

ಶಂಭು ಶುಭಕಾರಿ; ಶಿವ; ವಿಷ್ಣು; ಬ್ರಹ್ಮ; ಯುಧಿಷ್ಠಿರ.

ಶಂಭುಕ ಶೂರ್ಪನಖಿಯ ಒಬ್ಬ ಮಗ.

ಶಾಕ ಕಾಯಿಪಲ್ಯ ಮೊದಲಾದುವು, ತರಕಾರಿ, ಪಲ್ಲೆಯ; ಕಾವು, ಉಷ್ಣ.

ಶಾಕಟ ಬಂಡಿ ಇಲ್ಲವೆ ರಥಕ್ಕೆ ಸಂಬಂಧಿಸಿದ; ನೊಗಕ್ಕೆ ಕಟ್ಟುವ ಎತ್ತು.

ಶಾಕಿನ ಗದ್ದೆ, ಹೊಲ.

ಶಾಕಿನಿ ದುರ್ಗಿಯ ಪರಿಚಾರಕೆ.

ಶಾಕ್ತ (ಶಾಕ್ತೇಯ), ಶಕ್ತಿಯ ಉಪಾಸಕ; ಶಕ್ತಿ ಆರಾಧಕರ ಮತ.

ಶಾಕ್ಯ ಬುದ್ಧನ ಕುಲ.

—ಮುನಿ ಬುದ್ಧ.

ಶಾಖಾ (ಶಾಖೆ), ಕೊಂಬೆ, ಗೆಲ್ಲು, ರೆಂಬೆ; ಟೊಂಗೆ,ಹರಿ;ಸಂಸ್ಥೆಯ ವಿಭಾಗ, ಇಲಾಖೆ; ಕೊಳಗ.

—ಚರ ಶಾಖಾಮೃಗ, ಕಪಿ.

ಶಾಟಿ ಬಟ್ಟೆ; ಉತ್ತರೀಯ; ಕಾವಿ ಬಣ್ಣ ಸವರಿದ ಬಟ್ಟೆ.

ಶಾಠ್ಯ ವಂಚನೆ, ಕಪಟತನ.

ಶಾಡ್ವಲ ಹಸುರು ಹುಲ್ಲು; ಹುಲ್ಲುಗಾವಲು.

ಶಾಣ ಸಾಣೆಕಲ್ಲು, ಮಸೆಗಲ್ಲು.

ಶಾಣಿ ಗೋಣಿತಟ್ಟು; ಚಿಂದಿ, ಹರಕು.

ಶಾತ ಹರಿತಮಾಡಿದ; ತೆಳ್ಳಗಿನ; ಉದುರಿದ; ಮುರಿದ; ಚೆಲುವು; ಸಂತೋಷ.

ಶಾತಕುಂಭ ಶತಕುಂಭ; ಪರ್ವತದಲ್ಲಿ ಬೆಳೆಯುವುದು; ಚಿನ್ನ, ಬಂಗಾರ.

ಶಾದ ಕೆಸರು, ರಾಡಿ, ರೊಜ್ಜು; ಹಚ್ಚಗಿನ ಹುಲ್ಲು, ಎಳೆಹುಲ್ಲು.

ಶಾದ್ವಲ (ಶಾಡ್ವಲ), ಹುಲ್ಲುಗಾವಲು, ಹುಲ್ಲುಬನ್ನಿ.

ಶಾನಭಾಗ (ಶಾನುಭೋಗ), ಗ್ರಾಮದ ಕುಲಕರ್ಣಿ; ಗ್ರಾಮದ ಲೆಕ್ಕಪತ್ರ ಇರಿಸುವ ಕೆಲಸದವ, ಕರಣೀಕ.

ಶಾನಾಯ ಶಾನುಭೋಗನಿಗೆ ರೈತನು ಕೊಡುವ ಕಾಣಿಕೆ.

ಶಾನೆ ಬಹಳ, ತುಂಬ.

ಶಾಪ ಕೆಡುಕಾಗಲೆಂದು ಹೇಳುವ ಮಾತು; ಬಯ್ಗಳು, ನಿಷ್ಠುರ ನುಡಿ.

ಶಾಬಕ ಎಳೆಯ ಮರಿ, ಪೋತ.

ಶಾಬ್ದಿಕ ಭಾಷಾ ಶಾಸ್ತ್ರಜ್ಞ; ಬರಿಯ ಮಾತಿಗೆ ಸಂಬಂಧಿಸಿದ.

ಶಾಮ (ಪ್ರ) ಶ್ಯಾಮ (ಸಂ), ಸಾಯಂಕಾಲ, ಮುಸ್ಸಂಜೆ; ಹಾಡುವ ಒಂದು ಕಪ್ಪು ಹಕ್ಕಿ.
ಶಾಮಕ ಶಮನಕಾರಿ, ಸಮಾಧಾನಗೊಳಿಸುವ, ಗುಣಕಾರಿ.
ಶಾಮಿಲಾತು ಒಂದು ಜಮೀನಿಗೆ ಅಂಶವಾಗಿ ಸೇರಿದ ತುಂಡು ಭೂಮಿಗಳು.
ಶಾಯಿ ಮಲಗಿರುವ, ವಿಶ್ರಾಂತಿಗೊಂಡಿರುವ; ಮಸಿ; ಋಜುವಾತು.
ಶಾರದ ಬಿಳಿ ಕಮಲ; ಹಡಗು; ಶರತ್ಕಾಲದ; ಬಿಳಿಯ; ದುರ್ಬಲ; ಚತುರ.
ಶಾರದೆ ಶರದೃತು; ಬ್ರಹ್ಮನ ಹೆಂಡತಿ, ಸರಸ್ವತಿ; ತಿಳಿವಳಿಕೆ.
ಶಾರಿಕೆ ಗೊರವಂಕ, ಮೈಲಾರಪ್ಪನ ಹಕ್ಕಿ; ಮೈನಾ.
ಶಾರೀರ ಶರೀರಕ್ಕೆ ಸಂಬಂಧಿಸಿದ; ಗಂಟಲು; ಧ್ವನಿ.
ಶಾರ್ಙ್ಗ ವಿಷ್ಣುವಿನ ಬಿಲ್ಲು; ಕೋಡಿನಿಂದ ಮಾಡಿದ.
—ಧರ ವಿಷ್ಣು.
ಶಾರ್ದೂಲ ದೊಡ್ಡ ಹುಲಿ; ಒಬ್ಬ ರಾಕ್ಷಸ; ಒಂದು ವೃತ್ತ ಜಾತಿ; ಶ್ರೇಷ್ಠ.
ಶಾರ್ವರಿ 34ನೆಯ ಸಂವತ್ಸರ; ಧಾತ್ರೀ, ಶಕ್ತಿ.
ಶಾಲ ಸಾಲವೃಕ್ಷ; ಕೋಟೆ; ಶಾಲೆ, ವಿದ್ಯಾಸಂಸ್ಥೆ; ದೊಡ್ಡ ಕಟ್ಟಡ; ಕೋಣೆ.
ಶಾಲಗ್ರಾಮ (ಸಾಲಿಗ್ರಾಮ), ಗಂಡಕೀ ನದಿಯಲ್ಲಿ ದೊರೆಯುವ ಒಂದು ಜಾತಿ ಕಲ್ಲು.
ಶಾಲಿ ನೆಲ್ಲು, ಬತ್ತ; ಸಾಲೆ; ಮನೆಗೆ ಸಂಬಂಧಿಸಿದ; ಉಳ್ಳವ.
ಶಾಲಿನಿ ಒಂದು ವೃತ್ತ ಜಾತಿ; ಯಜಮಾನಿ.
ಶಾಲಿವಾಹನ ವಿಕ್ರಮಾದಿತ್ಯನ ಸಮಕಾಲೀನನಾದ ಒಬ್ಬ ದೊರೆ; ದಕ್ಷಿಣ ಹಿಂದುಸ್ಥಾನದ ಒಬ್ಬ ಶಕಪುರುಷ.
ಶಾಲೀನ ಸಂಕೋಚಶೀಲ, ದಾಕ್ಷಿಣ್ಯದ.
ಶಾಲೀನತೆ ಲಜ್ಜೆ, ವಿನಯಶೀಲತೆ.
ಶಾಲು ಶಲ್ಯೆ, ಶಲ್ಲೆ, ಸೆಲ್ಲೆ, ಹೊದೆಯುವ ವಸ್ತ್ರ, ಉತ್ತರೀಯ; ದಾವಳಿ.
ಶಾಲೆ ಮನೆ, ಮಂದಿರ; ಓದು ಹೇಳುವ ಮನೆ; ಕೋಣೆ; ಕರ್ಮಶಾಲೆ; ವಿದ್ಯಾಲಯ; ಜೇಡ.
ಶಾಲ್ಮಲಿ (ಶಾಲ್ಮಲೀ), ಬೂರುಗದ ಮರ, ಎಲವದ ಮರ.
ಶಾವಿಗೆ ಸೇವಿಗೆ, ಒಂದು ಖಾದ್ಯ.
ಶಾಶ್ವತ ಸ್ಥಿರ, ಯಾವಾಗಲೂ; ಸ್ವರ್ಗ.
ಶಾಸಕ ಶಾಸನ ಮಾಡುವವ, ಆಜ್ಞೆ ಮಾಡುವವ; ನಗಾರಿ.
ಶಾಸನ ಆಜ್ಞೆ, ಹುಕುಮು; ರಾಯಸ; ಶಿಕ್ಷೆ; ಬರಹ; ಮಸೂದೆ, ಕಾಯಿದೆ; ಅಪ್ಪಣೆ.
—ಸಭೆ ನ್ಯಾಯ ವಿಧಾಯಕ ಸಭೆ, ಕಾಯಿದೆ ಮಂಡಲ.
ಶಾಸ್ತ್ರ ಆಜ್ಞೆ, ಅಪ್ಪಣೆ; ನಡವಳಿಕೆಯ ರೀತಿ ಹೇಳುವ ಗ್ರಂಥ; ಒಂದು ವಿಷಯದ ರೀತಿಗಳನ್ನು ವಿವರಿಸುವ ಗ್ರಂಥ.
ಶಾಸ್ತ್ರಿ ಶಾಸ್ತ್ರ ತಿಳಿದವ; ಶಾಸ್ತ್ರ ಹೇಳುವವ.
ಶಾಸ್ತ್ರೀಯ ಶಾಸ್ತ್ರಕ್ಕೆ ಸಮವಾದ, ನಿಯಮಾನುಸಾರವಾದ.
ಶಾಂತ ತಳಮಳವಿಲ್ಲದ; ತೃಪ್ತ, ತುಷ್ಟ, ಸಮಾಧಾನವುಳ್ಳ.
ಶಾಂತಾದೇವಿ ಋಷ್ಯಶೃಂಗಮುನಿ ಹೆಂಡತಿ.
ಶಾಂತಿ ಸಮಾಧಾನ, ಶಮ, ತಾಳ್ಮೆ; ಮನಸ್ಸಿನ ತುಷ್ಟಿ; ತೃಪ್ತಿ.
ಶಾಂತಿಪರ್ವ ಮಹಾಭಾರತದ ಒಂದು ಭಾಗ. ಇಲ್ಲಿ ಯುಧಿಷ್ಠಿರನ ಶಾಂತಿಗಾಗಿ ಭೀಷ್ಮನು ಹೇಳಿದ ಕಥೆಗಳಿವೆ.
ಶಾಂಭವಿ ಪಾರ್ವತಿ, ಉಮೆ.
ಶಿಕಸ್ತು ನಜ್ಜುಗುಜ್ಜು, ಹಾಳು.
ಶಿಕಾರಿ ಬೇಟೆ, ಮೃಗಯಾ ವಿಹಾರ.
ಶಿಕ್ಷಕ ಗುರು; ದಂಡಿಸುವವ.

**ಶಿಕ್ಷಣ** ದಂಡನೆ; ದಂಡಿಸಿ ಪಾಠ ಹೇಳುವಿಕೆ; ವಿದ್ಯಾಬೋಧನೆ; ತರಬೇತಿ, ತಿದ್ದುವಿಕೆ.

**ಶಿಕ್ಷಾ** (ಶಿಕ್ಷೆ), ದಾರಿ; ಉಪದೇಶ; ಅಭ್ಯಾಸ; ಅಕ್ಷರ ಅಭ್ಯಾಸ ಕ್ರಮ ವಿವರಿಸುವ ಒಂದು ವೇದಾಂಗ ಗ್ರಂಥ; ದಂಡನೆ.

**ಶಿಕ್ಷಿಸು** ದಂಡಿಸು; ಪಾಠ ಹೇಳು, ಕಲಿಸು.

**ಶಿಖರ** ಕುಡಿ, ತುದಿ, ಮೊನೆ, ಕೋಡು.

**ಶಿಖಂಡ** ಜುಟ್ಟು, ಕೊಟ್ಟು, ಮುಡಿ; ನವಿಲಿನ ತೋಕೆ.

**ಶಿಖಂಡಿ** ನವಿಲು; ಸೂಗ, ನಪುಂಸಕ; ಪಾಂಚಾಲ ರಾಜನ ಹಿರಿಯ ಮಗ.

**ಶಿಖಾಮಣಿ** ಶ್ರೇಷ್ಠ; ಶಿರೋರತ್ನ.

**ಶಿಖಿ** ಅಗ್ನಿ; ನವಿಲು; ತಲೆ; ಚಂಡಿಕೆ; ಮಂಗಳ ಗ್ರಹ; ಕೇತು.

**—ವಾಹನ** ಕಾರ್ತಿಕೇಯ, ಸ್ಕಂದ.

**ಶಿಖೆ** (ಶಿಖಿ), ಜುಟ್ಟು, ಚಂಡಿಕೆ, ಕೊಟ್ಟು, ಮೊನೆ; ಕುಡಿ; ಜ್ವಾಲೆ, ಬೆಂಕಿನಾಲಗೆ.

**ಶಿತ** ದುರ್ಬಲ; ಹರಿತವಾದ; ಕಪ್ಪು.

**ಶಿತಿ** ಬಿಳಿಯ; ಕರಿಯ; ನೀಲ.

**ಶಿಥಿಲ** ಸಡಿಲು (ದ್ಭ); ಶಿಸ್ತಿಲ್ಲದ; ದುರ್ಬಲ.

**ಶಿನಿ** ಒಬ್ಬ ಯಾದವ. ಇವನ ಮಗ ಯುಯುಧಾನ.

**ಶಿಫಾರಸು** ಪ್ರಶಂಸೆ, ಹೊಗಳಿಕೆ; ಆಶ್ರಯ.

**ಶಿಬಿ** ಒಬ್ಬ ಚಕ್ರವರ್ತಿ. ಈತನು ಒಂದು ಪಾರಿವಾಳವನ್ನು ಉಳಿಸಲು, ಅಷ್ಟೇ ತೂಕದ ತನ್ನ ತೊಡೆಯ ಮಾಂಸವನ್ನು ಅವನನ್ನು ಪರೀಕ್ಷಿಸಲು ಬಂದ ಹದ್ದಿಗೆ ಕೊಟ್ಟನೆಂದು ಕಥೆ.

**ಶಿಬಿಕೆ** ವಿಮಾನ; ಡೋಲಿ, ಪಲ್ಲಕ್ಕಿ.

**ಶಿರ** (ಶಿರಸ್ಸು), ತಲೆ; ಮುಖ್ಯ.

**ಶಿರಸ್ತ್ರಾಣ** (ಶಿರಸ್ತ್ರ), ತಲೆ ಕಾಪಾಡುವುದು, ಕುಲಾವಿ; ರುಮಾಲು, ಪಗಡಿ; ಟೊಪ್ಪಿಗೆ.

**ಶಿರಾ** ನಾಡಿ, ರಕ್ತನಾಳ; ನರ, ನೇಸಜ್ಜಿಗೆ.

**ಶಿರೀಷ** ಬಾಗಿಯ ಮರ.

**ಶಿರೋಮಣಿ** ಚೂಡಾಮಣಿ; ಶಿರೋಭೂಷಣ; ಶ್ರೇಷ್ಠ.

**ಶಿರೋವೇಷ್ಟನ** ರುಮಾಲು, ಪಗಡಿ, ಪಾವಡ.

**ಶಿಲ** ಆಯ್ದ ತೆನೆ, ಹೆಕ್ಕಿದ ತೆನೆ.

**ಶಿಲಾ** (ಶಿಲೆ), ಕಲ್ಲು, ಗಟ್ಟಿಕಲ್ಲು, ಪಾದೆ.

**ಶಿಲಾಶಾಸನ** ಹಿಂದಿನವರು ತಮ್ಮ ಉಂಬಳಿ ಉತ್ತಾರ ಇಲ್ಲವೆ ಸಾಹಸಗಳನ್ನು ಕೆತ್ತಿಸಿ ಬರೆದಿಡುತ್ತಿದ್ದ ಕಲ್ಲು; ಶಿಲಾಲಿಪಿ.

**ಶಿಲೀಮುಖ** ಬಾಣ; ತುಂಬಿ, ಭ್ರಮರ.

**ಶಿಲುಬೆ** ಎರಡು ಮರದ ತುಂಡುಗಳನ್ನು ಒಂದಕ್ಕೊಂದು ಅಡ್ಡಹಾಯಿಸಿ ಬಿಗಿದುದು. ಇಂಥ ಮರದ ಮೇಲೆ ಯೇಸುವನ್ನು ಕೊಂದರೆಂದು ಹೇಳಿಕೆ.

**ಶಿಲ್ಪ** ಒಂದು ಕಲೆ; ಚಿತ್ರಕೆಲಸ; ವಿಗ್ರಹ ನಿರ್ಮಾಣದ ಕೆಲಸ; ಕುಶಲ ಕೆಲಸದವ.

**—ಕ** ಶಿಲ್ಪಬಲ್ಲವ; ಚಿಪ್ಪಿಗ(ದ್ಭ), ದರ್ಜಿ, ಸಿಂಪಿಗ.

**—ಗಾರ** ಶಿಲ್ಪಿ, ವಿಗ್ರಹ ನಿರ್ಮಾಣ ಮಾಡುವವ, ರೂವಾರಿ.

**ಶಿಲ್ಪಿ** ಕುಶಲ ಕಸಬು ಬಲ್ಲವ; ಪ್ರತಿಮೆ ಕೆತ್ತ ಬಲ್ಲವ, ರೂವಾರಿ; ಶಿಲ್ಪಿಗ, ಚಿಪ್ಪಿಗ, ಸಿಂಪಿಗ.

**ಶಿವ** ಮಂಗಲ; ಮಹಾದೇವ; ಒಂದು ಯೋಗ; ಪುಣ್ಯ; ಆನಂದ, ಸುಖ; ವೈದಿಕ ಕಾಲದ ರುದ್ರ ಎಂಬ ಹೆಸರೇ ಕ್ರಮೇಣ ಈ ರೂಪವನ್ನು ಪಡೆಯಿತು. ವೇದಗಳು ರುದ್ರನನ್ನು ಕ್ರಮಕ್ರಮವಾಗಿ ಕ್ರೂರ ದೇವತೆಯಾಗಿ ಚಿತ್ರಿಸುತ್ತವೆ. ರುದ್ರನು ಮಹಾಕಾಲನೂ ಶಿವನೂ ಆಗಿ ಹಿಂದೂ ತ್ರಿಮೂರ್ತಿಗಳಲ್ಲಿ ಪ್ರಪಂಚದ ನಾಶಕ್ಕೆ ಕಾರಣವಾದ ದೇವತೆ ಎನಿಸುತ್ತಾನೆ. ಪುರಾಣಗಳು ಅವನ ನೆಲೆ ಕೈಲಾಸ ಪರ್ವತ

ವೆಂದೂ ಅವನ ಮಡದಿ ಗಿರಿಕನ್ಯೆಯಾದ ಉಮೆಯೆಂದೂ ಹೇಳುತ್ತವೆ.

—ಆಚಾರ ವೀರಶೈವ ಧರ್ಮದ ಅನುಷ್ಠಾನ.

**ಶಿವರಾತ್ರಿ** ಮಾಘಮಾಸದ ಅಮಾವಾಸ್ಯೆ ಶಿವನನ್ನು ಕುರಿತು ಮಾಡುವ ರಾತ್ರಿಪೂಜೆ.

**ಶಿವಾ** ನರಿ; ದುರ್ಗಿ; ಮಂಗಳಕರ.

**ಶಿವಾಯಿ** ಹೊರತು, ವಿನಾ; ಅಲ್ಲದೆ; ಬಿಟ್ಟು, ಉಳಿದು.

**ಶಿವಿಕೆ** (ಶಿಬಿಕೆ), ಸಿದಿಗೆ; ಡೋಲಿ, ಪಲ್ಲಕ್ಕಿ; ವಿಮಾನ.

**ಶಿವೆ** ದುರ್ಗಿ, ಉಮೆ; ಅಣಿಲೆಕಾಯಿ.

**ಶಿವೈಕ್ಯ** ಶಿವನಲ್ಲಿ ಸೇರುವುದು; ಮೋಕ್ಷ; ಸಾವು, ಮರಣ.

**ಶಿಶಿರ** ಹಿಮ; ಶೀತ, ತಂಪು; ಮಾಘಫಾಲ್ಗುಣ ಮಾಸಗಳು; ಚಳಿಗಾಲ.

**ಶಿಶಿರೋಪಚಾರ** ಶೈತ್ಯೋಪಚಾರ, ತಂಪಾದ ವಸ್ತು ಒಡವೆಗಳಿಂದ ಉಪಚರಿಸುವುದು.

**ಶಿಶು** (ಸಿಸು), ಮಗು, ಕೂಸು.

**ಶಿಶುಪಾಲ** ಚೇದಿವಂಶದ ಘೋಷನ ಮಗ. ಇವನ ವಧೆ ಕೃಷ್ಣನಿಂದಾಯಿತು.

**ಶಿಶುಮಾರ** ನೆಗಳೆ; ಒಂದು ನಕ್ಷತ್ರರಾಶಿ, ಮಕರ.

**ಶಿಶ್ನ** ಪುರುಷನ ಜನನೇಂದ್ರಿಯ, ಲಿಂಗ.

**ಶಿಷ್ಟ** ಶ್ರೇಷ್ಠ; ಶಾಂತ; ಧೀರ; ಉತ್ತಮ ಕುಲಕ್ಕೆ ಸೇರಿರುವ; ವಿಧೇಯ; ಬತ್ತ; ಶೇಷ.

**ಶಿಷ್ಯ** ವಿದ್ಯೆ ಕಲಿಯಲು ಗುರುವಿನಲ್ಲಿ ಬರುವವ, ವಿದ್ಯಾರ್ಥಿ.

**ಶಿಸ್ತು** ರೀತಿ, ಕ್ರಮ; ಚೊಕ್ಕ, ನೀಟು; ಕಂದಾಯದಾರರ ಪಟ್ಟಿ.

**ಶೀಕರ** ಸಿವರು, ಸೀವರ, ಸಿಬರು; ತುಂತುರು; ಸಿಡುಕಲು ಹನಿ.

**ಶೀಘ್ರ** ತೀವ್ರ, ತ್ವರೆ, ಬೇಗ.

**ಶೀತ** ತಂಪು; ತಣಸು; ಚಳಿ; ಔದಾಸೀನ್ಯ; ನೆಗಡಿ; ನೀರು.

—ಲ ತಂಪಾದ.

**ಶೀತವಾರಿ** ತಂಪು ನೀರು, ತಣ್ಣೀರು.

**ಶೀತಾಂಶು** ಚಂದ್ರ.

**ಶೀಧು** ಒಂದು ಬಗೆ ಮದ್ಯ, ಹೆಂಡ.

**ಶೀರ** (ಸೀರ), ಕ್ಷೀರಾ, ಒಂದು ಸವಿ ಖಾದ್ಯ; ಸೂರ್ಯ; ನೇಗಿಲು.

**ಶೀರ್ಷ** ತಲೆ.

—ಕ ತಲೆಗೆ ತೊಡುವ ಕುಲಾವಿ.

**ಶೀಲ** ಅಭ್ಯಾಸ, ನಡತೆ; ಸ್ವಾಭಾವಿಕ ಗುಣ; ಒಳ್ಳೆಯ ನಡತೆ, ಗುಣ; ಚೆಲುವು; ಹೋರಿಗಳ ಬೀಜ ತೆಗೆಯುವುದು.

—ವಂತ ಗುಣಶಾಲಿ, ನಡತೆ ಬಲ್ಲವ, ಸಂಭಾವಿತ; ಮಡಿವಂತ.

**ಶೀಸಕ** (ಶೀರ್ಷಕ), ಸೀಸಕ, ಕುಲಾವಿ.

**ಶುಕ** ಗಿಳಿ; ಶಾಲ್ಮಲಿ ಮರ; ಬಟ್ಟೆ; ಶಿವ; ವ್ಯಾಸನ ಮಗನಾದ ಶುಕಯೋಗಿ.

—ವಾಣಿ ಗಿಳಿ ಮಾತು; ಹರಟುವಿಕೆ; ಗಿಳಿಯಂತೆ ತೊದಲುವಾಕೆ.

**ಶುಕಸಪ್ತತಿ** ಒಂದು ಗಿಳಿ ಹೇಳಿದ್ದೆನ್ನುವ 70 ಕಥೆಗಳು.

**ಶುಕ್ತ** ಚಿಪ್ಪು, ಸಿಂಪು; ಕಠಿಣ; ಅಕ್ಕಚ್ಚು; ಹುಳಿ.

**ಶುಕ್ತಿ** ಮಳಿಚಿಪ್ಪು, ಚಿಪ್ಪು; ಮುತ್ತಿನ ಚಿಪ್ಪು.

**ಶುಕ್ರ** ವೀರ್ಯ; ಒಂದು ಗ್ರಹ; ಬೆಳ್ಳಿ; ದೈತ್ಯರ ಗುರು; ನೀತಿಶಾಸ್ತ್ರ ಬರೆದ ಒಬ್ಬ ಪಂಡಿತ; ಹಿರಿ ಮಗ.

**ಶುಕ್ರನಾಡಿ** ಒಂದು ಜ್ಯೋತಿಷ್ಯ ಗ್ರಂಥ.

**ಶುಕ್ರನೀತಿ** ಶುಕ್ರಾಚಾರ್ಯನು ಬರೆದ ರಾಜನೀತಿಗ್ರಂಥ.

**ಶುಕ್ಲ** ಬಿಳುಪು; ವೀರ್ಯ; ಚಂದ್ರನು ಕಳೆಯೇರುವ ಹದಿನೈದು ದಿನ.

ಶುಚಿ ನಿರ್ಮಲ, ಚೊಕ್ಕ; ಬಿಳಿಯ; ಗೆಳೆಯ; ಬೆಂಕಿ, ಅಗ್ನಿ.
—ರ ಬಿಳುಪು, ಬಿಳಿದು.
ಶುದ್ಧ ಚೊಕ್ಕ; ಸ್ವಚ್ಛ; ಮಡಿಯಾದ.
—ಅಶುದ್ಧ ತಪ್ಪು ಸರಿ.
—ಪ್ರತಿ ಮೂಲಕ್ಕೆ ಸಮನಾದ ಪ್ರತಿ, ತಾಜಾ ಪ್ರತಿ.
ಶುದ್ಧಚಾರ ಒಳ್ಳೆಯ ನಡೆ; ಆಚಾರ ಚೆನ್ನಾಗಿರುವಿಕೆ.
ಶುದ್ಧಿ ಪವಿತ್ರಗೊಳಿಸುವಿಕೆ; ಚೊಕ್ಕಮಾಡುವಿಕೆ; ಪುಣ್ಯ; ಪಾಪವಿಮೋಚನೆ.
ಶುನಕ (ಶುನ), ನಾಯಿ.
ಶುಭ ಮಂಗಲ, ಕಲ್ಯಾಣ; ಅದೃಷ್ಟ; ಸುಲಕ್ಷಣ; ಶೌರ್ಯ.
—ದಾಯಕಿ ಶುಭಕೊಡುವವಳು.
ಶುಭಾಂಗಿ ಚೆಲುವೆ, ಸುಂದರ ಶರೀರಿ.
ಶುಭೋದಯ ಶ್ರೇಯಃಪ್ರಾಪ್ತಿ.
ಶುಭ್ರ ನಿರ್ಮಲ; ಬಿಳುಪು; ಹೊಳೆಯುವ.
—ವಾಹನ ಬಿಳಿ ಕುದುರೆ ಉಳ್ಳವ, ಅರ್ಜುನ.
ಶುಲ್ಕ (ಸಂ) ಸುಂಕ (ದ್ಭ); ಕನ್ಯೆ ಪಡೆಯುವವರು ತೆರುವ ಹಣ; ಲಾಭ; ತೆರ; ಬೆಲೆ.
ಶುಲ್ಬ (ಶುಲ್ಬಿ), ಹಗ್ಗ; ರಮ್ಯ; ತಾಮ್ರ.
ಶುಶ್ರೂಷೆ ಉಪಚಾರ, ಸೇವೆ; ವಿಧೇಯತೆ.
ಶುಷ್ಕ ಒಣಗಿದ; ಆರಿದ, ಇಂಗಿದ, ಬತ್ತಿದ; ನಿಷ್ಫಲ; ಬರಡು, ವ್ಯರ್ಥ.
ಶುಷ್ಮ ಶಕ್ತಿ, ಬಲ; ಕಾಂತಿ.
ಶುಂಠ ಒರಟ; ಮೊಂಡ, ಹಟವಾದಿ.
ಶುಂಠಿ ಒಂದು ಕಾರವುಳ್ಳ ಬೇರು, ಖಾರಗೆಣಸು.
ಶುಂಡ ಮದಪ್ರವಾಹ; ಆನೆಸೊಂಡಿಲು; ಮದ್ಯಪಾನ ಮಾಡುವ ಮನೆ.
ಶುಂಡಾಲ ಆನೆ.
ಶುಂಭ ಒಬ್ಬ ರಾಕ್ಷಸ; ದಡ್ಡ.
—ನ ಹಾನಿಮಾಡುವುದು; ಹೊಳೆವ.
ಶೂಕ ಧಾನ್ಯದ ಮೇಲಿನ ಮುಳ್ಳು.
ಶೂಕರ ಸೂಕರ (ದ್ಭ), ಹಂದಿ.
ಶೂದ್ರು ನಾಲ್ಕನೆಯ ವರ್ಣದವ.
ಶೂದ್ರುಕ ಒಬ್ಬ ಕವಿ. ಈತನು ಸಂಸ್ಕೃತ ಮೃಚ್ಛಕಟಿಕ ನಾಟಕವನ್ನು ಬರೆದನು.
ಶೂದ್ರೆ ಶೂದ್ರು ಸ್ತ್ರೀ.
ಶೂನ್ಯ ಏನೂ ಇಲ್ಲದ, ಕಾಲಿ, ಬರಿಯ; ಸೊನ್ನೆ (ದ್ಭ), ಪೂಜ್ಯ; ಆಕಾಶ; ನಾಶ; ಹಾನಿ; ಮಾಟ, ಜಾದು.
—ವಾದಿ ನಾಸ್ತಿಕ, ಚಾರ್ವಾಕ ಮತದವ; ಬೌದ್ಧ ಜನ.
ಶೂರ ವೀರ, ಆಕೆವಾಳ.
ಶೂರ್ಪ ಮೊರ, ಧಾನ್ಯಕೇರಲು ಬರುವ ಸಾಧನ, ಗೆರಸೆ.
—ಕರ್ಣ ಗೆರಸೆಯಂಥ ಕಿವಿ ಉಳ್ಳದು, ಆನೆ.
ಶೂರ್ಪನಖಿ ರಾವಣನ ತಂಗಿ. ಈಕೆ ರಾಮಲಕ್ಷ್ಮಣರನ್ನು ಮೋಹಿಸಲು ಬಂದಾಗ ಲಕ್ಷ್ಮಣನು ಅವಳ ಮೂಗನ್ನು ಕೊಯ್ದನೆಂದು ಕಥೆ.
ಶೂಲ ಮೊನಚಾದ ಸಲಕೆ. ಇದನ್ನು ನೆಲದಲ್ಲಿ ನಟ್ಟು ಅಪರಾಧಿಗಳನ್ನು ಅದರ ಮೇಲೇರಿಸಿ ಕೊಲ್ಲುತ್ತಿದ್ದರು; ತ್ರಿಶೂಲ; ಯಾತನೆ.
—ಪಾಣಿ ಶೂಲಧರ, ಶಿವ.
ಶೂಲಿ (ಸೂಲಿ), ಶೂಲೆ, ವೇದನೆ, ಶರೀರದೊಳಗಣ ಸಂಕಟ; ಸೂಳೆ.
ಶೃಗಾಲ (ಸೃಗಾಲ), ನರಿ, ಜಂಬುಕ.
ಶೃಂಖಲಾ (ಶೃಂಖಲೆ), ಸಂಕಲೆ (ದ್ಭ), ಸರಪಳಿ.
ಶೃಂಗ ಕೊಂಬು, ಕೋಡು; ಬೆಟ್ಟದ ತುದಿ; ಒಂದು ವಾದ್ಯ; ಪ್ರಾಮುಖ್ಯತೆ; ಕೊಂಬು, ಕಹಳೆ; ಪ್ರಭು; ಒಬ್ಬ ಮುನಿ.

ಶೃಂಗರಿಸು ಸಿಂಗರಿಸು, ಅಲಂಕರಿಸು.
ಶೃಂಗಾರ ತೊಡುಗೆ, ಅಲಂಕಾರ; ಒಂದು ರಸವಿಶೇಷ; ಚೆಲುವು, ಶೋಭೆ.
—ಚೇಷ್ಟೆಕಾಮವಿಕಾರ; ಪ್ರಣಯಚೇಷ್ಟೆ.
ಶೃಂಗಾರಿ ಉಡುಗೆ, ತೊಡುಗೆ; ಶೃಂಗಾರತನ; ಚೆಲುವೆ, ಸುಂದರಿ.
ಶೃಂಗಿ ಕೊಂಬುಳ್ಳುದು; ಸಿಂಗಾರಿ; ಶವಾಕ ಋಷಿಯ ಮಗ; ಬೆಟ್ಟ; ಸಾರಂಗ.
ಶೃಂಗೇರಿ ಶೃಂಗಪುರ. ಶಿವಮೊಗ್ಗದ ಜಿಲ್ಲೆಯ ಒಂದು ಊರು. ಇಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಒಂದು ಮಠವಿದೆ.
ಶೇಕದಾರ ಮಣೆಗಾರ; ಒಬ್ಬ ರೆವೆನ್ಯೂನೌಕರ.
ಶೇಖರ ಬಾಸಿಂಗ, ಕಿರೀಟ; ತಲೆಯೊಡವೆ; ಮುಖಂಡ, ನಾಯಕ; ಸಂಗ್ರಹ.
—ಇಸು ಕೂಡಿಹಾಕು, ಸಂಗ್ರಹಿಸು.
ಶೇಷ ಉಳಿದುದು; ಉಚ್ಚಿಷ್ಟ; ಶಿಲ್ಕು; ಮಹಾ ಶೇಷನೆಂಬ ಸರ್ಪ; ಬಲರಾಮ.
ಶೇಷಗಿರಿ ತಿರುಪತಿ ಬೆಟ್ಟ.
ಶೇಷಾನ್ನ ಉಚ್ಚಿಷ್ಟ, ಎಂಜಲು.
ಶೇಷೆ (ಸೇಸೆ), ಕುಂಕುಮ ಹಾಕಿದ ಅಕ್ಕಿ. ವಧೂವರರನ್ನು ಹರಸುವಾಗ ಎರಚುತ್ತಾರೆ, ಮಂತ್ರಾಕ್ಷತೆ.
—ತಳಿ ಅಕ್ಷತೆ ಎರಚು, ಹರಸು.
ಶೈತ್ಯ ಶೀತ, ತಂಪು; ನೆಗಡಿ.
— ಉಪಚಾರ ತಂಪಾದ ಒಡವೆಗಳಿಂದ ಉಪಚರಿಸುವುದು.
ಶೈಥಿಲ್ಯ ಸಡಿಲಾಗಿರುವಿಕೆ, ಶಿಥಿಲತೆ.
ಶೈನೇಯ ಶನಿಯ ಮಗನೊಬ್ಬ, ಸಾತ್ಯಕಿ.
ಶೈಭ್ಯ ಕೃಷ್ಣನ ರಥದ ಒಂದು ಕುದುರೆ.
ಶೈಲ ಬೆಟ್ಟ, ಪರ್ವತ; ಕಲ್ಲಿಂದ ತುಂಬಿದುದು.
—ಜೆ ಗಿರಿಯ ಮಗಳು, ಉಮೆ.
ಶೈಲಾಟ ಬೆಟ್ಟದ ನಿವಾಸಿ; ಸಿಂಹ.
ಶೈಲಾಲಿ ನಟ; ಕುಣಿಯುವವ, ನರ್ತನಕಾರ.
ಶೈವ ಶಿವನಿಗೆ ಸಂಬಂಧವಾದ; ಶಿವನನ್ನು ಆರಾಧಿಸುವ, ಸ್ಮಾರ್ತ.
ಶೈವಲಿನಿ (ಶೈವಲ=ಹಾವಸೆ), ಹಾವಸೆ ಉಳ್ಳುದು, ಕೆರೆ.
ಶೈಶವ ಬಾಲ್ಯ, ಶಿಶುತನ; ಎಳೆತನ.
ಶೋಕ ದುಃಖ, ವ್ಯಸನ; ವಿಲಾಪ, ರೋದನ.
— ಆರ್ತ ದುಃಖಿ, ದುಃಖಪೀಡಿತ.
— ಆರ್ತೆ ದುಃಖಿನಿ, ದುಃಖಪೀಡಿತೆ.
— ಇಸು ದುಃಖಿಸು, ರೋದಿಸು, ಅಳು.
ಶೋಚನ ದುಃಖ, ವಿಲಾಪ, ಅಳು.
ಶೋಚಿಸು ದುಃಖಿಸು, ರೋದಿಸು.
ಶೋಣ ಕೆಂಪು ಬಣ್ಣ; ಒಂದು ನದಿ, ಸೋನಾ ನದಿ.
ಶೋಣಿತ ನೆತ್ತರು, ರಕ್ತ; ಸ್ತ್ರೀಯಲ್ಲಿ ರತಿ ಕಾಲದಲ್ಲಿ ಉಂಟಾಗುವ ಧಾತು; ಒಂದು ಪಟ್ಟಣ.
ಶೋಧ (ಶೋಧೆ); ಶೋಧನೆ, ತಿದ್ದುವಿಕೆ; ಹುಡುಕುವಿಕೆ; ಪರಿಶೀಲನೆ.
— ಇಸು ಅರಸು; ಹುಡುಕು; ಕಂಡುಹಿಡಿ; ಪರಿಶೀಲಿಸು.
ಶೋಭನ ಮಂಗಳಕರವಾದುದು; ಕಾಂತಿ; ಚೆಲುವು; ಸೋಬಾನೆ, ಸುವ್ವಿ; ಪ್ರಥಮ ಸಂಭೋಗ; ನಿಶೇಕ ಪ್ರಸ್ತ.
ಶೋಭಾ (ಶೋಭೆ), ಕಾಂತಿ; ಅಲಂಕಾರ; ಸೊಗಸು, ಚೆಲುವು.
ಶೋಭಾಯಮಾನ ಶೋಭಿಸುವ, ಪ್ರಕಾಶಿಸುವ.
ಶೋಷಣ ಆರುವಿಕೆ, ಇಂಗುವಿಕೆ, ಬತ್ತುವಿಕೆ.
ಶೌಚ ಶುದ್ಧ, ಪವಿತ್ರತೆ; ಬಹಿರ್ದೇಶಕ್ಕೆ ಹೋಗುವಿಕೆ, ಕೈಕಾಲಿಗೆ ಹೋಗುವುದು.
ಶೌನಕ ನೈಮಿಷಾರಣ್ಯವಾಸಿಯಾಗಿದ್ದ ಒಬ್ಬ ಋಷಿ.
ಶೌರಿ ಶೂರನೆಂಬ ಯಾದವ ಕುಲದವ, ಕೃಷ್ಣ.

**ಶೌರ್ಯ** ಪರಾಕ್ರಮ; ಧೈರ್ಯ; ಅಧಟು, ಸಾಹಸ.

—**ವಂತ** ಧೈರ್ಯಶಾಲಿ, ವೀರ; ಸಾಹಸಿ; ಎದೆಗಾರ, ಗಡಸು.

**ಶೌಂಡ** ಮದಿಸಿದವ; ಕುಡಿದು ಮತ್ತನಾದವ; ದಕ್ಷ.

**ಶ್ಮಶಾನ** ಮಸಣ, ಸುಡುಗಾಡು, ರುದ್ರಭೂಮಿ.

—**ವಾಸಿ** ಶಿವ.

—**ವೈರಾಗ್ಯ** ಶ್ಮಶಾನ ಕಂಡೊಡನೆ ಬರುವ ವಿರಕ್ತಿ, ಕ್ಷಣಿಕ ವಿರಕ್ತಿ.

**ಶ್ಮಶಾನಿ** ಮಸಣಿ, ದುರ್ಗಿ, ಕಾಳಿ.

**ಶ್ಯಾನುಭೋಗ** ಕರಣೀಕ, ಕುಲಕರ್ಣಿ; ಒಬ್ಬ ಗ್ರಾಮ ಉದ್ಯೋಗಸ್ಥ.

**ಶ್ಯಾಮ** ಕಪ್ಪುಬಣ್ಣ; ಸಂಜೆ; ಕರಿಬಣ್ಣದ ಒಂದು ಹಾಡುವ ಹಕ್ಕಿ.

**ಶ್ಯಾಮಲ** ಕಪ್ಪು; ನೀಲ.

**ಶ್ಯಾಮಾಂಗ** ನೀಲ ಮೈ; ಕೃಷ್ಣ, ವಿಷ್ಣು.

**ಶ್ರದ್ಧಾ** (ಶ್ರದ್ಧೆ), ವಿಶ್ವಾಸ, ನಂಬಿಕೆ.

—**ಲು** ನಂಬಿಕೆಯುಳ್ಳ, ವಿಶ್ವಾಸಶೀಲ.

**ಶ್ರಮ** ಆಯಾಸ; ದಣಿವು; ಕಷ್ಟ; ಶಸ್ತ್ರಾಭ್ಯಾಸ; ತೊಂದರೆ, ಸಂಕಟ.

—**ಗಾರ** ಶ್ರಮಮಾಡುವವ, ಕೂಲಿ.

**ಶ್ರಮಣ** ಸವಣ(ದ್ಭ), ಸನ್ಯಾಸಿ; ಬೌದ್ಧಬಿಕ್ಕು, ಜೈನ ಸನ್ಯಾಸಿ; ಶ್ರಮಿಸುವಿಕೆ.

**ಶ್ರವ** ಶ್ರಮ; ಶ್ರಮಿಸುವ ಮನೆ, ಗೋದು, ಗರಡಿಮನೆ, ಮಲ್ಲಸಾಲೆ; ಕಿವಿ.

**ಶ್ರವಣ** ಕೇಳುವ ಅವಯವ, ಕಿವಿ; ಕೇಳುವುದು; 16ನೆಯ ನಕ್ಷತ್ರ.

**ಶ್ರವಣೇಂದ್ರಿಯ** ಕಿವಿ.

**ಶ್ರಾದ್ಧ** ಶ್ರದ್ಧೆಯಿಂದಮಾಡುವಪಿತೃಕಾರ್ಯ, ತಿಥಿ.

—**ದೇವ** ಯಮ.

**ಶ್ರಾವಣ** ಒಂದು ಚಾಂದ್ರಮಾನ ತಿಂಗಳು, ಸೋಣ (ದ್ಭ); ಕಿವಿಗೆ ಸಂಬಂಧಿಸುವುದು; ಹೊಸ ಜನಿವಾರ ಹಾಕುವುದು.

**ಶ್ರಾವ್ಯ** ಕೇಳತಕ್ಕ, ಕೇಳಲು ಇಂಪಾದ.

**ಶ್ರಿತ** ಆಶ್ರಯಿಸಿದ, ಸೇರಿದ.

**ಶ್ರೀ** ಲಕ್ಷ್ಮಿ; ಸಂಪತ್ತು; ಪ್ರಭೆ; ಕೀರ್ತಿ; ಸಿರಿವಂತ, ಸಂಪತ್ತುಳ್ಳವ.

—**ಕರ** ಶೋಭೆಯನ್ನು ಕೊಡುವ; ಸಂಪತ್ತು ಕೊಡುವ.

—**ಕಾಂತ** ಲಕ್ಷ್ಮೀಪತಿ, ವಿಷ್ಣು.

—**ಪತಿ** ಲಕ್ಷ್ಮೀಪತಿ.

**ಶ್ರೀಕಂಠ** ಈಶ್ವರ.

**ಶ್ರೀಕಾರ** ಬರಹ ತೊಡಗುವ ಮೊದಲನೆಯ 'ಶ್ರೀ' ಎಂಬ ಅಕ್ಷರ.

**ಶ್ರೀಗಂಧ** ಗಂಧದ ಮರ.

**ಶ್ರೀಧರ** ಲಕ್ಷ್ಮಿಯನ್ನು ಧರಿಸಿದವ, ವಿಷ್ಣು.

**ಶ್ರೀನಿವಾಸ** ಶ್ರೀಪತಿ; ವಿಷ್ಣು.

**ಶ್ರೀಮುಖ** ಒಂದು ಸಂವತ್ಸರ; ಗುರುಹಿರಿಯರ ಮುಖ, ಸಿರಿಮೊಗ(ದ್ಭ), ಸುಂದರ ಮುಖ.

**ಶ್ರೀಮುದ್ರೆ** ಮಾಧ್ವರು ಮೈಮೇಲೆ ಒತ್ತಿಕೊಳ್ಳುವ ಶ್ರೀಚಕ್ರದ ಗುರುತುಳ್ಳ ಮುದ್ರೆ.

**ಶ್ರೀರಂಗ** ಕೃಷ್ಣ; ದಕ್ಷಿಣ ಹಿಂದುಸ್ಥಾನದ ಒಂದು ಯಾತ್ರಾಸ್ಥಳ.

**ಶ್ರೀವತ್ಸ** ಶ್ರೀಯುಕ್ತವಾದ ಎದೆ; ವಿಷ್ಣು.

**ಶ್ರೀವಧು** (ಶ್ರೀವನಿತೆ), ಲಕ್ಷ್ಮಿ ಎಂಬ ಸ್ತ್ರೀ.

**ಶ್ರೀಶೈಲ** ಒಂದು ಯಾತ್ರಾಸ್ಥಳ.

**ಶ್ರುತ** ಕೇಳಿದ; ತಿಳಿದ; ಶಾಸ್ತ್ರ; ಶಾಸ್ತ್ರದಿಂದ ಬಂದ ತಿಳಿವು.

—**ಪಡಿಸು** ಹೇಳು, ನಿವೇದಿಸು.

**ಶ್ರುತಕೀರ್ತಿ** ಕುಶಧ್ವಜನ ಮಗಳು. ಶತ್ರುಘ್ನನ ಹೆಂಡತಿ; ಬಲು ಕೀರ್ತಿ ಪಟ್ಟವ.

**ಶ್ರುತದೇವಿ** ಶಾರದೆ, ಸರಸ್ವತಿ.

**ಶ್ರುತಶ್ರವ** ಶಿಶುಪಾಲನ ತಂದೆ.

**ಶ್ರುತಿ** ಕಿವಿ; ಶ್ರವಣೇಂದ್ರಿಯದಿಂದ ಉಂಟಾದ

ಜ್ಞಾನ; ವೇದ; ಗಾನದಲ್ಲಿ ಮೇಳವಾಗುವ ಮುಖ್ಯನಾದ.
ಶ್ರೇಣಿ ಸಾಲು; ಸಮೂಹ; ಪಡೆ, ಸೇನೆ; ಕಸುಬುದಾರರ ಕೂಟ.
ಶ್ರೇಯಸ್ (ಶ್ರೇಯಸ್ಸು), ಬಹಳ ಪ್ರಸಿದ್ಧ ವಾದುದು; ಧರ್ಮ; ಶುಭ; ಮೋಕ್ಷ.
ಶ್ರೇಷ್ಠ ಉತ್ತಮ, ಯೋಗ್ಯ, ಹಿರಿಯ, ಹಿರಿದು.
—ತೆ ಯೋಗ್ಯತೆ; ಹಿರಿಮೆ.
ಶ್ರೋಣಿ ನಡು, ಜಘನ.
ಶ್ರೋತವ್ಯ ಕೇಳತಕ್ಕುದು; ಕೇಳುವವನು; ಕೇಳಬಹುದಾದ.
ಶ್ರೋತ್ರ ಕಿವಿ.
ಶ್ರೋತ್ರಿಯ ವೇದವನ್ನರಿತ ಬ್ರಾಹ್ಮಣ.
ಶ್ರೌತ ವೇದೋಕ್ತ ಕರ್ಮ.
—ಥ ಶಿಥಿಲ, ಸಡಿಲಾದ; ದುರ್ಬಲ.
ಶ್ಲಾಘಿಸು ಹೊಗಳು.
ಶ್ಲಾಘ್ಯ ಹೊಗಳಿಕೆಗೆ ತಕ್ಕ, ಶ್ರೇಷ್ಠ.
ಶ್ಲಿಷ್ಟ ಅಪ್ಪಿಕೊಂಡ, ಸೇರಿದ, ಹೊಂದಿದ; ಒಂದು ಅಲಂಕಾರ.
ಶ್ಲೇಷ (ಶ್ಲೇಷೆ), ಸೇರಿಕೆ, ಆಲಿಂಗನ, ಅಪ್ಪುಗೆ; ಒಂದೆ ಮಾತಿಗೆ ಎರಡು ಅರ್ಥ ಕೊಡುವ ಅಲಂಕಾರ ಭೇದ.
ಶ್ಲೇಷ್ಮ ಕಫ.
ಶ್ಲೋಕ ನಾಲ್ಕು ಪದಗಳುಳ್ಳ ಕವನ; ಕೀರ್ತಿ.
ಶ್ವಪಚ ಚಾಂಡಾಲ, ಹೊಲೆಯ.
ಶ್ವಶುರ ಮಾವ, ಹೆಂಡತಿಯ ತಂದೆ.
ಶ್ವಶ್ರು ಅತ್ತೆ, ಮಾಯಿ, ಹೆಂಡತಿಯ ತಾಯಿ.
ಶ್ವಸನ ವಾಯು, ಗಾಳಿ; ಉಸಿರಾಟ.
ಶ್ವಾನ ನಾಯಿ, ಶುನಕ, ಸೊಣಗ.
ಶ್ವಾಪದ ಹಿಂಸ್ರಮೃಗ.
ಶ್ವಾಸ ಉಸಿರಾಟ; ಸುಯ್ಲು; ಉಸಿರಾಡಿದ ಗಾಳಿ.
—ಕಾಸ ಉಬ್ಬಸ, ನೇವಸ, ಗೂರು, ದಮ್ಮು.
—ಕೋಶ ಪುಪ್ಪುಸ.
ಶ್ವೇತ ಬಿಳಿದು; ಬೆಳ್ಳಿ; ಒಂದು ಭೂಖಂಡ.
—ಕುಷ್ಠ ತೊನ್ನು, ಬಿಳಿ ಕುಷ್ಠ.
ಶ್ವೇತದ್ವೀಪ ವಿಷ್ಣುವಿನ ವೈಕುಂಠ; ಒಂದು ದ್ವೀಪ.
ಶ್ವೇತವಾಹನ ಬಿಳಿಕುದುರೆ ಏರಿದವ, ಅರ್ಜುನ
ಶ್ವೇತಾದ್ರಿ ರಜತಗಿರಿ.
ಶ್ವೇತಾಂಬರ ಬಿಳಿ ಬಟ್ಟೆ,-ಬಿಳಿ ಬಟ್ಟೆ ಉಟ್ಟವ; ಒಂದು ಜೈನ ಪಂಥ.
ಶ್ವೇತಾಂಬರಿ ಬಿಳಿ ಬಟ್ಟೆ ಉಟ್ಟವಳು, ಜೈನ ಸನ್ಯಾಸಿನಿ.

## ಷ

ಷಟ್ ಆರು.
ಷಟ್ಕರ್ಮ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ— ಈ ಆರು ಬ್ರಾಹ್ಮಣೋಚಿತ ಕರ್ಮಗಳು.
ಷಟ್ಕರ್ಮಿ ಬ್ರಾಹ್ಮಣೋಚಿತ ಕರ್ಮ ಮಾಡುವವ.
ಷಟ್ಕವಿ ಕುಕವಿ; ಅಣಕ.
ಷಟ್ಕೋಣ ಆರು ಮೂಲೆಯ ಆಕೃತಿ.
ಷಟ್ಪದ (ಷಟ್ಚರಣ), ಆರಡಿ, ತುಂಬಿ.
ಷಟ್ಪದಿ ತುಂಬಿ; ಆರು ಪದಗಳ ಪದ್ಯಜಾತಿ.
ಷಡಕ್ಷರಿ ಓಂ ನಮಶ್ಶಿವಾಯ ಎಂಬ ಮಂತ್ರ; ಒಬ್ಬ ಕನ್ನಡ ಕವಿ.
ಷಡಂಗ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ— ಎಂಬ ಆರು ವೇದಾಂಗಗಳು.
ಷಡಾನನ ಷಣ್ಮುಖ, ಸ್ಕಂದ, ಕುಮಾರ ಸ್ವಾಮಿ.
ಷಡಿಂದ್ರಿಯ ಮನಸ್, ಕರ್ಣ, ನೇತ್ರ, ರಸನ,

ತ್ವಕ್, ನಾಸಿಕ—ಎಂಬ ಜ್ಞಾನಾರ್ಜನೆಯ ಆರು ಇಂದ್ರಿಯಗಳು.

ಷಡೂರ್ಮಿ ಊಟ, ಬಾಯಾರಿಕೆ, ಶೋಕ, ಮೋಹ, ಜರೆ, ಮರಣಗಳೆಂಬ ಆರು ಕೊರತೆಗಳು.

ಷಡೃತು ವಸಂತ, ಗ್ರೀಷ್ಮ, ವರ್ಷ, ಶರದ್, ಶಿಶಿರ, ಹೇಮಂತ—ಈ ಆರು ಋತುಗಳು.

ಷಡ್ಗುಣ ಕ್ಷತ್ರಿಯರಲ್ಲಿರಬೇಕಾದ ಆರು ಮುಖ್ಯ ಗುಣಗಳು.

ಷಡ್ಜ ಸಂಗೀತ ಸಪ್ತಕದಲ್ಲಿ ಆರನೆಯ ಸ್ಥಾನ.

ಷಡ್ದರ್ಶನ ಸಾಂಖ್ಯ, ವೈಶೇಷಿಕ, ಮೀಮಾಂಸ, ನ್ಯಾಯ, ವೇದಾಂತ, ಯೋಗ—ಎಂಬ ಆರು ಹಿಂದೂ ದರ್ಶನಗಳು.

ಷಡ್ರಸ ಸಿಹಿ, ಕಹಿ, ಒಗರು, ಉಪ್ಪು, ಕಾರ, ಹುಳಿ—ಎಂಬ ಆರು ರುಚಿಭೇದಗಳು.

ಷಡ್ವರ್ಗ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಹಗೆಗಳು.

ಷಣ್ಮತ ಶೈವ, ವೈಷ್ಣವ, ಸೌರ, ಗಾಣಪತ್ಯ, ಕಾಪಾಲಿಕ, ಶಾಕ್ತೇಯ ಈ ಆರು ಧಾರ್ಮಿಕ ಪಂಥಗಳು.

ಷಣ್ಮುಖ ಕಾರ್ತಿಕೇಯ, ಕುಮಾರಸ್ವಾಮಿ.

ಷರಾ ಮೇಲಿನ ಬರಹ, ವಿಮರ್ಶೆಯ ನುಡಿ.

ಷರಾಬು ಸಾರಾಯಿ.

ಷರಾಯಿ ಶರ್ಟು, ಅಂಗಿ.

ಷಷ್ಟಿ ಅರುವತ್ತನೆಯ.

—ಪೂರ್ತಿ ಅರವತ್ತು ವರ್ಷ ಮುಗಿದುದಕ್ಕೆ ಮಾಡುವ ಒಂದು ಹಬ್ಬ.

ಷಷ್ಠ ಆರನೆಯ.

ಷಷ್ಠಿ ಪಕ್ಷದ ಆರನೆ ದಿನ.

ಷಂಡ ಕೂಟ, ಸಮೂಹ; ಹಿಂಡು; ರಾಶಿ; ನಪುಂಸಕ, ಸೂಗ; ಭಂಡ.

ಷೋಕಿ ವಿಲಾಸ, ಕಾಮುಕತೆ.

ಷೋಡಶ ಹದಿನಾರು; ಒಂದು ಶ್ರಾದ್ಧ.

ಷೋಡಶೋಪಚಾರ ಅತಿಥಿಗೆ ಇಲ್ಲವೆ ದೇವರಿಗೆ ಅರ್ಪಿಸುವ ಹದಿನಾರು ಬಗೆಯ ಉಪಚಾರಗಳು.

# ಸ

ಸಕರ್ಮ ಕೆಲಸಮಾಡುವ; ಒಂದೇ ಕೆಲಸದ.

—ಕ ಕರ್ಮಪದವುಳ್ಳ ಕ್ರಿಯಾಪದ.

ಸಕಲ (ಸಕಳ), ಸರ್ವ, ಎಲ್ಲಾ, ಪೂರಾ; ಮೆಲುದನಿಯುಳ್ಳ.

ಸಕಲಾತಿ ಶಾಲು, ದಾವಳಿ.

—ಹಾಕು ಮೋಸಮಾಡು.

ಸಕಾಲ ತಕ್ಕ ಸಮಯ, ಯೋಗ್ಯ ಕಾಲ.

ಸಕೀಲಕ ಸಂಬಂಧ.

ಸಕುಟುಂಬಸತಿಸುತ ಸಹಿತ, ದಂಪತಿಯುಕ್ತ

ಸಕೇಶ ಕೂದಲುಳ್ಳ.

ಸಕೇಶಿ ಕೂದಲುಳ್ಳವಳು; ತಲೆ ಕೂದಲು ಬೋಳಿಸದ ವಿಧವೆ.

ಸಕ್ಕ(ದ್ಭ) ಶಲ್ಕ(ಸಂ), ಚಕ್ಕೆ, ಮರದ ಚೂರು.

ಸಕ್ಕದ (ದ್ಭ) ಸಂಸ್ಕೃತ (ಸಂ).

ಸಕ್ಕರೆ (ದ್ಭ) ಶರ್ಕರೆ (ಸಂ); ಶುದ್ಧಮಾಡಿದ ಬೆಲ್ಲ, ಬೂರಾ, ಚೀನಿ.

ಸಕ್ಕಿ (ದ್ಭ) ಸಾಕ್ಷಿ (ಸಂ).

ಸಕ್ತ (ಸಕ್ತು); ಕೂಡಿದ.

ಸಕ್ತು (ಸಕ್ತ) ಕಠಿಣ; ತೀವ್ರ; ಕ್ರೂರ.

ಸಖ ಸ್ನೇಹಿತ, ಗೆಳೆಯ, ಗೆಣೆಗಾರ.

ಸಖಿ ಗೆಳತಿ, ಗೆಣತಿ, ಗೆಣೆಗಾತಿ.

ಸಖೇದ ವ್ಯಸನದಿಂದ ಕೂಡಿದ; ವ್ಯಥೆಯುಳ್ಳ.

ಸಖ್ಯ ಸ್ನೇಹ.

ಸಗಟು ಸೌಳು ರುಚಿ, ಸಗಡು; ಮುದ್ದೆ, ರಾಶಿ.

ಸಗಣಿ ದನದ ಹೇಲು, ಗೋಮಯ, ಹೆಂಡಿ.

ಸಗರ ಸೂರ್ಯವಂಶದ ಒಬ್ಬ ಅರಸು. ಇವನ

ಮಕ್ಕಳ ಪಾಪವಿಮೋಚನೆಗಾಗಿ ಭಗೀರಥನು ತನ್ನ ತಪಸ್ಸಿನ ಬಲದಿಂದ ಗಂಗೆಯನ್ನು ಭೂಮಿಗೆ ಬರಮಾಡಿದನು.

**ಸಗಾಟ** ಸಾಗಾಟಕೆ, ಹೆಚ್ಚಿನ ಸ್ನೇಹ.

**ಸಗಾಢ** ರಭಸ; ಆತುರ, ವೇಗ; ಹೆಚ್ಚಿಗೆ; ವೀರ; ಯೋಗ್ಯತೆ.

—**ಪೆರ್** ಹೆಚ್ಚಾಗು, ಮಹತ್ತಾಗು.

**ಸಗಾಢಿಕೆ** ಪರಾಕ್ರಮ; ಆಧಿಕ್ಯ.

**ಸಗುಣ** ರೂಪದಿಂದ ಕೂಡಿದ; ಗುಣಯುಕ್ತ.

**ಸಗೋತ್ರ** ಒಂದೇ ಕುಲ, ಒಂದೇ ಬಳಿ, ಒಂದೇ ವಂಶ.

**ಸಗ್ಗ** (ದ್ಭ) ಸ್ವರ್ಗ (ಸಂ).

**ಸಗ್ಗಳೆ** ಕುಡಿಯುವ ನೀರು ತುಂಬಿದ ಚರ್ಮದ ಪಾತ್ರೆ, ಬುದ್ದಲಿ.

**ಸಗ್ಗಿಗ** ಸ್ವರ್ಗದವ, ಸುರ, ದೇವತೆ.

**ಸಚರ** ಸಂಚರಿಸುವ ಪ್ರಾಣಿಗಳು.

—**ಅಚರ** ಚಲಿಸುವ ಮತ್ತು ಚಲಿಸದ, ಸ್ಥಾವರ ಜಂಗಮ.

**ಸಚಿ** ಗೆಳೆಯ, ಸ್ನೇಹ; ಶಚಿ (ಸಂ), ಇಂದ್ರಾಣಿ; ಇಂದ್ರನ ಹೆಂಡತಿ.

**ಸಚಿವ** ಮಂತ್ರಿ, ಅಮಾತ್ಯ, ಪ್ರಧಾನಿ.

**ಸಚೂಟಿ** ನಂಬಿಕೆ.

**ಸಚೇತನ** ಚೇತನವುಳ್ಳ; ವಿಶೇಷ ಜ್ಞಾನವುಳ್ಳ; ಜೀವವಿರುವ; ಅರಿವಿರುವ.

**ಸಚೇಲಸ್ನಾನ** ಬಟ್ಟೆಯೊಡನೆ ಮೀಯುವುದು.

**ಸಚ್ಚರಿತ** ಒಳ್ಳೆಯ ನಡತೆಯ; ಶೀಲವಂತ, ಗುಣಶಾಲಿ.

**ಸಚ್ಚಿದಾನಂದ** ಪರಮಾತ್ಮನ ಗುಣ. ಇರುವಿಕೆ, ಆನಂದ, ಜ್ಞಾನ ಈ ಮೂರು ಸೇರಿದ, ಪರಮಾತ್ಮ.

**ಸಜಲ** ನೀರುಳ್ಳ, ತೇವವುಳ್ಳ.

**ಸಜಾ** ಸಜೆ, ಶಿಕ್ಷೆ, ಸೆರೆಮನೆಯ ವಾಸ.

**ಸಜಾತಿ** ಸಮವಾದ ಜಾತಿ, ಒಂದೇ ಕುಲ.

**ಸಜಾತೀಯ** ಒಂದೇ ವರ್ಗಕ್ಕೆ ಸೇರುವ.

**ಸಜೀವ** ಜೀವವುಳ್ಳ.

**ಸಜು** ಜತೆ, ಸಹ.

**ಸಜ್ಜನ** ಸಂಭಾವಿತ, ಒಳ್ಳೆಯವ.

**ಸಜ್ಜನಿಕೆ** ಒಳ್ಳೆತನ, ಮರ್ಯಾದೆಯ ರೀತಿ.

**ಸಜ್ಜರಸ** ರಾಳ.

**ಸಜ್ಜಿಕೆ** ಸಜ್ಜಾದ ಉಡುಗೆಯುಳ್ಳವಳು; ಲಿಂಗ ಇರಿಸುವ ಪೆಟ್ಟಗೆ, ಸೆಜ್ಜೆ.

**ಸಜ್ಜಿಗೆ** ಗೋಧಿ ರವೆ.

**ಸಜ್ಜಿತ** ಸಿದ್ಧವಾದ.

**ಸಜ್ಜು** (ದ್ಭ) ಸಜ್ಯ (ಸಂ), ಸಿದ್ಧವಾಗಿರುವಿಕೆ.

—**ಗೆಯ್** ಅನುಗೊಳಿಸು, ಸಿದ್ಧಮಾಡು.

**ಸಜ್ಜೆ** (ದ್ಭ) ಒಂದು ಧಾನ್ಯ; ಶಯ್ಯಾ (ಸಂ), ಹಾಸಿಗೆ, ಸಜ್ಜಿಕೆ.

**ಸಜ್ಯ** ಸಿದ್ಧವಾಗಿರುವಿಕೆ.

**ಸಟ** ಜಡೆ; ಬೀಳಲು; ವಕ್ರತೆ; ಹೆಮ್ಮೆ.

**ಸಟಿ** ಶಠೆ; ಹಟಮಾರಿ; ಸಟೆಗಾರ್ತಿ, ಸುಳ್ಳುಗಾರ್ತೆ.

**ಸಟೆ** ಸುಳ್ಳು, ಅಸತ್ಯ; ವಂಚನೆ.

**ಸಟ್ಟುಗ** (ಸಟುಕ), ಸೌಟು, ಹುಟ್ಟು, ಚಮಚ.

**ಸಡಕ** (ಸಡಕು), ಒಂದು ಆಭರಣ, ತೊಡಿಗೆ.

**ಸಡಗರ** ಸಂಭ್ರಮ; ಸೊಗಸು; ಆತುರ; ಉತ್ಸಾಹ, ಹುರುಪು; ಬೆಡಗು.

**ಸಡಫಡ** ತಿರಸ್ಕಾರದ ಮಾತು; ಶಹಭಾಸ್.

**ಸಡಿಲ್** (ಸಡಿಲು) (ದ್ಭ), ಶಿಥಿಲ (ಸಂ), ಬಿಗುವಿಲ್ಲದುದು; ಡೀಲು.

—**ಇಸು** ಸಡಲಿಸು, ಶಿಥಿಲಮಾಡು, ಡೀಲು ಬಿಡು.

**ಸಡ್ಡಕ** (ಸುಡ್ಡುಗ), ಹೆಂಡತಿಯ ಸೋದರಿಯ ಗಂಡ.

**ಸಡ್ಡುಹೊಡೆ** ಭುಜತಟ್ಟು.

**ಸಡ್ಡೆ** ಶ್ರದ್ಧೆ; ವಿಶ್ವಾಸ; ಗೌರವ.

**ಸಣಬು** (ಸಣ), ಒಂದು ಬಗೆ ನಾರಿನ ಗಿಡ; ಹುರಿ

ಸಣೆ ಸೆಟೆ, ಸಿಡುಕುಗೊಳ್ಳು; ಬಟ್ಟೆ ಸೆಳೆ, ಒಗೆ.
ಸಣ್ಣ ಚಿಕ್ಕ, ಪುಟ್ಟ; ಕಿರಿಯ, ಸೂಕ್ಷ್ಮ.
—ಗೆ ಸಣ್ಣನ, ತೆಳ್ಳಗಿನ; ಸಪುರವಾದ; ಚಿಕ್ಕದಾದ.
—ಇಸು ಚಿಕ್ಕದುಮಾಡು; ಸಪುರಮಾಡು.
ಸತ್ ಸತ್ಯ; ಇರುವ; ಒಳ್ಳೆಯ; ಧೀರ; ಪ್ರಶಸ್ತ; ಜ್ಞಾನ; ಪೂಜೆ.
ಸತತ ಯಾವಾಗಲೂ, ಸದಾ.
ಸತಿ ಹೆಂಗುಸು; ಹೆಂಡತಿ; ಸಾಧ್ವಿ, ನಿಷ್ಠಾವಂತ ಹೆಂಗುಸು.
— ಹೋಗು ಪತಿಯ ಚಿತೆಯನ್ನೇರು.
ಸತು (ಸತುವು), ಒಂದು ಲೋಹ; ಸತ್.
ಸತ್ಕಥೆ ಒಳ್ಳೆಯ ಕಥೆ; ಸದ್ಗುಣ ಬೋಧಿಸುವ ಕಥೆ.
ಸತ್ಕರಿಸು ಉಪಚರಿಸು, ಮನ್ನಣೆಮಾಡು; ಗೌರವಿಸು.
ಸತ್ಕರ್ಮ ಪುಣ್ಯಕರ್ಮ, ಒಳ್ಳೆಯ ಕೆಲಸ.
ಸತ್ಕಾರ ಆದರ, ಉಪಚಾರ; ಪೂಜೆ; ಮನ್ನಣೆ.
— ಇಸು (ಸತ್ಕರಿಸು), ಉಪಚರಿಸು.
ಸತ್ಕೀರ್ತಿ ಒಳ್ಳೆಯ ಕೀರ್ತಿ, ಯಶಸ್ಸು.
ಸತ್ಕುಲ ಒಳ್ಳೆಯ ಕುಲ, ಉತ್ತಮ ವಂಶ.
ಸತ್ಕೃತಿ (ಸತ್ಕ್ರಿಯೆ), ಒಳ್ಳೆಯ ಕೆಲಸ; ನ್ಯಾಯವಾದ ವರ್ತನೆ; ಉಪಕಾರ; ಉಪಚಾರ; ಉತ್ತಮ ಕ್ರಿಯೆ.
ಸತ್ತ (ದ್ಭ) ಸಪ್ತ (ಸಂ), ಗತಿಸಿದ.
ಸತ್ತಮ ಬಹು ಒಳ್ಳೆಯ; ಅತ್ಯುತ್ತಮ.
ಸತ್ತಿ ಸತ್ತೆ, ಇರುವಿಕೆ; ಅಧಿಕಾರ; ಅಧಿಕಾರದಲ್ಲಿರುವಿಕೆ.
ಸತ್ತಿಗೆ (ದ್ಭ) ಛತ್ರಿಕಾ (ಸಂ), ಕೊಡೆ, ಶ್ವೇತ ಛತ್ರ, ಚತ್ತುರಿಗೆ.
ಸತ್ತುಗ (ದ್ಭ) ಸತ್ಪಕ (ಸಂ); ಹುರಿದ ಹಿಟ್ಟು.
ಸತ್ತೆ (ಸತ್ತಿ, ಸತ್ತಾ); ಅಧಿಕಾರ; ಪ್ರಭುತ್ವ.
ಸತ್ಯ ಸುಳ್ಳಲ್ಲದ್ದು; ಋಜುವಾದುದು; ಇರುವಂಥದು; ಶಪಥ; ಸಿದ್ಧಾಂತ; ಅಶ್ವತ್ಥ; ಬ್ರಹ್ಮಲೋಕ.
— ತೆ ನಿಶ್ಚಯ; ಋಜುತ್ವ.
— ವಂತ ಸತ್ಯ ಬಿಡದವ, ನಿಜಗಾರ.
ಸತ್ಯಭಾಮೆ ಕೃಷ್ಣನ ಹೆಂಡತಿ; ಸತ್ರಾಜಿತ ದೊರೆಯ ಮಗಳು.
ಸತ್ಯವ್ರತ ಏಳನೆಯ ಮನು. ಈತನೇ ತ್ರಿಶಂಕು ಎಂಬ ಹೆಸರಿನವನು. ಹರಿಶ್ಚಂದ್ರನ ತಂದೆ. ಈತನು ಒಂದು ಸಮಯದಲ್ಲಿ ವಿಶ್ವಾಮಿತ್ರನ ಕುಟುಂಬದವರಿಗೆ ಸಹಾಯ ಮಾಡಿದುದಕ್ಕಾಗಿ ಆತನನ್ನು ವಿಶ್ವಾಮಿತ್ರನು ಸ್ವರ್ಗಕ್ಕೆ ಏರಿಸಿದನು.
ಸತ್ಯಂಕಾರ ಸಂಚಕಾರ (ದ್ಭ), ಅಗಾವು.
ಸತ್ವ ಸತ್ ಎಂಬ ಹೆಸರಿಗೆ ಕಾರಣವಾದ ಗುಣ; ಜಂತು, ಜೀವ; ಬಲ, ಸ್ವಭಾವ; ಪ್ರಾಣ; ಸಾರ; ಉದ್ಯಮ; ಆತ್ಮ; ಚಿತ್ತ; ಆಯುಸ್ಸು; ಮುಗಿಲು; ಪಾರ್ವತಿ; ಕುದುರೆ
ಸತ್ಪಥ ಒಳ್ಳೆಯ ದಾರಿ.
ಸತ್ಪಾತ್ರ ಯೋಗ್ಯ ವ್ಯಕ್ತಿ; ದಾನಕ್ಕೆ ತಕ್ಕವ.
ಸತ್ಪುರುಷ ಒಳ್ಳೆಯ ಮನುಷ್ಯ, ಸಜ್ಜನ, ಸಂಭಾವಿತ; ಅನ್ನಛತ್ರ.
ಸತ್ಫಲ ಒಳ್ಳೆಯ ಫಲ.
ಸತ್ರ ಸ್ಥಾನ, ಯಜ್ಞ; ಹೊದ್ದಿಕೆ; ಅರಣ್ಯ; ಕಪಟ; ಧನ; ಮನೆ; ಸರೋವರ; ಛತ್ರ.
— ಶಾಲೆ ದಾನ; ಅನ್ನದಾನ ಮಾಡುವ ಮನೆ; ಛತ್ರ.
ಸತ್ರಾಣಿ ಶಕ್ತ, ಬಲಶಾಲಿ.
ಸತ್ಸಂಗ ಸಜ್ಜನರ ಸಹವಾಸ; ಒಳ್ಳೆಯವರ ಸ್ನೇಹ.
ಸದ್ (ಸತ್).
ಸದನ ಮನೆ, ನಿವಾಸ; ದಣಿವು; ಮುಳುಗುವಿಕೆ
ಸದಮಲ ಶುದ್ಧ, ನಿರ್ಮಲ, ಪವಿತ್ರ.
ಸದಯ ದಯೆಯುಳ್ಳವ, ದಯಾಳು, ಕರುಣಿ.

ಸದರ್ ಮುಖ್ಯ; ಮುಖ್ಯ ನ್ಯಾಯಸ್ಥಾನ; ದಿವಾನಖಾನೆ; ಮೇಲುಗಟ್ಟು.
ಸದರ ಸಸಾರ, ಅನಾದರ, ಸಲಿಗೆ; ಪರಿಚಿತ.
ಸದರಿ ಮೊದಲು ಹೇಳಿದ.
ಸದರ್ಥ ಒಳ್ಳೆಯ ತಾತ್ಪರ್ಯ.
ಸದಸತ್ ಇರುವುದು ಇಲ್ಲದಿರುವುದು; ನಿಜ ಮತ್ತು ಸುಳ್ಳು; ಒಳಿತು ಕೆಟ್ಟುದು.
ಸದಸ್ಯ ಸಭಿಕ, ಸಭೆಯಲ್ಲಿ ಕುಳಿತಿರುವವ; ಯಾಗದಲ್ಲಿ ಸೇರುವವ, ಸಭಾಸದ.
ಸದಳ ಬೇಳೆಯಾಗುವ ಕಾಳು, ದಳವುಳ್ಳ.
ಸದಾ ಯಾವಾಗಲೂ, ನಿತ್ಯ.
ಸದಾಗತಿ ಯಾವಾಗಲೂ ಚಲಿಸುವುದು, ವಾಯು.
ಸದಾಚಾರ ಒಳ್ಳೆಯ ನಡತೆ, ಸತ್‌ಶೀಲ.
ಸದಾತನ ಯಾವಾಗಲೂ ಇರುವುದು, ನಿತ್ಯ; ವಿಷ್ಣು.
ಸದಾನಂದ ಯಾವಾಗಲೂ ಸಂತೋಷ; ಸದಾ ಆನಂದದಲ್ಲಿ ಇರುವಿಕೆ.
ಸದಾರ ಹೆಂಡತಿಯಿಂದ ಕೂಡಿದವ; ಶಕ್ತ, ಬಲಶಾಲಿ.
ಸದಾವರ ಭಿಕ್ಷುಕರಿಗೆ ಸದಾ ಅನ್ನನೀಡುವವ, ದಾಸೋಗ ಇಟ್ಟವ.
ಸದಾಶಿವ ಶಂಕರ, ಮಹಾದೇವ.
ಸದೃಶ ಸಮಾನ, ಹೋಲುವ;ತಕ್ಕ, ಯೋಗ್ಯ.
ಸದೆ ಪುಡಿಮಾಡು; ಜಜ್ಜು; ಕೊಳೆ, ಕಸ, ಬೇಡದ ಕಸ.
— ಬಡಿ ನಾಶಮಾಡು, ಪುಡಿಮಾಡು.
ಸದ್ಗತಿ ಒಳ್ಳೆಯ ಗತಿ, ಒಳ್ಳಿತು.
ಸದ್ಗುಣ ಒಳ್ಳೆಯ ಶೀಲ, ಯೋಗ್ಯ ನಡತೆ.
ಸದ್ದು (ದ್ಭ) ಶಬ್ದ (ಸಂ), ಧ್ವನಿ, ಗದ್ದಲ, ಉಲಿವು.
ಸದ್ಧರ್ಮ ಒಳ್ಳೆಯ ಧರ್ಮ; ಯೋಗ್ಯ ಆಚಾರ; ನ್ಯಾಯ ನಿಷ್ಠೆಗಳಿಂದಿರುವಿಕೆ.
ಸದ್ಮ ಮನೆ, ನಿವಾಸ; ತಾಣ, ಠಾವು; ಗುಡಿ, ದೇವಾಲಯ.
ಸದ್ಯ ಈಗ, ತತ್ಕಾಲ, ತುರ್ತ.
ಸದ್ಯೋಜಾತ ಈಗ ಹುಟ್ಟಿದ; ಶಿವ; ನವನೀತ.
ಸನಕ ಬ್ರಹ್ಮನ ಒಬ್ಬ ಮಗ.
ಸನತ್ಕುಮಾರ ಬ್ರಹ್ಮನ ಒಬ್ಬ ಮಗ, ಮಾನವ ಕುಲದ ಮೂಲ ಪುರುಷ.
ಸನದು (ಸನ್ನದ್ದು),ರಾಯಸ; ಅಧಿಕಾರ ಪತ್ರ, ಪಟ್ಟಿ.
ಸನಾತನ ಚಿರಕಾಲ ಇರುವ; ಶಾಶ್ವತ; ಪ್ರಾಚೀನ; ವಿಷ್ಣು; ಹಿಂದೂ ಧರ್ಮಕ್ಕೆ ಇರುವ ಹೆಸರು.
ಸನಾದಿ (ಸನಾಯಿ), ಒಂದು ವಾದ್ಯ, ಬಜಂತ್ರಿ.
ಸನಿಹ (ಸನಿಯ), ಸಮೀಪ, ಹತ್ತಿರ.
ಸನ್ನ (ಸಣ್ಣ) ಬಲಹೀನವಾದ; ಕೃಶವಾದ; ಕುಳ್ಳಾದ.
ಸನ್ನಣ (ದ್ಭ) ಸನ್ನಾಹ (ಸಂ), ಸಿದ್ಧತೆ.
ಸನ್ನದ್ಧ ಸಿದ್ಧವಾದ, ಸಿದ್ಧ; ಬಿಗಿದ.
ಸನ್ನಾಯ ಸಮೂಹ; ಬಹಳ; ಸೇವೆ.
ಸನ್ನಾಹ (ಸನ್ನಾಯ), ಸಿದ್ಧತೆ, ಸರಿಯಾಗಿ ಕಟ್ಟುಡುವುದು; ಕಾಳಗಕ್ಕೆ ಸಿದ್ಧವಾದ ಸೇನೆ.
ಸನ್ನಿ ತಂಪು; ವಿಷಮಜ್ವರ; ವಾಂತಿಭೇದಿ.
ಸನ್ನಿಧ ಸಮೀಪಗತ, ಸನ್ನಿಹಿತ, ಸಮೀಪ.
ಸನ್ನಿಧಾನ ಮುಂದೆ ಇರಿಸುವಿಕೆ; ಒಪ್ಪಿಸುವಿಕೆ; ಒಳ್ಳೆಯ ಆಶ್ರಯ; ಸಾಮೀಪ್ಯ; ದೊಡ್ಡವರ ಎದುರು, ಸನ್ನಿಧಿ.
ಸನ್ನಿಪಾತ ಸೇರಿಕೆ; ಸಮೂಹ; ಒಂದು ಬೇನೆ, ಸನ್ನಿ, ಮಾರಿಕಾ.
ಸನ್ನಿಭ ಸಮಾನ, ಹೋಲುವ.
ಸನ್ನಿವೇಶ ಹೊಂದಿಕೆ, ಹೊಂದುವ ಘಟನೆ; ಕೂಟ, ಮೇಳ; ಪ್ರಸಂಗ; ಪ್ರವೇಶ; ರಚನೆ. ಸರಹದ್ದು.

**ಸನ್ನಿಹಿತ** ಸಮೀಪವಿರುವ; ಕೂಡಿರುವ; ಬಂದಿರುವ.
**ಸನ್ನುತ** ಹೊಗಳಲ್ಪಟ್ಟ, ಶ್ಲಾಘ್ಯವಾದ.
**ಸನ್ನುತಾಂಗಿ** ಹೊಗಳಿಕೆಗೆ ತಕ್ಕ ರೂಪವುಳ್ಳವಳು; ಚೆಲುವೆ.
**ಸನ್ನೆ** (ದ್ಭ) ಸಂಜ್ಞಾ (ಸಂ), ಸನ್ನೆಕೋಲು; ತುಸು ಬಲದಿಂದ ಹೆಚ್ಚಿನ ಕೆಲಸ ಮಾಡುವ ಯಂತ್ರಸಾಧನ; ಸಂಕೇತ; ಹಾವಗಳಿಂದ ತಿಳಿಸುವಿಕೆ.
**ಸನ್ಮತ** (ಸನುಮತ) ಒಪ್ಪಿಗೆ; ಒಪ್ಪಿದ; ತಕ್ಕ, ಉಚಿತ; ಒಳ್ಳೆಯ ಅಭಿಪ್ರಾಯ.
**ಸನ್ಮತಿ** ಒಳ್ಳೆಯ ತಿಳಿವಳಿಕೆ.
**ಸನ್ಮಾನ** ಪುರಸ್ಕಾರ, ಮನ್ನಣೆ; ಗೌರವ, ಆದರ.
—ಇಸು ಮರ್ಯಾದಿಸು, ಮನ್ನಣೆಕೊಡು
**ಸನ್ಮಾರ್ಗ** ಒಳ್ಳೆಯ ನಡತೆ, ಯೋಗ್ಯ ದಾರಿ.
**ಸನ್ಮುದ** ಹರ್ಷ, ಆನಂದ, ಮೋದ.
**ಸನ್ಯಸ್ತ** ಬಿಟ್ಟ; ಅರ್ಪಿಸಿದ; ಎಸೆದ, ತ್ಯಜಿಸಿದ.
**ಸನ್ಯಾಸ** (ಸಂನ್ಯಾಸ), ಕಾಮ್ಯಕರ್ಮವನ್ನು ಬಿಡುವುದು; ನಾಲ್ಕನೆಯ ಆಶ್ರಮ; ಒಂದು ವ್ರತ; ವೈರಾಗ್ಯ.
**ಸನ್ಯಾಸಿ** (ಸಂನ್ಯಾಸಿ), ಲೌಕಿಕ ಸಂಪತ್ತಿನ ಆಸೆ ತೊರೆದವ; ವ್ರತಿ, ಯತಿ, ವಿರಕ್ತ.
**ಸಪಕ್ಷ** ಸಂಬಂಧಿ; ಸಮಾನಪಕ್ಷ; ಸಹಾಯಕ.
**ಸಪತ್ನ** ಶತ್ರು, ಹಗೆ; ದಾಯಾದಿ.
**ಸಪತ್ನಿ** ಸವತಿ (ದ್ಭ).
**ಸಪದಿ** ತತ್ಕ್ಷಣ, ಅದೇ ಸಮಯ.
**ಸಪಾಟಿ** ಚಪ್ಪಟೆ; ಸಮಾನ.
**ಸಪಾರ್ಯೆ** ಪೂಜೆ, ಆದರ.
**ಸಪಾಯಿ** ನಯ, ಚೊಕ್ಕಟ; ಸ್ವಚ್ಛ; ಬಿಳುಪು.
**ಸಪಿಂಡ** ಸಮಾನ ಪಿಂಡವುಳ್ಳವ; ಜ್ಞಾತಿ, ಬಂಧು, ಒಂದೇ ಕುಲದವ.
**ಸಪಿಂಡೀಕರಣ** ಹಿಂದೆ ಮೃತರಾದವರ ಪಿಂಡದೊಡನೆ ಸೇರಿಸುವ ಒಂದು ಶ್ರಾದ್ಧ.
**ಸಪುರ** ತೆಳ್ಳಗಿನ, ತೆಳುವಿನ, ತೋರವಿಲ್ಲದ; ಬಡಕಲು.
**ಸಪ್ತ** ಏಳು.
—ಮಿ ಪಕ್ಷದ ಏಳನೆಯ ದಿನ, ಏಳನೆಯ.
**ಸಪ್ತಕುಲಾಚಲ** ಮಹೇಂದ್ರ, ಮಲಯ, ಸಹ್ಯ, ಶಕ್ತಿಮತ್, ಋಕ್ಷ, ವಿಂಧ್ಯ, ಪಾರಿಯತ್ರ—ಎಂಬ ಹೆಸರಾದ ಏಳು ಬೆಟ್ಟಗಳು.
**ಸಪ್ತಧಾತು** ದೇಹದ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜ, ಅಸ್ಥಿ, ಶುಕ್ಲ—ಈ ಏಳು ಸತ್ವಗಳು.
**ಸಪ್ತಪದಿ** ವಿವಾಹಕಾಲದಲ್ಲಿ ವಧೂವರರು ಜತೆಯಲ್ಲಿ ಇರಿಸುವ ಏಳು ಹಜ್ಜೆಗಳು.
**ಸಪ್ತಪಾತಾಳ** ಅತಳ, ವಿತಳ, ಸುತಳ, ತಲಾತಲ, ರಸಾತಲ, ಮಹಾತಲ, ಪಾತಾಳ ಇವು ಏಳು.
**ಸಪ್ತರ್ಷಿ** ಏಳು ಮಂದಿ ಪ್ರಾಚೀನರಾದ ಋಷಿಗಳು—ಮರೀಚಿ, ಆಂಗಿರ, ಅತ್ರಿ, ಪುಲಸ್ತ್ಯ, ಪುಲಹ, ಕೃತು, ವಸಿಷ್ಠ.
**ಸಪ್ತವ್ಯಸನ** ಏಳು ದುಶ್ಚಾಳಿಗಳು—ಬೇಟೆ, ಮದ್ಯಪಾನ, ದ್ಯೂತ, ಕಠಿಣ ಮಾತಾಡುವುದು, ಕಠಿಣ ಶಿಕ್ಷಿಸುವುದು, ಕಠಿಣ ದಂಡ, ವ್ಯಭಿಚಾರ.
**ಸಪ್ತಶತಿ** ದೇವೀಮಹಾತ್ಮೆ ಎಂಬ 700 ಶ್ಲೋಕಗಳ ಒಂದು ಸ್ತೋತ್ರ.
**ಸಪ್ತಸ್ವರ** ಸಂಗೀತದಲ್ಲಿ ಧ್ವನಿಯ ಏಳು ಮುಖ್ಯ ಅಂತಸ್ತುಗಳು, ಸರಿಗಮಪಧನಿ–ಸ್ವರಗಳು.
**ಸಪ್ತಾರ್ಚಿ** ಅಗ್ನಿ; ಧೂಮಕೇತು.
**ಸಪ್ತಾಶ್ವ** ಸಪ್ತಸಪ್ತಿ, ಏಳು ಕುದುರೆಗಳ ರಥವುಳ್ಳವ, ಸೂರ್ಯ.
**ಸಪ್ಪನೆ** (ಸಪ್ಪಗೆ), ಮಂದ; ಚಪ್ಪಟೆ; ರುಚಿಯಿಲ್ಲದುದು; ಶಾಂತ.

ಸಪ್ಪುಳು (ಸಪ್ಪುಳು), ದನಿ, ಶಬ್ದ, ಉಲಿ.
ಸಪ್ಪೆ (ಸಪ್ಪನೆ), ಚಪ್ಪಟೆ; ನೀರಸ; ಸವಿಯಿಲ್ಲದಿರುವಿಕೆ; ನಿರುತ್ಸಾಹಿತ ಸ್ಥಿತಿ.
ಸಫಲ ಯಶಸ್ಸು ದೊರೆಯುವಿಕೆ.
ಸಫೇದು ಬಿಳಿದು; ಚೊಕ್ಕ; ನಯ.
ಸಬಕಾರ ಸಾಬೂನು, ಸಾಬಾಣ, ಸೋಪ್.
ಸಬಬು ಕಾರಣ, ಹೇತು, ನೆವ, ಉದ್ದೇಶ.
ಸಬರ ಎತ್ತುಗಳ ಮೇಲೆ ಹಾಕುವ ತಡಿ.
ಸಬಳ (ಸಬಲ), ದೊಣ್ಣೆ, ಕೊಂತ; ಈಟಿ.
ಸಬಳಿಗ ಕುಂತ ಇಲ್ಲವೆ ದೊಣ್ಣೆಯ ಆಯುಧವಾಗಿ ಉಳ್ಳವ.
ಸಬುದ (ದ್ಭ) ಶಬ್ದ (ಸಂ), ಧ್ವನಿ.
ಸಬ್ಬ (ದ್ಭ) ಸರ್ವ (ಸಂ), ಎಲ್ಲ.
ಸಬ್ಬಕ್ಕಿ ಸಾಗು ಅಕ್ಕಿ, ಸಾಬೂ ಅಕ್ಕಿ.
ಸಬ್ಬಲಗ್ಗೆ ಸಕಲ ವಾದ್ಯಗಳ ಮೇಳ.
ಸಬ್ಬವ ಹಾಸ್ಯ, ಅಣಕ; ಸಭೆ, ಕೂಟ.
—ಕಾರ ಹಾಸ್ಯಗಾರ, ವಿದೂಷಕ.
ಸಬ್ಬಾಣಿ (ದ್ಭ) ಶರ್ವಾಣಿ (ಸಂ), ಶಿವೆ.
ಸಬ್ಬಿಗೆ ಸಜ್ಜೆ; ಮರದ ಮೃದುವಾದ ಕೊಂಬೆ.
ಸಬ್ಬು ಸಾಬೂನು, ಸಾಬಾಣ, ಸಬಕಾರ.
ಸಭಾ (ಸಭೆ), ಕೂಟ, ಪಂಡಿತರ ಕೂಟ, ಆಸ್ಥಾನ.
—ಕಂಪ ಸಭೆಯ ಮುಂದೆ ನಿಂತಾಗ ಬರುವ ನಡುಕ.
—ಜನ ಪಾತ್ರ; ಯೋಗ್ಯ; ಸಭೆಯ ಸದಸ್ಯ, ಸಭಾಸದ.
ಸಭಾಪರ್ವ ಮಹಾಭಾರತದ ಒಂದು ಖಂಡ.
ಸಭಿಕ ಸಭೆಯಲ್ಲಿ ಭಾಗಿಯಾಗುವವ; ಶ್ರೋತೃ; ಜೂಜಿನ ಮನೆ ಯಜಮಾನ.
ಸಭ್ಯ ಸಭೆಗೆ ಯೋಗ್ಯ, ಮರ್ಯಾದಸ್ಥ; ಸಂಸ್ಕೃತನಾದವ; ನಾಗರಿಕ.
—ತೆ ಸಭ್ಯತ್ವ, ನಾಗರಿಕತೆ; ಶೀಲವರಿತ ನಡತೆ, ಸಜ್ಜನಿಕೆ.
ಸಮ ಸರಿ; ಯೋಗ್ಯ; ಉಚಿತ; ಒಂದೇ ತರ.
ಸಮಕಾಲ ಒಂದೇ ವೇಳೆ, ಒಂದೇ ಸಮಯ, ಏಕಕಾಲ.
ಸಮಕ್ಷ (ಸಮಕ್ಷಮ), ಇದಿರಿಗೆ; ಕಣ್ಣಾರೆ, ಕಣ್ಣ ಮುಂದೆ.
ಸಮಗಾರ (ದ್ಭ) ಚರ್ಮಕಾರ (ಸಂ), ಮೆಟ್ಟು ಹೊಲಿಯುವವ, ಮಚ್ಚೆಗಾರ.
ಸಮಗ್ರ ಸಕಲ, ಎಲ್ಲಾ; ತುಂಬಿರುವ.
ಸಮಚತುರಸ್ರ ಚಚ್ಚೌಕ.
ಸಮಜಾಯಿಸು ವಿವರಿಸು, ವ್ಯಕ್ತಪಡಿಸು; ತಿಳಿಹೇಳು, ಸಮಾಧಾನಗೊಳಿಸು; ಒಪ್ಪಿಸು
ಸಮಜ್ಯ ಸಭೆ.
ಸಮತಳ ಮಟ್ಟವಾದ ನೆಲ, ಏರುತಗ್ಗಿಲ್ಲದ.
ಸಮತಳಿಸು ಪ್ರಾಪ್ತಿಸು, ಸಿದ್ಧಮಾಡು.
ಸಮತೆ ಸಮಾನತೆ; ತೋಲ; ಸಮಾಧಾನ, ಶಾಂತಿ.
—ಕೆಡು ಧೈರ್ಯಗೆಡು; ತೋಲಗೆಡು; ಶಾಂತಿಕೆಡು, ಬಗೆಗೆಡು.
ಸಮದಂಡಿ ಸಮಾನತೆ, ಸಮತೂಕ; ಸಮಾನಸ್ಕ, ಸಾಟಿ.
ಸಮನಿಸು ಉಂಟಾಗು, ಆಗು; ಒದಗು; ಪ್ರಾಪ್ತಿಸು.
ಸಮನ್ವಯ ವಾಕ್ಯದ ಪದಗಳನ್ನು ಅರ್ಥಕ್ಕೆ ಸಮನಾಗಿ ಇರಿಸುವುದು, ಹೊಂದಿಸುವುದು
ಸಮನ್ವಿತ ಸೇರಿದ, ಒಳಗೊಂಡ.
ಸಮಪಾಳಿ ಸರಿಯಾದ ಕ್ರಮ, ಜೋಡಿ.
ಸಮಭಾವ ನಿಷ್ಪಕ್ಷಪಾತ ದೃಷ್ಟಿ, ಸಮ ದೃಷ್ಟಿ; ಒಂದೇ ಗುಣ.
ಸಮಯ ಕಾಲ; ಶಪಥ; ಆಚಾರ; ಸಿದ್ಧಾಂತ; ಅಂಗೀಕಾರ; ಸಂಕೇತ; ರೀತಿ; ಧರ್ಮ; ಮತ.
—ಅನುಸಾರ ಕಾಲಕ್ಕೆ ತಕ್ಕಂತೆ.
—ಉಚಿತ ಸಂದರ್ಭಕ್ಕೆ ತಕ್ಕ.
ಸಮುರ್ (ಸಮರು), ಸಂತಯಿಸು; ನೆಟ್ಟಗೆ

ಮಾಡು; ಚೊಕ್ಕ ಗೊಳಿಸು; ಸವರಿ ಸರಿ ಮಾಡು, ಸಮನಮಾಡು; ಕತ್ತರಿಸು.

**ಸಮರ** ಯುದ್ಧ, ಕಾಳಗ, ಕಾದಾಟ.

**ಸಮರಸ** ಯೋಗ್ಯ ಭಾವನೆ; ವಿವಿಧ ರಸಗಳೊಳಗಿನ ಮೇಳ; ಒಂದೇ ಸ್ಥಿತಿಗೆ ಬಂದು ಬಿಡುವುದು.

**ಸಮರಾತ್ರಿ** ನಡು ಇರುಳು.

**ಸಮರಾಂಗಣ** ಯುದ್ಧಭೂಮಿ.

**ಸಮರು** ಸವರು,ಚೊಕ್ಕಮಾಡು; ಅಲಂಕಾರ.

**ಸಮರ್ಥ** ಕೋವಿದ, ಚತುರ; ಬಲಶಾಲಿ; ಬಲ್ಲಿದ; ಪೂರ್ಣ ಅರ್ಥ ಕೊಡುವ; ತಾಳ ಮೇಳ ಸಮವಾಗಿ ಉಳ್ಳ.

—ಇಸು ಪುಷ್ಟಿಗೊಳಿಸು,ಅನುಮೋದಿಸು.

—ನ ತಯಾರಿಕೆ; ನಿರ್ಧಾರ; ನಿರ್ಣಯ; ತೀರ್ಮಾನ; ಬೆಂಬಲ ಕೊಡುವಿಕೆ, ಪುಷ್ಟಿ ಕೊಡುವಿಕೆ.

**ಸಮರ್ಪಕ** ಯೋಗ್ಯ,ಯುಕ್ತ, ತಕ್ಕ; ಉಚಿತ.

**ಸಮರ್ಪಣ** ಅರ್ಪಣೆ, ಒಪ್ಪಿಸುವಿಕೆ, ಕಾಣಿಕೆ.

**ಸಮರ್ಪಿಸು** ಒಪ್ಪಿಸು; ಕೊಡು; ನಜರು ಕೊಡು, ನಿವೇದಿಸು.

**ಸಮವರ್ತಿ** ಶತ್ರುಮಿತ್ರರಲ್ಲಿ ಸಮನಾಗಿ ನಡೆಯುವವ; ಯಮ.

**ಸಮವಾಯಿ** ಒಟ್ಟಿಗೆ ಹೊಂದಿದ, ಜತೆಯಾದ.

**ಸಮವೇತ** ಸೇರಿದ, ಕೂಡಿದ.

**ಸಮಷ್ಟಿ** ಸಂಪೂರ್ಣ, ಪೂರ್ತಿಯಾಗಿ, ಒಟ್ಟು.

**ಸಮಸಪ್ತಕ** (ನೋಡು: ಸಂಶಪ್ತಕ).

**ಸಮಸ್ತ** ಎಲ್ಲ, ಸರ್ವ, ಸಕಲ.

**ಸಮಸ್ಯೆ** ಒಗಟು, ಒಗಟೆ; ಜಟಿಲ ಪ್ರಶ್ನೆ, ಮುಂಡಿಗೆ.

**ಸಮಸ್ಸರೆ** ಮುಂಜಾನೆ, ಹೊತ್ತಾರೆ.

**ಸಮಂಜಸ** ತಕ್ಕ, ಯೋಗ್ಯ,ಉಚಿತ; ಒಪ್ಪುವ.

**ಸಮಂತ** ಎಲ್ಲಾ.

**ಸಮಂತು** ಸರಿಯಾಗಿ, ಚೆನ್ನಾಗಿ.

**ಸಮಾಗಮ** ಸೇರಿಕೆ; ಭೆಟ್ಟಿ, ಮಿಲನ; ಭೋಗ, ರತಿ, ಕೂಟ; ಸಭೆ.

**ಸಮಾಚಾರ** ಸುದ್ದಿ, ವಾರ್ತೆ, ಒಸಗೆ; ಒಂದೇ ರೀತಿಯ ನಡೆ, ಚಲನೆ.

**ಸಮಾಜ** ಸಭೆ, ಕೂಟ, ಸಂಘ; ಜನ ವರ್ಗ.

**ಸಮಾಧಾನ** ಶಾಂತಿ, ತೃಪ್ತಿ; ಒಡಂಬಡಿಕೆ; ವ್ಯಥೆಗೆ ಕಾರಣವಿಲ್ಲದ ಸ್ಥಿತಿ; ತಾಳ್ಮೆ, ಸಹನೆ; ಶಾಂತಿ.

**ಸಮಾಧಿ** ಯೋಗದಲ್ಲಿ ಮೈಮರೆಯುವಿಕೆ; ಒಂದು ಕಾವ್ಯಗುಣ; ಸನ್ಯಾಸಿಗಳನ್ನು ಹೂತಲ್ಲಿ ಕಟ್ಟುವ ರಚನೆ, ಗೋರಿ; ಸಾವು.

—ಸ್ಥ ಯೋಗ ಪರವಶ; ಕಾಲಾಧೀನ ನಾದವ.

**ಸಮಾನ** (ಸಮಾ), ಸಮ, ಒಂದೇ ತೆರನ ಯೋಗ್ಯತೆಯ;. ಸಾಮಾನ್ಯ; ಎಲ್ಲರಿಗೂ ಒಂದೇ ತೆರನಾಗಿರುವ.

—ಕಾಲಿಕ (ಸಮಕಾಲಿಕ), ಒಂದೇ ಕಾಲದಲ್ಲಿ ವಾಸಿಸಿದವ, ಅದೇ ಕಾಲದವ.

—ತೆ ಸಮತೆ, ಸಮಾನಸ್ಥಿತಿ.

**ಸಮಾಪ್ತಿ** ಮುಗಿತ, ಬಿಳಿತ; ಕೊನೆಗಾಣುವಿಕೆ; ದಣಿದ ಸ್ಥಿತಿ.

**ಸಮಾಮ್ನಾಯ** ಪಠಣ; ನೊತ್ತ, ಬೇರೀಜು.

**ಸಮಾರಂಭ** ಪ್ರಾರಂಭ; ಉದ್ಯೋಗ, ಪ್ರಸಂಗ; ಉತ್ಸವ, ವಿಜೃಂಭಣೆ.

**ಸಮಾರಾಧನೆ** ಬ್ರಾಹ್ಮಣ ಸಂತರ್ಪಣೆ; ಪೂಜೆ.

**ಸಮಾವೇಶ** ಸೇರಿಕೆ, ಕೂಡಿಕೆ, ಒಂದುಗೂಡುವಿಕೆ.

**ಸಮಾಶ್ವಾಸ** ಸಮಾಧಾನ.

**ಸಮಾಸ** ಸೇರಿಕೆ, ಸಂಧಿ; ಪದಸಂಧಿ.

**ಸಮಾಸಾರಿತೆ** ಸಮೀಪಬಂದವಳು.

**ಸಮಾಹಾರ** ಕೂಟ, ಸೇರಿಕೆ; ಸಂಗ್ರಹ.

**ಸಮಾಹಿತ** ಸೇರಿದ, ಸಂಗ್ರಹಿಸಲ್ಪಟ್ಟ; ಪ್ರತಿಜ್ಞೆ ಮಾಡಿದ; ಉಂಟಾದ.

ಸಮಾಹೃತ ಕೂಡಿದ; ಅಂಗೀಕರಿಸಿದ; ಸಂಗ್ರಹ ಮಾಡಿದ.
ಸಮಿತ ಸೇರಿಕೆ, ಕೂಟ; ಕಾದಾಟ; ಸಮರ.
ಸಮಿತಿ ಸಮೂಹ; ಸಂಘ; ಸಭೆ; ಸಮತೆ; ಉತ್ಕೃಷ್ಟ.
ಸಮಿದೆ (ಸಮಿತ್ತು), ಸೌದೆ, ಕಟ್ಟಿಗೆ; ಅಶ್ವತ್ಥ ಪಾಲಾಶ ಮೊದಲಾದುವುಗಳ ಚೋಟುದ್ದದ ಕಡ್ಡಿ, ಅರಳಿ ಕಟ್ಟಿಗೆ.
ಸಮೀಚೀನ ತಕ್ಕ, ಯೋಗ್ಯ, ಉಚಿತ; ಹೊಂದುವ, ಒಪ್ಪುವ; ರುಚಿಕಟ್ಟು.
ಸಮೀಪ ಸನಿಯ, ಹತ್ತಿರ, ಪಕ್ಕ.
ಸಮೀರ (ಸಮೀರಣ), ವಾಯು, ಗಾಳಿ.
ಸಮೀಹಿತ ಅಪೇಕ್ಷೆ, ಬಯಕೆ, ಹಂಬಲ.
ಸಮುಖ ವಾಚಾಳಿ, ಬಕಾಳ, ಹರಟೆಮಲ್ಲ; ಅಂಡೇ ಕಡೆ ಮುಖವುಳ್ಳ; ಅನುಕೂಲ.
ಸಮುಚಿತ ಉಚಿತವಾದ, ಯೋಗ್ಯವಾದ.
ಸಮುಚ್ಚಯ ಸಂಚಯ; ರಾಶಿ, ಸಮೂಹ; ಜೋಡಣೆ, ಸೇರಿಕೆ.
ಸಮುತ್ಸಾರಿತ ಹೊರಡಿಸಲ್ಪಟ್ಟ.
ಸಮುದಾಯ (ಸಮುದಯ), ಸಮೂಹ; ಯುದ್ಧ; ಉದಯ; ಹುಟ್ಟು; ಲಗ್ನ.
ಸಮುದ್ರ ಕಡಲು,ಸಾಗರ; ಮುದ್ರೆಯೊತ್ತಿದ.
ಸಮುದ್ರಮಥನ ದೇವತೆಗಳೂ ಅಸುರರೂ ಸೇರಿ ಕ್ಷೀರಸಾಗರವನ್ನು ಒಂದು ಕಾಲದಲ್ಲಿ ಕಡೆದರೆಂದು ಕಥೆ. ಮಂದರ ಪರ್ವತವನ್ನು ಕಡೆಗೋಲಾಗಿಯೂ ವಾಸುಕಿಯನ್ನು ಹಗ್ಗವಾಗಿಯೂ ಬಳಸಿ–ಲಕ್ಷ್ಮೀ ಅಮೃತ ಮೊದಲಾದುವನ್ನು ಗಳಿಸಿದರೆಂದು ಪುರಾಣ.
ಸಮೂರು ಒಂದು ಬಗೆ ಜಿಂಕೆ.
ಸಮೂಲ ಬುಡ ಸಹಿತ, ಬೇರು ಸಹಿತ.
ಸಮೂಹ ರಾಶಿ, ಮೊತ್ತ; ಹಿಂಡು, ಗುಂಪು; ಸಂದಣಿ.
ಸಮೃದ್ಧ ತುಂಬ ಇರುವ, ಅಧಿಕ, ಹೆಚ್ಚು; ಸಂಪತ್ತು.
ಸಮೃದ್ಧಿ ತುಂಬಿದುದು; ಆಧಿಕ್ಯ; ಹೆಚ್ಚಳ; ಸುಖ; ಸುದೈವ.
ಸಮೆ (ಸವೆ), ಸಿದ್ಧಮಾಡು, ಮಾಡು, ನಿರ್ಮಿಸು; ನಶಿಸು; ಹಾನಿಗೊಳ್ಳು; ಕುಂದು, ತೇದು, ನಷ್ಟವಾಗು; ಸೊರಗು.
ಸಮೇತ ಕೂಡಿ, ಜತೆಸೇರಿ, ಒಂದಾಗಿ; ಸಮೀಪಿಸಿದ, ಸಮೀಪ ಬಂದ.
ಸಮ್ಮತ (ಸಮ್ಮತಿ), ಒಪ್ಪಿಗೆ, ಅನುಮತಿ; ಒಂದೇ ಅಭಿಪ್ರಾಯ; ಗೌರವ; ಅನುಜ್ಞೆ.
ಸಮ್ಮರ್ದ ತಿಕ್ಕಾಟ; ಕಾದಾಟ, ಸಂಗರ.
ಸಮ್ಮಾನ ಗೌರವ, ಉಪಚಾರ; ಮನ್ನಣೆ. —ಇಸು ಗೌರವಿಸು; ಉಪಚರಿಸು.
ಸಮ್ಮಾರ್ಜನೆ ಸಾರಣೆ, ಬಳಿಯುವುದು.
ಸಮ್ಮಿಶ್ರ ಸೇರಿದುದು, ಬೆರೆತುದು, ಮಿಶ್ರವಾದುದು.
ಸಮ್ಮುಖ ಮುಖದೆದುರು, ಇದಿರು ದಿಕ್ಕಿಗೆ.
ಸಮ್ಮುದ ಆನಂದ, ಸಂತೋಷ.
ಸಮ್ಮೇಳ (ಸಮ್ಮೇಲ), ಸಮ್ಮೇಲನ; ಜತೆ; ಜತೆಗೂಡಿಸುವುದು; ಕೂಟ; ಸೇರಿಕೆ, ಸಭೆ.
ಸಮ್ಮೋಹನ ಮೋಹಗೊಳಿಸುವ, ಮಂಕುಬಡಿಯುವ.
ಸಮ್ರಾಜ್ ಸಮ್ರಾಟ, ಚಕ್ರವರ್ತಿ, ಅರಸರ ಅರಸ.
ಸಮ್ಯಕ್ ಸುಂದರವಾದ; ಸೇರಿದ; ಸತ್ಯ; ಸಂಪೂರ್ಣ; ಒಳಿತಾಗಿ.
ಸಯ್ ನಿಲ್ಲು, ತಡೆ.
ಸಯುವಾದ ಕೂಡಿಕೊಂಡ, ಒಂದಾದ.
ಸಯಂಬರ (ದ್ಭ) ಸ್ವಯಂವರ (ಸಂ).
ಸಯ್ಗರೆ ಎಡೆಬಿಡದೆ ಸುರಿಸು.
ಸಯ್ಗೆ ಸಂಜ್ಞೆ, ಸನ್ನೆ.
ಸಯ್ಗೆಡೆ ಕೆಳಗೆ ಉರುಳು, ಅಡ್ಡಬೀಳು.

**ಸಯುತ್ತ** (ಸೈತು), ಸಮಾಧಾನ; ಚೆನ್ನಾಗಿ, ನೇರಾಗಿ, ನೆಟ್ಟಗೆ.

**ಸಯ್ದಿಗೆ** ಚೆಲುವಿಕೆ ತಾಳು, ಚೆಲುವುಗೊಳು.

**ಸಯುಪ್ಪ** (ಸೈಪು), ಪುಣ್ಯ, ನ್ಯಾಯ.

**ಸಯ್ಪರಿ** ನಡೆ, ಹೋಗು, ಮುಂದುವರಿ; ಓಡು.

**ಸಯ್ಬೆರಗು** ಅತಿ ಬೆರಗು, ಕಡು ವಿಸ್ಮಯ.

**ಸರ** (ದ್ಭ) ಸ್ವರ (ಸಂ), ಧ್ವನಿ; ಬಾಣ; ಸರಸ, ಹಾರ; ಶಿರ; ಮುಖ್ಯ, ಪ್ರಧಾನ; ಬೇಟೆ.

**ಸರಕಟಿಸು** ಗುಂಪಾಗು, ಒಟ್ಟಾಗು.

**ಸರಕಾರ** ದೇಶವನ್ನಾಳುವ ವ್ಯವಸ್ಥೆ, ಆಳುವ ಇಲಾಖೆಗಳು; ದೊಡ್ಡವರಿಗೆ ಗೌರವಿಸಿ ಅನ್ನುವ ಮಾತು.

**ಸರಕು** ಸಾಮಾನು, ದಾಗಿನು, ಮಾಲು; ಲಕ್ಷ್ಯ, ಗಣನೆ; ಜಾರಿಕೆ.

— **ಕಾಣು** ಲಕ್ಷ್ಯಮಾಡು; ಗಣನೆಗೆ ತರು.

**ಸರಕೂಟೆ** ಒಂದು ಹಕ್ಕಿ, ಶರಾರಿ, ಮರ ಕುಟಕನ ಹಕ್ಕಿ.

**ಸರಘು** ತುಂಬಿ, ಭ್ರಮರ, ಗುಂಗಿ ಹುಳ.

**ಸರಟ** ಹಲ್ಲಿ, ಓತಿಕೇತ, ಹೆಂಟೆಗೊದ್ದ.

**ಸರಣಿ** ಪಥ, ದಾರಿ; ಸಾಲು; ಸಂಚಾರದ ಬಗೆ.

— **ಕೆಡು** ಶೈಲಿ ಕೆಡು; ಹಾದಿತಪ್ಪು; ಕ್ರಮತಪ್ಪು.

**ಸರತಿ** (ಸರದಿ), ಬಾರಿ, ಸಾರಿ, ಸಲ; ಪಾಳಿ.

**ಸರದಾರ** ನಾಯಕ, ಮುಖಂಡ; ಶ್ರೀಮಂತ.

**ಸರದಿ** ಸಲ, ಬಾರಿ; ಶೀತ; ತಣಸು.

**ಸರಪಣಿ** (ಸರಪಳಿ), ಗುಣಿಸುಗಳನ್ನು ಕೂಡಿಸಿ ಮಾಡಿದ ಸರ; ಸರ, ಸಂಕಲೆ.

**ಸರಬರಾಯಿ** ಒಡವೆಗಳ ಪೂರೈಕೆ; ಊಟದ ಒಡವೆಗಳ ಪೂರೈಕೆ.

**ಸರಮುರಿಕೆ** ಸರಸಾಲಿಂಗನ, ಪ್ರಿಯವಾದ ಅಪ್ಪುಗೆ.

**ಸರಮೆ** ದೇವತಾಸಂಬಂಧವಾದ ಒಂದು ನಾಯಿ; ಹೆಣ್ಣು ನಾಯಿ; ವಿಭೀಷಣನ ಹೆಂಡತಿ.

**ಸರಲ್** (ಸರಳು), ಬಾಣ; ಸಲಿಕೆ; ಸರಿಕೆ; ನಿಷ್ಕಪಟವೃತ್ತಿ.

**ಸರಲ**(ಸರಳ), ನೆಟ್ಟಗಾದ; ವಂಚಕತನವಿಲ್ಲದ, ಭೋಳೆ; ಚಮರೀಮೃಗ, ತಿಬೇತಿನ ಯಾಕ್ ಮೃಗ.

**ಸರಲೆ** ಸರಳ ಶೀಲವುಳ್ಳವಳು, ನಿಷ್ಕಪಟ.

**ಸರವಿ** ಹಗ್ಗ; ಹುಲ್ಲುಹಗ್ಗ; ಬೇಟೆ.

**ಸರವೆ** ಕಡಲು, ಸಮುದ್ರ; ಶಾಖೆ.

**ಸರಸ** ವಿನೋದ, ಚೇಷ್ಟೆ, ಹಾಸ್ಯ; ಚೆಲುವು; ಸಾರವತ್ತು.

— **ಗಾತಿ** ವಿನೋದಿನಿ; ಶೃಂಗಾರಪ್ರಿಯೆ, ಚೆಲುವೆ; ಕ್ರೀಡಾಪ್ರಿಯೆ.

**ಸರಸತಿ** (ದ್ಭ) ಸರಸ್ವತಿ (ಸಂ), ಶಾರದೆ.

**ಸರಸಿ** ಕೊಳ, ಸರೋವರ, ಹೆಗ್ಗೆರೆ; ಸರಸವತಿ, ವಿನೋದಿನಿ.

— **ಜ** ತಾವರೆ.

**ಸರಸ್ವತಿ** ಜಲದೇವತೆ, ಶಾರದೆ, ವಾಣಿ; ವೈದಿಕ ಯುಗದಲ್ಲಿ ಸರಸ್ವತಿಯು ನದಿ ಎನಿಸಿದ್ದಳು. ಅನಂತರ ಬ್ರಾಹ್ಮಣಗಳಲ್ಲಿ ಅವಳು ವಾಗ್ದೇವತೆ ಎನಿಸುತ್ತಾಳೆ. ಮುಂದೆ ಬ್ರಹ್ಮನ ಮಡದಿ ಎಂದೂ ಅನಿಸುವಳು.

**ಸರಹದ್ದು** ಮೇರೆ, ಗಡಿ; ಸೀಮೆ; ಸೀಮಾಂತರ.

**ಸರಳ್** (ಸರಲ್, ಸರಲು), ನೆಗೆತ, ಜಿಗಿತ; ಸಲಿಕೆ, ಕಂಬಿ; ಬಾಣ.

— **ಇಸು** ಹಾರು; ದಾಟು; ಓಡು.

**ಸರಳ** (ಸರಲ).

**ಸರಳು** ಬಾಣ, ಕಣೆ; ಸಲಕೆ, ಕಂಬಿ.

**ಸರಾಗ** ಪ್ರೀತಿಯಿಂದ ಕೂಡಿ; ಎಡೆಬಿಡದೆ, ಅವಿರತ, ತಡೆಯಿಲ್ಲದೆ; ನೇರ; ರಾಗದೊಡನೆ; ಹೌರಗೆ.

**ಸರಾಫ** ನಗದಿ ಗುಮಾಸ್ತ; ಚಿನ್ನದ ವ್ಯಾಪಾರಿ; ರೊಕ್ಕ ಬದಲಿಸುವವ.

**ಸರಿ** ಹೋಗು, ಚಲಿಸು; ಸಮ, ಯೋಗ್ಯ;

ಸಮಸಂಖ್ಯೆ; ಝುರಿ; ಮಳೆ, ಸೋನೆ; ಕಡಿದು, ಪ್ರಸಾತ; ರಾತಿ.
—ಇಸು ಬದಿಗೊತ್ತು; ಅಲಕ್ಷಿಸು.
—ಗ ಸಮಾನ, ಜೋಡಿ; ಸಮರ್ಥ.
—ಬರಿ ಸಮಾನತೆ.
—ಮಿಗಿಲು ಸಮಾನ ಸಂಖ್ಯೆ ಅಥವಾ ವಿಷಮ ಸಂಖ್ಯೆ; ಸರಿಸಮಾನ.

**ಸರಿತ್** ಹೊಳೆ, ನದಿ.

**ಸರಿಮಿಂಡಿ** ಕನ್ನೆ; ಮದುವೆಯಾಗದವಳು.

**ಸರಿಸ** ಸಾಮಾನ್ಯ;ಸಮಾನ;ಸಮೀಪ; ಕಾಳಗ, ಕದನ; ಇದಿರು; ಮಗ್ಗಲು; ಅಂಟು.

**ಸರೀಕ** ಸಮಾನಿಕ, ಸಮಾನ.

**ಸರೀಸೃಪ** ಹಾವು, ಸರ್ಪ; ಚೇಳು.

**ಸರು** ಕತ್ತಿ ಮೊದಲಾದುವುಗಳ ಹಿಡಿ, ಮುಷ್ಟಿ; ಮೃಗ ಹೋದ ದಾರಿ.

**ಸರೂಪ** ಸಮಾನ, ಹೋಲುವೆ; ಏಕರೂಪತೆ.

**ಸರೋಜ** ತಾವರೆ.

**ಸರೋಜಿನಿ** ತಾವರೆಯುಳ್ಳದು, ಸರಸ್ಸು.

**ಸರೋವರ** ಸರಸ್ಸು, ಕೊಳ.

**ಸರ್ಗ** ನಿರ್ಮಾಣ, ಸೃಷ್ಟಿ; ಅಧ್ಯಾಯ; ವಿಶ್ವ.

**ಸರ್ತಿ** (ಸರ್ದಿ), ಬಾರಿ, ಸರದಿ, ಸಲ.

**ಸರ್ಪ** ನಾಗರಹಾವು, ಹಾವು.

**ಸರ್ಪಿಣಿ** ಹೆಣ್ಣು ಹಾವು; ಹಾವ್ರಾಣಿ.

**ಸರ್ಬ**(ದ್ಭ)ಎಲ್ಲಾ,ಸರ್ವ(ಸಂ); ಈಶ್ವರ,ಶರ್ವ.

**ಸರ್ಬವ** (ಸಬ್ಬವ), ಹಾಸ್ಯ.

**ಸರ್ವ** ಶರ್ವ (ಸಂ), ಶಿವ; ಎಲ್ಲ, ಸಕಲ.
—ಜ್ಞ ಎಲ್ಲವನ್ನು ತಿಳಿದ, ಒಬ್ಬ ವೀರಶೈವ ಜ್ಞಾನಿ ಮತ್ತು ಕವಿ.
—ತ್ರ ಎಲ್ಲೆಲ್ಲು, ಯಾವಾಗಲೂ.
—ಥಾ ಎಂದೂ; ಒಟ್ಟಿಗೆ; ಹೆಚ್ಚಾಗಿ; ಖಂಡಿತವಾಗಿ, ಎಂದಿಗೂ.
—ದಾ ಯಾವಾಗಲೂ.
—ಸ್ವ ಎಲ್ಲವೂ; ಎಲ್ಲಾ ದ್ರವ್ಯ.

**ಸರ್ವಾಧಿಕಾರ** ಎಲ್ಲಾ ಅಧಿಕಾರ, ಎಲ್ಲ ಸ್ವಾತಂತ್ರ್ಯ; ಪೂರ್ಣ ಸ್ವಾತಂತ್ರ್ಯ.

**ಸಲ್** (ಸಲು), ಸೇರು, ಹೋಗು; ಒಪ್ಪು; ಪ್ರವೇಶಿಸು, ಸಂದಾಯವಾಗು.

**ಸಲ** ಸಾರಿ, ಬಾರಿ, ಸರತಿ, ಸರದಿ; ವೇಳೆ.

**ಸಲಕೆ** ಗೋರುಮಣೆ; ಕೋಲು, ದಬ್ಬೆ; ಬೆತ್ತ.

**ಸಲಗ** ಹಿಂಡಿನಲ್ಲಿ ಮುಖ್ಯವಾದ ಆನೆ; ಗೂಳಿ.

**ಸಲಗು**(ದ್ಭ) ಶಲಾಕ (ಸಂ),ಸಲಕೆ, ಕೋಲು; ಹೂವಿನ ನಡುವಿನ ದಂಟು.

**ಸಲವು** ಪ್ರವೇಶ; ಸಬಬು, ನೆವ, ಕಾರಣ.

**ಸಲಹು** (ಸಲುಹು), ಪೊರೆ, ರಕ್ಷಿಸು, ಕಾಪಾಡು.

**ಸಲಹೆ** ಸಹಾನುಭೂತಿ; ಸೂಚನೆ.

**ಸಲಾಕೆ** (ದ್ಭ) ಶಲಾಕ (ಸಂ), ಸರಳು, ಕಣೆ; ಹೂವಿನ ನಡುವಿನ ತಾಳು; ಕಬ್ಬಿಣದ ಜಡಿ.

**ಸಲಾಂ** (ಸಲಾಮು), ಮುಸಲ್ಮಾನರ ವಂದನೆ.

**ಸಲಿಗೆ** ನೆಸೆ, ರಿಯಾಯಿತಿ, ತೀರ ಪರಿಚಿತಿಯ ವರ್ತನೆ; ಸದರ, ಬಳಕೆ.

**ಸಲಿಲ** ನೀರು.

**ಸಲಿಸು** ಮುಚ್ಚಿಸು; ಪೂರ್ಣಮಾಡು; ಕೊಡು; ಮುಗಿಸು; ಸಂದಾಯಮಾಡು; ವ್ಯಯಿಸು.

**ಸಲೀಸು** ಸುಲಭ, ಸರಾಗ; ನೇರ; ಲಘು.

**ಸಲು** (ಸಲ್), ಸೇರು; ಒಪ್ಪು; ಸಂದಾಯ.

**ಸಲುವಳಿ** ಕೊಡುವಿಕೆ; ಕೊಟ್ಟುಕೊಳ್ಳುವಿಕೆ; ಚಲಾವಣೆ, ಚಾಲತಿ.

**ಸಲುಹ** ಸೇರುವ; ಮುಂದುವರಿಯುವ.

**ಸಲೆ** ಚೆನ್ನಾಗಿ; ತಕ್ಕಂತೆ; ಸಂದ ಹಣ; ಧಾರಣೆ, ದರ.

**ಸಲೆಮಾರು** ವಿಕ್ರಯಿಸು.

**ಸಲ್ಲ** ಸಲ್ಲದು, ಯೋಗ್ಯವಾಗದುದು.

**ಸಲ್ಲಕಿ** ಆನೆಬೇಲ, ಬೆಳವಲ.

**ಸಲ್ಲಲಿತ**(ಸಲ್ಲವಿತ),ಚೆಲುವಾದ,ಮನೋಹರ

**ಸಲ್ಲಾಪ** ಮಾತುಕತೆ, ಸತ್‌ಕಥನ.

ಸಲ್ಲು (ಸಲು), ಸೇರು; ಒಗ್ಗು; ಹೊಗ್ಗು; ತಲಪು, ಮುಟ್ಟು.
ಸಲ್ಲೆಹ (ದ್ಭ) ಶಲ್ಯ (ಸಂ), ಒರ್ಚಿ; ಬಾಣ.
ಸಲ್ಲೇಖನ ಜೈನರ ಪ್ರಾಯೋಪವೇಶ ವ್ರತ, ಉಪವಾಸ.
ಸವಡಿ ಜೋಡು, ಜತೆ, ಜವಳಿ.
—ಇಸು ಸೇರಿಸು, ಜತೆಗೊಳಿಸು.
ಸವಡು ವಿರಾಮ, ವಿಶ್ರಾಂತಿ, ತೆರಪು, ಬಿಡುವು.
ಸವಣ (ದ್ಭ) ಶ್ರಮಣ (ಸಂ), ಜಿನ; ಚಿಮಟ, ಇಕ್ಕಳು.
—ಮನೆ ಬಸದಿ, ಜಿನ ದೇವಾಲಯ.
ಸವತಿ (ದ್ಭ) ಸಪತ್ನಿ (ಸಂ), ತನ್ನ ಗಂಡನಿಗೆ ಲಗ್ನವಾದ ಇನ್ನೊಬ್ಬ ಹೆಂಡತಿ.
ಸವನ ಹೋಮ; ಯಜ್ಞ; ಸ್ನಾನ; ರಸವನ್ನು ಹಿಂಡುವಿಕೆ.
ಸವನಿಸು ಅಣಿಮಾಡು, ಸಿದ್ಧಮಾಡು.
ಸವರ್ (ಸವರು), ನಾಶಮಾಡು; ಗೀಸು; ಕೈಯಾಡಿಸು, ಚಪ್ಪರಿಸು; ಕತ್ತರಿಸು; ಉಜ್ಜು, ತಿಕ್ಕು; ಬಳಿ, ಲೇಪಿಸು; ನಯ ಮಾಡು.
—ಇಸು ಕೂಡಿಹಾಕು, ಶೇಖರಿಸು.
ಸವರ್ಣ ಸಮಾನ ವರ್ಣ, ಸಮಾನ ಜಾತಿ.
ಸವಳ್ತಡೆ ಹೊತ್ತಾರೆ, ಹರಿಹೊತ್ತು, ಪ್ರಾತಃ ಕಾಲ; ಮರುದಿನ.
ಸವಾಯಿ ಒಂದೂ ಕಾಲು.
ಸವಾರ ರಾವುತ, ಕುದುರೆಯೇರುವವ.
ಸವಾಲು ಪ್ರಶ್ನೆ, ವಿಚಾರಣೆ, ಕೇಳುವಿಕೆ.
ಸವಿ ಸಿಹಿ, ರುಚಿ; ರುಚಿನೋಡು.
ಸವಿತೃ ಸೂರ್ಯ.
ಸವಿನಯ ವಿನಯ, ಅತಿವಿನಯ, ನಮ್ರತೆ.
ಸವಿನೋಟ ಪ್ರಿಯವಾದ ನೋಟ, ಪ್ರಣಯದ ನೋಟ, ಶೃಂಗಾರದ ನೋಟ.
ಸವಿಬೇಟ ವಿಲಾಸದ ಬೇಟ.
ಸವಿಯೆರೆ ರುಚಿಕರ ಆಹಾರ; ಸವಿಯಾದುದನ್ನು ಬಡಿಸುವುದು.
ಸವುಟು ಸೌಟು, ಹುಟ್ಟು, ದೊಡ್ಡ ಚಮಚೆ.
ಸವುತೆ ಸೌತೆ, ಒಂದು ಪಲ್ಲೆಯ.
ಸವುದೆ ಸೌದೆ, ಕಟ್ಟಿಗೆ, ಸಮಿಧ (ಸಂ); ಉರುವಲು.
ಸವುಳು ಸೌಳು, ಒಗರು, ಚವುಳು; ಚಪ್ಪೆ, ಸಪ್ಪೆ.
ಸವೆ (ಸಮೆ), ಸಿದ್ಧಮಾಡು, ರಚಿಸು; ಕ್ಷಯಿಸು; ಕುಂದು; ಸೊರಗು; ನಾಶ ಮಾಡು; ಒತ್ತು; ತೇಯು, ತೀಡು.
ಸವ್ಯಸಾಚಿ ಎಡಗೈಯಿಂದಲೂ ಬಿಲ್ಲೆಸೆಯ ಬಲ್ಲವ, ಅರ್ಜುನ; ಎಲ್ಲ ಬಗೆಯಲ್ಲಿಯೂ ಕೆಲಸಮಾಡಬಲ್ಲವ.
ಸವ್ವಳಿ ತೆರೆಯ ತುದಿ; ತಿರುಪು, ಮುರಿ.
ಸಶರೀರ ಶರೀರವುಳ್ಳ, ಶರೀರದೊಡನೆ.
ಸಸನೆ ಸ್ವಸ್ತವಾಗಿ, ಚಲನೆಯಿಲ್ಲದೆ; ತಿರ್ರನೆ.
ಸಸಿ (ದ್ಭ) ಶಶಿ (ಸಂ), ಚಂದ್ರ; ಗಿಡ; ಹಿಂಜು, ಎಕ್ಕು, ಬಿಡಿಸು; ಕೀಳು, ಹೆಕ್ಕು.
ಸಸಿನೆ (ಸಸಿನ್ನ), ನೇರವಾಗಿರುವುದು, ಚೆನ್ನಾಗಿರುವುದು; ಸಮೀಪ, ಹತ್ತಿರ, ಸನಿಯ.
ಸಸೂತ್ರ (ಸುಸೂತ್ರ), ತೊಂದರೆಯಿಲ್ಲದೆ; ನೇರಾಗಿ; ಸರಾಗ; ಕ್ರಮವಾಗಿ.
ಸಸ್ಯ ಗಿಡ, ಸಸಿ; ಮರ; ಕಾಳು.
ಸಹ ಕೂಡ, ಒಡನೆ; ಕೂಡಿ.
ಸಹಕಾರ ಮಾವಿನ ಮರ; ಸಹಾಯ, ಪರಸ್ಪರ ಸಹಾಯ.
ಸಹಗಮನ ಸತಿಹೋಗುವಿಕೆ; ಗಂಡನೊಡನೆ ಸತಿಯು ಚಿತೆಯೇರುವುದು.
ಸಹಚರ ಅನುಚರ, ಜತೆಯಲ್ಲಿ ಚಲಿಸುವವ; ಗೆಳೆಯ, ಒಡನಾಡಿ.
ಸಹಜ ನಿಜ; ಸ್ವಾಭಾವಿಕ; ಯೋಗ್ಯ, ತಕ್ಕ.
ಸಹಜಾತ ಸೋದರ, ಅಣ್ಣ ಅಥವಾ ತಮ್ಮ.

ಸಹಣ ಕುದುರೆಯನ್ನು ಪಳಗಿಸುವವರು.
ಸಹದೇವ ಪಾಂಡವರಲ್ಲಿ ಐದನೆಯವ,ಮಾದ್ರಿಯ ಮಗ.
ಸಹಧರ್ಮಿಣಿ ಸಮಾನ ಧರ್ಮವುಳ್ಳವಳು, ಹೆಂಡತಿ.
ಸಹನೆ(ಸಹನ),ತಾಳ್ಮೆ,ಸೈರಿಸುವ ಶಕ್ತಿ,ಶಮೆ.
ಸಹಪಂಕ್ತಿ ಜತೆಗೆ ಊಟಕ್ಕೆ ಕುಳಿತುಕೊಳ್ಳುವಿಕೆ; ಸಜಾತಿ.
ಸಹವಾಸ ಸ್ನೇಹ, ಗೆಳೆತನ; ಒಡನಾಟ.
ಸಹಸ ಸಾಹಸ; ಬಲ; ಜೋರು; ಪ್ರಯತ್ನ.
ಸಹಸಿ ಸಹಸಿಗ, ಸಾಹಸಿ, ಪ್ರಯತ್ನಶಾಲಿ.
ಸಹಸ್ರ ಸಾವಿರ; ಬಹಳ.
—ಕರ ಸಾವಿರ ಕಿರಣ ಉಳ್ಳವ,ಸೂರ್ಯ.
—ನಯನ ಸಾವಿರ ಕಣ್ಣುಳ್ಳವ, ಇಂದ್ರ.
ಸಹಸ್ರಪತ್ರ ತಾವರೆ.
ಸಹಸ್ರಬಾಹು ಕಾರ್ತವೀರ್ಯಾರ್ಜುನ; ಬಾಣಾಸುರ.
ಸಹಾಯ ನೆರವು, ಬೆಂಬಲ; ಜತೆಗಾರ; ಅನುಚರ.
ಸಹಿ ದಸ್ಕತು; ಒಪ್ಪಿಗೆ, ಒಪ್ಪಿಗೆಯ ಗುರುತು; ರುಜು.
ಸಹಿತ ಸಹ, ಒಟ್ಟಿಗೆ, ಕೂಡ, ಒಡನೆ.
ಸಹಿಷ್ಣು ತಾಳ್ಮೆಯುಳ್ಳವ, ಸಹನಶೀಲ.
ಸಹಿಸು ತಾಳು,ಅನುಭವಿಸು,ತಡೆದುಕೊಳು.
ಸಹೃದಯ ಒಳ್ಳೆಯ ಮನಸ್ಸಿನ, ಸಹಾನುಭೂತಿ ಉಳ್ಳವ, ಸಜ್ಜನ.
ಸಹೋದರ ತಮ್ಮ ಅಥವಾ ಅಣ್ಣ, ಜತೆಗೆ ಹುಟ್ಟಿದವ, ಒಂದೇ ತಾಯಿಮಗ.
ಸಹೋದರಿ ತಂಗಿ, ಅಕ್ಕ, ಸಹಜಾತೆ.
ಸಹ್ಯ ಸಹಿಸಲು ಸಾಧ್ಯವಾದ.
ಸಹ್ಯಾದ್ರಿ ದಕ್ಷಿಣದಿಂದ ಕೊಂಕಣವನ್ನು ವಿಂಗಡಿಸುವ ಪಶ್ಚಿಮ ಘಟ್ಟದ ಸೆರಗು.
ಸಳಿ (ಚಳಿ).

ಸಂಕ (ದ್ಭ) ಶಂಖ (ಸಂ), ಸೇತು, ಸೇತುವೆ, ಪೂಲು.
ಸಂಕಟ ಇಕ್ಕಟ್ಟಾದ; ಆಪತ್ತು, ಕಷ್ಟ; ಶರೀರದೊಳಗಣ ನೋವು.
ಸಂಕರ ಬೆರಕೆ; ಗಲಿಬಿಲಿ; ಚತುರ್ವರ್ಣಗಳಲ್ಲಿ ಅಸಮವರ್ಣಗಳ ಸಂಬಂಧ.
ಸಂಕರ್ಷಣ ಬಲರಾಮ.
ಸಂಕಲನ ಕೂಡಿಸುವಿಕೆ, ಸೇರಿಕೆ, ಬೇರೀಜು; ಬೆರಕೆ.
ಸಂಕಲೆ (ದ್ಭ) ಶೃಂಖಲಾ (ಸಂ), ಸರಪಣಿ; ಬಂಧನ, ಸಂಕೋಲೆ; ಬೇಡಿ, ಕೋಳ; ನೆಲ ಅಳೆಯುವ ಚೈನ್.
ಸಂಕಲ್ಪ ನಿಶ್ಚಯ; ಯೋಚನೆ; ಕರ್ಮಪ್ರಾರಂಭದ ಮೊದಲು ಮಾಡುವ ಅಭಿಲಾಷೆಯ ವಚನ.
ಸಂಕಾಶ ಸಮಾನ, ಹೋಲುವೆ.
ಸಂಕೀರ್ಣ ಒಟ್ಟು ಸೇರಿದ; ತುಂಬಿದ; ಚೆದರಿದ; ಮಿಶ್ರ, ಬೆರಕೆ.
ಸಂಕೀರ್ತನ (ಸಂಕೀರ್ತನೆ), ಹೊಗಳಿಕೆ, ಸ್ತುತಿ.
ಸಂಕು (ದ್ಭ) ಶಂಖ (ಸಂ).
ಸಂಕುಚಿತ ಮುದುರಿದ; ಸಣ್ಣದಾದ, ಕಿರಿದಾದ; ಅಲ್ಪ, ಕ್ಷುದ್ರ.
ಸಂಕುಲ (ಸಂಕುಳ), ಸಮೂಹ; ಯುದ್ಧ.
ಸಂಕೆ (ದ್ಭ) ಶಂಕಾ (ಸಂ), ಭ್ರಾಂತಿ; ಅನುಮಾನ, ಸಂದೇಹ.
ಸಂಕೇತ ಗುರುತು; ಗೊತ್ತಾದ ಚಿಹ್ನೆ, ಸಂಜ್ಞೆ; ಒಪ್ಪಿಗೆ, ಗೊತ್ತು.
ಸಂಕೋಚ ಮುದುರುವಿಕೆ; ಸಣ್ಣದಾಗುವಿಕೆ; ನಯಭಯ, ದಾಕ್ಷಿಣ್ಯ; ಅಂಜಿಕೆ.
ಸಂಕೋಲೆ (ದ್ಭ) ಶೃಂಖಲಾ (ಸಂ); ಕೋಳ, ಬಂಧನ.
ಸಂಕ್ರಮಣ ಸೇರಿಕೆ; ದಾಟುವಿಕೆ; ಸೂ

ರ್ಯನು ಒಂದು ರಾಶಿಯಿಂದ ಇನ್ನೊಂದನ್ನು ದಾಟುವುದು.

**ಸಂಕ್ರಮಿಸು** ದಾಟು; ಒದಗು, ಸೇರು; ಜತೆಯಾಗು.

**ಸಂಕ್ರಂದನ** ಇಂದ್ರ.

**ಸಂಕ್ರಾಂತಿ** ಸಂಕ್ರಮಣ ಕಾಲ; ಸೇರಿಕೆ; ಪಾರುಗಾಣ್ಕೆ; ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿ ಸೇರುವ ಕಾಲ.

**ಸಂಕ್ಷಿಪ್ತ** (ಸಂಕ್ಷೇಪ), ಚುಟುಕು; ಸಂಗ್ರಹ; ರಾಶಿಯಾದ.

**ಸಂಕ್ಷೋಭೆ** ಚಾಂಚಲ್ಯ, ಚಂಚಲತೆ; ತಳಮಳ, ಕೊರತೆ; ಕೊರತೆಯಿಂದ ಉಂಟಾಗುವ ಮನಸ್ಸಿನ ಉದ್ವೇಗ.

**ಸಂಖ್ಯ** (ಸಂಖ್ಯೆ), ಲೆಕ್ಕ, ಅಂಕೆ; ಯುದ್ಧ; ವಿಚಾರ.

**ಸಂಗ** ಸೇರಿಕೆ, ಸಹವಾಸ, ಜೊತೆ, ಕೂಟ; ಸ್ತ್ರೀಸಂಭೋಗ; ನದಿಕೂಟ, ಸ್ನೇಹ.

**ಸಂಗಡ** ಸೇರಿಕೆಯ, ಜತೆಯ, ಕೂಡಿದ; ಹತ್ತಿರ, ಜತೆಗೆ.

**—ಇಗ** ಸ್ನೇಹಿತ, ಗೆಳೆಯ; ಅನುಚರ.

**ಸಂಗತ** ಸೇರಿದ, ಸೇರಿರುವ, ಹೊಂದುವ, ಬೆರೆಯುವ; ಯುಕ್ತ, ಯೋಗ್ಯ.

**ಸಂಗತಿ** ವಿಚಾರ, ವಿಷಯ; ಪ್ರಸಂಗ; ಕೂಡಿದ್ದು; ಸೇರಿದುದು; ಬಂದುದು; ಆದುದು.

**ಸಂಗಮ** ಕೂಟ; ನದಿಕೂಟ, ಕೂಡಲು; ಭೆಟ್ಟಿ.

**ಸಂಗಮವರಿ** ಚಂದ್ರಕಾಂತ ಶಿಲೆ.

**ಸಂಗಮೇಶ್ವರ** (ಸಂಗಮ), ಕೂಡಲದ ಈಶ್ವರ. ಬಸವೇಶ್ವರನ ಆರಾಧ್ಯ ದೇವತೆ.

**ಸಂಗರ** ಕಾಳಗ, ಯುದ್ಧ; ಪ್ರತಿಜ್ಞೆ; ವಿಪತ್ತು.

**ಸಂಗಾತ** (ಸಂಗತ), ಸಂಗಡ, ಜತೆ; ಜತೆಯಲ್ಲಿ.

**ಸಂಗಾತಿ** ಗೆಳೆಯ, ಸಂಗಡಿಗ; ಸಖ.

**ಸಂಗೀತ ಮೇಳ**, ನೃತ್ಯವಾದ್ಯ ಗೀತಗಳ ಮೇಳ; ಹಾಡುಗಾರಿಕೆ; ಗಾನ.

**ಸಂಗ್ರಹ** ಸೇರುವಿಕೆ, ಕೂಡಿಸುವಿಕೆ, ಸಾರವನ್ನು ಮಾತ್ರ ಆರಿಸಿ ಕೊಡುವಿಕೆ; ಸಂಚಯ

**—ಣ** ಸಂಗ್ರಹ, ಸೇರಿಸಲ್ಪಟ್ಟುದು; ಹಿಡಿಯುವುದು.

**ಸಂಗ್ರಾಣಿಸು** ಸಂಗ್ರಹಿಸು, ಸೇರಿಸು.

**ಸಂಗ್ರಾಮ** ಕಾಳಗ, ಯುದ್ಧ.

**ಸಂಘ** ಸೇರಿಕೆ; ಕೂಟ; ಸಮಿತಿ; ಸಮಾಜ, ಸಂಗಡ; ಗುಂಪು; ಬೌದ್ಧ ಭಿಕ್ಷುಗಳ ಗುಂಪು.

**ಸಂಘಟನೆ** ಸೇರಿಕೆ, ಹೊಂದಿಕೆ; ತಿಕ್ಕಾಟ, ಪೆಟ್ಟು, ಹೊಡೆದಾಟ; ನಡೆದುದು.

**ಸಂಘಟಿಸು** ಸೇರು, ಹೊಂದು, ಸಂಭವಿಸು.

**ಸಂಘರ್ಷ** ಬಲವಾದ ಸೇರಿಕೆ; ತಾಕಲಾಟ, ತಿಕ್ಕಾಟ; ಒರಸೊರಸು.

**—ಣ**(ಸಂಘರ್ಷ), ತಿಕ್ಕಾಟ, ಉಜ್ಜುವುದು.

**ಸಂಘಾತ** ಸಮೂಹ; ಒಂದು ನರಕ; ಬಲವಾದ ಸೇರಿಕೆ; ಕಫ.

**ಸಂಚ** ಸಂಚಯ, ಸಂಗ್ರಹ, ಸಮೂಹ; ರಹಸ್ಯ

**ಸಂಚಕಾರ**(ಚಂಚಗಾರ), ಮುಂಗಡ, ಅಗಾವು; ಮೋಸ.

**—ಕೊಡು** ಮುಂಗಡ ಕೊಡು; ಮೋಸ ಕೊಡು; ಭರವಸೆ ಕೊಡು.

**ಸಂಚನೆ** ಕೂಡಿಡುವಿಕೆ.

**ಸಂಚಯ** ಸಮೂಹ, ಸಂಗ್ರಹ; ರಾಶಿ.

**ಸಂಚರಿಸು** ಚಲಿಸು, ತಿರುಗು, ಅಲೆದಾಡು; ಬಳಕೆಬರು.

**ಸಂಚಲ** ಚಂಚಲ, ಅಲುಗಾಡುವ.

**ಸಂಚಾರ** ತಿರುಗಾಟ, ಅಲೆದಾಟ; ಪ್ರಯಾಣ, ಪ್ರವಾಸ; ಸಾಗುವಿಕೆ; ದಾಟುವಿಕೆ.

**ಸಂಚಾರಿ** ಚಲಿಸುವ; ಚಂಚಲ; ಬದಲಿಸುವ, ಬದಲಾಗುವ ಮನೋವೃತ್ತಿ.

**—ಭಾವ** ವ್ಯಭಿಚಾರೀ ಭಾವ; ಚಲಿಸುವ ಮನಃಸ್ಥಿತಿ.

**ಸಂಚಾಲನೆ** ನಡಸುವಿಕೆ; ಚಲಿಸುವಿಕೆ; ವ್ಯವಸ್ಥೆ.

ಸಂಚಿ ಚೀಲ; ಹಡಪ, ತಾಂಬೂಲದ ಚೀಲ.
ಸಂಚಿಕೆ ತಾಳೆಗಳ ಓಲೆ ಕಟ್ಟು; ಪುಸ್ತಕದ ಕಟ್ಟು; ಪುಸ್ತಕದ ಭಾಗ.
ಸಂಚಿತ ಕೂಡಿಸಿದ; ಕೂಡಿಬಂದ, ಪ್ರಾರಬ್ಧ.
ಸಂಚು ಸಮೂಹ; ಶಬ್ದ; ಒಳಸಂಚು, ಹೊಂತು; ಸಾಧನ, ಯುಕ್ತಿ, ಉಪಾಯ.
ಸಂಜನಿಸು ಹುಟ್ಟು; ಆಗು; ಉತ್ಪನ್ನಗೊಳ್ಳು; ಪ್ರಾಪ್ತಿಸು.
ಸಂಜಯ ಧೃತರಾಷ್ಟ್ರನ ಸಾರಥಿಯೂ ರಾಯಭಾರಿಯೂ ಆಗಿದ್ದವನು. ಆತನು ಧೃತರಾಷ್ಟ್ರನಿಗೆ ಯಾವತ್ತು ಭಾರತ ಯುದ್ಧದ ವಾರ್ತೆಯನ್ನು ತಿಳಿಸಿದನೆಂದು ಕಥೆ.
ಸಂಜಾತ ಹುಟ್ಟು; ಸಮೂಹ; ಹುಟ್ಟಿದ.
ಸಂಜೀವ ಒಟ್ಟಿಗೆ ಇರುವ; ತಿರುಗಿ ಜೀವ ಕೊಡುವ; ಹನುಮಂತ.
—ನ ಮಡಿದವರನ್ನು ತಿರುಗಿ ಬದುಕಿಸಬಲ್ಲ ವಸ್ತು, ಒಂದು ಮೂಲಿಕೆ.
ಸಂಜೆ (ಚಂಜೆ),ಸಂಧ್ಯಾ(ಸಂ),ಸಾಯಂಕಾಲ, ಬೈಗು.
ಸಂಜೋಗ ಕವಚ, ಅಂಗಿ.
ಸಂಜ್ಞ (ಸಂ) ಸನ್ನೆ (ದ್ಭ); ಸಂಜ್ಞೆ ಕೈಯಿಂದ ಅರ್ಥ ಸೂಚಿಸುವುದು; ಯಾವುದೇ ಸಂಕೇತ; ಗುರುತು; ಹಾವ; ಸೂರ್ಯನ ಹೆಂಡತಿ.
ಸಂಜ್ಞಾ (ಸಂಜ್ಞ).
ಸಂತ (ದ್ಭ) ಶಾಂತ (ಸಂ), ಸನ್ಯಾಸಿ, ಸತ್ಪುರುಷ, ಸಾಧು, ಶಂತ (ದ್ಭ).
ಸಂತತ ಯಾವಾಗಲೂ, ನಿತ್ಯ, ಸತತ, ಎಡೆಬಿಡದೆ.
ಸಂತತಿ ಸಮೂಹ; ಸಂತಾನ, ಸಂಸಾರ, ತಳಿ, ಪೀಳಿಗೆ, ಪರಂಪರೆ; ಗೋತ್ರ; ಮಗ; ಕನ್ಯೆ; ಸಾಲು; ಎಡೆಬಿಡದ ಧಾರೆ.
ಸಂತಪನ ಹಿಂಸೆಗೊಳಿಸುವುದು.
ಸಂತಪಿಸು (ಸಂತಾಪಿಸು), ರೋದಿಸು; ಬೇಗುದಿಗೊಳ್ಳು, ಅತಿಯಾಗಿ ಕಳವಳಪಡು.
ಸಂತಯ್ಸು (ಸಂತವಿಸು), ಸಮಾಧಾನಗೊಳಿಸು; ತೃಪ್ತಿಪಡಿಸು.
ಸಂತರ್ಪಣ ಬ್ರಾಹ್ಮಣ ಸಮಾರಾಧನೆ; ಎಲ್ಲರಿಗೂ ತೃಪ್ತಿ ತರುವ.
ಸಂತವಿಸು ಸಂತಯ್ಸು, ಸಮಾಧಾನಪಡಿಸು.
ಸಂತಸ (ದ್ಭ) ಸಂತೋಷ (ಸಂ).
ಸಂತಾನ ಪೀಳಿಗೆ, ವಂಶ; ಮಕ್ಕಳು; ವಿಸ್ತಾರ; ಕಲ್ಪವೃಕ್ಷ.
ಸಂತಾಪ ಬೆಂಕಿಯಿಂದ ಹುಟ್ಟಿದ ಉರಿ; ಹೊದಕುಳಿ, ಬೇಗುದಿ, ಚಿಂತೆ.
ಸಂತುಷ್ಟ ತೃಪ್ತ, ಸಂತೋಷಗೊಂಡ.
ಸಂತೃಪ್ತಿ ಶಾಂತಿ ಪಡೆಯುವಿಕೆ; ತೃಪ್ತಿಯಾಗುವಿಕೆ; ಸಮಾಧಾನವಾಗುವಿಕೆ.
ಸಂತೆ (ದ್ಭ) ಸಂಸ್ಥೆ (ಸಂ); ಜನಸಮುದಾಯ, ಕೊಡಲು ಕೊಳ್ಳಲು ಆಗಾಗ ಸೇರುವ ಜನರ ಗುಂಪು; ಬಜಾರ; ಬಾಯಿಪಾಠ ಮಾಡುವುದು.
ಸಂತೋಷ ಆನಂದ; ಉತ್ಸಾಹ, ಆಹ್ಲಾದ; ಸುಖ.
ಸಂತ್ರಾಸ ಭಯ.
ಸಂದ ಹೆಸರಾದ, ಪ್ರಸಿದ್ಧವಾದ; ಉಂಟಾದ; ಕಳೆದ, ಹೋದ; ಮಡಿದ, ತೀರಿದ; ಸಲುವಳಿಗೊಂಡ.
ಸಂದಣಿ ಸಮೂಹ, ಗುಂಪು.
—ಇಸು ಒಟ್ಟುಗೂಡಿಸು, ಒಟ್ಟಾಗು, ಗುಂಪಾಗು.
ಸಂದರ್ಭ ಜೋಡಣೆ; ಸಮಯ; ಅನುಕೂಲ.
ಸಂದರ್ಶನ (ಸಂದರುಶನ), ಭೇಟಿ, ನೋಡುವುದು.
ಸಂದಾಯ ಸಲುವಳಿ, ಸಾಲ ತೆರುವಿಕೆ; ತೆರಾನೆ, ವಜಾ, ವಜಾವಟ್ಟು.

**ಸಂದಿ** (ದ್ಭ) ಸಂಧಿ(ಸಂ), ಎಡೆ, ಮೂಲೆ; ಓಣಿ, ಸಣ್ಣ ಬೀದಿ.

—ಇಸು ಸಾಧಿಸು; ಸೇರು; ಸಂಘಟಿಸು.

**ಸಂದಿಗ್ಧ** ಸಂಕೋಚ, ಇಕ್ಕಟ್ಟು, ಬಿಕ್ಕಟ್ಟು; ಸಂದೇಹ.

**ಸಂದು** ಜೋಡಿ, ಜತೆಗೊಂಡುದು, ಕಟ್ಟು, ಸಂದರ್ಭ; ಗಂಟು; ಮರಡು.

**ಸಂದುಕ** ಪೆಟ್ಟಿಗೆ, ಸಂಪುಟ, ಕರಡಿಗೆ.

**ಸಂದೆಗ**(ಸಂದೆಯ),ಸಂದೇಹ(ಸಂ),ಸಂಶಯ, ಅನುಮಾನ.

**ಸಂದೇಶ** ಒಸಗೆ, ರಾಯಸ; ಹೇಳಿ ಕಳುಹು ವುದು; ಆಜ್ಞೆ.

**ಸಂದೇಹ** ಅನುಮಾನ, ಸಂಶಯ; ಕಾವ್ಯದಲ್ಲಿ ಒಂದು ಅರ್ಥಾಲಂಕಾರ.

**ಸಂದೋಹ** ಸಮೂಹ, ಕೂಟ, ಸಂದಣಿ.

**ಸಂಧಾನ** ಸಂಧಿ, ಕೂಡಿಕೆ, ಸೇರಿಸುವುದು; ಬಾಣವನ್ನು ಬಿಲ್ಲಿಗೆ ಜೋಡಿಸುವುದು; ಒಪ್ಪಂದ, ಕವಲು.

**ಸಂಧಿ** ಸಂಧಾನ; ಜೋಡಿಕೆ, ಸೇರುವಿಕೆ; ಒಡಕು, ಬಿರುಕು; ಅಧ್ಯಾಯ, ಭಾಗ; ಯುಗಾಂತ್ಯ; ಅಲ್ಪ.

—ವಿಗ್ರುಹ ಸ್ನೇಹ ಮತ್ತು ವೈರ.

**ಸಂಧ್ಯ** ಬ್ರಹ್ಮನ ಮಗಳೆಂದೂ, ಶಿವನ ಮಡದಿ ಯೆಂದೂ ಖ್ಯಾತಳಾದ ಉಷಾದೇವಿ.

**ಸಂಧ್ಯಾ** (ಸಂಧ್ಯೆ),' ಸಂಜೆ, ಬೈಗು; ಸಾಯಂ ಕಾಲದ ಅಧಿದೇವತೆ.

—ವಂದನೆ ತ್ರಿಕಾಲಗಳಲ್ಲಿ ಮಾಡುವ ಪ್ರಾರ್ಥನೆ.

**ಸಂಪತ್ತು** (ಸಂಪತ್ತಿ), ಸಿರಿವಂತಿಕೆ; ಅನು ಕೂಲತೆ; ಧನಾನುಕೂಲತೆ, ದ್ರವ್ಯ; ತುಷ್ಟಿ ಕೊಡುವ ಸ್ಥಿತಿ.

**ಸಂಪದ** ಐಶ್ವರ್ಯ; ಸುದೈವ; ಸುಖ, ತೃಪ್ತಿ.

**ಸಂಪನ್ನ** ಸಂಪತ್ತಿನಿಂದ ಕೂಡಿದ; ಕೆಲಸ ಕೈ ಗೂಡಿಸಿಕೊಂಡ; ಸಿರಿವಂತ; ಸಂಭಾವಿತ, ಯೋಗ್ಯ; ತುಂಬಿರುವ.

**ಸಂಪರ್ಕ** ಸಂಬಂಧ; ಸೇರಿಕೆ, ಕೂಡುವ, ಸೇರುವ; ಸಮೀಪಬರುವಿಕೆ; ಸ್ಪರ್ಶ; ಬಳಕೆ.

**ಸಂಪಾತಿ** ಗರುಡನ ಅಣ್ಣನಾದ ಒಂದು ಹದ್ದು.

**ಸಂಪಾದನ** ದೊರಕಿಸುವುದು; ಲಾಭ; ಬೇರೆ ಬೇರೆ ವಿಷಯ ಸಂಗ್ರಹಿಸುವ ಕೆಲಸ.

**ಸಂಪಾದಿಸು** ದೊರಕಿಸು, ಒಟ್ಟುಮಾಡು, ಒದಗಿಸು; ಸಂಗ್ರುಹಿಸು.

**ಸಂಪಾಳಿಸು** ವಿಸ್ತರಿಸು, ಹರಡು; ರಕ್ಷಿಸು.

**ಸಂಪಿಗೆ** (ದ್ಭ) ಸಂಪಗೆ, ಚಂಪಕ (ಸಂ), ಒಂದು ಹೂ.

**ಸಂಪು** ಸೊಂಪು; ವ್ಯಾಪಾರದ ತೇಜಿ; ಮುಷ್ಕರ.

**ಸಂಪುಟ** ಭರಣಿ,ಕರಡಿಗೆ, ಕರಂಡ; ಪುಸ್ತಕದ ಭಾಗ.

**ಸಂಪೂರ್ಣ** (ಸಂಪೂರ್ತ), ಎಲ್ಲ, ಪೂರ್ಣ; ತುಂಬಿದ; ಪೂರಾ.

**ಸಂಪ್ರುತಿ** ಈಗ, ವರ್ತಮಾನಕಾಲ; ಸಂಧಿ, ಸಂಧಾನ; ಪರೀಕ್ಷೆ.

—ಪನ್ನ ಲಭಿಸಿದ, ದೊರೆತ.

**ಸಂಪ್ರುದ** ಉಚಿತ, ಉಡುಗೊರೆ; ತ್ವರೆ, ವೇಗ.

**ಸಂಪ್ರುದಾಯ** ಪದ್ಧತಿ, ರೂಢಿ, ರಿವಾಜು, ಕಟ್ಟಳೆ; ನಡವಳಿ.

**ಸಂಪ್ರಾಪ್ತಿ** ಪ್ರಾಪ್ತಿ; ದೊರೆಯುವಿಕೆ; ಹೊಂ ದುವಿಕೆ, ಆಗುವಿಕೆ.

**ಸಂಪ್ರೀತಿ** ಆಮೋದ; ಅತಿ ಪ್ರೀತಿ; ಆಸಕ್ತಿ.

**ಸಂಪ್ರೋಕ್ತ** ಸ್ತುತಿಸಲ್ಪಟ್ಟ; ವಿವರಿಸಲ್ಪಟ್ಟ; ಪರಿಶುದ್ಧಮಾಡಿದ.

**ಸಂಬಳ**(ಸಂಬಲ), ಬುತ್ತಿ; ವೇತನ,ಪಗಾರು; ಕೂಲಿ, ಮಜೂರಿ.

**ಸಂಬಳಿಗೆ** ಸಂಪುಟಕ; ಹೋಳು; ನೀರನ್ನು ಮೊಗೆಯಲು ಬಳಸುವ ಒಂದು ಬಗೆ ತೂ ಗುವ ನೀರಿನ ಬುಟ್ಟಿ.

ಸಂಬಂಧ ಸೇರುವೆ, ಹೊಂದಿಕೆ; ನಂಟು, ಹತ್ತುಗೆ, ಬಾಂಧವ್ಯ; ಸ್ನೇಹ.

ಸಂಬಂಧಿ ನಂಟ, ಬೇಕಾದವ, ಬಂಧು, ಹತ್ತುಗೆಯವ.

ಸಂಬಾರ ಮೇಲೋಗರಕ್ಕೆ ಸವಿಬರಲು ಹಾಕುವ ಜಿನಸುಗಳು; ಒಂದು ಬಗೆ ಕಡವೆ, ಕೆಂಜು ಬಣ್ಣದ ಜಿಂಕೆ.

ಸಂಬಾರಕಾಗೆ ಕಾಜಾಣ, ಕುಪ್ಪಳು, ಭಾರದ್ವಾಜ.

ಸಂಬಾಳಿಸು ಸಮಜಾಯಿಸು, ಸಮಾಧಾನ ಪಡಿಸು; ಕಾಪಾಡು, ಪೊರೆ; ತಡೆದುಕೊ.

ಸಂಭವ ಹುಟ್ಟುವ, ಹುಟ್ಟಿದ; ಆಗಬಹುದಾದ, ಹುಟ್ಟಬಹುದಾದ.

—ಇಸು ಹುಟ್ಟು; ಆಗು.

ಸಂಭಾವನ ಮನ್ನಣೆ; ಮರ್ಯಾದೆ; ಬೆಲೆ; ಉಡುಗೊರೆ, ಉಚಿತ; ಸ್ನೇಹಶೀಲ, ಅನುನಯವುಳ್ಳವ.

ಸಂಭಾವಿತ ಯೋಗ್ಯ; ಪರರ ಮರುಕದಲ್ಲಿ ಸಮಭಾಗಿಯಾಗಬಲ್ಲವ;ಗೌರವಸ್ಥ;ಮಾನವಂತ.

ಸಂಭಾವಿಸು ಮರ್ಯಾದಿಸು, ಗೌರವಿಸು, ಮನ್ನಿಸು.

ಸಂಭಾಷಣೆಮಾತುಕತೆ,ಪ್ರಸ್ತಾವ;ಸಂವಾದ

ಸಂಭಿನ್ನ ಒಡೆದ, ಬಿರಿದ; ಅರಳಿದ.

ಸಂಭೂತ ಹುಟ್ಟಿದ, ಉತ್ಪನ್ನಗೊಂಡ.

ಸಂಭೃತ ಧರಿಸಲ್ಪಟ್ಟುದು, ತುಂಬಲ್ಪಟ್ಟುದು.

ಸಂಭೋಗ ಆನಂದ; ಸರುತ, ಸ್ತ್ರೀಪುರುಷರ ಕೂಟ.

ಸಂಭ್ರಮ ಶೀಘ್ರ,ಬೇಗ;ಸಡಗರ,ವಿಜೃಂಭಣೆ.

ಸಂಮರ್ದ ತಿಕ್ಕಾಟ.

ಸಂಯಮ ಇಂದ್ರಿಯನಿಗ್ರಹ;ತಡೆ,ನಿರ್ಬಂಧ.

—ನ ಕಟ್ಟುವುದು; ನಿಯಮ, ಇಂದ್ರಿಯ ನಿಗ್ರಹ.

ಸಂಯಮಿ ಇಂದ್ರಿಯ ನಿಗ್ರಹಿಯಾದವ, ಯತಿ, ಸನ್ಯಾಸಿ.

ಸಂಯಂತೃ ಸಾರಥಿ.

ಸಂಯುಕ್ತ ಸೇರಿದ, ಬೆರೆತ, ಕೂಡಿದ.

ಸಂಯುಗ ಯುದ್ಧ.

ಸಂಯೋಗ ಸೇರಿಕೆ, ಕೂಟ.

ಸಂರಕ್ಷಣೆ ಪಾಲನೆ, ಕಾಪಾಡುವಿಕೆ, ಜಾಗ್ರತೆ ನೋಡುವಿಕೆ.

ಸಂರಕ್ಷಿಸು ಪಾಲಿಸು, ಕಾಪಾಡು, ಪೊರೆ.

ಸಂರಂಭ ಕೋಪ; ಉತ್ಸಾಹ; ವೇಗ; ನಿಂದೆ; ಸಂಭ್ರಮ.

ಸಂಲಗ್ನ ಸೇರಿಕೆ.

ಸಂವತ್ಸರ ವತ್ಸರ, ವರ್ಷ, 12 ತಿಂಗಳು.

ಸಂವರಣ ಮುಚ್ಚಿಡುವಿಕೆ;ಸಿದ್ಧಗೊಳಿಸುವಿಕೆ; ಪರಿವಾರ.

ಸಂವರಿಸು ಸಿದ್ಧಮಾಡು;ಕಾಪಾಡು,ರಕ್ಷಿಸು; ಗಂಟುಕಟ್ಟು.

ಸಂವರ್ತನ ಪ್ರಲಯ; ಆಗುವಿಕೆ; ಸುಳಿ ಸುತ್ತುವಿಕೆ, ತಿರುಗಣೆ.

ಸಂವಾದ ಸಂಭಾಷಣೆ, ಮಾತುಕತೆ; ವಾದ ವಿವಾದ.

ಸಂವಿತ್ತಿ ತಿಳಿವಳಿಕೆ, ಜ್ಞಾನ.

ಸಂವಿಧಾನ ಸನ್ನಿವೇಶ, ಸೇರಿದ ಪ್ರಸಂಗ; ಮೇಳ; ರಚನೆ.

ಸಂವೃತ ಸುತ್ತಲ್ಪಟ್ಟ, ಆವರಿಸಲ್ಪಟ್ಟ.

ಸಂವೇಗ ತ್ವರೆ, ಬಹು ವೇಗ.

ಸಂವೇಶ ನಿದ್ರೆ, ವಿಶ್ರಾಂತಿ; ಸುರತ.

ಸಂಶಯ ಅನುಮಾನ, ಸಂದೇಹ.

ಸಂಸಕ್ತ ಸೇರಿಕೊಂಡ, ಅತಿ ಸಮೀಪ.

ಸಂಸರಣ ಹೋಗುವುದು; ಸಂಸಾರ.

ಸಂಸರ್ಗ ಸಂಬಂಧ; ಸೇರಿಕೆ; ಸಂಪರ್ಕ, ಸ್ಪರ್ಶ.

ಸಂಸಾರ ಪ್ರಾಪಂಚಿಕ ವಿಚಾರ, ಇಹಲೋ

ಕದ ವಿಚಾರ; ಲೌಕಿಕ; ಗೃಹಕೃತ್ಯ; ಕುಟುಂಬ; ಹೆಂಡತಿ; ಹುಟ್ಟುಸಾವುಗಳ ಚಕ್ರ.

**ಸಂಸಾರಿ** ಸಂಸಾರದಲ್ಲಿರುವವ, ಲೌಕಿಕ; ಕುಟುಂಬಿಕ, ಗೃಹಸ್ಥ.

**ಸಂಸೃತಿ** ಸಂಸಾರ.

**ಸಂಸ್ಕರಿಸು** ಶುದ್ಧಮಾಡು; ತಿದ್ದು; ಪುಟ ಕೊಡು, ಸುಧಾರಿಸು; ಅಲಂಕರಿಸು; ಯೋಗ್ಯತೆ ಬೆಳಸು; ಒಪ್ಪ ಹಾಕು.

**ಸಂಸ್ಕಾರ** (ಸಂಸ್ಕರಣ), ಶುದ್ಧಮಾಡುವಿಕೆ; ತಿದ್ದುವಿಕೆ; ಪುಟ ಇಡುವಿಕೆ; ಸುಧಾರಣೆ; ನಯಗಾರಿಕೆ; ಅಲಂಕರಿಸುವಿಕೆ.

**ಸಂಸ್ಕೃತ** ಗೀರ್ವಾಣ ಭಾಷೆ; ತಿದ್ದಿದ, ನಯಗೊಂಡ; ಚೊಕ್ಕವಾದ, ಯೋಗ್ಯ.

**ಸಂಸ್ಕೃತಿ** (ಸಂಸ್ಕಾರ).

**ಸಂಸ್ತರ** ತರ, ಪದರು; ಮಡಿಕೆ, ಮಡಿತೆ.

**ಸಂಸ್ತರಣ** ದರ್ಭೆ, ಹಾಸಿಗೆ; ಪದರು.

**ಸಂಸ್ಥಾನ** ಸರಕಾರ; ದೊಡ್ಡ ಇಲಾಖೆ; ದೇಶೀಯ ರಾಜ್ಯಭಾರ; ಸ್ವಾಮಿಗಳ ಮಠ.

**ಸಂಸ್ಥಾಪನ** ಸ್ಥಾಪನೆ, ಪ್ರತಿಷ್ಠೆ; ರಚನೆ; ಶಾಸನ; ನೆಲೆನಿಲಿಸುವಿಕೆ.

**ಸಂಸ್ಥಿತಿ** ಸರಿಯಾಗಿ ಸೇರಿದುದು; ರಚನೆ; ಒಳ್ಳೆಯ ಸ್ಥಿತಿ, ಸುಸ್ಥಿತಿ.

**ಸಂಸ್ಥೆ** ಇಲಾಖೆ; ಸಂಘ; ಒಂದೇ ಉದ್ದೇಶದಿಂದ ಕೆಲಸ ನಡಸುವ ಕೂಟ.

**ಸಂಹತಿ** ಸಮೂಹ.

**ಸಂಹನನ** ದೇಹ, ಕೊಲೆ; ಕೊಲೆಗಾರ.

**ಸಂಹರಿಸು** ನಾಶಮಾಡು; ಕತ್ತರಿಸು, ತರಿ, ಸವರು.

**ಸಂಹಾರ** ನಾಶ; ಕೊಲೆ.

**ಸಂಹಿತೆ** ಸೇರಿಕೆ, ಕೂಟ, ಸಂಗ್ರಹ; ವೇದಗಳಿಂದ ಆರಿಸಿ ಸಂಗ್ರಹಿಸಿದ ಭಾಗಗಳು.

**ಸಾಕಲ್ಯ** ಎಲ್ಲ ತೆರನಾದ, ಎಲ್ಲ ರೀತಿಯ; ಎಲ್ಲವೂ ಸೇರಿರುವ.

**ಸಾಕಾರ** ದೇಹವುಳ್ಳ; ರೂಪವುಳ್ಳ; ಪ್ರತ್ಯಕ್ಷ.

**ಸಾಕು** ಪಾಲಿಸು, ರಕ್ಷಿಸು, ಕಾಪಾಡು; ಇನ್ನು ಬೇಡ, ಅಷ್ಟೇ ಇರಲಿ; ಬಹುದು; ಎಸೆ; ತೋರಿಕೆ; ಸೋಗು.

**ಸಾಕೇತ** ಅಯೋಧ್ಯಾ ನಗರ.

**ಸಾಕ್ಷರ** ಅಕ್ಷರವುಳ್ಳ, ಲಿಪಿಯುಳ್ಳ.

—**ತೆ** ಅಕ್ಷರಜ್ಞಾನ ಇರುವಿಕೆ, ಓದು ಬರುವಿಕೆ; ಕಲಿಕೆ, ಓದು.

**ಸಾಕ್ಷಾತ್** ಪ್ರತ್ಯಕ್ಷ, ಕಣ್ಣೆದಿರಿಗೆ; ನಿಜವಾಗಿ.

—**ಕರಿಸು** ಒಲಿಸಿಕೊ, ಪ್ರಾಪ್ತಿಗೊಳಿಸಿಕೊ, ಹೊಂದು, ಪಡೆ; ಕಣ್ಣಿಗೆ ಕಾಣುವ ಹಾಗೆ ಮಾಡು.

**ಸಾಕ್ಷಿ** (ಸಾಕ್ಷ್ಯ), ಸಾಕ್ಷಿಗಾರ, ನೋಡಿದವ, ಕಂಡವ, ಬಲ್ಲವ; ರುಜುವಾತು.

**ಸಾಗರ** ಮಹಾ ಸಮುದ್ರ, ವಿಶಾಲವಾದ ಕಡಲು.

**ಸಾಗು** ನಡಸು, ಚಲಿಸುವಂತೆ ಮಾಡು; ಸಾಕು; ಕೃಷಿಮಾಡು; ಮುಂದುವರಿಸು; ನೆರವೇರಿಸು; ಅಭಿವೃದ್ಧಿಗೊಳಿಸು.

—**ಮಾಡು** ಕೃಷಿಮಾಡು.

—**ವಳಿ** ಕೃಷಿ, ಬೇಸಾಯ, ಒಕ್ಕಲತನ.

—**ವಾಡ** ಸಾಗಿಸುವಿಕೆ; ಹೊರೆ ಸಾಮಾನುಗಳನ್ನು ಸಾಗಿಸುವಿಕೆ.

**ಸಾಚಾ** ತಾಜಾ, ಪಕ್ಕ, ಯೋಗ್ಯ, ವಂಚನೆಯಿಲ್ಲದ, ಸರಳ.

**ಸಾಚು** ನೀಡು; ಚಾಚು, ಒಡ್ಡು.

**ಸಾಜ** (ದ್ಭ) ಸಹಜ (ಸಂ).

**ಸಾಟಿ** ಸಮ, ಎಣೆ, ಹೋಲುವೆ; ಗುಂಪಾಗಿ ಬೆಲೆಗೆ ಕೊಳ್ಳುವುದು, ರಖಂ ವ್ಯಾಪಾರ; ವಿನಿಮಯ.

—**ಹಾಕು** ಬೆರೆಸು; ಜತೆಗೂಡಿಸು.

**ಸಾಣೆ** ತಿಕ್ಕುವಿಕೆ, ಮಸೆತ; ತೇಯುವಿಕೆ; ಆಯುಧಗಳನ್ನು ಹರಿತಮಾಡುವಿಕೆ.

—ಕಲ್ಲು ತೇಯುವ ಕಲ್ಲು, ಸಾಣೆಹಾಕುವ ಕಲ್ಲು, ಮಸೆಗಲ್ಲು.
ಸಾತ್ಯಕಿ ಕೃಷ್ಣನ ಒಬ್ಬ ಸಾರಥಿ.
ಸಾತ್ವಿಕ ಸತ್ವ ಗುಣವೇ ಮುಖ್ಯವಾಗಿ ಉಳ್ಳವ.
ಸಾದರ ಪ್ರೀತಿ; ಆದರ, ಗೌರವಗಳಿಂದ ಕೂಡಿದ
ಸಾದರು ಬಂದುದು; ದಾಖಲಾದುದು; ಹಾಜೂರುಗೊಳಿಸಿದುದು.
ಸಾದಾ ಹೆಚ್ಚಿನ ಕೆಲಸವಿಲ್ಲದ; ಸರಳ.
ಸಾದಿಲವಾರು ಚಿಲ್ಲರೆ ವೆಚ್ಚ, ಚಿಲ್ಲರೆ ಸಾಮಾನು; ಮೇಲ್ ಸಾಮಗ್ರಿ; ಕಿರುಕುಳ ವೆಚ್ಚ.
ಸಾದು (ದ್ಭ) ಸಾಧು (ಸಂ); ಒಂದು ಪರಿಮಳ ದ್ರವ್ಯ; ತಿಲಕಕ್ಕೆ ಮಾಡುವ ವಸ್ತು.
ಸಾದೃಶ್ಯ ಹೋಲುವೆ, ಸಾಟಿ; ಉದಾಹರಣೆ.
ಸಾಧಕ ಪರಿಣಾಮಕಾರಿ, ಯಶಸ್ವಿ; ಪ್ರಯತ್ನಶೀಲ; ಅನುಕೂಲ; ಸಹಾಯಕ.
—ಬಾಧಕ ಹಾನಿಕರ ಮತ್ತು ಪೋಷಕ; ಅನುಕೂಲ ಮತ್ತು ಪ್ರತಿಕೂಲ.
ಸಾಧನ (ಸಾಧನೆ), ಸಾಮಗ್ರಿ, ಉಪಕರಣ; ಸೈನ್ಯ; ಸಿದ್ಧ; ಯಶಸ್ಸು; ಪ್ರಯತ್ನ; ಸೇನೆ; ದಿಕ್ಕು; ಪೀಡೆ; ಹಟ; ಅನುಸರಣೆ.
ಸಾಧಾರಣ ಸಾಮಾನ್ಯ; ಸರಾಸರಿ, ವಿಶೇಷವಲ್ಲದ; ಸುಮಾರು; 44ನೆಯ ಸಂವತ್ಸರ.
ಸಾಧಿತ ಪ್ರಮಾಣಗಳಿಂದ ರುಜುಪಡಿಸಿದ; ಮಾಡಿದ; ದೊರಕಿಸಿದ.
ಸಾಧು ಸಂತ, ಸತ್ಪುರುಷ; ಸುಂದರ; ಯೋಗ್ಯ, ಉಚಿತ; ಮುನಿ; ಜಿನ; ಒಂದು ಪರಿಮಳ ದ್ರವ್ಯ; ಪಳಗಿದ, ಈಲಾದ.
ಸಾಧ್ಯ ಮಾಡಬಹುದಾದುದು; ಯತ್ನಕ್ಕೆ ಎಟುಕುವಂಥದು; ಸಾಧ್ಯವನ್ನಾಗಿ ಮಾಡಿಕೊಂಡವ; ಸಿದ್ಧಿಪಡೆದವ.
ಸಾಧ್ವಿ ಪತಿವ್ರತೆ.
ಸಾನಂದ ಸಂತೋಷದಿಂದ ಕೂಡಿದ.
ಸಾನಿ ಪಾತರದವಳು, ಸೂಳೆ; ಜತೆಗಾರ್ತಿ.
ಸಾನು ಪ್ರಸ್ಥಭೂಮಿ, ಬೆಟ್ಟದ ತಪ್ಪಲು; ಶಿಖರ.
—ಭೂಮಿ ಮಟ್ಟಭೂಮಿ, ಪ್ರಸ್ಥಭೂಮಿ.
ಸಾನುಕೂಲ ತೀರ ಅನುಕೂಲ; ಒಲಿದ.
ಸಾನುಭವ ಸ್ವಂತ ಅನುಭವದಿಂದ ಕೂಡಿದ; ಅನುಭವ.
ಸಾನುರಾಗ ಪ್ರೀತಿಯೊಡನೆ; ಪ್ರೀತಿ.
ಸಾನ್ನಿಧ್ಯ ಸಮೀಪ.
ಸಾಪತ್ನ ಸವತಿಯ ಮಗ, ಮಲ ಮಗ; ಶತ್ರು, ಹಗೆ.
ಸಾಪೇಕ್ಷ ಹೊಂದಿಕೊಂಡು; ಗಣನೆಗೆ ತಂದು; ಬೇರೆಯದನ್ನು ಪರಿಗಣಿಸಿ; ಒಂದರಿಂದ ಇನ್ನೊಂದು ಪೂರಣವಾಗಬೇಕಾದುದು.
ಸಾಫಲ್ಯ ಯಶಸ್ಸು; ಪ್ರಯತ್ನಕ್ಕೆ ಫಲದೊರೆತುದು, ನೆರವೇರಿಕೆ.
ಸಾಫು ಚೊಕ್ಕ; ನಯ; ಬಿಳಿ; ಹಾನಿ; ನಾಶ, ಏನೂ ಇಲ್ಲದ ಸ್ಥಿತಿ.
ಸಾಬೀತು ಸಲೀಸು; ಹಾನಿಯಾಗದ ಸ್ಥಿತಿ; ಸುರಕ್ಷಿತ; ಗಟ್ಟಿಮುಟ್ಟು.
ಸಾಮ ಚತುರೋಪಾಯಗಳಲ್ಲಿ ಒಂದು; ಒಂದು ವೇದ; ಸ್ಮರಣೆ, ಶಾಂತಿ; ಒಡಂಬಡಿಕೆ.
ಸಾಮಗ್ರಿ ಸಲಕರಣೆ, ಕೆಲಸದ ಸಾಧನಗಳು, ಉಪಕರಣ, ಹತಿಯಾರು; ಪದಾರ್ಥ.
ಸಾಮತಿ ಹೊಂದುವ ಗಾದೆ; ದೃಷ್ಟಾಂತದ ಕಥೆ.
ಸಾಮರಸ್ಯ ಸಮರಸವಾಗಿರುವುದು; ಮುಖ್ಯಭಾವದಲ್ಲಿ ಏಕತೆ.
ಸಾಮರ್ಥ್ಯ ಶಕ್ತಿ, ಬಲ; ಯೋಗ್ಯತೆ.
ಸಾಮಂತ ಕಪ್ಪಕೊಡುವ ಅರಸ, ಆಶ್ರಿತ ರಾಜ, ಮಾಂಡಲಿಕ.
ಸಾಮಾಜಿಕ ಸಮಾಜಕ್ಕೆ ಸಂಬಂಧಿಸಿದ; ಸದಸ್ಯ
ಸಾಮಾನು ಮಾಲು; ಜಿನಸು; ವಸ್ತು, ಒಡವೆ, ಸರಕು.

ಸಾಮಾನ್ಯ ಎಲ್ಲಿಯೂ ಕಾಣಬಹುದಾದ; ವಿಶೇಷವಲ್ಲದ, ಜಾವಳ; ಕ್ಷುಲ್ಲಕ.
ಸಾಮೀಪ್ಯ ಸಮೀಪವಾಗಿರುವಿಕೆ, ಸನಿಯ.
ಸಾಮು ಕುಸ್ತಿ, ಕಸರತ್ತು, ಒಂದು ಬಗೆ ಅಂಗಸಾಧನೆ.
ಸಾಮುದ್ರಿಕ ಹಸ್ತರೇಖೆಗಳಿಂದ ಭವಿಷ್ಯ ಹೇಳುವ ಶಾಸ್ತ್ರ.
ಸಾಮೋಪಚಾರ ಶೈತ್ಯೋಪಚಾರ; ಮೃದು ಚಿಕಿತ್ಸೆ; ರಿಯಾಯಿತಿ.
ಸಾಮೋಪಾಯ ಮೃದು ಉಪಾಯ, ವೈರಿಗಳನ್ನು ಒಲಿಸುವ ರೀತಿ.
ಸಾಮ್ರಾಜ್ಯ ಚಕ್ರಾಧಿಪತ್ಯ, ಸಮ್ರಾಟನ ಅಧೀನವಾದ ರಾಷ್ಟ್ರಗಳು.
ಸಾಮ್ರಾಣಿ (ಸಾಂಬ್ರಾಣಿ), ಒಂದು ಗಡ್ಡೆ ಗೆಣಸು.
ಸಾಮ್ಯ ಹೋಲುವೆ, ಸಾಟಿ; ಸಮಾನ, ಸಮಶೀಲತೆ.
ಸಾಯ್ (ಸಾಯು), ನಶಿಸು, ನಾಶವಾಗು; ಮರಣಹೊಂದು, ತೀರಿಕೊ.
ಸಾಯಕ ಬಾಣ; ಖಡ್ಗ, ಕತ್ತಿ, ತಳವಾರು.
ಸಾಯಣ ವೀರ ಬುಕ್ಕರಾಯನ ಮಂತ್ರಿ ಮಾಧವಾರ್ಯನ ಸೋದರ. ಈತನು ವೇದಗಳಿಗೆ ಭಾಷ್ಯ ಬರೆದು ಹೆಸರಾದನು.
ಸಾಯಂಕಾಲ ಸಂಜೆ, ಬೈಗು.
ಸಾಯುಜ್ಯ ಒಂದು ಬಗೆ ಮೋಕ್ಷ; ಲೀನತೆ.
ಸಾರ್ (ಸಾರು), ಹತ್ತಿರ ಬರು; ಸಮೀಪಿಸು; ದೂರ ಹೋಗು, ಸರಿ.
—ಕೆ ಸಮೀಪ, ಸಮೀಪ ಬರುವಿಕೆ.
—ಚು ಸಾರು, ತೆರಳು; ಬರು.
ಸಾರ ನೀರು; ದ್ರವ್ಯ; ಅಮೃತ; ರಸ; ಬೆಣ್ಣೆ; ಕಾಡು; ಬಲ; ಶ್ರೇಷ್ಠ; ಸ್ಥಿರಾಂಶ; ಕಟ್ಟು; ಪರಿಣಾಮ; ಮುಖ್ಯವಾದುದು; ಕ್ಷಾರ; ನಿರ್ಣಯ, ಸಿದ್ಧಾಂತ.
ಸಾರಣಿಗೆ ಪುಡಿ ಸೋಸುವ ಬಲೆ, ಜರಡಿ, ಚಾಲನಿ.
ಸಾರಣೆ ನೆಲ ಬಳಿಯುವುದು, ಬಳೆಯುವುದು; ಗಾರೆ ಕೆಲಸ, ಗಾರಣೆ.
ಸಾರಥಿ ರಥ ನಡಸುವವ.
ಸಾರಥ್ಯ ಸಾರಥಿಯಾಗಿರುವುದು; ರಥ ನಡಸುವುದು, ಬೆಂಬಲವಾಗುವುದು.
ಸಾರಮೇಯ ಕಶ್ಯಪನ ಹೆಂಡತಿ ಸರಮೆಯಲ್ಲಿ ಹುಟ್ಟಿದವ; ನಾಯಿ.
ಸಾರಸ ತಾವರೆ; ಮೇಖಲೆ, ಡಾಬು; ರಸದಿಂದ ಕೂಡಿದುದು; ಚಂದ್ರ; ಹಂಸ; ಒಂದು ಜಲಪಕ್ಷಿ.
ಸಾರಸ್ವತ ಸರಸ್ವತಿಯ ಉಪಾಸಕ; ಒಂದು ದೇಶ; ಪಂಚಗೌಡರಲ್ಲಿನ ಒಂದು ವರ್ಗ.
ಸಾರಂಗ ಚಾತಕ; ಜಿಂಕೆ; ಆನೆ; ಕೊಡೆ; ರಾಜಹಂಸ; ಒಂದು ವಾದ್ಯ; ಬಟ್ಟೆ; ನವಿಲು; ಮನ್ಮಥ; ಬಾಲ; ತಾವರೆ; ಶಂಖ; ಕೋಗಿಲೆ; ಭೂಮಿ; ಪ್ರಾಕಾರ; ಒಂದು ರಾಗ.
ಸಾರಂಗಿ ಒಂದು ತಂತೀವಾದ್ಯ.
ಸಾರಾಯ (ಸಾರಾಯಿ), ಸಾರ, ತಿರುಳು; ಸೆರೆ, ಮದ್ಯ.
ಸಾರಾಸಾರ ಹುರುಳಿರುವ ಮತ್ತು ಹುರುಳಿಲ್ಲದ, ಜೊಳ್ಳಾದ ಮತ್ತು ತಿರುಳಿರುವ.
ಸಾರಾಂಶ ಸಾರವತ್ತಾದ ಭಾಗ; ತಾತ್ಪರ್ಯ.
ಸಾರಿ (ಚಾರಿ), ದಾಳ, ಲೆತ್ತ, ನೆತ್ತ; ಸರದಿ, ಸಲ.
ಸಾರಿಕೆ ಮೈನಾ, ಶಾರಿಕಾ (ಸಂ); ಹೆಣ್ಣು ಗಿಳಿ.
ಸಾರಿಸಿ ಜಮೀನು, ಒಂದು ತುಂಡು ಭೂಮಿ.
ಸಾರಿಸು ಬಳಿ, ಬಳೆ, ಸವರು; ಸಾರಣೆಮಾಡು.
ಸಾರು (ಸಾರ್), ಕಟ್ಟು; ಸಾರವುಳ್ಳುದು; ಒಂದು ಓಗರ, ರಸ.
ಸಾರೂಪ್ಯ ಸಮರೂಪತೆ; ಇಷ್ಟದೇವತೆಯಲ್ಲಿ ಲೀನವಾಗುವುದು, ಒಂದು ವಿಧ ಮೋಕ್ಷ.
ಸಾರೆ ಸಾಮೀಪ, ಹತ್ತಿರ; ಸಾರಿ, ಸಲ, ಬಾರಿ.

ಸಾರ್ಗಳ ನಿರ್ಬಂಧವುಳ್ಳ, ತೊಡಕಿನ.
ಸಾರ್ಥ ಉದ್ದೇಶವುಳ್ಳ, ಅರ್ಥವುಳ್ಳ; ಹಣವುಳ್ಳ; ಶ್ರೀಮಂತ; ಸಾರವಾನ; ವ್ಯಾಪಾರಿಗಳ ತಂಡ.
—ಕ ಸಫಲ; ಅರ್ಥವಿರುವ; ಉದ್ದೇಶವುಳ್ಳ; ಉತ್ತರಕ್ರಿಯೆ.
ಸಾರ್ಥಕ್ಯ ಸಾಫಲ್ಯ; ಪ್ರಯೋಜನ; ಯಶಸ್ಸು; ಕೃತಕೃತ್ಯನಾಗುವಿಕೆ.
ಸಾರ್ಥವಾಹ ವ್ಯಾಪಾರಿ.
ಸಾರ್ವತ್ರಿಕ ಸಾಮಾನ್ಯ, ಎಲ್ಲೆಲ್ಲೂ ಇರುವ.
ಸಾರ್ವಜನಿಕ ಜನಪದದ, ಜನತೆಗೆ ಸಂಬಂಧಿಸಿದ; ಎಲ್ಲ ಜನರ.
ಸಾರ್ವಭೌಮ ಸಮ್ರಾಟ, ಚಕ್ರವರ್ತಿ, ಅರಸರ ಅರಸ.
ಸಾಲ್ (ಸಾಲು), ಪಂಕ್ತಿ, ಹಂತಿ, ಶ್ರೇಣಿ; ಗೆರೆ, ಗೀಟು; ವರ್ಷ, ಸಾಲ; ಕಡ; ಋಣ; ಸಾಕಾಗು, ಸಾಕು.
—ತೆಗೆ ಸಾಲಾಗು, ಸಾಲುಮಾಡು.
ಸಾಲ ಕಡ, ಉದ್ಧರಿ; ಋಣ; ಸಾಕಾಗದ; ಒಂದು ಎತ್ತರವಾದ ಮರ.
—ಇಗ ಸಾಲ ತೆತ್ತವ; ಸಾಲಗಾರ; ಜೇಡ.
—ವಣಿಗ ಸಾಲಗಾರ, ಋಣಿ.
ಸಾಲಗ್ರಾಮ (ದ್ಭ), ಶಾಲಗ್ರಾಮ (ಸಂ); ವಿಷ್ಣು ಸಾನ್ನಿಧ್ಯವುಳ್ಳುದು ಎಂಬ ಒಂದು ಶಿಲೆ.
ಸಾಲಭಂಜಿಕೆ ಗೊಂಬೆ, ಬೊಂಬೆ.
ಸಾಲಂಕಾರ ಅಲಂಕಾರ ಸಹಿತ, ಆಭರಣ ಒಡವೆಗಳ ಸಹಿತ.
ಸಾಲಿಯಾನ ಸಾಲಿಗೆ, ವರ್ಷಕ್ಕೆ.
ಸಾಲು (ಸಾಲೆ), ಸಾಕಾಗು; ಪಂಕ್ತಿ; ಸಾಲಿಯಾನ್, ವರ್ಷ, ವರ್ಷಕ್ಕೆ.
ಸಾಲೆ (ದ್ಭ), ಶಾಲಾ (ಸಂ), ಕಟ್ಟಡ, ಕೋಣೆ; ವಿದ್ಯಾಲಯ; ತೊಗಟೆ, ಕೆತ್ತೆ; ಸಾಲೆಗ, ನೇಕಾರ, ಜೇಡ, ದೇವಾಂಗದವ.
ಸಾಲೋಕ್ಯ ಅದೇ ಲೋಕದಲ್ಲಿರುವ; ಒಂದು ಬಗೆ ಮೋಕ್ಷ.
ಸಾಲ್ಗುಂ ಸಾಕು.
ಸಾಲ್ವ ಅನುಸಾಲ್ವನೆಂಬ ಒಬ್ಬ ರಕ್ಕಸ; ಸಾಕಾಗುವ.
ಸಾವಕಾತಿ (ಸಾಹುಕಾರ್ತಿ).
ಸಾವಕಾರ (ಸಾಹುಕಾರ).
ಸಾವಕಾಶ ಅವಕಾಶವಿರುವ, ಬಿಡು ಇರುವ, ವಿಶ್ರಾಂತಿ ಇರುವ; ಅವಸರ ಇಲ್ಲದ, ವಿರಾಮವಾದ.
ಸಾವಗಿಸು ನೀಟುಗೊಳಿಸು; ಸಾಯು.
ಸಾವಧಾನ ಎಚ್ಚರಿಕೆ; ಮನಸ್ಸನ್ನು ಒಂದೇ ಕಡೆ ಇರಿಸುವುದು.
ಸಾವನ ಯಜ್ಞದ ಕೊನೆ; ತಿಂಗಳು.
ಸಾವಯವ ಅವಯವವುಳ್ಳ ಪ್ರಾಣಿ.
ಸಾವರಿಸು ಚೇತರಿಸು.
ಸಾವಂತ (ಸಾಮಂತ), ಆಶ್ರಿತರಾಜ.
ಸಾವಾಸಿ (ದ್ಭ), ಸಹವಾಸಿ (ಸಂ); ಅನುಚರ, ಜತೆಗಾರ.
ಸಾವಿತ್ರಿ ಮದ್ರದೇಶದ ದೊರೆ ಅಶ್ವಪತಿಯ ಮಗಳು. ಅಲ್ಪಾಯುಷಿ ಎಂದು ತಿಳಿದೂ ಈಕೆಯು ಸತ್ಯವಂತನೆಂಬವನನ್ನು ವರಿಸಿದಳು. ಮುಂದೆ ಯಮನಿಂದ ಅವನಿಗೆ ದೀರ್ಘ ಆಯುಷ್ಯವನ್ನು ದೊರಕಿಸಿದಳು; ಸೂರ್ಯ, ಸೂರ್ಯನ ಸಂಬಂಧವಾದ ಒಂದು ಶ್ಲೋಕ.
ಸಾವಿರ ಸಹಸ್ರ, ದಶಶತ; ಬಹಳ.
—ಕಟ್ಟಳೆ ಬಹಳ, ಸಾವಿರಾರು.
ಸಾವಿರಾರು ಅನೇಕ, ಬಹಳ.
ಸಾವು ಮರಣ, ನಿಧನ, ನಾಶ; ಕೊನೆ.
ಸಾಷ್ಟಾಂಗ ಉರ, ಶಿರ, ದೃಷ್ಟಿ, ಮನ, ಮಾತು, ಪಾದ, ಹಸ್ತ, ಮೂಗು– ಈ ಎಂಟು ಅಂಗಗಳೊಡನೆ ಮಾಡುವ ವಂದನೆ.

ಸಾಸ (ದ್ಭ), ಸಾಹಸ (ಸಂ), ವಿಚಾರಶೂನ್ಯ ಅಪೇಕ್ಷೆ; ಶಕ್ತಿಗೆ ಮಾತ್ರ ಸಾಧ್ಯವಾಗ ತಕ್ಕುದು; ಅಸಾಧ್ಯ.

ಸಾಸಿಗ ಸಾಹಸಿಗ ಪರಾಕ್ರಮಿ, ಧೈರ್ಯಶಾಲಿ.

ಸಾಸಿರ ಸಾವಿರ, ಸಹಸ್ರ.

ಸಾಸಿರ್ಗಣ್ಣ ಇಂದ್ರ.

ಸಾಸಿವೆ (ಸಾಸಿಮೆ), ಒಗ್ಗರಣೆಗೆ ಹಾಕುವ ಒಂದು ಕಾಳು.

ಸಾಹಸ (ಸಾಸ), ಬಲ; ತಿರಸ್ಕಾರ; ಉದ್ಧತ ನಡೆ, ದುಡುಮೆ; ಧೈರ್ಯ, ಶೌರ್ಯ; ಪ್ರಯತ್ನ; ವಿಶೇಷ ದುಡುಕು; ದಿಟ್ಟತನ.

ಸಾಹಸಿ ದುಡುಕಿ; ಕಷ್ಟ ಸಾಧ್ಯವಾದ ಕೆಲಸ ಮಾಡುವವ.

ಸಾಹಿತ್ಯ ಸಹಿತತೆ ಉಳ್ಳದು, ಹಲವು ಲಕ್ಷಣ ಗಳನ್ನು ಕೂಡಿರುವ ಗ್ರಂಥ; ವಾಙ್ಮಯ; ಸಾಮಗ್ರಿ, ಸಾಧನ.

ಸಾಹುಕಾರ (ಸಾವಕಾರ), ಧನಿಕ; ಹಣ ಗಾರ; ದೊಡ್ಡ ವ್ಯಾಪಾರಿ, ವ್ಯಾಪಾರಿ.

ಸಾಳೆ ಒಂದು ವಿಧದ ವಾದ್ಯ.

ಸಾಳಗ (ಸಾಳಂಗ), ಒಂದು ಬಗೆಯ ರಾಗ.

ಸಾಳುವ ಸಾಳ್ವ, ಒಂದು ಹಕ್ಕಿ, ಬೇಟೆಗೆ ಉಪಯೋಗಿಸುವ ಒಂದು ಜಾತಿ ಡೇಗೆ.

ಸಾಂಕ್ರಾಮಿಕ ಅಂಟುವ, ಸೋಂಕುವ.

ಸಾಂಖ್ಯ ಅಂಕೆಗೆ ಸಂಬಂಧಿಸಿದ; ಕಪಿಲ ಋಷಿಬರೆದ ತತ್ವಶಾಸ್ತ್ರ; ಸಾಂಖ್ಯಪಂಥದವ

ಸಾಂಗ ಅಂಗದೊಡನೆ ಸೇರಿದ; ಪೂರ್ಣ; ಅವ ಯವ ಉಳ್ಳ.

ಸಾಂಗತ್ಯ ಹೊಂದಿಕೆ; ಒಂದು ಹಾಡಿನ ಧಾಟಿ.

ಸಾಂಗೋಪಾಂಗ ಎಲ್ಲ ಅವಯವಗಳೂ ಸೇ ರಿದ; ವೇದದ ಅಂಗ ಉಪಾಂಗಗಳುಳ್ಳ.

ಸಾಂತ್ವ ಸಮಾಧಾನ, ಶಾಂತಿ.

ಸಾಂದ್ರ ನಿಬಿಡ, ದಟ್ಟಣೆ; ಮೃದು, ಕೋ ಮಲ; ನುಣುಪು; ಆಧಿಕ್ಯ; ಹೊದರು.

ಸಾಂಪ್ರತ ಸದ್ಯ, ಪ್ರಕೃತ; ಈಗಿನ; ತಕ್ಕ, ಉಚಿತ.

ಸಾಂಪ್ರದಾಯ (ಸಂಪ್ರದಾಯ), ಪದ್ಧತಿ, ರೂಢಿ, ಕಟ್ಟಳೆ, ಪರಂಪರೆಯ ನಡವಳಿಕೆ.

ಸಾಂಬ್ರಾಣಿ ಒಂದು ಜಾತಿ ಕುದುರೆ; ಜಿಂಕೆ; ಒಂದು ಪರಿಮಳ ದ್ರವ್ಯ; ಒಂದು ಜಾತಿ ಗಡ್ಡೆಗೆಣಸು.

ಸಿಕ್ (ಸಿಗು, ಸಿಕ್ಕು), ದೊರೆ; ಸಿಕ್ಕಿಬೀಳು; ತೊಡಕು, ಜಿಡುಕು.

ಸಿಕತ ಮರಳು; ಮರುಗಾಡು, ಮರಳುದಿನ್ನೆ; ಹೊಯಿಗೆ ದಂಡೆ.

ಸಿಕೆ (ದ್ಭ) ಶಿಖಿ (ಸಂ), ಶಿಕ್ಕ, ಸಿಕ್ಕ, ಮುದ್ರೆ.

ಸಿಕ್ಕ ನಿಲುವು, ನೆಲವು, ಒಡವೆಗಳನ್ನು ತೂಗಿ ಹಿಡಿಯುವ ಹಗ್ಗ; ಮುದ್ರೆ; ಸಿಕ್ಕಿದ.

ಸಿಕ್ಕಟಿ ಈರಣಿಗೆ, ಚೀರಣಿಗೆ; ಕೂದಲಿನ ಸಿಕ್ಕು ಬಿಡಿಸುವ ಹಣಿಗೆ.

ಸಿಕ್ಕು (ಸಿಕ್ರ್), ಹೊಗ್ಗಿಸು; ಜತೆಗೊಳು; ಹೊಂದು; ಎಟುಕು; ದೊರೆ, ಲಭಿಸು; ತಡೆ; ಜಿಡುಕು; ಬಲ್ಲೆ; ತೊಡಕು; ಕಣ್ ಕಿಸುರು, ಪಿಚ್ಚು.

ಸಿಕ್ತ ತೊಯಿಸಿದ, ನನೆಸಿದ, ಒದ್ದೆ ಮಾಡಿದ.

ಸಿಗಡಿ ಒಂದು ಜಲಚರ.

ಸಿಗಿ ಸೀಳು; ಹರಿ; ಹಲ್ಲಿಂದ ಕಡಿ.

ಸಿಗು (ಸಿಕ್ಕು).

ಸಿಗುರ್ (ಸಿಗುರು), ಗಾಯಮಾಡು, ಗೀರು; ಸೀಳಿದ ತುಂಡು, ಸಿಬರು, ಚಕ್ಕೆ ಚೂರು; ದೋಷ; ಕೊರತೆ.

ಸಿಗುಳು ಸೀಳು; ಕೀತು, ಹೋಳು, ಸೀಳಿದ ತುಂಡು; ಸಂಕೋಚ, ಲಜ್ಜೆ, ಸಿಗ್ಗು.
—ಆಳು ಸಂಕೋಚಶೀಲ; ಲಜ್ಜಾಶೀಲ.

ಸಿಗ್ಗು ನಾಚಿಕೆ, ಲಜ್ಜೆ; ಜುಗುಪ್ಸೆ.

ಸಿಟ್ಟು ಉದ್ವೇಗ; ಕೋಪ, ರೌದ್ರ.

ಸಿಡಿ ಬೆರಳಿಂದ ಹನಿ ಹಾರಿಸು; ಚೆದರು;

ಹಾರು; ಎಗರಿಬೀಳು; ಬಲವಾಗಿ ಸುತ್ತು; ಚಿಮ್ಮು; ಪುಡಿ; ಕಬ್ಬಿಣದ ಕೊಕ್ಕೆ; ಒಂದು ಬಗೆ ಹಿಂಸಾನುಭವದ ಹರಕೆ.

— ಮಿಡಿ ಆತುರ, ಗಡಿಬಿಡಿ; ಕೋಪದಿಂದ ದಡಬಡಿಸುವಿಕೆ.

— ಮಿಡಿಗೊಳು ಚಡಪಡಿಸು; ಸಿಟ್ಟಾಗು, ರೇಗು.

**ಸಿಡಿಮದ್ದು** ಸ್ಫೋಟನವಾಗುವ ಮದ್ದು ಗುಂಡು, ಸುರಂಗ.

**ಸಿಡಿಲು** (ಸಿಡಿಲ್), ಮಿಂಚಿನ ಬಡಿತ.

**ಸಿಡಿವಲೆ** ಒಂದು ಬಗೆಯ ಬಲೆ, ಬೀಸುಬಲೆ.

**ಸಿಡಿಸೋನೆ** ಸೋನೆಮಳೆ, ಹನಿಮಳೆ.

**ಸಿಡಿಂಬು** ಮೆಳೆ, ಹಿಂಡಲು, ಪೊದೆ; ತವಕ ಪಡು, ಆತುರಗೊಳು; ಕೆರಳು, ಸಿಟ್ಟಾಗು.

**ಸಿಡುಕ** ಬೇಗನೆ ಸಿಟ್ಟುಗೊಳ್ಳುವವ.

**ಸಿಡುಕು** ಸಿಡಿದುದು; ರೇಗಾಟ; ಉದ್ವೇಗ; ಬಯ್, ಹಳಿ, ತೆಗಳು.

**ಸಿಡುಬು** ದೇವಿ, ಮೈಲಿಗೆ; ದೇವಿ ಹಾಕುವ ಮದ್ದು, ದಾಕಿನ ಮದ್ದು.

**ಸಿತ** ಬಿಳುಪು; ಗಂಧ; ಬೆಳ್ಳಿ, ಶುಕ್ರ; ಸಕ್ಕರೆ.

**ಸಿತಗ** ಜಾರ, ಘಟಿಂಗ, ಹಾದರಿಗ; ವೀರ.

**ಸಿತವಾಹನ** ಶ್ವೇತವಾಹನ, ಅರ್ಜುನ.

**ಸಿದಿಗೆ** ಚಿತೆ, ನಿಸಿದಿಗೆ; ಚಟ್ಟ.

**ಸಿದುಗು** ಬಳಚು, ಬೆದಕು; ಹುಡುಕು.

**ಸಿದ್ದಾಯ** (ಸಿದ್ಧಾಯ), ಕಂದಾಯ, ಕಪ್ಪ.

**ಸಿದ್ದಿ** ಹಬಸಿ, ಎಬಿಸೀನಿಯ ದೇಶದ.

**ಸಿದ್ದಿಗೆ** ಚರ್ಮಪಾತ್ರೆ.

**ಸಿದ್ದೆ** (ಸಿದ್ದಿ), ದ್ರವದ ಒಂದು ಅಳತೆ.

**ಸಿದ್ಧ** ತಯಾರಿ; ರಚನೆ, ನಿರ್ಮಾಣ; ನುರಿತವ, ನಿಪುಣ; ಯೋಗಿಗಳ ಒಂದು ವರ್ಗ.

**ಸಿದ್ಧಪುರುಷ** ಅತಿಮಾನುಷ ಶಕ್ತಿಗಳಿಸಿದವ.

**ಸಿದ್ಧರಸ** ಕೀಳು ಲೋಹಗಳನ್ನು ಚಿನ್ನ ಮಾಡುವ ಒಂದು ರಸ; ಪಾದರಸ, ಪಾರಜ.

**ಸಿದ್ಧಾರ್ಥ** ಗೌತಮಬುದ್ಧ; ಒಬ್ಬ ಅರ್ಹಂತ.

**ಸಿದ್ಧಾಂತ** ತತ್ವ, ನಿರ್ಣಯ, ನಿರ್ಣಯಕ್ಕೆ ಬಂದ ವಾದ.

**ಸಿದ್ಧಾಂತಿ** ತೀರ್ಮಾನಕ್ಕೆತರುವವ; ವಿಜ್ಞಾನಿ; ಜ್ಯೋತಿಷಿ, ಜೋಯಿಸ.

**ಸಿದ್ಧಿ** ಪಡೆಯುವಿಕೆ; ಯೋಗವಿಶೇಷ; ಅಷ್ಟ ಸಿದ್ಧಿಗಳು; ಮೋಕ್ಷ; ಸಂಪತ್ತು; ಪ್ರಭು, ಉತ್ಸಾಹ.

— ಗಣೇಶ ಸಿದ್ಧಿಯೊಡೆಯ ಗಣಪತಿ.

**ಸಿದ್ಧಿಸು** ಫಲಕ್ಕೆ ಬರು, ಆಗು, ಕೈಗೂಡು, ನೆರವೇರು.

**ಸಿಧ್ಮ** ತಿಬ್ಬು, ಚಿಬ್ಬಲು.

**ಸಿನೀವಾಲಿ** ಚಂದ್ರನು ಕಾಣಿಸುವ ಅಮಾವಾಸ್ಯೆ.

**ಸಿಪಾಯಿ** ಸೈನಿಕ, ಕಾದಾಳು; ಪೇದೆ,ಚಾಕರ, ಆಳು, ಜವಾನ.

**ಸಿಪಿಲೆ** ಮಡಿವಾಳ ಹಕ್ಕಿ.

**ಸಿಪ್ಪು** ಸಿಂಪು, ಚಿಪ್ಪು.

**ಸಿಪ್ಪೆ** ತೊಗಟೆ, ಓಡು, ಹೊಟ್ಟು; ಚರ್ಮ.

**ಸಿಬರು** ಸಿಗುರು, ಸಿವುರು, ತುಂತುರು; ತೀರ ಸಪುರವೂ ಮೊನಚೂ ಆದ ನಾರು.

**ಸಿಬಂದಿ** (ಸಿಬ್ಬಂದಿ), ನೌಕರ ವರ್ಗ; ಆಳುಗಳ ಕೂಟ.

**ಸಿಬ್ಬು** ಚಿಬ್ಬು, ಒಂದು ಚರ್ಮವ್ಯಾಧಿ.

**ಸಿಮಿಗರೆ** ಸಿಮಿಸಿಮಿ ಎಂದು ಉರಿ.

**ಸಿರ** (ದ್ಭ) ಶಿರ (ಸಂ), ತಲೆ.

**ಸಿರಿ** (ದ್ಭ) ಶ್ರೀ (ಸಂ), ಐಶ್ವರ್ಯ; ಲಕ್ಷ್ಮಿ; ಶೋಭೆ.

**ಸಿರಿಕರಣ** ಲೆಕ್ಕಪತ್ರ.

**ಸಿರಿಕಂಠ** (ದ್ಭ) ಶ್ರೀಕಂಠ (ಸಂ).

**ಸಿರಿಕಂಡ** (ದ್ಭ) ಶ್ರೀಖಂಡ (ಸಂ), ಮೊಸರು ಸಕ್ಕರೆಗಳ ಒಂದು ಖಾದ್ಯ, ಶ್ರೀಗಂಧ (ಸಂ).

**ಸಿರಿನರೆ** ಎಳೆ ವಯಸ್ಸಿನಲ್ಲಿ ಕೂದಲು ನರೆತುದು

**ಸಿರಿಮುಡಿ** ಸುಂದರವಾದ ತುರುಬು; ಚೆಲುವಿನ ತಲೆಕಟ್ಟು.

**ಸಿರಿಯೋಡು** ಹುರಿಯೋಡು, ಹುರಿಹಂಚು.

**ಸಿರಿವಾಯಿ** ತುಟಹರಿದ ಬಾಯಿ.

**ಸಿರಿಸ** (ದ್ಭ) ಶಿರೀಷ (ಸಂ), ಬಾಗೆಮರ.

**ಸಿಕ್ರಾ** ಸಾರಾಯಿ,ಸೆರೆ,ಬಟ್ಟ ಇಳಿಸಿದ ಮದ್ಯ.

**ಸಿರ್ಕು** (ಸಿಕ್ಕು).

**ಸಿಲುಕು** ಸಿಕ್ಕು; ಸೇರಿಸು, ಜತೆಗೊಳಿಸು; ಶಿಲ್ಕು, ಶೇಷ, ಉಳಿದ ಹಣ; ಬಾಕಿ.

**ಸಿಲುಬೆ** ಯೇಸುವನ್ನು ಕೊನೆಗೊಳಿಸಿದ ಮರದ ಒಂದು ಬಂಧ.

**ಸಿಲೆ** (ದ್ಭ) ಶಿಲಾ (ದ್ಭ) ಅತಿ, ಪಾದೆಕಲ್ಲು.

**ಸಿಲ್ಕು** (ಶಿಲ್ಕು), ಬಾಕಿ; ಉಳಿದುದು; ಜಾತಾ ಬಾಕಿ, ಉಳಿಮೆ.

**ಸಿವಂಗಿ** ಕುರ್ಕ, ನಾಯಿಚಿರತೆ, ಕಿರುಬ, ಕೊಡಸಿಂಗಿ, ಕುಂಟುಸಿಂಗ.

**ಸಿವಡು** ದುಂಡಗಿನ ಪಾತ್ರೆಗಳು ಬೀಳದಂತೆ ಅವುಗಳ ಕೆಳಕ್ಕಿರಿಸುವ ದಿಂಬು, ಇರಿಕೆ.

**ಸಿವದಿಡು** 'ಶಿವಧೋ' ಎಂದು ಕೂಗಿಕೊಳ್ಳು.

**ಸಿಹಿ** ಸವಿಯಾದುದು, ರುಚಿ, ಮಧುರ.

**ಸಿಳ್ಳು** ಬಿಗಿಲು, ಸೀಟಿ, ಊದುಗೊಳವೆ; ಇವುಗಳಿಂದ ಅಥವಾ ಬಾಯಿಂದ ಸಿಳ್ಳೆಂದು ಹೊರಟ ಸದ್ದು; ಸಿಡಿಲು.

**ಸಿಳ್ಳೆ** ಕವೆ, ಕವಲು, ಕವರು; ಸೀಟಿ.

**ಸಿಂಗ** (ದ್ಭ) ಶೃಂಗ (ಸಂ), ಕೊಂಬು, ಕೋಡು; ಬೆಟ್ಟದ ತುದಿ, ಶಿಖರ; ಸಿಂಹ.

**ಸಿಂಗರ** (ಸಿಂಗಾರ) (ದ್ಭ), ಶೃಂಗಾರ (ಸಂ), ಅಲಂಕಾರ.

**ಸಿಂಗವಣೆ** ಸಿಂಹಾಸನ.

**ಸಿಂಗಳ** ಸಿಂಹಳ ದ್ವೀಪ.

**ಸಿಂಗಳೀಕ** (ಸಿಂಗಲೀಕ), ಸಿಂಗಣಿಕ, ಕೇಸರವುಳ್ಳ ಕರಿಯ ಬಣ್ಣದ ಕೋತಿ.

**ಸಿಂಗಾಡಿ** ಬಿಲ್ಲು; ಮನ್ಮಥನ ಬಿಲ್ಲು.

**ಸಿಂಗಾರ** (ಹಿಂಗಾರ), ಅಡಕೆಯ ಹೂ; ಅಲಂಕಾರ, ಆಭರಣ.

**ಸಿಂಗಿ** (ದ್ಭ) ಶೃಂಗಿ, ಕೊಂಬುಳ್ಳುದ್ದು, ಕುರಿ; ಒಬ್ಬ ಮುನಿ; ಸಿಂಹ.

**ಸಿಂಘಾಣ** ಕಬ್ಬಿಣದ ತುಕ್ಕು, ಜಂಗು.

**ಸಿಂಜಾರವ** ಮಧುರ ಧ್ವನಿ.

**ಸಿಂಜಿನಿ** ಬಿಲ್ಲಹಗ್ಗ, ಹೆದೆ, ಬೇವು.

**ಸಿಂಡು** ನಾತಬರುವದು, ನಾರುವುದು.

**ಸಿಂದಿ** ಪಾತ್ರ ಇರಿಸಲು ಮಾಡಿದ ಇರಿಕೆ; ಸುರಳಿ, ಸಿವಡು.

**ಸಿಂದು** ತೇಯು, ತೀಡು, ತಿಕ್ಕು; ನಾಶಪಡಿಸು, ಸಮೆಯಿಸು.

**ಸಿಂದುರ** ಪರಾಗ, ಹೂವಿನ ಹುಡಿ; ಸಿಂಧುರ (ಸಂ), ಒಂದು ಬಗೆಯ ಕೆಂಪು ಪುಡಿ.

**ಸಿಂಧ** ಬಾವುಟ, ಪತಾಕೆ, ಪಟ.

**ಸಿಂಧು** ಸಮುದ್ರ; ಒಂದು ಮಹಾ ನದಿ; ಒಂದು ದೇಶ; ಮದಜಲ.

**ಸಿಂಧುರ** ಮದಜಲ ಉಳ್ಳುದು, ಆನೆ.

**ಸಿಂಧೂರ** ಒಂದು ಜಾತಿಯ ಕೆಂಪು ಬಣ್ಣ, ಒಂದು ಸೀಸಾಮ್ಲ; ಚಂದ್ರ; ಆನೆ.

**ಸಿಂಪಡಿಸು** (ಸಿಂಪಿಸು), ಚಿಮುಕಿಸು.

**ಸಿಂಪಿಗ** (ಸಿಂಪಿ), ಶಿಲ್ಪಕ (ಸಂ); ಚಿಪ್ಪಿಗ, ಹೊಲಿಗೆಯವ, ದರ್ಜಿ.

**ಸಿಂಪಿಸು** ಚಿಮುಕಿಸು.

**ಸಿಂಪು** ಚಿಪ್ಪು, ಕಪ್ಪೆಚಿಪ್ಪು; ಮುತ್ತಿನ ಚಿಪ್ಪು.

**ಸಿಂಬಳ** ಮೂಗಿಂದ ಹೊರಡುವ ಕೊಳೆ.

**ಸಿಂಬಿ** ಇರಿಕೆ, ಪಾತ್ರದ ತಳಕ್ಕೆ ಇಡುವ ಸುರುಳಿ; ಒಡೆದುದು; ಜಜ್ಜಿದ ವಸ್ತು.

**ಸಿಂಹ** ಕೇಸರಿ, ಸಿಂಗ (ದ್ಭ); ಶ್ರೇಷ್ಠ.

**ಸಿಂಹಲ** (ಸಿಂಹಳ), ಸಿಲೋನ್ ದ್ವೀಪ.

**ಸಿಂಹಾವಲೋಕನ** ಸಿಂಹದಂತೆ ಆಗಾಗ ಹಿಂದೆ ತಿರುಗಿ ನೋಡುವುದು, ಗಂಭೀರವಾದ ಹಿನ್ನೋಟ.

ಸಿಂಹಾಸನ ಪಟ್ಟವಣೆ, ರಾಜಾಸನ, ಗದ್ದುಗೆ.
ಸಿಂಹಿ ಹೆಣ್ಣು ಸಿಂಹ, ಸಿಂಗಿ (ದ್ಭ).
ಸಿಂಹಿಕೆ ಕಶ್ಯಪನ ಒಬ್ಬಳು ಹೆಂಡತಿ; ರಾಹುವಿನ ತಾಯಿ.
ಸೀ (ಸೀಯು), ಸೀದುಹೋಗು, ಸುಡು; ಅಪೇಕ್ಷಿಸು.
ಸೀಕರಣೆ ಒಂದು ಬಗೆ ಸವಿ ತಿಂಡಿ; ರಸಾಯನ.
ಸೀಕರಿ ಸುಟ್ಟ ಸ್ಥಿತಿ.
ಸೀಕು ಸೀದುದು; ಸುಟ್ಟುದು; ಕರಟಿದುದು; ಕಾಯಿಲೆ, ಬೇನೆ, ಜಾಡ್ಯ, ಜಡ್ಡು.
ಸೀಗಡಿ (ಸಿಗಡಿ), ಒಂದು ಬಗೆ ಪುಟ್ಟಮೀನು.
ಸೀಗುರಿ ಒಂದು ಬಗೆ ಚಾಮರ, ಸೂರ್ಯಪಾನು; ಬಳುಕು, ಮೂಲು, ಪಾಲು.
ಸೀಗೆ ಎಣ್ಣೆ ಜಿಡ್ಡು ತೆಗೆಯಲು ಬಳಸುವ ಒಂದು ಕಾಯಿ.
ಸೀಗೆಹುಣ್ಣಿಮೆ ಆಶ್ವಿನೀ ಮಾಸದ ಹುಣ್ಣಿಮೆ.
ಸೀಟು (ಸಿಂಟು), ಅಂಡುಸರಿಸು, ಜಾರು; ಉಜ್ಜು.
ಸೀತರ್ (ಸೀತರು), ಮುನಿಸು, ಸಿಟ್ಟು.
ಸೀತಳ (ಸೀತಲ), ತಂಪಾದುದು, ತಂಪು.
ಸೀತಾ (ಸೀತೆ), ಜನಕರಾಜನಿಗೆ ಒಂದು ಹೊಲದ ನೇಗಿಲಿನ ಸಾಲಿನಲ್ಲಿ ದೊರೆತ ಹೆಣ್ಣು ಕೂಸು. ಈಕೆಯನ್ನು ಜನಕನು ಪಾಲಿಸಿದನು. ಮುಂದೆ ಸ್ವಯಂವರದಲ್ಲಿ ರಾಮನಿಗೆ ವಿವಾಹಮಾಡಿಕೊಟ್ಟನು. ರಾವಣನು ಸೀತೆಯನ್ನು ಅಪಹರಿಸಿದ ಕಥೆ, ರಾಮಾಯಣದ ಮುಖ್ಯ ವಿಷಯವಾಗಿದೆ.
ಸೀತಾಫಲ ಒಂದು ಹಣ್ಣು, ಸೀತಾಪೇರಳ.
ಸೀತಾಳೆ (ಸೀತಾಳಿ), ಒಂದು ಬಗೆ ತಾಳೆ.
ಸೀಧು ಮದ್ಯ, ಹೆಂಡ.
ಸೀನ್ (ಸೀನು), ಶ್ವಾಸದ್ವಾರದಲ್ಲಿ ಕಸ ಕುಳಿತಾಗ ಹೊರಡುವ ಜೋರಿನ ಶ್ವಾಸ.
ಸೀಬೆ ಪೇರಳೆ, ಚೇಪೆ ಹಣ್ಣು, ಪೇರಿಳೆ.
ಸೀಮಂತ ಬೈತಲೆ; ಪ್ರಥಮ ಗರ್ಭಿಣಿಯಾದಾಗ ನಡಸುವ ಒಂದು ಉಪಚಾರ.
ಸೀಮಂತಪುತ್ರ ಹಿರಿಯ ಮಗ.
ಸೀಮಂತಿನಿ ಮುತ್ತೈದೆ, ಸ್ತ್ರೀ, ಐದೆ.
ಸೀಮೆ ಗಡಿ, ಎಲ್ಲೆ; ಪ್ರದೇಶ, ಜಿಲ್ಲೆ.
ಸೀಮೆಕೋಳಿ ಟರ್ಕಿ ಕೋಳಿ.
ಸೀಮೆಯೆಣ್ಣೆ ಚಿಮಣಿ ಎಣ್ಣೆ, ಕಲ್ಲೆಣ್ಣೆ.
ಸೀಯಾಳ ಎಳನೀರು.
ಸೀರ್ (ಸೀರು), ಸಿಡಿ; ಸಿಟ್ಟಾಗು; ನೇಗಿಲು; ಹೇನಿನ ಮೊಟ್ಟೆ, ಚೀರು, ತೆಳ್ಳಗಿನ.
—ಅಲು ನೀರಿನ ಸಿಡುಕಲು, ಸಿಡಿದ ನೀರು, ನೀರಿನ ತುಂತುರು.
ಸೀರ ನೇಗಿಲು; ಸೂರ್ಯ.
ಸೀರಣ ಬಾಣ; ಉಳಿ.
ಸೀರು (ಚೀರು ಈರು), ಹೇನಿನ ಮೊಟ್ಟೆ; ಸಿಡಿ; ದುಃಖದಲ್ಲಿ ಮಡಿ.
ಸೀರೆ ಸ್ತ್ರೀಯರು ಉಡುವ ಬಟ್ಟೆ; ಚೀರ (ಸಂ).
ಸೀರ್ಪನಿ ಸೀರಿದ ಹನಿ, ಸಣ್ಣ ಹನಿ.
ಸೀರ್ಪುಲ್ ಸಣ್ಣ ಹುಲ್ಲುಕಡ್ಡಿ.
ಸೀವಟಿ ಮತ್ಸರ, ವಿರೋಧ; ವೆಚ್ಚ.
ಸೀವನ ಹೊಲಿಗೆ.
ಸೀವರ ತಿರಸ್ಕಾರ; ಜುಗುಪ್ಸೆ, ಅಸಹ್ಯ, ಹೇಸಿಕೆ.
ಸೀವು ಸುಡು, ಸೀ, ಸೀಯು; ಅಲಂಕರಿಸಿಕೊಳು
ಸೀಸ ಒಂದು ಬಗೆಯ ಛಂದಸ್ಸು; ಸೀಸಕ, ಒಂದು ಲೋಹ; ಸೀಸೆ, ಬಾಟ್ಲಿ, ಕುಪ್ಪಿ.
ಸೀಸಕ (ದ್ಭ) ಶೀರ್ಷಕ (ಸಂ), ಉಕ್ಕಿನ ಕುಲಾವಿ; ಮುಂಡಾಸ; ಕಿರೀಟ.
ಸೀಸವಾಳು ಸೀಸದ ಖಡ್ಗ.
ಸೀಳ್ (ಸೀಳು), ಸಿಗಿ, ಹರಿ, ಸೀಳುಮಾಡು; ಹೋಳು ಮಾಡು, ನೀಳಕ್ಕೆ ಹರಿ.
ಸುಕಾಲಿ ಲಮಾಣಿ, ಲಂಬಾಣಿ.
ಸುಕುಮಾರ ಚೆಲುವ, ಕೋಮಲಕಾಯ; ವಾಗ್ಭೂಷಣದ ಒಂದು ಗುಣ.

**ಸುಕೃತ** ಪುಣ್ಯ; ಧರ್ಮ; ಶುಭ; ಒಳ್ಳೆಯ ಕೆಲಸ

**ಸುಕ್ಕು** ಮುದುಡು, ನೆರಿಗೆ, ನಿರಿಗೆ; ಚರ್ಮದ ಮಡಿತೆ.

**ಸುಖ** ಸೊಗ (ದ್ಭ), ಆನಂದ, ಆಹ್ಲಾದ; ತೋಷ, ಅನುಕೂಲ.

**ಸುಖನಾಸಿ** ದೇವರ ಗುಡಿಗಳಲ್ಲಿ ಗರ್ಭಗೃಹದ ಮುಂದಿನ ಕೋಣೆ, ಮುಖ ಮಂಟಪ.

**ಸುಖಿ** ಸುಖವುಳ್ಳವ, ಶಾಂತಿಆನಂದಗಳುಳ್ಳವ.

**ಸುಗತಿ** ಒಳ್ಳೆಯ ಗತಿ, ಸದ್ಗತಿ, ಪರಮ ಗತಿ.

**ಸುಗಮ** ಸುಲಭ; ಸುಲಭವಾಗಿ ತಿಳಿಯುವ; ಪ್ರವೇಶಕ್ಕೆ ಸುಲಭವಾದ.

**ಸುಗಂಧ** ಪರಿಮಳ.

**ಸುಗಂಧಿ** (ಸುಗಂಧಿಕ), ತಾವರೆ; ಒಂದು ಪುಷ್ಪ, ಸೂರಲುಹೂವು; ಪರಿಮಳವುಳ್ಳದ್ದು

**ಸುಗಿ** ಅಂಜು, ಹೆದರು; ಹರಿ, ಸೀಳು; ಸುಲಿ, ದೋಚು, ಬಾಚು.

**ಸುಗುಡಿ** ಬಂಜೆ, ಗೊಡ್ಡಿ.

**ಸುಗುಡು** ಆಶೆ, ಮೋಹ; ಅಪೇಕ್ಷೆ.

**ಸುಗುಣ** ಸದ್ಗುಣ, ಒಳ್ಳೆಯ ಶೀಲ.

**ಸುಗ್ಗಿ** ಹೋಳಿ ಹಬ್ಬ; ಪೈರು ಕೈಗೆ ಬರುವ ಕಾಲ; ಚೈತ್ರಾರಂಭ; ಹಬ್ಬ.

**ಸುಗ್ರೀವ** ಕಿಷ್ಕಿಂಧೆಯ ಕಪಿರಾಜನಾದ ವಾಲಿಯ ತಮ್ಮ. ರಾಮನಿಗೆ ಈತನು ತನ್ನ ಕಪಿಸೇನೆಯ ಬೆಂಬಲ ಕೊಟ್ಟು ಸಹಾಯ ಮಾಡಿದನು.

— **ಆಜ್ಞೆ** ಬಿಗಿಯಾದ ಆಜ್ಞೆ, ಕಟ್ಟಪ್ಪಣೆ.

**ಸುಚರಿತೆ** ಒಳ್ಳೆಯ ಶೀಲವುಳ್ಳವಳು, ಒಳ್ಳೆಯ ಚಾರಿತ್ರ್ಯ.

**ಸುಜನ** ಒಳ್ಳೆಯ ಮನುಷ್ಯ.

**ಸುಟಿ** ಚುರುಕು; ಚತುರ; ಹಚ್ಚಗಿನ.

**ಸುಟ್ಟು** ಬೆರಳಿಂದ ತೋರಿಸು.

**ಸುಟ್ಟುರೆ** ಸುಂಟರ ಗಾಳಿ, ಸುಳಿಗಾಳಿ.

**ಸುಡಾಳ** ಒಳ್ಳೆಯ ಕಾಂತಿ.

**ಸುಡು** ಹೊತ್ತು, ಉರಿ; ಬೆಂಕಿಯ ಕಾವು; ತಗುಲು; ಹುರಿ; ದಹಿಸು.

— **ಕಾಡು** ಮಸಣ, ಶ್ಮಶಾನ.

**ಸುಣ್ಣ** (ದ್ಭ) ಚೂರ್ಣ (ಸಂ), ಚಿಪ್ಪು ಸುಟ್ಟು ಮಾಡುವ ಒಂದು ವಸ್ತು, ಕ್ಷಾರ.

**ಸುತ** ಮಗ.

**ಸುತರಾಂ** ಎಂದೂ, ಎಂದೆಂದೂ; ಯಾವ ವಿಧದಿಂದಲೂ; ಏನೇನೂ, ಅತಿಯಾಗಿ.

**ಸುತಲ** ಒಂದು ಅಧೋಲೋಕ.

**ಸುತಿ** (ದ್ಭ) ಶ್ರುತಿ (ಸಂ); ಸ್ತುತಿ (ಸಂ); ಮೋರಿ.

**ಸುತೆ** ಮಗಳು.

**ಸುತ್ತ** ನಾಲ್ಕು ಕಡೆಯಲ್ಲಿ.

— **ಮುತ್ತ** ನಾಲ್ಕುಕಡೆಗೂ; ಆಸುಪಾಸು, ಆಜುಬಾಜು.

**ಸುತ್ತಾಲೆ** ಪಾಗಾರ, ಪೌಳಿ, ಆವಾರ.

**ಸುತ್ತಿಗೆ** (ಸುತ್ತಿ), ಕೊದಂಟ, ಕೊಡತಿ.

**ಸುತ್ತು** ಆವರಿಸು; ಸುತ್ತಲು ಬರು; ಸುತ್ತತರು; ಸುರುಳಿಮಾಡು; ಸುಳಿ.

— **ವಳಯ** ಸುತ್ತುಮುತ್ತಲೂ.

**ಸುದತಿ** ಒಳ್ಳೆಯ ಹಲ್ಲುಳ್ಳವಳು; ಸುಂದರಿ; ಚೆಲುವೆ, ಸ್ತ್ರೀ.

**ಸುದರ್ಶನ** ವಿಷ್ಣುವಿನ ಕೈಯ ಚಕ್ರಾಯುಧ; ನೋಟಕ್ಕೆ ಚೆನ್ನಾದುದು.

— **ಪಾಣಿ** ಸುದರ್ಶನ ಕೈಯಲ್ಲಿ ಉಳ್ಳವ, ಕೃಷ್ಣ.

**ಸುದಾಮ** ಕೃಷ್ಣನ ಬಾಲ್ಯಸ್ನೇಹಿತನಾದ ಒಬ್ಬ ಬಡ ಬ್ರಾಹ್ಮಣ, ಕುಚೇಲ; ಒಂದು ಪರ್ವತ; ಒಬ್ಬ ಗೋಪ; ಸಮುದ್ರ; ಐರಾವತ; ಬಡವ.

**ಸುದಿ** ಶುಕ್ಲಪಕ್ಷ.

**ಸುದಿನ** ಒಳ್ಳೆಯ ದಿನ, ಶುಭ ದಿವಸ.

**ಸುದೈವ** ಪುಣ್ಯ, ಭಾಗ್ಯ; ಅದೃಷ್ಟ.

**ಸುದ್ದಿ** ವಾರ್ತೆ, ವರ್ತಮಾನ, ಒಸಗೆ; ವಿಷಯ, ಪ್ರಸ್ತಾವ; ತಂಟೆ, ಗೊಡವೆ; ಉಸಾಬರಿ.

ಸುಧನ್ವ ಒಳ್ಳೆಯ ಬಿಲ್ಲುಗಾರ; ಅನಂತನೆಂಬ ಸರ್ಪ; ವಿಶ್ವಕರ್ಮ; ಚಂಪಕಾ ನಗರದ ಒಬ್ಬ ಅರಸು.
ಸುಧರ್ಮ ದೇವಸಭೆ; ಒಳ್ಳೆಯ ಧರ್ಮ.
ಸುಧಾ ಸುಣ್ಣ; ಅಮೃತ.
ಸುಧಾಕರ ಚಂದ್ರ.
ಸುಧಾರಣೆ ತಿದ್ದುಪಾಟು, ಅಭಿವೃದ್ಧಿ; ಸಂಸ್ಕಾರ.
ಸುಧಾರಿಸು ನಿರ್ವಹಿಸು; ಸಮಜಾಯಿಸು; ಸಮಾಧಾನಪಡಿಸು; ಅಭಿವೃದ್ಧಿಗೆ ತರು; ಸಂಸ್ಕರಿಸು, ತಿದ್ದು.
ಸುಧಾಂಶು ಚಂದ್ರ.
ಸುಧೀ ಒಳ್ಳೆಯ ಬುದ್ಧಿವಂತ, ಪಂಡಿತ.
ಸುಧೆ (ಸುಧಾ), ಸೊದೆ (ದ್ಭ), ಅಮೃತ.
ಸುನಾಯಾಸ ಅನಾಯಾಸ; ಸಲೀಸು, ಸುಲಭ.
ಸುನೀತಿ ಉತ್ತಾನಪಾದರಾಯನ ಹಿರಿಯ ಹೆಂಡತಿ, ಧ್ರುವನ ತಾಯಿ; ಒಳ್ಳೆಯ ನೀತಿ.
ಸುನ್ನಿ ಮುಸಲ್ಮಾನರಲ್ಲಿನ ಒಂದು ಪಂಗಡ; ಒಬ್ಬ ಮುಸಲ್ಮಾನ ಕವಿ.
ಸುಪರ್ಣ ಎಲೆಯುಳ್ಳುದು; ನಾಗಕೇಸರ; ದೇವತೆ; ಬಾಣ.
ಸುಪ್ತ ಮಲಗಿದ, ನಿದ್ರಿಸಿದ.
ಸುಪ್ತಿ ನಿದ್ರೆ; ತೂಕಡಿಕೆ, ಜೋಮು.
ಸುಪ್ಪತ್ತಿಗೆ ಮಗ್ಗಲು ಹಾಸಿಗೆ; ತಲ್ಪ.
ಸುಪ್ರತಿಷ್ಠೆ ಒಳ್ಳೆ ಗೌರವ.
ಸುಪ್ರತೀಕ ಸುಂದರ; ಈಶಾನ್ಯ ದಿಗ್ಗಜ.
ಸುಪ್ರಭಾತ ಒಳ್ಳೆಯ ಮುಂಜಾನೆ; ಪ್ರಾತಃಕಾಲದ ಬಯಕೆ.
ಸುಪ್ರಸನ್ನ ಸಂತುಷ್ಟ, ಸಂಪ್ರೀತ.
ಸುಬುದ್ಧಿ ಒಳ್ಳೆಯ ಬುದ್ಧಿ ಉಳ್ಳವ.
ಸುಬೇದಾರ ಒಬ್ಬ ಮುಲ್ಕಿ ನೌಕರ; ದಂಡಿನ ನೌಕರ, ಪೋಲಿಸು ನೌಕರ.
ಸುಬ್ಬಲೆ ಸೋಭಾನೆ ಹಾಡು, ಸ್ತ್ರೀಯರು ಮದುವೆ ಮುಂಜಿಗಳಲ್ಲಿ ಹಾಡುವ ಹಾಡು.
ಸುಬ್ರಹ್ಮಣ್ಯ ಒಂದು ಕ್ಷೇತ್ರ; ಕಾರ್ತಿಕೇಯ, ಷಣ್ಮುಖ, ಕುಮಾರಸ್ವಾಮಿ.
ಸುಭಗ ಸೊಬಗ (ದ್ಭ), ಚೆಲುವ; ಯೋಗ್ಯ, ಸಂಭಾವಿತ.
ಸುಭಟ ವೀರ, ಪರಾಕ್ರಮಿ, ಕಾದಾಳು.
ಸುಭದ್ರಾ (ಸುಭದ್ರೆ), ಬಲರಾಮ ಕೃಷ್ಣರ ತಂಗಿ, ಅರ್ಜುನನ ಹೆಂಡತಿ.
ಸುಭಾಷಿತ ಒಳ್ಳೆಯ ಮಾತುಗಾರ; ಉತ್ತಮ ಮಾತು, ನೀತಿವಚನ; ಪದ್ಯ.
ಸುಭಿಕ್ಷೆ ಕ್ಷಾಮಡಾಮರವಿಲ್ಲದ ಕಾಲ; ಧನ ಧಾನ್ಯದ ಸಮೃದ್ಧಿ.
ಸುಮ (ಕುಸುಮ), ಹೂ.
ಸುಮತಿ ಒಳ್ಳೆಯ ಬುದ್ಧಿಯಿರುವವ, ಒಳ್ಳೆ ಬುದ್ಧಿ ಇರುವವಳು.
ಸುಮನ (ಸುಮನಸ), ಪುಷ್ಪ; ನಿರ್ಮಲಚಿತ್ತ; ದೇವತೆ; ಐಶ್ವರ್ಯ.
ಸುಮನೋರತ ಒಳ್ಳೆ ಅಭೀಷ್ಟ; ವಿದ್ವಾಂಸರಲ್ಲಿ ಪ್ರೀತಿಯುಳ್ಳವ.
ಸುಮನೋಹರ ಸುಂದರವಾದ; ರಾಕ್ಷಸ; ಹೂವಾಡಿಗ, ಹೂಗಾರ.
ಸುಮಂಗಲೆ ಮುತ್ತೈದೆ, ಐದೆ, ಗಂಡನುಳ್ಳವಳು; ಶುಭಲಕ್ಷಣೆ.
ಸುಮಾರು ಬಹಳ, ತುಂಬ; ಅಂದಾಜು, ತಕ್ಕ ಮಟ್ಟಗೆ; ಹೆಚ್ಚುಕಡಮೆ; ಕಡಮೆತರದ, ಸಾಮಾನ್ಯ.
ಸುಮಾಲಿ ಒಳ್ಳೆಯ ಹಾರ ಧರಿಸಿದವ; ರಾವಣನ ತಾಯಿ ಕೈಕಸೆಯ ಒಬ್ಬ ಸಂಬಂಧಿ.
ಸುಮಿತ್ರಾ (ಸುಮಿತ್ರೆ), ಲಕ್ಷ್ಮಣನ ತಾಯಿ; ದಶರಥನ ಮೂರನೆಯ ಹೆಂಡತಿ; ಸೂರ್ಯ
ಸುಮುಖ ಒಳ್ಳೆಯ ಮುಖವುಳ್ಳವ, ಗಣಪತಿ; ಪಂಡಿತ, ವಿದ್ವಾಂಸ.

ಸುಮ್ಮಗೆ(ಸುಮ್ಮನೆ),ಬರಿದೆ,ಏನೂ ಮಾಡದೆ, ಕೆಲಸವಿಲ್ಲದೆ.
ಸುಮ್ಮಾನ ಆನಂದ, ಸಂತೋಷ.
ಸುಯ್ ಉಸಿರುಬಿಡು; ದುಃಖದಿಂದ ಉಸಿರಾಡಿಸು.
—ಲು ಉಸಿರು, ನಿಟ್ಟುಸಿರು.
ಸುಯೋಧನ ದುರ್ಯೋಧನ, ಕೌರವ.
ಸುಯ್ಗಂಪು ಶ್ವಾಸದ ಪರಿಮಳ.
ಸುಯ್ದಾನ ರಕ್ಷಣೆ, ಕಾವಲು; ಜಾಗ್ರತೆ.
ಸುಯ್ದಾನಿ ಜಾಗ್ರತೆಯುಳ್ಳವ.
ಸುರ ದೇವ, ದೇವತೆ.
ಸುರಕರಿ ದೇವಗಜವಾದ ಐರಾವತ.
ಸುರಗಿ (ಛುರಿಕಾ), ಕತ್ತಿ; ಒಂದು ಪರಿಮಳದ ಹೂವಿನ ಮರ.
ಸುರಗುರು ದೇವತೆಗಳ ಗುರು, ಬೃಹಸ್ಪತಿ.
ಸುರಟಿ ಸೂರತ್ತಿನ, ಸೂರತಿ; ಮುದುರಿದ, ಸುರಳಿ ಸುತ್ತಿದ; ಒಂದು ಸಸ್ಯ; ಒಂದು ರಾಗ.
ಸುರಟು ಮುರುಟು, ಮುದುರು; ಸುರುಳಿಗೊಳ್ಳು.
ಸುರತ ರತಿಕೇಳಿ, ಕಾಮಚೇಷ್ಟೆ.
ಸುರಧನು ಸುರಚಾಪ, ಕಾಮನಬಿಲ್ಲು.
ಸುರನದಿ ದೇವನದಿ, ಗಂಗೆ.
ಸುರಪುರ ದೇವಲೋಕ, ಅಮರಾವತಿ; ದೇವನೂರು; ದಕ್ಷಿಣದ ಒಂದು ಊರು.
ಸುರಭಿ ಪರಿಮಳ; ಕಾಮಧೇನು; ವಸಂತಕಾಲ, ಮನೋಹರ; ದನ.
ಸುರಭೂ ಕಲ್ಪವೃಕ್ಷ.
ಸುರಮ (ಸುರಮಾವು), ಒಂದು ಧಾತು.
ಸುರಯಿ ಪುನ್ನಾಗ, ಸುರಗಿ ಗಿಡ.
ಸುರಲೋಕ ದೇವಲೋಕ.
ಸುರವಧು ದೇವತಾಸ್ತ್ರೀ.
ಸುರಹೊನ್ನೆ ಪುನ್ನಾಗ, ಸುರಪರ್ಣಿಕೆ.

ಸುರಳಿ ಸುರುಳಿ, ಸುತ್ತಿದುದು, ಉರುಟಾಗಿ ಮಾಡಿದುದು, ಉರುಟಾಗಿ ಮಡಿಸಿದುದು.
ಸುರಳಿತ ಸಲೀಸ, ತೊಡಕಿಲ್ಲದ, ಸುರಕ್ಷಿತ; ಸರಳ.
ಸುರಂಗ ಬಿಲ, ಬಿಲಮಾರ್ಗ; ಕೊರೆದು ತೂತುಮಾಡಿ ಸಿಡಿಮದ್ದು ಇರಿಸುವುದು; ಸಿಡಿಮದ್ದು.
ಸುರಾ (ಸುರೆ) ಹೆಂಡ, ಮದ್ಯ.
ಸುರಾಡ ಆಧಿಕ್ಯ, ಹೆಚ್ಚಾಗಿ.
ಸುರಿ ಸೋರು, ಧಾರೆಯಾಗಿ ಬೀಳು; ಹರಿ; ಸದ್ದಾಗುವಂತೆ ತಿನ್ನು, ಇಲ್ಲವೆ ಕುಡಿ; ಪೋಣಿಸು.
ಸುರಿಗೆ(ದ್ಭ)ಛುರಿಕಾ(ಸಂ),ಸಣ್ಣಕತ್ತಿ,ಚೂರಿ.
ಸುರು (ಶುರು), ಪ್ರಾರಂಭ; ಕತ್ತಿ, ಸುರಿಗೆ.
ಸುರುಚಿರ ಶೋಭೆಯುಳ್ಳ, ಕಾಂತಿಯುತ.
ಸುರುಟು ಮುದುರು, ಮುರುಟು; ಒಣಗಿ ಸುರಳಿಗೊಳ್ಳು.
ಸುರುಳ್ ಸುತ್ತಿಕೊಳ್ಳು; ಮುದುರು, ಮುದುಡು; ಬೆದರು.
ಸುರುಳಿ(ಸುರುಳೆ),ಸುತ್ತಿದುದು; ಮಡಿದುದು; ಇರಿಕೆ; ಸುಗಂಧಿ ಹೂ.
ಸುರ್ಕು (ಸುಕ್ಕು), ಬಾಡು; ಮುದುಡು; ಸುರುಟು; ನಿರಿಗೆ, ನೆರಿ, ನಿರಿ.
ಸುರ್ಬು ಅತಿಶಯ, ಹೆಚ್ಚಳ.
ಸುಲಕ್ಷಣ ಒಳ್ಳೆಯ ಲಕ್ಷಣ, ಶುಭ, ಮಂಗಳ.
ಸುಲಗ್ನ ಒಳ್ಳೆಯ ಮುಹೂರ್ತ.
ಸುಲಭ ಕಷ್ಟವಿಲ್ಲದೆ ಮಾಡಬಹುದಾದ.
ಸುಲಲಿತ ಮನೋಹರವಾದ, ಲಲಿತವಾದ.
ಸುಲಂಗಿ ಸಿಪ್ಪೆ ಸುಲಿಯುವ ಶೂಲ.
ಸುಲಿ ದೋಚು, ಕೊಳ್ಳೆಮಾಡು; ಸಿಪ್ಪೆ ತೆಗೆ; ಕಳಚು; ತಿಕ್ಕು; ದನ, ಗಂಟಿ, ಹಸು.
—ಗೆ (ಸುಲಿಹ), ಕೊಳ್ಳೆ, ದರೋಡೆ.
ಸುಲಿಪಲ್ ಚೊಕ್ಕವಾದ ಹಲ್ಲು.

**ಸುಲೋಚನ** (ಸುಲೋಚನಾ), ಇಂದ್ರಜಿತುವಿನ ಹೆಂಡತಿ;ಕನ್ನಡಕ,ಚಾಳೀಸು;ಒಳ್ಳೆಯ ಕಣ್ಣು; ಜಿಂಕೆ.

**ಸುಲ್ತಾನ** ಶಹಾ, ಮುಸಲ್ಮಾನ ದೊರೆ.

**ಸುವರ್ಣ** ಚಿನ್ನ, ಬಂಗಾರ; ಒಳ್ಳೆಯ ರೂಪುಳ್ಳದು; ಹಳದಿ, ಅರಸಿನ, ಒಂದು ಗಡ್ಡೆ.

**ಸುವಾರ** ಬಾಣಸಿಗ, ಅಡುಗೆಯವ.

**ಸುವಾರ್ತೆ** ಒಳ್ಳೆಯಸುದ್ದಿ, ಶುಭ ಸಮಾಚಾರ.

**ಸುವಾಸಿನಿ** ಗಂಡನುಳ್ಳವಳು, ಮುತ್ತೈದೆ, ಸುಮಂಗಲೆ; ಪರಿಮಳವುಳ್ಳದು.

**ಸುವಿಚಾರ** ಒಳ್ಳೆಯ ಯೋಚನೆ, ಯೋಗ್ಯ ಪ್ರಸ್ತಾವ.

**ಸುವ್ವಾಲೆ** (ಸುವ್ವಿ).

**ಸುವ್ವಿ** ಸುವ್ವಲೆ, ಸುವ್ವಾಲೆ, ಗರತಿ ಹಾಡು, ಸೋಭಾನೆ ಹಾಡು.

**ಸುಶಿಕ್ಷಿತ** ಚೆನ್ನಾಗಿ ವಿದ್ಯೆ ಪಡೆದವ; ತಿದ್ದಿದುದು, ನುರಿತವ; ಚತುರ.

**ಸುಶೀಲ** ಒಳ್ಳೆಯ ಶೀಲ; ಗುಣವಂತ,ಸದ್ಗುಣಿ.

**ಸುಶೀಲೆ** ಗುಣವತಿ.

**ಸುಶ್ರಾವ್ಯ** ಇಂಪಾದ;ಕೇಳಲು ಯೋಗ್ಯವಾದ.

**ಸುಶ್ರುತ** ವೈದ್ಯಶಾಸ್ತ್ರ ಬರೆದ ಒಬ್ಬ ಪಂಡಿತ; ಒಂದು ವೈದ್ಯ ಗ್ರಂಥ.

**ಸುಷಿರ** ರಂಧ್ರ; ತೂತುಳ್ಳದು.

**ಸುಷುಪ್ತಿ** ನಿದ್ರೆ.

**ಸುಷುಮ್ನ** ಇಡಾ ಪಿಂಗಳ ನಾಡಿಗಳ ನಡುವಣ ಒಂದು ನಾಡಿ.

**ಸುಷೇಣ** ರಾಮನ ಕಪಿಸೇನೆಯ ನಾಯಕ ಮತ್ತು ವೈದ್ಯ.

**ಸುಷ್ಮ** ಚೆನ್ನಾಗಿ; ಗಟ್ಟಿಯಾಗಿ.

**ಸುಸಿಲ್** ಸುರತ, ರತಿ, ಸಂಭೋಗ; ಉಷಃಕಾಲ, ಪ್ರಭಾತ.

**ಸುಸೂತ್ರ** ಚೆನ್ನಾಗಿ, ತೊಡಕಿಲ್ಲದೆ; ಸುಲಭವಾಗಿ, ಸಲೀಸು; ನಿರ್ವಿಘ್ನ, ನೇರ.

**ಸುಸ್ತು** ದಣಿವು, ಆಯಾಸ; ಸೋತು ಹೋದ ಸ್ಥಿತಿ, ಕಂಗಾಲು; ಆಲಸ್ಯ.

**ಸುಸ್ಥಿತಿ** ಒಳ್ಳೆಯ ಸ್ಥಿತಿ; ಆರೋಗ್ಯ, ಸುಖ.

**ಸುಹೃದ್** (ಸುಹೃತ್), ಸ್ನೇಹಿತ.

**ಸುಳಿ** ತಿರುಗು; ಸುತ್ತು ತಿರುಗು; ನೀರಿನ ತಿಗುರಿ; ಗೊತ್ತು, ಚಿಹ್ನೆ, ಕುರುಹು; ಅಲೆ; ಚಿಗುರು; ಕುಡಿ; ಮೃದುಗಾಳಿ.

—**ಕೊಳು** ಮೇಳಯಿಸು; ಸುತ್ತಿ ನಿಲ್ಲು.

—**ಗಾಳಿ** ಸುತ್ತುವ ಗಾಳಿ, ಸುಂಟರ ಗಾಳಿ.

**ಸುಳುವು** (ಸುಳಿವು), ಸದ್ದು, ಧ್ವನಿ; ಪತ್ತೆ; ಸೂಕ್ಷ್ಮ, ಯುಕ್ತ; ಸಂಚಾರ; ಗುರುತು.

**ಸುಳ್ಳು** ಮಿಥ್ಯ, ಅಬದ್ಧ, ಋಜುವಲ್ಲದುದು.

**ಸುಂಕ** (ದ್ಭ) ಶುಲ್ಕ (ಸಂ), ಕರ; ಉಕ್ಕಡದಲ್ಲಿ ಕೊಡುವ ತೆರಾನೆ, (ತೆರಾಣೆ).

**ಸುಂಕು** ರೋಗದ ಅಂಟು, ಸೋಂಕು; ಸುರುಳು, ನೆರಿಗೆ, ನಿರಿಗೆ.

**ಸುಂಟಗೆ** ಸುಟ್ಟ ಮಾಂಸ; ಮಾಂಸ; ಎದೆ ಗುಂಡಿಗೆ, ಹೃದಯ.

**ಸುಂಟರಗಾಳಿ** ಸುಳಿಗಾಳಿ, ದೆವ್ವಗಾಳಿ.

**ಸುಂಡಾಲ** (ದ್ಭ) ಶುಂಡಾಲ (ಸಂ), ಆನೆ.

**ಸುಂಡಿಲಿ** (ಸುಂಡ), ಉದ್ದ ಮೂತಿಯ ಇಲಿ, ಮೂಗಿಲಿ.

**ಸುಂಡು** ಆರುವಿಕೆ, ಬತ್ತುವಿಕೆ, ಇಂಗುವಿಕೆ.

**ಸುಂದ** ಒಬ್ಬ ರಕ್ಕಸ.

**ಸುಂದರ** ಚೆಲುವು; ಚೆಲುವಾದ; ಒಂದು ವೃತ್ತಜಾತಿ; ರಾಮಾಯಣದ ಒಂದು ಕಾಂಡ.

**ಸುಂದು** ಸುತ್ತು; ಸಂಭೋಗಮಾಡು, ಹಡು; ಸಂಭೋಗ, ರತಿ; ಮಬ್ಬು, ಮಂಕು.

—**ಹಿಡಿ** ಮಬ್ಬಾಗು.

**ಸೂಕರ** ಕಾಡು ಹಂದಿ; ಕುಂಬಾರ.

**ಸೂಕಳ** ತುಂಟ ಕುದುರೆ.

**ಸೂಕ್ತ** ಸುಂದರವಾಗಿ ಹೇಳಿದುದು; ಒಪ್ಪುವ ಮಾತು; ಮಂತ್ರಸಮೂಹ;ಯೋಗ್ಯ,ತಕ್ಕ.

ಸೂಕ್ತಿ ಒಳ್ಳೆಯ ಮಾತು; ಸೂಕ್ತವಾದುದು.
ಸೂಕ್ಷ್ಮ ತೀರ ಚಿಕ್ಕ; ತೀರ ಗೂಢ; ತೀರ ಗುಪ್ತ; ತೆಳ್ಳಗೆ; ಸಣ್ಣಗೆ; ಅಣು; ಪರಮಾತ್ಮ.
ಸೂಗ ಖೊಜ್ಜ, ನಪುಂಸಕ.
ಸೂಗರಿಸು 'ಸೂಸೂ' ಧ್ವನಿಮಾಡಿ ಹೊರಗೆ ಬರು; ತಲ್ಲಣಗೊಳ್ಳು, ಗಲಿಬಿಲಿಯಾಗು.
ಸೂಚ ಹುಲ್ಲಿನ ಊಬು.
ಸೂಚಕ ಸೂಚಿಸುವ; ತೋರಿಸುವ; ದೃಷ್ಟಿಗೆ ತರುವ; ಸೂಜಿ.
ಸೂಚನೆ ಸೂಚಿಸಿದುದು; ಗಮನಕ್ಕೆ ತರುವಿಕೆ; ಸಲಹೆ.
ಸೂಚಿ ಸೂಜಿಕೆ, ಸೂಚಿಸುವ ವಸ್ತು; ಸೂಜಿ.
ಸೂಜಿ (ಸಂ) ಸೂಚಿ (ದ್ಭ), ಹೊಲಿಯುವ ಕಿರಿ ದಬ್ಬಣ, ಸಣ್ಣ ಕಬ್ಬಿಣದ ಮುಳ್ಳು.
ಸೂಟಿ ವೇಗ, ತ್ವರೆ; ಉಪಾಯ; ರಜೆ.
ಸೂಟೆ (ಸೂಡೆ), ದೊಂದಿ; ಉರುವಲನ್ನು ಕಟ್ಟ ಮಾಡಿದ ದೀಪ.
ಸೂಡಗ ಬಳೆ; ಕಡಗ.
ಸೂಡು ಕಂತೆ, ಹುಲ್ಲಿನ ಕಟ್ಟು; ಹೂಮುಡಿ; ಸುಡುವಿಕೆ; ಉರಿಯಬಲ್ಲ ವಸ್ತುಗಳನ್ನು ಕಟ್ಟ ಮಾಡಿದ ಸೂಟೆ; ಕಟ್ಟು.
ಸೂತ ಹುಟ್ಟಿದ; ಬ್ರಾಹ್ಮಣಗೆ ಕ್ಷತ್ರಿಯನಲ್ಲಿ ಹುಟ್ಟಿದವ; ಸಾರಥಿ; ಭಟ್ಟಂಗಿ; ಒಬ್ಬ ಪುರಾಣಿಕ.
—ತನಯ ಸೂತನ ಮಗ, ಕರ್ಣ.
ಸೂತಕ ಹೊಲೆ, ಮೈಲಿಗೆ; ಸಾವು ಹುಟ್ಟುಗಳ ಹೊಲೆ.
ಸೂತಿ ಹೆರಿಗೆ.
ಸೂತಿಕಾ ಹೊಸತಾಗಿ ಹೆತ್ತವಳು, ಬಾಣಂತಿ.
ಸೂತ್ರ ದಾರ; ವ್ಯವಸ್ಥೆ, ನಿಯಮ; ಶಾಸ್ತ್ರ ತತ್ವವನ್ನು ಅಡಕವಾಗಿ ಸಂಕ್ಷೇಪವಾಗಿ ಹೇಳುವ ನಿಯಮ.
—ಕ ಪೋಣಿಕೆ, ದಾರ.
—ಧಾರ ನಾಟಕದಲ್ಲಿ ನಾಟಕ ನಡಸು ವಾತ; ಎಲ್ಲರನ್ನೂ ನಡೆಸುವವ; ನಾಯಕ.
ಸೂತ್ರಯಂತ್ರ ಚರಕ, ನೂಲುವ ರಾಟ.
ಸೂದ ಅಡುಗೆಯವ, ಬಾಣಸಿಗ; ಅಪರಾಧ, ಪಾಪ; ನಾಶ.
ಸೂದನ ಕೊಲೆ; ಕೊಲ್ಲುವವ; ಅಂಗಾರಕ.
ಸೂದನಿ ಹೂ.
ಸೂನಗಿ (ಸೂನಿಗೆ), ಸುಲಂಗಿ, ಒಂದು ಜಾತಿ ಶೂಲ; ತೆಂಗಿನಕಾಯಿ ಸಿಪ್ಪೆ ತೆಗೆವ ಶೂಲ.
ಸೂನು ಮಗ, ತನಯ.
ಸೂಪ (ಸೂವ), ಸಾರು; ತೊವ್ವೆ.
—ಕಾರ ಅಡುಗೆಯವ.
ಸೂಯ ದುಷ್ಪ್ರೇಮ, ಕೆಟ್ಟ ಪ್ರೀತಿ; ಸೋಮ ರಸ ಹಿಂಡುವುದು.
ಸೂರ (ದ್ಭ) ಸೂರ್ಯ (ಸಂ); ಹೇಡಿ; ತೋರಿ ಕೆಯ ವೀರ.
ಸೂರಣ (ಚೂರಣ), ಚೂರ್ಣ, ಪುಡಿ.
ಸೂರವೀದಿ (ದ್ಭ) ಸೂರ್ಯವೀಥಿ (ಸಂ), ಮೂಡು ಪಡುವಿಗೆ ಹಾಸಿರುವ ರಸ್ತೆ.
ಸೂರಾಡು ಊಟಮಾಡು, ಕೊಳ್ಳೆಹೊಡೆ.
ಸೂರಿ ವಿದ್ವಾಂಸ, ಪಂಡಿತ; ಒಂದು ಮುಳ್ಳಿನ ಗಿಡ.
ಸೂರು ಮಾಡು; ನೀರು ಬೀಳುವ ಧಾರೆ, ಸೂರಲು, ಮಾಡಿನ ಚುಂಚು.
—ಪಟ್ಟೆ ಲೋವೆ, ಹರಿಣಿ.
ಸೂರುಳ್ ಪ್ರತಿಜ್ಞೆ, ಶಪಥ, ಆಣೆ; ಮಾಡಿಂದ ಬೀಳುವ ನೀರು, ಮಾಡಿನ ನೀರಿನ ಓಣಿ; ಪ್ರತಿಜ್ಞೆ ಮಾಡು.
ಸೂರೆ ಲೂಟ, ಹಾವಳಿ, ದೋಚಿಕೊಳುವುದು.
ಸೂರೆಪಾನ (ಸೂರಿಪಾನು), ಒಂದು ಅಲಂ ಕಾರದ ಚಾಮರ.
ಸೂರ್ಯ ನೇಸರು, ಹೊತ್ತು; ವೈದಿಕ ಯು ಗದ ಮುಖ್ಯ ದೇವತೆ. ಸವಿತರ್, ಆದಿತ್ಯ

ಎಂಬ ಹೆಸರುಗಳಿಂದ ಪೂಜ್ಯನೆನಿಸುತ್ತಾನೆ. ಈತನು ಸಪ್ತ ಅಶ್ವಗಳನ್ನು ಹೂಡಿದ ರಥದಲ್ಲಿ ಚಲಿಸುವನೆಂದೂ ಇವನ ಮಡದಿ ಉಷೆಯೆಂದೂ ಅಶ್ವಿನೀ ದೇವತೆಗಳು ಮಕ್ಕಳೆಂದೂ ಕಥೆಯುಂಟು.

**ಸೂರ್ಯಸಿದ್ಧಾಂತ** ಒಂದು ಜ್ಯೋತಿಷ್ಯ ಗ್ರಂಥ.

**ಸೂರ್ಯಾಸ್ತ** ಹೊತ್ತು ಮುಳುಗುವಿಕೆ.

**ಸೂಲ್** (ಸೂಲ), ಹೆರಿಗೆ, ಪ್ರಸೂತಿ.

— **ಮುಳುಕು** ಹೆರಿಗೆಯ ಬೇನೆ.

**ಸೂಲಗಿತ್ತಿ** ಹೆರಿಗೆ ಮಾಡಿಸುವವಳು, ನರಸಮ್ಮ.

**ಸೂಲು** ದನಗಳು ಗಬ್ಬ ಕಟ್ಟುವ ಸರದಿ; ಬೆದೆಕಾಲ, ಉಸಿರು.

**ಸೂಸಕ** ಹಣೆಯ ಆಭರಣ; ಜಾಲರಿ; ಕುಚ್ಚು; ರತ್ನಗೊಂಚಲು; ಸರ.

**ಸೂಸು** ಚೆಲ್ಲು; ಎರಚು ಹನಿಹನಿಯಾಗಿ ಬೀಳು; ಹಾರು, ಚೆದರು; ತುಳುಕು; ತೋರು; ಬೀರು.

**ಸೂಹು** ಅಟ್ಟು, ಎಬ್ಬು, ಓಡಿಸು.

**ಸೂಳ್** (ಸೂಳು), ಗಟ್ಟಿಯಾಗಿ ಕೂಗು; ಸಮಯ; ಬಾರಿ; ಸರದಿ, ಸಲ; ದೊಡ್ಡ ಶಬ್ದ; ಸುಳಿವು, ಸೂಟು.

— **ಅಯ್ಸು** (ಸೂಳವಿಸು), ಶಬ್ದಮಾಡು; ಹೊಡೆ, ಬಾರಿಸು.

— **ಆಯತ** (ಸೂಳಾಯ್ತ), ಅಂಗರಕ್ಷಕ; ಕರೆದಾಗ ಬರುವವ; ರಾಜದೂತ; ಡಂಗುರ ಸಾರುವವ.

**ಸೂಳುನಗೆ** ಆಗಾಗ ಉಕ್ಕುವ ನಗೆ.

**ಸೂಳುಪಾಡು** ಸರದಿಯಂತೆ ಪ್ರತಿಭಟಿಸುವಿಕೆ

**ಸೂಳುಮಾತು** ಸರದಿಯಿಂದ ಆಡುವ ಮಾತು; ಸಂಕೇತದ ನುಡಿ.

**ಸೂಳೆ** ಪಾತರದವಳು, ಹಾದರಗಿತ್ತಿ, ವೇಶ್ಯೆ.

**ಸೃಗಾಲ** ನರಿ; ಒಬ್ಬ ರಾಕ್ಷಸ.

**ಸೃಜಿಸು** ಸೃಷ್ಟಿಸು, ನಿರ್ಮಿಸು; ಹುಟ್ಟಿಸು.

**ಸೃಣಿ** ಅಂಕುಶ; ಶತ್ರು; ಅಸ್ತ್ರ.

**ಸೃಷ್ಟಣೆ** ಸೃಷ್ಟಿ; ಕೃತಕ ನಿರ್ಮಾಣ; ಹುಟ್ಟಿದ್ದು; ಸುಳ್ಳು.

**ಸೃಷ್ಟಿ** ಸೃಷ್ಟಿಮಾಡಿದುದು, ನಿರ್ಮಾಣ, ರಚನೆ; ಉಂಟಾದುದು, ಉಂಟಾದ ಜಗತ್ತು; ನಿಸರ್ಗ, ಪ್ರಕೃತಿ.

**ಸೆಕಳೆ** ಉಷ್ಣ.

**ಸೆಕೆ** (ದ್ಭ) ಸೆಖೆ, ಸೆಗೆ, ಶಾಖ (ಸಂ), ಬೆಚ್ಚಗೆ; ಕಾವು; ಡಗೆ.

— **ಕಾಲ** ಬೇಸಗೆ, ವೈಶಾಖಮಾಸ.

**ಸೆಕ್ಕು** ಚುಚ್ಚು; ಸಿಕ್ಕಿಸು; ಸೇರಿಸು; ಹೆರಳು ಹಾಕುವ ಒಂದು ರೀತಿ.

**ಸೆಗಳಿ** (ಸೆಗಳಿಕೆ), ಉಷ್ಣ, ಜಳ, ತಾಪ; ಜ್ವಾಲೆ.

**ಸೆಜ್ಜರ** (ದ್ಭ) ಶಯ್ಯಾಗಾರ (ಸಂ), ಮಲಗುವ ಮನೆ.

**ಸೆಜ್ಜೆ** (ದ್ಭ) ಶಯ್ಯಾ (ಸಂ), ಹಾಸಿಗೆ; ಮಲಗುವ ಮನೆ; ಒಂದು ಧಾನ್ಯ; ಲಿಂಗದ ಕರಡಿಗೆ.

— **ವಳ** ಶಯ್ಯಾಗೃಹದ ರಕ್ಷಕ.

**ಸೆಟೆ** ಸಿಡಿ, ಸಿಡುಕುಗೊಳ್ಳು; ಬಾಗು; ನಿಗುರು.

**ಸೆಟ್ಟಿ** (ದ್ಭ) ಶ್ರೇಷ್ಠಿ (ಸಂ), ಶ್ರೀಮಂತ; ಧನಿಕ; ವ್ಯಾಪಾರಿ; ಮುಖಂಡ.

— **ಗಾರ** ಬಟ್ಟೆ ನೇಯುವವ, ನೇಕಾರ, ಜೇಡ; ಸೆಟ್ಟಿ.

**ಸೆಡಕು** ಗರ್ವ, ಹೆಮ್ಮೆ.

**ಸೆಡಪು** ಬಿಗಿದುಕೊ, ಮುದುರಿಕೊ.

**ಸೆಡವು** (ಸೆಡ), ಹೆಮ್ಮೆ; ಹಟ.

**ಸೆಡು** ಹೊಲಿ; ಚುಚ್ಚಿಹೊಲಿ; ಜೋಡಿಸು.

**ಸೆಡೆ** ಅದುರು, ಹೆದರು; ಮುದುರು; ಬಗ್ಗು, ಬಾಗು; ಬೆದರಿಕೆ; ಆತುರ; ಒಂದು ಕರ್ಮ.

**ಸೆಣಸು** ಯುದ್ಧಮಾಡು; ಇದಿರಾಗು; ಸ್ಪರ್ಧಿಸು; ಹೋರಡಿಸು; ಕೋಪ, ಮುನಿಸು; ಸ್ಪರ್ಧೆ

ಸೆಣೆ (ಸೆಡೆ), ಸಿಟ್ಟಾಗು, ಸೆಟೆ, ರೇಗು; ಸೆಳೆ, ಬಟ್ಟೆ ತೊಳೆ, ಒಗೆ.

ಸೆರಗು ಕೇಡು; ಅಪಾಯ, ಸಹಾಯ, ಯೋಚನೆ; ಭಯ; ಅಂಚು, ಕರೆ; ಪರಿಣಾಮ.

ಸೆರಪು ಚೆರುಪು, ಆತಿಥ್ಯ, ಉಪಚಾರ.

ಸೆರೆ (ದ್ಭ) ಶಿರಾ (ಸಂ), ನರ; ರಕ್ತನಾಳ; ಬಂಧನ; ಹೆಂಡ, ಮದ್ಯ; ಚಾಚಿದ ಕೈ.

—ಮನೆ ಕಾರಾಗೃಹ, ಜೈಲು.

ಸೆರ್ಕುರ್ ತುಂಬಿಸು, ತುರುಕು; ಸಿದ್ಧಿಸು.

ಸೆಲದಿ ಜೇಡನ ಹುಳು.

ಸೆಲವು ಅಪ್ಪಣೆ, ಅನುಮತಿ.

ಸೆಲೆ ಧ್ವನಿ; ಮರುಧ್ವನಿ; ಚಿಲುಮೆ, ಬುಗ್ಗೆ; ಧಾರಣೆ, ದರ.

ಸೆಲ್ಲೆಹ (ದ್ಭ) ಶಲ್ಯ (ಸಂ), ಬರ್ಚಿ.

ಸೆಳೆ ಸೆಣೆ, ಬಟ್ಟೆ ಒಗೆ; ಬೆತ್ತ; ಎಳೆ, ಕೀಳು, ಕಿತ್ತುತೆಗೆ; ಆಕರ್ಷಿಸು; ಪ್ರೀತಿಸು.

ಸೆಳೆಮಂಚ ಉಯ್ಯಾಲೆ.

ಸೆಳ್ಳುಗುರು ಮೊನೆಯಾಗಿಯೂ ಉದ್ದವಾಗಿಯೂ ಇರುವ ಉಗುರು.

ಸೆಳ್ಳೆ ಚಿವುಟದ ಗಾಯ.

ಸೆಂಡು ಚೆಂಡು.

ಸೆಂದು ತಿಕ್ಕು, ತೇಯು; ನಾಶಮಾಡು; ಒರೆ.

ಸೇಕ (ದ್ಭ) ಶಾಖ (ಸಂ), ಸೆಕೆ, ಬಿಸಿ; ಸೇಚನೆ, ಚಿಮುಕಿಸುವುದು; ಬೆಚ್ಚಗೆ ಹುಟ್ಟಸುವುದು, ಕಾವುಕೊಡುವುದು.

ಸೇಕಡಾ ನೂರು; ನೂರಕ್ಕೆ, ನೂರರ.

ಸೇಚನ ಚಿಮುಕಿಸುವಿಕೆ; ಉದುರಿಸುವಿಕೆ, ಕಳಚುವಿಕೆ.

ಸೇಡು ಶೀತೋಪದ್ರವ; ಸಂಕೋಚಿಸು; ಬಗ್ಗು; ಬಾಗು; ರೇಗು; ಹಗೆ; ಮುಯ್ಯಿ; ಹಣ್ಣಿನ ಖಂಡ.

—ಕೊಳ್ ಚಳಿಯಿಂದ ನಡುಗು, ಚಳಿಗೆ ಮುದುರು; ಹಗೆ ತೀರಿಸು.

—ಹೊರು ಹಗೆ ಹೊರು, ಕೆಡುಕಿನ ನೆನಪು ಹೊರು.

ಸೇದು (ಸೇತುವೆ), ಸಂಕ; ಅಣೆಕಟ್ಟು, ನೀರಕಟ್ಟೆ, ಒಡ್ಡು; ನೀರನ್ನು ಎಳೆ; ಸೇವಿಸು; ಮೇಲೆ ಎಳೆ, ಎಳೆ; ತೆಗೆ; ಕಿತ್ತುಕೊಳ್ಳು; ಕಸಿದುಕೊಳ್ಳು; ಜಗ್ಗು; ಕುಡಿ; ಸೀದು ಹೋಗು; ಮುದುರು; ಒಳಗೆ ಹೀರು.

ಸೇದೆ (ಸ್ವೇದ), ಬಳಲಿಕೆ, ಆಯಾಸ; ಸಂಕಟ.

—ನೀರ್ ಬೆವರು.

ಸೇದ್ಯ ಸಾಗುವಳಿ, ಕೃಷಿ, ಬೇಸಾಯ.

ಸೇನಾ (ಸೇನೆ), ದಂಡು, ಪಡೆ.

—ನಿ ದಂಡಿನ ಒಡೆಯ, ದಳವಾಯಿ.

ಸೇಬು ಒಂದು ಹಣ್ಣು.

ಸೇರ್ (ಸೇರು), ಕೂಡು; ಹೊಂದು; ಸಮೀಪಿಸು; ಗುರಿ ಮುಟ್ಟು; ಒಗ್ಗು, ಹಿತವಾಗು; ಒಪ್ಪು; ಕಲೆ; ಬೇರೆ; ಹಾನೆ, ಅಳತೆ ಸೇರು; ತೂಕದ ಸೇರು.

—ಪಡಿ ಸೇರುವಿಕೆ; ಸೇರು ಅಳತೆ ಕಲ್ಲು.

—ವೆ ಸೇರಿ (ಸೇರಿಕೆ), ಸಂಬಂಧ; ಜೋಡಣೆ

ಸೇರು (ಸೇರ್), ಅಣಕಿಸು, ಪರಿಹಾಸ್ಯಮಾಡು; ಕೂಡು; ತಲಪು.

ಸೇರುವೆಗಾರ (ಶೇರೆಗಾರ), ಕೂಲಿಗಳನ್ನು ಸೇರಿಸುವವ; ಮುಖಂಡ, ಮುಂದಾಳು, ಮೇಸ್ತ್ರಿ; ಮುಕಾದಮು.

ಸೇರೆ ಅಂಜಲಿ, ಮುಗಿದ ಕೈ.

ಸೇವಕ ಆಳು, ನೌಕರ, ಚಾಕರ.

ಸೇವನ (ಸೇವನೆ), ಉಪಯೋಗಿಸುವುದು; ಸೇದುವುದು; ಬಳಸುವುದು; ಸೇವೆ ಹೊಂದುವುದು.

ಸೇವಂತಿಗೆ ಒಂದು ಹೂ.

ಸೇವಾಳ (ದ್ಭ) ಶೈವಾಲ (ಸಂ), ಹಾವಸೆ, ಪಾಚಿ, ಅಂತರಗಂಗೆ.

ಸೇವಿಗೆ ಶ್ಯಾವಿಗೆ, ಒಂದು ಬಗೆ ಭಕ್ಷ್ಯ.

ಸೇವಿಸು ಸೇವೆಮಾಡು; ಭಕ್ತಿಯಿಂದ ಉಪಚರಿಸು; ಸ್ವೀಕರಿಸು.
ಸೇವೆ ಸೇವನೆ, ಉಪಚಾರ; ಭಕ್ತಿ ಸಲಿಸುವಿಕೆ; ಆಳ್ತನ.
ಸೇಸೆ (ದ್ಭ) ಶೇಷಾ (ಸಂ), ಮಂಗಳಕಾರ್ಯದಲ್ಲಿಉಪಯೋಗಿಸುವ ಕುಂಕುಮಮಿಶ್ರಿತ ಅಕ್ಕಿ, ಅಕ್ಷತೆ.
ಸೈ (ಸಯ್), ಸರಿ, ಸಮ; ಆಗು; ಹೌದು; ಒಳ್ಳಿತು; ಮುಗಿತ.
— ಕುಡು ಸೈಸೈ ಎನ್ನು, ಒಪ್ಪು; ಹೊಗಳು.
ಸೈಕತ ಮರಳು, ಮರಳುಗಾಡು.
ಸೈಗರೆ ದಟ್ಟವಾಗಿ ಬೀಳು; ಸರಿಯಾಗಿ ಸುರಿ.
ಸೈಗೆಡೆ ನೆಲದ ಮೇಲೆ ಉದ್ದಕ್ಕೆಬೀಳು, ಅಡ್ಡ ಬೀಳು; ಬೀಳು.
ಸೈತಾನ ಒಬ್ಬ ಪಿಶಾಚ ಮುಖಂಡ; ಒಂದು ಅನಿಷ್ಟ ದೆವ್ವ.
ಸೈತಿಡು ಸರಿಪಡಿಸು.
ಸೈತು ಸೈರಿಸಿಕೊಂಡು; ಚೆನ್ನಾಗಿ; ನೇರಾಗಿ.
ಸೈದ ಕಪಟವಿಲ್ಲದವ.
ಸೈದೆಗೆ ವಿಸ್ತರಿಸು, ಹರಡು.
ಸೈನಿಕ ಕಾಲಾಳು, ಸೇನಾಳು.
ಸೈನ್ಯ ಪಡೆ, ದಂಡು.
ಸೈಪು ಪುಣ್ಯ; ಸಂಪತ್ತು; ಸಮಾಧಾನ.
ಸೈರಣೆ ತಾಳ್ಮೆ, ಶಾಂತಿ, ಸಹನೆ.
ಸೈರಂಧ್ರಿ (ಸೈಳೇಂದ್ರಿ), ವಿರಾಟನ ಮನೆಯಲ್ಲಿದ್ದ ದ್ರೌಪದಿ.
ಸೈರಿಸು ಸಮಾಧಾನ ತಾಳು, ಸಹಿಸು.
ಸೈಲು ಸಡಿಲು, ಡೀಲು, ಬಿಗುವಿಲ್ಲದ.
ಸೈವರಿ ಮುಂದೆ ಹೋಗು.
ಸೈಂಧವ ಸಿಂಧು ದೇಶದಲ್ಲಿ ಹುಟ್ಟದುದು; ಒಂದು ಬಗೆ ಉಪ್ಪು, ಸೈಂಧಲವಣ; ಒಂದು ಜಾತಿ ಕುದುರೆ; ಸಿಂಧು ದೇಶದ ದೊರೆ ಜಯದ್ರಥ.
ಸೈಂಹಿಕೇಯ ಸಿಂಹಿಕೆಯ ಮಗ, ರಾಹು.
ಸೊಕ್ಕು ಹೆಮ್ಮೆಪಡು; ಪ್ರತಿಭಟಿಸು; ಹೊಡೆ; ನೀರೊಳಗೆ ಮದಿಸಿ ಆಡು; ಮದ; ಗರ್ವ; ಸಸ್ಯಗಳ ಅತಿ ಅಭಿವೃದ್ಧಿ; ಮಂಕಾಗಿ ಪ್ರಜ್ಞೆ ತಪ್ಪು.
ಸೊಗ (ಸೊಗಸು), ಚೆಲುವು; ಸುಖ (ಸಂ); ಆಹ್ಲಾದ, ಆನಂದ.
— ಇಸು ಪ್ರಕಾಶಿಸು, ಅಂದವಾಗಿ ಕಾಣು.
ಸೊಗಡು (ಸೊರಡು, ಸಗಡು), ಒಂದು ಬಗೆ ನಾತ, ದುರ್ವಾಸನೆ; ಒಂದು ಬಗೆ ಸವುಳು ರುಚಿ; ಸ್ಪರ್ಶ.
ಸೊಗಸು ಮಿರುಗು, ಶೋಭಿಸು.
ಸೊಟ್ಟ (ಸೊಟ್ಟು), ರೂಪಗೆಟ್ಟ, ಡೊಂಕಾದ; ವಿಕಾರವಾದ; ವಿಕಾರ ಶರೀರಿ.
ಸೊಡಬಲಿ ಶ್ಮಶಾನ, ಮಸಣ, ಹೆಣ ಹೂಳುವ ಜಾಗ, ಸುಡಗಾಡು.
ಸೊಡರು (ಸೊಡರ್), ಸಣ್ಣ ದೀಪ.
ಸೊಣಗ (ದ್ಭ) ಶುನಕ (ಸಂ), ನಾಯಿ.
ಸೊಣಡುಹ ಹಿಂದೆಗೆಯುವಿಕೆ; ಪಲಾಯನ, ಹಿಂದೋಟ.
ಸೊಣೆ ಕುಕ್ಕು, ಕುಟುಕು, ಕೊಕ್ಕು ಇಲ್ಲವೆ ಬೆರಳಿಂದ ಚುಚ್ಚು.
ಸೊತ್ತು (ಸ್ವತ್ತು), ಸಾಮಾನು; ತನ್ನದೇ ವಸ್ತು ಒಡವೆ, ಸ್ವತ್ವ (ಸಂ).
ಸೊದೆ (ದ್ಭ) ಸುಧಾ (ಸಂ), ಅಮೃತ; ಹಾಲು; ಜೇನು; ನೆಲ್ಲಿಗಿಡ; ಅಣಿಲೆಗಿಡ; ಗಾರೆ; ಸುಣ್ಣ
ಸೊನ (ದ್ಭ) ಸ್ವನ (ಸಂ), ಶಬ್ದ.
ಸೊನೆ ಸೋರುವ ದ್ರವ, ಕೆಲವೊಂದು ಮರಗಳ ತೊಗಟೆ ಎಲೆಗಳಲ್ಲಿರುವ ರಸ.
ಸೊನ್ನಾರ (ದ್ಭ) ಸೊನೆಗಾರ, ಸ್ವರ್ಣಕಾರ (ಸಂ)
ಸೊನ್ನೆ (ದ್ಭ) ಚಿನ್ನ (ಸಂ); ಶೂನ್ಯ, ಪೂಜ್ಯ.
ಸೊಪ್ಪು ಹಸಿ ಎಲೆಗಳು, ಹಸುರೆಲೆ; ಪುಡಿ; ಗಾಯ; ಸಡಿಲು; ನಿವಾರಿಸು, ಲಕ್ಷ್ಯ.

— ಆಗು ಸಡಿಲಾಗು; ಪುಡಿಯಾಗು.
— ಹಾಕು ಗಣಿಸು, ಲಕ್ಷಿಸು.
ಸೊಪ್ಪೆ ಹುಲ್ಲು.
ಸೊಬಗ ಸುಭಗ, ಚೆಲುವ.
ಸೊಬಗು (ದ್ಭ) ಸುಭಗ (ಸಂ), ಸೌಭಾಗ್ಯ; ಸೌಂದರ್ಯ, ಚೆಲುವು, ಗಾಡಿ.
ಸೊಮ್ಮ ಆಪ್ತ, ಹತ್ತಿರದ.
ಸೊಮ್ಮು ಸ್ವಂತ; ಆಸ್ತಿ, ಐಶ್ವರ್ಯ.
ಸೊಯ (ದ್ಭ) ಸ್ವಯಂ (ಸಂ), ತಾನಾರೆಂಬ ತಿಳಿವು, ಎಚ್ಚರ.
ಸೊಯಂವರ (ದ್ಭ) ಸ್ವಯಂವರ (ಸಂ).
ಸೊರಗು ಕೊರಗು, ಮರುಗು; ಕಂದು, ಕ್ಷೀಣ ವಾಗು.
ಸೊರಹು ಗಳಹು, ಬಗುಳು; ಹೇಳು; ಹರಟು.
ಸೊರ್ಕು (ಸೊಕ್ಕು), ಗರ್ವಿಸು; ಗರ್ವ, ಉದ್ಧಟತನ; ಹೆಮ್ಮೆ.
ಸೊಲ್ (ಸೊಲ್ಲು), ಮಾತು, ನುಡಿ; ಭಾಷೆ.
ಸೊಲಿಗೆ ದ್ರವದ ಒಂದು ಅಳತೆ.
ಸೊಸೆ (ದ್ಭ) ಸ್ನುಷಾ (ಸಂ), ಮಗನ ಹೆಂಡತಿ, ತಂಗಿಯ ಮಗಳು.
ಸೊಳೆ ತೊಳೆ; ಹಣ್ಣಿನ ಒಂದೊಂದು ಪ್ರತ್ಯೇಕ ವಾದ ತುಂಡು, ಹಲಸಿನ ತೊಳೆ.
ಸೊಳ್ಳೆ ಹೊಳ್ಳೆ, ಮೂಗಿನ ರಂಧ್ರ, ಟೊಳ್ಳೆ; ನುಸಿ, ಮಶಕ.
ಸೊಂಟ ನಡು, ಕಟ, ಟೊಂಕ.
ಸೊಂಡಿಲು(ದ್ಭ) ಸೊಂಡಲ್, ಶುಂಡಾ (ಸಂ), ಆನೆಯ ಸೊಂಡಿಲು, ಸೊಂಡೆ.
ಸೊಂದಿ(ಸೊಂದೆ), ಹಾದರಗಿತ್ತಿ, ವ್ಯಭಿಚಾರಿಣಿ
ಸೊಂದಿಕೋಡಗ ಪೇರಣಿಲ್, ಕೆಂಚಳಿಲು.
ಸೊಂಪು ಚೆಂದ, ಸೌಂದರ್ಯ, ಮನೋಹರ.
— ತೀವು ಚೆಲುವಿಂದ ತುಂಬು; ಚೆಲುವೇರು
ಸೋಕು (ಸೋವು), ಓಡಿಸು, ಎಬ್ಬಿಸು; ಹಾರಿಸು; ಅಟ್ಟು; ತಾಗುವಿಕೆ; ತಗಲು; ಸ್ಪರ್ಶಿಸು, ಮುಟ್ಟು; ತಗುಲಿದುದು, ಸ್ಪರ್ಶ ವಾದುದು; ದೆವ್ವದ ಬಡಿತ.
ಸೋಗಿಲು ಮಡಿಲು, ಉಡಿ.
ಸೋಗು ವೇಷ; ರೂಪ; ಮಡಿಲು; ಜೋಗ; ಯೋಗ.
ಸೋಗೆ ನವಿಲು; ನವಿಲುಗರಿ; ಕಣ್ಣಿನ ಕುಡಿಯ ಗೆರೆ; ತೆಂಗಿನ ಹೆಡೆ, ತಾಳೆಯ ಗರಿ; ಚುಕ್ಕಾಣಿ
ಸೋಜಿಗ (ಚೋಜಿಗ), ಆಶ್ಚರ್ಯ.
ಸೋಟೆ ಕೆಳ ಕಪೋಲ, ಕವುಳು; ಕಟ್ಟಿಗೆ ತುಂಡು, ಬಡಿಗೆ.
ಸೋಡಿ ಬಿಡುವಿಕೆ; ಬಿಟ್ಟ ಹಣ; ಬಿಡುಗಡೆ; ಒಂದು ಆಟ.
ಸೋದರ ಒಂದೆ ಹೊಟ್ಟೆಯಿಂದ ಬಂದವ, ಅಣ್ಣತಮ್ಮ.
ಸೋದರತ್ತೆ ತಂದೆಯ ತಂಗಿ.
ಸೋದರಿ ಅಕ್ಕ ಇಲ್ಲವೆ ತಂಗಿ.
ಸೋದರ್ಯ ಅಣ್ಣ ಅಥವಾ ತಮ್ಮ.
ಸೋದಿಸು(ಶೋಧಿಸು), ಹುಡುಕು; ಸೋಸು.
ಸೋನೆ ಮಳೆ; ತುಂತುರು ಮಳೆ, ಹನಿಮಳೆ.
ಸೋಪಾನ ಮೆಟ್ಟಲು, ಪಾವಟಿಗೆ.
ಸೋಬಾನೆ (ದ್ಭ) ಶೋಭನ (ಸಂ), ಮಂಗಲ ಕಾಲದ ಹಾಡು; ಸುವ್ವಾಲೆ, ಸುವ್ವಿ.
ಸೋಮ ಇದರ ರಸದಿಂದ ಆರ್ಯರು ಒಂದು ಬಗೆ ಮದ್ದು ತಯಾರಿಸುತ್ತಿದ್ದರು. ಆರ್ಯರ ಕಾಲದಲ್ಲಿ ಸೋಮರಸವು ಯಜ್ಞಾದಿ ಕಾರ್ಯಗಳಿಗೆ ಅನಿವಾರ್ಯವಾಗಿತ್ತು. ಅದನ್ನು ಅಮೃತಸಮಾನವೆಂದು ತಿಳಿದಿದ್ದರು. ಕ್ರಮೇಣ 'ಸೋಮ' ಎಂಬ ಹೆಸರು ಓಷಧೀಶನಾದ ಚಂದ್ರನಿಗೂ ಬಂದಿತು. ಅವನೇ ಆಗ ಯಜ್ಞರಕ್ಷಕ ಎನಿಸುತ್ತಾನೆ; ಚಂದ್ರ; ಪಚ್ಚಕರ್ಪೂರ; ಕುಬೇರ; ಯಮ; ವಾಯು; ವಸು; ನೀರು; ಒಂದು ಬಳ್ಳಿ, ಅದರ ಹೆಂಡ; ಅಮೃತ; ಶಿವಪಾರ್ವತಿ; ಒಂದು ವಾರ.

— ಯಾಜಿ ಸೋಮಯಾಗ ಮಾಡಿದವ.
ಸೋಮವೀಥಿ ಉತ್ತರ ದಕ್ಷಿಣವಾಗಿರುವ ಬೀದಿ, ತೆಂಕು ಬಡಗಿನ ಹಾದಿ.
ಸೋಮಾರಿ ಆಲಸಿ; ದಡ್ಡ; ಜಡಪ್ರಕೃತಿಯವ
ಸೋಯಿ (ಸೋವಿ), ಕಡಮೆ ಬೆಲೆ, ಅಗ್ಗ.
ಸೋರ್ (ಸೋರು), ಒಸರು; ಸುರಿ, ದ್ರವಿಸು, ತುಟುಕು, ಹನಿ, ಹನಿ ಬೀಳು.
— ಅಲು ಸೋರಿದುದು, ಸೋರುವುದು.
— ಚು ಸುರಿಸು, ಜಾರಿಸು; ಸೋಕು.
ಸೋರುಪ್ಪು ಪೆಟ್ಲುಪ್ಪು.
ಸೋರೆ ಒಂದು ಬಗೆ ಕಾಯಿ; ಬೆಳವನ ಹಕ್ಕಿ.
ಸೋರ್ಮುಡಿ ದೀರ್ಘ ಕೇಶಪಾಶ; ಜಾಂ ತೂಗುವ ತುರುಬು.
ಸೋಲ್ (ಸೋಲು), ಪರಾಜಯ, ಅಪಜಯ; ಮೋಹ; ನಷ್ಟ.
ಸೋಲೆ ಹಾವಿನ ಹೆರೆ, ಪರೆ, ಹುರಿ.
ಸೋವತ ಆಹಾರ; ಬಲಿದ್ರವ್ಯ, ಹವಿಸ್ಸು, ಚರು.
ಸೋವು ಹೊಡೆದೋಡಿಸು, ಅಟ್ಟು; ಬೇಟೆ ಹುಡುಕಿಕೊಂಡು ಹೋಗು; ಚಿಹ್ನೆ, ಗುರುತು, ಸೂಳು.
ಸೋಸು ಗಾಳಿಸು; ಶೋಧಿಸು; ಬಟ್ಟೆ ಅಥವಾ ಜರಡೆಯಲ್ಲಿ—ಜಿಗುಟು ಮತ್ತು ನೀರನ್ನು ಬೇರೆ ಮಾಡು.
ಸೋಹಂ 'ನಾನೇ ಅವನು'; ದೇವರೇ ತಾನು— ಎಂಬ ಮಾತು.
ಸೋಹು (ಸೋವು), ಸೋಹೆ; ಬೇಟೆ; ಬೇಟೆಯ ಅಟ್ಟುಳಿ; ಗುರುತು, ಚಿಹ್ನೆ.
ಸೌಕರ್ಯ ಅನುಕೂಲತೆ.
ಸೌಕುಮಾರ್ಯ ಮೃದುತ್ವ, ಮಾರ್ದವ; ಸುಂದರಿಯಾದ ಮಗಳು.
ಸೌಖ್ಯ ಸುಖಕರವಾಗಿರುವುದು, ಹಿತಕರವಾಗಿರುವುದು, ಆನಂದವುಳ್ಳ.
ಸೌದಾಮಿನಿ ಮಿಂಚು; ಒಬ್ಬಳು ಅಪ್ಸರೆ.
ಸೌಧ ಅರಮನೆ, ಮಹಡಿ ಮನೆ.
ಸೌಪ್ತಿಕ ನಿದ್ದೆಯ; ಮಹಾಭಾರತದ ಒಂದು ಪರ್ವ.
ಸೌಬಲ ಶಕುನಿ.
ಸೌಬಲಿ ಗಾಂಧಾರಿ.
ಸೌಭ ಬೇಕಾದಂತೆ ಸಂಚರಿಸುವ ಪಟ್ಟಣ; ಸಾಲ್ವರಾಜನ ಪಟ್ಟಣ.
ಸೌಭದ್ರ ಸುಭದ್ರೆಯ ಮಗ ಅಭಿಮನ್ಯು.
ಸೌಭದ್ರಾ ಅರ್ಜುನನ ಹೆಂಡತಿ.
ಸೌಭಾಗ್ಯ ಅದೃಷ್ಟ; ಸುದೈವ; ಮಾಂಗಲ್ಯ, ಅಯ್ದೆತನ.
ಸೌಮಿತ್ರಿ ಸುಮಿತ್ರೆಯ ಮಗ, ಲಕ್ಷ್ಮಣ; ಶತ್ರುಘ್ನ.
ಸೌಮ್ಯ ಸೋಮನ ಮಗ, ಬುಧ; ಉಗ್ರವಲ್ಲದ, ಶಾಂತವಾದ.
ಸೌರ ಸೂರ್ಯನ ಸಂಬಂಧವಾದ; ಸೂರ್ಯನ ಮಗ, ಶನೀಶ್ವರ; ಯಮ.
ಸೌರಭ ಒಳ್ಳೆಯ ಸುವಾಸನೆ.
ಸೌರಮಾನ ಸೂರ್ಯನಿಗೆ ಸಂಬಂಧಿಸಿದ ಅಳತೆ.
ಸೌರಂಭ ಸಂಭ್ರಮ, ಉತ್ಸವ.
ಸೌರಾಷ್ಟ್ರ ಸೂರತ್ತಿಗೆ ಸಂಬಂಧಿಸಿದ, ಗುಜರಾಥ ದೇಶ; ಒಂದು ರಾಗ.
ಸೌರಿ ಸೂರ್ಯನ ಮಗ, ಶನಿ.
ಸೌಲಭ್ಯ ಆನುಕೂಲ್ಯ; ಅನುಕೂಲತೆ.
ಸೌಷ್ಟವ ಸೊಗಸು, ಸುಂದರ; ಪುಷ್ಟಿ; ಚಳಕ.
ಸೌಸವ ಪರಿಮಳ; ಕಂಪು.
ಸೌಹಾರ್ದ ಮಿತ್ರತ್ವ, ಗೆಳೆತನ, ಸ್ನೇಹ.
ಸೌಂದರ್ಯ ಚೆಲುವು, ಲಾವಣ್ಯ, ಗಾಡಿ, ಸೊಗಸು.
ಸ್ಕಂದ ಹೆಗಲು; ಮರವು ಕವಲೊಡೆವ ಜಾಗ; ಸಮೂಹ; ಗ್ರಂಥಭಾಗ; ಸುಬ್ರಹ್ಮಣ್ಯ, ಕಾರ್ತಿಕೇಯ; ಒಂದು ಪುರಾಣ.

ಸ್ಖಲನ ಚಲಿಸುವಿಕೆ, ಜಾರುವಿಕೆ; ಕಳಚುವಿಕೆ.
ಸ್ತನ ಮೊಲೆ, ಸ್ತ್ರೀಯರ ಎದೆ.
—ಪ ಸ್ತನಪಾನ ಮಾಡುವ ಮಗು.
ಸ್ತಬ್ಧ ನೆಟ್ಟ; ಸ್ಥಿರವಾದ, ಅಲ್ಲಾಡದ; ತಬ್ಬಿಬ್ಬಾದ; ನಿಂತ.
ಸ್ತವನ ಸ್ತುತಿ, ಹೊಗಳಿಕೆ, ಶ್ಲೋಕ.
ಸ್ತಂಬ ಹುಲ್ಲಿನ ಜೊಂಪೆ.
ಸ್ತಂಭ ಕಂಭ (ದ್ಭ); ತಡೆ.
—ನ ತಡೆಯುವಿಕೆ; ನಿಲ್ಲಿಸುವಿಕೆ, ಬಿಗಿಹಿಡಿಯುವಿಕೆ.
ಸ್ತಿಮಿತ ಚಂಚಲವಲ್ಲದ; ಮೃದು, ತೃಪ್ತ; ಹದಕ್ಕೆ ಬಂದ.
ಸ್ತುತಿ ನುಡಿ; ಹೊಗಳಿಕೆ, ಪ್ರಶಂಸೆ.
ಸ್ತುತಿಪಾತಕ ಹೊಗಳು ಭಟ್ಟ, ಭಟ್ಟಂಗಿ.
ಸ್ತೂಪ ಬೌದ್ಧ ಸಮಾಧಿ,ಅರ್ಧಗೋಲಾಕರದ ಒಂದು ರಚನೆ.
ಸ್ತೇನ ಕಳ್ಳ, ತುಡುಗ, ಚೋರ.
ಸ್ತೇಯ ಕಳ್ಳತನ, ಕಳವು.
ಸ್ತೋಮ ರಾಜಿ, ಸಮೂಹ; ಸ್ತುತಿ.
ಸ್ತ್ರೀ ಹೆಂಗಸು, ಹೆಂಗುಸು, ನಾರಿ; ಹೆಣ್ಣು.
—ಧನ ಸ್ತ್ರೀಯದೇ ಆಗಿರುವ ಸೊತ್ತು.
ಸ್ಥಪತಿ ಅರಸು; ಶಿಲ್ಪಿ, ರೂವಾರಿ; ಬಡಗಿ; ಅಂತಃಪುರದ ಅಧಿಕಾರಿಯಾದ ಬ್ರಾಹ್ಮಣ; ಒಡೆಯ.
ಸ್ಥಲ (ಸ್ಥಳ), ನೆಲ, ಭೂಮಿ; ಜಾಗ, ತಾಣ, ತಾವು; ವಿಷಯ; ದಡ; ಗತಿ.
ಸ್ಥಲೀಕ ಸ್ಥಲದ, ಸ್ಥಳವಂದಿಗ.
ಸ್ಥಾಣು ಶಿವ; ಮೋಟು ಮರ; ಗೂಟ; ಬರ್ಚಿ; ಸ್ಥಿರವಾಗಿ ನಿಂತ.
ಸ್ಥಾನ (ಸ್ಥಾನಕ), ತಾಣ (ದ್ಭ), ತಾವು; ನಿಲುಗಡೆ; ಗತಿ; ತಕ್ಕ ರೀತಿ; ನಿವಾಸ, ಮನೆ; ದೇಶ; ಹೋಲುವೆ, ಪದವಿ.
ಸ್ಥಾನಿಕ ಸ್ಥಲದ, ಸ್ಥಾನದ ಅಧ್ಯಕ್ಷ; ದೇವಸ್ಥಾನದ ಸೇವಕ; ಶಿವ ಬ್ರಾಹ್ಮಣ ವರ್ಗ, ಒಂದರ ಪ್ರಮಾಣ.
ಸ್ಥಾಪನ ಪ್ರತಿಷ್ಠೆ; ನಿಲಿಸುವಿಕೆ; ನಿರ್ಧರಿಸುವಿಕೆ; ವಾದದಲ್ಲಿ ಒಂದು ಉಕ್ತಿಯನ್ನು ಸಪ್ರಮಾಣವಾಗಿ ನಿಲ್ಲಿಸುವಿಕೆ.
ಸ್ಥಾಪಿಸು ನಿಲ್ಲಿಸು; ಇರಿಸು; ನಿರ್ಧಾರಕ್ಕೆ ತಂದಿರಿಸು.
ಸ್ಥಾಯಿ ನಿಂತ; ಚಲಿಸದ; ಸ್ಥಿರ, ಸಂಗೀತದಲ್ಲಿ ನಿಲುಗಡೆಯ ಸ್ಥಾನ.
—ಭಾವ ಕಾವ್ಯದಲ್ಲಿ ಮುಖ್ಯವಾಗಿ ಉಳಿಯುವ ಭಾವ, ಬದಲಿಸದ ಭಾವನೆ.
ಸ್ಥಾಲಿ ಅನ್ನದ ಪಾತ್ರೆ; ಥಾಲಿ, ಪಾನಪಾತ್ರೆ.
ಸ್ಥಾವರ ಸ್ಥಿರ, ಅಲ್ಲಾಡದ; ಮರ; ಪರ್ವತ.
ಸ್ಥಿತ ನಿಂತ, ಕದಲದ, ನಿಂತ, ಚಲಿಸದ; ಆನೆ.
ಸ್ಥಿತಿ ಇರುವಿಕೆ; ಅವಸ್ಥೆ; ಯೋಗ್ಯತೆ; ವತನು, ಆಸ್ತಿ, ಸಂಪತ್ತು.
ಸ್ಥಿರ ಚಿರ (ಸಂ), ಕದಲದ, ಚಲಿಸದ; ಸನಾತನ; ಎಂದೂ ಇರುವ; ಶಾಂತ; ಬಲವಾದ.
ಸ್ಥೂಲ ತೋರ, ದಪ್ಪ; ಶಕ್ತ, ಬಲಶಾಲಿ; ದೊಡ್ಡ; ನಯವಿಲ್ಲದ, ಸೂಕ್ಷ್ಮವಿಲ್ಲದ.
ಸ್ಥೇಯ ವಿವಾದ ನಿರ್ಣಯಕ್ಕಾಗಿ ಇರುವ ಸಭೆ; ಪುರೋಹಿತ; ಸ್ಥಿರ.
ಸ್ಥೈರ್ಯ ಸ್ಥಿರವಾದ ಗುಣ, ಕದಲದ ಮನ.
ಸ್ನಾತ (ಸ್ನಾತಕ), ವಿದ್ಯಾಭ್ಯಾಸ ಮುಗಿಸಿ ಬಂದವ; ಸ್ನಾನ ಮುಗಿಸಿ ಬಂದವ.
ಸ್ನಾನ ಮೀಯುವಿಕೆ, ಜಳಕ; ಶುದ್ಧಿ.
—ಪುಟ್ಟೆ ನದಿಯ ಸೋಪಾನ, ಮೆಟ್ಟಲು.
ಸ್ನಾಯು ಮಾಂಸ ರಜ್ಜು, ಮಾಂಸಖಂಡ.
ಸ್ನಿಗ್ಧ ನಯವಾದ, ನುಣುಪಾದ; ದಟ್ಟ; ತುಂಬಿದ; ಅಂಟಿಕೊಳ್ಳುವ.
ಸ್ನೇಹ ಗೆಳೆತನ; ಪ್ರೇಮ, ಎಣ್ಣೆಯಂಥ ಜಿಡು ಪದಾರ್ಥ; ಪಸೆ, ಹೆಡಸು.
ಸ್ನೇಹಿತ ಗೆಳೆಯ, ಮಿತ್ರ, ದೋಸ್ತಿ.

ಸ್ಪರ್ಧಿ ಮೇಲಾಡಿಸುವವ, ಎದುರಾಳಿ, ಪೈಪೋಟ ನಡಸುವವ.
ಸ್ಪರ್ಧೆ ಗೆಲ್ಲುವ ಅಪೇಕ್ಷೆ; ಪಂಥಕಟ್ಟುವಿಕೆ; ಪೈಪೋಟ, ಮೇಲಾಟ, ಏರಾಟ.
ಸ್ಪರ್ಶ ಮುಟ್ಟುವಿಕೆ, ಸೋಂಕು; ಅಂಟುವಿಕೆ; ಪರುಸಗಲ್ಲು, ಮುಟ್ಟಿದ್ದನ್ನು ಚಿನ್ನ ಮಾಡುವ ಕಲ್ಲು.
— ಕಾಲ ಗ್ರಹಣವಾಗುವ ಸಮಯ.
ಸ್ಪಂದನ (ಸ್ಪಂದ), ಅಲುಗಾಟ, ನಡುಕು.
ಸ್ಫಟಿಕ ಹರಳು; ಬೆಣಚುಕಲ್ಲು; ಥಳಕು.
ಸ್ಫಾರ ವಿಸ್ತಾರ; ಬಹಳ.
ಸ್ಫುಟ ಒಡೆದ, ಬಿರಿದ; ಅರಳಿದ, ಸಿಡಿದು ಬರುವ; ಸ್ಪಷ್ಟ, ವ್ಯಕ್ತ.
ಸ್ಫುಟನ ಅರಳುವಿಕೆ.
ಸ್ಫುರಣ ಕಂಪನ, ನಡುಕು; ಹೊಳೆಯುವುದು, ಮನಸ್ಸಿಗೆ ಮಿಂಚಿದುದು, ಪ್ರತಿಭೆ.
ಸ್ಫುರಿಸು ಹೊಳೆ, ಪ್ರಕಾಶಿಸು; ನಡುಗು.
ಸ್ಫೂರ್ತಿ ಪ್ರತಿಭೆ; ಸಮಯಕ್ಕೆ ಸಮನಾಗಿ ಯೋಚನೆ ಹೊಳೆಯುವಿಕೆ; ನೆಗೆತ, ಜಿಗಿತ; ಆವೇಶ; ಉತ್ತೇಜನ.
ಸ್ಫೋಟನ ಸಿಡಿದುದು, ಒಡೆದು ವಿಸ್ತರಿಸಿದುದು; ಒಡೆದು ಸಿಡಿಯುವ ಗುಣ ಉಳ್ಳುದು.
ಸ್ಮರ ಕಾಮ, ಮನ್ಮಥ.
ಸ್ಮರಣ ಧ್ಯಾನ, ಚಿಂತನೆ; ಯೋಚನೆ.
ಸ್ಮರಣೀಯ ನೆನಪಿನಲ್ಲಿಡಲು ಯೋಗ್ಯವಾದ.
ಸ್ಮರಿಸು ಯೋಚಿಸು, ನೆನಪು ಮಾಡು, ಎಣ್ಣು.
ಸ್ಮಾರ ನೆನಪು, ಹಂಬಲು.
ಸ್ಮಾರ್ತ ಅದ್ವೈತ ಸಂಪ್ರದಾಯದ ಬ್ರಾಹ್ಮಣ; ಸ್ಮೃತಿಗಳು ಹೇಳುವ.
ಸ್ಮಿತ ಮುಗುಳು ನಗೆ; ಅರಳಿದ.
ಸ್ಮೃತಿ ಧರ್ಮ ಉಪದೇಶಿಸುವ ಶಾಸ್ತ್ರ, ವೇದಾರ್ಥ ಅನುವಾದಿಸುವ ಗ್ರಂಥ; ಜ್ಞಾಪಕ, ನೆನಪು; ಪ್ರಜ್ಞೆ.
ಸ್ಯಮಂತಕ ಜಾಂಬವಂತನ ಬಳಿಯಲ್ಲಿ ಇದ್ದ ಒಂದು ರತ್ನ.
ಸ್ಯಂದನ ಹರಿಯುವಿಕೆ; ಸುರಿಯುವಿಕೆ; ನೀರು; ಶಕಟ, ರಥ.
ಸ್ಯಂದಿ ಸುರಿಸುವುದು; ಜೊಲ್ಲು, ಲಾಲಾಲಸ.
ಸ್ಯಾದ್ವಾದ ಜೈನಧರ್ಮ.
ಸ್ರುವ ಹರಿಯುವಿಕೆ, ಒಸರು, ಜಿನುಗು.
— ಇಸು ಹರಿ, ಒಸರಿಬರು, ಜಿನುಗು, ಸುರಿ, ತುಟುಕು.
ಸ್ರಾವ ಹರಿಯುವಿಕೆ, ಒಸರುವಿಕೆ; ಹರಿದು ಬಂದ ದ್ರವ್ಯ.
ಸ್ವ ತನ್ನ, ಸ್ವಂತ.
ಸ್ವಕಪೋಲಕಲ್ಪಿತ ತಾನೇ ನಿರ್ಮಿಸಿದ, ಕೈಗಂಟು.
ಸ್ವಕಾರ್ಯ ತನ್ನ ಕೆಲಸ.
ಸ್ವಕೀಯ ತನ್ನ, ತನಗೆ ಸಂಬಂಧಿಸಿದ.
ಸ್ವಚ್ಛ ಚೊಕ್ಕ, ನಿರ್ಮಲ, ಶುದ್ಧ, ತಿಳಿ.
ಸ್ವಚ್ಛಂದ ತನ್ನ ಮನದಂತೆ ನಡೆಯುವ; ಸ್ವಾಧೀನ, ಸ್ವತಂತ್ರ; ನಿರರ್ಗಳ.
ಸ್ವಜನ ತನ್ನವರು.
ಸ್ವತಂತ್ರ ಇತರರಿಗೆ ಅಧೀನವಾಗಿರದ, ತನ್ನಿಷ್ಟದಂತೆ ಇರುವ, ಬೇಕಾದಂತೆ ಇರಬಲ್ಲ.
ಸ್ವತಃ ಸ್ವಂತ, ತಾನೇ, ಖುದ್ದು.
ಸ್ವತೇವ ತನ್ನಂತೆ, ತಾನಾಗಿ, ತನ್ನಷ್ಟಕ್ಕೆತಾನೇ.
ಸ್ವತ್ತು (ಸೊತ್ತು), ಸ್ವತ್ವ ತನಗೆ ಸೇರುವ ವಸ್ತು ಒಡವೆ, ಮಾಲು.
ಸ್ವದೇಶ ತನ್ನ ದೇಶ, ತನ್ನ ನಾಡು.
ಸ್ವದೇಶಿ ತನ್ನ ನಾಡಿನ; ತನ್ನ ನಾಡಿನ ಪ್ರೀತಿ.
ಸ್ವಧರ್ಮ ತಾನು ಅನುಸರಿಸಿ ಬಂದ ಮತಾಚಾರ; ತಾನು ಪಾಲಿಸಿಬಂದ ನೀತಿ.
ಸ್ವನ ಸೊನ (ದ್ಭ), ಧ್ವನಿ, ಶಬ್ದ, ಉಲಿ.
ಸ್ವಪ್ನ ಕನಸು, ಕನವರಿಕೆ; ನಿದ್ರೆ.
— ರಾಜ್ಯ ಊಹಾರಾಜ್ಯ, ಕನಸಿನ.

**ಸ್ವಪ್ನದೋಷ** ನಿದ್ರೆಯಲ್ಲಿ ಧಾತು ಸ್ಖಲನವಾಗುವುದು.

**ಸ್ವಭಾವ** ಶೀಲ, ಸಹಜಗುಣ, ನೈಸರ್ಗಿಕವಾದ ಗುಣ, ಹುಟ್ಟುಗುಣ.

**ಸ್ವಯಂ** ತಾನೇ.

**ಸ್ವಯಂಭು** (ಸ್ವಯಂಭೂ), ಒಬ್ಬ ಮನು; ಬ್ರಹ್ಮ; ದಡ್ಡ.

**ಸ್ವಯಂವರ** ಸಯಂಬರ (ದ್ಭ) ತಾನೇ ವರಿಸುವಿಕೆ; ಒಂದು ವಿವಾಹ ಪದ್ಧತಿ, ಹೆಂಡತಿ ತಾನೇ ಗಂಡನನ್ನು ಆರಿಸುವ ಬಗೆ.

**ಸ್ವರ** ಸರ (ದ್ಭ), ಧ್ವನಿ, ಉಲಿ, ರಾಗ; ರಾಗದ ಮೆಟ್ಟಲು, ನಾದ; ವ್ಯಂಜನವಲ್ಲದ ಅಕ್ಷರ; ಉಸಿರು; ಧಾಟಿ.

**ಸ್ವರಿತ** ನುಡಿದ; ಒತ್ತಿ ಹೇಳಿದ; ಉದಾತ್ತವೂ ಅನುದಾತ್ತವೂ ಅಲ್ಲದ.

**ಸ್ವರೂಪ** ನಿಜರೂಪ; ಸ್ವಭಾವ; ಸ್ವರೂಪ, ಚೆಲುವು; ತನ್ನದೆಂಬ ಜ್ಞಾನ.

**ಸ್ವರ್ಗ** ಸಗ್ಗ (ದ್ಭ); ಇಂದ್ರಲೋಕ; ದೇವಲೋಕ; ಸಂತೋಷ, ಸುಖ.

—**ಸ್ಥ** ಸ್ವರ್ಗದಲ್ಲಿರುವ; ಸತ್ತವ, ಮರಣಗೊಂಡ.

**ಸ್ವರ್ಣ** ಚಿನ್ನ, ಬಂಗಾರ, ಬಣ್ಣ, ಹೊನ್ನು; ಹಳದಿ, ಅರಸಿನ.

**ಸ್ವರ್ಭಾನು** ರಾಹು.

**ಸ್ವಲ್ಪ** ಕಡಮೆ, ತುಸು; ಗಣನೆಗೆ ಬಾರದ.

**ಸ್ವಸ್ಥ** ಆರೋಗ್ಯ ಶೀಲ, ನಿಶ್ಚಿಂತ; ಶಾಂತಿ.

**ಸ್ವಸ್ತಿ** ಕ್ಷೇಮ; ಆಶೀರ್ವಾದ; ಮಂಗಳ; ಪುಣ್ಯ ಮೊದಲಾದವುಗಳ ಅಂಗೀಕಾರ ವಚನ.

—**ಕ** ಶುಭಕಾರಕ; ಒಂದು ವಿಧದ ಮನೆ; ಒಂದು ದ್ರವ್ಯ; ಒಂದು ಗುರುತು.

—**ವಾಚನ** ಕಾರ್ಯಾರಂಭದಲ್ಲಿ ಶುಭವಾಗುವಂತೆ ಮಾಡುವ ಹರಕೆ.

**ಸ್ವಹಸ್ತ** ತಾನೇ ಬರೆದ; ತನ್ನ ಕೈಯಿಂದಲೇ.

**ಸ್ವಂತ** ತನಗೆ ಸಂಬಂಧಿಸಿದ; ಖಾಸಗಿ.

**ಸ್ವಾಗತ** ಬರಮಾಡುವಿಕೆ; ವಂದನೆ; ಆದರದಿಂದ ಬರಮಾಡಿಕೊಳ್ಳುವುದು.

**ಸ್ವಾತಿ** ಒಂದು ನಕ್ಷತ್ರ ರಾಶಿ.

**ಸ್ವಾದ** ಸವಿ, ರುಚಿ.

**ಸ್ವಾದೂದಕ** ಸಿಹಿನೀರು.

**ಸ್ವಾಧೀನ** ತನ್ನ ಅಧೀನವಾದ, ತನ್ನ ಹಿಡಿತಕ್ಕೆ ಬಂದ; ತನ್ನ ಅಂಕೆಗೆ ಒಳಪಟ್ಟ.

**ಸ್ವಾಧ್ಯಾಯ** ತನ್ನಷ್ಟಕ್ಕೇ ಓದಿಕೊಳ್ಳುವುದು.

**ಸ್ವಾನುಭವ** ಸ್ವಂತ ಅನುಭವ, ತಾನು ಅನುಭವಿಸಿ ತಿಳಿದುದು.

**ಸ್ವಾಭಾವಿಕ** ಗುಣಕ್ಕೆ ಸಹಜವಾದ, ನೈಸರ್ಗಿಕವಾದ; ಪ್ರಕೃತಿ ನಿಯಮಕ್ಕೆ ಒಪ್ಪುವ; ತನ್ನಂತೆ.

**ಸ್ವಾಮಿ** ಒಡೆಯ, ಧನಿ, ಪ್ರಭು; ಗೌರವದಿಂದ ವಂದಿಸುವಾಗ ಅನ್ನುವ ಮಾತು; ಮಠವಿರುವ ಸನ್ಯಾಸಿ.

**ಸ್ವಾಮ್ಯ** ಒಡೆತನ, ಯಜಮಾನಿಕೆ.

**ಸ್ವಾಯತ್ತ** ತನಗೆ ಅಧೀನವಾದ.

**ಸ್ವಾರಸ್ಯ** ರಸವುಳ್ಳ ಸ್ಥಿತಿ; ಸವಿಗಾರಿಕೆ, ರುಚಿಕಟ್ಟು.

**ಸ್ವಾರ್ಜಿತ** ತಾನೇ ಗಳಿಸಿದ, ತಾನೇ ದುಡಿದ.

**ಸ್ವಾರ್ಥ** ತನ್ನದೆಂಬ ಲೋಭ; ಸ್ವಲಾಭ ಚಿಂತನೆ.

**ಸ್ವಾಸ್ಥ್ಯ** ದಾರ್ಢ್ಯ, ದೇಹ ದಾರ್ಢ್ಯ; ಸ್ವಾತಂತ್ರ್ಯ.

**ಸ್ವಾಹಾ** ಅಗ್ನಿಯ ಹೆಂಡತಿ; ಹವಿಸ್ಸು ಹಾಕುವುದು; ದುರ್ಗಾ; ನುಂಗುವುದು.

**ಸ್ವೀಕರಿಸು** ಒಪ್ಪು, ಒಪ್ಪಿಸಿಕೊಳ್ಳು, ಪಡೆ; ಬರಮಾಡಿಕೊಳು.

**ಸ್ವೀಕಾರ** ಪಡೆಯುವಿಕೆ; ಮನ್ನಣೆ; ಗೌರವದಿಂದ ಪಡೆಯುವಿಕೆ; ತೆಗೆದುಕೊಳ್ಳುವುದು.

**ಸ್ವೇಚ್ಛಾ** (ಸ್ವೇಚ್ಛೆ), ತನ್ನದೇ ಇಚ್ಛೆ, ತಾನು ಎಣಿಸಿದಂತೆ, ತನ್ನ ಇಷ್ಟದಂತೆ ವರ್ತಿಸುವಿಕೆ.

—ಮರಣ ತಾನು ಬಯಸಿದಾಗ ಸಾವು ತಂದುಕೊಳ್ಳುವಿಕೆ.

—ಮರಣಿ ಭೀಷ್ಮ.

ಸ್ವೇದ ಬೆವರು.

ಸ್ವೈರ ತನ್ನ ಇಷ್ಟ; ಸ್ವೇಚ್ಛಾಚಾರ, ಮನಸ್ವಿ.

ಸ್ವೈರಿಣಿ ಸ್ವೈರಿನ್, ಸ್ವೇಚ್ಛಾಚಾರಿಣಿ; ಜಾರೆ.

# ಹ

ಹಕೀಕತು ಲೆಕ್ಕ, ವಿವರ; ಸ್ಥಿತಿಗತಿ, ಅವಸ್ಥೆ.

—ನಾಮೆ ಲೆಕ್ಕದ ಪಟ್ಟಿ.

ಹಕೀಮ ವೈದ್ಯ, ಯುನಾನಿ ವೈದ್ಯ.

ಹಕ್ಕರಿಕೆ(ದ್ಭ) ಪಕ್ಷರಕ್ಷ(ಸಂ), ಕುದುರೆಯ ತಡಿ, ಹಲ್ಲಣ; ಆನೆಯ ಜೂಲು; ಒಂದು ಪಲ್ಲೆಯ.

ಹಕ್ಕಲು ಬಿಡುವು, ದೂರದೂರ; ಹುಲ್ಲು ಬೆಳೆಯುವ ಜಾಗ; ಬೆಟ್ಟು; ಸಣ್ಣ ಹೊಲ; ಹರಳುಕಲ್ಲು ಹೆಕ್ಕುವಿಕೆ.

ಹಕ್ಕಳೆ ಮೇಲುಭಾಗ ಗಟ್ಟಿಯಾಗುವುದು, ಹೆಪ್ಪುಕಟ್ಟುವುದು; ಮರದಲ್ಲಿ ಮೇಣಕಟ್ಟು ವುದು; ಹಾಳೆ, ಹೆರೆ.

ಹಕ್ಕಿ(ದ್ಭ) ಪಕ್ಷಿ(ಸಂ).

ಹಕ್ಕು ಅಧಿಕಾರ; ತನಗಿರುವ ಅಧಿಕಾರ; ಅಧಿಕಾರದ ಜಾಗ; ಹಿಕ್ಕು, ಪಿಚ್ಚು, ಕಣ್ ಕಿಸರು; ಸಿಂಬಳು.

—ದಾರಭಾಗಿ; ವಾರಸುದಾರ, ಭಾಗಾದಿ, ಹಕ್ಕುಪಡೆಯಲು ಯೋಗ್ಯ; ಹೊಣೆಗಾರ.

ಹಕ್ಕೆ ವಿಶ್ರಾಂತಿಸ್ಥಾನ, ಹಾಸಿಗೆ; ಆಶ್ರಯ; ಒರಗಲು ಅನುಕೂಲತೆ; ಕೊಟ್ಟಿಗೆ, ಹಟ್ಟಿ.

ಹಗ (ಹಗೆಯ), ನೆಲದಡಿಯ ಕಣಜ, ನೆಲ ಮಾಳಿಗೆ.

ಹಗರ್ (ಹಗರು), ಹದರು; ಬಿಚ್ಚಿದ ಹಸ್ತ; ಬಿದಿರಿನ ಸೀಳು, ದಬ್ಬೆ.

ಹಗರಣ ಹರಟೆ, ಹಾಳುಹರಟೆ, ಪೊಳ್ಳು ಮಾತು; ನಿಂದೆ, ಪಳಿ; ಪ್ರಕರಣ.

ಹಗಲ್ (ಹಗಲು), ದಿವಸ, ದಿನ.

ಹಗಲುದೀಪ ಗೌರವಕ್ಕಾಗಿ ಹಗಲಿನಲ್ಲಿ ಉರಿಸಿ ಯಾರ ಮುಂದಾದರೂ ಹಿಡಿಯುವ ದೀಪ; ಹಗಲುಬತ್ತಿ, ಮತಾಪು.

ಹಗಿನ ಅಂಟು, ಗಿಡದ ಒಂದು ಬಗೆ ಸೊನೆ.

ಹಗುರ ಸುಲಭ; ಭಾರವಿಲ್ಲದ; ವತನವಿಲ್ಲದ.

ಹಗೆ (ಪಗೆ), ಶತ್ರು, ವೈರಿ; ರೀತಿ, ಬಗೆ; ಹಗೆ ಯವ.

—ಹರಿ ಶತ್ರು ನಾಶವಾಗುವುದು.

ಹಗೇವು (ಹಗಯ), ಧಾನ್ಯ ತುಂಬುವ ನೆಲ ಮಾಳಿಗೆ.

ಹಗ್ಗ (ದ್ಭ) ಪ್ರಗ್ರಹ (ಸಂ), ರಜ್ಜು, ನೇಣು.

ಹಗ್ಗಿ (ದ್ಭ) ಅಗ್ನಿ(ಸಂ), ಬೆಂಕಿ, ಕಿಚ್ಚು.

ಹಗ್ಗು ತಗ್ಗು ನೆಲ; ಪಗ್ಗ, ಫಾಲ್ಗುಣಮಾಸ.

ಹಚ್ಚ ಹಸುರಾದ; ಹುಲ್ಲುಬೆಳೆದ, ಹಸನಾದ.

—ಪಡಿಸು ಹಾಸಿ ಸಿದ್ಧಮಾಡು.

ಹಚ್ಚಡ ದುಪ್ಪಟ, ರಟ್ಟು, ಹೊದೆವಸ್ತ್ರ; ಬಟ್ಟೆಯ ಉಡುಗೊರೆ.

ಹಚ್ಚೆ ಬಿದಿರ ದಬ್ಬೆ; ಚಿತ್ರ; ಮೈಯ ಮೇಲೆ ಕೊಚ್ಚಿ ಮಾಡಿದ ಚಿತ್ರ; ಹಚ್ಚೆ.

ಹಚ್ಚು ಕೊಚ್ಚು, ಹೆಚ್ಚು; ಅಂಟಿಸು; ಹಾಸು; ಉರಿಸು, ಹೊತ್ತಿಸು; ಸವರು, ಬಳಿ, ಲೇಪಿಸು.

ಹಜಾಮ ಕ್ಷೌರಕ, ನಾಪಿತ.

ಹಜಾರ ಮನೆಯ ಮುಂದಿನ ದೊಡ್ಡ ಕೋಣೆ; ಚಾವಡಿ, ಪಡಸಾಲೆ.

ಹಜೂರು ಅರಸನ ಸನ್ನಿಧಿ, ಸನ್ನಿಧಿ; ದೊಡ್ಡ ಅಧಿಕಾರಿ ಇರುವ ಸ್ಥಳ.

ಹಜ್ಜೆ (ಹೆಜ್ಜೆ), ಪಜ್ಜೆ, ಪಾದ; ಕಾಲೂರಿದ ಗುರುತು; ನಾಟ್ಯದಲ್ಲಿ ನಡಿಗೆ ಪದ್ಧತಿ(ಸಂ).

—ಹಿಡಿ ಅನುಸರಿಸು, ಹಿಂಬಾಲಿಸು.

ಹಟ (ಹಠ), ಮೊಂಡತನ, ಒರಟುತನ, ಚಲ; ಹಿಡಿದ ಅಭಿಪ್ರಾಯ ಬಿಡದ ಗುಣ.
ಹಟಿತ್ ಪ್ರಕಾಶಿಸುವ; ಪಕ್ಕನೆ ಆಗುವ.
ಹಟ್ಟಿ ಕೊಟ್ಟಗೆ, ದನದ ದೊಡ್ಡಿ, ಗೋಶಾಲೆ; ಸಂತೆ.
ಹಠ ಜೋರಾವರಿ; ಒಂದು ಯೋಗಮಾರ್ಗ; ಚಲ, ಹಟ; ಮನಸ್ಸಿನ ನಿರ್ಧಾರ.
ಹಠಾತ್ ಫಕ್ಕನೆ, ಒಮ್ಮೆಗೇ, ಪೂರ್ವ ಸೂಚನೆ ಇಲ್ಲದೆ.
ಹಡಕ ವ್ಯಭಿಚಾರಿ, ಸಿತಗ, ಪಾಣ್ಬ.
ಹಡಗು ನಾವೆ, ನೌಕೆ, ಮಂಜಿ, ಮಚ್ವೆ.
ಹಡದೆ ಗ್ರಾಮದ ಅಗಸ ಕ್ಷೌರಕ ಮೊದಲಾದವರಿಗೆ ಗ್ರಾಮಸ್ಥರು ವರ್ಷಾವಧಿ ಕೊಡುವ ಉತ್ತಾರ.
ಹಡಪ (ಅಡಪ), ತಾಂಬೂಲದಚೀಲ, ಸಂಚಿ, ಜಂಚಿ.
—ವಳ (ಹಡಪಾಳಿ), ತಾಂಬೂಲ ಸಿದ್ಧಪಡಿಸಿ ಕೊಡುವವ.
ಹಡಿ ಪಡಿ, ಬಾಗಿಲು; ಪಡೆ.
ಹಡಿಕೆ ನಾರುವಿಕೆ, ನಾತ.
ಹಡಿಲು ಬಂಜರು ನೆಲ; ಸಸ್ಯ ಬೆಳೆಯದ ಭೂಮಿ.
ಹಡು (ಪಡು), ಸುರತವಾಡು, ಸಂಭೋಗಿಸು, ಹೆಟ್ಟು, ಮಲಗು; ಬಂಜರು.
ಹಡೆ ಪಡೆ, ಹೊಂದು; ಹೆರು; ವಾಚಾಳಿ.
ಹಣ (ಪಣ), ದುಡ್ಡು, ದ್ರವ್ಯ; ನಾಣ್ಯ; ಸಂಪತ್ತು; ಚಿನ್ನದ ಒಂದು ತೂಕ.
ಹಣಕು (ಹಣಿಕು), ಇಣಕು, ಗಲ್ಲ ಎತ್ತಿ ನಿಲುಕಿನೋಡು, ನೀಕು; ಕದ್ದು ನೋಡು.
ಹಣತೆ (ದ್ಭ) ಪ್ರಣತಿ (ಸಂ), ದೀಪ ಉರಿಸುವ ಮಣ್ಣಿನ ತಟ್ಟೆ; ಹಣ್ಣಿನ ಸಾಲು, ಹಣಿಗೆ.
ಹಣಿ ಹೊಡೆ; ಸಾಯು.
—ತ ನಾಶ; ಸಾವು.
ಹಣಿಗೆ ತಲೆ ಬಾಚುವ ಸಾಮಗ್ರಿ; ಸಾಲಾಗಿ ಹಲ್ಲುಗಳಿರುವಸಾಮಗ್ರಿ; ಸಾಲಾಗಿ ಇರುವ ಹಣ್ಣು.
ಹಣು ಹಾಳಿತ, ಹದನು; ಹಣ್ಣು, ಹಂಪಲ.
ಹಣುಗು ಬಾಗು; ತಗ್ಗು; ಹೊಂಚುಹಾಕು.
ಹಣುಮಂತ (ಹನೂಮತ್), ಆಂಜನೇಯ, ಉಬ್ಬಿದ ಗಲ್ಲ ಉಳ್ಳವ.
ಹಣೆ ಲಲಾಟ, ನೊಸಲು; ಕಾಡುಮೃಗಗಳು ಅಲೆದಾಡುವ ಜಾಗ.
ಹಣ್ಣರಿವೆ ಹಳೆಯ ಬಟ್ಟೆ, ಚಿಂದಿ.
ಹಣ್ಣು (ಹಣಿ), ಫಲ; ಸಿದ್ಧಮಾಡು; ಮಾಡು; ಪಳಗಿಸು; ಶಕ್ತಿಮುರಿ.
ಹತ ನಾಶವಾದ, ಕೊಲ್ಲಲ್ಪಟ್ಟ; ಆಶೆಯಿಲ್ಲದ.
ಹತಕ ಸತ್ತಂತಿರುವ, ಮಾನಗೆಟ್ಟ; ನೀಚ, ದುಷ್ಟ.
ಹತಾಶ ಆಸೆಯಿಲ್ಲದ; ನಿರಾಶೆಗೊಂಡ.
ಹತೋಟಿ (ದ್ಭ) ಹಸ್ತವರ್ತಿ (ಸಂ); ಕೈಸೇರಿದುದು; ಅಧಿಕಾರ; ಹಿಡಿತ.
ಹತ್ತ (ದ್ಭ) ಹಸ್ತ (ಸಂ), ಕೈ; ಹಾಳಿತ; ಬಿಗು; ಸೇರಿಕೆ.
ಹತ್ತಕಡುಕು ಕಿವಿಯೊಂಟ; ಒಂದು ಕಿವಿಯ ಆಭರಣ.
ಹತ್ತಡಿ ಉಜ್ಜುಗೊರಡು, ಗೀಸುಳಿ.
ಹತ್ತಳ ಹಸ್ತಪ್ರದೇಶ, ಹಸ್ತ, ಕೈ.
ಹತ್ತಾಹತ್ತಿ ಕೈಕೈ ಯುದ್ಧ.
ಹತ್ತಿ ಕಾರ್ಪಾಸ, ಅರಳೆ; ಹತ್ತಿರ; ಹೊತ್ತಿಕೊಂಡು.
ಹತ್ತಿರ (ಹತ್ತರ), ಸಮೀಪ, ಸನಿಯ.
ಹತ್ತಿಹ (ಹತ್ತೆಯ), ಹತ್ತೆ; ಸ್ನೇಹ; ಮೆಚ್ಚಿಕೆ; ಹೊಂದಿಕೆ; ಸಮೀಪ.
ಹತ್ತು ದಶ; ತಗಲು; ಅಂಟು; ಏರು; ಹೊತ್ತು.
—ಗೆ ಸೇರಿಕೆ, ಹೊಂದಿಕೆ; ನಂಟು.
ಹತ್ತೆ ಸಮೀಪ, ಸನಿಯ; ಹತ್ತಿರ.

ಹತ್ಯ ನಾಶ, ಕೊಲೆ, ಪ್ರಾಣ ತೆಗೆಯುವ ಕೆಲಸ, ವಧೆ.

ಹತ್ಯಾರ (ಹತಿಯಾರು), ಸಾಧನ, ಆಯುಧ; ಕೆಲಸದ ಸಾಮಗ್ರಿ.

ಹದ ರೀತಿ, ಕ್ರಮ; ಹಾಳಿತ; ಬೇಕಾದಷ್ಟು; ಉಕ್ಕಿನ ಸಾಮಗ್ರಿಗಳಿಗೆ ಕೊಡುವ ಕಾವು; ಪಕ್ವಸ್ಥಿತಿ.

—ಕಾರ (ಹದಗಾರ), ರೀತಿ ಮಿತಿ ಬಲ್ಲವ, ಅಳತೆ ಬಲ್ಲವ, ಚತುರ, ನಿಪುಣ.

ಹದಡು ಮಣಿಕಟ್ಟು, ಮಣಿಗಂಟು.

ಹದನ (ಹದನು), ಸಂಗತಿ, ಸುದ್ದಿ; ಕಾರಣ; ರೀತಿ; ಯೋಗ್ಯ; ಉಚಿತ; ಹರಿತ.

ಹದರು ಎಳೆಯ, ಹೀಚು, ಮಿಡಿ; ಚಿಗುರು; ಮಣಿಕಟ್ಟು; ಚೆದರಿಸು, ಹರಡು, ಹರವು.

ಹದಿ ಆಧಾರ; ಅಗಳ್ತೆ; ತಳಕಟ್ಟು, ಪಾಯ.

ಹದಿನ್ ಹತ್ತು.

ಹದಿಬದೆ (ದ್ಭ) ಪತಿವ್ರತೆ (ಸಂ), ಸಾಧ್ವಿ.

ಹದಿರ್ (ಹದಿರು) ಹದರು; ಹಾಸ್ಯ; ಯುಕ್ತಿ ಪರವಾದ ಮಾತು; ಆತುರ; ತೆರೆದ ಹಸ್ತ; ರೀತಿ; ಮಿಡಿ, ಹೀಚು.

ಹದುಗು ಬಾಗು.

ಹದುಳ ಪದುಳ, ಕ್ಷೇಮ, ಶುಭ; ಶಾಂತ; ಸಮಾಧಾನ.

ಹದ್ದು ಗೃಧ್ರ; ಕಬ್ಬಾರೆ, ಗರುಡ; ಗಡಿ,ಮೇರೆ.

ಹನ್ ಹತ್ತು.

ಹನನ ಕೊಲೆ, ನಾಶ, ವಧೆ.

ಹನಸು ಪದ್ಯ; ವೇದದಲ್ಲಿನ ಒಂದು ಭಾಗ.

ಹನಿ ಪನಿ, ನೀರಬಿಂದು, ತೊಟ್ಟು; ತುಟುಕಿಡು, ಸುರಿ; ನೀರುಬೀಳು; ಮಾಗು, ಪಕ್ವವಾಗು.

ಹನುಕು ಹನಿ, ಸೋನೆಸುರಿ, ಜಿನುಗು.

ಹನುಮ ಹನುಮಂತ, ಆಂಜನೇಯ.

ಹನುಮಂತ ಈತನು ಅಂಜನಾ ಮತ್ತು ಕೇಸರಿಯರ ಮಗ. ಇವನು ಕಿಷ್ಕಿಂಧೆಯ ಸುಗ್ರೀವನ ಅನುಯಾಯಿ. ರಾಮಾಯಣದಲ್ಲಿ, ಈತನ ಭಕ್ತಿಯೂ ಸಾಹಸವೂ ವಿಶೇಷವಾಗಿ ವರ್ಣಿತವಾಗಿವೆ.

ಹನೆ ಪನೆ, ಒಂದು ಬಗೆ ತಾಳೆ ಮರ.

ಹಪ್ತೆ ವಾರ, ಏಳು ದಿನ; ತೆರಿಗೆ.

ಹಪ್ಪಳ ಪಪ್ಪಡ, ಒಂದು ಖಾದ್ಯ.

ಹಪ್ಪಳೆ ಚಪ್ಪಡಿ, ಹಾಸುಗಲ್ಲು; ತೆಳ್ಳಗಿನ ಕಲ್ಲುಹಾಳೆ, ಹಾಳೆ.

ಹಪ್ಪು ಕೊಳೆತ ಮಾಂಸ; ಒಣಗಿದ ಹೆಣ.

ಹಪ್ಪುಕಳ ಹಪ್ಪು ತಿನ್ನುವ ಹದ್ದು, ಕಬ್ಬಾರೆ ಹದ್ದು, ರಣಹದ್ದು.

ಹಬಸಿ ಎಬಿಸೀನಿಯದ ನಿವಾಸಿ.

ಹಬೆ (ದ್ಭ) ಪ್ರಭಾ (ಸಂ), ಪ್ರಕಾಶ; ಉಗಿ.

ಹಬ್ಬ (ದ್ಭ) ಪರ್ವ (ಸಂ), ಉತ್ಸವ, ಜಾತ್ರೆ, ಸಂತೋಷದ ದಿನ.

ಹಬ್ಬು ಪರ್ಬು; ವಿಸ್ತರಿಸು, ಹರಡು; ಹಬ್ಬಿದ ಬೀಳು, ಬಳ್ಳಿ, ಹಂಬು.

—ಗೆ ವಿಸ್ತಾರ, ಹರಡುವಿಕೆ.

ಹಬ್ಬೆ ಬೆತ್ತ.

ಹಮಾಲ ಕೂಲಿ, ಹೊರೆಯಾಳು.

ಹಮೀರ ನಿಪುಣ; ಅಮೀರ; ಮುಸಲ್ಮಾನ ಶ್ರೀಮಂತ.

ಹಮೇಷಾ ಯಾವಾಗಲೂ, ಸದಾ.

ಹಮ್ಮದ ಮೂರ್ಛೆ, ಮೈಮರೆತ.

ಹಮ್ಮಯಿಸು (ಹಮ್ಮೈಸು), ಮೈಮರೆ, ಮೂರ್ಛೆಹೋಗು.

ಹಮ್ಮಿಗೆ (ಹಮ್ಮುಗೆ), ರಾಟಿಯಲ್ಲಿ ಕದಿರು ಚಕ್ರಗಳನ್ನು ಬಿಗಿಯುವ ಹಗ್ಗ.

ಹಮ್ಮು ಅಹಂಕಾರ, ಅಹಂ, ಹೆಮ್ಮೆ; ಹೊಮ್ಮು, ವಿಸ್ತರಿಸು; ಹೆಣೆ, ಹೊಸೆ.

—ಗೆ ವಿಸ್ತಾರ; ಹಬ್ಬುಗೆ; ಬಿಗಿತ; ಹಮ್ಮಿಗೆ.

ಹಯ್ ಹೈದ, ಹುಡುಗ; ಚಲಿಸು.

ಹಯು ಕುದುರೆ; ಒಂದು ವಾದ್ಯ.

**ಹಯಗ್ರೀವ** ವಿಷ್ಣುವಿನ ಒಂದು ಅವತಾರ; ಒಬ್ಬ ದೈತ್ಯ; ದುರ್ಗೆ.

**ಹಯಿಸು** ಹೈನ; ಕರೆಯುವ ದನ; ಹಾಲು ಬೆಣ್ಣೆ ಮೊದಲಾದುವು.

**ಹಯವದನ** ಕುದುರೆ ಮುಖ; ಒಂದು ಅವತಾರ.

**ಹಯಿಲು** (ಹೈಲು), ಪೇಚು, ಬೆರಗು; ನಗೆಗೇಡು

**ಹರ** ಭಕ್ತರನ್ನು ಪಾಲಿಸುವವ, ಶಿವ, ಅಗ್ನಿ; ಕತ್ತೆ; ಅಪಹರಿಸುವಿಕೆ.

**ಹರಕತ್ತು** ಜರೂರು, ಗರ್ಜು, ಅಗತ್ಯ; ತಡೆ, ತೊಂದರೆ.

**ಹರಕರಿಸು** ಗುಂಪಾಗು.

**ಹರಕು** (ಹರುಕು), ಚಿಂದಿ, ಹರಿದುದು.

**ಹರಕೆ** ಆಶೀರ್ವಾದ; ಪ್ರಾರ್ಥನೆ; ದೇವರಿಗೆ ಹೇಳಿಕೊಳ್ಳುವುದು.

**ಹರಗು** ಹರವು, ಹರಡು; ಹೆಂಟೆ ಒಡೆದು ಸಮಮಾಡು; ಸಿದ್ಧಮಾಡು; ಗೋಚು, ದೋಚು, ಗೋರು.

**ಹರಗೋಲು** (ಹರಿಗೋಲು).

**ಹರಚು** ದೃಷ್ಟಿಗೆ ಅಡ್ಡಿಮಾಡು.

**ಹರಟು** ಹರಟೆಹೊಡೆ; ಪೊಳ್ಳು ಮಾತಾಡು.

**ಹರಟೆ** ವ್ಯರ್ಥ ಮಾತು, ಜೊಳ್ಳು ಮಾತು.

**ಹರಡಿ** (ಹರಡೆ), ಕೊಕ್ಕರೆ; ಕಂಕಪಕ್ಷಿ; ಅಣಿಲೆಕಾಯಿ.

**ಹರಡು** ಹಬ್ಬು, ವಿಸ್ತರಿಸು; ಪರಚು, ಬೆರಳಿಂದ ಕೆದರು, ಕೆರೆ, ಕೆದರಿ ಹುಡುಕು; ಹಿಮ್ಮಡಿ, ಹಿಂಬದ.

**ಹರಣ** ಸ್ಥಾನಾಂತರಮಾಡುವುದು, ಅಪಹರಿಸುವುದು; ಬಳುವಳಿ ದ್ರವ್ಯ; ಪ್ರಾಣ (ಸಂ).

**ಹರತಾಳ** ಅರದಾಳ, ಒಂದು ಅರಸಿನ ಬಣ್ಣ; ಹರ್ತಾಲ, ತಮ್ಮ ಮನಸ್ಸಿನ ಉದ್ವೇಗ ಸೂಚನೆಗಾಗಿ ಎಲ್ಲ ಚಟುವಟಿಕೆಗಳನ್ನು ನಿಲ್ಲಿಸುವುದು.

**ಹರತೆ** ಚೆದರಿದ ಕಾಳನ್ನು ಗೋರುವಿಕೆ.

**ಹರದ** ವ್ಯಾಪಾರಿ, ಬಣಜಿಗ.

**ಹರದು** ವ್ಯಾಪಾರ, ವಹಿವಾಟು; ಸಂಚಾರ.

**ಹರಯ** (ಹರೆಯ), ಪ್ರಾಯ; ರಣವಾದ್ಯ.

**ಹರವರಿ** ನೆಲೆ, ನಿವಾಸ.

**ಹರವಸ** (ದ್ಭ) ಪರವಶ (ಸಂ).

**ಹರವಳಿಸು** ದಿಗಿಲಾಗು; ದುಃಖಪಡು.

**ಹರವಿ** ಗುಡಾಣ; ಮಣ್ಣಿನ ಹಂಡೆ.

**ಹರವು** ವಿಸ್ತಾರ, ಬಡಾವಣೆ.

**ಹರಸು** ಆಶೀರ್ವಾದ ಮಾಡು.

**ಹರಹು** (ಹರಪು), ವಿಸ್ತರಿಸು; ಚಾಚು; ಹರಿಯುವಿಕೆ; ವಿಸ್ತಾರ; ಪ್ರವೇಶ.

**ಹರಳ್** (ಹರಳು), ರತ್ನ; ಕಲ್ಲುಚೂರು; ಹೊಳೆಯುವ ಲವಣದ ತುಂಡು.

**ಹರಾಮು** ತಂಟೆಖೋರ; ತುಂಟ; ನೀಚ.

**ಹರಿ** ಓಡು; ಪ್ರವಹಿಸು; ಹೋಗು; ಹಾರು; ವಿಷ್ಣು; ಸಿಂಹ; ಸರ್ಪ; ಕಪಿ; ಕಪ್ಪೆ; ಚಂದ್ರ; ಸೂರ್ಯ; ವಾಯು; ಕುದುರೆ; ಯಮ; ಕಿರಣ; ಒಂದು ಭೂಖಂಡ; ನವಿಲು; ಕೋಗಿಲೆ; ಹಂಸ; ಗಿಳಿ; ಇಂದ್ರ; ಹಳದಿ ಬಣ್ಣ; ಬೆಳಗು, ಹೊತ್ತಾರೆ; ನೀರಿರುವ ಕಾಲುವೆ.

—**ಇಸು** ಪರಿಹರಿಸು; ಓಡಿಸು; ಹರಿಯುವಂತೆ ಮಾಡು; ನಡಸು; ನಾಶಮಾಡು.

—**ಕೊಳು** ಓಡು.

—**ಹೊತ್ತು** ಹೊತ್ತಾರೆ, ಮುಂಜಾನೆ.

**ಹರಿಕಥೆ** ವಿಷ್ಣುವಿನ ವಿಷಯ ಸಂಕೀರ್ತನೆ.

**ಹರಿಕಾರ** ತ್ವರೆಯಾಗಿ ಹೋಗಿ ಸುದ್ದಿ ಮುಟ್ಟಿಸುವವ, ಓಲೆಕಾರ.

**ಹರಿಕೆ** (ಹರಕೆ), ಶಪಥ, ಕಾಣಿಕೆ ಕೊಡುವ ಪ್ರತಿಜ್ಞೆ.

**ಹರಗು** ಅಂಚು, ಹರಡಿಸು.

**ಹರಿಗೆ** (ಹಲಗೆ), ಡಾಲು, ಗುರಾಣಿ.

ಹರಿಗೋಲು (ಹರಗೋಲು), ನದಿಯನ್ನು ದಾಟಲು ಉಪಯೋಗಿಸುವ ತೊಗಲು ಮುಚ್ಚಿದ ದೊಡ್ಡ ಬುಟ್ಟಿ.
ಹರಿಚಂದನ ಒಂದು ಹಳದಿ ಬಣ್ಣ; ಒಂದು ಜಾತಿಯ ಗಂಧ.
ಹರಿಣ ಚಿಗರಿ, ಎರಳೆ, ಜಿಂಕೆ.
ಹರಿಣಾಳಿಗೆ ಹರಿಣಿ, ನೀರು ಹರಿಯುವ ಮರದ ಇಲ್ಲವೆ ಲೋಹದ ಹಾಳೆ, ದಂಬೆ.
ಹರಿಣಿ ಹೆಣ್ಣು ಚಿಗರಿ.
ಹರಿತ ಹಸುರು, ಹಸುರು ಬಣ್ಣ; ಚೂಪಾದ, ಹದನಾದ.
ಹರಿದಶ್ವ ಸೂರ್ಯ; ಹರಿತ, ಹದನಾದ.
ಹರಿದಾಸಹರಿಕೀರ್ತನೆಮಾಡುವವ,ಕೀರ್ತನ ಕಾರ; ವಿಷ್ಣುಭಕ್ತ.
ಹರಿದಿಶ್ ಪೂರ್ವ ದಿಕ್ಕು.
ಹರಿದ್ರು ಹಳದಿ ಬಣ್ಣ, ಅರಿಶಿನ.
ಹರಿದ್ವಾರ(ಹರದ್ವಾರ),ಗಂಗಾತೀರದಲ್ಲಿರುವ ಒಂದು ಯಾತ್ರಾಸ್ಥಳ.
ಹರಿನೀಲ ಇಂದ್ರನೀಲವೆಂಬ ರತ್ನ.
ಹರಿಪದ ಆಕಾಶ; ವಿಷ್ಣುಪಾದ.
ಹರಿಬ ಕಾರ್ಯ; ತೊಂದರೆ; ಸಂಬಂಧ.
ಹರಿಬಕಾವ ಯುದ್ಧವೀರ; ಕಾರ್ಯಕಾರ.
ಹರಿಮುರಿ ಕತ್ತರಿಸು.
ಹರಿಮೇಖಲೆ ಮಾಯಾವಿದ್ಯೆ, ಇಂದ್ರಜಾಲ.
ಹರಿವಂಶ ವಿಷ್ಣು ಅಥವಾ ಹರಿಯ ವಿಷಯ ವಾದ ಕಥೆಗಳು ಅಡಕವಾಗಿರುವ ಒಂದು ಹೆಸರಾದ ಪುರಾಣ.
ಹರಿವಾಣ ಹರಿಯಣ, ತಾಂಬಾಣ.
ಹರಿವಾಸರ ಏಕಾದಶಿ; ದ್ವಾದಶಿಯ ಪೂರ್ವ ದಿನ, ಹರಿಗೆ ಪ್ರಿಯವಾದ ದಿನ.
ಹರಿವಿಷ್ಟರ ಸಿಂಹಾಸನ.
ಹರಿವು(ಹರವು) ವಿಸ್ತಾರ; ಪ್ರವಾಹ; ಹೆಚ್ಚುಗೆ; ನಾಶ; ಅವಸಾನ; ಕೊನೆಗಾಣಿಸುವ ಬಗೆ.
ಹರಿವೆ ಒಂದು ಪಲ್ಲೆಯ, ತರಕಾರಿಗೆ ಬರುವ ಒಂದು ಜಾತಿ ಸೊಪ್ಪು.
ಹರಿಶಿಲೆ ಪಚ್ಚೆ ರತ್ನ, ಮರಕತ.
ಹರಿಶ್ಚಂದ್ರ ಸೂರ್ಯವಂಶದ ಒಬ್ಬ ಅರಸು. ಸತ್ಯಕ್ಕಾಗಿ ಈತನು ಸತಿಸುತರನ್ನು ಕಳೆದು ಕೊಂಡನು. ಈತನ ತಂದೆಯು ಅಯೋ ಧ್ಯೆಯ ತ್ರಿಶಂಕು ರಾಜ.
ಹರಿಸ (ದ್ಭ) ಹರ್ಷ (ಸಂ), ಮೋದ,ಆಹ್ಲಾದ, ಸಂತೋಷ.
ಹರಿಸುಲಿಗೆ ನುಗ್ಗಿ ಲೂಟಮಾಡುವುದು.
ಹರಿಸೂನು ಅರ್ಜುನ; ವಾಲಿ; ಜಯಂತ.
ಹರಿಹರ ಅರ್ಧ ಶಿವ, ಅರ್ಧ ವಿಷ್ಣುವಿನ ಒಂದು ರೂಪ; ವೀರಭದ್ರ; ಒಂದು ಊರು.
ಹರಿಹಂಚು ಒಡೆದು ವಿಭಾಗಿಸು, ಒಡೆದು ಎಸೆ; ಹಾಳು.
ಹರುಕ ಮಾನವಿಲ್ಲದವ; ಒಡೆದು ಚೂರಾದ.
ಹರುಕು ಹರಿದುದು, ಚೂರಾದುದು.
ಹರುಬು (ದ್ಭ) ದರ್ಪ (ಸಂ); ಔತಣ.
ಹರುವು ದಾರಿ, ರೀತಿ; ನಾಶ, ಆಳತೆ; ಅಗಲ.
ಹರುಷ (ಹರುಸ), ಹರ್ಷ, ಸಂತೋಷ.
ಹರೆ ವಿಸ್ತಾರವಾಗು; ಚೆದರು, ಹರಿ; ಹೊಟ್ಟೆ ಎಳೆದುಕೊಂಡು ಚಲಿಸು; ತಮಟೆ, ಹಲಗೆ; ಪ್ರಾಯ.
ಹರೆತೆಗೆ ಹಿಮ್ಮೆಟ್ಟು.
ಹರ್ಮ್ಯ ಸೌಧ, ಉಪ್ಪರಿಗೆ, ಮಹಡಿಮನೆ.
ಹರ್ಷ ಸಂತೋಷ, ಆನಂದ; ಉಲ್ಲಾಸ; ಹರ್ಷವರ್ಧನ ದೊರೆ.
ಹಲ್ (ಹಲ್ಲು), ರದನ, ದಂತ; ಮೆಟ್ಟಲು.
ಹಲ ಮೂರು ತೊಲೆ ತೂಕ; ನೇಗಿಲು; ಹಲವು, ಬಹಳ; ಅಧಿಕ.
—ಧರ ಬಲರಾಮ.
ಹಲಕಿ (ಹಲ್ಕಾ), ಹಗುರಾದುದು; ಕೀಳು ವರ್ತನೆ; ಭಂಡು.

ಹಲಕು ಮರ ಏರು, ಮರಹತ್ತು; ಕೆಳದವಡೆ.
ಹಲಗೆ (ಹಲಿಗೆ), ಫಲಕ (ಸಂ), ಗುರಾಣಿ, ಡಾಲು; ಬರೆಯುವ ಹಲಗೆ; ಮರದ ಹಾಳೆ; ತಂಬಟೆ, ನೆಲದ ಮಟ್ಟ ಸಮಮಾಡುವ ಸಾಧನ, ಗೋರುಮಣೆ.
ಹಲಸು ಪನಸ, ಹಲಸಿನ ಮರ, ಅದರ ಹಣ್ಣು.
ಹಲಹು ಸಲಹು, ಕಾಪಾಡು; ಪಳಿ, ತೆಗಳ್ಕೆ.
ಹಲಾಕು ಗಿರಾಕಿ; ಒಮ್ಮೆಗೇ ಹಲ್ಲೆಮಾಡು; ಮೇಲೇರು; ನಾಶ; ಸೊರಗಿದ.
ಹಲಾಯುಧ ಹಲಧರ, ನೇಗಿಲು ಆಯುಧ ವಾಗಿರುವವ, ಬಲರಾಮ.
ಹಲಿ ಬಲರಾಮ.
ಹಲಿಕೆ (ಹಲಗೆ), ಗೋರುಮಣೆ, ಹೊಲದಲ್ಲಿ ನೆಲದ ಏರುತಗ್ಗು ಸಮಮಾಡುವ ಸಾಧನ.
ಹಲು ಹಲ್ಲು.
—ಕಿರಿ ಹಲ್ಲನ್ನು ತೋರಿಸು, ಅಣಕಿಸು.
—ಹಳಚು ಹಲ್ಲನ್ನು ಹಲ್ಲಿಗೆ ತಾಗಿಸಿ ಕಡಿ.
ಹಲುಬು (ಹಲುಂಬು), ಪ್ರಲಾಪಿಸು, ದುಃಖ ಪಡು, ರೋದಿಸು, ನೆನೆದು ಅಳು.
ಹಲ್ಲಕ ಕೆನ್ನೈದಿಲೆ, ಕೆಂಪು ಕೋಳೆ.
ಹಲ್ಲಣ (ಹಲ್ಲಣಿಗೆ), ಹಲ್ಲಳ, ಪಲ್ಯಯನ (ಸಂ), ಕುದುರೆ ಜೀನು, ತಡಿ.
—ಇಸು ಜೀನುತೊಡಿಸು.
ಹಲ್ಲಾ (ಹಲ್ಲೆ), ಲಗ್ಗೆ, ದಂಡೆತ್ತುವಿಕೆ, ಮುತ್ತಿಗೆ.
ಹಲ್ಲಿ ಗೌಳಿ, ಪಲ್ಲಿ.
ಹಲ್ಲು (ಹಲ್).
ಹವಣ (ದ್ಭ) ಪ್ರಮಾಣ (ಸಂ), ಸಂಧಿ, ' ಸಮಯ, ಯೋಗ್ಯಸಂದರ್ಭ.
ಹವಣು (ಹವಣಿ), ಪ್ರಮಾಣ (ಸಂ); ಅಳತೆ, ಹಾಳಿತ, ಹದ.
—ಇಸು ಸಿದ್ಧಮಾಡು; ಪ್ರಮಾಣಿಸು; ಎಣಿಕೆಹಾಕು.
ಹವನ ಹೋಮದಲ್ಲಿ ಹವಿಸ್ಸು ಅರ್ಪಿಸುವಿಕೆ.

ಹವಳ (ದ್ಭ) ಪ್ರವಾಳ (ಸಂ), ಕಡಲಿನ ಒಂದು ಜೀವಿಯಿಂದ ದೊರೆಯುವ ಕೆಂಪು ಬಣ್ಣದ ರತ್ನ.
ಹವಾ ವಾಯುಗುಣ; ಮಳೆಗಾಳಿಯ ಸ್ಥಿತಿ ಗತಿ; ಗಾಳಿ.
ಹವಾಲೆ (ಹವಾಲ್ತಿ) ಹೊಣೆ, ಜವಾಬುದಾರಿ; ಹೊಣೆಪತ್ರ; ತನ್ನ ಬಗ್ಗೆ ಬೇರೆಯವರನ್ನು ಅಧಿಕರಿಸುವ ಕಾಗದ.
ಹವಿ ಹವಿಸ್ಸು; ದೇವತೆಗಳಿಗೆ ಒಪ್ಪಿಸುವ ತುಪ್ಪ ಮೊದಲಾದುವು.
ಹವೀಕ ಹವ್ಯಕ, ಹೈಗ; ಸ್ಮಾರ್ತ ಬ್ರಾಹ್ಮಣರ ಒಂದು ವರ್ಗ.
ಹವಿರ್ಭಾಗ ಚರು, ಹವಿಸ್ಸು.
ಹವ್ಯ ಹೋಮ ದ್ರವ್ಯ; ಚರು, ಹವಿಸ್ಸು.
—ಕವ್ಯ ದೇವತೆಗಳಿಗೆ ಮತ್ತು ಪಿತೃಗಳಿಗೆ ಅರ್ಪಿಸುವ ಪದಾರ್ಥ.
—ವಾಹನ ಅಗ್ನಿ.
ಹವ್ಯಾಸ ಚಾಳಿ, ಶೀಲ; ಅಭ್ಯಾಸ; ಶೀಸಿ, ನವೆ.
ಹಷ್ಮನೆ ಒಮ್ಮೆಗೆ, ಹೌಹಾರಿ.
ಹಸನು (ಹಸನ), ಪ್ರಸನ್ನ (ಸಂ); ಚೊಕ್ಕ, ನಿರ್ಮಲ; ಒಳ್ಳಿತು; ಹಸನು.
—ಇಗ ಸೊಗಸುಗಾರ, ನೀಟುಗಾರ.
ಹಸನ್ಮುಖ ನಗುಮುಖ.
ಹಸರ (ದ್ಭ) ಪ್ರಸಾರ (ಸಂ), ವಿಸ್ತಾರ; ನೆಲದ ಮೇಲೆ ವಿಸ್ತರಿಸಲ್ಪಟ್ಟ ಅಂಗಡಿ; ದಿನಸು.
—ಇಸು ಪ್ರಸರಿಸು, ಹರಡು.
ಹಸಾದ (ದ್ಭ) ಪ್ರಸಾದ (ಸಂ), ಅನುಗ್ರಹ; ಅಪ್ಪಣೆಯಂತೆ; ಅಪ್ಪಣೆ.
ಹಸಿ ಎಳೆಯ; ಪಸೆಯುಳ್ಳ; ಆರದ; ಚಿಗು ರಾದ; ಮಾಗದ.
—ತನ ಎಳಮೆ, ಹಚ್ಚಗಿನ ಸ್ಥಿತಿ.
ಹಸಿಗೆ (ಹಸುಗೆ), ಪಾಲು, ವಿಭಾಗ.
ಹಸಿತ ನಕ್ಕ; ಹಾಸ್ಯ.

ಹಸಿಬೆ (ಹಸುಬೆ), ಗೋಣಿಚೀಲ, ಗೋಣಿ ತಟ್ಟು; ನಾರುಬಟ್ಟೆ; ಇಬ್ಬದಿಯುಳ್ಳ ಚೀಲ.
ಹಸಿವು ಆಹಾರದ ಬಯಕೆ; ಅತ್ಯಾಸಕ್ತಿ, ಆತುರ, ಹಂಬಲ.
ಹಸು (ಹಸು),(ದ್ಭ)ಪಶು(ಸಂ),ಆಕಳ; ದನ.
ಹಸುಬ ಹಸುರು ಬಣ್ಣದ ಒಂದು ಹಕ್ಕಿ, ಹಸುರು ಪಾರಿವಾಳ.
ಹಸುರು ಸಸ್ಯಗಳ ಬಣ್ಣ, ಹಚ್ಚೆ, ಪಚ್ಚೆ; ಸೊಪ್ಪು.
ಹಸುಳೆ (ಪಸುಳೆ), ಸಣ್ಣ ಮಗು, ಕೂಸು.
ಹಸೆ ಚಾಪೆ; ಆಸನ; ಹೊಸ ದಂಪತಿಗಳು ಕುಳಿತುಕೊಳ್ಳುವ ಚಾಪೆ.
ಹಸ್ತ ಕೈ; ಸೊಂಡಿಲು; ಮೂರನೆಯ ನಕ್ಷತ್ರ.
—ಕ ಕೈಪಿಡಿ; ಕೈಯಲ್ಲಿ ಹಿಡಿಯಬಹು ದಾದುದು; ಚಿಕ್ಕ ಪುಸ್ತಕ.
—ಕೌಶಲ ಕೈಚಳಕ.
ಹಸ್ತಗುಣ ಕೈಗುಣ.
ಹಸ್ತಪರೀಕ್ಷೆ ಸಾಮುದ್ರಿಕೆ, ಅಂಗೈ ರೇಖೆ ಗಳನ್ನು ನೋಡಿ ಭವಿಷ್ಯ ಹೇಳುವುದು.
ಹಸ್ತಾಕ್ಷರ ಕೈಬರಹ.
ಹಸ್ತಾಮಲಕ ಕೈಯಲ್ಲಿನ ನೆಲ್ಲಿಕಾಯಿ; ಸುಲಭವಾಗಿ ತಿಳಿಯುವಂಥದು.
ಹಸ್ತಿ ಸೊಂಡಿಲುಳ್ಳುದು, ಆನೆ.
ಹಸ್ತಿನಪುರ ಕೌರವನ ರಾಜಧಾನಿ.
ಹಸ್ತಿನಿ ಹೆಣ್ಣು ಆನೆ; ಒಂದು ಸ್ತ್ರೀ ಜಾತಿ, ಸ್ಥೂಲ ಸ್ತ್ರೀ.
ಹಸ್ತೋದಕ ತರ್ಪಣ; ಸಂತರ್ಪಣೆ ಕಾಲ ದಲ್ಲಿ ಕೈಮೇಲೆ ಬಿಡುವ ನೀರು.
ಹಳಕು ತುಂಡು, ಚೂರು.
ಹಳಚಿಕೆ ಹೊಳೆತ, ಕಾಂತಿ.
ಹಳಚು ಹೊಡೆ, ಬಡಿ; ಯುದ್ಧಮಾಡು, ಕಾದು; ತಾಗು, ವಿರೋಧಿಸಿ ಹೊಡೆ.
ಹಳಮೆ ಪಳಮೆ, ಹಳತಾದುದು; ಕಳೆದ ದಿನ.
ಹಳಯಿಗೆ (ಹಳವಿಗೆ), ಪತಾಕೆ, ಬಾವುಟ.
ಹಳವಳಿಸು (ಹಳಹಳಿಸು), ದುಃಖಿಸು.
ಹಳಸು ಹಳತಾಗು; ಹಳೆಯದಾಗಿ ನಾರು.
ಹಳಹಳಿ ಕಳವಳ; ಉತ್ಸಾಹ, ಆತುರ.
—ಇಸು ಬೆದರು, ನಡುಗು; ಆತುರಪಡು.
ಹಳಿ (ಹಲಿ), ಬಲರಾಮ; ಕಂಬಿ; ಗಾಡಿ ಚಕ್ರದ ಪಟ್ಟೆ; ರೈಲಿನ ಕಂಬಿ; ಪಳಿ, ನಿಂದೆ; ನಿಂದಿಸು, ದೂಷಿಸು; ರೂಪಿಸು.
—ವು ಪಳಿವು; ನಿಂದೆ; ಅಪಕೀರ್ತಿ..
ಹಳಿಗ ಭೃಂಗಿ.
ಹಳು (ಹಳುವ), ಪಳುವ, ಕಾಡು; ಪೊದರು, ಹೊದರು.
ಹಳುವ ಹಳು; ಎಳೆತನ, ಬಾಲ್ಯ.
ಹಳುಹಳು ಶಾಭಾಸ್; ಮೆಲ್ಲಮೆಲ್ಲನೆ.
ಹಳೆ ಹೊಸತಲ್ಲದುದು, ಕಾಲ ಸಂದುದು.
ಹಳ್ಕಟ್ಟು ಹರಟು; ಹಲ್ಕ, ಹೀನ.
ಹಳ್ಳ ತೊರೆ, ತೋಡು, ಕಿರಿಯ ಹೊಳೆ.
ಹಳ್ಳಿ (ದ್ಭ) ಗ್ರಾಮ, ಪಲ್ಲೀ (ಸಂ).
ಹಂಗ (ಹೊಂಗ), ಒಂದು ನೀಲಬಣ್ಣದ ಹಕ್ಕಿ.
ಹಂಗಾಮಿ ತುರ್ತ, ತಾತ್ಕಾಲಿಕ, ಕಾಯಂ ಅಲ್ಲದ, ಈಗಿನ ಪೂರ್ತ.
ಹಂಗು ಪರರ ಉಪಕೃತಿ ಪಡೆದುದರಿಂದಾ ಗುವ ದಾಕ್ಷಿಣ್ಯ; ಸಹಾಯ.
—ಇಸು ಹಿಂದೆ ಮಾಡಿದ ಉಪಕಾರವನ್ನು ನೆನಪಿಗೆ ತಂದು ಚುಚ್ಚು.
ಹಂಗುಳಿ ಕಾಲ್ಮಣೆ, ಮುಕ್ಕಾಲು.
ಹಂಚಿ ಒಂದು ಬಗೆ ಹುಲ್ಲು.
ಹಂಚಿಕೆ ಮುಕ್ತಿ; ಸಾಧನ, ಉಪಾಯ; ಹೊಂತು, ಯೋಜನೆ, ವಿಭಾಗ.
ಹಂಚಿಗ ಮಾವುತ, ಮಾವಟಿಗ.
ಹಂಚು ಪಾಲುಮಾಡು, ವಿಭಾಗಿಸು, ಪಾಲು ಕೊಡು; ಓಡು, ಮಾಡು ಹೊದೆಸುವ ಹಂಚು, ಹೆಂಚು; ಕಾವಲಿ.

**ಹಂಜಮಾರ** ಅಲ್ಪ; ನೀಚ.

**ಹಂಜರ** (ಹಂದರ), ಚಪ್ಪರ; ಬಿದಿರು ದಬ್ಬೆ.

**ಹಂಜಿ** ಹತ್ತಿ ಸಸಿದು(ಹಿಂಜಿ) ಮಾಡಿದ ಸುರುಳಿ, ನೂಲಲು ಸಿದ್ಧಮಾಡಿದ ಹತ್ತಿಯ ಬತ್ತಿ.

**ಹಂಡ** ಮಿಶ್ರವರ್ಣ.

**ಹಂಡೆ** ಗುಡಾಣ, ದೊಡ್ಡ ತಪ್ಪಲೆ.

**ಹಂತ** (ದ್ಭ) ಪಙ್ಕ್ತಿ (ಸಂ), ಮೆಟ್ಟಲು, ಪಾವಟಿಗೆ; ಸಂತೋಷ; ದಯೆ; ದುಃಖ; ಪೀಡೆ; ಸಮೀಪ.

**ಹಂತವ್ಯ** ಕೊಲೆಗೆ ಯೋಗ್ಯ; ವಧ್ಯ.

**ಹಂತಿ** (ದ್ಭ) ಪಂಕ್ತಿ, ಸಾಲು.

— **ಕಟ್ಟು** ಸಾಲಾಗು; ಗುಂಪಾಗು.

**ಹಂತೆ** ಗರ್ವ, ಹೆಮ್ಮೆ, ಸೊಕ್ಕು.

**ಹಂದರ್** ಹಂದರ, ಚಪ್ಪರ; ಮಂಟಪ.

**ಹಂದಿ** ಸೂಕರ, ವರಾಹ.

**ಹಂದು** ಅಲುಗಾಡು, ಚಲಿಸು, ಕದಲು.

**ಹಂದೆ** ಪಂದೆ, ಹೇಡಿ, ಭೀರು.

**ಹಂದೊಗಲು** ಹಸಿ ತೊಗಲು.

**ಹಂಪಲ** ಹಣ್ಣು, ಫಲ.

**ಹಂಪೆ** ಪಂಪಾಕ್ಷೇತ್ರ; ಪ್ರಾಚೀನ ವಿಜಯನಗರ

**ಹಂಬಲ** ಚಿಂತೆ; ಬಯಕೆ, ಆತುರ; ನೆನಪು.

**ಹಂಬು** ಬೀಳು, ಬಳ್ಳಿ, ಲತೆ.

**ಹಂಸ** ಒಂದು ಜಲಪಕ್ಷಿ; ವಿಷ್ಣು; ಸೂರ್ಯ; ಒಂದು ಮಂತ್ರ; ಶ್ರೇಷ್ಠ; ಶುದ್ಧವಾದುದು; ಡಿಬಿಕನೆಂಬವನ ಸೋದರ; ಅಂಚೆ.

**ಹಂಸಕ** ಹಂಸದಂತೆ ಧ್ವನಿಮಾಡುವದು; ಕಾಲುಬಳೆ, ನೂಪುರ, ಕಿರುಗೆಜ್ಜೆ.

**ಹಂಸಧ್ವಜ** ಚಂಪಕನಗರದ ಅರಸು, ಸುಧನ್ವನ ತಂದೆ.

**ಹಂಸಪಾದ** ಲೋಪವಾದ ಅಕ್ಷರ ಇಲ್ಲವೆ ಬರಹ ಸೇರಿಸಲು ಮಾಡುವ ∧ ಈ ಗುರುತು; ಹಂಸದ ಕಾಲು.

**ಹಂಸೆ** ಹೆಣ್ಣು ಹಂಸ, ಮರಾಳೆ, ಅಂಚೆ.

**ಹಾಕು** ನೀಡು; ತುಂಬು, ಸುರಿ; ಕೊಡು, ಉಪಯೋಗಿಸು; ಇರಿಸು; ಎಸೆ.

**ಹಾಗ** ಒಂದಾಣೆ ಎರಡು ಪೈ; $\frac{1}{16}$ನೇ ಅಂಶ.

**ಹಾಗಲ** (ಹಾಗಲು), ಒಂದು ಕಹಿ ಪಲ್ಲೆಯ.

**ಹಾಗಲವಾಡಿ** ಹಿಂದೆ ಕಳೆದ ಒಂದು ಕನ್ನಡ ಸಂಸ್ಥಾನ, ಅವಿಚಾರದ ಆಡಳಿತೆ.

**ಹಾಗು** ಆ ರೀತಿಯಲ್ಲಿ, ಆ ತೆರನಾಗಿ, ಅಂತೆ; ಏನೂ ಇಲ್ಲವೆ.

**ಹಾಜರಿ** ಇರುವಿಕೆ; ಸಿದ್ಧತೆ.

**ಹಾಟಕ** ಒಂದು ದೇಶ; ಇಲ್ಲಿನ ಬಂಗಾರ; ಉಮ್ಮತ್ತದ ಗಿಡ.

**ಹಾಟು** ವೀರ್ಯ, ಧಾತು.

**ಹಾಡ** ಎಣ್ಣೆಯ ಒಂದು ಅಳತೆ.

**ಹಾಡಿಕೆ** ಹಾಡಿದ್ದು, ಗೀತ, ಸಂಗೀತ.

**ಹಾಡು** ರಾಗಾಲಾಪ ಮಾಡು; ರಾಗವಾಗಿ ಹೇಳು; ಗಾನ; ಪದ, ಗೀತ; ರೀತಿ, ಬಗೆ; ಸ್ಥಿತಿ, ಅವಸ್ಥೆ, ಪಾಡು.

**ಹಾಣಾಹಾಣಿ** ಹಣೆಹಣೆಗೆ ತಗಲುವಂತೆ ಮಾಡುವ ಯುದ್ಧ.

**ಹಾತೆ** ಒಂದು ಬಗೆ ಪತಂಗ, ಮಿಡಿತೆ; ರೆಕ್ಕೆ ಬಂದ ಗೆದ್ದಲು.

**ಹಾದರ** ವ್ಯಭಿಚಾರ.

— **ಗಿತ್ತಿ** ವ್ಯಭಿಚಾರಿಣಿ.

**ಹಾದರಿ** ಪಾದರಿ, ಪಾಟಲ ಗಿಡ.

**ಹಾದಿ** ದಾರಿ, ಬಟ್ಟೆ, ಬೀದಿ, ಪಥ; ರೀತಿ, ಬಗೆ.

— **ಹೋಕ** ಹಾದಿಕಾರ, ದಾರಿಗ.

**ಹಾನ** ಬಿಡುವಿಕೆ, ಪರಿತ್ಯಾಗ; ಓಕುಳಿ.

**ಹಾನಿ** ಕೆಡುಕು, ಲುಕ್ಸಾನು, ನಷ್ಟ.

**ಹಾನೆ** ಸೇರು, ಮೊರ, ಒಂದು ಅಳತೆ.

**ಹಾಯ್** (ಹಾಯು), ದಾಟು, ಸಂಧಿಸು; ತಾಗು; ನೂಕು; ಹಾರು; ಸಂತೋಷದ ಮಾತು; ದುಃಖಸೂಚಕ ನುಡಿ.

**ಹಾಯನ** ವರ್ಷ; ಬತ್ತ, ಧಾನ್ಯ.

ಹಾಯಿ ಪಟ, ದೋಣಿ ನಡೆಯಲು ಗಾಳಿಗೆ ಒಡ್ಡುವ ವಸ್ತ್ರ.
ಹಾರ್ (ಹಾರು); ನೆಗೆ, ಜಿಗಿ; ಆಕಾಶದಲ್ಲಿ ಚಲಿಸು; ಕುಣಿ; ಶೋಧಿಸು; ಬಯಕೆ; ನೋಡು; ಹಾರಿದ ದೂರ.
ಹಾರ ಹೊಂದಿರುವ; ಸರ.
ಹಾರಕ ಕಳ್ಳ, ದುಷ್ಟ; ಭಾಜಕದ ಅಂಕೆ; ಒಂದು ಧಾನ್ಯ.
ಹಾರಯ್ಕೆ ಹಾರೈಸುವಿಕೆ; ನಿರೀಕ್ಷಣೆ.
ಹಾರಯ್ಸು ನಿರೀಕ್ಷಿಸು, ಅಪೇಕ್ಷಿಸು.
ಹಾರಿ ಸಾರವುಳ್ಳ; ಸುಲಿವ, ಅಪಹರಿಸುವ; ಹಾರಿದ ಅಂತರ, ಹಾರು.
ಹಾರೀತ ಹಸುರು ಪಾರಿವಾಳ; ಕಪಟ, ನೀಚ; ಮೈನಾ ಹಕ್ಕಿ; ಧರ್ಮಶಾಸ್ತ್ರವನ್ನು ಬರೆದ ಒಬ್ಬ ಋಷಿ.
ಹಾರು (ಹಾರ್), ಪಾರು, ಜಿಗಿ, ಗಾಳಿಯಲ್ಲಿ ನೆಗೆ; ದಾರಿನೋಡು, ನಿರೀಕ್ಷಿಸು.
ಹಾರುವ ಪಾರ್ವ, ವೇದ ಪಾರಂಗತ, ವಿಪ್ರ, ಬ್ರಾಹ್ಮಣ.
ಹಾರೆ ನೆಲ ಅಗೆಯುವ ಸಾಧನ.
ಹಾರ್ದ ಹೃದಯಕ್ಕೆ ಸಂಬಂಧಿಸಿದ, ಪ್ರೀತಿ, ಒಲುಮೆ.
ಹಾರ್ವ(ಪಾರ್ವ), ಪಾರುವ, ವಿಪ್ರ, ಬ್ರಾಹ್ಮಣ.
ಹಾಲ್ (ಹಾಲು), ಪಾಲು, ಕ್ಷೀರ; ರಸ; ಸೊನೆ.
ಹಾಲವಕ್ಕಿ ಊಳಿಗನ ಪಕ್ಷಿ, ಶಕುಂತ; ಶಕುನದ ಹಕ್ಕಿ.
ಹಾಲಹವಾಲು ದುಃಸ್ಥಿತಿ, ತನ್ನ ದುಃಸ್ಥಿತಿಯನ್ನು ಹೇಳಿಕೊಳ್ಳುವಿಕೆ.
ಹಾಲಾಹಲ ಅತಿ ಭಯಂಕರವಾದ ಒಂದು ವಿಷ; ಒಂದು ಕೀಟ; ಮದ್ಯ, ಕಳ್ಳು.
ಹಾಲಿ ಪದ್ಯ; ಈಗ; ಸದ್ಯ; ತತ್ಕಾಲ.
ಹಾಲಿವಾಣ ಪಾರಿವಾಳ; ಒಂದು ಮರ.
ಹಾಲು (ಹಾಲ್).
—ಬೆಳ್ಳಿ ಶುದ್ಧ ಬೆಳ್ಳಿ.
ಹಾಲೆ (ಹಾಳೆ), ಕಿವಿಯ ಕೆಳತುದಿ; ಒಂದು ಮರ; ಕಿವಿಯ ಹಾಳೆ; ತಗಡು.
ಹಾವ ಸಂಕೇತ; ಚೇಷ್ಟೆ, ಸ್ತ್ರೀಯರ ಶೃಂಗಾರ ಚೇಷ್ಟೆ, ಮುರುಕ; ಸೂಚನೆ.
ಹಾವಭಾವ ಮಾತು ಅಭಿನಯ, ಮುಖ ವಿಕಾರ.
ಹಾವರಾಣೆ ಅರಣೆ, ಓತಿ; ಹಸುರು ಹಲ್ಲಿ.
ಹಾವಸೆ ಪಾವಸೆ, ಪಾಚಿ, ನೀರಿನಲ್ಲಿ ಬೆಳೆಯುವ ಗಿಡ ಜಾತಿ, ಅಂತರಗಂಗೆ.
ಹಾವಳಿ ತೊಂದರೆ, ಉಪಟಳ; ಲೂಟ.
ಹಾವಾಡಿಗ (ಹಾವಡಿಗ) ಹಾವುಗಳನ್ನು ಹಿಡಿದು ಆಡಿಸುವವ, ಹಾವುಗಾರ.
ಹಾವು ಉರಗ, ಸರ್ಪ ಜಾತಿ.
ಹಾವುಗೆ(ಹಾವಿಗೆ), ಪಾದುಕಾ (ಸಂ); ಆವುಗೆ, ಆವಿಗೆ, ಮಡಕೆ ಸುಡುವ ಗೂಡು.
ಹಾಸ ನಗೆ.
ಹಾಸಕ ನಗುವ; ನಗೆಗಾರ, ವಿದೂಷಕ.
ಹಾಸಡಿಯ ಜಾಲಪಾದವುಳ್ಳ.
ಹಾಸಲು ತಿರುಳು; ಬೆಲೆ, ಮೌಲ್ಯ, ವೆಚ್ಚ.
ಹಾಸಂಗಿ ಪಗಡೆಮಣೆ; ಜೂಜಾಡುವ ಮಣೆ; ದಾಳ.
ಹಾಸಿಗೆ (ಹಾಸುಗೆ), ಚಾಪೆ; ಶಯ್ಯೆ.
ಹಾಸು ಪಾಶ (ಸಂ), ಕೊರಳ ಹಗ್ಗ; ಮಗ್ಗದ ಉದ್ದದ ನೂಲುಗಳು; ಹಾಸಿಗೆ, ತಲ್ಪ; ಹರವಿ ಬಿಡಿಸು, ಹರಗು.
—ಹೊಕ್ಕು ಮಗ್ಗದಲ್ಲಿ ಉದ್ದ ಅಡ್ಡ ನೂಲುಗಳು; ಅನ್ಯೋನ್ಯ.
ಹಾಸುಗಲ್ಲು ಚಪ್ಪಡಿಕಲ್ಲು.
ಹಾಸೆ ಚೆಲುವಿನ ಹಾಸಿಗೆ, ಹಸೆ.
ಹಾಸ್ಯ ನಗು ಹುಟ್ಟಿಸುವ ರೀತಿ; ಚೇಷ್ಟೆ, ವಿನೋದ.
ಹಾಹಾಕಾರ ಕೋಲಾಹಲ, ಗಲಿಬಿಲಿ.

ಹಾಹೆ ಪಾಪೆ; ಕಾಲತೊಡರು; ಕಾಲುಬಳೆ; ಗೊಂಬೆ.
ಹಾಳಿ ಪಾಳಿ, ಪಂಕ್ತಿ, ಕ್ರಮ, ರೀತಿ; ಸರದಿ.
—ಹಸುಗೆ ಕ್ರಮವಾದ ಹಂಚಿಕೆ; ವಿಚಾರ, ವಿವೇಕ.
ಹಾಳಿತ ಅಳತೆಗೆ ಸಮನಾದ, ತಕ್ಕ, ಹದ, ಒಪ್ಪುವ.
ಹಾಳು (ಹಾಳ್) ಭೂಮಿ, ಗದ್ದೆ; ದತ್ತಿ, ಹಾನಿ, ಕೆಟ್ಟ; ಬಂಜರು.
ಹಾಳೆ ಅಡಿಕೆ ಸೋಗೆಯ ಬುಡ; ಕಾವು; ಚಪ್ಪಟೆಯಾದ ವಸ್ತು; ತಗಡು, ತಾವು.
ಹಾಳೆಹದ್ದು ಹೆಣಹದ್ದು, ರಣಹದ್ದು, ಹಪ್ಪುಕಳ.
ಹಿಕಮತ್ತು ಉಪಾಯ, ಯುಕ್ತಿ.
ಹಿಕ್ಕಾಲು ನೀರು ಓಡುವ ಮಗ್ಗುಲು ತೋಡು.
ಹಿಕ್ಕು ಪಿಕ್ಕು, ವಿಂಗಡಿಸು; ಬಾಚು.
ಹಿಕ್ಕೆ ಕುರಿ ಆಡುಗಳ ಸಗಣಿ.
ಹಿಗ್ಗಲು ಉಬ್ಬಲು.
ಹಿಗ್ಗಾಮುಗ್ಗು ಹಿಂದೂ ಮುಂದೂ ವಿಸ್ತರಿಸು.
ಹಿಗ್ಗು ಉಬ್ಬು; ಉತ್ಸಾಹ ತಾಳು, ಗರ್ವ ತಾಳು; ಅರಳು; ಬೇರೆಯಾಗು.
ಹಿಚುಕು (ಹಿಸುಕು), ಕಿವುಚು, ಗಿವುಚು, ತಿಕ್ಕಿ ತೇಯು.
ಹಿಜರಿ ಮಹಮ್ಮದೀಯರು ಮಹಮ್ಮದನು ಮಕ್ಕಾದಿಂದ ಮದೀನಕ್ಕೆ ಹೋದ ಕಾಲದಿಂದ ಎಣಿಸುವ ಶಕ.
ಹಿಂಜಾರು ಚಲ್ಲಣ, ಪಾಯಿಜಾಮು.
ಹಿಟ್ಟು (ದ್ಭ) ಪಿಷ್ಟ (ಸಂ), ಧಾನ್ಯದ ಪುಡಿ; ಹಿಟ್ಟಿಂದ ಮಾಡಿದ ರೊಟ್ಟಿ, ಆಹಾರ.
ಹಿಡಲು ಕಸಬರಿಗೆ, ಪೊರಕೆ, ಹಿಡಿಸೂಡಿ.
ಹಿಡಿ ಪಿಡಿ; ಮುಷ್ಟಿಯಲ್ಲಿ ಪಡೆಯಬಹುದಾದುದು; ಆಯುಧಗಳನ್ನು ಹಿಡಿವ ಭಾಗ, ಹಿಡಿಕೆ; ಒತ್ತು, ತಡೆ; ಹೆಣ್ಣಾನೆ; ಕಸಬರಿಕೆ.
—ಕೆ ಹಿಡಿ, ಹಿಡಿಯುವ ಭಾಗ.
ಹಿಡಿಮೃಗ ಇತರ ಪ್ರಾಣಿಗಳನ್ನು ಹಿಡಿಯಲು ಬಳಸುವ ಸಾಕುಮೃಗ.
ಹಿಡಿಲು ಕಸಬರಿಗೆ, ಪರಕೆ.
ಹಿಡಿಸು ಗ್ರಹಣ, ಪಡೆಯುವಿಕೆ; ತಡೆಯುವಂತೆ ಮಾಡು; ದೊರೆಯುವಂತೆ ಮಾಡು; ಕೈಕೊಳುವಂತೆ ಮಾಡು.
ಹಿಡಿಂಬಿ ಕಿಮ್ಮೀರನೆಂಬ ರಕ್ಕಸನ ತಂಗಿ. ಇವಳು ಭೀಮನನ್ನು ವರಿಸಿದಳು. ಇವರ ಮಗನೇ ಘಟೋತ್ಕಚ.
ಹಿಡುವಳಿ ಭೂಮಿಯ ಅಧಿಕಾರ; ಜಮೀನು.
—ದಾರ ಭೂಮಿಯ ಅಧಿಕಾರಿ, ಜಮೀನುದಾರ.
ಹಿಣಿ ಕಕುಧ, ಭುಜ, ಡುಬ್ಬ.
ಹಿಣಿಜು ಮೀನಿನ ಪರೆ, ಪರೆ.
ಹಿಣಿಲು ಎತ್ತಿನ ಭುಜ, ಡುಬ್ಬ; ಜಡೆ, ಹೆರಳು; ಹೆಡೆ; ಜಡೆ.
ಹಿತ ತಕ್ಕ, ಯೋಗ್ಯ; ಅನುಕೂಲ, ತೃಪ್ತಿ; ಒಗ್ಗುವಂಥದು; ಲಾಭ; ಶ್ರೇಯಸ್ಸು, ಒಳಿತು.
ಹಿತೈಷಿ ಒಳ್ಳೆಯದನ್ನು ಎಣಿಸುವವ.
ಹಿತೋಪದೇಶ ಒಳಿತಾಗಲೆಂಬ ಬೋಧನೆ; ಯೋಗ್ಯಉಪದೇಶ; ಒಂದು ನೀತಿಬೋಧಕ ಸಂಸ್ಕೃತ ಗ್ರಂಥ.
ಹಿತ್ತಾಳೆ ತಾಮ್ರ ಮತ್ತು ತವರಗಳ ಒಂದು ಮಿಶ್ರಲೋಹ.
ಹಿತ್ತಿಲು (ಹಿತ್ತಲು), ತೋಟ, ಮನೆ ಹಿಂಗಡೆ ಜಾಗ.
ಹಿದುಕು ಹಿಸುಕು, ಹಿಚುಕು, ಗಿವುಚು, ಕಿವುಚು.
ಹಿನ್ ಹಿಂ, ಹಿಂದೆ.
ಹಿನ್ನಿ ಬಾಣದ ಪುಂಖ.
ಹಿನ್ನೆಲೆ ಹಿಂಭಾಗ; ಸೇನಾ ನಿವೇಶ.

ಹಿಪ್ಪಲಿ ಒಂದು ಸಸ್ಯ.
ಹಿಪ್ಪೆ ಜೊಗಟೆ, ಹಿಂದೆ ಉಳಿದುದು; ಇಪ್ಪೆ.
ಹಿಮ ತಂಪು, ಶೀತ; ಇಬ್ಬನಿ, ಮಂಜು, ಚಂದ್ರ; ಪಚ್ಚಕರ್ಪೂರ; ಹಿಮಾಲಯ ಪರ್ವತ; ಶಿವ; ಕೀರ್ತಿ.
—ಅಂಶು ತಂಪಾದ ಕಿರಣವುಳ್ಳವ, ಚಂದ್ರ.
ಹಿಮಾನಿ ಹಿಮಸಮೂಹ.
ಹಿಮಾಲಯ ಯಾವಾಗಲೂ ಮಂಜು ಮುಚ್ಚಿದ ಪರ್ವತ, ಹಿಂದುಸ್ಥಾನದ ಉತ್ತರ ಮೇರೆಯಾದ ಒಂದು ಪರ್ವತಾವಳಿ.
ಹಿಮಿಕೆ ಮಂಜು, ಇಬ್ಬನಿ, ಹಿಮ.
ಹಿಮ್ಮಡಿ ಹಿಮ್ಮಡ,ಅಂಗಾಲು, ಕಾಲ ಹಿಂದಿನ ಮತ್ತು ಅಡಿಯ ಭಾಗ, ಹರಡು.
ಹಿಮ್ಮೇಳ ನೃತ್ಯಗಾರನ ಜತೆಗೆ ಇರುವ ವಾದನ, ಹಿಂದಿಂದ ಅನುಸರಿಸುವ ಗಾನ ಕೂಟ.
ಹಿಯ್ಯಾಳಿ ಪರಾಕ್ರಮ; ನೀಚ; ದೈವೇಚ್ಛೆ.
—ಕೆ ನಿಂದೆ, ಪಳಿ, ದೂಷಣೆ.
ಹಿರಣ್ಮಯ ಚಿನ್ನದ.
ಹಿರಣ್ಯ ಚಿನ್ನ; ಧನ; ಉಮ್ಮತ್ತದ ಗಿಡ.
ಹಿರಣ್ಯಕಶಿಪು ದಿತಿ ಕಶ್ಯಪರ ಮಗ; ಪ್ರಹ್ಲಾದನ ತಂದೆ. ಈ ತಂದೆ ಮಕ್ಕಳಿಗೆ ವೈರವುಂಟಾಗಿ ವಿಷ್ಣುವು ನರಸಿಂಹನಾಗಿ ಬಂದು ಹಿರಣ್ಯಕಶಿಪುವನ್ನು ಕೊಂದನೆಂದು ಕಥೆ.
ಹಿರಣ್ಯಗರ್ಭ ಬಂಗಾರದ ಅಂಡದಿಂದ ಹುಟ್ಟಿದವ, ಬ್ರಹ್ಮ.
ಹಿರಣ್ಯಾಕ್ಷ ಹಿರಣ್ಯಕಶಿಪುವಿನ ಸೋದರ.
ಹಿರಿ ದೊಡ್ಡ, ಶ್ರೇಷ್ಠ; ಒಡೆ, ನಾಶಮಾಡು, ಮುಗಿ, ಬಿಳಿ; ಒರೆಯಿಂದ ತೆಗೆ, ಹೊರತೆಗೆ.
ಹಿರೆ (ಹಿರಿ), ದೊಡ್ಡ.
ಹಿಲಾಲು ದೀವಟಿಗೆ, ದೊಡ್ಡ ದೀಪ, ಕಕ್ಕಡ, ಒಂದು ಬಗೆ ದೊಂದಿ.
ಹಿಸಿ ಒತ್ತು; ಒಡೆ; ಹರಿ, ಸೀಳು, ಸಿಗಿ; ಹಿಂಜು.
ಹಿಸುಕು(ಹಿಸಕು),ಹಿಚುಕು,ಗಿವುಚು,ಹಿಂಡು
ಹಿಸುಣ (ಪಿಸುಣ), ದುರ್ಜನ, ನೀಚ; ಚಾಡಿಖೋರ, ಪಿಶುನ (ಸಂ).
ಹಿಸೆ ಪಾಲು, ಅಂಶ.
ಹಿಳಲು (ಹಿಣಿಲು).
ಹಿಳಿ ಹಿಂಡು,ಹಿಸುಕು,ಕಿವುಚು; ಮಿಟಮಿಟನೆ.
ಹಿಳಿಗೆ ಪೇಳಿಗೆ, ಬುಟ್ಟಿ.
ಹಿಳುಕು ಬಾಣದ ತುದಿ; ಸೊಕ್ಕು, ಗರ್ವ; ಬಾಣದ ಬುಡ.
ಹಿಳ್ಳೆ ಮೊಳಕೆ, ಬೆದೆ; ಸಣ್ಣ ಗಿಡ.
ಹಿಂಗಟ್ಟು ಹಿಂದೆ ಮಾಡಿದ ಕಟ್ಟು.
ಹಿಂಗರಣೆ ಹಿಂದಕ್ಕೆ ತಿರುಗುವಿಕೆ.
ಹಿಂಗಾರ ಸಿಂಗಾರ, ಅಡಕೆ ಹೂ.
ಹಿಂಗಾರು ಮಳೆಗಾಲದ ಕೊನೆಗೆ ಬರುವ ಮಳೆ, ಈಶಾನ್ಯದಿಂದ ಬೀಸುವ ಮಳೆಗಾಳಿ.
ಹಿಂಗು ಹಿಂದೆ ಸರಿ; ಬತ್ತು, ಆರು, ಇಂಗು; ಒಂದು ತೀಕ್ಷ್ಣ ಪರಿಮಳ ದ್ರವ್ಯ.
ಹಿಂಗೋಟು ದೋಣಿಯ ಹಿಂದಿನ ತುದಿ, ಹಿಂಭಾಗ.
ಹಿಂಚು ಹಿಂದೆ; ಆ ಮೇಲೆ, ಅನಂತರ.
—ಮುಂಚು ಹಿಂದು ಮುಂದು.
ಹಿಂಚೆ ಅನಂತರ, ಆ ಮೇಲೆ.
ಹಿಂಜರಿ ಹಿಮ್ಮೆಟ್ಟು, ಹಿಂದೆಗೆ, ಧೈರ್ಯಗೆಡು.
ಹಿಂಜಿ ಸಸಿದ ಹತ್ತಿ; ಕಸ ತೆಗೆದ ಹತ್ತಿಯ ಸುರುಳಿ, ನೂಲಲು ಸಿದ್ಧಮಾಡಿದ ಬತ್ತಿ.
ಹಿಂಜು ಸಸಿ, ಹಿಕ್ಕು ತೆಗೆ; ಬೇರೆ ಮಾಡು.
ಹಿಂಡಲು ಗಿಡಗಳ ಗುಂಪು, ಮೆಳೆ.
ಹಿಂಡು ಗುಂಪು; ಪ್ರಾಣಿಸಮೂಹ; ನೀರುತೆಗೆ.
—ಕೂಡು ಗುಂಪುಗೊಳು.
ಹಿಂಡುಬಲೆ ಗುಂಪಾಗಿ ಬೀಳುವ ಬಲೆ.
ಹಿಂಡೆ (ದ್ಭ) ಪಿಂಡ (ಸಂ), ಅನ್ನದ ಮುದ್ದೆ.
ಹಿಂತಾಳ ಖರ್ಜೂರದ ಮರ; ಓಲೆಯ ಮರ.
ಹಿಂಪು (ಪಿಂಪು), ಪೆಂಪು, ಮಹತ್ವ.

**ಹಿಂದೀ** ಉತ್ತರ ಹಿಂದುಸ್ಥಾನದ ಒಂದು ಭಾಷೆ; ಹಿಂದುಸ್ಥಾನಿಯ ಸೋದರ ಭಾಷೆ.

**ಹಿಂದುಸ್ಥಾನ** ಭಾರತ ವರ್ಷ, ಹಿಂದೂದೇಶ.

**ಹಿಂದುಸ್ಥಾನಿ** ಉರ್ದು, ಹಿಂದಿಗಳಿಗೆ ಸಮೀಪವಾದ ಒಂದು ಭಾಷೆ; ಹಿಂದುಸ್ಥಾನದ.

**ಹಿಂದೆ** ಈ ಮೊದಲು, ಹಿಂಚೆ, ಮುಂಚೆ; ಬೆಂಗಡೆ; ಜಡತ್ವ, ವೇಗವಿಲ್ಲದ; ಅನಂತರ.

**ಹಿಂದೂ** ಹಿಂದುಸ್ಥಾನದವ; ಸನಾತನ ಧರ್ಮ

**ಹೀ** ಛೀ; ಹಾ, ಆಹಾ.

**ಹೀಗೆ** ಈ ರೀತಿ, ಈ ತೆರ.

**ಹೀಚು** ಮಿಡಿ, ಎಳಗಾಯಿ, ಕಸುಗಾಯಿ.

**ಹೀಜು** ಎಳೆ; ಹರಿ; ಈಸು, ಈಜು, ಮೀಸು.

**ಹೀನ** ಕೊರತೆಯುಳ್ಳ, ಕಡಮೆತನ, ಊನ; ಕೀಳು; ನಿಂದೆಗೆ ತಕ್ಕ.

**ಹೀನಾಯ** ಹೀನತನ; ಕೊರತೆ, ಐಬು.

**ಹೀಪ** ಎಡ.

**ಹೀಯಾಳಿಸು** ಹಳಿ, ನಿಂದಿಸು.

**ಹೀರ್** (ಹೀರು), ಪೀರು, ಚೀಪು; ದ್ರವವನ್ನು ಸೆಳೆ; ವಜ್ರ.

**ಹೀರ** ಹೀರಕ, ವಜ್ರ; ಸರ್ಪ; ಸರ; ಸಿಂಹ.

**ಹೀರಾಳಿ** ವಜ್ರದ ಸರ.

**ಹೀರೆ** ಒಂದು ತರಕಾರಿ, ಒಂದು ಪಲ್ಲೆಯ.

**ಹೀಲಿ** ಪೀಲಿ, ನವಿಲು ಗರಿ; ಬೆಂಡು.

**ಹೀಹಾಳ** ಗೋಜು; ಬೇಸರ; ತೊಂದರೆ.

—**ಕೆಡಿಸು** ಹೀನಯಿಸು, ನಿಂದಿಸು.

**ಹುಕುಂ** ಆಜ್ಞೆ, ಅಪ್ಪಣೆ.

**ಹುಗಿ** ಹೂಳು, ನೆಲದ ಕೆಳಕ್ಕೆ ಹಾಕು.

**ಹುಗಿಲು** ಪ್ರವೇಶ; ಸೀಳಿದ ಇಲ್ಲವೆ ತುಂಡಾದ ಸ್ಥಿತಿ, ತುಂಡಾದ ಭಾಗ.

—**ಕರೆ** ಸೀಳು.

**ಹುಗು** (ಪುಗು), ಪ್ರವೇಶಿಸು, ಹೊಗು; ಸೇರು; ನುಗ್ಗು.

—**ಇಸು** ಪ್ರವೇಶಿಸು.

**ಹುಗುಳು** ಬೊಕ್ಕೆ, ಹುಣ್ಣು; ಬೇಳೆ; ಉಗುಳು, ಬಾಯನೀರು.

**ಹುಗ್ಗಿ** ಕಿಚ್ಚಡಿ, ಪೊಂಗಲು; ಪಾಯಸ.

**ಹುಗ್ಗಿಗ** ಸಮರ್ಥ, ಬಲಿಷ್ಠ.

**ಹುಚ್ಚ** ಮರುಳ; ಮಂಕ, ಭ್ರಾಂತ; ತಿಳಿಗೇಡಿ.

**ಹುಚ್ಚು** ಮರುಳು; ಮಂಕು, ಭ್ರಾಂತು.

—**ಹರಿ** ಮೇರೆಮೀರಿ,ಕಟ್ಟುಮೀರು; ಸೊಕ್ಕು

**ಹುಟ್ಟಿ** ಜೇನುತಟ್ಟಿ.

**ಹುಟ್ಟಿಗೆ** ಉಡುಗೆ, ತೊಡುಗೆ; ಹುಟ್ಟುಡುಗೆಯಲ್ಲಿ ಇರುವವ, ನಗ್ನ.

—**ಅವ** ಹುಟ್ಟುಡುಗೆಯವ, ಬತ್ತಲೆಯವ, ನಗ್ನ ಸನ್ಯಾಸಿ.

**ಹುಟ್ಟು** ಪುಟ್ಟು, ಜನಿಸು; ಉತ್ಪನ್ನವಾಗು; ಆಗು; ಮೂಡು; ದೋಣಿಯ ತೊಳೆ; ಸೌಟು.

—**ವಳಿ** ಮುನಾಫೆ; ಜಮೀನಿನಿಂದ ಬರುವ ಲಾಭ, ಆದಾಯ.

—**ಹ** ಜನ್ಮ; ಉತ್ಪನ್ನ.

**ಹುಡಿ** ಪುಡಿ, ದೂಳು; ನಸ್ಯ, ನಾಸೀಪುಡಿ; ಪರಾಗ.

**ಹುಡುಕು** ಶೋಧಿಸು, ಅರಸು, ತಪಾಸಣೆ ಮಾಡು.

**ಹುಡುಕುಳಿ** ಹುಡುಕುವವ.

**ಹುಡುಗ** ಹೈದ, ಗಂಡು ಮಗು, ಕಿಶೋರ; ತನಯ, ಮಗ.

**ಹುಡುಗಿ** ಹೆಣ್ಣು ಮಗು, ಕನ್ಯೆ.

**ಹುಣಸೆ** (ಹುಣಿಸೆ), ಹುಳಿ, ಒಂದು ಹುಳಿ ಕಾಯಿ; ಅದರ ಮರ.

**ಹುಣ್ಣಿಮೆ** (ದ್ಭ) ಪೂರ್ಣಿಮಾ (ಸಂ), ಪೂರ್ಣ ಚಂದ್ರನು ಕಾಣಿಸುವ ದಿನ.

**ಹುಣ್ಣು** ಗಾಯ, ವ್ರಣ.

**ಹುತ್** (ಹುಲ್ಲು).

**ಹುತ** ಹವಿಸ್ಸು, ಹವ್ಯ, ಅಗ್ನಿಗೆ ಅರ್ಪಿಸುವ ಒಡವೆ, ಚರು.

**ಹುತಾಶನ** ಹುತಭುಕ್, ಹುತವಹ, ಅಗ್ನಿ.
**ಹುತ್ತ** ಹುತ್ತು, ಗೆದ್ದಲಗೂಡು, ಇರುವೆ ಮನೆ.
**ಹುದಿ** ವ್ಯಾಪಿಸು; ತುಂಬು.
**ಹುದಿಲು** ಜವುಗು ಭೂಮಿ ಜವುಳು ನೆಲ.
**ಹುದು** ಪುದು, ಸ್ನೇಹ, ಅನ್ಯೋನ್ಯ; ಪಾಲು; ನಂಟುತನ.
— ವು (ಪುದುಪು), ಸ್ನೇಹ.
**ಹುದುಗು** ಮುಚ್ಚಿಡು; ಮರೆಮಾಡು; ಅಡಗಿಕೊ; ನೆಲದಲ್ಲಿ ಪ್ರಾಣಿಗಳ ಅಡಗುವಿಕೆ; ಪರಸ್ಪರ ಸೇರಿಸು; ಹಿಟ್ಟಿಗೆ ಹದ ಬರಲು ಹಾಕುವ ಮದ್ದು.
**ಹುದ್ದೆ** ಪದವಿ; ಅಧಿಕಾರ.
**ಹುನ್ನರು** ಚಾತುರ್ಯ, ಉಪಾಯ, ಯುಕ್ತಿ.
**ಹುಬ್ಬು** ಪುರ್ಬು, ಭ್ರುಕುಟ.
**ಹುಮ್ಮಸ** ಗರ್ವ, ಅಹಂಕಾರ; ಧೈರ್ಯ; ಆತುರ, ಬಯಕೆ: ಉತ್ಸಾಹ: ಹುರುಪು.
**ಹುಯಿಲು** (ಹುಯ್ಯಲು), ಗರ್ಜನೆ, ಮೊರೆ; ಚೀರಾಟ, ಆರ್ತನಾದ; ಕಾಟ; ಯುದ್ಧ.
**ಹುರಿ** ಹಂಚಿನಲ್ಲಿ ಹುರಿ: ತಿರುಪು, ಕಾವು; ಹಗ್ಗ; ಜಗಳ, ಕಲಹ; ಹೆರೆ,ಪರೆ; ಧೈರ್ಯ; ಶಕ್ತಿ; ಕಶೇರು; ಹುರುಪು; ಹುರಿ ಹಾಕಿದ ಹಗ್ಗ, ಕಾತಿ.
— ಕಟ್ಟು ಧೈರ್ಯಹೊಂದು.
— ತುಂಬಿಸು ಪ್ರೋತ್ಸಾಹಿಸು.
**ಹುರುಕಲು** ಹುರಿಗಾಳು; ಏರುತಗ್ಗಾದುದು, ದೊರಗು, ಒರಟು.
**ಹರುಗಲು** ಒಂದು ಮರ.
**ಹುರುಡು** ಸ್ಪರ್ಧೆ, ಮತ್ಸರ; ಸಾರವಿಲ್ಲದುದು; ಗೊಂದಲ.
**ಹುರುಪು** ಹುಮ್ಮಸ, ಉತ್ಸಾಹ, ಹುರಿ.
**ಹುರುಳ್** (ಹುರುಳ್), ಸಾರ; ಸತ್ವ; ಒಳಿತು;
**ಹುಲಿ** ವ್ಯಾಘ್ರ, ಒಂದು ಕ್ರೂರ ಪಶು, ಬರೆ ಹುಲಿ, ಪಟ್ಟೆ ಹುಲಿ.
**ಹುಲಿಮುಖ** ಕೋಟೆಯೊಳಗಿನ ಕಿರುದಾರಿ, ಕಿರುಮಾರ್ಗ.
**ಹುಲು** ಹುಲ್ಲು; ಕ್ಷುಲ್ಲಕ, ಅಲ್ಪ.
**ಹುಲುವರ** ಹುರುಳಿ.
**ಹುಲುಸು** (ಹುಲಸು), ಸಮೃದ್ಧಿ; ಸೊಂಪು, ಹೆಚ್ಚುಗೆ.
**ಹುಲ್ಲು** (ಹುಲು).
— ಬನ್ನಿ ಹುಲ್ಲುಗಾವಲು.
**ಹುಲ್ಲೆ** ಜಿಂಕೆ, ಮಿಗ, ಚಿಗರಿ.
**ಹುವ್ವಾಡಿಗ** ಹೂಮಾರುವ, ಹೂಗಾರ.
**ಹುಷಾರಿ** ಎಚ್ಚರ; ಜಾಗರೂಕತೆ.
**ಹುಷಾರು** ಜಾಣ, ಎಚ್ಚರವುಳ್ಳವ, ಚತುರ; ಸ್ವಸ್ಥ: ಆರೋಗ್ಯಶೀಲತೆ.
**ಹುಳಿ** ಆಮ್ಲತೆ; ಅಹಂಕಾರ.
**ಹುಳು** ಹರೆಯುವ ಎಲುಬಿಲ್ಲದ ಕೀಟಜಾತಿ; ಹುಲು, ಅಲ್ಪ.
**ಹುಳುಕ** ಅಸೂಯೆಪಡುವವ; ದುಷ್ಟ.
**ಹುಳುಕಡ್ಡಿ** ದದ್ರು, ಹುಳುಕಜ್ಜಿ.
**ಹುಳುಕು** ಹುಳಿತುದು; ಕೊರತೆ, ದೋಷ, ಐಬು, ಊನ.
**ಹುಂಕೃತಿ** ಹೂಂ ಎನ್ನುವುದು; ಆಕ್ಷೇಪ ಸೂಚನೆಯ ನುಡಿ.
**ಹುಂಜ** ಗಂಡುಕೋಳಿ; ಪುಂಜ, ರಾಶಿ.
**ಹುಂಡ** ಅನಾಗರಿಕ; ವಿಷಯಲಂಪಟ; ಹಳ್ಳಿಗ, ಹುಂಬ; ಹಂಡ, ಮಿಶ್ರವರ್ಣ.
**ಹುಂಡಿ** ಕಿರು ವಾಯಿದೆ ಸಾಲದ ಕರಾರು; ಹವಾಲೆ ಪತ್ರ; ಹಳ್ಳಿ.
**ಹುಂಡು** ಬಿಂದು; ಬೊಟ್ಟು; ಮಿಶ್ರ ವರ್ಣ.
**ಹುಂಬ** ಹೆಡ್ಡ, ಗಾವಿಲ, ಗಾಂಪ, ಎಡೆಗ.
**ಹೂ** ಪುಷ್ಪ, ಅರಳು.
**ಹೂಗಣೆ** ಪುಷ್ಪಬಾಣ; ಉಪಾಯ, ಹಂಚಿಕೆ.
**ಹೂಜಿ** (ಹೂಜೆ), ಕೂಜೆ, ನೀರು ತುಂಬಿಸುವ ಪಾತ್ರೆ, ದಾನಿ.

**ಹೂಟೆ** ಹೂಟೆ, ಸೇರಿಸುವಿಕೆ, ಹೂಡುವಿಕೆ; ಸನ್ನಾಹ, ತಯಾರಿಕೆ.

**ಹೂಟೆ** ಉಳುಮೆ, ಸಾಗುಮಾಡುವಿಕೆ; ಪ್ರಯತ್ನ; ಯುಕ್ತಿ.

**ಹೂಡು** ನೊಗಕ್ಕೆ ಜೋಡಿಸು; ಹೆದೆಯೇರಿಸು; ಇದಿರಿಗೆ ಹಿಡಿ; ಕಟ್ಟು; ಬಂಧಿಸು; ಉಳು, ರಂಟೆ ಹೊಡೆ, ಸಾಗುಮಾಡು.

**ಹೂಡೆ** (ಪುಡೆ), ಕಾವಲು ನಿಲ್ಲಲು ಕಟ್ಟಿದ ಕಟ್ಟೆ, ಬುರುಜು, ಬತ್ತೇರಿ.

**ಹೂಣ** ಬರ್ಬರ; ಕಾಡುಮನುಷ್ಯ; ಯೂರೋಪಿನವ; ಒಂದು ಪ್ರಾಚೀನಕಾಲದಜನವರ್ಗ

**ಹೂಣೆ** ಶಪಥ.

**ಹೂಣಿಗ** ಪರಾಕ್ರಮಶಾಲಿ, ವೀರ, ಸಾಹಸಿಗ.

**ಹೂಣಿಸು** ಜೋಡಿಸು, ಹೂಡು.

**ಹೂಣು** ಹೂಳು, ಹುಗಿ.

**ಹೂಣೆ** ಹರಕೆ; ಶಪಥ; ಬಲ, ಪರಾಕ್ರಮ; ರಣ. —ಹೊಗು ಪರಾಕ್ರಮದಿಂದ ನುಗ್ಗು.

**ಹೂರಣ** (ಸೂರಣ), ಒಳಗೆ ತುಂಬಿಸುವ ವಸ್ತು

**ಹೂರಿ** ಪೂರಿ, ಹುರಿದ ರೊಟ್ಟಿ; ಹೂರಿಗೆ.

**ಹೂಲಿ** ಗದ್ದಲ, ಗುಲ್ಲು; ಕಾತರದ ಬೊಬ್ಬೆ.

**ಹೂವಾಡಿಗಿತ್ತಿ** ಹೂ ಮಾರುವವಳು.

**ಹೂಸಕ** ಕೃತ್ರಿಮ, ತೋರಿಕೆಯ, ಕಪಟ; ಸುಳ್ಳು.

**ಹೂಸರ** ಹೂವಿನ ಸರ.

**ಹೂಸು** ಪೂಸು; ಹಚ್ಚಿಕೋ; ಅಪಾನವಾಯು ಬಿಡು; ಸಣ್ಣ ಕಿಡಿಯಾಗಿ ಉದುರು.

**ಹೂಹೆ** ಗೊಂಬೆ, ಪಾಪೆ; ಮಗು, ಹಸುಳೆ; ಅಲ್ಪ, ದುರ್ಬಲ.

**ಹೂಳ್** (ಹೂಳು), ಹುಗಿ, ಭೂಗತಮಾಡು, ನೆಲದ ಕೆಳಗೆ ಹಾಕು.

**ಹೂಂಕಾರ** (ಹೂಂಕೃತಿ) ಹೆಮ್ಮೆಯ ಮಾರ್ದನಿ; ತಿರಸ್ಕಾರ; ಆರ್ಭಟೆ.

**ಹೂಂಗುಡು** ಸೈಗುಡು; ಒಪ್ಪು.

**ಹೃಚ್ಛೂಲ** ಎದೆಗೆ ಶೂಲದಂತಾದುದು.

**ಹೃತ್ಕಮಲ** ಹೃದಯಕಮಲ, ಎದೆಯಲ್ಲಿರುವ ತಾವರೆ.

**ಹೃತ್ಪುಂಡರೀಕ** ಹೃದಯಕಮಲ.

**ಹೃದಯ** ಒಡಲು, ಎದೆ, ಎದೆಗುಂಡಿಗೆ; ಮರುಕ; ಆತ್ಮ; ಜ್ಞಾನ; ಸಾರ; ತಿರುಳು.

**ಹೃದಯಂಗಮ** ಮನೋಹರ; ಯುಕ್ತಿಯುಕ್ತ ಮಾತು, ಎದೆಗೆ ನಾಟುವ ಮಾತು.

**ಹೃದ್ಗತ** ಮನಸ್ಸಿಗೆ ನಾಟಿದ; ಮನಸ್ಸನ್ನು ಹೋಗುವ; ಅಂತರ್ಯ.

**ಹೃದ್ಯ** ಮನೋಹರ; ದಾಲಚೀನಿ.

**ಹೃದ್ರೋಗ** ಮನೋರೋಗ, ಕಾಮ, ಹೃದಯ ದೌರ್ಬಲ್ಯ.

**ಹೃಷಿತ** ಪ್ರೀತ, ವಿಸ್ಮಿತ; ರೋಮಾಂಚಗೊಂಡ.

**ಹೆಕ್ಕಳ** (ಹೆಕ್ಕಳ) ಅಧಿಕ, ವೆಗ್ಗಳ, ಅತಿಶಯ; ಪೀಡೆ; ಸಂತೋಷ; ಉತ್ಸಾಹ; ಹೆಮ್ಮೆ. —ಇಸು ಗರ್ವದಿಂದ ಮೆರೆ; ಪೀಡಿಸು; ಸಂತೋಷಿಸು.

**ಹೆಕ್ಕು** ಒಂದೊಂದಾಗಿ ಆಯ್ದು ತೆಗೆ; ಹಿಕ್ಕು.

**ಹೆಗಲ್** (ಹೆಗಲು), ಭುಜ. —ಒಡ್ಡು ಭುಜಕೊಡು; ಭಾರಹೊರು; ಸಹಾಯ ಮಾಡು; ಕಷ್ಟ ಸಹಿಸು.

**ಹೆಗ್ಗಡೆ** ಪೆರ್ಗಡೆ, ನಾಯಕ, ಮುಖಂಡ.

**ಹೆಗ್ಗಣ** ದೊಡ್ಡ ಜಾತಿಯ ಇಲಿ.

**ಹೆಗ್ಗಳಿಕೆ** ಹೊಗಳಿಕೆ; ದೊಡ್ಡಸ್ತಿಕೆ, ಮಹತ್ವ; ಮೇಲ್ಮೆ.

**ಹೆಗ್ಗಾಳೆ** ದೊಡ್ಡ ಕಹಳೆ.

**ಹೆಗ್ಗುರುತು** ದೊಡ್ಡಗುರುತು, ಮುಖ್ಯಚಿಹ್ನೆ.

**ಹೆಚ್ಚಳ** ಅಭಿವೃದ್ಧಿ; ಹೆಚ್ಚಿಗೆ, ಆಧಿಕ್ಯ; ಹುಮ್ಮಸ; ಅಹಂಕಾರ.

**ಹೆಚ್ಚು** ವೃದ್ಧಿಯಾಗು; ಅಧಿಕವಾಗು; ತುಂಬು; ಮಿೂಸು; ಕೊಚ್ಚು, ತರಿ. —ಗೆ ಹೆಚ್ಚಳ, ವೆಗ್ಗಳ, ಆಧಿಕ್ಯ.

ಹೆಜ್ಜೆ (ಹಜ್ಜೆ, ಪಜ್ಜೆ), ಕಾಲಿಟ್ಟ ಗುರುತು; ಪಾದ.

—ಹಾಕು ಹೊಂಚುಹಾಕು; ನಿರೀಕ್ಷಿಸು.

—ಹಿಡಿ ಅನುಸರಿಸು; ಹಿಂಬಾಲಿಸು.

ಹೆಟ್ಟಿಗೆ ಗಾತ್ರವಾದ ಮರದ ತುಂಡು.

ಹೆಟ್ಟಣಿ ಹೊಡೆತ, ತಟ್ಟುವುದು.

ಹೆಟ್ಟು ಚುಚ್ಚು, ಸೋಣೆ; ನಾಟಿಸು; ಹಡು, ಸಂಭೋಗ ಮಾಡು; ಸುತ್ತಿ, ಕೊದಂಟಿ.

—ಗೆ ಹೆಂಗಸು; ಆಳಿ, ಸಖಿ; ಇನಿಯೆ, ಪುಳಕ, ರೋಮಾಂಚ.

ಹೆಟ್ಟೆ (ಹೆಂಟೆ), ಮಣ್ಣಿನ ಮುದ್ದೆ.

ಹೆಡಕು (ಹೆಡಕ),ಹೆಗಲು,ಭುಜ; ಕುತ್ತಿಗೆಯ ಹಿಂಭಾಗ; ಬಿಲ್ಲಿನ ತುದಿ.

—ಬಾರಿಸು ಭುಜ ತಟ್ಟು.

ಹೆಡಗುಡಿ ಹಿಂದಕ್ಕೆ ತಿರುಗು.

ಹೆಡಗೆ (ಹೆಡಿಗೆ) ಬುಟ್ಟಿ, ಮಕರಿ.

ಹೆಡಗೈ ಹಿಂಗೈ.

ಹೆಡತಲೆ ಹಿಂದಲೆ.

ಹೆಡಮುರಿ ಹಿಂದಕ್ಕೆ ಕೈಗಳನ್ನು ಬಿಗಿದುದು.

ಹೆಡಸು ಕೂದಲು ಉದುರುವ ಒಂದು ರೋಗ.

ಹೆಡೆ ಹಾವಿನ ಬಿಡಿಸಿದ ತಲೆ; ತೆಂಗಿನ ಸೋಗೆ.

—ನಾಗರ ನಾಗರಹಾವು, ಸರ್ಪ.

ಹೆಡ್ಡ ಗಾಂಪ, ಗಾವಿಲ, ದಡ್ಡ.

ಹೆಡ್ಡಯ್ಸು ತಿರಸ್ಕರಿಸು, ದೂರು.

ಹೆಣ್ (ಹೆಣ್ಣು), ಸ್ತ್ರೀ; ಸ್ತ್ರೀ ಜಾತಿ.

ಹೆಣ ಶವ, ಕುಣಪ.

—ತಿನಿ ಹೆಣದಿನುಹಿ, ಪಿಶಾಚಿ.

ಹೆಣಗು ಹೆಣಗಾಡು, ಹೋರಾಡು, ಪ್ರಯತ್ನಿಸು, ಕಷ್ಟಪಡು.

ಹೆಣದತ್ತ ಕೆಲಸಕ್ಕೆ ಬಾರದವ.

ಹೆಣಿಕೆ (ಹೆಣಿಗೆ), ಹೆಣೆಯುವಿಕೆ, ಹೊಸೆಯುವಿಕೆ, ನೇಯುವಿಕೆ.

ಹೆಣಿಲು ಭುಜ, ಹಿಣಿಲು; ಜಡೆ.

ಹೆಣೆ ನೇಯು; ಒಂದಕ್ಕೊಂದು ಸುತ್ತಿಕೊಳ್ಳು; ಜಡೆಹಾಕು; ಹೊಸೆ.

ಹೆಣ್ಣಿಗ ಹೇಡಿ; ಕೆಚ್ಚು ಇಲ್ಲದವ.

ಹೆಣ್ಣು (ಹೆಣ್), ನಾರಿ; ಸ್ತ್ರೀಜಾತಿ.

ಹೆತ್ತವ್ವ ಹೆತ್ತಬ್ಬೆ, ಹಡೆದ ತಾಯಿ.

ಹೆದರ್ (ಹೆದರು), ಅಂಜು, ಭಯಪಡು; ಗಾಬರಿಗೊಳು.

—ಇಕೆ ಭೀತಿ, ಅಂಜಿಕೆ.

ಹೆದೆ ಬಿಲ್ಲಿನ ಹಗ್ಗ, ಬೇವು.

ಹೆದೆಯ (ದ್ಭ) ಹೃದಯ (ಸಂ).

ಹೆದ್ದ ರಥದ ಗಾಲಿ ನಡಸಲು, ಇಲ್ಲವೆ ತಿರುಗಿಸಲು ಬಳಸುವ ಕೊದಂಟಿ, ಒಡ್ಡಾನ.

ಹೆದ್ದಾರಿ ದೊಡ್ಡ ಹಾದಿ; ಹಿರಿ ರಸ್ತೆ.

ಹೆದ್ದುಂಬಿ ಭ್ರಮರ, ಕುರುವಾಯಿ.

ಹೆದ್ದೆವರು ದೊಡ್ಡ ದಿನ್ನೆ.

ಹೆದ್ದೊಡೆ ದೊಡ್ಡ ತೊಡೆ, ದಪ್ಪನಾದ ತೊಡೆ.

ಹೆದ್ದೊರೆ ದೊಡ್ಡ ನದಿ.

ಹೆಪ್ಪಳಿಸು ಪೆಳ್ಪಳಿಸು, ಭಯಪಡು.

ಹೆಪ್ಪು ಹಾಲು ಹುಳಿಯಾಗಲು ಹಾಕುವ ಮಜ್ಜಿಗೆ; ಹೆರೆ, ಪರೆ.

—ಕಟ್ಟು ಹಾಲು ಮಜ್ಜಿಗೆಯಾಗು; ಹೆರೆಯಾಗು; ಪರೆಗಟ್ಟು; ಗಟ್ಟಿಯಾಗು.

ಹೆಬ್ಬಾಗಿಲು ಅಗಸೆಬಾಗಿಲು, ದೊಡ್ಡ ಬಾಗಿಲು; ಅಂಬಲ.

ಹೆಬ್ಬಾವು ದಾಸರ ಹಾವು, ಅಜಗರ.

ಹೆಬ್ಬುಲಿ ಬರೆಹುಲಿ,ದೊಡ್ಡಹುಲಿ, ಪಟ್ಟೆಹುಲಿ.

ಹೆಬ್ಬೆರಲು ಹೆಬ್ಬೆಟ್ಟು, ಅಂಗುಷ್ಠ.

ಹೆಮ್ಮಕ್ಕಳು ಹೆಂಗುಸರು, ಹೆಣ್ಣುಮಕ್ಕಳು.

ಹೆಮ್ಮರ ದೊಡ್ಡ ಮರ.

ಹೆಮ್ಮಾರಿ ಬಲು ದೊಡ್ಡ ಮಾರಿ; ಕಾಳಿ; ಪಿಡುಗು.

ಹೆಮ್ಮೀನು ತಿಮಿಂಗಿಲ; ದೊಡ್ಡ ಮೀನು.

ಹೆಮ್ಮೆ ಪೆರ್ಮೆ, ಆಧಿಕ್ಯ; ಗರ್ವ, ಸೊಕ್ಕು.

ಹೆರ ಪರ, ಬೇರೆಯ, ಇತರ.
ಹೆರಸಾಗು ಹಿಂದೆ ಸರಿ; ಅಳಿಸಿಹೋಗು.
ಹೆರಳ್ (ಹೆರಲ್), ಜಡೆ, ಬಾಚಿದ ಕೂದಲು; ಜಡೆಗೆ ಹಾಕುವ ಒಂದು ಆಭರಣ.
ಹೆರಿಗೆ ಪ್ರಸವ; ಹಡೆಯುವಿಕೆ.
ಹೆರು ಪ್ರಸವಿಸು, ಪಡೆ, ಮರಿಹಾಕು.
ಹೆರೆ ಚಂದ್ರ; ಪೆರೆ, ಹಾವಿನ ಹುರಿ; ಹೆಪ್ಪು; ಕೆರೆ, ಪರಜು, ಕೆರೆದು ತೆಗೆ.
ಹೆಲ್ಲಣಿ ನಷ್ಟ.
ಹೆಸರು ನಾಮ; ಕೀರ್ತಿ; ಹಸುರು ಬಣ್ಣದ ಒಂದು ಧಾನ್ಯ.
ಹೆಳಲು ಹೆರಳು, ಜಡೆಮುಡಿ, ತಲೆಗೂದಲು.
ಹೆಳವ ಕಾಲಿಲ್ಲದವ, ಕುಂಟ.
ಹೆಳೆ ನೆವ, ನೆಪ.
ಹೆಳ್ಳೆ ಹೆಂಟೆ, ಮಣ್ಣು ಉಂಡೆ.
ಹೆಂಗುಸು (ಹೆಂಗಸು), ಸ್ತ್ರೀ; ಹೆಣ್ಣು.
ಹೆಂಗೆ (ಹೇಗೆ, ಹ್ಯಾಗೆ).
ಹೆಂಚು (ಹಂಚು), ಮಾಡನ್ನು ಹೊದೆಸುವ ಓಡು, ಓಡಲು.
ಹೆಂಟೆ ಮಣ್ಣಿನ ಉಂಡೆ, ಮಣ್ಣುಮುದ್ದೆ; ನೇಗಿಲ ಸಾಲು, ಸೂಲಿ.
ಹೆಂಡ ಮದ್ಯ, ಸೆರೆ; ಹೆಂಡತಿ; ಸ್ತ್ರೀ.
ಹೆಂಡತಿ ಮಡದಿ, ಮದುವೆಯಾದವಳು.
ಹೆಂದು ಕುಗ್ಗು; ಚಲಿಸು; ಹಿಂದೆಸರಿ.
ಹೆಂಪಳಿ ಉತ್ಸಾಹ ತಗ್ಗು.
ಹೆಂಪು ಪೆಂಪು; ಆಧಿಕ್ಯ; ಉತ್ಸಾಹ; ವೈಭವ.
ಹೇಕರಿಸು ಹೇ ಅನ್ನು; ಕುದುರೆಯ ಕೆನೆಯುವಿಕೆ, ಬ್ಯಾಕರಿಸು.
ಹೇಕುಳಿ ಪೇಂಕುಳಿ, ಮರುಳುತನ.
ಹೇಗ ಮರುಳ; ಮಂಕ.
ಹೇಗೆ ಯಾವ ರೀತಿ,ಯಾವ ಬಗೆ, ಯಾವತೆರ.
ಹೇಟು ಪೆಟ್ಟು, ಘಾತ.
ಹೇಟೆ (ಹೇಂಟೆ) ಹೆಣ್ಣು ಕೋಳಿ.
ಹೇಡಿ ಪುಕ್ಕ; ಭೀತ; ಅಂಜುಕುಳಿ.
ಹೇತಿ ಕೊಲೆಗೆ ಕಾರಣವಾಗು; ಅಸ್ತ್ರ, ಬಾಣ, ಆಯುಧ; ಅಗ್ನಿಜ್ವಾಲೆ; ಸೂರ್ಯಕಿರಣ; ಸಾಧನ.
ಹೇತು ಕಾರಣ; ನೆವ; ಕ್ರಿಯಗೆ ಉದ್ದೇಶ.
ಹೇದೆ ರಾಕ್ಷಸ; ಭೂತ.
ಹೇನ್ (ಹೇನು), ತಲೆ ಕೂದಲಿನಲ್ಲಿ ವಾಸಿಸುವ ಒಂದು ಜಾತಿ ಕೀಟ.
ಹೇನ ತಿರಸ್ಕಾರ; ಸ್ತ್ರೀಯರ ಶೃಂಗಾರ ಚೇಷ್ಟೆ.
ಹೇಮ ಬಂಗಾರ; ಕರಿಬಣ್ಣದ ಕುದುರೆ; ಬುಧ. —ಕಾರಸೊನೆಗಾರ,ಅಕ್ಕಸಾಲಿ,ಅಗಸಾಲಿ
ಹೇಮಕೂಟ ಮೇರು ಪರ್ವತ, ಕಿಂಪುರುಷದಲ್ಲಿನ ಒಂದು ಬೆಟ್ಟ; ಹಂಪಿಯ ಬಳಿಯ ಒಂದು ಬೆಟ್ಟ.
ಹೇಮಂತ ಚಳಿಗಾಲ, ಮಾಘ ಫಾಲ್ಗುಣ ಮಾಸಗಳು, ಒಂದು ಋತು.
ಹೇಮಾದ್ರಿ ಹೇಮಗಿರಿ, ಮೇರು.
ಹೇಮಾಂಗ ಗರುಡ; ಸಿಂಹ; ಮೇರು; ಬ್ರಹ್ಮ; ವಿಷ್ಣು.
ಹೇಯ ಬಿಡತಕ್ಕುದು, ನೀಚ;ಅಸಹ್ಯ;ದುಃಖ; ವ್ಯಸನ.
ಹೇರ್ (ಹೇರು), ಹೊರಿಸು; ಹೊರೆ; ವಿಶಾಲತೆ; ದೊಡ್ಡತನ; ಒಂದು ಅಳತೆ.
ಹೇರಡವಿ ದೊಡ್ಡ ಕಾಡು; ಕಾನ; ಹೆಗ್ಗಾಡು.
ಹೇರಳ ದೊಡ್ಡ, ವಿಶಾಲ; ಧಾರಾಳ, ವಿಪುಲ.
ಹೇರಂಬ ಗಣಪತಿ, ವಿನಾಯಕ.
ಹೇರಾನೆ ಪೇರಾನೆ, ದೊಡ್ಡ ಆನೆ.
ಹೇರಾಶಿ ದೊಡ್ಡ ರಾಶಿ.
ಹೇರಾಳ ಹೆಚ್ಚು, ಬಹಳ, ಅಧಿಕ; ದೊಡ್ಡ.
ಹೇರೀಳೆ ಕಂಚಿಕಾಯಿ, ದುಡ್ಲೆಕಾಯಿ.
ಹೇರು (ಹೇರ್), ಹೊರಿಸು; ಹೆಚ್ಚು; ಹೊರೆ.
ಹೇಲು ಶೌಚ ಮಾಡುವುದು, ಮಲವಿಸರ್ಜನ; ಮಲ, ಪಿಷ್ಟ.

ಹೇವ (ಹ್ಯಾವ), ಅಭಿಮಾನ, ಹುರುಡು; ನಾಚಿಕೆ, ಲಜ್ಜೆ; ಶಪಥ, ಪ್ರತಿಜ್ಞೆ.
—ಮಾರಿ ಲಜ್ಜೆಗೇಡಿ.
ಹೇವರಿಸು ನಾಚು; ಅಸಹ್ಯಪಡು; ತಿರಸ್ಕರಿಸು; ಹಿಂದೆಗೆ, ಹಿಮ್ಮೆಟ್ಟು.
ಹೇಷ ಹೇಕಾರ, ಹೇಷಾರವ, ಕೆನೆತ.
ಹೇಷಾ (ಹೇಷೆ), ಕುದುರೆಯ ಕೂಗು.
ಹೇಷ್ಯ ಏಷ್ಯತ್ (ಸಂ), ಶಕುನ; ದುರ್ನಿಮಿತ್ತ.
ಹೇಸರ (ದ್ಭ) ವೇಸರ (ಸಂ), ಒಂದು ಜಾತಿ ಕತ್ತೆ, ಹೊರೆ ಹೊರುವ ಕತ್ತೆ.
ಹೇಸಿ ಜುಗುಪ್ಸೆಗೊಂಡು; ಅಸಹ್ಯ ಶರುವ.
—ಕೆ (ಹೇಸಿಗೆ), ಗಲೀಜು, ಜುಗುಪ್ಸೆ.
ಹೇಸು ಅಸಹ್ಯಪಡು; ಅಳುಕು, ಹಿಂದೆಗೆ.
ಹೇಳಾ ಕ್ರೀಡೆ, ಆಟ, ವಿನೋದ.
ಹೇಳಿಕೆ ಆಮಂತ್ರಣ; ಕರೆ, ಸಂದೇಶ; ಕಥನ.
ಹೇಳಿಗೆ ಹಾವಿನ ಬುಟ್ಟಿ, ಪೇಳಿಕೆ.
ಹೇಳು ಉಸುರು, ನುಡಿ, ಮಾತಾಡು; ಅಪ್ಪಣೆ ಮಾಡು; ವಿವರಿಸು.
ಹೈ ಹೊ, ಅಪ್ಪಣೆಯಂತೆ.
ಹೈಗ ಹವ್ಯಕ, ಸ್ಮಾರ್ತ ಬ್ರಾಹ್ಮಣರ ಒಂದು ವರ್ಗ, ಉತ್ತರಕನ್ನಡ.
ಹೈಡಿಂಬಿ ಹಿಡಿಂಬೆಯ ಮಗ ಘಟೋತ್ಕಚ.
ಹೈದ ಹುಡುಗ, ಬಾಲಕ.
ಹೈನು (ಹಯನು), ಹಾಲು ಕರೆವ ದನ; ಕರಾನೆ.
ಹೈಮ ಹೇಮಸಂಬಂಧವಾದ, ಬಂಗಾರದ; ಚಳಿ, ಶೀತ.
ಹೈಮವತ (ಹಿಮವತ್), ಹಿಮದಿಂದ ಕೂಡಿದ; ಹಿಮಾಲಯಕ್ಕೆ ಸಂಬಂಧವಾದ.
ಹೈಮವತಿ ಗಂಗೆ; ಪಾರ್ವತಿ.
ಹೈಮಂತ ಚಳಿ; ಶೀತ; ಚಳಿಗಾಲ.
ಹೈರಾಣ ದಣಿವು, ಕಂಗಾಲತನ, ಸೋತ ಸ್ಥಿತಿ.
ಹೈಹಸಾದ ಹಾಗೇ ಆಗಲಿ.

ಹೊಕ್ಕರಣೆ ಪುಷ್ಕರಿಣಿ(ಸಂ), ಕೊಳ, ಕಲ್ಯಾಣಿ.
ಹೊಕ್ಕರಿ ಉಗುಳು.
ಹೊಕ್ಕುಮಗ್ಗದ ಅಡ್ಡನೂಲು; ಹಕ್ಕಳೆ; ಕುರ.
ಹೊಕ್ಕುಳು (ಹೊಕ್ಕಳು), ನಾಭಿ.
ಹೊಗರು ಪ್ರಕಾಶ, ಕಾಂತಿ; ಗರ್ವ.
—ಏಳು ಉತ್ಸಾಹಪಡು; ಕಾಂತಿವೊಗು.
—ಒಗು ಪ್ರಕಾಶ ಹೊರಡಿಸು.
ಹೊಗಳತೆ (ಹೊಗಳ್ತೆ), ಸ್ತುತಿ; ಪ್ರಶಂಸೆ.
ಹೊಗಳು ಸ್ತುತಿಸು, ನುತಿಸು, ಶ್ಲಾಘಿಸು.
ಹೊಗು ಪುಗು, ಪ್ರವೇಶಿಸು, ಒಳಸೇರು.
ಹೊಗೆ ಧೂಮ; ಹೊಗೆಯಾಗು, ಹೊಗೆಯೇಳು, ಸಿಟ್ಟಾಗು.
ಹೊಚ್ಚು ವ್ಯಾಪಿಸು; ಹೊದೆಸು.
ಹೊಟ್ಟ ಕಿವುಡ, ಬಧಿರ, ಕೆಪ್ಪ.
ಹೊಟ್ಟು ಉಮಿ; ಹೊರಗಿನ ಸಿಪ್ಪೆ.
—ಕುಟ್ಟು ಹುರುಳಿಲ್ಲದ ಮಾತಾಡು; ನಿಷ್ಫಲವಾಗಿ ದುಡಿ.
ಹೊಟ್ಟೆ ಉದರ, ಜಠರ.
—ಕಟ್ಟು ತುಂಬ ಉಣ್ಣದೆ ಇರು.
—ಪಾಡು ಜೀವನೋಪಾಯ, ಉದರ ಪೋಷಣ, ಉದರಂಭರಣೆ.
—ಬಾಕ ತೀನಾಳಿ, ತಿಂಡಿಬಾಕ.
—ಹೊರೆ ಜೀವನ ಉಪಾಯ ಮಾಡು; ಜೀವನ ಸಾಗಿಸು.
ಹೊಡ ಹೊಡೆ, ವಿಸ್ತಾರ.
—ಕರಿಸು ವಿಸ್ತರಿಸು, ಪ್ರತ್ಯಕ್ಷವಾಗು.
ಹೊಡಗು ಹೋರು, ತೂತು, ಬಿಲ; ಮೋಳ.
ಹೊಡಗುಳು ಹೊಡೆತ, ಪೆಟ್ಟು.
ಹೊಡೆ ಬಡಿ; ತಿನ್ನು, ಉಣ್ಣು; ನುಂಗು; ಮಗ್ಗುಲು; ವಿಸ್ತಾರ; ತೆನೆ; ಗಬ್ಬ; ಗುಂಪು; ಹೊಟ್ಟೆ
—ಮಂಚ ಕಾಳು ಹುಲ್ಲುಗಳನ್ನು ಬೇರೆ ಮಾಡಲು ಬಡಿಯಲು ಬಳಸುವ ಮಂಚ.

ಹೊಡೆಮರಳು ಹಿಂದಿರುಗು; ವೃದ್ಧಿಯಾಗು, ಮಗುಚು, ಅಡಿಮೇಲಾಗು.

ಹೊಡೆವಡು ಪೊಡಮಡು, ನಮಸ್ಕರಿಸು.

ಹೊಣಕೆ ಪೊಣರ್ಕೆ, ಕಾಳಗ; ಸ್ಪರ್ಧೆ, ಮೇಲಾಟ, ಏರಾಟ; ಹೊಡೆತ.

ಹೊಣೆ ಜವಾಬುದಾರಿ; ಹವಾಲೆ; ಜಾಮೀನು.

—ಗಾರ ಜವಾಬುದಾರ, ಉತ್ತರವಾದಿ; ಹೊತ್ತೊಯ್ಯುವವ.

ಹೊತ್ತಗೆ (ಹೊತ್ತಿಗೆ) (ದ್ಭ) ಪುಸ್ತಕ (ಸಂ).

ಹೊತ್ತಾರೆ ಬೆಳಗ್ಗೆ, ಮುಂಜಾನೆ; ಪ್ರಾತಃಕಾಲ; ಹರಿಹೊತ್ತು.

ಹೊತ್ತು ಸುಡು; ಬುಡ ಸುಡು; ಸಮಯ, ವೇಳೆ; ಸೂರ್ಯ.

ಹೊದಕುಳಿ ಚಿಂತೆ, ದುಃಖ, ಬೇಗುದಿ.

—ಕುಟ್ಟು ಚಿಂತಿಸು, ಬೇಸರಿಸು.

ಹೊದಕೆ ಮೈಗೆ ಮುಚ್ಚಿಕೊಂಡುದು, ಹೊದ್ದಿಕೆ, ಆಚ್ಛಾದನ.

ಹೊದಗು ಮುಚ್ಚು, ಹೊದೆಸು.

ಹೊದರು ಹಳು, ಹಳುವು, ಪೊದರು, ಪೊದೆ; ಸಮೂಹ, ರಾಶಿ; ಪೊಟರೆ, ಡೊಗರು.

—ಇಕ್ಕು ಗುಂಪಾಗು, ತುಂಬು.

ಹೊವರೆದೆ ಧೈರ್ಯ.

ಹೊದಿಕೆ ಹೊದ್ದಿಕೆ; ಮುಚ್ಚಳ; ಕವಚ, ಆಚ್ಛಾದನ; ಆವಾರ.

ಹೊದೆ ಬತ್ತಳಿಕೆ; ಮುಚ್ಚಿಕೊಳು; ಪೊದರು; ಡೊಗರು; ಗುಂಪು.

—ಕೆದರು ಗುಂಪನ್ನು ಚೆದರಿಸು.

ಹೊದ್ದು ಪೊರ್ದು, ಸೇರು, ಹತ್ತಿರ ಹೋಗು; ಸಮೀಪ, ಕರೆ.

—ಗೆ ಸಮೀಪ; ಸೇರಿಕೆ, ಸೇರುವೆ.

ಹೊನ್ (ಪೊನ್), ಚಿನ್ನ, ಬಂಗಾರ, ವರಹದ ನಾಣ್ಯ; ಹಳದಿ ಬಣ್ಣ.

ಹೊನಗ (ಹೊನ್ನಿಗ), ಹೊನ್ಮೃಗ, ಚಿನ್ನದ ಬಣ್ಣದ ಒಂದು ಪ್ರಾಣಿ, ಸಿಂಹಿನಿಯಂತೆ ಕಾಣುವ ಒಂದು ಪ್ರಾಣಿ, 'ಕೆರಕಲ್'.

ಹೊನಲು ಪ್ರವಾಹ, ಹೊಳೆ, ತೊರೆ.

—ಕಿಡಿ ಕಿಡಿಗಳ ಪ್ರವಾಹ.

ಹೊನಹು ಚೆಲುವು, ಗಾಡಿ, ಶೋಭೆ

ಹೊನ್ನ (ಪೊನ್ನ), ಹೊನ್ನಿಗ, ಒಬ್ಬ ಕನ್ನಡ ಕವಿ.

ಹೊನ್ನಾರತಿ ಚಿನ್ನದ ಆರತಿ.

ಹೊನ್ನಿ ಒಂದು ತರಕಾರಿ, ಮಿಣುಕು ಹುಳು, ಗುಂಗೀ ಹುಳು.

ಹೊನ್ನು ಚಿನ್ನ; ರೊಕ್ಕ, ಹಣ; ಒಂದು ಚಿನ್ನದ ನಾಣ್ಯ.

ಹೊನ್ನೆ ಒಂದು ಜಾತಿ ಹೂ ಬಿಡುವ ಮರ, ಸುರಹೊನ್ನೆ; ಪುನ್ನಾಗ.

ಹೊಪ್ಪಳ ಬೊಕ್ಕೆ, ಸುಡುಬೊಕ್ಕೆ.

ಹೊಪ್ಪೆ ಹೋಳು, ತುಣಕು.

ಹೊಮ್ಮರಿ (ಹೊನ್‌ಮರಿ), ಚಿನ್ನದ ಬಣ್ಣದ ಜಿಂಕೆ.

ಹೊಮ್ಮಿಗ (ಹೊನ್‌ಮಿಗ), ಬಂಗಾರ ಬಣ್ಣದ ಮೃಗ, ಮಾಯಾಮೃಗ.

ಹೊಮ್ಮು (ಪೊಣ್ಮು), ಹೊರಗೆಬರು; ಉಬ್ಬು; ಅಧಿಕವಾಗು.

ಹೊಯ್ (ಹೊಯ್ಯು, ಹೊಯಿ), ಹೊಡೆ; ಸುರಿ, ಎರೆ.

—ಕಯ್ ಪ್ರತಿಸ್ಪರ್ಧೆ, ಏರಾಟ, ಮೇಲಾಟ; ಸಮಾನ.

ಹೊಯಿಗೆ (ಹ್ಯೊಗೆ), ಮರಳು, ಉಸುಬು, ಉಸುಕು.

ಹೊಯಿತ ಹೊಡೆಯುವುದು; ಹೊಡೆತ.

ಹೊಯ್ಲು ಹೊಯಿಲು, ಒಯ್ಲು, ಪ್ರವಾಹದ ಸೆಳವು; ಪೆಟ್ಟು; ಗದ್ದಲ, ಕೂಗು; ಸೇಡಿಗಾಗಿ ಹೊರುವ ಹರಕೆ.

ಹೊರ ಪರ, ಬೇರೆ, ಒಳಗಿನದಲ್ಲದ.

—ಸೂಸು ಉಕ್ಕು, ಚೆಲ್ಲು, ಹೊಮ್ಮು.

ಹೊರಕ ಹೊರೆಯುವವ, ಕಾಪಾಡುವವ.
ಹೊರಗೆ(ಹೊರಕೆ), ಒಳಗಲ್ಲದುದು, ಬಾಹ್ಯ.
ಹೊರಚಳ ತೆಗೆದು ಹಾಕು.
ಹೊರಜಿ ಮಿಣಿ, ದಪ್ಪದ ಹಗ್ಗ, ಅಲಾತಿ.
ಹೊರಡು ಡುಬ್ಬ, ಭುಜ; ಪೊರಮಡು; ಹೊರಳು, ಮಗುಚು.
ಹೊರಪು ಮಣ್ಣಿನ ಹಕ್ಕಳೆ; ಮರದ ತೊಪ್ಪೆ.
ಹೊರಸು ನೂಲು ಬಿಗಿದ ಮಂಚ; ಕಪೋತ; ಒಂದು ಜಾತಿಯ ಪಾರಿವಾಳ.
ಹೊರಳಿ ಸಮೂಹ; ರಾಶಿ, ಗುಂಪು.
— ಕಟ್ಟು ಗುಂಪಾಗು, ಮೇಳಯಿಸು.
— ಕೆಡು ಗುಂಪು ಚೆದರು.
ಹೊರಳು ಉರುಳಾಡು; ಉರುಳುವ ದಿಂಡು; ದಾರಿ ಬಿಡು, ತೊಲಗು.
ಹೊರಳೆ ಗಂಟು, ಮೂಟೆ; ಮೂಗಿನ ಸೊಳ್ಳೆ.
ಹೊರಿಕೆ(ಹೊರಿಗೆ), ಪರೆ, ಪದರು; ಮಾರ್ಗ, ಧರಿಸುವಿಕೆ; ಹೊರುವಿಕೆ; ಕೆಲಸ; ನೀತಿ; ಹೊರೆ; ಅಧಿಕಾರ; ಜವಾಬುದಾರಿ, ಹೊಣೆ.
ಹೊರಿಗೆವಾಳ ಸೇವಕ, ಆಳು.
ಹೊರಿಸು ಹೇರು; ಮೇಲೆ ಹಾಕು.
ಹೊರು ಧರಿಸು, ಪಡೆ; ಮೇಲೆ ಇಟ್ಟುಕೊಳ್ಳು; ಸಾಗಿಸು; ಹೊಣೆಹೊರು.
ಹೊರುಕುಳಿ (ಪೊರ್ಕುಳಿ), ಅಲೆ, ತರಂಗ.
ಹೊರೆ ಪೋಷಿಸು; ಪೊರೆ; ಲೇಪಿಸು; ಹಚ್ಚು; ವ್ಯಾಪಿಸು; ಸಮೀಪ; ತಪ್ಪು; ಎಡೆ; ಹೆರೆ; ಜೇನು; ಉತ್ಸಾಹ; ಧೈರ್ಯ; ಭಾರ; ಹೊರು; ತಟ್ಟು.
—ಏರುಪುಷ್ಟವಾಗು, ಸಂತೋಷಹೊಂದು
— ಕುಂದು ಉಲ್ಲಾಸ ತಗ್ಗು.
—ಹೋಗು ಸಂಶಯಪಡು, ದಾಕ್ಷಿಣ್ಯ ಕ್ಕೊಳಗಾಗು.
ಹೊರ್ದುಗೆ ಹೊದ್ದಿಕೆ, ಹೊಂದುಗೆ, ಸಮೀಪತೆ; ಸೇರುವಿಕೆ.
ಹೊಲ್ (ಹೊಲ್ಲ), ಪೊಲ್, ಕಪ್ಪಲ್ಲ, ನೀಚ; ಅಯುಕ್ತ.
ಹೊಲ ಭೂಮಿ, ಬಯಲು; ಗದ್ದೆ; ಮಜಲು ಗದ್ದೆ, ಬೆಟ್ಟು.
ಹೊಲಗ ಒಂದು ಜಾತಿ ಕಿರಿ ಹಾವು.
ಹೊಲತಿ ಹೊಲೆಯರಾಕೆ, ಚಂಡಾಲ ಕನ್ಯೆ.
ಹೊಲಬು ದಾರಿ; ಸಂದರ್ಭ, ರೀತಿ, ವಿಚಾರ; ದಿಕ್ಕು, ಗುರುತು; ಮಾರ್ಗ; ಸಂದರ್ಭ.
— ಇಗ ದಾರಿ ಬಲ್ಲವ, ರೀತಿ ಬಲ್ಲವ.
— ಕೆಡಿಸು ದಾರಿ ತಪ್ಪಿಸು, ಕ್ರಮ ತಪ್ಪಿಸು.
ಹೊಲಸು ಹೇಸು, ಗಲೀಜು; ಕೊಳೆ.
— ತನ ಮಲಿನವಾಗಿರುವುದು, ಅಶುದ್ಧಿ.
ಹೊಲಿ ಸೆಡು; ಸೂಜಿದಾರಗಳಿಂದ ಜೋಡಿಸು; ಕಾಳಿನ ರೂಪದಿಂದ ಕೊಡುವ ಬಡ್ಡಿ; ಹೆಚ್ಚುಗೆ.
ಹೊಲಿಗೆ ಹೊಲಿದುದು, ಸೆಡುವ ಕೆಲಸ, ಹೊಲಿಯುವ ಕೆಲಸ.
ಹೊಲೆ ಮೈಲಿಗೆ; ಹೆಂಗಸರ ಮುಟ್ಟು; ಸೂತಕ; ಕೊಳೆ, ಕಲ್ಮಷ.
ಹೊಲೆಯ ಮಾದಿಗ, ಚಂಡಾಲ.
ಹೊಲ್ಲ ಅಯೋಗ್ಯ; ಕೆಟ್ಟ, ಅನುಚಿತ; ಸೇರಿಸುವುದು, ಜೋಡಿಸುವುದು.
— ಇಸು ಜತೆಸೇರಿಸು.
— ಮೆ ಹೀನತೆ, ನೀಚತನ.
— ಹ ನೀಚ, ಹೀನ.
ಹೊಲ್ಲೆಯ ಕೊರತೆ, ದೋಷ, ಐಬು.
ಹೊಸ ನವೀನ, ಪೊಸ.
— ತು ನವೀನ.
ಹೊಸಕು(ಹೊಸಗು), ತಿಕ್ಕು, ತಿರುಪು; ಹೊಸೆ.
ಹೊಸತಿಲ್ (ಹೊಸಲು), ಬಾಗಿಲಿನ ತಳ; ಹೊಸದಾಗಿ ಇರುವಾಗ.
ಹೊಸಬ ಹೊಸತಾಗಿ ಬಂದವ, ಆಶ್ಚರ್ಯ ಹುಟ್ಟಿಸುವ ಮನುಷ್ಯ.

ಹೊಸೆ ಕಡೆ, ಮಥನಮಾಡು; ತಿಕ್ಕು; ತಿರುಪು; ಹುರಿಹಾಕು; ಹೆಣೆ.

ಹೊಸ್ತಿಲು (ಹೊಸತಿಲ್).

ಹೊಳ ಹೊಳಪು; ಮಳೆಗಾಲದಲ್ಲಿ ಮಳೆಬಿಡಲು ಆಗುವ ಬಿಡುವು.

ಹೊಳಕು ಕಾಣಿಸಿಕೊಳ್ಳು; ಪ್ರಕಾಶ.

ಹೊಳಕೆ ಪ್ರಕಾಶ.

ಹೊಳಚು ನಿಲುಕು; ಕಣ್ಣಿಟ್ಟು ನೋಡು.

ಹೊಳಲು ಪಟ್ಟಣ; ಸುಳಿವು, ಚೆಹರೆ.

ಹೊಳವು ಮೊದಲಿನ ಪಾತ.

ಹೊಳಸು ಉರುಳಾಡಿಸು; ಚಲಿಸುವಂತೆ ಮಾಡು, ಹೊಳೆಯಿಸು.

ಹೊಳಹು ಹೊಳಪು, ಕಾಂತಿ, ಪ್ರಕಾಶ.

ಹೊಳೆ ಮಾತಿಗೆ ತಪ್ಪು, ತಪ್ಪು; ಪ್ರಕಾಶಿಸು, ಸ್ಫುರಿಸು, ತೋಚು; ನದಿ; ತೊರೆ.

ಹೊಳ್ಳಿಸು ಹೋಳಾಗು; ವ್ಯರ್ಥವಾಗು.

ಹೊಳ್ಳು ಟೊಳ್ಳು; ಪೊಟರೆ, ಡೊಗರು; ನಿಸ್ಸಾರ, ಜೊಳ್ಳು, ಜೊಂಡು.

—ಗೆ ಶಕ್ತಿಹೀನ, ದುರ್ಬಲ.

ಹೊಳ್ಳೆ ಮೂಗಿನ ಟೊಳ್ಳೆ, ಸೊಳ್ಳೆ.

ಹೊಳ್ಳೆಯ (ಹೊಲ್ಲೆಯ), ದೂಷಣೆ; ನಿಂದೆ.

ಹೊಂಗರ (ಹೊಂಗರಕ), ಜಾತಿ ಮರ; ಜನ್ನೆ ಮರ, ಹಂಗರಕ.

ಹೊಂಗರಿ ಚಿನ್ನದ ಗರಿ, ಚಿನ್ನದ ರೆಕ್ಕೆ.

ಹೊಂಗಳಸ ಚಿನ್ನದ ಕಲಶ.

ಹೊಂಗಿಯ (ಹೊನಗ).

ಹೊಂಗಂಬಿ ಚಿನ್ನದ ಸಲಾಕೆ, ಚಿನ್ನದ ಕೋಲು

ಹೊಂಗು ಉಬ್ಬು, ಉತ್ಸಾಹ ಪಡು; ಅಲುಗಾಡು, ಮಾಲು, ಹಂದು.

ಹೊಂಗೆ ತಮಾಲ, ಒಂದು ಮರ.

ಹೊಂಚು ಸಮಯ ಕಾಯು, ಕಾಯು; ಆತುರಪಡು, ಮರೆಯಲ್ಲಿ ನಿಂತು ಕಾಯು, ಕಾಣಿಸಿಕೊಳ್ಳು.

—ಗಾರ ಬೇಹಿನವ, ಬೇಟೆಗಾರ.

ಹೊಂಡ ಕುಣಿ, ಕುಳಿ; ಶವ ಇರಿಸಲು ಮಾಡಿದ ಕುಳಿ; ನೀರಿನ ಕೆರೆ.

ಹೊಂತ ಪಂಥ, ದಾರಿ; ಸಾಮರ್ಥ್ಯ; ಉಪಾಯ, ಯುಕ್ತಿ; ಸಂಚು.

— ಕಾರ ಚತುರ; ಸಮರ್ಥ.

ಹೊಂದಿಕೆ ಸ್ನೇಹ; ಸೇರುವೆ, ಮೇಳ.

ಹೊಂದು ಸಾಯು; ಮೇಳವಾಗು, ಸೇರು; ಸಲು, ಪಡೆ; ದೊರಕಿಸು; ನೋವುಗೊಳು.

—ಇಸು ಜತೆಗೂಡಿಸು; ಮೇಳಯಿಸು; ಸಾಯುವಂತೆ ಮಾಡು.

ಹೊಂದೇರು ಚಿನ್ನದ ತೇರು.

ಹೊಂಬಣ್ಣ ಚಿನ್ನದ ಬಣ್ಣ.

ಹೊಂಬಳಿ ಬಂಗಾರದ ಒರಕು, ಗಿಲೀಟು.

ಹೊಂಪು ಉಕ್ಕು; ಹೊರವು.

ಹೊಂಪುಳಿ ರೋಮಾಂಚ; ಹಿಗ್ಗು; ಹೆಚ್ಚುಗೆ.

ಹೋ ಆಶ್ಚರ್ಯ ಸೂಚನೆಯ ಕೂಗು.

ಹೋಕ ಹೋಗುವವ; ದಿಕ್ಕಿಲ್ಲದವ.

ಹೋಕಾಲ ಹೋಗುವ ಕಾಲ; ಸಾವು, ಕೊನೆಗಾಲ, ಮರಣ.

ಹೋಕು ಕೊರತೆ, ಊನ; ನಷ್ಟ, ಆಗು, ಹೋಗು.

ಹೋಕೆ ನೆಡೆ, ದಾರಿ, ಹೋಗುವ ಮಾರ್ಗ; ಅವಸ್ಥೆ, ಗತಿ.

ಹೋಗು ಚಲಿಸು; ನಡೆ; ಸರಿ; ಕಳೆ; ಆಗು; ತಪ್ಪು.

ಹೋಟಿ ಸಾಮ್ಯ, ಹೋಲುವೆ, ಸಾಟ.

ಹೋಟೆ ಡೊಗರು, ಪೊಟರೆ.

ಹೋತ (ಹೋತು), ಗಂಡು ಆಡು.

ಹೋತೃ ಯಜ್ಞದಲ್ಲಿ ಮಂತ್ರ ಹೇಳುವವ.

ಹೋತ್ರು ಹೋಮ; ಹವಿಸ್ಸು.

ಹೋತ್ರಿ ಹೋಮಮಾಡುವವ.

ಹೋಬಳಿ ತಾಲೂಕಿನ ಭಾಗ, ಗ್ರಾಮಸಮುದಾಯ, ಮಾಗಣೆ.

**ಹೋಮ** ಹವನ ಅರ್ಪಿಸಲು ಮಾಡಿದ ಬೆಂಕಿ.
— **ಕುಂಡ** ಬೆಂಕಿಕುಂಡ, ಯಜ್ಞಕುಂಡ.
**ಹೋರಟೆ** ಜಗಳ, ಹೊಡೆತ; ಕಾದಾಟ.
**ಹೋರಾ** ಜ್ಯೋತಿಷ್ಯ, ಖಗೋಲಶಾಸ್ತ್ರ.
**ಹೋರಾಟೆ** ಜಗಳ, ಹೊಡೆದಾಟ, ಕಾದಾಟ.
**ಹೋರಿ** ಎತ್ತು; ಕೋಣ; ಬೀಜತೆಗೆಯದ ಗಂಟ
— **ಅಡೆ** (ಹೋರಿಯಡೆ), ಗೋಮಯ, ಸೆಗಣಿ.
— **ಕರ** ಗಂಡು ಕರು, ಗುಡ್ಡ.
**ಹೋರು** ತೂತು, ಬಿಲ; ಜಗಳಾಡು; ಹೋರಾಡು.
— **ಕುಳಿ** (ಪೋರ್ಕುೞಿ), ಜಟ್ಟಿ; ಹೋರಾಟ; ವಿರೋಧ.
**ಹೋರೆ** ಕೆಲಸ, ಸಮಯ; ಲಗ್ನ; ರಾಶಿಯ ಅರ್ಧ ಭಾಗ; ರೇಖೆ.
**ಹೋರೆಗ** ಹೋರಾಶಾಸ್ತ್ರಬಲ್ಲವ, ಜ್ಯೋತಿಷ್ಕ, ಜೋಯಿಸ; ಸೇವಕ.
**ಹೋರ್ಕೆ** ಹೋರಾಟ, ಕಾದಾಟ.
**ಹೋಲಿಕೆ** ಉಪಮೆ, ಉಪಮಾನ; ಸಾಮ್ಯ.
**ಹೋಲು** (ಹೋಲ್); ಸರಿಬೀಳು, ಸಾಮ್ಯ ಹೊಂದು, ಇನ್ನೊಂದರಂತೆ ಕಾಣಿಸು.
**ಹೋಲುವಿಕೆ** (ಹೋಲುವೆ), ಸಾಮ್ಯ, ಸಾದೃಶ್ಯ.
**ಹೋಹ** ಹೋಗುವ, ಹೋಪ.
**ಹೋೞ್** ತುಂಡುಮಾಡು; ತುಂಡು, ಭಾಗ.
**ಹೋಳಲು** ಡೊಗರು; ಕುಳಿ; ಕರ್ಪು, ಬೋನು
**ಹೋಳಿ** ಕಾಮದಹನ; ಕಾಮನ ಇನಿಯೆ, ಓಕುಳಿ; ಹಾಳುಮಾಡು.
— **ಆಡು** ಕಾಮನ ಹಬ್ಬದ ಕಾಲದಲ್ಲಿ ಓಕುಳಿಯನ್ನು ಅತ್ತಿತ್ತ ಎರಚಿಕೊಳ್ಳು.
— **ಹಬ್ಬ** ಕಾಮನಹಬ್ಬ, ಹೋಳಿಹುಣ್ಣಿಮೆ
— **ಹುಣ್ಣಿಮೆ** ಕಾಮದಹನದ ಹುಣ್ಣಿಮೆ.
**ಹೋಳಿಗೆ** ಒಂದು ಬಗೆ ಒಬ್ಬಟ್ಟು; ಒಂದು ಸಿಹಿ ಖಾದ್ಯ.
**ಹೋಳು** (ಹೋೞ್, ಪೋೞ್), ತುಂಡು; ಸಮ ಭಾಗ, ಭಾಗ.
— **ಇಸು** ತುಂಡುಮಾಡು, ತುಂಡರಿಸು.
**ಹೋಂತು** ಅಜ, ಗಂಡು ಆಡು.
**ಹೋಂಪು** ಉಬ್ಬುವಿಕೆ, ಉಕ್ಕು.
— **ಳಿ** ಉಕ್ಕು, ರೋಮಾಂಚ.
**ಹೌಜ** ಝುರಿ, ಅಬ್ಬಿ, ತಡಸಲು.
**ಹೌದಾ** ಅಂಬಾರಿ.
**ಹೌದು** ಅಹುದು, ಸರಿ, ಸಮ; ನೀರಿನ ಸಂಗ್ರಹ.
**ಹೌಸು** ಆತುರ, ಬಯಕೆ; ಕಾಮುಕತೆ; ಹುಮ್ಮಸ, ಹುರುಪು.
**ಹ್ನವ** ಅಡಗಿಸುವುದು, ಒಪ್ಪದಿರುವುದು.
**ಹ್ರದ** ಅಗಾಧ ಜಲಾಶಯ, ಮಡು; ಕಿರಣ.
**ಹ್ರದಿನಿ** ನದಿ, ತೊರೆ; ಮಿಂಚು.
**ಹ್ರಸ್ವ** ಗಿಡ್ಡ, ದೀರ್ಘವಲ್ಲದ; ಚುಟಕು.
**ಹ್ರಾದ** ಶಬ್ದ; ಧ್ವನಿ.
**ಹ್ರಾದಿನಿ** ಮಿಂಚು; ವಜ್ರ; ನದಿ.
**ಹ್ರಾಸ** ಸದ್ದು, ಗದ್ದಲ; ಕುಂದುವಿಕೆ.
**ಹ್ರೀ** ಲಜ್ಜೆ; ಶಾಲೀನತೆ.
**ಹ್ರೀಣ** ಲಜ್ಜಿತ; ಶಾಲೀನ; ಪುಕ್ಕ.
**ಹ್ಲನ್ನ** ಆನಂದಿತ; ಸುಖಿ.
**ಹ್ಲಾದ** ಸಂತೋಷ; ಶಬ್ದ.
**ಹ್ಲಾದಿನೀ** ಮಿಂಚು; ವಜ್ರ.
**ಹ್ವಾನ** ಕರೆಯುವುದು.
**ಹ್ವ** ಡೊಂಕಾದ; ವಕ್ರ; ಬಾಗಿದ.
**ಹ್ವರ** ಡೊಂಕು; ವಕ್ರತೆ; ಬಾಗಿರುವಿಕೆ.
**ಹ್ವಲ** ಚಲಿಸುವುದು; ನಡುಗುವುದು.

